ವಿಷಯಾನುಕ್ರಮಣಿಕೆ

ಅಧ್ಯಾತ್ಮಗ್ರಂಥಾವಳಿ

# ಭಗವದ್ಗೀತೆಯ ಉಪನ್ಯಾಸಗಳು

## (ಎರಡನೆಯ ಭಾಗ)

*ಬರೆದವರು*

**ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು**

*ಸಂಪಾದಕ*

**ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ**

*ಕ್ರಮಾಂಕ ೮೩*

*ಪ್ರಕಾಶಕರು :*

**ಅಧ್ಯಾತ್ಮಪ್ರಕಾಶಕಾರ್ಯಾಲಯ**

ಹೊಳೆನರಸೀಪುರ ೫೭೩. ೨೧೧. ಹಾಸನ ಜಿಲ್ಲೆ

೧೯೯೯

# ಮುನ್ನುಡಿ

ಈ ಗ್ರಂಥದ ಮೊದಲನೆಯ ಭಾಗಕ್ಕೆ ಬರೆದಿರುವ ಮುನ್ನುಡಿಯೇ ಇದಕ್ಕೂ ಅನ್ವಯಿಸುತ್ತದೆ. ನಾನು ಈ ಗ್ರಂಥವನ್ನು ಮುದ್ರಣಸಂದರ್ಭದಲ್ಲಿ ಅಚ್ಚಿನ ತಪ್ಪುಗಳ ಶೋಧನೆಗಾಗಿ ಓದಲೇಬೇಕಾದ ಅವಕಾಶವು ಒದಗಿದಾಗ ನನ್ನ ಹೃದಯಕ್ಕೆ ಮೆಚ್ಚಾದ ಅನೇಕ ವಿಷಯಗಳೂ ಪ್ರಘಟ್ಟಗಳೂ ಇಲ್ಲಿ ದೊರಕಿದವು. ಅಂಥವುಗಳಲ್ಲಿ ಕೆಲವನ್ನು ಅಧ್ಯಾತ್ಮಪ್ರಕಾಶಮಾಸಪತ್ರಿಕೆಯ ಇತ್ತೀಚಿನ ಸಂಪುಟಗಳ ಸಂಚಿಕೆಗಳಲ್ಲಿ `ಆರಿಸಿದ ಅರಳು ಮೊಗ್ಗುಗಳು' ಎಂಬ ಲೇಖನಗಳಲ್ಲಿ ಅಳವಡಿಸಿರುತ್ತೇನೆ. ಇಂಥ ಸೂಕ್ತಿಗಳು ಇನ್ನೂ ಎಷ್ಟೋ ಈ ಗ್ರಂಥಗಳಲ್ಲಿ ಅಡಗಿವೆ. ಜನಸಾಮಾನ್ಯರಿಗಂತೂ ಯಾವದೇ ಪಾರಿಭಾಷಿಕಶಬ್ದಗಳ ಹಾಗೂ ಶಾಸ್ತ್ರಾರ್ಥಗಳ ಗಡಿಬಿಡಿಯಿಲ್ಲದೆ ನೇರಾಗಿ ಹೃದಯಸ್ಪರ್ಶಿಯಾಗುವಂತೆ ಸರಳವಾದ ಕನ್ನಡ ಭಾಷೆಯಲ್ಲಿ ಗೀತಾರ್ಥವನ್ನು ವಿವರಿಸಿರುವ ಈ ಸಂಪುಟಗಳು ಅಮೂಲ್ಯವಾದ ಗ್ರಂಥರತ್ನಗಳಾಗಿದ್ದು ಕನ್ನಡ ವಾಙ್ಮಯಕ್ಕೇ ಭೂಷಣವಾಗಿವೆ. ಓದುಗರು ಶ್ರದ್ಧಾಭಕ್ತಿಗಳಿಂದಲೂ ವಾಸುದೇವನ ಸ್ಮರಣೆಯನ್ನು ಮನಸ್ಸಿನಲ್ಲಿ ಆಗಾಗ್ಗೆ ಮಾಡುತ್ತಲೂ ಪಠಿಸಿದಲ್ಲಿ ಶ್ರೀ ಕೃಷ್ಣಭಗವಂತನೊಡನೆಯೇ ನಿಕಟಸಂಬಂಧವನ್ನು ಹೊಂದಿದ ಅನುಭವವಾಗಲಿದೆ.

ಈ ಗ್ರಂಥಕರ್ತರಾದ ಬ್ರಹ್ಮೀಭೂತ ಪರಮಪೂಜ್ಯ ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಮಹಾಸ್ವಾಮಿಗಳವರು ತಮ್ಮ ಅಮೋಘವಾದ ಲೇಖನಿಯ ಮೋಡಿಯಿಂದ ಇಲ್ಲಿ ಶ್ರೀಕೃಷ್ಣಭಗವಂತನ, ಶ್ರೀ ವೇದವ್ಯಾಸಮಹಾಮುನಿಗಳ ಹಾಗೂ ಶ್ರೀ ಶಂಕರಭಗವತ್ಪಾದರವರ, ಮತ್ತು ಅನೇಕ ಗೀತೋಪಾಸಕರ ಹೃದಯಗಳನ್ನೆಲ್ಲ ಸೆರೆಹಿಡಿದು ಗೀತೆಯ ಪರಮತಾತ್ಪರ್ಯವನ್ನೇ ಇಲ್ಲಿ ಜಿಜ್ಞಾಸುಗಳಿಗೆ ಉಣಬಡಿಸಿರುತ್ತಾರೆ. ಹಾಗೆಯೇ ಶಾಸ್ತ್ರೀಯಕರ್ಮ, ಕರ್ಮಯೋಗ, ಕರ್ಮಸಂನ್ಯಾಸ, ಧ್ಯಾನಯೋಗ, ಜ್ಞಾನಯೋಗಗಳನ್ನು ನಿಚ್ಚಣಿಕೆಯಾಗಿ ಜೋಡಿಸಿ ಮುಕ್ತಿಯೆಂಬ ಪರಮಪದವಿಗೆ ರಾಜಮಾರ್ಗವನ್ನೇ ಸಿದ್ಧಗೊಳಿಸಿದ್ದಾರೆ. ವರ್ಣಾಶ್ರಮಧರ್ಮಗಳ ಕಟ್ಟನ್ನು ಅಲ್ಲಾಡಿಸದೆ ವರ್ಣಾಶ್ರಮಾತೀತವಾದ ಪರಮಾರ್ಥಸತ್ಯವನ್ನು ಕಂಡುಕೊಳ್ಳುವ ಗುಟ್ಟನ್ನೂ ರಟ್ಟುಮಾಡಿದ್ದಾರೆ. ಸರ್ವಾಂಗಸುಂದರವೂ ಅಂತಃಸ್ಸತ್ವಪೂರ್ಣವೂ ಆದ ಈ ಸಂಪುಟಗಳು ಗೀತಾಭಕ್ತರಿಗೆ ಬೇರೆಬೇರೆಯ ವ್ಯಾಖ್ಯಾನಗಳನ್ನೋದಬೇಕೆಂಬ ಹಸಿವನ್ನೇ ನೀಗಿ ಸಂಪೂರ್ಣತೃಪ್ತಿಯನ್ನು ಕೊಡುತ್ತವೆ. ವಾಚಕರು ಈ ಗ್ರಂಥಗಳನ್ನು ಪ್ರೋತ್ಸಾಹಿಸಿ ಅಧ್ಯಾತ್ಮಪ್ರಕಾಶಕಾರ್ಯಾಲಯದವರ ಈ ಅಲ್ಪಸೇವೆಯನ್ನು ಸ್ವೀಕರಿಸಿ ಆಶೀರ್ವದಿಸಬೇಕೆಂದು ಬೇಡುವ.

ಇತಿ

ತಾ ೨೫.೪.೧೯೯೯
ಹೊಳೆನರಸೀಪುರ.

ಅಧ್ಯಾತ್ಮಜಿಜ್ಞಾಸುಗಳ ಸೇವಕ,
ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,
ಸಂಪಾದಕ.

# ವಿಷಯಾನುಕ್ರಮಣಿಕೆ

(ಸೂಚನೆ : ೧ ರಿಂದ ೯೨ ಉಪನ್ಯಾಸಗಳು ಒಂದನೆಯ ಭಾಗದಲ್ಲಿವೆ)

| ವಿಷಯಸೂಚಿ | | ಪುಟ |
|---|---|---|

||ಓಮ್||

# ಭಗವದ್ಗೀತೆಯ ಉಪನ್ಯಾಸಗಳು

(ಎರಡನೆಯ ಭಾಗ)

## ೯೩. ಜ್ಞಾನಕ್ಕೆ ಅವತರಣಿಕೆ 13-(1-4)

**(8-8-48)**

ಭಗವದ್ಗೀತೆಯ ಎರಡನೆಯ ಅಧ್ಯಾಯದಿಂದ ಹಿಡಿದು ಇಲ್ಲಿಯವರೆಗೂ ಆತ್ಮಸ್ವರೂಪವನ್ನೇ ಹೇಳಿರುತ್ತದೆ. ಅದನ್ನು ಅರಿತುಕೊಂಡವರಿಗೆ ಯಾವ ಸಂಸಾರಬಂಧವೂ ಇರುವದಿಲ್ಲ. ಅದನ್ನು ಅರಿತುಕೊಳ್ಳುವದಕ್ಕೆ ಸಾಧನವಾಗಿಯೇ ಕರ್ಮಧ್ಯಾನಭಕ್ತಿಗಳನ್ನು ಹೇಳಿರುವದು. ಪರಮಾರ್ಥತತ್ತ್ವವನ್ನು ಅರಿತುಕೊಳ್ಳುವದೇ ಮುಖ್ಯವಾದ ಗುರಿ. ಅದನ್ನು ಅರಿತುಕೊಳ್ಳುವದಕ್ಕೆ ಸಾಂಖ್ಯವೆಂದು ಹೆಸರು. ಆತ್ಮನನ್ನು ಅರಿಯದ್ದರಿಂದಲೇ ಶೋಕಮೋಹಗಳು ನಮಗೆ ಬಂಧಕವಾಗಿವೆ. ಆತ್ಮನನ್ನು ಜ್ಞಾನದಿಂದಲೇ ನೇರಾಗಿ ಮುಟ್ಟಬಹುದು. ಕರ್ಮಧ್ಯಾನಗಳು ಅದಕ್ಕೆ ಸಾಧನಗಳು. ಎಂಟನೆಯ ಅಧ್ಯಾಯದಲ್ಲಿ ಕಾಲಾಂತರಮುಕ್ತಿಯನ್ನು ಕೊಡುವ ಓಂಕಾರಮೂಲಕವಾದ ಉಪಾಸನೆಯನ್ನು ತಿಳಿಸಿ ಒಂಭತ್ತನೆಯ ಅಧ್ಯಾಯದಲ್ಲಿ ಇಲ್ಲಿಯೇ ಆತ್ಮಪ್ರಾಪ್ತಿಯನ್ನು ಕೊಡುವ ಜ್ಞಾನವನ್ನು ಮತ್ತೆ ಹೇಳಿರುತ್ತದೆ. ಹನ್ನೊಂದನೆಯ ಅಧ್ಯಾಯದಲ್ಲಿ ವಿಶ್ವರೂಪೋಪಾಸನೆಯನ್ನು ಹೇಳಿ ಹನ್ನೆರಡನೆಯ ಅಧ್ಯಾಯದಲ್ಲಿ ವಿಶ್ವರೂಪೋಪಾಸಕರಿಗೆ ಭಗವಂತನೇ ಉದ್ಧಾರಕನಾಗುವನೆಂಬ ಸೌಲಭ್ಯವನ್ನು ತಿಳಿಸಿ ಅಕ್ಷರರೂಪವಾದ ಪರಬ್ರಹ್ಮವನ್ನೇ ಉಪಾಸನೆಮಾಡುವ ಜ್ಞಾನಿಗಳು ಸ್ವತಂತ್ರವಾಗಿಯೇ ಪರಮಾತ್ಮನನ್ನು ಪಡೆದುಕೊಳ್ಳುವರೆಂದು ಹೇಳಿ ಮುಖ್ಯಭಕ್ತರಾದ ಜ್ಞಾನಿಗಳ ಲಕ್ಷಣವನ್ನು ತಿಳಿಸಿ ಅಧ್ಯಾಯವನ್ನು ಮುಗಿಸಿರುತ್ತದೆ. ಹೀಗೆ ಅಧ್ಯಾಯಗಳ ಅರ್ಥವನ್ನು ತಿಳಿಸಿರುವ ಅನುಕ್ರಮವನ್ನು ಮನದಂದರೆ ಪರಮಾತ್ಮನ ಜ್ಞಾನವೇ ಈ ಭಗವದ್ಗೀತೆಗೆ ಮುಖ್ಯವೆಂದೂ ಪರಮಾರ್ಥವಾಗಿ ಯೋಗವೆನಿಸುವದಕ್ಕೆ ತಕ್ಕದ್ದು ಅದೇ - ಎಂದೂ ಕರ್ಮಧ್ಯಾನಾದಿಗಳೂ ಅದಕ್ಕೆ ಸಾಧನವಾಗಿರುವದರಿಂದ ಗೌಣಾರ್ಥದಲ್ಲಿ ಯೋಗವೆನಿಸಿರುವವೆಂದೂ ಸ್ಪಷ್ಟವಾಗುತ್ತದೆ.

ಈಗ ಈ ಹದಿಮೂರನೆಯ ಅಧ್ಯಾಯದಲ್ಲಿ ಗೀತಾಶಾಸ್ತ್ರಕ್ಕೆ ಮುಖ್ಯವಿಷಯವಾದ ಜ್ಞಾನವನ್ನೇ ಮತ್ತೆ ವಿಸ್ತರಿಸಿ ಹೇಳಲಾಗುತ್ತದೆ. ಜ್ಞಾನವನ್ನು ಸಂಪಾದಿಸಿಕೊಳ್ಳುವವನಿಗೆ ದೃಢಸಂಕಲ್ಪವಿರಬೇಕು. ತಾನು ನೇರಾಗಿಯೇ ತತ್ತ್ವವನ್ನು ತಿಳಿದುಕೊಳ್ಳುವೆನೆಂಬ

ಇಚ್ಛೆಯುಳ್ಳವನಾಗಿರಬೇಕು. ಅಮೆರಿಕದ ಹೆನ್ರಿ ಡೇವಿಡ್ ಥೋರೋ ಎಂಬಾತನು ಬರೆದಿರುವ ವಾಲ್ಡೆನ್ ಎಂಬ ಗ್ರಂಥದಲ್ಲಿ ಹಣವು ನಮ್ಮಲ್ಲಿರುವದು ವಸ್ತುಗಳ ನೇರಾದ ಜ್ಞಾನಕ್ಕೆ ಅಡ್ಡಿ ಎಂದು ಬರೆದಿರುತ್ತಾನೆ. ಇನ್ನು ಯಾವ ಉಪಾಯವನ್ನು ನಾವು ಸಂಪಾದಿಸಿಕೊಂಡರೂ ತತ್ತ್ವವನ್ನು ನಾವೇ ನೋಡಿ ಅರಿತುಕೊಳ್ಳುವ ವಿಚಾರಕ್ಕೆ ಸಮಾನವಾಗಲಾರದು. ಈ ಜ್ಞಾನಸಾಧನವಾದ ವಿಚಾರವು ಅಷ್ಟೇನೂ ಆಯಾಸಕರವಾದದ್ದಲ್ಲ; 'ಸುಸುಖಂ ಕರ್ತುಮವ್ಯಯಮ್' ಮಾಡುವದು ಸುಲಭ, ಅದರ ಫಲವು ಅವ್ಯಯವಾಗಿರುತ್ತದೆ ಎಂದು ಭಗವಂತನೇ ಅಪ್ಪಣೆಕೊಡಿಸಿರುತ್ತಾನೆ. ಜ್ಞಾನವು ನಮಗೆ ದಕ್ಕತಕ್ಕದ್ದಲ್ಲ ಎನ್ನುವವರು ಮೂಢರು. ಜ್ಞಾನವು ಎಲ್ಲರಿಗೂ ಇದೆ, ಎಲ್ಲರಿಗೂ ವಿಚಾರಶಕ್ತಿಯಿದೆ. ಆದರೆ ನಾವು ಅದನ್ನು ಉಪಯೋಗಿಸುವದಕ್ಕೆ ಸಿದ್ಧರಾಗಿಲ್ಲ, ಸೋಮಾರಿತನದಿಂದ ವಿಚಾರವನ್ನು ಮಾಡದೆ ನಂಬಿಕೆಯ ಮೇಲೆಯೇ ಕಾಲಹಾಕುವದನ್ನು ಕಲಿತುಕೊಂಡಿರುತ್ತೇವೆ. ಅಷ್ಟೇ. ನಮಗೆ ಅಜ್ಞತೆಯೇ ಸ್ವಾಭಾವಿಕವಾಗಿ ತೋರುತ್ತಿದೆ.

ಅಜ್ಞಾನದ ಸ್ವರೂಪವೇನು ? ಎಂದರೆ ಎಲ್ಲಕ್ಕೂ ಮೂಲವಾದ ಅಜ್ಞಾನವನ್ನು ಅಧ್ಯಾತ್ಮಜ್ಞಾನಿಗಳು ಹೀಗೆಂದು ವರ್ಣಿಸುತ್ತಾರೆ - ಅಜ್ಞಾನ, ಅವಿದ್ಯೆ- ಎಂದರೆ ನಮ್ಮ ನಿಜವಾದ ಸ್ವರೂಪವನ್ನೂ ಆ ಸ್ವರೂಪಕ್ಕೆ ಸಂಬಂಧಪಡದಿರುವದನ್ನೂ ವಿಂಗಡಿಸಿ ಅರಿತುಕೊಳ್ಳುವದಕ್ಕೆ ಪ್ರಯತ್ನಿಸದೆ ಈ ಎರಡನ್ನೂ ಕಲಬೆರಕೆಮಾಡಿಕೊಂಡು ಒಂದನ್ನು ಮತ್ತೊಂದೆಂದು ಭಾವಿಸಿಕೊಂಡು ಸತತವಾಗಿ ವ್ಯವಹರಿಸುತ್ತಿರುವದೇ. ಅಜ್ಞಾನಿಯಾದವನು ಅಜ್ಞಾನವನ್ನೇ ಜ್ಞಾನವೆಂದು ಅಪ್ಪಿಕೊಂಡಿರುವನು. ಇಂಗ್ಲೀಷುಭಾಷೆಯನ್ನು ಚೆನ್ನಾಗಿ ಅರಿಯದವನೊಬ್ಬನು ಭಾವಿಗೆ ಬಿದ್ದು ಮುಳುಗುತ್ತಿರುವಲ್ಲಿ ಯಾರಾದರೂ ತನಗೆ ಸಹಾಯಮಾಡಲಿ ಎಂಬ ಇಚ್ಛೆಯಿಂದ ಒಂದು ವಾಕ್ಯವನ್ನು ಪ್ರಯೋಗಿಸಿದನಂತೆ. 'I will be drowned and nobody shall help me' ಎಂಬ ಆ ವಾಕ್ಯದಲ್ಲಿ ಎರಡು ಶಬ್ದಗಳನ್ನು ಒಂದರ ಸ್ಥಾನದಲ್ಲಿ ಒಂದನ್ನು ಆತನು ಉಪಯೋಗಿಸಿದ್ದನು. ಈ ತಪ್ಪುತಿಳಿವಳಿಕೆಯ ಪ್ರಯೋಗದಿಂದ ಅವನ ಅಭಿಪ್ರೇತವಾದ ಅರ್ಥಕ್ಕೆ ಬದಲಾಗಿ ``ನಾನು ಅವಶ್ಯವಾಗಿ ಮುಳುಗಿ ಸಾಯಬೇಕೆಂದು ಸಂಕಲ್ಪಿಸಿರುತ್ತೇನೆ; ಯಾವನೊಬ್ಬನೂ ನನಗೆ ಸಹಾಯಮಾಡಬಾರದು" ಎಂಬ ವಿಪರೀತಾರ್ಥವೇ ವಾಕ್ಯಕ್ಕೆ ಆಗುತ್ತಿತ್ತು ! ನಮ್ಮ ನಿತ್ಯವ್ಯವಹಾರವೂ ಇಂಥ ವಿಪರೀತಜ್ಞಾನದ ಫಲವಾಗಿರುತ್ತದೆ. ನಾವು ಆತ್ಮ, ಅನಾತ್ಮ - ಈ ಎರಡನ್ನೂ ಕಲೆಬೆರಕೆಮಾಡಿಕೊಂಡು ಅನಾತ್ಮವನ್ನು ಆತ್ಮನೆಂಬಂತೆ ವ್ಯವಹರಿಸುತ್ತಿರುವೆವು; ಆತ್ಮನನ್ನು ಅನಾತ್ಮವೆಂಬಂತೆ ವ್ಯವಹರಿಸುತ್ತಿರುವೆವು. ಈ ಅವಿದ್ಯೆಯಿಂದಲೇ ನಮಗೆ ಈ ಸಂಸಾರಬಂಧವುಂಟಾಗಿರುವದು. ಈ ಅವಿದ್ಯೆಯ ಫಲವಾಗಿಯೇ ಅರ್ಜುನನು ಭೀಷ್ಮದ್ರೋಣಾದಿಗಳನ್ನು ಇವರು ನನ್ನವರು, ನಾನು ಇವರವನು; ಇವರು ಸತ್ತುಹೋದಬಳಿಕ ನನಗೇನು ಗತಿ? - ಎಂಬ ಶೋಕಮೋಹಗಳಿಗೆ ತುತ್ತಾಗಿ ವ್ಯಥೆಪಡುತ್ತಿದ್ದನು. ಅವನ ಶೋಕಮೋಹಗಳನ್ನು ನಾಶಮಾಡುವದಕ್ಕೆ ಆತ್ಮಜ್ಞಾನವನ್ನು ಬಿಟ್ಟರೆ ಮತ್ತೆ ಯಾವ ಉಪಾಯವೂ ಇಲ್ಲವೆಂದರಿತಿದ್ದ ಭಗವಂತನು ಈ ಗೀತೆಯನ್ನು ಅವನಿಗೆ ಉಪದೇಶಿಸಿರುತ್ತಾನೆ. ಇದೇ ಗೀತೆಯಲ್ಲಿ

ತಪಸ್ಸು, ಯಜ್ಞ, ದಾನ - ಮುಂತಾದವುಗಳನ್ನು ಉಪದೇಶಿಸಿರುವದು ನಿಜ. ಆದರೆ ಅವುಗಳಿಂದ ಚಿತ್ತಶುದ್ಧಿಯನ್ನು ಹೊಂದಿ ಈ ಲೋಕದಲ್ಲಿ ಸಿಕ್ಕುವ ಉತ್ತಮಸುಖಗಳಲ್ಲಿಕೂಡ ತುಚ್ಛಬುದ್ಧಿಯಿಂದ ವಿರಕ್ತನಾಗಿ ಕೊನೆಗೆ ಪರಮಾತ್ಮಜ್ಞಾನವನ್ನು ಸಂಪಾದಿಸಿಕೊಳ್ಳುವದೊಂದೇ ಪ್ರಯೋಜನವಾಗಿರುತ್ತದೆ. ಆದ್ದರಿಂದ ಭಗವಂತನು ಈ ಪ್ರಯೋಜನವನ್ನುಂಟುಮಾಡುವ ಜ್ಞಾನವನ್ನು ಉಪದೇಶಿಸುವದಕ್ಕೆ ಇಲ್ಲಿ ಪ್ರಾರಂಭಿಸಿರುತ್ತಾನೆ:

**ಇದಂ ಶರೀರಂ ಕೌನ್ತೇಯ ಕ್ಷೇತ್ರಮಿತ್ಯಭಿಧೀಯತೇ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ 13-1**

ಎಲೈ ಅರ್ಜುನನೆ, ಈ ಶರೀರಕ್ಕೆ ಕ್ಷೇತ್ರವೆಂದು ಹೆಸರು. ಇದನ್ನು ಯಾವನು ಅರಿತುಕೊಳ್ಳುವನೋ ಅವನನ್ನು ಕ್ಷೇತ್ರಜ್ಞನೆಂದು ಬಲ್ಲವರು ಕರೆಯುವರು. ಯಾವಯಾವದು ಅರಿಯಲ್ಪಡತಕ್ಕದ್ದೋ ಅದೆಲ್ಲವೂ ಕ್ಷೇತ್ರವು. ಯಾವನು ಮತ್ತೆ ಯಾವದರಿಂದಲೂ ಅರಿಯಲ್ಪಡತಕ್ಕವನಲ್ಲವೋ, ಯಾವನು ಮತ್ತೆಲ್ಲವನ್ನೂ ತನ್ನ ಚೈತನ್ಯಪ್ರಕಾಶದಿಂದ, ಸೂರ್ಯನು ಸ್ವಭಾವದಿಂದಲೇ ಎಲ್ಲವನ್ನೂ ಬೆಳಗುವಂತೆ, ಬೆಳಗಿ ಅರಿಯುತ್ತಿರುವನೋ ಅವನೇ ಕ್ಷೇತ್ರಜ್ಞನು. ಶರೀರವು ಕ್ಷೇತ್ರವು. `ಕ್ಷತತ್ರಾಣಾತ್, ಕ್ಷಯಾತ್, ಕ್ಷರಣಾತ್, ಕ್ಷೇತ್ರವದ್ವಾ ಅಸ್ಮಿನ್ ಕರ್ಮಫಲನಿಷ್ಪತ್ತೇಃ ಕ್ಷೇತ್ರಮ್' ಎಂದಿರುವಂತೆ ಪೆಟ್ಟಿನಿಂದ (ಕ್ಷತ) ಕಾಪಾಡುವದರಿಂದಲೂ (ತ್ರಾಣ), ಹಾಳಾಗುತ್ತಿರುವದರಿಂದಲೂ (ಕ್ಷಯ) ಮೆಲ್ಲಮೆಲ್ಲನೆ ಸವೆಯುತ್ತಿರುವದರಿಂದಲೂ (ಕ್ಷರಣ), ಅಥವಾ ಹೊಲ (ಕ್ಷೇತ್ರ) ದಲ್ಲಿ ಪೈರಿನ ಫಲವು ಉಂಟಾಗುವಂತೆ ಇದರಲ್ಲಿಯೂ ಕರ್ಮಫಲವು ಉಂಟಾಗುತ್ತಿರುವದರಿಂದಲೂ ಈ ಶರೀರವು ಕ್ಷೇತ್ರ ಎನಿಸಿರುತ್ತದೆ. ಈ ಶರೀರವನ್ನು ಯಾವ ಆತ್ಮನು ತನ್ನ ಜ್ಞಾನದಿಂದ ವಿಷಯೀಕರಿಸುತ್ತಿರುವನೋ ಅವನೇ ಕ್ಷೇತ್ರಜ್ಞನು ಎಂದು ಬಲ್ಲವರು ಹೇಳುತ್ತಾರೆ.

ಹೀಗೆ ಸಾಮಾನ್ಯವಾಗಿ ಹೇಳಿದರೂ ಕ್ಷೇತ್ರವು ಎಲ್ಲಿಯವರೆಗೆ ವಿಸ್ತರಿಸಿರುವದು? ಇದನ್ನರಿಯುವ ಕ್ಷೇತ್ರಜ್ಞನ ಸ್ವರೂಪವು ಯಾವದು? ಎಂಬುದು ನಮಗೆ ನಿಶ್ಚಿತವಾಗಿ ತಿಳಿಯುವದಿಲ್ಲ. ಇದಕ್ಕಾಗಿ ಭಗವಂತನು ಮೊದಲು ಕ್ಷೇತ್ರಜ್ಞಸ್ವರೂಪವನ್ನು ತಿಳಿಸಿಕೊಡುತ್ತಿದ್ದಾನೆ:

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥ 13-2**

ಕ್ಷೇತ್ರಜ್ಞನು, ಎಂದರೆ ಕ್ಷೇತ್ರವನ್ನು ಅರಿಯುವವನು ಯಾರು? ಸರ್ವ ಕ್ಷೇತ್ರಗಳಲ್ಲಿಯೂ, ಎಲ್ಲಾ ದೇಶ ಎಲ್ಲಾ ಕಾಲಗಳಲ್ಲಿಯೂ ಇರುವ ಆತ್ಮನು ಒಬ್ಬನೇ; ಅವನು ನಾನೇ, ಪರಮಾತ್ಮನೇ- ಎಂದು ಭಗವಂತನು ಹೇಳಿರುತ್ತಾನೆ. ಆದರೆ ನಾವು ತಿಳಿದುಕೊಂಡಿರುವ ಪ್ರಕಾರ ಈ ಅಭಿಪ್ರಾಯವು

ಅನುಭವಕ್ಕೆ ವಿರುದ್ಧವಾಗಿ ತೋರುತ್ತದೆ. ನಮ್ಮ ಆತ್ಮನು ಪರಮಾತ್ಮನೇ ಎಂದರೆ ಹೇಗೆ ? ಪರಮಾತ್ಮನ ಲಕ್ಷಣವು ನಮ್ಮಲ್ಲಿದೆಯೆ? ಇನ್ನು ನಮ್ಮ ಆತ್ಮನೂ ಮತ್ತು ಸರ್ವಕ್ಷೇತ್ರಗಳಲ್ಲಿಯೂ ಬ್ರಹ್ಮಾದಿಸ್ತಂಬಪರ್ಯಂತವಾದ ಎಲ್ಲಾ ಪ್ರಾಣಿಗಳ ಕ್ಷೇತ್ರದಲ್ಲಿಯೂ ಇರುವ ಆತ್ಮನೂ ಒಬ್ಬನೇ, ಅವನು ಪರಮಾತ್ಮನೇ ಎಂಬುದನ್ನು ಹೇಗೆ ಒಗ್ಗಿಸಿಕೊಳ್ಳೋಣ ? ನಮಗೆ ಕಾಣುತ್ತಿರುವ ಅಥವಾ ತಿಳಿಯಬರುತ್ತಿರುವ ಆತ್ಮರುಗಳಲ್ಲಿ ಬಹಳ ತಾರತಮ್ಯಗಳು ಇರುವದು ಅನುಭವದಲ್ಲಿರುತ್ತವೆ. ಹೀಗಿರುವಲ್ಲಿ ಒಬ್ಬನೇ ಪರಮಾತ್ಮನೇ ಎಲ್ಲಾ ಕ್ಷೇತ್ರಗಳನ್ನೂ ಅರಿಯುತ್ತಿರುವ ಕ್ಷೇತ್ರಜ್ಞನು ಎಂಬುದನ್ನು ಹೇಗೆ ನಂಬೋಣ? - ಎನ್ನಿಸುತ್ತದೆ. ಇದಕ್ಕೆ ಕಾರಣವೇನೆಂದರೆ : ನಾವು ಕ್ಷೇತ್ರ, ಕ್ಷೇತ್ರಜ್ಞ - ಇವುಗಳನ್ನು ವಿಂಗಡಿಸಿಕೊಂಡಿಲ್ಲ. ಇವುಗಳ ವಿವೇಚನೆಯನ್ನು ಮಾಡಿಕೊಂಡಿದ್ದರೆ - ಬರಿಯ ಶಬ್ದಗಳ ವಿವೇಚನೆಯನ್ನಲ್ಲ, ಪದಾರ್ಥಗಳ ವಿವೇಚನೆಯನ್ನೂ ಮಾಡಿಕೊಂಡಿದ್ದರೆ ಸರ್ವಕ್ಷೇತ್ರಗಳಲ್ಲಿಯೂ ಒಬ್ಬನೇ ಕ್ಷೇತ್ರಜ್ಞನು ಇರುತ್ತಾನೆ; ಅವನು ಭಗವಂತನೆ ಎಂಬ ವಾಕ್ಯಕ್ಕೆ ಅರ್ಥವು ನಮಗೆ ಆದೀತು. ಈಗ ನಮಗೆ ಇರುವದು ಸರಿಯಾದ ಜ್ಞಾನವಲ್ಲ, ಅಜ್ಞಾನವೇ. ಇದು ಜ್ಞಾನ, ಇದು ಅಜ್ಞಾನ - ಎಂಬ ವಿಂಗಡವೂ ನಮಗೆ ಇದೆಯಲ್ಲವೆ? - ಎಂದು ನೀವು ಕೇಳಬಹುದು. ನಿಜ. ಆದರೆ ಈ ಜ್ಞಾನಾಜ್ಞಾನಗಳೆರಡೂ ನಿಜವಾಗಿ ಅಜ್ಞಾನವೇ. ಸ್ವಪ್ನವನ್ನು ನೋಡಿ. ಅಲ್ಲಿ ಕೆಲವರು ಗುರುಗಳು, ಕೆಲವರು ಶಿಷ್ಯರು; ಆದರೆ ಗುರುಗಳ ಜ್ಞಾನವೂ ಶಿಷ್ಯರ ಅಜ್ಞಾನವೂ ಕನಸಿನೊಳಗೇ ಸೇರಿರುವದಲ್ಲವೆ ? ಎಚ್ಚರದ ದೃಷ್ಟಿಯಿಂದ ಎರಡೂ ಕನಸಿನ ಜ್ಞಾನವೇ. ಆದ್ದರಿಂದ ಮಿಥ್ಯಾಜ್ಞಾನವೇ ಆಗಿರುತ್ತವೆ. ಅಲ್ಲವೆ? ಕನಸಿನಲ್ಲಿ ಆದದ್ದು ನಿಜವೂ ಆಗಬಹುದು, ಸುಳ್ಳೂ ಆಗಬಹುದು. ಹಾಗೆಯೇ ಈಗಿನ ನಮ್ಮ ಜ್ಞಾನದಲ್ಲಿ ಜ್ಞಾನವೂ ಅಜ್ಞಾನವೂ ಬೆರೆತಿರಬಹುದು.

ಆದ್ದರಿಂದ ಕ್ಷೇತ್ರವನ್ನೂ ಕ್ಷೇತ್ರಜ್ಞನನ್ನೂ ಸರಿಯಾಗಿ ವಿಂಗಡಿಸಿ ಅರಿತುಕೊಳ್ಳುವ ಜ್ಞಾನವೇ ನಿಜವಾದ ಜ್ಞಾನವು - ಎಂದು ನನ್ನ ಮತವು ಎಂದು ಭಗವಂತನು ಅಂದಿರುತ್ತಾನೆ. ಆದ್ದರಿಂದ ಆ ಕ್ಷೇತ್ರವು ಯಾವದು, ಎಂಥದ್ದು, ಯಾವಯಾವ ವಿಕಾರಗಳನ್ನು ಪಡೆಯುವದು, ಎಲ್ಲಿಂದ ಯಾವದು ಬರುವದು ಮತ್ತು ಆ ಕ್ಷೇತ್ರಜ್ಞನು ಯಾವ ಪ್ರಭಾವದವನು - ಎಂಬುದನ್ನು ವಿವರಿಸುತ್ತೇನೆ ಕೇಳು - ಎಂದು ಅರ್ಜುನನ ಅಜ್ಞಾನವನ್ನು ಕಳೆಯುವದಕ್ಕಾಗಿ ಹೇಳುತ್ತಿದ್ದಾನೆ. ಕ್ಷೇತ್ರದಿಂದ ಬಿಡಿಸಿ ಕ್ಷೇತ್ರಜ್ಞನನ್ನು ಅರಿತುಕೊಳ್ಳಬೇಕಾಗಿದೆ. ಕ್ಷೇತ್ರದ ಯಾವ ಅಂಶವನ್ನೂ ಕ್ಷೇತ್ರಜ್ಞನಲ್ಲಿ ಬೆರೆಯಿಸಿಕೊಳ್ಳಕೂಡದು. ಆದ್ದರಿಂದ ಕ್ಷೇತ್ರವನ್ನು ತಿಳಿಸುತ್ತಾನೆ. ಕ್ಷೇತ್ರವನ್ನು ಮೊದಲು ತಿಳಿದುಕೊಂಡರೇ ಕ್ಷೇತ್ರಜ್ಞನನ್ನು ತಿಳಿದುಕೊಳ್ಳಬಹುದು. ಇದು ಕ್ಷೇತ್ರವೇ, ಕ್ಷೇತ್ರಜ್ಞನಲ್ಲ - ಎಂದು ತಿಳಿದುಕೊಳ್ಳುವದಕ್ಕಾಗಿ ಕ್ಷೇತ್ರದ ಸ್ವರೂಪಾದಿಗಳನ್ನು ಅರಿತುಕೊಳ್ಳಬೇಕಾಗಿರುತ್ತದೆ. ಪಂಚೀಕರಣವನ್ನು ತಿಳಿದುಕೊಂಡರೆ ಆತ್ಮಜ್ಞಾನವಾಗುತ್ತದೆ ಎಂದು ಕೆಲವರ ಭ್ರಾಂತಿ. ಅದಕ್ಕಾಗಿ ಪಂಚೀಕರಣದ ಆಟವನ್ನು ಮಾಡಿಕೊಂಡಿರುವವರನ್ನು ಕೂಡ ನಾನು ನೋಡಿರುತ್ತೇನೆ. ಪಂಚೀಕರಣವೆಂದರೆ ಪಂಚಭೂತಗಳು ಒಂದರಲ್ಲೊಂದು ಬೆರೆತು

ಸ್ಥೂಲಭೂತಗಳಾಗುವ ಬಗೆ. ಉಪನಿಷತ್ತಿನಲ್ಲಿ ಭೂತಗಳ ತ್ರಿವೃತ್ಕರಣವಿದೆ; ಅದು ಪಂಚೀಕರಣಕ್ಕೂ ಉಪಲಕ್ಷಣವು. ಆದರೆ ಈ ಪಂಚೀಕರಣದಿಂದ ತಿಳಿಯಬೇಕಾದದ್ದು ಏನು? ಅನಾತ್ಮವೆಲ್ಲವೂ ಪಂಚೀಕೃತಭೂತಗಳ ವಿಚಾರವು. ಬಾಹ್ಯ ಆಧ್ಯಾತ್ಮಿಕವಾಗಿ ವಿಂಗಡವಾಗಿರುವದೆಲ್ಲವೂ ಅನಾತ್ಮವೇ. ಆದ್ದರಿಂದ ಮನಸ್ಸನ್ನು ಈ ಪಂಚೀಕರಣದಲ್ಲಿ ಹಾಕತಕ್ಕದ್ದಲ್ಲ; ಪಂಚೀಕೃತಜಗತ್ತಿಗಿಂತ ಅತ್ಯಂತ ವಿಲಕ್ಷಣವಾಗಿರುವ ಆತ್ಮತತ್ತ್ವವನ್ನು ತಿಳಿದುಕೊಳ್ಳಬೇಕು. `ಅನ್ಯಾ ವಾಚೋ ವಿಮುಞ್ಚಥ' ಮಿಕ್ಕ ಮಾತುಗಳನ್ನು ಬಿಡಿರಿ ಎಂದೇ ಉಪನಿಷತ್ತು ಉಪದೇಶಿಸುತ್ತಿದೆ. ಕ್ಷೇತ್ರವು ತುಚ್ಛವಾದದ್ದು, ದುಃಖಮಯವಾದದ್ದು, ಹೇಯವಾದದ್ದು. ಅದರಿಂದ ಕ್ಷೇತ್ರಜ್ಞನನ್ನು ಬಿಡಿಸಿ ತಿಳಿದುಕೊಳ್ಳಬೇಕು. 'ಮುಞ್ಜಾದಿವೇಷೀಕಾಂ' ನೊಸೆಹುಲ್ಲಿನಿಂದ ಅದರಲ್ಲಿರುವ ದಿಂಡನ್ನು ಬಿಡಿಸಿ ತೆಗೆಯುವಂತೆ ವಿವೇಕದಿಂದ ಆತ್ಮನನ್ನು ಬಿಡಿಸಿಕೊಂಡು ಅರಿತುಕೊಳ್ಳಬೇಕು. ಆದ್ದರಿಂದ ಕ್ಷೇತ್ರಕ್ಷೇತ್ರಜ್ಞರ ಜ್ಞಾನವು ಎಂದರೆ ಕ್ಷೇತ್ರದಿಂದ ಕ್ಷೇತ್ರಜ್ಞನನ್ನು ವಿಂಗಡಿಸಿಕೊಂಡು ಅರಿಯುವ ಜ್ಞಾನವೇ ಜ್ಞಾನವು. ಮಿಕ್ಕದ್ದೆಲ್ಲವೂ ಅಜ್ಞಾನವೇ.

ಈ '

**ಋಷಿಭಿರ್ಬಹುಧಾ ಗೀತಂ ಛನ್ದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ 13-4**

ಈ ಜ್ಞಾನವನ್ನು ಋಷಿಗಳು ಬಹಳವಾಗಿ ಹಾಡಿಹೊಗಳಿರುತ್ತಾರೆ. ಋಷಿಗಳು ಎಂದರೆ ತತ್ತ್ವವನ್ನು ಕಂಡಿರುವ ವಸಿಷ್ಠಾದಿಗಳು. ಅವರು ಇದನ್ನು ಬಹುವಿಧವಾಗಿ ತಿಳಿಸಿಕೊಟ್ಟಿರುತ್ತಾರೆ. ಅವರು ಹಾಗೆ ಹಾಡಿರುವದು ಋಗಾದಿವಿವಿಧಛಂದಸ್ಸುಗಳಲ್ಲಿ; ವೇದವೆಲ್ಲವೂ ಈ ಪರಮಾತ್ಮಜ್ಞಾನವನ್ನು ತಿಳಿಸುವದಕ್ಕೇ ಬಂದಿರುತ್ತದೆ. ಅದರಲ್ಲಿ ಆತ್ಮತತ್ತ್ವವನ್ನು ವಿಂಗಡಿಸಿ ಹೇಳಿರುತ್ತದೆ. ಹೀಗೆ ವೇದವೇದ್ಯವಾಗಿರುವದರಿಂದ ಇದನ್ನು ಅವಶ್ಯವಾಗಿ ಅರಿತುಕೊಳ್ಳಬೇಕು.

ಹೇತುಯುಕ್ತವಾದ ವಿನಿಶ್ಚಿತವಾದ ಬ್ರಹ್ಮಸೂತ್ರಪದಗಳಿಂದಲೂ ಈ ತತ್ತ್ವವು ಹೇಳಲ್ಪಟ್ಟಿರುತ್ತದೆ. ಉಪನಿಷತ್ತುಗಳಲ್ಲಿ 'ಆತ್ಮೇತ್ಯೇವೋಪಾಸೀತ', 'ಬ್ರಹ್ಮವಿದಾಪ್ನೋತಿ ಪರಮ್' ಮುಂತಾದ ಕೆಲವು ಸೂತ್ರಪ್ರಾಯವಾಗಿರುವ ವಚನಗಳಿಂದ ಬ್ರಹ್ಮವನ್ನು ತಿಳಿಸಿ ಆ ಬಳಿಕ ಆ ಸೂತ್ರಗಳನ್ನು ವಿವಿಧವಾದ ಹೇತುಗಳಿಂದ ಪುಷ್ಟಿಗೊಳಿಸಿ ಆತ್ಮತತ್ತ್ವವನ್ನು ತಿಳಿಸಿರುತ್ತದೆ. ಉಪಕ್ರಮೋಪಸಂಹಾರಾದಿಲಿಂಗಗಳಿಂದ ಈ ತತ್ತ್ವವನ್ನು ತಿಳಿಸಿಕೊಡುವದರಲ್ಲಿ ವೇದಕ್ಕೆ ಮಹಾತಾತ್ಪರ್ಯವಿದೆ ಎಂದು ಗೊತ್ತಾಗುತ್ತದೆ ಎಂದರ್ಥ.

ಈ ಶ್ಲೋಕದಲ್ಲಿ `ಬ್ರಹ್ಮಸೂತ್ರಪದೈಶ್ಚೈವ' ಎಂದು ಹೇಳಿರುವದರಿಂದ ಗೀತೆಗಿಂತಲೂ ಮೊದಲು ಬ್ರಹ್ಮಸೂತ್ರಗ್ರಂಥವು ಇತ್ತೆಂದು ಕೆಲವರು ಶೋಧನೆಮಾಡುತ್ತಿದ್ದಾರೆ. ಆದರೆ ಬ್ರಹ್ಮಸೂತ್ರ ಎಂಬ ಹೆಸರನ್ನು ಕುರಿತು ಹೀಗೆ ಬಗೆಬಗೆಯ ವಿಚಾರವನ್ನು ಮಾಡಿದ್ದರಿಂದ ಆಗುವ

ಪ್ರಯೋಜನವಾದರೂ ಏನು? ಉಪನಿಷತ್ತುಗಳು ಎಷ್ಟು? ಅವುಗಳ ಹೆಸರು ಏನು? ಅವುಗಳ ಕಾಲವು ಯಾವದು? ಗೀತೆಯೂ ಬ್ರಹ್ಮಸೂತ್ರವೂ ಯಾವಾಗ ಹುಟ್ಟಿದವು? ಇಂಥ ಪ್ರಶ್ನೆಗಳು ಕೆಲವು ವಿದ್ವಾಂಸರಿಗೆ ರುಚಿಕರವಾಗಿರಬಹುದು. ಆದರೆ ಆ ವಿದ್ವತ್ತೆಯು ಪ್ರಕೃತಜ್ಞಾನಕ್ಕೆ ಯಾವ ಬಗೆಯಿಂದಲೂ ಪ್ರಯೋಜನಕಾರಿಯಾಗುವದಿಲ್ಲ. ಗೌತಮಬುದ್ಧನು ಒಮ್ಮೆ ಹೀಗೆಂದು ಉಪದೇಶಮಾಡಿದನಂತೆ : ಯಾವನಾದರೂ ಒಬ್ಬನು ಬಾಣದ ಹೊಡೆತದಿಂದ ನರಳುತ್ತಾ ಬಿದ್ದಿರುವಾಗ ಶಸ್ತ್ರಚಿಕಿತ್ಸಕನನ್ನು ಕರೆದು `ಸ್ವಾಮಿ, ಈ ಬಾಣದ ತುಂಡನ್ನು ಶರೀರದಿಂದ ದಯವಿಟ್ಟು ಹೊರಕ್ಕೆ ತೆಗೆದು ಈತನನ್ನು ಬದುಕಿಸಿರಿ' ಎಂದು ಕೇಳಿದರೆ ಆತನು ಇಂತೆಂದನು - `ಅಪ್ಪ, ಈ ಬಾಣವು ಯಾವ ಲೋಹದ್ದು? ಯಾವ ದಿಕ್ಕಿನಿಂದ ಇವನಿಗೆ ಬಂದು ತಗುಲಿತು? ಇದನ್ನು ಹೊಡೆದವನು ಯಾರು? ಅವನ ಹೆಸರು, ಆಕಾರ, ಕುಲ, ಗೋತ್ರ ಮುಂತಾದವು ಯಾವವು? - ಇವನ್ನು ಮೊದಲು ತಿಳಿಯಬೇಕು. ಅದನ್ನು ಹೇಳಿರಿ'. ಆ ವೈದ್ಯನ ವಿಷಯದಲ್ಲಿ ಜನರ ಅಭಿಪ್ರಾಯವೇನಾಗುವದು? ಅದರಂತೆಯೇ ಪ್ರಕೃತ ಐತಿಹಾಸಿಕರ ಪ್ರಶ್ನೆಯೂ ಆಗಿರುತ್ತದೆ. ಅಜ್ಞಾನದಿಂದ ಜನರಿಗೆ ಸಂಸಾರದ ಬಂಧವಾಗಿರುತ್ತದೆ; ಆ ಅಜ್ಞಾನವು ಇರುವವರೆಗೆ ಅವರು ನರಳುತ್ತಿರುತ್ತಾರೆ. ಕ್ಷೇತ್ರಕ್ಷೇತ್ರಜ್ಞರ ವಿವೇಕವನ್ನು ಸಂಪಾದಿಸಿಕೊಂಡರೆ ಈ ಅಜ್ಞಾನವೂ ಅಜ್ಞಾನದಿಂದಾಗಿರುವ ಅನರ್ಥವೂ ತೊಲಗುವದು - ಎಂದು ಭಗವಂತನು ಹೇಳಿರುತ್ತಾನೆ. ಕ್ಷೇತ್ರ ಕ್ಷೇತ್ರಜ್ಞರ ವಿವೇಕವು ಹೇಗೆ ಆಗುವದು ಎಂಬ ಬಗ್ಗೆ ಇತಿಹಾಸಶೋಧನೆಯಿಂದ ಯಾವ ಉಪಕಾರವು ಆದೀತು? ಇದನ್ನು ಬಿಡೋಣ. ಪ್ರಕೃತವಾಗಿರುವದು ಸರ್ವಜ್ಞಕಲ್ಪರಾದ ಋಷಿಗಳು ವೇದಮಂತ್ರಗಳ ಮೂಲಕವಾಗಿ ಬ್ರಹ್ಮಸ್ವರೂಪನಾದ ಈ ಆತ್ಮತತ್ತ್ವವನ್ನು ಸಂಗ್ರಹವಾಗಿ ತಿಳಿಸಿರುವರಲ್ಲದೆ ಜ್ಞಾನವುಂಟಾಗುವದಕ್ಕೆ ತಕ್ಕ ಹೇತುಯುಕ್ತವಿವರಗಳನ್ನೂ ಕೊಟ್ಟಿರುತ್ತಾರೆ. ಆ ಮಹಾತ್ಮರ ದಿವ್ಯದೃಷ್ಟಿಯನ್ನು ಅನುಸರಿಸಿ ನಾವೂ ತಿಳಿದುಕೊಳ್ಳಬೇಕು. ವೇದವಾಕ್ಯವು ಆತ್ಮವಿಷಯದಲ್ಲಿ ಸಂದಿಗ್ಧವಾಗಿಲ್ಲ. ಅದರಿಂದ ಜ್ಞಾನವುಂಟಾಗುವದಿಲ್ಲವೆಂಬುದೂ ಇಲ್ಲ; ವಿಪರೀತವಾಗಿ ಜ್ಞಾನವಾಗುವ ಸಂಭವವೇ ಇಲ್ಲ. ವಿನಿಶ್ಚಿತವಾದ ವಾಕ್ಯಗಳಿಂದ ಅದು ಈ ತತ್ತ್ವವನ್ನು ವಿವರಿಸಿರುತ್ತದೆ. ಆದ್ದರಿಂದ ಪ್ರಮಾಣಭೂತವಾದ ವೇದದಲ್ಲಿ ಹೇಳಿರುವ ಈ ಜ್ಞಾನವನ್ನು ಅವಶ್ಯವಾಗಿ ನಾವೆಲ್ಲರೂ ಸ್ವೀಕರಿಸಿ ಕೃತಕೃತ್ಯರಾಗಬೇಕು - ಎಂಬುದು ಭಗವಂತನ ಉಪದೇಶವು.



# ೯೪. ಕ್ಷೇತ್ರಸ್ವರೂಪ 13 - ( 5-6)

## (15-8-48)

ಏಳನೆಯ ಅಧ್ಯಾಯದಿಂದಲೂ ಭಗವಂತನು ಜ್ಞಾನವನ್ನು ಉಪದೇಶಿಸುತ್ತಲೇ ಇದ್ದಾನೆ. ಯೋಗವನ್ನು ಮಾಡುತ್ತಾ ಪರಮೇಶ್ವರನನ್ನೇ ಆಶ್ರಯಿಸಿಕೊಂಡಿದ್ದರೆ ಅಸಂಶಯವಾಗಿ ಸಮಗ್ರವಾಗಿ ಹೇಗೆ ಭಗವಂತನನ್ನು ತಿಳಿದುಕೊಳ್ಳಬಹುದು ಎಂಬುದು ಆ ಅಧ್ಯಾಯದಲ್ಲಿದೆ. ಎಂಟನೆಯ ಅಧ್ಯಾಯದಲ್ಲಿ ಉಪಾಸನೆಯಿಂದ ಕ್ರಮಮುಕ್ತಿಯನ್ನು ಪಡೆಯುವ ವಿಧಾನವನ್ನು ಉಪದೇಶಿಸಿದೆ. ಒಂಭತ್ತರಲ್ಲಿಯೂ ಜ್ಞಾನವನ್ನು ಹೇಳಿದೆ. ಹತ್ತನೆಯ ಅಧ್ಯಾಯದಲ್ಲಿ ಮತ್ತೆ ಉಪಾಸನೆಯನ್ನು ಹೇಳಿರುತ್ತದೆ. ಹನ್ನೊಂದನೆಯ ಅಧ್ಯಾಯದಲ್ಲಿ ವಿಶ್ವರೂಪವನ್ನು ವರ್ಣಿಸಿ ತೋರಿಸಿಕೊಟ್ಟು `ಮನ್ಮನಾ ಭವ' ಎಂದು ಉಪಾಸನಾಕ್ರಮವನ್ನು ಬೋಧಿಸಿರುತ್ತದೆ. ಹನ್ನೆರಡನೆಯ ಅಧ್ಯಾಯದಲ್ಲಿ ಪರಭಕ್ತರಾದ ಜ್ಞಾನಿಗಳ ಲಕ್ಷಣವನ್ನು ತಿಳಿಸಿಕೊಟ್ಟಿರುತ್ತದೆ. ಕೂಟಸ್ಥವಾದ ಅಕ್ಷರಾಖ್ಯಬ್ರಹ್ಮವನ್ನು ಅರಿತುಕೊಂಡವರು ಸ್ವತಂತ್ರರಾಗಿ ಬ್ರಹ್ಮಪ್ರಾಪ್ತಿಯನ್ನು ಪಡೆಯುತ್ತಾರೆ; ನೀನು ಭಕ್ತಿಯಿಂದ ನನ್ನನ್ನೇ ಉಪಾಸನೆಮಾಡುತ್ತಿದ್ದರೆ ನಾನೇ ನಿನ್ನನ್ನು ಉದ್ಧಾರಮಾಡುವೆನು ಎಂದು ಅಲ್ಲಿ ಬೋಧಿಸಿರುತ್ತದೆ. ಆರ್ತಾದಿಗಳೂ ಭಕ್ತರೇ, ಆದರೆ ಜ್ಞಾನಿಯು ನನ್ನ ಆತ್ಮನೇ. ಆದ್ದರಿಂದ ಅವನು ಪರಮಭಕ್ತನು - ಎಂದು ಭಗವಂತನು ಅಂದಿರುತ್ತಾನೆ. ಜ್ಞಾನಿಭಕ್ತರು ಪ್ರೇಮಪರವಶರಾಗಿ ಭಗವಂತನಲ್ಲಿಯೇ ನೆಲೆಸಿರುತ್ತಾರೆ. ಅವರನ್ನು ನೋಡಿ ಮಿಕ್ಕ ಭಕ್ತರು ಅವರ ಧ್ಯೇಯವನ್ನಿಟ್ಟುಕೊಂಡು ಭಜಿಸುತ್ತಾರೆ. ಜ್ಞಾನಿಭಕ್ತರು ಪರಮಾತ್ಮನ ಮಹಿಮೆಯನ್ನು ತಿಳಿದು ಭಜಿಸತಕ್ಕವರಾದ್ದರಿಂದ ಸ್ವತಂತ್ರ ಭಕ್ತರು; ಮಿಕ್ಕವರು ಪರತಂತ್ರರು. ಜ್ಞಾನಿಗಳ ಮೇಲುಪಜ್ಞೆಯನ್ನನುಸರಿಸಿ ಅಥವಾ ಭಯದಿಂದ ಭಕ್ತಿಯನ್ನು ಮಾಡುವವರು. ಪರಮೇಶ್ವರನು ದಯಾಳು, ಉದಾರನು, ಸರ್ವಶಕ್ತನು - ಎಂದು ಭಕ್ತಿಯನ್ನು ಮಾಡುವವರು. ಜ್ಞಾನಿಗಳಿಗೆ ಪರಮಾತ್ಮನಲ್ಲಿ ಭಕ್ತಿಯು ಪ್ರಾಣಿಗಳಿಗೆ ಉಸಿರಾಡುವಂತೆ ಸ್ವಭಾವಜನ್ಯವಾಗಿರುವದು, ನಿಷ್ಕಾರಣವಾಗಿರುವದು. ಅವರು ಯಾವ ಜ್ಞಾನವನ್ನು ಸಂಪಾದಿಸಿಕೊಂಡು ಇಂಥ ಸ್ವಾಭಾವಿಕಭಕ್ತಿಯನ್ನು ಮಾಡುತ್ತಾರೋ ಅದನ್ನು ಅರಿತುಕೊಳ್ಳುವದಕ್ಕೆ ಪ್ರಯತ್ನಿಸುವವರು ಕಡಿಮೆ.

ಈ ದಿನ ಸ್ವಾತಂತ್ರ್ಯ ದಿನ. ಜ್ಞಾನಿಗಳು ಸ್ವತಂತ್ರರಾಗಿಯೇ ಭಗವಂತನನ್ನು ಭಜಿಸುತ್ತಾರೆ - ಎಂಬ ಪ್ರಸಂಗದಿಂದ ಸ್ವಾತಂತ್ರ್ಯ ವಿಚಾರವು ನೆನಪಿಗೆ ಬಂದಿದೆ. ಇಂಗ್ಲೀಷಿನಲ್ಲಿ ಸ್ವಾತಂತ್ರ್ಯದಿನವನ್ನು 'Independence Day' ಎಂದು ಕರೆಯುವರು. ಆ ಶಬ್ದಕ್ಕೆ 'ಪರತಂತ್ರತಾಭಾವ ದಿನ" ಎಂದೇ ಅರ್ಥವಾಗುತ್ತದೆ. ಇದು ಸ್ವಾತಂತ್ರ್ಯ ಎಂಬಂಥ ವಿಧಿಮುಖವಾದ ಅರ್ಥವನ್ನು ಕೊಡುವದಿಲ್ಲ. ನಾವು ಇದುವರೆಗೂ ಇಂಗ್ಲೀಷರ ಪಾರತಂತ್ರ್ಯದಲ್ಲಿದ್ದೆವು; ಈಗ ಆ ಪಾರತಂತ್ರ್ಯವು ಹೋಗಿದೆ. ಮಂತ್ರಿಯು ರಾಜನಲ್ಲಿರುವ ನಿಜವಾದ ಪ್ರೇಮದಿಂದ ರಾಜ್ಯದ ಕಾರ್ಯಗಳಲ್ಲಿ

ಪ್ರವೃತ್ತನಾಗಿರುತ್ತಿದ್ದರೆ ಆವನು ಸ್ವತಂತ್ರನೆನ್ನಬಹುದು. ಹಾಗಿಲ್ಲದಿದ್ದರೆ ಅವನು ಪರತಂತ್ರನಲ್ಲದೆ ಮತ್ತೇನು? ನಮಗೆ ಸ್ವಾತಂತ್ರ್ಯವು ಬಂದಿಲ್ಲ, ಅತಂತ್ರರಾಗಿರುತ್ತೇವೆ. ಈಗ ನಾವು ಸ್ವಾತಂತ್ರ್ಯವು ಬಂತೆಂದು ಹೇಗೆ ಹೇಗೋ ನಡೆಯುತ್ತಿದ್ದೇವೆ. ಅಪ್ಪನ ಕೈಯಿಂದ ಬೀಗದಕೈಯನ್ನು ಕಸಿದುಕೊಂಡು ಆಟದಸಾಮಾನುಗಳಿಗೆ ಹಣವನ್ನು ವಿನಿಯೋಗಿಸುವ ಮಗನಿಗೆ ಸ್ವಾತಂತ್ರ್ಯವು ಬಂದಿದೆ ಎನ್ನಬಹುದೆ? ಪಾರತಂತ್ರ್ಯಾಭಾವ-ಎಂಬ ಭಾವನೆಯು ನಮಗೆ ಒಂದು ಭೂತದಂತೆ ಹಿಡಿದುಬಿಟ್ಟಿದೆ.

ನಮ್ಮಲ್ಲನೇಕರು 'ನೆಹ್ರು', 'ಪಟೇಲ್' - ಎಂದು ದೊಡ್ಡ ವ್ಯಕ್ತಿಗಳ ದೋಷವನ್ನು ಎತ್ತೆಣಿಸುತ್ತಾ ತಾವು ಮಾತ್ರ ಏನೂ ಮಾಡದೆ ಕುಳಿತಿರುತ್ತಾರೆ. ಈಗ ರಾಜಕೀಯರಂಗದಲ್ಲಿ ಅನೇಕ ಪಾರ್ಟಿಗಳೆಂಬ ತಂಡಗಳು ಆಗಿರುತ್ತವೆ. ಜನರು ಯಾವ ಪಾರ್ಟಿಗೂ ಸೇರದೆ ವೃತ್ತಾಂತಪ್ರತಿಕೆಗಳನ್ನು ಓದಿ ಹರಟೆಹೊಡೆಯುವ ಪಾರ್ಟಿಯವರಾಗುತ್ತಿದ್ದಾರೆ. ಹೀಗೆ ಆಗಬಾರದು. ನಮಗೇನು ಬೇಕು? - ಎಂಬುದನ್ನೇ ನಾವು ಅರಿಯದಿರುವಾಗ ದೇಶಕ್ಕೇನು ಮಾಡಬಲ್ಲೆವು? ನಮಗೆ ಗೊತ್ತಿದ್ದ ಒಬ್ಬ ಮಹನೀಯರು ತಮ್ಮ ಪೂರ್ವಜರ ಕಥೆಯೊಂದನ್ನು ನನಗೆ ಹೇಳಿದ್ದರು. ಆ ಮುದುಕರು ಸಾಯುತ್ತಿರುವಾಗ ಮನೆಯವರೆಲ್ಲರೂ ಅವರ ಸುತ್ತಲೂ ನಿಂತು 'ನಮಗೇನು ಗತಿ? ನಮಗೇನು ಹೇಳುತ್ತೀರಿ' ಎಂದು ಕೇಳುತ್ತಿದ್ದರಂತೆ. ಅದಕ್ಕೆ ಅವರು ನಸುನಗೆಯಿಂದ 'ನನಗೇನು ಗತಿ'? ಎಂದರಂತೆ! ಈ ಲೋಕವನ್ನೇ ಬಿಟ್ಟು ತೆರಳುವ ಕಾಲ. ತಾವು ದುಡಿದ ಧನವನ್ನೆಲ್ಲ ಮನೆಯವರಿಗೇ ಬಿಟ್ಟು ಹೊರಟಿರುತ್ತಾರೆ. ಮುಂದೆ ಎಲ್ಲಿಗೆ ಹೋಗಬೇಕೋ ತಿಳಿಯದು.ಅಂಥವರು 'ನನಗೇನು ಗತಿ?' ಎಂದು ಕೇಳಬೇಕೋ; `ನಿಮಗೇನು ಗತಿ?' ಎಂದು ಕೇಳಬೇಕೂ? ಮನುಷ್ಯನಿಗೆ ಅಲ್ಪಾಯಸ್ಸು, ಅವನು ದಿನದಿನವೂ ಮರಣದ ಹತ್ತಿರಕ್ಕೆ ಬರುತ್ತಿದ್ದಾನೆ. ಬಲಿಯನ್ನು ಕೊಡಬೇಕೆಂದು ಕಂಬಕ್ಕೆ ಕಟ್ಟಿರುವ ಕುರಿಯು, ಚಿಗುರುತೋರಣವನ್ನು ತಿನ್ನುವದಕ್ಕೆ ಎಳಸುವಂತಲ್ಲವೆ, ನಮ್ಮಗಳ ಪ್ರವೃತ್ತಿಯು?

ಲೋಕದಲ್ಲಿ ಎಲ್ಲೆಲ್ಲಿಯೂ ಅಜ್ಞಾನದ ಬಲೆ ಬೀಸಿರುತ್ತದೆ. ಅವಿದ್ಯಾಕಾಮಕರ್ಮಗಳ ಬಲೆಗೆ ಬೀಳದವರು ಯಾರು ಇರುತ್ತಾರೆ? ಅವಿದ್ಯಾಕಾಮಕರ್ಮಗಳು ವ್ಯಕ್ತಿಗಳಿಗೆ ಮಾತ್ರ ಬಂದಿದೆ ಎಂದು ತಿಳಿಯಬಾರದು. ರಾಷ್ಟ್ರಗಳಿಗೂ ಬಂದಿರುತ್ತದೆ. ಎಲ್ಲರಿಗೂ ಅವಿದ್ಯೆಯಿಂದ ಎಲ್ಲರನ್ನೂ ತಮ್ಮ ಸ್ವಾಧೀನಗೊಳಿಸಿಕೊಳ್ಳಬೇಕೆಂಬ ದುರಾಶೆ ಹಿಡಿದಿದೆ; ಎಲ್ಲರಿಗೂ ಎಲ್ಲರಿಂದಲೂ ಭಯವು ಆವರಿಸಿಕೊಂಡಿದೆ. ದೇಶದಲ್ಲಿ ಎಲ್ಲರಿಗೂ ಆಯುಧವನ್ನು ಕೊಟ್ಟು ಯುದ್ಧಕ್ಕೆ ಸಜ್ಜುಗೊಳಿಸಿರಬೇಕು ಎಂಬುದೇ ರಾಷ್ಟ್ರಗಳ ರಾಜನೀತಿ! ಸ್ವತಂತ್ರರೆನಿಸಿರುವ ಇತರ ರಾಷ್ಟ್ರದವರೇ ಹೀಗಿರುವಾಗ ನಮ್ಮಗಳ ಪಾಡನ್ನು ಹೇಳುವದೇನು?

ಮೊಟ್ಟಮೊದಲು ನಾವು ಕಾಮಕ್ಕೆ ಪರತಂತ್ರರಾಗಿರುತ್ತೇವೆಂಬುದನ್ನು ಅರಿತುಕೊಳ್ಳಬೇಕು. ಮನುಷ್ಯನನ್ನು ಕಾಮಗಳೆಲ್ಲವೂ ಎಂದಿಗೆ ಬಿಡುವವೋ ಅಂದು ಮರ್ತ್ಯನು ಅಮೃತನಾಗುವನು, ಇಲ್ಲಿಯೇ ಬ್ರಹ್ಮವನ್ನು ಪಡೆಯುವನು. ಕಾಮಪರವಶತೆಯಿಂದ ಬಿಡುಗಡೆಯನ್ನು

ಹೊಂದಿದವರಿಗೇ ಜ್ಞಾನವೆಂದರೇನೆಂಬುದರ ಅರಿವು ಆದೀತು. ಮ್ಯಾಪ್‌ನಲ್ಲಿ ಹೈದರಾಬಾದು, ಕಾಶ್ಮೀರ- ಮುಂತಾದವುಗಳನ್ನು ಕಂಡು ಚರ್ಚೆಮಾಡುತ್ತಿರುವೆವು. ಅಪಾಯದ ನಡುವೆ ಸಿಲುಕಿರುವೆವೆಂಬುದನ್ನು ಸ್ವಲ್ಪವೂ ಅರಿಯದೆ ಇರುವೆವು. ಕುಡಿದವರ ನಡುವೆ ಒಬ್ಬನಾದರೂ ಕುಡಿಯದವನು ಇರಬೇಕು; ಎಲ್ಲರಿಗೂ ಅಮಲು ಹತ್ತಿದರೆ ಏನು ಗತಿ? ಜನರೆಲ್ಲ ಕಾಮಮದ್ಯವನ್ನು ಪಾನಮಾಡಿ ಕೂಗುವದಕ್ಕೆ ಹತ್ತಿರುತ್ತಾರೆ. ಸ್ವಲ್ಪ ಎಚ್ಚೆತ್ತು ನೋಡಬೇಕು. ಕುರಾನಿನಲ್ಲಿ ಒಂದು ವಾಕ್ಯವಿದೆ, ಮನುಷ್ಯನು ಉಪಾಯಗಳನ್ನು ಏರ್ಪಡಿಸುತ್ತಾನೆ; ದೇವರೂ ಏರ್ಪಡಿಸುತ್ತಾನೆ. ಆದರೆ ದೇವರ ಹಂಚಿಕೆಯೇ ಕೊನೆಗೆ ನಡೆಯುವದು, ಜರ್ಮನರ ನಿಮಿತ್ತದಿಂದ ಯೂರೋಪಿನವರು, ಅದರಲ್ಲಿಯೂ ಇಂಗ್ಲೀಷಿನವರು, ಬಲದಲ್ಲಿ ಕುಗ್ಗಿ ನಮ್ಮ ದೇಶವನ್ನು ಹಿಡಿತದಲ್ಲಿಟ್ಟುಕೊಳ್ಳಲಾರದೆ ತಾವೇ ಬಿಟ್ಟು ಹೋಗಿರುತ್ತಾರೆ. ಇದೆಲ್ಲ ಭಗವಂತನ ಲೀಲೆಯಲ್ಲದೆ ಮತ್ತೇನು? ಭಗವಂತನ ಲೀಲೆಯ ಫಲವಾಗಿ ನಮಗೆ ಈಗ ದೊರಕಿರುವ ಈ ಪಾರತಂತ್ರ್ಯಾಭಾವವನ್ನು ಸರಿಯಾಗಿ ಉಪಯೋಗಿಸಿಕೊಳ್ಳಬೇಕು. ಮುಸ್ಲಿಮರು, ಹಿಂದುಗಳು - ಎಂದು ಮುಂತಾಗಿ ಒಣಜಗಳಗಳನ್ನು ಕಲ್ಪಿಸಿಕೊಂಡು ಕೆಡಬಾರದು. ಎಲ್ಲರೂ ಒಗ್ಗಟ್ಟಾಗಬೇಕು. ಸುಮ್ಮನೆ ಗಲಭೆಯನ್ನೆಬ್ಬಿಸುವ ವೃತ್ತಾಂತಪತ್ರಿಕೆಗಳ ಸುದ್ದಿಗಳನ್ನು ಹಬ್ಬಿಸಿ ಜನರನ್ನು ಕಂಗಾಲುಗೆಡಿಸುವದರ ಬದಲು ಪಾಪ, ಪುಣ್ಯ, ಸತ್ಯ, ಅಹಿಂಸೆ, ಮೈತ್ರಿ, ಅದ್ವೇಷ, ಕರುಣೆ - ಮುಂತಾದ ವಿಷಯಗಳನ್ನು ತಿಳಿಸುವ ಒಂದು ಪುಸ್ತಕವನ್ನು ಓದಿದರೂ ನಾವು ಬದುಕಿಯೇವು. ಈ ದಿನ 'ಇಂಡಿಪೆಂಡೆನ್ಸ್ ಡೇ' ದಿವಸದ ಆಚರಣೆ ಎನ್ನುವುದಕ್ಕಿಂತ ನಮಗೆ ಸ್ವಾತಂತ್ರ್ಯದ ಯೋಗ್ಯತೆಯು ಬರಲಿ ಎಂದು ದೇವರಲ್ಲಿ ಪ್ರಾರ್ಥಿಸುವ ದಿನವೆಂದು ನಾವು ಭಾವಿಸಿದರೆ ಒಳ್ಳೆಯದು.

ಇರಲಿ, ಪ್ರಕೃತವಾಗಿರುವ ಕ್ಷೇತ್ರಕ್ಷೇತ್ರಜ್ಞಜ್ಞಾನದ ಕಡೆಗೆ ತಿರುಗೋಣ. ಇಲ್ಲಿ ಕ್ಷೇತ್ರಜ್ಞ ಎಂದರೆ ನಾವುನಾವು ಬೇರೆ ಎಂದು ಭಾವಿಸಿಕೊಂಡಿರುವ ಜೀವರಲ್ಲ. ಆದರೆ ಇದೆಲ್ಲವನ್ನೂ ನೋಡುತ್ತಿರುವ ಚಿನ್ಮಾತ್ರಸ್ವರೂಪವೇ ಕ್ಷೇತ್ರಜ್ಞನು. ಉಪನಿಷತ್ತಿನಲ್ಲಿ ಒಂದು ವಾಕ್ಯವಿದೆ: 'ಒಂದೇ ಮರದಲ್ಲಿ ಎರಡು ಹಕ್ಕಿಗಳಿವೆ; ಅವುಗಳಲ್ಲಿ ಒಂದು ಹಣ್ಣನ್ನು ಸವಿದು ತಿನ್ನುತ್ತಿರುವದು, ಇನ್ನೊಂದು ತಿನ್ನದೆ ನೋಡುತ್ತಿರುವದು.' ಈ ದೇಹರೂಪವಾದ ಮರದಲ್ಲಿ ಇದರಲ್ಲಾಗುವ ಧರ್ಮಾಧರ್ಮಕೃತಭೋಗಗಳನ್ನು ಸವಿಯುತ್ತಿರುವ `ನಾನು', `ನಾನು' ಎಂಬ ರೂಪವು ಒಂದು; ಇದಕ್ಕಿಂತಲೂ ಬೇರೆಯಾಗಿ ಇದೆಲ್ಲಕ್ಕೂ ಸಾಕ್ಷಿಯಾಗಿರುವ ರೂಪವು ಒಂದು. ಈ ಎರಡರಲ್ಲಿ ಸಾಕ್ಷಿರೂಪವೇ ಪ್ರಕೃತವಾದ ಕ್ಷೇತ್ರಜ್ಞನು. 'ಒಬ್ಬನೇ ದೇವನು ಸರ್ವಕ್ಷೇತ್ರಗಳಲ್ಲಿಯೂ ಗೂಢನಾಗಿರುವನು; ಅವನು ಸರ್ವವ್ಯಾಪಿಯು, ಸರ್ವಭೂತಗಳಿಗೂ ಅಂತರಾತ್ಮನು, ಕರ್ಮಾಧ್ಯಕ್ಷನು, ಸರ್ವಭೂತಗಳಲ್ಲಿಯೂ ವಾಸವಾಗಿರುವವನು, ಸಾಕ್ಷಿಯು, ಚೈತನ್ಯರೂಪನು' ಎಂದು ಶ್ರುತಿಯು ಸಾರುತ್ತಿದೆ. ಹೊಳೆನರಸೀಪುರಕ್ಕೆ ಬೇರೊಬ್ಬ ಸೂರ್ಯನಿಲ್ಲ; ಎಲ್ಲರಿಗೂ ಒಬ್ಬನೇ ಸೂರ್ಯನು. ಇದರಂತೆ ಒಬ್ಬೊಬ್ಬರ ದೇಹದಲ್ಲಿ ಒಬ್ಬೊಬ್ಬ ಕ್ಷೇತ್ರಜ್ಞನಿಲ್ಲ, ಎಲ್ಲರಿಗೂ

ಒಬ್ಬನೇ ಕ್ಷೇತ್ರಜ್ಞನು. ಅವನೇ ಅಂತರ್ಯಾಮಿಯಾಗಿ ಎಲ್ಲರಲ್ಲಿಯೂ ಇರುವ ಪರಮಾತ್ಮನು. ಇದಕ್ಕಾಗಿಯೇ ಭಗವಂತನು 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಕ್ಷೇತ್ರಜ್ಞನನ್ನು ನಾನೆಂದೇ ತಿಳಿ ಎಂದಿರುತ್ತಾನೆ. ನಾನೆಂದೇ ತಿಳಿ ಎಂದು ಹೇಳಿರುವದು ಅರ್ಜುನನ ಮುಂದೆ ಕುಳಿತಿರುವ ಲೀಲಾಮಾನುಷವಿಗ್ರಹವಲ್ಲ. ಶ್ರುತಿಯಲ್ಲಿ ಹೇಳಿರುವ ಚೈತನ್ಯಸ್ವರೂಪವಾದ, ಸರ್ವಸಾಕ್ಷಿಯಾಗಿರುವ ಪರಮಾತ್ಮನೇ.

ಇನ್ನು ಕ್ಷೇತ್ರ ಎಂದರೆ ಎಷ್ಟು ಅರ್ಥ? ಬರಿಯ ಈ ಕಾಣುವ ಸ್ಥೂಲ ದೇಹವು ಮಾತ್ರ ಕ್ಷೇತ್ರವಲ್ಲ.

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇನ್ದ್ರಿಯಾಣಿ ದಶೈಕಂ ಚ ಪಞ್ಚ ಚೇನ್ದ್ರಿಯಗೋಚರಾಃ ॥ 13-5**
**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ 13-6**

ಮಹಾಭೂತಗಳು ಎಂದರೆ ಇಲ್ಲಿ ಇಂದ್ರಿಯಗೋಚರವಲ್ಲದ ಆಕಾಶಾದಿಗಳು; ಇಂದ್ರಿಯಕ್ಕೆ ಗೋಚರವಾದವುಗಳು ಸ್ಥೂಲಭೂತಗಳು. ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ - ಇವೆಲ್ಲ ಕ್ಷೇತ್ರ ಎಂಬ ಶಬ್ದದ ಅರ್ಥದಲ್ಲಿ ಸೇರಿರುತ್ತವೆ. ಅಹಂಕಾರವೆಂದರೆ ಮಹಾಭೂತಗಳಿಗೆ ಕಾರಣವಾಗಿರುವ ಅಹಂಕಾರವೆಂಬ ತತ್ತ್ವವು; ಬುದ್ಧಿ ಎಂದರೆ ಆ ಅಹಂಕಾರಕ್ಕೂ ಕಾರಣವಾಗಿರುವ ಬುದ್ಧಿಯು. ಹನ್ನೊಂದು ಇಂದ್ರಿಯಗಳು ಎಂದರೆ ಕರ್ಮೇಂದ್ರಿಯಗಳು ಐದು, ಜ್ಞಾನೇಂದ್ರಿಯಗಳು ಐದು, ಮನಸ್ಸು ಒಂದು - ಹೀಗೆ ಹನ್ನೊಂದು ಇಂದ್ರಿಯಗಳು. ಇವೆಲ್ಲವೂ ಕ್ಷೇತ್ರವೇ.

ಇಲ್ಲಿ ಹೇಳಿರುವ ಸಾಂಖ್ಯರ ಪ್ರಕ್ರಿಯೆಯ ದೃಷ್ಟಿಯಿಂದ ಜಗತ್ತನ್ನು ಇಪ್ಪತ್ತುನಾಲ್ಕು ತತ್ತ್ವಗಳಾಗಿ ಬಿಡಿಸಿ ಇದೆಲ್ಲವೂ ಕ್ಷೇತ್ರವು ಎಂದು ತಿಳಿಸಿರುತ್ತದೆ. ಗೀತೆಯಲ್ಲಿ ಸಾಂಖ್ಯರ ಪ್ರಕ್ರಿಯೆಯನ್ನು ಅಲ್ಲಲ್ಲಿ ಉಪಯೋಗಿಸಿರುತ್ತದೆ. ಆದರೆ ಸಂಪೂರ್ಣವಾಗಿ ಅದನ್ನು ಇಲ್ಲಿ ಒಪ್ಪಿರುವದಿಲ್ಲ. ಮೇಲಿನ ವರ್ಣನೆಯು ಅರ್ಥವಾಗಬೇಕಾದರೆ ಸಾಂಖ್ಯರ ಪ್ರಕ್ರಿಯೆಯನ್ನು ಇಲ್ಲಿ ಸಂಗ್ರಹವಾಗಿ ತಿಳಿದಿರುವದು ಪ್ರಯೋಜನಕಾರಿಯಾಗುವದು.

ಸಾಂಖ್ಯರ ಪ್ರಕ್ರಿಯೆ ಏನೆಂದರೆ ಇಡಿಯ ಜಗತ್ತೇ ಮೂಲಪ್ರಕೃತಿಯೊಂದರ ಕಾರ್ಯವಾಗಿರುತ್ತದೆ. ಸತ್ತ್ವ, ರಜಸ್ಸು, ತಮಸ್ಸು-ಎಂಬ ಮೂರು ಗುಣಗಳು ಒಂದಕ್ಕಿಂತ ಒಂದು ಹೆಚ್ಚಿನ ಪ್ರಾಬಲ್ಯವನ್ನು ವಹಿಸಿರುವ ಅವಸ್ಥೆಯಲ್ಲಿ ಜಗತ್ತಿನ ರೂಪವಾಗಿ ಕಾಣಿಸುತ್ತವೆ; ಆದರೆ ಅವೇ ಸಮಪ್ರಧಾನವಾಗುವಾಗ ಜಗತ್ತು ಪ್ರಲಯವಾಗುತ್ತದೆ. ಜಗತ್ತು ಪ್ರಲಯವಾಗಿರುವಾಗ ಇರುವ ಗುಣಗಳ ಸಾಮ್ಯಾವಸ್ಥೆಗೆ ಪ್ರಧಾನ ಎಂದು ಹೆಸರು. ಅದೇ ಜಗತ್ತಿಗೆ ಮುಂದೆ ಮೂಲಪ್ರಕೃತಿಯಾಗುವದು- ಎಂದರೆ ಮೂಲಕಾರಣವಾಗುತ್ತದೆ. ಗುಣತ್ರಯದ

ಸಾಮ್ಯಾವಸ್ಥೆಯಾದ ಪ್ರಧಾನವು ಜಗತ್ತಾಗಿ ತಾನೇ ಪರಿಣಮಿಸುತ್ತದೆ; ಅದನ್ನು ಯಾರೂ ಜಗತ್ತಾಗುವಂತೆ ಪ್ರೇರಿಸುವದಿಲ್ಲ ಎಂದು ಸಾಂಖ್ಯರು ಹೇಳುತ್ತಿದ್ದರು. ಸಾಂಖ್ಯರು ನಿರೀಶ್ವರವಾದಿಗಳು. ವೇದಾಂತಿಗಳು ಸಾಂಖ್ಯರ ಗುಣತ್ರಯದ ಪ್ರಕ್ರಿಯೆಯನ್ನು ಉಪಯೋಗಿಸಿದರೂ ಪ್ರಧಾನವು ತಾನೇ ಸ್ವತಂತ್ರವಾಗಿ ಜಗತ್ತಾಗುವದೆಂದು ಹೇಳುವದಿಲ್ಲ; ಅದು ಪರಮೇಶ್ವರನ ಅಧೀನವಾಗಿ ಪರಮೇಶ್ವರನ ಸ್ವರೂಪದಲ್ಲಿಯೇ ಪ್ರಲಯದಲ್ಲಿ ಅಡಗಿರುತ್ತದೆ. ಈಗಿನಂತೆ ಆಗ ಜಗತ್ತು ನಾಮರೂಪಗಳಾಗಿ ವಿಂಗಡಿಸಿಕೊಂಡಿರುವದಿಲ್ಲವಾದ್ದರಿಂದ ಆ ಸ್ಥಿತಿಯನ್ನು **ಅವ್ಯಾಕೃತ** ಎಂದು ವೇದಾಂತಿಗಳು ಕರೆಯುತ್ತಾರೆ. ಅವ್ಯಾಕೃತವು, ಅಥವಾ ಸಾಂಖ್ಯರ ಪ್ರಧಾನವು, ಅವ್ಯಕ್ತವಾಗಿರುತ್ತದೆ, ಎಂದರೆ ಇಂದ್ರಿಯಗಳಿಗೆ ಅಗೋಚರವಾಗಿರುತ್ತದೆ. ಜಗತ್ತಿನ ಬೀಜಾವಸ್ಥೆಯಾದ ಈ ಅವ್ಯಕ್ತವೂ ಕ್ಷೇತ್ರವೆಂದು ತಿಳಿಯಬೇಕು; ಇದನ್ನು ಅರಿಯುವ ಕ್ಷೇತ್ರಜ್ಞನು ಬೇರೆ ಇರುತ್ತಾನೆ.

ಅವ್ಯಕ್ತದಿಂದ **ಬುದ್ಧಿ ಅಥವಾ ಮಹತ್ತು** ಎಂಬ ತತ್ತ್ವವು ಹುಟ್ಟುತ್ತದೆ ಎಂದು ಸಾಂಖ್ಯರು ಹೇಳುತ್ತಾರೆ. ಬುದ್ಧಿ ಎಂದರೆ ನನ್ನ, ನಿಮ್ಮ ಅಥವಾ ಬೇರೆ ಯಾರಾದರೊಬ್ಬರ ಬುದ್ಧಿಯಲ್ಲ, ಬುದ್ಧಿಸಾಮಾನ್ಯರಾಶಿಯು, ಬುದ್ಧಿಯು ನಿಶ್ಚಯಿಸುವ ಅಂತಃಕರಣವೃತ್ತಿಯು; ಎಲ್ಲಾ ಬುದ್ಧಿಗಳ ಒಟ್ಟುರಾಶಿಯಾದ ಮಹತ್ತತ್ತ್ವವೂ ಕ್ಷೇತ್ರವೇ, ಅದು ಕ್ಷೇತ್ರಜ್ಞನಲ್ಲ.

ಈ ಬುದ್ಧಿಯಿಂದ **ಅಹಂಕಾರ**ವೆಂಬ ತತ್ತ್ವವುಂಟಾಗುತ್ತದೆ ಎಂಬುದು ಸಾಂಖ್ಯರ ಮತವು. ಅಹಂಕಾರವೆಂದರೆ ಗರ್ವವೆಂದು ನಾವು ಕರೆಯುತ್ತೇವಲ್ಲ, ಅದಲ್ಲ. ನಾನು, ನಾನು - ಎಂದು ನಾನು ಕರೆದುಕೊಳ್ಳುತ್ತಿರುವ ಅಭಿಮಾನಕಾರಣವಿದೆಯಲ್ಲ, ಅದರ ಮೂಲರೂಪವು. ಇದೂ ಮಹತ್ತತ್ತ್ವದಂತೆ ಒಟ್ಟುರಾಶಿಯೇ, ಬಿಡಿಬಿಡಿಯಾದ ಅಹಂಕಾರವಲ್ಲ. ಅಹಂಕಾರವೆಂಬ ತತ್ತ್ವವೂ ಕ್ಷೇತ್ರದೊಳಗೇ ಸೇರಿರುತ್ತದೆ; ಅದೂ ಕ್ಷೇತ್ರಜ್ಞನಲ್ಲ ಎಂದು ಭಗವಂತನು ಹೇಳಿರುತ್ತಾನೆ.

ಇನ್ನು ಈ ಅಹಂಕಾರದಿಂದ **ತನ್ಮಾತ್ರೆ**ಗಳು ಎಂಬ ಪಂಚಸೂಕ್ಷ್ಮಭೂತಗಳು ಉಂಟಾಗುತ್ತವೆ ಎಂದು ಸಾಂಖ್ಯರ ಹೇಳಿಕೆ. ಅವುಗಳಿಂದ ಇಂದ್ರಿಯಗಳೂ ಮನಸ್ಸೂ ಉಂಟಾಗುತ್ತವೆ ಎಂದು ಅವರ ಅಭ್ಯುಪಗಮವಿದೆ. ಇವುಗಳಿಗೆ ಇಂದ್ರಿಯಗೋಚರವಾದ ಪಂಚಭೂತಗಳನ್ನೂ ಸೇರಿಸಿದರೆ ಅವ್ಯಕ್ತ, ಮಹತ್ತು, ಅಹಂಕಾರ, ತನ್ಮಾತ್ರೆಗಳು ಐದು, ಇಂದ್ರಿಯಗಳು ಹನ್ನೊಂದು, ಮಹಾಭೂತಗಳು ಐದು-ಹೀಗೆ ಇಪ್ಪತ್ತುನಾಲ್ಕು ತತ್ತ್ವಗಳಾಗುವವು. ಇವುಗಳಲ್ಲಿ ಯಾವದೊಂದೂ ಕ್ಷೇತ್ರಜ್ಞನಲ್ಲ; ಇವೆಲ್ಲವೂ ಕ್ಷೇತ್ರವೇ ಎಂದು ಇಲ್ಲಿ ಭಗವಂತನು ವರ್ಣಿಸಿರುತ್ತಾನೆ.

ಸಾಂಖ್ಯರ ಸಿದ್ಧಾಂತದಂತೆ ವ್ಯಕ್ತಾವ್ಯಕ್ತಜ್ಞವಿಜ್ಞಾನದಿಂದ ಮೋಕ್ಷವುಂಟಾಗುತ್ತದೆ. ಪ್ರಕೃತವಿಷಯವನ್ನು ವಿವೇಚಿಸಿ ತಿಳಿದುಕೊಳ್ಳುವದಕ್ಕೆ ಇದನ್ನು ಪ್ರಸಂಗವಂಶದಿಂದ ಸ್ವಲ್ಪಮಟ್ಟಿಗೆ

ವರ್ಣಿಸುವೆನು. ಪ್ರಲಯದಲ್ಲಿ ಇಂದ್ರಿಯಗೋಚರವಲ್ಲದೆ ಇರುವ ಮೂಲಪ್ರಕೃತಿಯಾದ ಪ್ರಧಾನವು ಅವ್ಯಕ್ತವು; ಅದರಿಂದುಂಟಾಗುವ ಬುದ್ಧಿಯೇ ಮುಂತಾದ ತತ್ತ್ವಗಳು ವ್ಯಕ್ತವು. ಈ ವ್ಯಕ್ತ, ಅವ್ಯಕ್ತ-ಎರಡು ರೂಪಗಳನ್ನೂ ಪ್ರಧಾನವು ತಾನೇ ತೆಗೆದುಕೊಳ್ಳುತ್ತಾ ಪುರುಷನಿಗೆ ಬಂಧಮೋಕ್ಷಗಳನ್ನು ಉಂಟುಮಾಡುತ್ತಿರುತ್ತದೆ. ಪುರುಷನು ಸ್ವಚ್ಛನು, ಅಸಂಗನು, ಉದಾಸೀನನು; ಅವನು ಯಾವ ಕೆಲಸವನ್ನೂ ಮಾಡುವದಿಲ್ಲ. ಆದರೂ ಪ್ರಕೃತಿಯ ಪರಿಣಾಮವಾಗಿರುವ ಶರೀರಾದಿಗಳನ್ನು ನಾನು ಎಂದು ತಿಳಿದುಕೊಂಡು ಹೊರಗಿನ ವಿಷಯಗಳ ಭೋಗವನ್ನು ನನ್ನದೆಂದು ತಿಳಿದುಕೊಳ್ಳುವ ಅವಿವೇಕದಿಂದ ಅವನಿಗೆ ಸಂಸಾರಬಂಧವಾಗುತ್ತಿರುವದು. ಪ್ರಕೃತಿಯ ಹೊರಗಿನ ವಿಕಾರಗಳಾದ ವಸ್ತುಗಳಲ್ಲಿ ನಾನು ಎಂಬ ಭ್ರಾಂತಿಯು ಬಾರದೆ ಇದ್ದರೂ ಒಳಗಿನ ಶರೀರಾದಿಗಳಲ್ಲಿ ಈ ಭ್ರಾಂತಿಯು ಅವಿವೇಕದಿಂದ ಉಂಟಾಗುತ್ತಿರುವದು.

ಆದರೆ ಈ ಪ್ರಕೃತಿಯು ಅಸಂಗನೂ ಉದಾಸೀನನೂ ಆಗಿರುವ ಪುರುಷನಿಗೆ ತನ್ನ ಪರಿಣಾಮಗಳಿಂದ ಭೋಗವನ್ನುಂಟುಮಾಡುವಂತೆ ಮೋಕ್ಷವನ್ನೂ ಉಂಟು ಮಾಡಿಕೊಡುತ್ತಿರುವುದು. ಯಾವನಿಗೆ ವಿಷಯಗಳಲ್ಲಿ ವೈರಾಗ್ಯವುಂಟಾಗುವದೋ ಅವನು ಪ್ರಕೃತಿಯನ್ನೂ ತನ್ನ ಸ್ವರೂಪವನ್ನೂ ವಿವೇಚಿಸಿ ತಿಳಿದುಕೊಳ್ಳುವದಕ್ಕೆ ಪ್ರಯತ್ನಿಸುತ್ತಾನೆ. ಆ ವಿಚಾರದ ಫಲವಾಗಿ ಪ್ರಕೃತಿಯ ಯಾವ ಧರ್ಮವೂ ತನಗೆ ಸೇರಿದ್ದಲ್ಲವೆಂಬ ವಿವೇಕವುಂಟಾಗುವದು. ಪ್ರಕೃತಿಯಿಂದ ಹೀಗೆ ಪುರುಷನನ್ನು ವಿಂಗಡಿಸಿ ತಿಳಿದುಕೊಂಡರೆ ಆ ವಿವೇಕಖ್ಯಾತಿಯಿಂದ ಪುರುಷನಿಗೆ ಕೈವಲ್ಯವುಂಟಾಗುವದು; ಅವನು ತಾನೇತಾನಾಗಿ ನಿಲ್ಲುವನು.

ಈಗ ಭಗವಂತನು ಅರ್ಜುನನಿಗೆ ಉಪದೇಶಿಸುತ್ತಿರುವ ವೇದಾಂತಸಿದ್ಧಾಂತಕ್ಕೂ ಈ ಸಾಂಖ್ಯರಸಿದ್ಧಾಂತಕ್ಕೂ ಇರುವ ತಾರತಮ್ಯವನ್ನು ತಿಳಿಯೋಣ. ಎಲ್ಲಾ ಕ್ಷೇತ್ರಗಳಲ್ಲಿಯೂ ಒಬ್ಬನೇ ಕ್ಷೇತ್ರಜ್ಞನಿರುತ್ತಾನೆ; ಸಾಂಖ್ಯರು ಹೇಳುವಂತೆ ಒಂದೊಂದು ಶರೀರಕ್ಕೆ ಒಬ್ಬೊಬ್ಬ ಪುರುಷನು ಇರುವದಿಲ್ಲ. ಪ್ರಕೃತಿಯು ಪುರುಷರನ್ನು ಬೇರೆಬೇರೆಯಾಗಿ ಬಂಧಮೋಕ್ಷಗಳಿಗೆ ಸಜ್ಜುಗೊಳಿಸುತ್ತದೆ ಎಂಬುದನ್ನೂ ವೇದಾಂತಿಗಳು ಒಪ್ಪುವದಿಲ್ಲ. ಊರಿಗೊಬ್ಬ ಬೇರೆಬೇರೆಯ ಸೂರ್ಯ ನಿಲ್ಲದಿರುವಂತೆ ಒಂದೊಂದು ಶರೀರಕ್ಕೆ ಒಬ್ಬೊಬ್ಬ ಕ್ಷೇತ್ರಜ್ಞನು ಬೇರೆಬೇರೆಯಿರುವದಿಲ್ಲ. ಎಲ್ಲರಿಗೂ ಒಬ್ಬ ಕ್ಷೇತ್ರಜ್ಞನೇ ಆತ್ಮನು; ಅವನೇ ಪರಮಾತ್ಮನು.

ಇನ್ನೊಂದು ತಾರತಮ್ಯವನ್ನು ಈಗ ಮನಸ್ಸಿಗೆ ತಂದುಕೊಳ್ಳಬೇಕು. ಪ್ರಕೃತಿಯನ್ನೂ ಪುರುಷನನ್ನೂ ವಿಂಗಡಿಸಿ ತಿಳಿದುಕೊಂಡರೆ ಸಾಲದು. ಈಗ ವಿವೇಚನೆಮಾಡಿ ನಮ್ಮ ಸ್ವರೂಪವನ್ನು ತಿಳಿದುಕೊಂಡರೂ ಪ್ರಕೃತಿಯು ಮತ್ತೆ ನಮ್ಮನ್ನು ಸಂಸಾರಕ್ಕೆ ಕೆಡಹುವದಿಲ್ಲವೆಂಬ ಭರವಸೆಯೆಲ್ಲಿಯದು? ಪ್ರಕೃತಿಯೂ, ಪುರುಷನಿರುವವರೆಗೂ ಇರುತ್ತದೆಯಾದ್ದರಿಂದ ಪ್ರಕೃತಿಯ ಸ್ವಭಾವವಾಗಿರುವ ಪರಿಣಾಮದಿಂದ ಪುರುಷನಿಗೆ ಬಂಧಕವಾಗಬಹುದು. ಈ ಬಂಧವು ಅವಿವೇಕದಿಂದ ಆದದ್ದು ಎನ್ನುವದಾದರೆ ಯಾವಾಗಲೂ ಪುರುಷನಿಗೆ ಬಂಧವು ಆಗಿಯೇ

ಇಲ್ಲವೆಂದು ಒಪ್ಪಬೇಕು. ಒಂದು ಸಲವಾದರೂ ಪ್ರಕೃತಿಯು ಪುರುಷನಿಗೆ ಬಂಧವನ್ನುಂಟುಮಾಡುತ್ತದೆ ಎಂದು ಹೇಳುವದಕ್ಕೆ ಬರುವದೇ ಇಲ್ಲ.

ಇಷ್ಟೇ ಅಲ್ಲ. ಪ್ರಕೃತಿಯೂ ಅದರ ಪರಿಣಾಮವೂ ಪರಮಾರ್ಥವಾಗಿಯೇ ಇರಬೇಕೆಂಬ ನಿರ್ಬಂಧವೂ ಸರಿಯಲ್ಲ. ಪುರುಷನಲ್ಲಿಲ್ಲದ ಬಂಧವನ್ನು ಪ್ರಕೃತಿಯು ಅವಿವೇಕದಿಂದ ಉಂಟುಮಾಡಬಲ್ಲದಾದರೆ, ತಾನು ಬರಿಯ ಹುಸಿತೋರಿಕೆಯಾಗಿಯೇ ಇದ್ದುಕೊಂಡು ಪುರುಷನಿಗೆ ಬಂಧವನ್ನುಂಟುಮಾಡುವಂತೆ ತೋರಿಕೊಂಡರೆ ಅಷ್ಟೇ ಸಾಕಾಗಿರುತ್ತದೆ. ಕನಸಿನಲ್ಲಿ ನಿಜವಾಗಿ ಎಲ್ಲಿಯೂ ಇಲ್ಲದ ತೋರಿಕೆಗಳು, ನಮಗೆ ಇಲ್ಲದ ಬಂಧವನ್ನೇ ಅವಿವೇಕದಿಂದ ತೋರಿಸುತ್ತವೆ; ವಿವೇಕದಿಂದ ಬಂಧವು, ಎಚ್ಚರದಿಂದ ಕನಸು ಹಾರಿಹೋಗುವಂತೆ, ಹುಸಿಯಾಗಿಬಿಡುತ್ತದೆ ಎಂದು ಕಲ್ಪಿಸುವದರಲ್ಲಿ ಲಾಘವವಿದೆ. ಪ್ರಕೃತಿಯನ್ನೇ ವಿವೇಕದಿಂದ ಇಲ್ಲವಾಗಿಸುವದು ಸಾಧ್ಯವೆಂದು - `ಭೂತಪ್ರಕೃತಿಮೋಕ್ಷಂ ಚ 'ಎಂಬಲ್ಲಿ ತಿಳಿಸಿಯೇ ಇರುತ್ತದೆ. ಆದ್ದರಿಂದ ಪ್ರಕೃತಿಯೂ ಅದರಿಂದಾಗುವ ಪರಿಣಾಮವೂ ಪುರುಷನಿಗಾಗುವ ಬಂಧಮೋಕ್ಷಗಳೂ ಎಲ್ಲವೂ ಅವಿದ್ಯೆಯಿಂದಲೇ ಆಗುವವು. ನಿಜವಾಗಿ ಇರುವದು ಪರಮಾತ್ಮನೊಬ್ಬನೇ - ಎಂಬ ಜ್ಞಾನವೇ ಪುರುಷಾರ್ಥಹೇತು ಎಂದು ವೇದಾಂತಿಗಳು ಹೇಳುತ್ತಾರೆ. ಇದು ಮುಂದೆ ಸ್ಪಷ್ಟವಾಗುತ್ತದೆ.

ಇದಂತಿರಲಿ. ಪ್ರಕೃತಕ್ಕೆ ಸಾಂಖ್ಯರು ಹೇಳುವ ಇಪ್ಪತ್ತುನಾಲ್ಕು ತತ್ತ್ವಗಳೂ ಕ್ಷೇತ್ರದಲ್ಲಿಯೇ ಅಡಕವಾಗಿರುತ್ತವೆಯೆಂಬುದನ್ನು ನಾವು ಲಕ್ಷ್ಯಕ್ಕೆ ತಂದುಕೊಳ್ಳಬೇಕು. ಹೊರಗಿನ ವಿಷಯಪ್ರಪಂಚ, ಒಳಗಿನ ಶರೀರೇಂದ್ರಿಯಮನೋಬುದ್ಧಿಗಳ ಪ್ರಪಂಚ - ಎಲ್ಲವೂ, ವ್ಯಕ್ತಾವ್ಯಕ್ತಗಳೆಲ್ಲವೂ ಕ್ಷೇತ್ರವೇ. ಇದನ್ನು ತನ್ನ ಚೈತನ್ಯಸ್ವರೂಪದಿಂದ ಅರಿಯುತ್ತಿರುವವನೇ ಕ್ಷೇತ್ರಜ್ಞನು ಎಂದು ಇಲ್ಲಿಯವರೆಗೆ ಸಿದ್ಧವಾಗಿರುತ್ತದೆ.



## ೯೫. ಕ್ಷೇತ್ರಸ್ವರೂಪ 13 - (6)

**(22-8-48)**

ಸಾಂಖ್ಯರು ಆತ್ಮವಲ್ಲದ್ದನ್ನೆಲ್ಲ ಪ್ರಕೃತಿ ಎನ್ನುವರು. ಆತ್ಮವನ್ನು ಪುರುಷನೆಂದು ಕರೆಯುತ್ತಾರೆ. ಪ್ರಕೃತಿಯು ಅವ್ಯಕ್ತರೂಪದಲ್ಲಿದ್ದು ವ್ಯಕ್ತವಾದ ಮಹದಾದಿರೂಪವನ್ನು ಪಡೆಯುವದು. ಈ ವ್ಯಕ್ತಾವ್ಯಕ್ತರೂಪಗಳಿಗಿಂತ ಪುರುಷರು ಭಿನ್ನರು, ಅವರು ಅನೇಕರು- ಎಂಬುದು ಸಾಂಖ್ಯರು ಮತವು. ಆದರೆ ವೇದಾಂತದಲ್ಲಿ ವ್ಯಕ್ತವೂ ಅವ್ಯಕ್ತವೂ ಆಗಿರುವ ಪ್ರಕೃತಿಗಿಂತ ಭಿನ್ನರಾಗಿ ಅನೇಕ ಪುರುಷರನ್ನು ಒಪ್ಪಿರುವದಿಲ್ಲ; ಪ್ರಕೃತಿಯು ಸ್ವತಂತ್ರವಾಗಿ ತಾನೇ ಪರಿಣಮಿಸುತ್ತಿರುವದು - ಎಂಬುದನ್ನೂ ಒಪ್ಪಿಲ್ಲ. ವ್ಯಕ್ತಾವ್ಯಕ್ತರೂಪವಾದ ಪ್ರಕೃತಿಯು ಕ್ಷೇತ್ರವು; ಶರೀರಾದಿರೂಪಗಳಿಂದ

ಪರಿಣಮಿಸಿರುವ ಈ ಕ್ಷೇತ್ರವನ್ನು ಅರಿಯುವವನೇ ಕ್ಷೇತ್ರಜ್ಞನು. ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಈ ಕ್ಷೇತ್ರಜ್ಞನು ಒಬ್ಬನೇ, ಅವನೇ ಪರಮಾತ್ಮನು ಎಂಬುದು ವೇದಾಂತಿಗಳ ಮತವು.

ಸಾಂಖ್ಯರು ಹೇಳುವ ವ್ಯಕ್ತಾವ್ಯಕ್ತರೂಪವಾದ ಪ್ರಕೃತಿಯು ಹೇಗೆ ಎಲ್ಲವೂ ಕ್ಷೇತ್ರವೇ ಆಗಿರುವದೋ ಅದರಂತೆ ವೈಶೇಷಿಕರು ಆತ್ಮಗುಣಗಳೆಂದು ಕಲ್ಪಿಸಿರುವ ಇಚ್ಛಾದ್ವೇಷಾದಿಗಳೂ ಕ್ಷೇತ್ರವೇ ಎಂದು ಇಲ್ಲಿ ಆರನೆಯ ಶ್ಲೋಕದಲ್ಲಿ ಹೇಳಿರುತ್ತದೆ. ಹಿಂದಿನ ವೈಶೇಷಿಕರೂ ಈಗಿನ ಭೌತಿಕಶಾಸ್ತ್ರಜ್ಞರೂ ತಮ್ಮ ವಿಚಾರಕ್ಕೆ ವಿಷಯವಾಗಿ ತೆಗೆದುಕೊಂಡಿರುವದು ಎಷ್ಟೇ ಸೂಕ್ಷ್ಮವಾಗಿರಲಿ, ಅದು ಯಾವದೊಂದೂ ಕ್ಷೇತ್ರಜ್ಞನಾದ ಆತ್ಮನಿಗೆ ಸೇರಿದ್ದಲ್ಲ. ಅದೆಲ್ಲವೂ ಕ್ಷೇತ್ರವೇ. ವೈಶೇಷಿಕರು ಬರಿಯ ತರ್ಕದಿಂದ ತಮ್ಮ ಅನುಭವದಲ್ಲಿ ತೋರುವ ಕ್ಷೇತ್ರವನ್ನು ವಿಮರ್ಶಿಸುತ್ತಿದ್ದರು; ಈಗಿನ ಭೌತಿಕಶಾಸ್ತ್ರಜ್ಞರು ನಿರೀಕ್ಷಣಪರೀಕ್ಷಣಸಂವಾದೀಕರಣಗಳ ಮೂಲಕವಾಗಿ ವಿಮರ್ಶಿಸುತ್ತಾರೆ. ಈಗಿನ ಭೌತಿಕಶಾಸ್ತ್ರಜ್ಞರಿಗೂ ಸೂಕ್ಷ್ಮವಾದ ಮತ್ತು ದೂರದಲ್ಲಿರುವ ವಸ್ತುಗಳನ್ನು ನಿರೀಕ್ಷಿಸುವುದಕ್ಕೂ ಪದಾರ್ಥಗಳನ್ನು ವಿಶ್ಲೇಷಣಾದಿಗಳ ಮೂಲಕ ಶೋಧಿಸುವದಕ್ಕೂ ಹೊಸ ಹೊಸ ಯಂತ್ರವಿಶೇಷಗಳ ಸಹಾಯವಿರುತ್ತದೆ. ಆದರೂ ಈ ತಾರತಮ್ಯದಿಂದ ಪ್ರಮೇಯವಾದ ವಸ್ತುಗಳ ಸ್ವಭಾವವು ಹೆಚ್ಚು ನವಿರಾಗಿ ಹೆಚ್ಚು ಕರಾರುವಾಕ್ಕಾಗಿ ತಿಳಿಯಬಂದೀತೇ ಹೊರತು ಪ್ರಮಾತೃವಿನ ನಿಜಸ್ವರೂಪದ ವಿಷಯಕ್ಕೆ ಯಾವ ತಿಳಿವಳಿಕೆಯೂ ಉಂಟಾಗಲಾರದು. ಎಲ್ಲಾ ಕ್ಷೇತ್ರಗಳಲ್ಲಿ ಕ್ಷೇತ್ರಜ್ಞನಾಗಿರುವ ಪರಮಾತ್ಮನೊಬ್ಬನು ಇರುತ್ತಾನೆಂಬುದನ್ನು ವೇದಾಂತದಲ್ಲಲ್ಲದೆ ಮತ್ತೆ ಯಾವ ದರ್ಶನಗಳಲ್ಲಿಯೂ ತಿಳಿಸಿರುವದಿಲ್ಲ.

ಈಗ ವೈಶೇಷಿಕರ ಪ್ರಕ್ರಿಯೆಯನ್ನು ಒಂದಿಷ್ಟು ವಿವರಿಸುವೆನು. ಅವರು ಹೇಳುವದೇನೆಂದರೆ- ದ್ರವ್ಯ, ಗುಣ, ಕರ್ಮ-ಎಂಬ ಪದಾರ್ಥಗಳಲ್ಲಿ ದ್ರವ್ಯತ್ವ, ಗುಣತ್ವ, ಕರ್ಮತ್ವ ಎಂಬ ಸಾಮಾನ್ಯಗಳು ಅಥವಾ ಜಾತಿಗಳು ಇರುವವು. ಈ ಪದಾರ್ಥಗಳು ಒಂದಕ್ಕಿಂತ ಒಂದು ಅತ್ಯಂತವಾಗಿ ಬೇರಬೇರೆಯಾಗಿರುವದಿಲ್ಲ; ದ್ರವ್ಯದಲ್ಲಿ ಗುಣವೂ ಕರ್ಮವೂ ಸಮವಾಯ ಎಂಬ ನಿತ್ಯಸಂಬಂಧದಿಂದ ಕೂಡಿಕೊಂಡೇ ಇರುತ್ತವೆ. ದ್ರವ್ಯತ್ವಾದಿಜಾತಿಗಳೂ ದ್ರವ್ಯಗಳೂ ಹೀಗೆಯೇ ಸಮವಾಯಸಂಬಂಧದಿಂದ ಸೇರಿಕೊಂಡಿರುತ್ತವೆ. ಸಾಮಾನ್ಯಗಳಲ್ಲೆಲ್ಲ ಮೇಲಿನ ಸಾಮಾನ್ಯವು- ದ್ರವ್ಯ ಗುಣಕರ್ಮಗಳಲ್ಲೆಲ್ಲ ಇರುವ ಸಾಮಾನ್ಯ-**ಸತ್ತಾ** (ಇರವು) ಎಂಬುದು. ವಸ್ತುಗಳು ಹೀಗೆ ಸಾಮಾನ್ಯವಿಶೇಷಭಾವಪರಂಪರೆಯಿಂದ ವರ್ಗೀಕೃತವಾಗಿರುವವಷ್ಟೆ. ಪೃಥಿವಿ, ಅಪ್ಪು, ತೇಜಸ್ಸು, ವಾಯು-ಎಂಬ ನಾಲ್ಕು ಭೂತಗಳಿಗೆ ಇನ್ನಿಲ್ಲವೆಂಬಷ್ಟು ತೀರ ಸಣ್ಣಗಿರುವ ಅತೀಂದ್ರಿಯವಾದ ಅವಯವಗಳಿರುವವು; ಅವಕ್ಕೆ **ಪರಮಾಣುಗಳು** ಎಂದು ಹೆಸರು. **ಪರಮಾಣುಗಳು** ಎರಡರ ಸಂಯೋಗದಿಂದ ದ್ವ್ಯಣುಕ, ದ್ವ್ಯಣುಕ ಮೂರರಿಂದ, ತ್ರ್ಯಣುಕ, ಹೀಗೆಯೇ ಚತುರಣುಕವೇ ಮುಂತಾದ ಅವಯವದ್ರವ್ಯಗಳು ಉಂಟಾಗಿ ಈ ಭೂತಗಳೂ ಈ ಭೂತಗಳಿಂದಾಗಿರುವ ಭೌತಿಕವಾದ ಶರೀರಗಳೂ ಆಗಿರುವವು. ಪರಮಾಣುಗಳಲ್ಲಿಯೂ ಆತ್ಮರುಗಳಲ್ಲಿಯೂ **ಅಂತ್ಯವಿಶೇಷಗಳು** ಎಂಬ ಭೇದಕಪದಾರ್ಥಗಳಿರುವದರಿಂದ ಅವು ಬೇರೆಬೇರೆಯಾಗಿಯೇ

ಇರುತ್ತವೆ. ಕಾರ್ಯವು ಕಾರಣದಲ್ಲಿ ಸಮವಾಯವೆಂಬ ನಿತ್ಯಸಂಬಂಧದಿಂದಲೇ ಕೂಡಿಕೊಂಡಿರುತ್ತದೆ. ಒಂದೊಂದು ಭಾವಕಾರ್ಯವೂ ಸಮವಾಯಿ, ಅಸಮವಾಯಿ, ನಿಮಿತ್ತ ಎಂಬ ಕಾರಣತ್ರಯದಿಂದ ಉಂಟಾಗುವದು. ಉದಾಹರಣೆಗೆ ನೂಲುಗಳೆಂಬ ಸಮವಾಯಿಕಾರಣ; ನೂಲುಗಳ ಸಂಯೋಗವೆಂಬ ಅಸಮವಾಯಿಕಾರಣ; ಮಗ್ಗ ಲಾಳಿ-ಮುಂತಾದ ನಿಮಿತ್ತಕಾರಣ-ಈ ಮೂರರಿಂದ ಬಟ್ಟೆಯಾಗುತ್ತದೆ. ಆತ್ಮನೆಂದರೆ ಪೃಥಿವ್ಯಪ್ತೇಜಾದಿಗಳಂತೆಯೇ ಒಂದು ದ್ರವ್ಯವು. ಆತ್ಮರು ಅನೇಕರು; ಅವರು ಸ್ವತಃ ಚೇತನಸ್ವರೂಪರಲ್ಲ. ಮೇಲೆ ಹೇಳಿದ ರೀತಿಯಿಂದ ಪರಮಾಣುಗಳಿಂದ ಪರಂಪರೆಯಿಂದ ಶರೀರಾದಿಗಳು ಉತ್ಪನ್ನವಾದಬಳಿಕೆ ಆತ್ಮರಲ್ಲಿ ಕೆಲವು ಗುಣಗಳುಂಟಾಗಿ ಸಮವಾಯಸಂಬಂಧದಿಂದ ಅವರಲ್ಲಿ ಸೇರಿಕೊಂಡಿರುತ್ತವೆ. ಇವೇ ಇಚ್ಛಾದಿಗುಣಗಳು.

ಈಗ ನಾನು ಸಂಕ್ಷೇಪವಾಗಿ ವರ್ಣಿಸಿರುವ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ - ಎಂಬ ಆರು ಪದಾರ್ಥಗಳ ಸ್ವರೂಪವಾಗಲಿ ಸ್ವಭಾವವಾಗಲಿ ನಿಮಗೆ ಎಷ್ಟರ ಮಟ್ಟಿಗೆ ಮನವರಿಕೆಯಾಗಿದೆಯೋ ನನಗೆ ತಿಳಿಯದು. ಆದರೆ ಇಷ್ಟನ್ನು ಮಾತ್ರ ಪ್ರಕೃತಕ್ಕೆ ನೀವು ನೆನಪಿಟ್ಟುಕೊಳ್ಳುವದು ಅತ್ಯವಶ್ಯವು. ಆತ್ಮರುಗಳಿಗೆ ಇಚ್ಛಾದ್ವೇಷಾದಿಗಳು ಗುಣಗಳು; ಅವು ಸಮವಾಯವೆಂಬ ನಿತ್ಯಸಂಬಂಧದಿಂದ ಕೂಡಿಕೊಂಡಿರುವವರೆಗೆ ಸಂಸಾರದುಃಖವು ಆತ್ಮರುಗಳಿಗೆ ಉಂಟಾಗಿರುತ್ತದೆ. ಸರಿಯಾದ ತಿಳಿವಳಿಕೆಯಿಂದ ತಪ್ಪುತಿಳಿವಳಿಕೆಯನ್ನು ಕಳೆದುಕೊಂಡರೆ ಆತ್ಮರುಗಳಿಗೆ ದುಃಖಧ್ವಂಸರೂಪವಾದ ಮೋಕ್ಷವು ಉಂಟಾಗುತ್ತದೆ-ಎಂಬುದು ವೈಶೇಷಿಕರ ಮತವು. ಅವರು ಆತ್ಮಗುಣಗಳೆಂದು ನಂಬಿರುವದೆಲ್ಲವೂ ಕ್ಷೇತ್ರದಲ್ಲಿ ಅಡಕವಾಗಿರುತ್ತದೆಯೇ ಹೊರತು ಕ್ಷೇತ್ರಜ್ಞನಾದ ಆತ್ಮನಲ್ಲಿರುವದಿಲ್ಲ - ಎಂಬುದನ್ನು ಭಗವಂತನು ಈಗ ಹೇಳುತ್ತಿದ್ದಾನೆ.

**ಇಚ್ಛಾ ದ್ವೇಷಃ ಸುಖಂ ದುಃಖಂ ಸಙ್ಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ 13 - 6**

ಇಚ್ಛಾದಿಗಳು ಆತ್ಮನ ಗುಣವೆಂದು ಹೇಳುವ ವೈಶೇಷಿಕರು ಒಂದು ಅನುಭವವನ್ನು ಕಡೆಗಣಿಸಿರುತ್ತಾರೆ. ಇಚ್ಛೆ ಮುಂತಾದವುಗಳೆಲ್ಲ ನಮಗೆ ವಿಷಯವಾಗಿರುತ್ತವೆ; ನಾವು ಅವನ್ನು ಅರಿಯುತ್ತಿದೇವೆ. ನಾವು ಅರಿಯುವ ವಿಷಯಗಳು ನಮ್ಮ ಧರ್ಮಗಳು ಹೇಗಾದಾವು? ಗಡಿಗೆಯನ್ನು ನೋಡುತ್ತಿರುವ ಕುಂಬಾರನಲ್ಲಿ ನೋಡಲ್ಪಡುವ ಗಡಿಗೆಯ ಧರ್ಮಗಳು ಇರಲಾರವಷ್ಟೆ. ನಮಗೆ ಒಂದು ವಿಷಯದಲ್ಲಿ ಇಚ್ಛೆಯು ಹೊಸದಾಗಿ ಉಂಟಾಗುತ್ತದೆ; ಆ ಬಳಿಕೆ ಇಚ್ಛೆಯು ಪೂರ್ತಿಯಾದರೆ ಅಥವಾ ವಿಷಯವೇ ಸದೋಷವಾದದ್ದು ಎಂದು ನಮಗೆ ಗೊತ್ತಾದರೆ ಆಗ ಇಚ್ಛೆಯು ಹೋಗಿಬಿಡುವದು. ಇಚ್ಛೆಯು ಬಂದದ್ದು, ಇದ್ದದ್ದು, ಹೋದದ್ದು-ಎಲ್ಲವೂ ನಮಗೆ ಗೊತ್ತಾಗುತ್ತದೆ. ದ್ವೇಷವೂ ಹೀಗೆಯೇ ಹುಟ್ಟಿಹೋಗುತ್ತದೆ. ನಮಗೆ ಬೇಕಾದ ವಿಷಯಭೋಗವುಂಟಾದಾಗ ಸುಖವೂ, ಬೇಡದ ವಿಷಯಭೋಗವುಂಟಾದಾಗ ದುಃಖವೂ, ಆಗುವವು. ಅವೂ ಬಂದುಹೋಗತಕ್ಕವುಗಳೇ. ಇವುಗಳೆಲ್ಲ ಬಂದುಹೋಗುವದು ನಮಗೆ

ತಿಳಿಯಬರುತ್ತಿದೆ. ಸಂಘಾತವೆಂದರೆ ಶರೀರೇಂದ್ರಿಯಗಳು; ಇವುಗಳನ್ನೂ ಇವುಗಳಲ್ಲಾಗುವ ಮಾರ್ಪಾಡುಗಳನ್ನೂ ನಾವು ನಮ್ಮ ಜ್ಞಾನದಿಂದ ಅರಿಯುತ್ತಿದೇವೆ. ಮಕ್ಕಳಾಗಿದ್ದಾಗಿನಿಂದ ಈಗಿನವರೆಗೆ ನಮ್ಮ ಶರೀರದಲ್ಲಿ ಆದ ಬಗೆಬಗೆಯ ಮಾರ್ಪಾಡುಗಳು ನಮ್ಮ ಅನುಭವಕ್ಕೆ ಬಂದದ್ದು ಈಗಲೂ ನೆನಪಿನಲ್ಲಿರುತ್ತವೆ. ನಮ್ಮ ಜ್ಞಾನಕ್ಕೆ ವಿಷಯವಾಗಿರುವ ಈ ಪದಾರ್ಥಗಳು ಹುಟ್ಟಿ ಇದ್ದು ಮರೆಯಾದದ್ದೆಲ್ಲವೂ ನಮಗೆ ಗೋಚರವಾಗಿರುವಾಗ ಇವುಗಳು ನಮ್ಮ ಸ್ವರೂಪಕ್ಕೆ ಸೇರಿದ ಧರ್ಮವೆಂದು ಹೇಗೆ ತಾನೆ ಹೇಳಬಹುದು? ವಿಷಯವಾಗಿರುವ ಇಚ್ಛಾದಿಗಳನ್ನು ವಿಷಯಿಯಾಗಿರುವ ಕ್ಷೇತ್ರಜ್ಞನ ಧರ್ಮವೆಂದು ಹೇಳುವದು ಅನುಭವವಿರುದ್ಧ, ಯುಕ್ತಿವಿರುದ್ಧ; ಆತ್ಮನು ಅಸಂಗನು ಎಂದು ಹೇಳುವ ಶಾಸ್ತ್ರಕ್ಕೂ ವಿರುದ್ಧ. ಆದ್ದರಿಂದ ಇವೆಲ್ಲವನ್ನೂ ಕ್ಷೇತ್ರವೆಂದೇ ತಿಳಿಯಬೇಕು. ಕ್ಷೇತ್ರಜ್ಞನಿಗೂ ಇವಕ್ಕೂ ಧರ್ಮಧರ್ಮಿಭಾವಿರುವದಿಲ್ಲ. ಇವು ಕ್ಷೇತ್ರಜ್ಞನಿಗೆ ಸೇರಿದವೇ ಅಲ್ಲ.

ಇಲ್ಲೊಂದು ಶಂಕೆಯು ಏಳಬಹುದು. ಮೇಲೆ ತೋರಿಸಿರುವ ಯುಕ್ತ್ಯನುಭಗಳಿಂದ ಜ್ಞಾನವಾದರೂ ಆತ್ಮನ ಧರ್ಮವೆಂದು ನಾವು ಒಪ್ಪಲೇಬೇಕಾಗುತ್ತದೆ. ಇಚ್ಛಾದಿಗಳು ಹುಟ್ಟಿ ಬೆಳೆದು ಮಾರ್ಪಟ್ಟು ಕೃಶವಾಗಿ ಮರೆಯಾಗುವದನ್ನು ಅರಿಯುವದರಿಂದಲ್ಲವೆ, ನಾವು ಅವನ್ನು ನಮ್ಮ ಧರ್ಮವಲ್ಲವೆಂದು ತಿಳಿಯುವದು? ಯಾವ ಜ್ಞಾನದ ಬಲದಿಂದ ಇದನ್ನು ನಿಶ್ಚಯಿಸುತ್ತೇವೋ ಆ ಜ್ಞಾನವಾದರೂ ನಮ್ಮ ಧರ್ಮವೆಂದು ಒಪ್ಪಿದಲ್ಲದೆ ಈ ಯುಕ್ತಿಯು ಹೇಗೆತಾನೆ ನಿಲ್ಲುವದು? ಇಚ್ಛೆ, ದ್ವೇಷ, ಸುಖ, ದುಃಖ, ದೇಹೇಂದ್ರಿಯಸಂಘಾತ, ಇದನ್ನು ಹಿಡಿದೆತ್ತಿರುವ ಧೃತಿ-ಇವೆಲ್ಲವೂ ವಿಷಯವಾಗಲಿ; ಇದನ್ನು ಅರಿಯುವ ಜ್ಞಾನವು ನಮ್ಮ ಧರ್ಮವಾಗಿರಬೇಕಾಯಿತಲ್ಲವೆ? ಈ ಶಂಕೆಗೆ ಪರಿಹಾರವೇನು?

ಇದಕ್ಕೆ ವೇದಾಂತಿಗಳು ಅನುಭವವನ್ನನುಸರಿಸಿಯೇ ಪರಿಹಾರವನ್ನು ಹೇಳಿರುತ್ತಾರೆ. ಹೇಗೆ ನಮಗೆ ಇಚ್ಛೆ, ದ್ವೇಷ- ಮುಂತಾದವುಗಳು ಆಗಿಂದಾಗ್ಗೆ ಉಂಟಾಗುತ್ತಿದ್ದು ಕೊನೆಗೆ ನಾಶವಾಗುವದು ನಮ್ಮ ಅನುಭವದಲ್ಲಿದೆಯೋ ಹಾಗೆಯೇ ಜ್ಞಾನವೂ ಆಗಾಗ್ಗೆ ಉಂಟಾಗುವುದು, ಇರುವದು, ನಾಶವಾಗುವದು - ಎಲ್ಲವೂ ನಮ್ಮ ಅನುಭವದಲ್ಲಿಯೇ ಇದೆ. ಜ್ಞಾನವು ಮತ್ತೊಂದು ಜ್ಞಾನಕ್ಕೆ ಗೋಚರವಾಗುವದೆಂದರೆ ಅದಕ್ಕೊಂದು ಜ್ಞಾನ, ಅದಕ್ಕೊಂದು ಜ್ಞಾನ-ಹೀಗೆ ಜ್ಞಾನಗಳ ಸಾಲನ್ನು ಕಲ್ಪಿಸಬೇಕಾಗುವದಿಲ್ಲವೆ? ಅದಕ್ಕೆ ಯಾವ ಅನುಭವದ ಆಧಾರವಿದೆ? - ಎಂದು ನೀವು ಕೇಳಬಹುದು. ಅದರೆ ಇಲ್ಲಿ ಜ್ಞಾನವೆಂದರೇನೆಂಬುದನ್ನು ನಾವು ತಿಳಿಯಬೇಕಾಗಿರುತ್ತದೆ. ಯಾವ ಸ್ವರೂಪದಿಂದ ನಾವು ಜ್ಞಾನವನ್ನು ಅರಿಯುತ್ತಿರುವೆವೋ ಅದು ನಮ್ಮ ಸ್ವರೂಪವೇ ಆಗಿರುವದರಿಂದ ಅದನ್ನು ಅರಿಯುವದಕ್ಕೆ ಮತ್ತೆ ಯಾವ ಹೊಸ ಜ್ಞಾನವೂ ಬೇಕಿರುವದಿಲ್ಲ. ಸೂರ್ಯನ ಸ್ವರೂಪವೇ ಪ್ರಕಾಶವಾಗಿರುವದರಿಂದ ಅವನನ್ನು ನೋಡುವದಕ್ಕೆ ಮತ್ತೊಂದು ದೀಪದ ಬೆಳಕು ಬೇಕಿಲ್ಲ. ಆದರೆ ಯಾವ ಜ್ಞಾನವು ಹುಟ್ಟಿತು, ಬೆಳೆಯಿತು, ಕುಗ್ಗಿತು, ನಾಶವಾಯಿತು

- ಎಂದು ನಾವು ಎನ್ನುವೆವೋ ಅದು ನಿಜವಾಗಿ ಜ್ಞಾನವಲ್ಲ. ಅದು ಅಂತಃಕರಣದ ಧರ್ಮವಾದ ವೃತ್ತಿಯು. ಕಾದ ಕಬ್ಬಿಣದಲ್ಲಿ ಬೆಂಕಿಯು ಕಾಣಿಸುವಂತೆ ಆ ಅಂತಃಕರಣವೃತ್ತಿಯಲ್ಲಿ ತೋರುವ ಆತ್ಮಚೈತನ್ಯದ ಆಭಾಸವನ್ನೇ ನಾವು ಜ್ಞಾನವೆಂದು ಭ್ರಾಂತಿಯಿಂದ ತಿಳಿದುಕೊಂಡಿರುತ್ತೇವೆ.

ಅಂತಃಕರಣದ ವೃತ್ತಿರೂಪವಾದ ಚೈತನ್ಯಾಭಾಸವಾದ ಜ್ಞಾನವನ್ನು ಈ ಶ್ಲೋಕದಲ್ಲಿ "ಚೇತನಾ" ಎಂದು ಕರೆದಿದೆ. ಈ ವೃತ್ತಿಯು ಆಗ್ಗಾಗ್ಗೆ ಉಂಟಾಗುವಂತೆಯೂ ಆತ್ಮನಿಗೆ ಸೇರಿರುವಂತೆಯೂ ಮೂಢರಿಗೆ ತೋರುವದರಿಂದ ಇದನ್ನು ಆತ್ಮಧರ್ಮವೆಂದು ಅವರು ಭಾವಿಸಿಕೊಳ್ಳುತ್ತಾರೆ. ಈ ಭ್ರಾಂತಿಯೇ ಜ್ಞಾನವು ಆತ್ಮಧರ್ಮವೆಂದು ವೈಶೇಷಿಕರು ತಿಳಿಯುವದಕ್ಕೆ ಕಾರಣವು. ಇದೆಲ್ಲವೂ ಕ್ಷೇತ್ರಕ್ಕೇ ಸೇರಿದ್ದು. ನಿಜವಾಗಿ ಇದನ್ನು ಬೆಳಗುವ ಸ್ವರೂಪಚೈತನ್ಯವು ಬೇರೆಯಿದೆ- ಎಂದು ತಿಳಿಸುವದಕ್ಕಾಗಿಯೇ ಈ ಕ್ಷೇತ್ರದ ವರ್ಣನೆಯನ್ನು ಇಲ್ಲಿ ಮಾಡಿರುತ್ತದೆ.

ಇದುವರೆಗೆ ಕ್ಷೇತ್ರವನ್ನು ವರ್ಣಿಸಿದ್ದಾಯಿತು. ಕ್ಷೇತ್ರವೆಂದರೆ ಶರೀರವು ಎಂದು ವರ್ಣಿಸಿತ್ತು. ಈ ಶರೀರವನ್ನು ಬಿಚ್ಚಿನೋಡಿದರೆ ಇದರೊಡನೆ ಸಾಂಖ್ಯರು ಹೇಳುವ ಮಹಾಭೂತಾದಿಗಳೂ ವೈಶೇಷಿಕರು ಹೇಳುವ ಇಚ್ಛಾದ್ವೇಷಾದಿಗಳೂ ಸೇರಿರುತ್ತವೆ. ಇದೊಂದು ದೊಡ್ಡಮೂಟೆ. ಇದರೊಳಗೆ ಅಡಕವಾಗದ್ದೇ ಇಲ್ಲ. ಬ್ರಹ್ಮಾಂಡದಲ್ಲಿರುವದೆಲ್ಲ ಈ ಪಿಂಡಾಂಡದಲ್ಲಿದೆ ಎನ್ನುತ್ತಾರೆ. ಹೊರಗೆ ಕಾಣುವ ಭೌತಿಕವಸ್ತುಗಳೂ ಆಧ್ಯಾತ್ಮಿಕವಾದ ಭೌತಿಕವಸ್ತುಗಳೂ ಈ ಕ್ಷೇತ್ರದಲ್ಲಿಯೇ ಸೇರಿರುತ್ತವೆ. ಇದು ನಮ್ಮ ಆತ್ಮವಲ್ಲ; ಆದರೂ ಇದನ್ನು ನಾನು, ನನ್ನದು ಎಂದು ವ್ಯವಹಾರಮಾಡುತ್ತಾ ಕಾಲವನ್ನು ಹಾಕುತ್ತಿರುತ್ತೇವೆ. ಈ ಮೂಟೆಯನ್ನು ಕಟ್ಟುತ್ತಲೂ ಬಿಚ್ಚುತ್ತಲೂ ಶರೀರದಿಂದ ಧರ್ಮಾಧರ್ಮಗಳನ್ನು ಮಾಡಿ ದೇಹವನ್ನು ಪಡೆಯುತ್ತಲೂ ದೇಹವನ್ನು ಕಳಚಿಕೊಳ್ಳುತ್ತಲೂ ಸಂಸಾರದಲ್ಲಿ ತೊಳಲುತ್ತಿರುತ್ತೇವೆ. ಆದರೂ ಇದರಲ್ಲಿ ನಾನೆಂಬ ಬುದ್ಧಿಯು ಹೋಗಲಿಲ್ಲ. ಅಜ್ಞಾನದಿಂದ ಹೀಗೆ ನಾವು ಶಾರೀರ, ಜೀವ, ವಿಜ್ಞಾನಾತ್ಮ- ಎನ್ನಿಸಿಕೊಂಡಿದ್ದರೂ ನಮ್ಮ ಈ ಶರೀರದೊಳಗೆ ಅಚ್ಚಳಿಯದೆ ಸ್ವಚ್ಛಚೈತನ್ಯಸ್ವರೂಪನಾದ ಕ್ಷೇತ್ರಜ್ಞನು ಇದ್ದುಕೊಂಡೇ ಇರುವನು. ಅವನು ಪರಮಾರ್ಥವಾಗಿ ಅಶರೀರನು. ಗಂಗಾನದಿಯಲ್ಲಿ ಮುಳುಗುತ್ತಿದ್ದರೂ ಕೈಯಲ್ಲಿರುವ ಎಲುಬನ್ನು ಅತ್ತೊಗೆಯದೆ ಅಶುಚಿಯಾಗಿರುವ ಅವಿವೇಕಿಯಂತೆ ನಾವು ಆ ಪರಮಾತ್ಮಸ್ವರೂಪದಲ್ಲಿಯೇ ಇರುತ್ತಿದ್ದರೂ ಕ್ಷೇತ್ರದ ಕೊಳಕನ್ನಿಟ್ಟುಕೊಂಡಿರುತ್ತೇವೆ.

ಇದುವರೆಗೆ ಹೇಳಿದ್ದೆಲ್ಲವೂ ಕ್ಷೇತ್ರದಲ್ಲಿ ಸೇರಿರುವ ಪದಾರ್ಥಗಳ ಪಟ್ಟಿಯಾಯಿತು. ಹೊಲಮನೆ, ಹೆಂಡಿರುಮಕ್ಕಳು, ಶರೀರ, ಇಂದ್ರಿಯಗಳು, ಪ್ರಾಣ, ಮನಸ್ಸು-ಎಲ್ಲವೂ ಕ್ಷೇತ್ರವೇ ಎಂದು ತಿಳಿದದ್ದಾಯಿತು. ಈ ಶರೀರದ ಸಂಬಂಧವು ನಮಗೆ ಎಂದೆಂದಿಗೂ ಇರುವದಿಲ್ಲ. ಉದಾಹರಣೆಗೆ ನಮ್ಮ ಸುಷುಪ್ತಿಯಲ್ಲಿ ಕನಸಿಲ್ಲದ ತನಿನಿದ್ರೆಯಲ್ಲಿ, ಈ ನಮ್ಮ ಎಚ್ಚರದಲ್ಲಿ ಕಾಣುವ ಶರೀರವಾಗಲಿ, ಪ್ರಾಣವಾಗಲಿ, ಇಂದ್ರಿಯಗಳಾಗಲಿ, ಮನೋಬುದ್ಧಿಗಳಾಗಲಿ ಒಂದೂ ಒಂದಿಷ್ಟೂ ನಮ್ಮ ಸ್ವರೂಪಕ್ಕೆ ಅಂಟಿಕೊಂಡಿರುವದಿಲ್ಲ. ಆಗ ಇಚ್ಛೆಯಿಲ್ಲ, ದ್ವೇಷವಿಲ್ಲ,

ಸುಖವಿಲ್ಲ, ದುಃಖವಿಲ್ಲ-ಇದರಿಂದೇನು ಸಿದ್ಧವಾಯಿತು? ಶರೀರವಿರುವವರೆಗೆ ಶರೀರಾಭಿಮಾನವಿರುತ್ತದೆ, ಶರೀರಾಭಿಮಾನವಿರುವವರೆಗೆ ಪ್ರಿಯಾಪ್ರಿಯಗಳೂ ಸುಖದುಃಖಗಳೂ ನಮ್ಮನ್ನು ಪೀಡಿಸುತ್ತಿರುವವು. ಆದ್ದರಿಂದ ಈ ಶರೀರದ ಅಭಿಮಾನವನ್ನು ಬಿಡಬೇಕು. ಈ ಶರೀರವು ನಿಜವಾಗಿಯೂ ಬರಿಯ ತೋರಿಕೆ, ನೆರಳಿನಂತೆ ಹುಸಿ ಎಂಬುದನ್ನು ಮನದಂದುಕೊಳ್ಳಬೇಕು; ನಮ್ಮ ಹಿಂದಿನ ಸ್ಥಿತಿಯು ಈಗ ಮರೆತುಹೋಗಿದೆ, ಅಥವಾ ಅದು ನೆನಪಿದ್ದರೂ ಅದರಲ್ಲಿ ನಮಗೆ ಈಗಿನ ಶರೀರಾದಿಗಳಲ್ಲಿರುವ ಅಭಿಮಾನವು ಇರುವದಿಲ್ಲ. ಆದ್ದರಿಂದ ಹೇಗಾದರೂ ಮಾಡಿ ಶರೀರಾಭಿಮಾನವನ್ನು ಬಿಟ್ಟು ಈ ಶರೀರಕ್ಕಿಂತಲೂ ಬೇರೆಯಾಗಿರುವ ಕ್ಷೇತ್ರಜ್ಞನನ್ನು ಅರಿತುಕೊಳ್ಳುವದಕ್ಕೆ ಪ್ರಯತ್ನಿಸಬೇಕು.

ಅತ್ಯಂತಸೂಕ್ಷ್ಮನಾಗಿರುವ ಈ ಕ್ಷೇತ್ರಜ್ಞನನ್ನು ಅರಿಯುವದಕ್ಕೆ ಕರಣವು ಯಾವದು? ಅಂತಃಕರಣವೇ. ಅಂತಃಕರಣ ಎಂದರೆ ಒಳಗಿನ ಕರಣ ಎಂದು ಅರ್ಥ. ಅಂತಃಕರಣವು ಎರಡು ಅರ್ಥದಲ್ಲಿ ಒಳಗಿನ ಕರಣವಾಗಿರುತ್ತದೆ. ಅದು ನಮ್ಮ ಶರೀರದ ಒಳಗಡೆ ಇದ್ದುಕೊಂಡು ಎಲ್ಲವನ್ನೂ ಗ್ರಹಿಸುವದರಿಂದ ಅಂತಃಕರಣವೆನಿಸಿರುತ್ತದೆ. ನಮ್ಮ ಒಳಗೇ ಇದ್ದುಕೊಂಡು ಇಂದ್ರಿಯಗಳ ಮೂಲಕವಾಗಿ ಶಬ್ದಸ್ಪರ್ಶಾದಿಗಳನ್ನೂ ಹೊರಗಿನ ಇಂದ್ರಿಯಗಳ ನೆರವನ್ನು ಕೋರದೆಯೇ ಒಳಗಿನ ಸುಖದುಃಖಾದಿಗಳನ್ನೂ ಈ ಅಂತಃಕರಣವು ಗ್ರಹಿಸುತ್ತಿರುತ್ತದೆ. ಈ ಎರಡು ಕೆಲಸಗಳನ್ನೂ ಅದು ಹೊರಮುಖವಾಗಿಯೇ ಇದ್ದುಕೊಂಡು ಮಾಡುತ್ತಿರುವದು. ಹೊರಗೆ ವಿಷಯಗಳನ್ನು ನೋಡಲಿ ಒಳಗೆ ವಿಷಯಗಳನ್ನು ಚಿಂತಿಸಲಿ, ಅಥವಾ ಸುಖದುಃಖ, ಆಶ್ಚರ್ಯಭಯ-ಮುಂತಾದವುಗಳನ್ನು ಅನುಭವಿಸುತ್ತಿರಲಿ, ಇದು ಅಂತಃಕರಣವೇ ಆದರೂ ಪರಾಕ್ಪ್ರವಣ-ಹೊರಮುಖವಾಗಿರುವದರಿಂದ ನಿಜವಾಗಿ ಅಂತಃಕರಣವೆನಿಸುವದಕ್ಕೆ ಅರ್ಹವಾಗಿರುವದಿಲ್ಲ. ಆದರೆ ಇದೇ ಅಂತಃಕರಣವು ಸರಿಯಾಗಿ ಸಂಸ್ಕಾರವನ್ನು ಹೊಂದಿದರೆ ಅದು ಪ್ರತ್ಯಕ್ಪ್ರವಣ-ಒಳಮುಖ-ವಾಗುವದು. ಗಾಳಿಯಲ್ಲಿ ಕೊಡೆಯು ತಲೆಕೆಳಗಾಗಿ ತಿರುಗುವಂತೆ ಇದೇ ಮನಸ್ಸು ಒಳಕ್ಕೆ ತಿರುಗಿಕೊಂಡರೆ ನಮ್ಮ ಪ್ರತ್ಯಗಾತ್ಮನಾದ ಈ ಕ್ಷೇತ್ರಜ್ಞನನ್ನು ಅರಿತುಕೊಳ್ಳುವದಕ್ಕೆ ಶಕ್ತವಾಗುವದು.

ಈ ಯೋಗ್ಯತೆಯನ್ನು ಸಂಪಾದಿಸಿಕೊಳ್ಳುವದಕ್ಕೆ ಅಂತಃಕರಣಕ್ಕೆ ಎರಡು ಬಗೆಯ ಸಂಸ್ಕಾರವಾಗಬೇಕು. ಮೊದಲು ಇದು ಹೊರಕ್ಕೆ ಹರಿಯುವದನ್ನು ಬಿಡಬೇಕು. ವಿಷಯಚಿಂತನೆಯಿಂದ ಕಶ್ಮಲವಾಗಿರುವವರೆಗೂ ಇದಕ್ಕೆ ಹೊರಗಡೆಗೆ ತಿರುಗಿರುವ ಸ್ವಭಾವವು ತಪ್ಪುವದಿಲ್ಲ. ಇನ್ನು ಒಳಮುಖವಾದರೂ ಇದು ಅತ್ಯಂತಶುದ್ಧವಾಗಿ ಏಕಾಗ್ರತೆಯನ್ನು ಪಡೆಯಬೇಕು. ಆತ್ಮವಸ್ತು ಸೂಕ್ಷ್ಮವಸ್ತುಗಳೆಲ್ಲೆಲ್ಲ ಸೂಕ್ಷ್ಮತಮವಾಗಿರುತ್ತದೆ. ಆದ್ದರಿಂದ ಅದನ್ನು ಗ್ರಹಿಸುವಷ್ಟು ಸೂಕ್ಷ್ಮತೆಯನ್ನು ಈ ಅಂತಃಕರಣವು ಹೊಂದಬೇಕು. ಹೀಗೆ ಕಶ್ಮಲವನ್ನು ಕಳೆದುಕೊಂಡು ಏಕಾಗ್ರತೆಯನ್ನು ಹೊಂದಿ ಸೂಕ್ಷ್ಮವಸ್ತುಗ್ರಹಣಕ್ಕೆ ಯೋಗ್ಯವಾದರೆ ಅಂತಃಕರಣವು ಕ್ಷೇತ್ರಜ್ಞನನ್ನು ಅರಿಯುವದಕ್ಕೆ ತಕ್ಕದ್ದಾಗುವದು. ಹೊರಗಿನ ವಿಷಯಗಳನ್ನು ಗ್ರಹಿಸಿ

ಶರೀರಾಭಿಮಾನದಿಂದ ಸಂಸಾರದಲ್ಲಿ ತೊಳಲುವಂತೆ ಮಾಡುವದೂ ಈ ನಮ್ಮ ಅಂತಃಕರಣವೇ; ಶರೀರಪ್ರಾಣಾದಿಗಳಿಗಿಂತಲೂ ಒಳಗಿರುವ ಪ್ರತ್ಯಗಾತ್ಮವಸ್ತುವನ್ನು ಆತ್ಮನೆಂದು ಅರಿತುಕೊಂಡು ಸಕಲಬಂಧಗಳಿಂದಲೂ ಬಿಡುಗಡೆಮಾಡುವದೂ ಈ ನಮ್ಮ ಅಂತಃಕರಣವೇ. ಶರೀರವೇ ನಮ್ಮ ಆತ್ಮನೆಂದು ಈಗ ಎಷ್ಟು ನಿಶ್ಚಯವಾಗಿ ಗೊತ್ತಾಗಿರುವದೋ ಅಷ್ಟೇ ನಿಶ್ಚಯವಾಗಿ ನಿಜವಾದ ನಮ್ಮ ಆತ್ಮನಾಗಿರುವ ಕ್ಷೇತ್ರಜ್ಞನೇ ನಮ್ಮ ಆತ್ಮನೆಂಬ ವಿಜ್ಞಾನವುಂಟಾಗಬೇಕು. ಅದಕ್ಕೆ ತಕ್ಕಂತೆ ಅಂತಃಕರಣವನ್ನು ಮೊದಲು ಸಿದ್ಧಮಾಡಿಕೊಳ್ಳಬೇಕಾಗಿರುವದರಿಂದ ಅದಕ್ಕೆ ತಕ್ಕ ಸಾಧನಗಳನ್ನು ಇನ್ನು ಮುಂದೆ ಹೇಳಲಾಗುವದು.

ಈಗ ಇದೇ ಮನಸ್ಸೂ ಇಂದ್ರಿಯಗಳೂ ಶರೀರವೂ ನಮಗೆ ಅಜ್ಞಾನಕ್ಕೆ ಸಾಧನವಾಗಿರುತ್ತವೆ. ಹರಿತವಾದ ಚಾಕು ಒಬ್ಬ ಅವಿವೇಕಿಯಾದ ಹುಡುಗನ ಕೈಗೆ ಸಿಕ್ಕಿದರೆ ಅವನು ತನ್ನ ಬೆರಳನ್ನು ಕೊಯ್ದುಕೊಳ್ಳುವದಕ್ಕೆ ಅದನ್ನು ಉಪಯೋಗಿಸುವಂತೆ ನಾವು ನಮ್ಮ ಕಾರ್ಯಕರಣಸಂಘಾತವನ್ನು ಆತ್ಮಜ್ಞಾನಕ್ಕೆ ಉಪಯೋಗಿಸಿಕೊಳ್ಳದೆ ಸಂಸಾರದೊಳಗೇ ತೊಳಲುತ್ತಿರುವದಕ್ಕೆ ಸಾಧನವಾಗಿ ಮಾಡಿಕೊಂಡಿರುತ್ತೇವೆ. ಮನೆತುಂಬುವ ಸಾಮಾನು ತೆಗೆದುಕೊಂಡು ಬಾ - ಎಂದು ಒಬ್ಬನು ತನ್ನ ಮಕ್ಕಳಿಬ್ಬರಿಗೂ ಒಂದೊಂದು ನಾಣ್ಯವನ್ನು ಕೊಟ್ಟನಂತೆ. ಒಬ್ಬನು ಎರಡು ಮೂರು ಹೊರೆ ಹುಲ್ಲನ್ನು ತಂದು ಮನೆಯಲ್ಲೆಲ್ಲ ಅದನ್ನು ಹರಡಿ ಕಸವನ್ನು ಮಾಡಿದನಂತೆ; ಇನ್ನೊಬ್ಬನು ಒಂದು ಹಣತೆಯನ್ನೂ ಎಣ್ಣೆಯನ್ನೂ ಬತ್ತಿಯನ್ನೂ ತಂದು ದೀಪವನ್ನು ಹಚ್ಚಿ ಮನೆಯೆಲ್ಲ ಬೆಳಕಿನಿಂದ ಬೆಳಗುವಂತೆ ಮಾಡಿದನಂತೆ. ವಿವೇಕಿಗಳಾದವರು ತಮ್ಮ ಜನ್ಮವನ್ನು ಜ್ಞಾನಸಾಧನೆಗೆ ಉಪಯೋಗಿಸಿಕೊಳ್ಳುತ್ತಿದ್ದರೆ ನಮ್ಮಂಥ ಅವಿವೇಕಿಗಳು ಅದೇ ಜನ್ಮವನ್ನೇ ಮತ್ತಷ್ಟು ಅಜ್ಞಾನಾಂಧಕಾರದಿಂದ ದುಃಖಮಯವಾಗಿ ಮಾಡಿಕೊಳ್ಳುತ್ತಾ ಸಂಸಾರದಲ್ಲಿ ಬಿದ್ದು ಒದ್ದಾಡುತ್ತಿದ್ದೇವೆ. ಆದ್ದರಿಂದ ಜನ್ಮಸಾರ್ಥಕ್ಯವನ್ನುಂಟುಮಾಡುವ ಜ್ಞಾನಸಾಧನಗಳನ್ನು ಅಭ್ಯಾಸಮಾಡಿ ಶೀಘ್ರವಾಗಿ ಕೃತಾರ್ಥರಾಗುವಂತೆ ಮಾಡೆಂದು ಭಗವಂತನನ್ನು ಬೇಡಿಕೊಳ್ಳೋಣ.

ಈ ಲೋಕದಲ್ಲಿ ಶಾಸ್ತ್ರ, ಗುರು, ಮುಂತಾದ ಜ್ಞಾನಸಾಧನಗಳು ಹೇರಳವಾಗಿರುತ್ತವೆ. ಅವೆಲ್ಲ ಭಗವಂತನ ಅನುಗ್ರಹವೇ. ಶಾಸ್ತ್ರಗಳು ಅಜ್ಞಾನಿಗಳಾದವರನ್ನು ಸಂಸಾರದಿಂದ ದಾಟಿಸುವದಕ್ಕಾಗಿಯೇ ಹೊರಟಿರುತ್ತವೆ. ಶಾಸ್ತ್ರಾರ್ಥವನ್ನು ತಿಳಿಸಿ ಸತ್ಸಾಧನಗಳನ್ನು ಅನುಷ್ಠಾನಮಾಡಿಸಿ ದಾಟಿಸುವದಕ್ಕಾಗಿಯೇ ಸದ್ಗುರುಗಳು ಅಲ್ಲಲ್ಲಿ ಕಾಣಿಸುತ್ತಿರುತ್ತಾರೆ. ನದಿಯನ್ನು ದಾಟುವವರು ಹರಿಗೋಲನ್ನು ಉಪಯೋಗಿಸಿಕೊಳ್ಳುವಂತೆ ಸಂಸಾರದಿಂದ ಪಾರಾಗಬೇಕೆನ್ನುವವರು ಈ ಸಹಾಯಸಾಧನಗಳನ್ನು ಉಪಯೋಗಮಾಡಿಕೊಳ್ಳಬೇಕು.



# ೯೬. ಜ್ಞಾನಸಾಧನ 13 - (7-11)

**(29-8-48)**

ಕಳೆದ ಎರಡು ವಾರಗಳಿಂದ ಕ್ಷೇತ್ರದ ವರ್ಣನೆಯನ್ನು ಮಾಡಿದ್ದಾಗಿದೆ. ಕ್ಷೇತ್ರವೆಂದರೆ ಶರೀರವು. ಇದು ಎರಡು ಬಗೆ. ಹೊರಗೆ ಕಣ್ಣು ಕಿವಿ ಮೂಗು ಕೈಕಾಲುಗಳಿಂದ ಕೂಡಿರುವ ಸ್ಥೂಲಶರೀರವಿದೆ; ಇದರೊಳಗಿರುವ ಸೂಕ್ಷ್ಮಶರೀರವು ಅಥವಾ ಲಿಂಗಶರೀರವು ಎಲ್ಲಾ ಭಾಗಗಳಲ್ಲಿಯೂ ಈ ಹೊರಗಿನ ಶರೀರವನ್ನು ವ್ಯಾಪಿಸಿಕೊಂಡಿರುತ್ತದೆ. ಸಾಂಖ್ಯರು ಹೇಳುವ ಮಹಾಭೂತಾದಿ ತತ್ತ್ವಗಳೂ ವೈಶೇಷಿಕರು ಹೇಳುವ ಇಚ್ಛಾದ್ವೇಷಾದಿಗಳೂ ಎಲ್ಲವೂ ಕ್ಷೇತ್ರವೇ. ಸ್ಥೂಲಶರೀರದಂತೆಯೇ ಸೂಕ್ಷ್ಮಶರೀರವೂ ವಿಕಾರವುಳ್ಳದ್ದು. ಸ್ಥೂಲಶರೀರವು ಮಾರ್ಪಡುತ್ತಿರುವಂತೆಯೇ ನಮ್ಮಲ್ಲಿರುವ ಇಚ್ಛಾದ್ವೇಷಾದಿಗಳೂ ಮಾರ್ಪಡುತ್ತಲೇ ಇರುತ್ತವೆ. ಶರೀರವು ಮಾರ್ಪಡುತ್ತಿರುವದೆಂದೂ ನಿತ್ಯವಲ್ಲವೆಂದೂ ಯಾರಾದರೂ ಹೇಳಿದರೆ ನಮಗೆ ಅದು ಒಗ್ಗುವದಿಲ್ಲ. ಅದನ್ನು ಕೇಳಿದಾಗ ನಮಗೆ ಅಸಮಾಧಾನವೂ ಆಗಬಹುದು. ಆದರೇನು? ಶರೀರವು ನಿಜವಾಗಿಯೂ ಮಾರ್ಪಡುತ್ತಲೇ ಇರುತ್ತದೆ. ಕೋಪವುಕೂಡ ನಮ್ಮಲ್ಲಿ ಬಹುಕಾಲ ಉಳಿಯುವದಿಲ್ಲ ; ಏಕೆಂದರೆ ಅದು ನಮ್ಮ ಸ್ವರೂಪಕ್ಕೆ ಸೇರಿದ ಧರ್ಮವಲ್ಲ. ಶರೀರವು ಆಯಾ ಕಾಲಕ್ಕೆ ಹಾಗೆ ಹಾಗೆ ಇರುತ್ತದೆ ; ಅದಕ್ಕೆ ತಕ್ಕಂತೆ ನಾವು ಬಟ್ಟೆ, ಆಹಾರ, ಕರ್ಮ - ಮುಂತಾದವುಗಳನ್ನು ಕೈಕೊಳ್ಳುತ್ತಾ ಅದು ಬದಲಾಯಿಸಿದಂತೆ ಅವನ್ನೂ ಬದಲಾಯಿಸಿಕೊಳ್ಳುತ್ತಿರುವದು ನಮ್ಮೆಲ್ಲರ ಅನುಭವದಲ್ಲಿಯೂ ಇದೆ.

ಮನುಷ್ಯನು ಈ ತತ್ತ್ವವನ್ನು ಚೆನ್ನಾಗಿ ಮನವರಿಕೆಮಾಡಿಕೊಳ್ಳಬೇಕಾಗಿದೆ. ಅದೇನು ಮಾಯೆಯೊ, ಶರೀರವು, ಸ್ಥೂಲವಾಗಲಿ ಸೂಕ್ಷ್ಮವಾಗಲಿ ಎರಡೂ, ಬದಲಾಯಿಸುತ್ತಲೇ ಇದ್ದರೂ ನಾವು ಮಾತ್ರ ಅದರ ಅಭಿಮಾನವನ್ನು ಬಿಡದೆ ಇರುವೆವು. ಬಟ್ಟೆ, ಆಹಾರ, ಮನೆ, ನೆಂಟರಿಷ್ಟರು - ಮುಂತಾದದ್ದೆಲ್ಲದ್ದರಲ್ಲಿಯೂ ನಮ್ಮದೆಂಬ ಅಭಿಮಾನವನ್ನು ಮಾಡಿಕೊಳ್ಳುತ್ತೇವೆ; ಶರೀರದಲ್ಲಿ ನಾವೆಂಬ ಅಭಿಮಾನವನ್ನು ಮಾಡಿಕೊಳ್ಳುತ್ತೇವೆ. ಪದಾರ್ಥಗಳೂ ಹೊರಗಿನ ಸನ್ನಿವೇಶಗಳೂ ನಮಗೆ ಒಂದೊಂದು ಅನುಭವವನ್ನು ಕೊಡುವದಕ್ಕೆ ಬರುತ್ತವೆ. ಆ ಸಂದರ್ಭವನ್ನು ನಾವು ಸದುಪಯೋಗಮಾಡಿಕೊಂಡು ಅವುಗಳಿಂದ ಪಡೆದುಕೊಳ್ಳಬೇಕಾದ ಅನುಭವವನ್ನು ಸಂಪಾದಿಸಿಕೊಂಡು ಬಳಿಕ ಅವುಗಳಲ್ಲಿನ ಅಭಿಮಾನವನ್ನು ಬಿಟ್ಟುಬಿಡಬೇಕು. ನೀರಸುಳಿ ಎಂಬ ಪದಾರ್ಥವೊಂದು ಸ್ಥಿರವಾಗಿ ನಿಜವಾಗಿ ಇಲ್ಲದಿದ್ದರೂ ಇರುವಂತೆ ಕಾಣುತ್ತಿರುವದಲ್ಲವೆ? ಕ್ಷಣಕ್ಷಣಕ್ಕೂ ವಿಕಾರವಾಗುತ್ತಿರುವ ಪದಾರ್ಥಗಳಲ್ಲಿ ಸ್ಥಿರಬುದ್ಧಿಯನ್ನು ಮಾಡಿಕೊಂಡು ಸಲ್ಲದ ಅಭಿಮಾನದಿಂದ ಅವನ್ನು ಕಾಣುತ್ತಾ ಅವು ಇದ್ದಂತೆಯೇ ಇರುವವು ಎಂದು ತಪ್ಪಾಗಿ ಭಾವಿಸಿಕೊಂಡಿರುತ್ತೇವೆ. ಆದ್ದರಿಂದ ಅವು ಸಹಜವಾಗಿ ಅದೃಶ್ಯವಾದರೆ ಹೋದವಲ್ಲ ! ಎಂಬ ದುಃಖವು ಉಂಟಾಗುತ್ತದೆ. ಅವು ಸ್ವಭಾವದಿಂದಲೇ ಅನಿತ್ಯ ಎಂಬುದನ್ನು ಮೊದಲಿನಿಂದಲೇ

ಅರಿತುಕೊಂಡಿದ್ದರೆ ಈ ದುಃಖಕ್ಕೆ ಕಾರಣವಿರುವದಿಲ್ಲ. ಹಾಗೆ ತಿಳಿದರೇ ಕ್ಷೇತ್ರಜ್ಞಾನವಾದಂತೆ ಆಯಿತು. ಬಾಹ್ಯಪದಾರ್ಥಗಳಲ್ಲಿ ಯಾವದೊಂದರಲ್ಲಿಯೂ ನಾನು ನನ್ನದು ಎಂಬ ಅಭಿಮಾನವನ್ನು ಮಾಡತಕ್ಕದ್ದಲ್ಲ. ಅವುಗಳನ್ನು ಉಪಯೋಗಿಸಿಕೊಂಡು ಆತ್ಮನ ಕಡೆಗೆ ತಿರುಗಬೇಕು. ಇದೇ ವಿವೇಕವು.

ಈಗ ಕ್ಷೇತ್ರಜ್ಞನನ್ನೂ ಅವನ ಪ್ರಭಾವವನ್ನೂ ಅರಿತುಕೊಳ್ಳುವದಕ್ಕೆ ಕೆಲವು ಸಾಧನಗಳನ್ನು ಭಗವಂತನು ಹೇಳುತ್ತಿದಾನೆ :

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾನ್ತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ 13 - 7**

**ಇನ್ದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ 13 - 8**

**ಅಸಕ್ತಿರನಭಿಷ್ವಙ್ಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ 13 - 9**

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ 13 - 10**

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ 13 - 11**

ಇಲ್ಲಿ ಹೇಳಿರುವ ಅಮಾನಿತ್ವಾದಿಗಳು ಇದ್ದರೆ ಆ ಜ್ಞೇಯವಾದ ಕ್ಷೇತ್ರಜ್ಞನನ್ನು ಅರಿತುಕೊಳ್ಳುವದಕ್ಕೆ ಯೋಗ್ಯನಾಗುತ್ತಾನೆ. ಸರ್ವಕರ್ಮಗಳನ್ನೂ ಸಂನ್ಯಾಸಮಾಡಿ ಈ ಸಾಧನಗಳಲ್ಲಿಯೇ ತತ್ಪರನಾಗಿದ್ದವನು **ಜ್ಞಾನನಿಷ್ಠನು** ಎನ್ನಿಸಿಕೊಳ್ಳುತ್ತಾನೆ. ಆದ್ದರಿಂದ ಇವುಗಳನ್ನು ಜ್ಞಾನವೆಂದೇ ಭಗವಂತನು ಕರೆದಿರುತ್ತಾನೆ. ಇವುಗಳನ್ನು ಒಂದೊಂದಾಗಿ ವಿಮರ್ಶಿಸಿ ತಿಳಿದುಕೊಳ್ಳುವದು ಅತ್ಯವಶ್ಯವಾಗಿರುತ್ತದೆ.

ಇವುಗಳು ಅಂತಃಕರಣದ ಧರ್ಮಗಳೆಂಬುದನ್ನು ನಾವು ಮರೆಯದೆ ಇರಬೇಕು. ಜ್ಞಾನಸಾಧನ ಎಂಬುದು ಅಂತಃಕರಣಕ್ಕೆ ಸೇರಿದ್ದು. ಆ ಸಾಧನದಿಂದ ಕೂಡಿದ ಅಂತಃಕರಣದಲ್ಲಿ ಜ್ಞಾನವುಂಟಾಗುವದು ; ಅವುಗಳು ಇಲ್ಲದ ಅಂತಃಕರಣದಲ್ಲಿ ಅಜ್ಞಾನವು ನೆಲಸಿರುವದು. ಅಮಾನಿತ್ವಾದಿಗಳನ್ನು ಸಂಪಾದಿಸುವದಕ್ಕೆ ಶರೀರಾದಿಗಳಲ್ಲಿ ಯಾವದೋ ಒಂದು ಮಾರ್ಪಾಡು ಆಗಬೇಕು ಎಂದು ಭಾವಿಸಬಾರದು. ಮುಖ್ಯವಾಗಿ ಅಂತಃಕರಣವನ್ನು ನೇರ್ಪಡಿಸಿಕೊಳ್ಳುವದು ಅವಶ್ಯವಾಗಿರುತ್ತದೆ. ಹಿಂದಿನ ದಿನವೇ ಹೇಳಿರುವಂತೆ ಅಂತಃಕರಣಕ್ಕೆ ಪ್ರತ್ಯಗ್ದೃಷ್ಟಿ, ಪರಾಗ್ದೃಷ್ಟಿ

ಎಂದು ಎರಡು ದೃಷ್ಟಿಗಳಿರುತ್ತವೆ. ನಮಗೆ ಪ್ರತ್ಯಗ್ದೃಷ್ಟಿಯು ಬೇಕಾಗಿದೆ. ಈಶ್ವರನಿಗೆ ಮೂರನೆಯ ಕಣ್ಣು ಒಂದಿದೆ ಎಂದು ಪುರಾಣಗಳಲ್ಲಿ ವರ್ಣಿಸಿರುವದನ್ನು ನೀವು ಕೇಳಿರಬಹುದು. ಜ್ಞಾನನೇತ್ರವೇ ಆ ಮೂರನೆಯ ಕಣ್ಣು. ನಾವು ಪರಾಗ್ದೃಷ್ಟಿ ಎಂಬ ಹೊರಗಣ್ಣನ್ನು ಮುಚ್ಚಿ ಪ್ರತ್ಯಗ್ದೃಷ್ಟಿ ಎಂಬ ಒಳಗಣ್ಣನ್ನು ತೆರೆದು ಆ ಮೂರನೆಯ ಕಣ್ಣನ್ನು ಸಂಪಾದಿಸಿಕೊಳ್ಳಬೇಕಾಗಿರುತ್ತದೆ. ಬರಿಯ ಹೊರಗಿನ ವೇಷಭೂಷಣಗಳಿಂದ ನಮ್ಮ ಅಧ್ಯಾತ್ಮಸಾಧನವು ಬೆಳೆಯುವದಿಲ್ಲ. ನಾವು ಮಾಡುವ ವಿಭೂತಿಧಾರಣೆ, ಗಂಧಮಾಲ್ಯಗಳನ್ನು ಧರಿಸುವದು, ಮುಂತಾದವು ಪರಮೇಶ್ವರನ ಪ್ರಸಾದರೂಪವೆಂಬ ಭಾವನೆಯಿದ್ದರೆ ಅವುಗಳಿಂದಲೂ ಪ್ರಯೋಜನವುಂಟು. ಯಾವ ಆಚಾರವೇ ಆಗಲಿ, ಒಳಗಿನ ಅಂತಃಕರಣಕ್ಕೆ ಸಂಬಂಧಪಟ್ಟಿರುವಾಗಲೇ ಅದಕ್ಕೆ ಬೆಲೆ. ಈಗ ನಮ್ಮ ಒಳಗಿನ ಭಾವಕ್ಕೂ ಹೊರಗಿನ ಆಚರಣೆಗೂ ಸಂಬಂಧವಿಲ್ಲದೆ ಹೋಗಿರುತ್ತದೆ. ಮಡಿಯ ಭಾವನೆಯಿಲ್ಲದೆ ರೇಷ್ಮೆಯ ಬಟ್ಟೆಗಳನ್ನು ಹೊದೆಯುವದು ಮಡಿಯಲ್ಲ ; ಭಕ್ತಿಭಾವನೆಯಿಲ್ಲದೆ ಗುಡಿಯಲ್ಲಿ ಹಣ್ಣುಕಾಯಿ ಮಾಡಿಸುವದು ದೈವಭಕ್ತಿಯಲ್ಲ. ಇದನ್ನು ನಾವು ನೆನಪಿನಲ್ಲಿಟ್ಟಿರಬೇಕು.

ಹೊರಗಿನ ಅಭಿನಯಗಳನ್ನು ನೋಡಿ ಮನುಷ್ಯನ ಮನೋಭಾವಗಳನ್ನು ಅನುಮಾನಿಸುವದರಲ್ಲಿ ದೋಷವೇನೆಂಬುದು ಈಗ ನಮಗೆ ಗೊತ್ತಾಗುತ್ತದೆ. ಮೈಸೂರಿನಲ್ಲಿ ನಡೆದ ಒಂದು ಪಂಡಿತಸಮ್ಮೇಳನದಲ್ಲಿ ಒಬ್ಬ ಮನಃಶ್ಶಾಸ್ತ್ರದ ಉಪಾಧ್ಯಾಯರು `ರಸಗಳು' ಎಂಬ ವಿಷಯದಲ್ಲಿ ಉಪನ್ಯಾಸವನ್ನು ಕೊಟ್ಟರು. ವಿಷಯದ ಹೆಸರನ್ನು ಕಾರ್ಯದರ್ಶಿಗಳು `ಮನಃಶಾಸ್ತ್ರದ ಪ್ರಕಾರ ರಸಗಳು' ಎಂದು ತಿದ್ದಿ ಬರೆದಿದ್ದರು. ಉಪನ್ಯಾಸಕರು ಅದನ್ನು ಆಕ್ಷೇಪಿಸಿ `ಮನಃಶಾಸ್ತ್ರದ ಪ್ರಕಾರವಲ್ಲದೆ ಮತ್ತೆ ಯಾವ ಪ್ರಕಾರದ ರಸಗಳನ್ನು ಪರಿಶೀಲಿಸಬಹುದು? ಈ ವಿಶೇಷಣದ ಪ್ರಯೋಜನವೇನೂ ನನಗೆ ಕಾಣುವದಿಲ್ಲ' ಎಂದು ಪ್ರಾರಂಭಿಸಿ ರಸಗಳ ವಿವೇಚನೆಯನ್ನು ಮಾಡಿದರು. ಈಗಿನ ಮನಃಶಾಸ್ತ್ರವು ಬಲುಮಟ್ಟಿಗೆ ಪ್ರಯೋಗಾತ್ಮಕವಾಗಿಯೇ (Experimental) ಇರುವದರಿಂದ ಮತ್ತೊಬ್ಬರ ಮನಸ್ಸಿನ ಮೇಲೆ ಆಗುವ ಪರಿಣಾಮರೂಪವಾದ ಸಂತೋಷ, ಭಯ, ಆಶ್ಚರ್ಯ - ಮುಂತಾದವುಗಳನ್ನೇ ಅದರಲ್ಲಿ ಮುಖ್ಯವಾಗಿ ವಿಮರ್ಶಿಸಿರುತ್ತದೆ - ಎಂಬುದನ್ನು ಅವರು ಮನದಂದುಕೊಂಡಿರಲಿಲ್ಲ. "ಮನಸ್ಸಿನ ವಿಭಜನೆ" (Psychoanalysis) ಎಂಬ ಪ್ರಯೋಗದಿಂದ ವೈದ್ಯಶಾಸ್ತ್ರವು ಲಾಭಹೊಂದಿರುವದು ಈ ದೃಷ್ಟಿಯಿಂದೊಡಗೂಡಿದ ಮನಃಶಾಸ್ತ್ರದಿಂದಲೇ ಆಗಿರುತ್ತದೆ. "ಜನಸಾಮಾನ್ಯಮನಃಶಾಸ್ತ್ರ" (Mass Psychology), "ಶಿಶುಮನಃಶಾಸ್ತ್ರ" (Child Psychology) ಮುಂತಾದ ಮನಃಶಾಸ್ತ್ರಪ್ರಭೇದಗಳು ಈ ದೃಷ್ಟಿಯಿಂದಲೇ ಉಂಟಾಗಿರುತ್ತದೆ. ಈ ದೃಷ್ಟಿಯ ಮನಃಶಾಸ್ತ್ರದಿಂದ ವ್ಯಾವಹಾರಿಕ ಪ್ರಯೋಜನವು ಅಪರಿಮಿತವಾಗಿರುವದೆಂಬುದಕ್ಕೂ ಈ ಕ್ಷೇತ್ರದಲ್ಲಿ ಇನ್ನೂ ಶಾಸ್ತ್ರದ ಬೆಳವಣಿಗೆಗೆ ಅವಕಾಶವಿದೆಯೆಂಬುದಕ್ಕೂ ಯಾವ ಸಂಶಯವೂ ಇರುವದಿಲ್ಲ. ಆದರೆ ಮನಸ್ಸಿನ ಪರಮಾರ್ಥತತ್ತ್ವವನ್ನು ನಿರ್ಣಯಿಸುವದಕ್ಕೆ ಮತ್ತೊಂದು ದೃಷ್ಟಿಯು ಬೇಕು. ಈಗ ನಾವು ಅಂತಃಕರಣದ ವಿಚಾರವನ್ನು ಮಾಡುತ್ತಿರುವದು ಹೀಗೆ ಹೊರಗಿನ ಪರಿಣಾಮಗಳಿಂದ ಅನುಮಾನಿಸಿದ

ಮನಸ್ಸಿಗೆ ಸಂಬಂಧಪಟ್ಟಿದ್ದಲ್ಲ. ಅನುಮಿತಮನಸ್ಸಿಗೂ ಅನುಭೂತಮನಸ್ಸಿಗೂ ಬಹಳ ತಾರತಮ್ಯವಿದೆ. ಅನುಮಿತವಾದ ಮನಸ್ಸೂ ಹಾಗೆಯೇ ಇದೆ ಎಂದು ನಾವು ನಿರ್ಧರಿಸಿ ಹೇಳುವದಕ್ಕಿಲ್ಲ; ಏಕೆಂದರೆ ನಾಟಕದವರು ಮಾಡುವ ಅಭಿನಯಗಳೂ ಮೋಸಗಾರರು ಮಾಡುವ ಅಭಿನಯಗಳೂ ಅವರ ಮನಸ್ಸಿನ ನಿಜವಾದ ಸ್ಥಿತಿಯ ಗುರುತುಗಳಾಗಿರುವವೆಂಬುದಕ್ಕೆ ಪ್ರಮಾಣವೇನೂ ಇರುವದಿಲ್ಲ. ಆದರೆ ಅನುಭೂತವಾದ ಮನಸ್ಸು ಇಂಥದ್ದಲ್ಲ; ಅದು ಹಾಗಿದೆ ಎಂಬುದು ನಮ್ಮ ನಮ್ಮ ಅನುಭವದ ಭದ್ರವಾದ ಅಡಿಗಲ್ಲಿನ ಮೇಲೆ ನಿಂತಿರುತ್ತದೆ.

ಈಗ ಪ್ರಕೃತದಲ್ಲಿ ಹೇಳುವ ಅಮಾನಿತ್ವಾದಿಸಾಧನಗಳು ಮತ್ತೊಬ್ಬರ ಬಾಹ್ಯಚೇಷ್ಟೆಗಳಿಂದ ಅನುಮಾನಿಸಿದ ಮನಸ್ಸಿಗೆ ಸಂಬಂಧಪಟ್ಟಿರುವದಿಲ್ಲ. ನಮ್ಮ ನಮ್ಮ ಮನಸ್ಸಿಗೆ ಸಂಬಂಧಪಟ್ಟಿರುತ್ತವೆ. ಈ ಅಧ್ಯಾತ್ಮಸಾಧನಗಳನ್ನು ಆತ್ಮವಂಚನೆಯಿಲ್ಲದೆ ನಾವು ನಾವೇ ಅಳವಡಿಸಿಕೊಂಡು ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ಸಾಧನವೆಂಬುದೊಂದು ನೆಪ ; ಆ ನೆಪದಿಂದ ನಮ್ಮಲ್ಲಿಯೇ ಅಡಗಿರುವ ತತ್ತ್ವವನ್ನು ನಾವು ಕಂಡುಕೊಳ್ಳಬೇಕಾಗಿರುತ್ತದೆ. ಆಗ ಸಾಧನದ ಪ್ರಯೋಜನವು ಆದಂತೆ ಆಯಿತು. ನಾವು ``ನಾನೇ ಅರ್ಜುನನು, ಈ ಶರೀರರಥದಲ್ಲಿ ಕುಳಿತಿದ್ದೇನೆ; ಶ್ರೀ ಕೃಷ್ಣನು ನನಗೆ ಈ ಗೀತೆಯನ್ನು ಉಪದೇಶಿಸುತ್ತಿರುತ್ತಾನೆ" ಎಂಬ ಭಾವನೆಯಿಂದ ಶ್ರದ್ಧಾಭಕ್ತಿಗಳನ್ನು ಕೂಡಿಕೊಂಡು ದೃಢವ್ರತರಾಗಿ ಸಾಧನೆಯನ್ನು ಆರಂಭಿಸಬೇಕು. ಈ ಸಾಧನೆಗಳೆಲ್ಲ ಅಂತಃಕರಣಕ್ಕೆ ಸೇರಿರುತ್ತವೆ. ನಾವು ತಪ್ಪಾಗಿ ತಿಳಿದುಕೊಂಡಿರುವದು ಅಂತಃ ಕರಣದಲ್ಲಿ ; ಸರಿಯಾಗಿ ಅರಿತುಕೊಳ್ಳಬೇಕಾಗಿರುವದೂ ಅಂತಃಕರಣದಲ್ಲಿ. ಅಂತಃಕರಣದಲ್ಲಿ ಅವ್ಯಕ್ತವಾಗಿ ಕುಳಿತಿರುವ ಅಜ್ಞಾನಕ್ಕೆ ಜ್ಞಾನವೆಂಬ ಔಷಧಿಯು ಬೇಕಾಗಿರುತ್ತದೆ. ನಮ್ಮ ಅಂತಃ ಕರಣದಲ್ಲಿ ಕಾಮವು ತುಂಬಿಕೊಂಡಿದೆ ; ಆ ಕಾಮದ ಹಿಂದೆ ಅವ್ಯಕ್ತವಾಗಿ ಅಜ್ಞಾನವು ಕುಳಿತುಕೊಂಡಿರುತ್ತದೆ. ಅಮಾನಿತ್ವಾದಿಗಳೆಂಬ ಜ್ಞಾನಸಾಧನಗಳನ್ನು ಉಪಯೋಗಿಸಿಕೊಂಡು ಅಜ್ಞಾನವನ್ನು ಅಲ್ಲಾಡಿಸಬೇಕು. ಹಾಗಾದರೆ ಕಾಲಕ್ರಮದಲ್ಲಿ ಅದು ಹಾರಿಹೋಗುವದು. ಜ್ಞಾನದ ನೆಂಟರಾದ ಅಮಾನಿತ್ವಾದಿಗಳು ಒಳಗೆ ಸೇರಿದರೆ ಅವಿದ್ಯೆಯ ನೆಂಟರಾದ ಕಾಮಾದಿಗಳು ಮೆಲ್ಲಗೆ ಜಾಗಬಿಡುತ್ತವೆ ; ಕೊನೆಗೆ ಅವಿದ್ಯೆಯೂ ಓಡುತ್ತದೆ. ಆದ್ದರಿಂದ ಅಮಾನಿತ್ವಾದಿಗಳನ್ನು ಈಗ ಪರಿಶೀಲಿಸುವದಕ್ಕೆ ಪ್ರಾರಂಭಿಸೋಣ.



# ೯೭. ಅಮಾನಿತ್ವ 13 - (7)
## (5-9-48)

ಕ್ಷೇತ್ರದ ಸ್ವರೂಪವನ್ನೂ ಅದರ ವಿಕಾರವನ್ನೂ ವಿವರಿಸಿದ್ದಾಗಿದೆ. ಅದನ್ನು ಸುಮ್ಮನೆ ಓದಿ ತಿಳಿದರೆ ಸಾಲದು. ಅದು ನಾನು - ಎಂಬ ಅಭಿಮಾನದಿಂದ ಆಗಿರುವ ಅನರ್ಥವನ್ನೂ ಅದರ ಅಭಿಮಾನವು ತಪ್ಪಿದರೆ ಆಗಬಹುದಾದ ಪುರುಷಾರ್ಥವನ್ನೂ ಅನುಭವದಿಂದ ಕಂಡುಕೊಳ್ಳಬೇಕು. ಪಿಶಾಚಿ ಎಂಬ ಶಬ್ದದಿಂದ ಅದರ ತಿಳಿವಳಿಕೆಯಾಗಲಾರದು; ಅದು ನಮ್ಮಲ್ಲಿ ಆವೇಶವಾಗಿ ಅದರ ಆಟವನ್ನು ಅನುಭವಿಸಿದ ಮೇಲೆ ಅದನ್ನು ಬಲ್ಲೆವೆಂದು ಹೇಳಬಹುದು. ಶ್ರೀ ವಿವೇಕಾನಂದಸ್ವಾಮಿಗಳು ಒಂದಾನೊಂದುವೇಳೆ ಮರುಭೂಮಿಯ ಬಳಿಯಲ್ಲಿ ಸಂಚರಿಸುತ್ತಿದ್ದರಂತೆ. ಅವರಿಗೆ ಬಹಳ ಬಾಯಾರಿಕೆಯಾಗಲು ಮುಂದೆಯೇ ಇದ್ದ ನೀರನ್ನು ಕುಡಿಯಬೇಕೆಂದು ಆ ಕಡೆಗೆ ಹೋದರು. ಆದರೆ ಅಷ್ಟು ಹತ್ತಿರವಿದ್ದಂತೆ ಕಾಣುತ್ತಿದ್ದ ನೀರು ಎಷ್ಟು ದೂರ ಹೋದರೂ ಸಿಕ್ಕಲಿಲ್ಲ. ಆಗ ತಟ್ಟನೆ ಅವರಿಗೆ ಹೊಳೆಯಿತು. ``ಆಹಾ! ಇದೇ ಮೃಗಮರೀಚಿಕೆ - ಬಿಸಿಲು ಕುದುರೆ - ಎಂದು ಪುಸ್ತಕಗಳಲ್ಲಿ ವರ್ಣಿಸಿರುವದು. ಹಾಗಾದರೆ ಕೆಲವು ದಿನಗಳಿಂದ ನಾನು ನೀರಿನ ಬಳಿಯಲ್ಲಿಯೇ ಪ್ರಯಾಣಮಾಡುತ್ತಿದ್ದೇನೆಂದು ತಿಳಿದುಕೊಂಡಿದ್ದದ್ದು ಸುಳ್ಳೇ ಆಯಿತಲ್ಲ!" ಎಂದು ಅವರು ಅಂದುಕೊಂಡರಂತೆ! ಹೊಟ್ಟೆನೋವು ಮುಂತಾದವುಗಳನ್ನು ಸಾಮಾನ್ಯವಾಗಿ ಕೇಳಿ ಅರಿಯುವದಕ್ಕೂ ಅವನ್ನು ತಾವೇ ಅನುಭವಿಸುತ್ತಿರುವವರು ಅರಿಯುವದಕ್ಕೂ ಎಷ್ಟು ಹೆಚ್ಚು ಕಡಿಮೆಯಿದೆ !

ಶರೀರವು ತಾವೆಂದು ತಿಳಿದಿರುವವರಿಗೆ ಆಪಾದತಲಮಸ್ತಕವಾಗಿ ಎಲ್ಲೆಲ್ಲಿಯೂ ಅಭಿಮಾನವಿರುತ್ತದೆ. ಆದರೆ ಹುಣ್ಣು, ಕೈಕಾಲುಗಳ ಭಾಗ - ಮುಂತಾದವುಗಳನ್ನು ಶಸ್ತ್ರಚಿಕಿತ್ಸೆಯಿಂದ ತೆಗೆದುಹಾಕಿಸಿಕೊಂಡವರಿಗೆ ಉಳಿದ ಭಾಗದಲ್ಲಿಯೇ ನಾನು ಎಂಬ ಅಭಿಮಾನವು ತುಂಬಿಕೊಂಡಿರುತ್ತದೆ. ಆ ತೆಗೆದುಹಾಕಿದ ಶರೀರಭಾಗವು ತಮ್ಮೆದುರಿಗೇ ಬಿದ್ದಿದ್ದರೂ ಅದರಲ್ಲಿ ನಾನು ಎಂಬ ಅಭಿಮಾನವು ಹಾರಿಹೋಗಿರುತ್ತದೆ. ಶರೀರದ ವಿವರವನ್ನು - ಇದೆಲ್ಲವೂ ಕ್ಷೇತ್ರವೇ, ಕ್ಷೇತ್ರಜ್ಞನಾದ ನನ್ನ ಸ್ವರೂಪಕ್ಕೆ ಸೇರಿದ್ದಲ್ಲ ಎಂದು- ಬಿಡಿಸಿ ತಿಳಿದುಕೊಂಡವನಿಗೂ ಇದರಂತೆ ಶರೀರದಲ್ಲಿ ಮೊದಲು ಇದ್ದ ಅಭಿಮಾನವು ಹೋಗಿಬಿಟ್ಟಿರುತ್ತದೆ. ಶರೀರವು ನಮ್ಮದಲ್ಲದಿದ್ದರೂ ನಮ್ಮದೆಂದು ತಿಳಿದಿದ್ದರೆ ಸಾಕು, ಅದು ಮಾಡುವ ಅನರ್ಥವನ್ನೆಲ್ಲ ಮಾಡಿಯೇಬಿಡುತ್ತದೆ. ಎಚ್ಚರದ ಶರೀರದಲ್ಲಿ ಹೇಗೋ ಹಾಗೆಯೇ ಕನಸಿನಲ್ಲಿ ತತ್ಕಾಲಕ್ಕೆ ಕಾಣಿಸಿಕೊಂಡ ಶರೀರದಲ್ಲಿಯೂ ನಮಗೆ ಅಭಿಮಾನವುಂಟಾಗಿರುತ್ತದೆ - ಎಂಬುದು ನಮ್ಮೆಲ್ಲರ ಅನುಭವದಲ್ಲಿಯೂ ಇರುತ್ತದೆ. ಕ್ಷೇತ್ರವು ನಮ್ಮ ಮೇಲೆ ತನ್ನ ಅಧಿಕಾರವನ್ನು ಹೇಗೆ ಚಲಾಯಿಸುತ್ತಿದೆ ಎಂಬುದನ್ನು ಮನವರಿಕೆಮಾಡಿಕೊಂಡು, ಅದು ನಿಜವಾಗಿ ಅನಾತ್ಮವೇ ಎಂಬ ತಿಳಿವಳಿಕೆಯನ್ನು ವಿಚಾರದಿಂದ ಸಂಪಾದಿಸಿಕೊಂಡು, ಅದನ್ನು

ಕೊಡವಿಕೊಳ್ಳುವ ಬಗೆಯನ್ನು ಕಲಿಯಬೇಕು. ಈ ಶರೀರವನ್ನು ಹೀಗೆ ಕೈಬಿಡುವದಕ್ಕಾಗಿಯೇ ಅದರ ತಿಳಿವಳಿಕೆಯು ಬೇಕಾಗಿರುವದು.

ಕ್ಷೇತ್ರಜ್ಞನನ್ನು ನಿಜವಾಗಿ ಅರಿತುಕೊಳ್ಳಬೇಕು. ಕ್ಷೇತ್ರಜ್ಞನ ಜ್ಞಾನವೇ ನಮ್ಮ ಪರಮಪುರುಷಾರ್ಥಕ್ಕೆ ಕಾರಣವಾಗಿರುತ್ತದೆ. ಆದರೆ ಈ ಜ್ಞಾನಕ್ಕೆ ಅಧಿಕಾರವು ಅವಶ್ಯ. ಯಾವನು ಕ್ಷೇತ್ರವು ಹುರುಳಿಲ್ಲವೆಂದು ತಿಳಿದು ಅದರಿಂದ ಹಿಂತಿರುಗುವನೋ ಅವನೇ ಕ್ಷೇತ್ರಜ್ಞನ ಜ್ಞಾನಕ್ಕೆ ಅಧಿಕಾರಿಯು. ಕ್ಷೇತ್ರವನ್ನು ತಾನೆಂದು ಭ್ರಮಿಸುವವನು ಅದು ಬೇಕು, ಇದು ಬೇಕು - ಎಂದು ಮುನ್ನುಗ್ಗುತ್ತಿರುವನು. ಈ ಪ್ರವೃತ್ತಿಯನ್ನು ತಡೆದುಕೊಂಡು ಕ್ಷೇತ್ರದಲ್ಲಿ ಅನಾಸ್ಥೆಯಿಂದ, ಹೊರಗಿನ ವಿಷಯಗಳ ವಿಚಾರದಲ್ಲಿ ಉದಾಸೀನನಾಗಿ ಹಿಂತಿರುಗುವದೇ ವೈರಾಗ್ಯವು. ಆತ್ಮವಸ್ತುವನ್ನು ಕೇಳಿ ಅದಕ್ಕಾಗಿ ಹವಣಿಸುತ್ತಿರಬೇಕು. ವಿಷಯಗಳನ್ನು ನಾವು ಬಿಟ್ಟರೂ ಅವು ನಮ್ಮನ್ನು ಬಿಡುವದಿಲ್ಲ. ಅವನ್ನು ಬಿಡುವದಕ್ಕೆ ಕೆಲವು ಉಪಾಯಗಳಿವೆ ; ಅವು ಹೊರಗಿನ ಪ್ರವೃತ್ತಿಯನ್ನು ಕಡಿಮೆಮಾಡುವದಿಷ್ಟೇ ಅಲ್ಲ, ಆತ್ಮಜ್ಞಾನದ ಹಂಬಲನ್ನೂ ಹೆಚ್ಚಿಸುತ್ತವೆ. ಈ ಉಪಾಯಗಳ ಪಟ್ಟಿಯೂ ವೈದ್ಯರ ರೋಗ ನಿಧಾನ ಚಿಕಿತ್ಸಾದಿಗಳ ಪಟ್ಟಿಯಂತೆ ಇರುತ್ತದೆ. ನಾವು ನಾವು ನಮನಮಗೆ ತಕ್ಕ ಉಪಾಯವನ್ನು ಆರಿಸಿಕೊಂಡು ಅನುಷ್ಠಾನಮಾಡಿ ಕೃತಾರ್ಥರಾಗಬೇಕಾಗಿದೆ. ಈಗ ಉಪಾಯಗಳ ಪಟ್ಟಿಯನ್ನು ಸ್ವಲ್ಪ ನೋಡೋಣ.

ಈ ಪಟ್ಟಿಯಲ್ಲಿ ಅಮಾನಿತ್ವವೆಂಬುದು ಮೊದಲನೆಯದು. ಇಲ್ಲಿ ಕೊಟ್ಟಿರುವ ಸಾಧನಗಳ ವಿಷಯದಲ್ಲಿ ಸಾಮಾನ್ಯವಾಗಿ ಕೆಲವು ವಿಷಯಗಳನ್ನು ಮೊದಲೇ ತಿಳಿಸಿರುವದು ಒಳ್ಳೆಯದು. ಮೊದಲನೆಯದಾಗಿ ಇವೆಲ್ಲವೂ ನಿವೃತ್ತಿ ಧರ್ಮವನ್ನು ಹೇಳುತ್ತವೆ. ಉದಾಹರಣೆಗೆ ಅಮಾನಿತ್ವ ನಿವೃತ್ತಿರೂಪವೆಂದು, ಅಭಾವರೂಪವೆಂದು, ಭಾವಿಸಕೂಡದು. ಉದಾಹರಣೆಗೆ ಅಮಾನಿತ್ವ ಎಂದರೆ ಮಾನಿತ್ವದ ಅಭಾವ ಎಂದಿಷ್ಟೇ ಅರ್ಥವಲ್ಲ; ಇದನ್ನು ವಿಧಿಮುಖವಾದ ಒಂದಾನೊಂದು ಧರ್ಮವೆಂದು ತಿಳಿಯಬೇಕು. ಎರಡನೆಯದಾಗಿ ಮಾನಿತ್ವಕ್ಕೆ ಪ್ರತಿಪಕ್ಷವಾದ ಒಂದಾನೊಂದು ವೃತ್ತಿಯೇ ಅಮಾನಿತ್ವವೆಂಬುದು. ಹೀಗೆಯೇ ಅದಂಭಿತ್ವ ಮುಂತಾದವುಗಳನ್ನೂ ಅರಿಯಬೇಕು. ಧರ್ಮ, ಅಧರ್ಮ - ಮುಂತಾದ ದ್ವಂದ್ವಶಬ್ದಗಳಲ್ಲಿ ಅಧರ್ಮವೆಂದರೆ ಧರ್ಮಕ್ಕೆ ವಿರುದ್ಧವಾದ ಪಾಪಕರ್ಮವೆಂದೇ ಹೇಗೆ ತಿಳಿಯುವೆವೋ ಹಾಗಯೇ ಇಲ್ಲಿಯೂ ತಿಳಿಯಬೇಕು. ನಮ್ಮಲ್ಲಿ ಮಾನಿತ್ವ, ದಂಭಿತ್ವ-ಮುಂತಾದ ದುರ್ಗುಣಗಳ ವಾಸನೆಗಳು ಸಹಜವಾಗಿ ವಾಸಮಾಡಿಕೊಂಡಿರುವವು. ಇವು ಆತ್ಮಜ್ಞಾನಕ್ಕೆ ಅಡ್ಡಿಯಾಗಿರುತ್ತವೆ. ಇವುಗಳನ್ನು ಕಳೆದುಕೊಳ್ಳುವದಕ್ಕಾಗಿ ಇವುಗಳಿಗೆ ಪ್ರತಿಪಕ್ಷವಾಗಿರುವ ಅಮಾನಿತ್ವ, ಅದಂಭಿತ್ವ - ಎಂಬ ವೃತ್ತಿಗಳನ್ನು ನಾವು ಪ್ರಯತ್ನಪೂರ್ವಕವಾಗಿ ಸಂಪಾದಿಸಿಕೊಳ್ಳಬೇಕು.

ಮೂರನೆಯದಾಗಿ ಈ ಧರ್ಮಗಳನ್ನು ನಾವು ಪ್ರಯತ್ನವನ್ನು ಮಾಡಿ ಸಂಪಾದಿಸಿಕೊಳ್ಳಬೇಕಾಗಿರುವದಾದರೂ ಜ್ಞಾನಿಗಳಲ್ಲಿ ಇವು ಸ್ವಾಭಾವಿಕವಾಗಿರುವ

ಲಕ್ಷಣವಾಗಿರುತ್ತವೆ. ಈ ಧರ್ಮಗಳಲ್ಲಿಯೇ ನೆಲೆನಿಂತವರನ್ನೇ ಜ್ಞಾನನಿಷ್ಠರು ಎಂದು ಕರೆಯುತ್ತಾರೆ. ದೊಡ್ಡವರಲ್ಲಿರುವ ಗುಣಗಳನ್ನು ನೋಡಿ ಮಕ್ಕಳು ಅನುಕರಣ ಮಾಡಬೇಕಾಗಿರುವಂತೆ ಜ್ಞಾನಿಗಳನ್ನು ನೋಡಿ ನಾವು - ಕನ್ನಡಿಯಲ್ಲಿ ನಮ್ಮ ಮುಖದ ದೋಷವನ್ನು ಕಂಡುಕೊಂಡು ಸರಿಪಡಿಸಿಕೊಳ್ಳುವಂತೆ - ಆ ದೊಡ್ಡವರ ಅನುಕರಣೆಯಿಂದ ಸಾಧನಗಳನ್ನು ಅಳವಡಿಸಿಕೊಳ್ಳಬೇಕಾಗಿರುತ್ತದೆ.

ನಾಲ್ಕನೆಯದಾಗಿ ಈ ಗುಣಗಳ ಪರಾಕಾಷ್ಠೆಯು ಆತ್ಮಸ್ವರೂಪವೇ ಆಗಿರುತ್ತದೆ. ನಮ್ಮ ಮನಸ್ಸಿನ ಒಂದಾನೊಂದು ವೃತ್ತಿಗೆ ಅಮಾನಿತ್ವವೆಂದು ಹೆಸರಾದರೂ ಆ ವೃತ್ತಿಯ ಕೊನೆಯಲ್ಲಿ ಫಲರೂಪವಾಗಿ ಕಾಣುವ ಚೈತನ್ಯವೇ ನಿಜವಾಗಿ ಅಮಾನಿತ್ವಶಬ್ದದ ಲಕ್ಷ್ಯಾರ್ಥವು. ಆ ಪರಮಾತ್ಮಸ್ವರೂಪವೇ ತಾವೆಂದು ಸಹಜವಾಗಿ ಅನುಸಂಧಾನಮಾಡುತ್ತಿರುವದೇ ಜ್ಞಾನಿಗಳ ಅಮೃತತತ್ವಕ್ಕೆ ಕಾರಣವಾಗಿರುತ್ತದೆ. ಅಮಾನಿತ್ವಾದಿಗಳು ಸಾಧಕನಿಗೆ ಮೊದಮೊದಲು ಹೊಸದಾಗಿರುತ್ತವೆ. ಅವುಗಳನ್ನು ಅಭ್ಯಾಸಮಾಡುತ್ತಿದ್ದರೂ ಮತ್ತೆ ಮತ್ತೆ ತಪ್ಪಿಹೋಗುತ್ತಿರುತ್ತವೆ. ಆದರೆ ಮತ್ತೆ ಮತ್ತೆ ಅವುಗಳನ್ನು ಅಭ್ಯಾಸಮಾಡುತ್ತಾ ಬಂದಹಾಗೆಲ್ಲ ಅವು ವಶವಾಗುತ್ತಾ ಬರುತ್ತವೆ. ಅತ್ತೆಯ ಮನೆಯು ತನಗೆ ಹೊಸಬರ ಮನೆಯೆಂದು ಭಾವಿಸುವ ಸೊಸೆಯೇ ಕೆಲವು ವರ್ಷಗಳಲ್ಲಿ ತಾನು ಅದೇ ಕುಟುಂಬಕ್ಕೆ ಸೇರಿದವಳೆಂಬ ಭಾವನೆಯನ್ನು ಮನಸ್ಸಿನಲ್ಲಿ ಮಾಡಿಕೊಳ್ಳುವಂತೆ ಸಾಧಕನು ಈ ಸಾಧನೆಗಳಿಗೆಲ್ಲ ಪರಮಾತ್ಮನೇ ಮೂಲವೆಂಬುದನ್ನು ಮನಸ್ಸಿಗೆ ತಂದುಕೊಂಡಂತೆಲ್ಲ ಆತ್ಮಭಾವನೆಯಿಂದ ಅವನಲ್ಲಿಯೇ ನಿಷ್ಠೆಯನ್ನು ಹೊಂದುವ ಯೋಗ್ಯತೆಯನ್ನು ಪಡೆದುಕೊಳ್ಳುತ್ತಾನೆ. ಕೊನೆಗೆ ಇವುಗಳೆಲ್ಲ ಅವನಿಗೆ ಸಹಜವಾಗಿಬಿಡುತ್ತವೆ. ಇಷ್ಟೇ ಅಲ್ಲ. ಅಮಾನಿತ್ವ, ಅದಂಭಿತ್ವ - ಮುಂತಾದ ಇಲ್ಲಿ ಹೇಳಿರುವ ಸಾಧನಗಳೆಲ್ಲವೂ ಹೊಂದುಗೆಯಿಂದ ಕೂಡಿಕೊಂಡು ಅವನಲ್ಲಿ ನಿಂತುಬಿಡುತ್ತವೆ. ಭಗವಂತನು ಸಕಲಗುಣಗಳಿಗೂ ಗನಿಯಂತೆ ಆಶ್ರಯನಾಗಿರುತ್ತಾನೆ ; ಆತನಲ್ಲಿಯೇ ಅನನ್ಯಭಾವವನ್ನಿಟ್ಟುಕೊಂಡವನಿಗೆ ಯಾವ ಗುಣವು ತಾನೆ ವಶವಾಗಲಾರದು?

ಭಗವಂತನಲ್ಲಿ ಅನನ್ಯಭಕ್ತಿಯಿನ್ನಿಡುವದಕ್ಕೆ ಕಲಿಯಬೇಕೆನ್ನುವವನು ಭಗವದ್ಭಕ್ತರಲ್ಲಿ ಭಕ್ತಿಯನ್ನಿಡುವದನ್ನು ಮೊದಲು ಕಲಿತುಕೊಳ್ಳಬೇಕು. ಏಕೆಂದರೆ ಭಗವಂತನಲ್ಲಿ ಹೇಗೆ ಎಲ್ಲಾ ಕಲ್ಯಾಣಗುಣಗಳೂ ಸ್ವಾಭಾವಿಕವಾಗಿರುವವೋ ಹಾಗೆಯೇ ಭಕ್ತರಲ್ಲಿಯೂ ಅವು ನೆಲಸಿರುತ್ತವೆ. ಭಗವದ್ಭಕ್ತರೇ ನಮಗೆ ಭಗವಂತನ ಸ್ವರೂಪಕ್ಕೆ ಪ್ರತಿನಿಧಿಯಾಗಿರುವವರು; ಅವರ ಮೂಲಕವಾಗಿಯೇ ಸಾಧಕನು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬೇಕಾಗಿರುತ್ತದೆ. ಉದಾಹರಣೆಗೆ ಅಮಾನಿತ್ವವನ್ನು ಇಲ್ಲಿ ತೆಗೆದುಕೊಳ್ಳೋಣ. ಭಗವಂತನಿಗೆ 'ಅಮಾನೀ' ಎಂದೇ ಹೆಸರು. ವಿಷ್ಣುಸಹಸ್ರನಾಮದಲ್ಲಿ `ಅಮಾನೀ ಮಾನದೋ' ಎಂದು ಹೊಗಳಿರುವದನ್ನು ನೆನಪಿಗೆ ತಂದುಕೊಳ್ಳಿರಿ. ಭಕ್ತರು ಆ ಭಗವಂತನಲ್ಲಿ ತಾದಾತ್ಮ್ಯವನ್ನು ಹೊಂದಿರುವದರಿಂದ ಅವರಲ್ಲಿ ಭಗವಂತನ ಅಮಾನಿತ್ವವು ಪ್ರತಿಬಿಂಬಿಸಿರುತ್ತದೆ. ಭಕ್ತರಲ್ಲಿ ಹೊರಸೂಸುತ್ತಿರುವ ಅಮಾನಿತ್ವವನ್ನು

ಕಂಡುಕೊಂಡು ಸಾಧಕನಾದವನು ತಾನು ಅವರನ್ನು ಅನುಕರಿಸಿ ಈ ಗುಣವನ್ನು ಸಂಪಾದಿಸಿಕೊಳ್ಳಬೇಕು.

ಅಮಾನಿತ್ವವು ಮೇಲೆ ವಿವರಿಸಿರುವಂತೆ ನಿವೃತ್ತಿರೂಪವಾಗಿರುತ್ತದೆ. ಎಂಬುದನ್ನು ನಾವು ಮೊದಲು ಲಕ್ಷ್ಯದಲ್ಲಿಡಬೇಕು. ಮಾನಿತ್ವದಿಂದ ಹಿಂದಿರುಗುವದು ಅಮಾನಿತ್ವದ ಮೊದಲನೆಯ ಲಕ್ಷಣವು. ಮಾನಿ ಎಂದರೇನು? ಅಭಿಮಾನವಿರುವವನು; ಕ್ಷೇತ್ರವನ್ನೇ, ಶರೀರವನ್ನೇ, ತಾನೆಂದು ತಿಳಿದುಕೊಂಡಿರುವವನು. ನಮಗೆ ನಮ್ಮ ಶರೀರದಲ್ಲಿ ಮಾತ್ರವಲ್ಲ; ನಮ್ಮ ಶರೀರಕ್ಕೆ ಸಂಬಂಧಪಟ್ಟಿರುವ ಎಲ್ಲದರಲ್ಲಿಯೂ ಅಭಿಮಾನವಿರುತ್ತದೆ. ನನ್ನ ಬಟ್ಟೆ, ನನ್ನ ಮನೆ, ನನ್ನ ಮಕ್ಕಳು, ನನ್ನ ಸ್ನೇಹಿತರು, ನಮ್ಮ ದೇಶ - ಎಲ್ಲದರಲ್ಲಿಯೂ ನನಗೆ ಅಭಿಮಾನವಿರುತ್ತದೆ. ನನ್ನ ಮಾತು, ನನ್ನ ಬರವಣಿಗೆ, ನನ್ನ ವಿದ್ಯೆ, ನನ್ನ ನಡತೆ - ಇವುಗಳಲ್ಲಿ ಹೇಳುವದೇನು? ಇವೆಲ್ಲ ಕ್ಷೇತ್ರವೇ, ಇವುಗಳಲ್ಲಿ ನನಗೆ ಅಭಿಮಾನವಿಲ್ಲ ಎಂದು ಹೇಳಿಕೊಳ್ಳುವದು ಸುಲಭ; ಆದರೆ ಸ್ವಲ್ಪ ರೇಗಿಸಿದರೆ, ನಮ್ಮ ಅಭಿಮಾನಕ್ಕೆ ಪಾತ್ರವಾಗಿರುವದನ್ನು ಯಾರಾದರೂ ಚುಚ್ಚಿದರೆ ಆಗ ಅದು ಎದ್ದುಕೊಳ್ಳುವದು. ಅಭಿಮಾನವು ವ್ಯಕ್ತವಾಗಿರಲಿ, ಅವ್ಯಕ್ತವಾಗಿರಲಿ, ಅಭಿಮಾನವೇ, ಅಭಿಮಾನವಿಲ್ಲದವನು ಯಾವನಿದಾನೆ? ಜೀವಮಾತ್ರಕ್ಕೆ ಅಭಿಮಾನವಿರುತ್ತದೆ. ಜೀವನೆಂದರೆ ಏನು? ಪ್ರಾಣಧಾರಣೆ ಮಾಡಿರುವವನು. ತಾನು ಬದುಕಿರಬೇಕು ಎಂದು ಪ್ರಾಣಕ್ಕೆ ಅಂಟಿಕೊಳ್ಳದೆ ಇರುವ ನಿರಭಿಮಾನಿಯಾದ ಜೀವನು ಎಲ್ಲಿರುತ್ತಾನೆ? ನಾವು ಎಲ್ಲರೂ ಅಭಿಮಾನಿಗಳೇ, ನಮಗೆ ಯಾವಯಾವದರಲ್ಲಿ ಅಭಿಮಾನವಿದೆಯೋ ಅದೆಲ್ಲವೂ ಕ್ಷೇತ್ರವೇ. ಕ್ಷೇತ್ರದ ಅಭಿಮಾನವನ್ನು ಬಿಟ್ಟಹೊರತು ನಿಜವಾದ ಕ್ಷೇತ್ರಸ್ವರೂಪವನ್ನು ತಿಳಿಯುವದು ಆಗುವದಿಲ್ಲ. ಸರ್ವಥಾ ಸರ್ವಾಭಿಮಾನವನ್ನೂ ಬಿಡುವುದಕ್ಕೆ ಆಗದೆ ಇದ್ದರೂ ಸ್ವಲ್ಪಸ್ವಲ್ಪವಾಗಿಯಾದರೂ ಬಿಡುವದಕ್ಕೆ ಯತ್ನಿಸಬೇಕು. ಇದು ಅಮಾನಿತ್ವದ ಮೊದಲನೆಯ ಮೆಟ್ಟಲು.

ಮೊಟ್ಟ ಮೊದಲು ಕ್ಷೇತ್ರದ ಕಡೆಗೂ, ಕ್ಷೇತ್ರಕ್ಕೆ ಸಂಬಂಧಪಟ್ಟ ದೇಹದ ಮೂಲಕವಾಗಿ ನನ್ನದು ಎಂದು ನಾವು ಭಾವಿಸುವ ವಿಷಯದ ಕಡೆಗೂ, ವಾಲುವ ಅಭಿಮಾನವನ್ನು ಬಿಡುವ ಪ್ರಯತ್ನವನ್ನು ಮಾಡಬೇಕು; ಆ ಮೇಲೆ ಅವ್ಯಕ್ತವಾಗಿದ್ದು ಆಗಾಗ್ಗೆ ವ್ಯಕ್ತವಾಗಿ ತೋರಿಕೊಳ್ಳುವ ಅಭಿಮಾನವನ್ನು ಬಿಡುವದಕ್ಕೆ ಎಚ್ಚರಿಕೆಯಿಂದ ಕಾಯ್ದುಕೊಂಡಿರುವ ಪ್ರಯತ್ನವನ್ನು ಮಾಡುತ್ತಿರಬೇಕು. ಈ ಎರಡು ಅಭ್ಯಾಸಗಳನ್ನೂ ಕೆಲವು ದಿನಗಳವರೆಗೆ ಮಾಡಿದ ಬಳಿಕ ಅಭಿಮಾನಕ್ಕೆ ಪ್ರತಿಕ್ರಿಯೆಯನ್ನು ಮಾಡುವದಕ್ಕೆ, ಅದಕ್ಕೆ ವಿರುದ್ಧವಾದ ಸ್ವಭಾವವನ್ನು ಹಿಡಿಯುವದಕ್ಕೆ ಪ್ರಯತ್ನಿಸಬೇಕು. ಎಲ್ಲದರಲ್ಲಿಯೂ ನಾನು, ನನ್ನದು - ಎಂಬ ಅಭಿಮಾನವನ್ನು ಮುಂದುಮಾಡುವ ಪ್ರಸಕ್ತಿ ಬಂದಾಗಲೆಲ್ಲ, ನಾನೆಷ್ಟರವನು? ಹಣ, ವಿದ್ಯೆ, ಬಲ, ಜನಸಹಾಯ, ರೂಪ, ಕುಲ - ಎಲ್ಲದರಲ್ಲಿಯೂ ನನ್ನನ್ನು ಮೆಟ್ಟಿಹಾಕಿದವರು ಎಷ್ಟು ಜನರಿಲ್ಲ? ದೈವವಶದಿಂದ ಇವುಗಳಲ್ಲಿ ಯಾವದಾದರೊಂದು ನನ್ನಲ್ಲಿ ಸ್ವಲ್ಪಮಟ್ಟಿಗೆ ಇದ್ದಮಾತ್ರದಿಂದ ನಾನೇಕೆ ಹೆಮ್ಮೆಯಿಂದ ಮೆರೆಯಬೇಕು? - ಎಂದು ತನ್ನನ್ನು ತಾನೇ ತಗ್ಗಿಸಿಕೊಳ್ಳುವ ಪ್ರಯತ್ನವೇ ನಿಜವಾದ

ಅಮಾನಿತ್ವವು. ಒಮ್ಮೆ ಬೆಂಗಳೂರಿನ ಸಂಸ್ಕೃತಪಾಠಶಾಲೆಯಲ್ಲಿ ಒಬ್ಬ ಪಂಡಿತರಿದ್ದರು. ಅವರ ಯೋಗ್ಯತೆಯನ್ನು ತಿಳಿಯದೆ ಅಧಿಕಾರಿಗಳು ಅವರನ್ನು ಅಮರಕೋಶದ ಪಾಠವನ್ನು ಹೇಳಿಕೊಡುವದಕ್ಕೆ ನಿಯಮಿಸಿದ್ದರು. ಆದರೆ ಅಲ್ಲಿಗೆ ಮೇಲಿನ ಅಧಿಕಾರಿಗಳು ಬಂದು ವಿಚಾರಿಸಿ ಇವರಿಗೆ ಯಾವದಾದರೊಂದು ಮೇಲಿನ ತರಗತಿಯ ಪಾಠವನ್ನು ಕೊಡಬಾರದೆ? - ಎಂದು ಹೇಳಿದ್ದನ್ನು ಕೇಳಿ ಪಾಠಶಾಲೆಯ ಅಧ್ಯಕ್ಷರು `ಶಾಸ್ತ್ರಿಗಳೆ, ಕಾವ್ಯಪಾಠವನ್ನು ಹೇಳುತ್ತೀರಾ?' ಎಂದು ಪ್ರಶ್ನಿಸಿದರು. ಆಗ ಶಾಸ್ತ್ರಿಗಳು `ಆಗಲಿ' ಎಂದರು. ಮುಂದೆ ಕೆಲವು ದಿನಗಳಾಗಲು ಅವರಿಗೆ ಚಂಪೂಗ್ರಂಥಗಳನ್ನು ಹೇಳಬೇಕೆಂದು ಕೇಳಿದ್ದಕ್ಕೆ `ಆಗಲಿ'! ಎಂದು ಅದನ್ನೂ ಅವರು ಹೇಳುವದಕ್ಕೆ ಪ್ರಾರಂಭಿಸಿದರು. ಕೊನೆಗೆ ವೇದಭಾಷ್ಯವನ್ನು ಹೇಳುವವರೊಬ್ಬರು ಪಾಠಶಾಲೆಗೆ ಬೇಕಾಯಿತು. ಅಧ್ಯಕ್ಷರು ಸ್ವಲ್ಪ ಸಂಶಯದಿಂದ `ಶಾಸ್ತ್ರಿಗಳೇ ವೇದಭಾಷ್ಯವನ್ನು ಹೇಳುವದಕ್ಕಾದೀತೆ?' ಎನ್ನಲು `ಆಗಲಿ' ಎಂದೇ ಪ್ರಾರಂಭಿಸಿದರಂತೆ. ಆ ಮಹನೀಯರ ಅಮಾನಿತ್ವವನ್ನು ಯೋಚಿಸಿನೋಡಿ! ವೇದಭಾಷ್ಯವನ್ನು ಹೇಳುವ ಯೋಗ್ಯತೆ ಇದ್ದರೂ ಅಮರಕೋಶವನ್ನು ಹೇಳುವದಕ್ಕೆ ತನ್ನನ್ನು ನಿಯಮಿಸಿದ್ದಾರೆಂಬ ಜಿಗುಪ್ಸೆಯ ಭಾವವು ಒಮ್ಮೆಯೂ ಅವರ ಹೃದಯದಲ್ಲಿ ಪ್ರವೇಶಿಸಿರಲಿಲ್ಲವಲ್ಲ! ಇದೇ ಅಮಾನಿತ್ವದ ಗುರುತು.

ದೊಡ್ಡವರೆಲ್ಲ ಹೀಗೆಯೇ. ಅವರು ದೊಡ್ಡ ಕೆಲಸಕ್ಕೆ ಹೇಗೋ ಸಣ್ಣ ಕೆಲಸಕ್ಕಾಗಿ ಹಾಗೆಯೇ ಸಿದ್ಧರಾಗಿರುತ್ತಾರೆ. ಅವರಿಗೆ ತಮ್ಮ ಯೋಗ್ಯತೆಗೆ ದೊಡ್ಡದೆಂಬ ಅಭಿಮಾನವಾಗಲಿ ಇಂಥ ಕೀಳುಕೆಲಸವು ತಮಗೆ ಅಪಮಾನಕರವೆಂಬ ಉದ್ವೇಗವಾಗಲಿ ಎಂದಿಗೂ ಉಂಟಾಗುವದಿಲ್ಲ. ಭಗವದ್ಭಕ್ತರಂತೂ ಎಲ್ಲೆಲ್ಲಿಯೂ ಭಗವಂತನನ್ನೇ ಕಾಣುತ್ತಾ, ತಾವು ಭಗವಂತನ ಊಳಿಗದವರಾದ್ದರಿಂದ ಎಲ್ಲರಿಗೂ ಸೇವಕರೆಂಬ ನಿರಭಿಮಾನದ ಭಾವವನ್ನೇ ತೊಟ್ಟಿರುತ್ತಾರೆ. ಅವರ ಸಹವಾಸದಿಂದ ನಮ್ಮಂಥವರಿಗೂ ಆತ್ಮಪರೀಕ್ಷೆಯನ್ನು ಮಾಡುವದಕ್ಕೆ ಮನಸ್ಸು ಒಲಿಯುತ್ತದೆ. ಆಗ ದೋಷಗಳನ್ನು ತಿದ್ದಿಕೊಳ್ಳುವದಕ್ಕೂ ಅಭಿಮಾನವನ್ನು ತಳ್ಳಿಹಾಕಿ ಅದಕ್ಕೆ ಪ್ರತಿಪಕ್ಷವಾದ ಭಾವನೆಯನ್ನು ಅಭ್ಯಾಸ ಮಾಡುವದಕ್ಕೂ ಮುಂದುರಿಯುತ್ತದೆ. ವೈದ್ಯಶಾಸ್ತ್ರದಲ್ಲಿ ರೋಗಿಗಳಿಗೆ ಹೇಳುವ ನಿಯಮಗಳು ಯಾವುವು? ಮೊಟ್ಟಮೊದಲು ಆರೋಗ್ಯಕ್ಕೆ ವಿರುದ್ಧವಾದ ಆಹಾರವಿಹಾರಾದಿಗಳನ್ನು ಬಿಟ್ಟುಬಿಡಬೇಕು; ಪಥ್ಯವನ್ನು ಮಾಡಬೇಕು; ರೋಗವನ್ನು ನಿವಾರಿಸುವದಕ್ಕೆ ಬೇಕಾದ ಔಷಧಿಯನ್ನು ಸೇವಿಸಬೇಕು. ಅಲ್ಲವೆ? ಇದರಂತೆ ಇಲ್ಲಿಯೂ ಅಧ್ಯಾತ್ಮಜೀವನಕ್ಕೆ ವಿರುದ್ಧವಾದ ಅಭಿಮಾನಾದಿಗಳನ್ನು ಬಿಡಬೇಕು; ಭಕ್ತರ ಸಂಗವೇ ಮುಂತಾವುಗಳನ್ನು ಆಚರಿಸಬೇಕು; ಅಮಾನಿತ್ವವೇ ಮುಂತಾದವುಗಳನ್ನು ಕೈಕೊಳ್ಳಬೇಕು. ಇಲ್ಲಿ ಭಗವಂತನು ಅಥವಾ ಅವನಿಗೆ ಪ್ರತಿನಿಧಿಗಳಾದ ಭಕ್ತರೇ ವೈದ್ಯರು; ಅವರು ಹೇಳುವ ಸಾಧನಗಳನ್ನು ಯಥಾವತ್ತಾಗಿ ಮಾಡುತ್ತಾ ಬಂದರೆ ನಾವು ಈ ಭವರೋಗದಿಂದ ಪಾರಾಗಬಹುದು.



# ೯ಅ. ಅದಂಭಿತ್ವ 13 - (7)
## (12-9-48)

ಮನುಷ್ಯನ ಮನಸ್ಸೆಂಬುದು ಗಿಳಿಯಂತೆ ಇದೆ. ಗಿಳಿಯು ಪಂಜರದಲ್ಲಾದರೂ ಕುಳಿತುಕೊಳ್ಳಬಹುದು; ಅಥವಾ ತನಗೆ ಕಟ್ಟಿರುವ ದಾರವನ್ನು ಎಳೆದುಕೊಂಡೇ ದೂರಕ್ಕೆ ಹೋಗಬಹುದು. ಆ ಗಿಳಿಯು ಎಷ್ಟುದೂರ ಹೋದರೆ ತಾನೆ ಅದಕ್ಕೆ ಬಿಡುಗಡೆಯುಂಟೇನು? ನಿಜವಾಗಿ ಅದು ತನ್ನ ಬಂಧನಸ್ಥಾನಕ್ಕೇ ಮತ್ತೆ ಹಿಂತಿರುಗಬೇಕು. ಇದರಂತೆ ಮನಸ್ಸೆಂಬ ಉಪಾಧಿಯುಳ್ಳ ಜೀವನು ಭಗವಂತನಿಗೆ ಕಟ್ಟುಬಿದ್ದಿರುತ್ತಾನೆ.

ಅವನು ಭಗವಂತನನ್ನು ಬಿಟ್ಟು ಹೋಗುವದಕ್ಕೆ ಆಗುವದೇ ಇಲ್ಲ. ಆದರೂ ಬಂಧನಸ್ಥಾನದಿಂದ ಹಾರಿ ಹೊರಕ್ಕೆ ಬಂದಿರುವ ಹಕ್ಕಿಯಂತೆ ಈ ಜೀವನ ಮನಸ್ಸು ಪರಮಾತ್ಮನನ್ನು ಬಿಟ್ಟು ಹೊರಕ್ಕೆ ಬಂದು ಈ ಕ್ಷೇತ್ರದಲ್ಲಿ ಕುಳಿತುಕೊಂಡಿರುತ್ತದೆ. ಇಲ್ಲಿಂದ ಹಿಂದಕ್ಕೆ ಹೊರಟರೆ ಅದು ನೆಟ್ಟಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಕ್ಷೇತ್ರಜ್ಞನೆನಿಸಿಕೊಂಡಿರುವ ಪರಮಾತ್ಮನಲ್ಲಿಯೇ ಹೋಗಿ ಕುಳಿತುಕೊಳ್ಳುತ್ತದೆ. ಆದರೆ ಹೀಗೆ ಪರಮಾತ್ಮನಲ್ಲಿ ವಿಶ್ರಾಂತಿಯನ್ನು ಪಡೆಯುವದಕ್ಕೆ ಅದಕ್ಕೆ ಸಾಧನಗಳು ಬೇಕಾಗಿರುತ್ತವೆ. ಈ ಸಾಧನಗಳೇ ಅಮಾನಿತ್ವಾದಿಗಳು.

ಹಿಂದಿನ ದಿನ ಅಮಾನಿತ್ವವನ್ನು ಕುರಿತು ಹೇಳಿದ್ದಾಗಿದೆ. ಈ ದಿನ **ಅದಂಭಿತ್ವ**ವನ್ನು ಕುರಿತು ಮಾತನಾಡಬೇಕಾಗಿರುತ್ತದೆ. ದಂಭವೆಂದರೇನು? ಇದನ್ನು ಕನ್ನಡದಲ್ಲಿ ಜಂಭ ಎಂದು ಪ್ರಯೋಗಿಸುತ್ತಾರೆ. ದಂಭದ ಗುರುತೇನು? ಶ್ರೀ ಶಂಕರಾಚಾರ್ಯರು `ಧರ್ಮಧ್ವಜಿತ್ವವೇ ದಂಭ' ಎನ್ನುತ್ತಾರೆ. ತಾನು ಧರ್ಮಿಷ್ಠನೆಂದು ತೋರಿಸಿಕೊಳ್ಳುವದೇ ದಂಭವು ಎಂದು ಅವರ ಅಭಿಪ್ರಾಯ. ಆದರೆ ದಂಭವೆಂಬುದು ಧರ್ಮಕ್ಕೆ ಮಾತ್ರ ಅನ್ವಯಿಸುವದಿಲ್ಲ. ತಾನಿರುವದನ್ನು ಜನರಿಗೆ ತೋರ್ಪಡಿಸದೆ ತನ್ನಲ್ಲಿಲ್ಲದ ಯೋಗ್ಯತೆಯು ಇದೆ ಎಂದು ತೋರಿಸಿಕೊಳ್ಳುವದೇ ದಂಭವು. ನಾನು ಇರುವ ಸ್ಥಿತಿಯನ್ನು ತಿಳಿದುಕೊಂಡರೆ ಮತ್ತೊಬ್ಬರು ಏನೆಂದಾರು? ಆದ್ದರಿಂದ ನಾನು ಹೇಗೆ ಕಾಣಿಸಿಕೊಳ್ಳಬೇಕು ಎಂಬುದೇ ದಂಭದ ಭಾವ. ಬಲ, ಐಶ್ವರ್ಯ, ವಿದ್ಯೆ - ಮುಂತಾದವುಗಳಲ್ಲೆಲ್ಲ ದಂಭವಿರುವದಕ್ಕೆ ಅವಕಾಶವಿದೆ. ನಾವು ನಮ್ಮ ಕಣ್ಣಿನಿಂದ ನಮ್ಮನ್ನು ನೋಡಿಕೊಳ್ಳುವದಕ್ಕೆ ಬದಲು ಮತ್ತೊಬ್ಬರ ಕಣ್ಣಿನಿಂದ ನೋಡಿಕೊಳ್ಳುವದೇ ದಂಭವು. ನ್ಯಾಯವಾಗಿ ನಾವು ದಂಭವನ್ನು ಬಿಡಬೇಕಷ್ಟೆ, ಆದರೆ ದಾಂಭಿಕರನ್ನು ಕಂಡರೆ ಮೆಚ್ಚುವದೇ ನಮ್ಮಗಳ ಸ್ವಭಾವವಾಗಿಬಿಟ್ಟಿದೆ. ನಾವು ಹೊರಗಿನ ವೇಷಕ್ಕೆ ಮರುಳಾಗುವೆವು; ನಾವು ಮತ್ತೊಬ್ಬರು ಮೆಚ್ಚುವ ವೇಷವನ್ನು ಧರಿಸಿಕೊಳ್ಳುವದಕ್ಕೆ ಯತ್ನಿಸುವೆವು. ದೊಡ್ಡಮನೆ, ಬೆಲೆಯುಳ್ಳ ವಸ್ತ್ರಾಭರಣಗಳು, ವಾಹನಗಳು, ಆಳುಕಾಳು - ಇವನ್ನು ತೋರಿಸಿಕೊಳ್ಳುವದರಲ್ಲಿ ನಮಗೆ ಅಕ್ಕರೆ ಹೆಚ್ಚು. ಬೀಗರ ಮುಂದೆ ದೊಡ್ಡಸ್ತಿಕೆ ತೋರಿಸಿಕೊಳ್ಳುವ ಆಟವೇ ಇದು.

ಅಧ್ಯಾತ್ಮದೃಷ್ಟಿಯಿಂದ ನೋಡಿದರೆ ದಂಭವೆಂದರೆ ಏನು? ಕ್ಷೇತ್ರಜ್ಞನನ್ನು ಕೈಬಿಟ್ಟು ಕ್ಷೇತ್ರವನ್ನು ಆರಾಧಿಸುವದು; ಸತ್ಯವನ್ನು ಬಿಟ್ಟು ಅಸತ್ಯವನ್ನು ಗೌರವಿಸುವದು. ಕೊನೆಗೆ ಇದರಿಂದ ಯಾವ ಲಾಭವೂ ಇಲ್ಲ. ನಿಜವಾಗಿ ನಮಗೆ ಆಗಿರುವ ಸಂಸಾರಬಂಧವೆಲ್ಲ ಕ್ಷೇತ್ರವನ್ನೇ ಹಿಡಿದುಕೊಂಡಿರುವದರಿಂದ ಆಗಿದೆ. ಇದೇ ದಂಭದ ಫಲವು. ಆದರೂ ನಾವು ದಂಭಕ್ಕೆ ಮನಸೋಲುವದೆಂದರೆ ಎಂಥ ನಾಚಿಕೆಗೇಡು! ನಿಜವಾಗಿ ನೋಡಿದರೆ ಆತ್ಮನ ಅಧೀನವಾಗಿರುವದು ಅನಾತ್ಮವು ; ಹೀಗಿರುವಲ್ಲಿ ನಾವು ಕ್ಷೇತ್ರಜ್ಞನಾದ ಆತ್ಮನನ್ನು ಕೈಬಿಟ್ಟು ಕ್ಷೇತ್ರದಲ್ಲಿಯೇ ನಿಂತರೆ ಹೇಗೆ? ರಾಜನ ದರ್ಶನಕ್ಕೆ ಹೊರಟವನು ಆಳಿನ ದರ್ಶನದಿಂದಲೇ ತೃಪ್ತನಾದರೆ ಏನು ಗತಿ? ಸಕಲಕ್ಷೇತ್ರಗಳಿಗೂ ಆತ್ಮನಾಗಿರುವ ಪರಮಾತ್ಮನನ್ನು ಕಂಡು ಅವನಲ್ಲಿಯೇ ನೆಲೆನಿಲ್ಲುವದಕ್ಕೆ ಸಮರ್ಥವಾಗಿರುವ ಮನಸ್ಸನ್ನು ಕ್ಷೇತ್ರದಲ್ಲಿಯೇ ನಿಲ್ಲಿಸಬಾರದು. ಹೀಗೆ ಮಾಡುವದು ನಮಗೆ ಅಪಮಾನಕರ. ನಮ್ಮ ಅಭ್ಯುದಯಕ್ಕೆ ನಾವೇ ಅಡ್ಡಿಮಾಡಿಕೊಂಡಂತೆ. ಧರ್ಮವೆಂಬುದು ಒಂದು ಸಾಧನವು. ಧರ್ಮವೆಂಬ ಸೇತುವಿನ ಮೇಲೆ ನಡೆದು ಸ್ವರ್ಗಕ್ಕೆ ಹೋಗಬಹುದು; ಅದನ್ನು ಇನ್ನೂ ಚೆನ್ನಾಗಿ ಉಪಯೋಗಿಸಿಕೊಂಡರೆ ಮೋಕ್ಷವನ್ನೇ ಪಡೆದುಕೊಳ್ಳಬಹುದು. ಹೀಗಿದ್ದರೂ ಧರ್ಮದ **ಆಭಾಸ**ವನ್ನು ನಂಬಿ, ಅಧರ್ಮವನ್ನೇ ಕೈಗೊಂಡು, ತಾನು ಧಾರ್ಮಿಕನೆಂದು ಮೆರೆದರೆ ಉಪಾಯಕ್ಕೇ ಅಪಾಯವು ಬರುವದು. ನಿಃಶ್ರೇಯಸಕ್ಕೆ ಬದಲು ಅನರ್ಥವೇ ಗತಿಯಾಗುವದು.

ಮನುಷ್ಯನು ಲೌಕಿಕವಿಷಯಗಳಲ್ಲಿ ದಂಭವನ್ನು ಮಾಡಿಮಾಡಿ ಪರಮಾರ್ಥಸಾಧನಗಳನ್ನು ಕೈಗೊಂಡಾಗಲೂ ದಂಭವನ್ನೇ ಅನುಸರಿಸುವಂತೆ ಆಗಿಬಿಟ್ಟಿರುವದು. `ಪ್ರಬೋಧಚಂದ್ರೋದಯ' ನಾಟಕದಲ್ಲಿ ದಂಭ, ಅಹಂಕಾರ - ಎಂಬ ಪಾತ್ರಗಳನ್ನು ಗ್ರಂಥಕಾರನು ವರ್ಣಿಸಿರುವದನ್ನು ನಾವು ತಿಳಿಯಬೇಕು. ಅಲ್ಲಿ ದಂಭನು ಏನನ್ನುತ್ತಾನೆ? `ನಾನು ಬ್ರಹ್ಮಲೋಕಕ್ಕೆ ಹೋಗಿದ್ದೆನು ಸರ್ವಲೋಕಪಿತಾಮಹನಾದ ಬ್ರಹ್ಮನು ತನ್ನ ಅಪವಿತ್ರವಾದ ತೊಡೆಯನ್ನು ಗೋಮಯದಿಂದ ತೊಳೆದುಕೊಂಡು ಪವಿತ್ರಾಸನವನ್ನು ಹಾಕಿ ನನ್ನನ್ನು ಅಲ್ಲಿ ಕುಳ್ಳಿರಿಸಿಕೊಂಡನು!' ಎಂದು. ಈ ಲೋಕದಲ್ಲಿ ದೀಕ್ಷಿತರು, ಶಾಸ್ತ್ರಜ್ಞರು, ವೇದಾಂತಿಗಳು - ಎಂದು ತಮ್ಮ ಹೆಚ್ಚುಗಾರಿಕೆಯನ್ನು ತಾವೇ ಕೊಚ್ಚಿಕೊಳ್ಳುತ್ತಿರುವ ಮೂಢರಿಗೇನೂ ಕಡಿಮೆಯಿಲ್ಲ. ಆದರೆ ಲೋಕವು ತನ್ನನ್ನು ಮೆಚ್ಚಿದ ಮಾತ್ರದಿಂದ ತನಗೆ ಆಗುವ ಪುರುಷಾರ್ಥವು ಯಾವದು? ಸರ್ವಜ್ಞನವರು ಧರ್ಮದ ಹೆಸರಿನಿಂದ ಜನರು ಅನುಸರಿಸುವ ದಂಭವನ್ನು ಜರಿದು 'ಬಿಡುಬಾಹ್ಯದೊಳು ದಂಭವ । ಮಾನಸದೊಳ । ಗೆಡೆಬಿಡದಿರು ಶಂಭುವ ।।' ಎಂದು ಮಾಡಿರುವ ಉಪದೇಶವನ್ನು ನಾವು ಮನಸ್ಸಿಗೆ ತಂದುಕೊಳ್ಳಬೇಕು. `ಯೋಽನ್ಯಥಾ ಸನ್ತಮಾತ್ಮಾನಮನ್ಯಥಾ ಪ್ರತಿಪದ್ಯತೇ । ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ।।' ಎಂಬ ಸ್ಮೃತಿವಚನದಂತೆ ತಾನು ಇರುವ ಸ್ಥಿತಿಯನ್ನು ಮರೆಮಾಚಿ ಮತ್ತೊಂದು ರೀತಿಯಲ್ಲಿರುವಂತೆ ತೋರಿಸಿಕೊಳ್ಳುವವನು ಕಳ್ಳನು, ಆತ್ಮನನ್ನೇ ಅಪಹರಿಸಿರುವ ಚೋರನು - ಮೊದಮೊದಲು ಧರ್ಮಮಾಡುತ್ತಾ ದಂಭವನ್ನು ಮಾಡುವವನು ತಾನು ಇರುವದಕ್ಕಿಂತ ಹೆಚ್ಚು ಧಾರ್ಮಿಕನೆಂದು ತೋರಿಸಿಕೊಳ್ಳುತ್ತಾನೆ; ಆಮೇಲೆ ಯಾವ ಧರ್ಮವೂ

ಇಲ್ಲದಿದ್ದರೂ ತಾನು ಧಾರ್ಮಿಕಶಿರೋಮಣಿ ಎಂದು ತೋರಿಸಿಕೊಳ್ಳುತ್ತಾನೆ. ಹೀಗೆ ಮಾಡುತ್ತಾ ಮಾಡುತ್ತಾ ಪಾಪದ ಗುಂಡಿಯಲ್ಲಿ ಬೀಳುತ್ತಾನೆ.

ಮನುಷ್ಯನಿಗೆ ಅದೇಕೋ, ದಂಭದ ಮೇಲೆ ಬಹಳ ಪ್ರೀತಿ. ಏನೂ ತಿಳಿಯದವನಾಗಿರುವಾಗ ದಾಂಭಿಕನಾಗಿರುವದು ವಿಶೇಷವಲ್ಲ. ಧರ್ಮಪರನಾದಮೇಲೂ ಅವನು ತೋರುಗಾಣಿಕೆಯ ಧರ್ಮವನ್ನೇ ಮಾಡುವದಕ್ಕೆ ಹೋಗುತ್ತಾನೆ. ಪ್ರವೃತ್ತಿಧರ್ಮವನ್ನು ಬಿಟ್ಟು ನಿವೃತ್ತಿಧರ್ಮಪರನಾದ ಮೇಲೂ ತಾನು ನಿವೃತ್ತಿನಿಷ್ಠನೆಂದು ತೋರಿಸಿಕೊಳ್ಳುವದಕ್ಕೆ ಹವಣಿಸುತ್ತಿರುತ್ತಾನೆ. ಜ್ಞಾನ ವೈರಾಗ್ಯಗಳು ಮನಸ್ಸಿನ ಸ್ವಭಾವವೆಂಬುದನ್ನು ಮರೆತು ಅವನ್ನು ವಾಕ್ಕಿನಿಂದಲೂ ಆಚರಣೆಯಿಂದಲೂ ಹೇಗೋ ತೋರ್ಪಡಿಸಿಕೊಳ್ಳುವದಕ್ಕೆ ಹೋಗುತ್ತಾನೆ. ಇದರಿಂದ ಅಧರ್ಮವೇ ಗಂಟುಬೀಳುತ್ತದೆ; ನಿಜವಾದ ಜ್ಞಾನವೈರಾಗ್ಯಗಳಂತೂ ತೀರ ದೂರವಾಗಿಬಿಡುತ್ತವೆ. ಆದ್ದರಿಂದಲೇ ದೊಡ್ಡವರು ಹೀಗೆ ಉಪದೇಶಮಾಡಿರುತ್ತಾರೆ :

**`ಯಂ ನ ಸನ್ತಂ ನ ಚಾಸನ್ತಂ ನಾಶ್ರುತಂ ನ ಬಹುಶ್ರುತಮ್ ।**
**ನ ಸುವೃತ್ತಂ ನ ದುರ್ವೃತ್ತಂ ವೇದ ಕಶ್ಚಿತ್ಸ ಬ್ರಾಹ್ಮಣಃ ॥**

**ತ್ಯಜ ಧರ್ಮಮಧರ್ಮಂ ಚ ಉಭೇ ಸತ್ಯಾನೃತೇ ತ್ಯಜ ।**
**ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನ ತ್ಯಜಸಿ ತತ್ತ್ಯಜ ॥**

(`ಯಾವನನ್ನು ಸತ್ಪುರುಷನೆಂದಾಗಲಿ ಅಸತ್ಪುರುಷನೆಂದಾಗಲಿ ಶಾಸ್ತ್ರಾಧ್ಯಯನವನ್ನು ಮಾಡದವನೆಂದಾಗಲಿ ಬಹಳವಾಗಿ ಶಾಸ್ತ್ರಾಧ್ಯಯನವನ್ನು ಮಾಡಿದವನೆಂದಾಗಲಿ, ಒಳ್ಳೆಯ ನಡತೆಯವನೆಂದಾಗಲಿ ದುರಾಚಾರಿಯೆಂದಾಗಲಿ ಯಾವನೊಬ್ಬನೂ ತಿಳಿಯದೆ ಇರುವನೋ ಅವನೇ ಬ್ರಾಹ್ಮಣನು; ಧರ್ಮವನ್ನು ಬಿಡು, ಅಧರ್ಮವನ್ನು ಬಿಡು, ಸತ್ಯಾನೃತಗಳೆರಡನ್ನೂ ಬಿಡು ; ಸತ್ಯಾನೃತಗಳೆರಡನ್ನೂ ಬಿಟ್ಟು ಯಾವ (ಅಭಿಮಾನದಿಂದ) ಅದನ್ನು ಬಿಡುವೆಯೋ ಅದನ್ನೂ ಬಿಡು;) ಮುಖ್ಯವಾಗಿ ಹೊರಗೆ ಧಾರ್ಮಿಕನೆಂದು ತೋರಿಸಿಕೊಳ್ಳುವದನ್ನು ಬಿಟ್ಟು ನಿಜವಾಗಿ ಧಾರ್ಮಿಕನಾಗಿರಬೇಕು. ತಾನು ಮಾಡುವ ಧರ್ಮವು ಮತ್ತೆ ಯಾರಿಗೂ ತಿಳಿಯಬಾರದು - ಹೀಗಿರಬೇಕು. ಏನಾದರೂ ಕೊಟ್ಟಿದ್ದರೂ ಕೊಡದೆ ಇದ್ದರೂ ವೃತ್ತಾಂತಪತ್ರಿಕೆಗಳಲ್ಲಿ ತಾನು ಮಹಾದಾನಿ ಎಂದು ಹೊಗಳಿಸಿಕೊಳ್ಳುವ ದಾಂಭಿಕರು ಅನೇಕರು ಸಿಕ್ಕಬಹುದು. ಆದರೆ ಹೊರಗೆ ತಾನು ಲೋಭಿ ಎನ್ನಿಸಿಕೊಂಡರೂ ಚಿಂತೆಯಿಲ್ಲ ; ತಾನು ಮಾಡುವ ದಾನವು ಗುಪ್ತದಾನವಾಗಿರಬೇಕು - ಎಂದು ನೋಡಿಕೊಳ್ಳುವ ಮಹನೀಯರೂ ಕೆಲವರು ಇರುತ್ತಾರೆ.

ದಂಭ, ಮಾನ - ಮುಂತಾದ ಗುಣಗಳು ಜೀವರುಗಳನ್ನು ಸುಟ್ಟುಹಾಕುತ್ತಿರುವವು. ಅವು ಭೂತದಾಹೀಯಗಳು ಎಂದು ಆಪಸ್ತಂಬಾದಿಗಳು ಹೇಳಿರುತ್ತಾರೆ. ಅತ್ಯಂತಚಪಲವಾಗಿರುವ ಜಾತ್ಯಶ್ವವನ್ನು ಬಿಗಿಹಿಡಿದಿರುವ ಸವಾರನಂತೆ ಅವುಗಳಿಗೆ ಅವಕಾಶಕೊಡದೆ ಅದಂಭಿತ್ವ, ಅಮಾನಿತ್ವ ಮುಂತಾದವುಗಳ ಪರಮಾಶ್ರಯನಾಗಿರುವ ಪರಮಾತ್ಮನಲ್ಲಿಯೇ ನಿಲ್ಲಿಸುವವರೆಗೂ

ಪ್ರತಿಪಕ್ಷಭಾವನೆಯನ್ನು ಮಾಡಬೇಕು. ಮನುಷ್ಯನು ತಾನೇ ಸಾಧನವನ್ನು ಮಾಡಿ ಅದಂಭಿತ್ವಾದಿಗಳನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳುವದಾಗುವದಿಲ್ಲ ಭಗವದ್ಭಕ್ತಿಯಿಂದಲೇ ಇವುಗಳನ್ನು ಅಳವಡಿಸಿಕೊಳ್ಳಬೇಕು. ಹೊರಗೆ ಸಾತ್ತ್ವಿಕನಂತೆಯೂ, ಧಾರ್ಮಿಕನಂತೆಯೂ, ಪರೋಪಕಾರಿಯಂತೆಯೂ, ತೋರಿಸಿಕೊಳ್ಳುವದು ಸುಲಭ ; ಆದರೆ ಒಳಗೆ ನಿಜವಾಗಿ ಆ ಗುಣಗಳನ್ನು ಸಂಪಾದಿಸಿಕೊಳ್ಳುವದು ಕಷ್ಟ. ಮೊದಲು ನಿಷಿದ್ಧವನ್ನು ತ್ಯಜಿಸುವದು, ಆಮೇಲೆ ವಿಹಿತವಾದದ್ದನ್ನು ಸ್ವೀಕರಿಸುವದು, ಮುಂದೆ ಭಗವಂತನಲ್ಲಿಯೇ ಮನಸ್ಸಿಡುವದು – ಈ ಕ್ರಮದಿಂದಲೇ ಇಲ್ಲಿ ಹೇಳಿರುವ ಅಮಾನಿತ್ವಾದಿಗಳನ್ನು ಸಾಧಿಸಿಕೊಳ್ಳಬೇಕಾಗಿದೆ ಎಂಬುದನ್ನು ನಾವು ಮರೆಯದೆ ಇರಬೇಕು.



## ೯೯. ಅಹಿಂಸೆ 13 - (7)

**(19-9-48)**

ಜ್ಞಾನಸಾಧನಗಳಲ್ಲಿ ಅಮಾನಿತ್ವ, ಅದಂಭಿತ್ವ - ಇವುಗಳನ್ನು ಕುರಿತು ವಿಚಾರವನ್ನು ಮಾಡಿದ್ದಾಯಿತು. ಈಗ ಅಹಿಂಸೆಯನ್ನು ಕುರಿತು ಮಾತನಾಡಬೇಕಾಗಿದೆ.

ಅಹಿಂಸೆಯನ್ನು ಆಚರಿಸುವದು ಬಹಳ ಕಷ್ಟ; ಅಸಾಧ್ಯವೆಂದೇ ಹೇಳಬಹುದು. ಕಾಯಿಕ, ವಾಚಿಕ, ಮಾನಸಿಕ - ಈ ಮೂರು ಬಗೆಯಲ್ಲಿ ಯಾವದೊಂದು ಹಿಂಸೆಯನ್ನೂ ಎಳ್ಳಷ್ಟೂ ಮಾಡದೆ ಇರುವವರು ಯಾರು ಇದ್ದಾರೆ? ಅಹಿಂಸೆಯನ್ನು ಪರಮಧ್ಯೇಯವಾಗಿ ಇಟ್ಟುಕೊಂಡು ಕೆಲವರು ತಮಗೂ ತಿಳಿಯದಂತೆಯೇ ಹಿಂಸೆಯನ್ನು ಮಾಡುವರು. ಇದಕ್ಕೆ ಒಂದು ಉದಾಹರಣೆಯನ್ನು ಕೊಡುವೆನು. ತಮಗೆ ಮೆಚ್ಚಾದ ಪದಾರ್ಥವನ್ನು ದೇವರಿಗೆ ಸಮರ್ಪಿಸಿ ಅದನ್ನು ಪ್ರಸಾದವೆಂದು ಭಾವಿಸಿ ತಿನ್ನುವದು ಪ್ರಪಂಚದಲ್ಲಿ ಎಲ್ಲಾ ಕಡೆಯಲ್ಲಿಯೂ ರೂಢಿ ಇದೆ. ಮಾಂಸಾಹಾರಿಗಳು ಮಾಂಸವನ್ನು ಹೀಗೆ ದೇವರಿಗೆ ಅರ್ಪಿಸುವದಕ್ಕೆ ಹೊರಟರೆ ಪ್ರಾಣಿಹಿಂಸೆಯಾಗುವದು ಸ್ವಾಭಾವಿಕವಷ್ಟೆ. ಅಹಿಂಸಾಪ್ರೇಮಿಗಳು ಕೆಲವರು ಇದನ್ನು ನಿಲ್ಲಿಸುವದಕ್ಕೆಂದು ತಾವು ಉಪವಾಸ, ಸತ್ಯಾಗ್ರಹ - ಮುಂತಾದವುಗಳನ್ನು ಮಾಡುತ್ತಿರುವದನ್ನು ನಾವು ಕಂಡಿರುತ್ತೇವೆ. ಆದರೆ ದೇವರಿಗೆ ಬಲಿಕೊಡಬೇಡಿರಿ - ಎಂದು ಆಗ್ರಹಪೂರ್ವಕವಾಗಿ ಅದನ್ನು ನಿಲ್ಲಿಸಿದರೆ ಬಲಿಕೊಡುವ ಪದ್ಧತಿಯವರಿಗೆ ಮನಸ್ಸು ನೋಯುವದಿಲ್ಲವೆ? ಹಾಗಾದರೆ ಸರ್ವಥಾ ಅಹಿಂಸೆ ಹೇಗಾಯಿತು?

ಸರಿಯಾಗಿ ನೋಡಿದರೆ ಪ್ರಪಂಚದಲ್ಲಿ ಹಿಂಸೆಯು ಅನಿವಾರ್ಯವಾಗಿರುತ್ತದೆ. ಉಸಿರುತೆಗೆದುಕೊಂಡು ಬಿಡುವದರಿಂದ ವಾಯುಮಂಡಲದಲ್ಲಿರುವ ಎಷ್ಟೋ ಕ್ರಿಮಿಪ್ರಾಣಿಗಳು ನಾಶವಾಗುತ್ತವೆ. ನಾವು ನಡೆದಾಡುವಾಗ ಎಷ್ಟು ಸಣ್ಣ ಪ್ರಾಣಿಗಳಿಗೆ ಹಿಂಸೆಯಾಗುವದೋ ಯಾರು ಬಲ್ಲರು? ಹಾಲಿಗೆ ಹೆಪ್ಪುಹಾಕಿದರೆ ಅದು ಮೊಸರಾಗುವಾಗ ಎಷ್ಟೋ ಸೂಕ್ಷ್ಮಕ್ರಿಮಿಗಳು

ಉತ್ಪನ್ನವಾಗುವವೆಂದು ಹೇಳುತ್ತಾರೆ. ಆಗ ಮೊಸರು ತಿನ್ನುವದರಿಂದ ಎಷ್ಟು ಹಿಂಸೆಯಾದಂತಾಯಿತು ! ಕುಡಿಯುವ ನೀರಿನಲ್ಲಿ ನಮಗೆ ಯಾವ ಪ್ರಾಣಿಯೂ ಕಾಣದಿದ್ದರೂ ದುರ್ಬಿನ್ನಿನಲ್ಲಿ ನೋಡಿದರೆ ಎಷ್ಟೋ ಕ್ರಿಮಿಗಳು ಗೋಚರವಾಗುವವು. ಈ ದೃಷ್ಟಿಯಿಂದ ಭೂಮಿಯಲ್ಲಿ ನಡೆಯುವಾಗ, ನೀರನ್ನು ಕುಡಿಯುವಾಗ, ಗಾಳಿಯನ್ನು ಉಸಿರಾಡುವಾಗ, ಬೆಂಕಿಯನ್ನು ಹತ್ತಿಸುವಾಗ - ಇವೇ ಮುಂತಾದ ಸ್ವಾಭಾವಿಕಕಾರ್ಯಗಳಲ್ಲಿಯೇ ನಾವು ಎಷ್ಟೊಂದು ಪ್ರಾಣಿಹಿಂಸೆಯನ್ನು ಮಾಡಿದಂತೆ ಆಗುವದು? ಭತ್ತವೇ ಮೊದಲಾದ ಸ್ಥಾವರಗಳೂ ಪ್ರಾಣಿಗಳೆಂದು ಹಿಂದುಗಳೇ ಮುಂತಾದವರು ನಂಬುತ್ತಾರೆ; ಈಗಿನ ವಿಜ್ಞಾನಶಾಸ್ತ್ರವೂ ಆ ನಂಬಿಕೆಗೆ ಬೆಂಬಲವನ್ನು ಕೊಡುತ್ತಿದೆ. ಇದನ್ನು ಮನದಂದರೆ ಪೈರನ್ನು ಕತ್ತರಿಸುವದು, ಒಣಗಿಸುವದು, ಬಡಿಯುವದು - ಮುಂತಾದ ಕ್ರಮಗಳಿಂದ ಮನುಷ್ಯನು ಎಷ್ಟು ಹಿಂಸೆಮಾಡುತ್ತಿರುತ್ತಾನೆನ್ನಬೇಕಾಯಿತು ! ಹಸಿಯಕಡಲೆ, ಅವರೆ, ಹುರಳಿ - ಮುಂತಾದವುಗಳ ಸಿಪ್ಪೆಯನ್ನು ಸುಲಿದು, ಕುಟ್ಟಿ ಅಥವಾ ಬೇಯಿಸಿ ತಿಂದರೆ ಎಷ್ಟು ಹಿಂಸೆಯಾಗಬೇಕು? ಹೀಗೆಲ್ಲ ನೋಡುತ್ತಾ ಹೋದರೆ ನಮ್ಮ ಜೀವನವೇ ಹಿಂಸೆಯ ತಳಹದಿಯ ಮೇಲೆ ನಿಂತಿರುತ್ತದೆ ಎನ್ನಬೇಕಾದೀತು !

ಆದ್ದರಿಂದ ಅಹಿಂಸೆ ಎಂಬ ಮಾತನ್ನು ಇಲ್ಲಿ ಸರ್ವಥಾ ಹಿಂಸೆಮಾಡದಿರುವದು ಎಂಬರ್ಥದಲ್ಲಿ ಪ್ರಯೋಗಿಸಿರುವದಿಲ್ಲ. ಒಂದು ಪ್ರಾಣಿಗೆ ಹಿಂಸೆಯಾಗಲಿ ಎಂದು ಸಂಕಲ್ಪಿಸುವದು, ಅಥವಾ ಅಂಥ ಹಿಂಸೆಯ ಮಾತನ್ನಾಡುವದು, ಮತ್ತು ಬೇಕೆಂತ ಹಿಂಸೆಯನ್ನು ಮಾಡುವದು - ಇವುಗಳನ್ನೇ ಹಿಂಸೆ ಎಂಬ ಮಾತಿನಿಂದ ಕರೆಯುವದಾದರೆ ಈ ಹಿಂಸೆಯನ್ನು ಬಿಡುವದು ಅಹಿಂಸೆ ಎಂದಾಗುತ್ತದೆ. ಜನರಿಗೆ ಹಿತವನ್ನು ಮಾಡುವ ಹಿಂಸೆಯನ್ನು ನಾವು ಈ ಅರ್ಥದಲ್ಲಿ ಹಿಂಸೆ ಎಂದು ಎಣಿಸುವದಕ್ಕಾಗುವದಿಲ್ಲ. ಕಾಲಿಗೆ ನೆಟ್ಟಿರುವ ಮುಳ್ಳುತೆಗೆಯುವದು, ಮೈಮೇಲೆ ಎದ್ದಿರುವ ಹುಣ್ಣನ್ನು ಶಸ್ತ್ರಚಿಕಿತ್ಸೆಯಿಂದ ತೆಗೆದು ಹಾಕುವದು - ಇಂಥ ಕೆಲಸಗಳನ್ನು ಹಿಂಸೆಯೆಂದು ಎಣಿಸುವದರ ಬದಲು ಉಪಕಾರಕ್ರಿಯೆಗಳೆಂದು ನಾವುಗಳು ಭಾವಿಸಿರುವದಕ್ಕೆ ಇದೇ ಕಾರಣ. ಅಲ್ಪ ಹಿಂಸೆಯಾದ ಆದರಿಂದ ಲೋಕಹಿತವಾಗುವದಾದರೆ ಅದು ಹಿಂಸೆ ಎಂಬ ಕುತ್ಸಿತ ನಾಮವನ್ನು ಪಡೆಯಲಾರದು. ಮಹಾತ್ಮಗಾಂಧಿಯವರು ಮುಖ್ಯವಾಗಿ ಅಹಿಂಸೆಯನ್ನೇ ಪ್ರತಿಪಾದಿಸುತ್ತಿದ್ದರು. ಆದರೆ ಅವರು ಮಾಡಿದ ಕೆಲವು ಪ್ರಯತ್ನಗಳಿಂದ ತಿಳಿಯದ ಜನವು ತಪ್ಪುಮಾರ್ಗದಲ್ಲಿ ನಡೆದರು; ಆ ಸಂದರ್ಭಗಳಲ್ಲಿ ಅವರು ಪ್ರಾಯಶ್ಚಿತ್ತರೂಪವಾಗಿ ಉಪವಾಸಮಾಡಿದ್ದು ನಿಜ. ಆದರೆ ಜನರ ವರ್ತನೆಯಿಂದ ಹಿಂಸೆಯು ನಡೆದೇಹೋಯಿತು! ರೋಗದಿಂದ ನರಳುತ್ತಿದ್ದ ಒಂದು ಕರುವನ್ನು ಕೊಲ್ಲಬಹುದೆಂದೂ ಪೈರಿಗೆ ತೊಂದರೆಯನ್ನು ಕೊಡುತ್ತಿದ್ದ ಕೋತಿಗಳನ್ನು ಕೊಲ್ಲಬಹುದೆಂದೂ ಅವರು ಕೆಲಸಂದರ್ಭಗಳಲ್ಲಿ ಅಪ್ಪಣೆಕೊಟ್ಟರೆಂದು ಕೇಳಿದ್ದೇನೆ. ಇಂಥ ಸಂದರ್ಭದಲ್ಲಿ ಆ ಪ್ರಾಣಿಗಳಿಗೆ ಹಿಂಸೆಯಾಗಿಲ್ಲವೆಂದು ಹೇಳುವದಕ್ಕಾದೀತೆ? ಎಂದಿಗೂ ಇಲ್ಲ. ಆದ್ದರಿಂದ ಹಿಂಸೆ ಎಂದರೆ ಮತ್ತೊಬ್ಬರಿಗೆ ನೋವನ್ನುಂಟುಮಾಡುವದು ಎಂದರೆ ನಮ್ಮಿಂದ ಯಾವ ಹಿಂಸೆಯೂ ಆಗದಂತೆ ನೋಡಿಕೊಳ್ಳುವದು ಅಸಾಧ್ಯವಾಗಿಬಿಡುತ್ತದೆ. ಆದರೆ ಸನಾತನಧರ್ಮದಲ್ಲಿ ಮನಃ

ಪೂರ್ವಕವಾಗಿ ಒಬ್ಬರಿಗೆ ತೊಂದರೆಕೊಡುವದಕ್ಕೆಂದು ಅಥವಾ ಸ್ವಾರ್ಥಕ್ಕಾಗಿ ಮಾಡುವ ಹಿಂಸೆಯನ್ನು, ನಿವಾರ್ಯವಾದ ಹಿಂಸೆಯನ್ನೇ, ಹಿಂಸೆ ಎಂಬ ಶಬ್ದದಿಂದ ಕರೆದಿದೆ; ಅಹಿಂಸೆ ಎಂದರೆ ಅಂಥ ಹಿಂಸೆಯನ್ನು ಬಿಡುವದು ಎಂದು ಉಪದೇಶಿಸಿರುತ್ತದೆ.

ಮಹಾಭಾರತದಲ್ಲಿರುವ ವೈಶ್ಯತುಲಾಧಾರನ ಕಥೆಯನ್ನು ಇದಕ್ಕೆ ದೃಷ್ಟಾಂತವಾಗಿ ಕೊಡಬಹುದು. ತುಲಾಧಾರನು ಮಹಾಜ್ಞಾನಿ; ಅವನಲ್ಲಿಗೆ ಜಾಜಲಿ ಎಂಬ ಬ್ರಾಹ್ಮಣನು ಬಂದು ಅವನಿಂದ ಉಪದೇಶವನ್ನು ಪಡೆದಿರುತ್ತಾನೆ. ಜಾಜಲಿಯು ತನ್ನ ತಪಸ್ಸಿನ ಸಿದ್ಧಿಗೆ ತಾನೇ ಮೆಚ್ಚಿಕೊಂಡಿದ್ದವನು. ಅವನಿಗೆ ಧರ್ಮದ ಮರ್ಮವು ತಿಳಿಯದೆ ಇತ್ತು. ತುಲಾಧಾರನನ್ನು ಕುರಿತು `ನೀನು ಜೇನುತುಪ್ಪ, ಅರಗು - ಮುಂತಾದ ರಸದ್ರವ್ಯಗಳನ್ನು ಮಾರುತ್ತಿದ್ದೀಯೆ ; ಆದರೂ ನಿನಗೆ ಈ ಅಪರೋಕ್ಷಜ್ಞಾನವು ಹೇಗೆ ಉಂಟಾಯಿತು ?' ಎಂದು ಕೇಳಿದನು. ಹಿಂಸೆಯಿಲ್ಲದೆ ಜೇನುತುಪ್ಪವೇ ಮುಂತಾದ ವಸ್ತುಗಳು ಸಿಕ್ಕುವದಿಲ್ಲ. ಹಿಂಸೆಯಿಂದ ಅವಶ್ಯವಾಗಿ ಪಾಪವುಂಟಾಗಬೇಕು. ಹೀಗಿರುವಲ್ಲಿ ಪುಣ್ಯದಿಂದಾದ ಚಿತ್ತಶುದ್ಧಿಯಾಗಲಿ ಜ್ಞಾನವಾಗಲಿ ಈ ವೈಶ್ಯನಿಗೆ ಉಂಟಾದದ್ದು ಹೇಗೆ? - ಎಂಬುದೇ ಆ ಬ್ರಾಹ್ಮಣನ ಶಂಕೆ. ಆದರೆ ತುಲಾಧಾರನು ಹಿಂಸೆಯಿಲ್ಲದೆ ವ್ಯವಹಾರವೇ ಸಾಗುವದಿಲ್ಲವೆಂಬುದನ್ನು ವ್ಯವಸಾಯಗಾರರು, ಧನಿಕರು - ಮುಂತಾದವರ ದೃಷ್ಟಾಂತದಿಂದ ಮನಗಾಣಿಸಿ ಮನಃಪೂರ್ವಕವಾದ ಹಿಂಸೆಯಿಲ್ಲದೆ ಅಥವಾ ಆದಷ್ಟು ಅಲ್ಪಹಿಂಸೆಯಿಂದ ವ್ಯವಹಾರವನ್ನು ಸಾಗಿಸುವದೇ ಅಹಿಂಸೆ ಎಂಬದನ್ನು ಬ್ರಾಹ್ಮಣನಿಗೆ ಮನಗಾಣಿಸಿಕೊಟ್ಟನು. ತನ್ನ ತನ್ನ ವರ್ಣಾಶ್ರಮಧರ್ಮವನ್ನು ಕಪಟ, ಮೋಸ - ಮುಂತಾದವುಗಳಿಲ್ಲದೆ ಮಾಡುವವನಿಗೆ ಇಹಪರಸುಖಗಳು ಅವಶ್ಯವಾಗಿ ದೊರಕುವವು - ಎಂಬುದನ್ನೂ ತಿಳಿಸಿಕೊಟ್ಟನು.

ಆದರೆ ತಿಳಿದವರು ಇನ್ನೂ ಮುಂದಕ್ಕೆ ಹೋಗಿರುತ್ತಾರೆ. ಸ್ವಾರ್ಥವೆಲ್ಲ ಒಂದು ದೃಷ್ಟಿಯಿಂದ ಹಿಂಸೆಯೇ ಆಗಿರುತ್ತದೆ. ಶಾಸ್ತ್ರೀಯಕರ್ಮದ ಫಲವನ್ನು ಪಡೆದುಕೊಳ್ಳುವದಕ್ಕೆ ಬಯಸುವದೂ ಒಂದು ಬಗೆಯ ಸ್ವಾರ್ಥವೇ. ಸಾಧ್ಯಸಾಧನರೂಪವಾಗಿರುವದೆಲ್ಲವೂ ಏಷಣಾತ್ರಯವೆಂಬ ಬಂಧಕದಲ್ಲಿ ಸೇರಿರುತ್ತದೆ. ಆದ್ದರಿಂದ ಯಾವ ಕರ್ಮವನ್ನು ಮಾಡಿದರೂ ಸ್ವಾರ್ಥವು ತಪ್ಪಿದ್ದಲ್ಲ. ಎಲ್ಲವನ್ನೂ ಪರಮಾತ್ಮನಿಗೆ ಅರ್ಪಣೆಮಾಡಿ ಸರ್ವಭೂತಗಳ ಹಿತದಲ್ಲಿಯೇ ರತರಾಗಿರುವದೇ ಅಹಿಂಸೆಯ ಪರಮಾವಧಿಯು ಎಂದು ತಿಳಿದು ಹಿಂಸಾನುಗ್ರಹಗಳನ್ನು ಆರಂಭಿಸದೆ ಇರುವ ಪರಮಾತ್ಮನಿಷ್ಠೆಯನ್ನು ವಹಿಸುವದು ಅಹಿಂಸೆಯ ಪರಾಕಾಷ್ಠೆಯಾಗಿರುತ್ತದೆಯೆಂದು ಸರ್ವಕರ್ಮಸಂನ್ಯಾಸವನ್ನೇ ಮಾಡುವ ಸಂನ್ಯಾಸಿಗಳು ಈ ಸಾಧನದ ಪರಮಾವಧಿಯನ್ನು ಮುಟ್ಟಿರುತ್ತಾರೆ. ಅಮಾನಿತ್ವ, ಅದಂಭಿತ್ವ, ಅಹಿಂಸೆ - ಮುಂತಾದ ಸಾಧನಗಳು ಪರಮಾತ್ಮನಲ್ಲಿಯೇ ನಿರತಿಶಯವಾಗಿರುತ್ತವೆ. ಪರಮಾತ್ಮನಿಗೆ ಯಾವ ಸದ್ಗುಣಗಳ ಕೊರತೆಯೂ ಇಲ್ಲ ; ಆದರೂ ಅವನಿಗೆ ಯಾವದೊಂದರ ಅಭಿಮಾನವೂ ಇಲ್ಲ. ಪರಮಾತ್ಮನು ಧರ್ಮಸ್ವರೂಪವೇ ಆಗಿರುತ್ತಾನೆ; ಆದರೂ ಅವನಲ್ಲಿ ಯಾವ ಧರ್ಮವೂ ಇರುವದಿಲ್ಲ.

ಪರಮಾತ್ಮನು ಇಡಿಯ ಜಗತ್ತನ್ನು ಸೃಷ್ಟಿಸುವಾಗಲೂ ರಕ್ಷಿಸುವಾಗಲೂ ಎಂಥ ನಿರಭಿಮಾನಿಯಾಗಿರುತ್ತಾನೋ ಅದನ್ನು ಸಂಹರಿಸುವಾಗಲೂ ಅಷ್ಟೇ ನಿರಭಿಮಾನಿಯಾಗಿರುತ್ತಾನೆ. ಆದ್ದರಿಂದ ಅವನಿಗಿಂತ ಮತ್ತೆ ಯಾರಲ್ಲಿಯೂ ಅಹಿಂಸಾಧರ್ಮವು ಮಿಗಿಲಾಗಿರುವದಿಲ್ಲ. ಹೀಗೆಯೇ ಮಿಕ್ಕ ಜ್ಞಾನಸಾಧನಗಳನ್ನೂ ಅರಿಯಬೇಕು. ಈ ಕಾರಣದಿಂದಲೇ ಪರಮಾತ್ಮನಲ್ಲಿ ನಿಷ್ಠೆಯನ್ನು ಪಡೆಯುವದಕ್ಕೆ ಹವಣಿಸುವದು ಸರ್ವಸಾಧನಗಳ ಮರ್ಮವಾಗಿರುತ್ತದೆ.

ಅಹಿಂಸೆಯನ್ನು ದಾಂಭಿಕತನಕ್ಕಾಗಿ ಅಥವಾ ತಾನು ಅಹಿಂಸಕನೆಂಬುದನ್ನು ಸ್ಥಿರಪಡಿಸಿಕೊಳ್ಳುವದಕ್ಕಾಗಿ ಮಾಡುವದಕ್ಕೆ ಹೋಗಬಾರದು. ಆಗ ಅದು ಅಹಿಂಸೆಯೇ ಅಲ್ಲದೆ ಹೋಗುತ್ತದೆ. ಒಬ್ಬ ಬೌದ್ಧಭಿಕ್ಷುವನ್ನು ಒಬ್ಬ ಬೆಸ್ತನು ಮನೆಗೆ ಕರೆತಂದು ಊಟಕ್ಕೆ ಇತರ ಪದಾರ್ಥಗಳ ಜೊತೆಗೆ ಯಾವದೋ ಮೀನಿನ ಪದಾರ್ಥವನ್ನು ಬಡಿಸಿದನಂತೆ. ಭಿಕ್ಷುವು ಊಟಮಾಡುತ್ತಿರುವಾಗ ಬೆಸ್ತನು ಕೈಮುಗಿದುಕೊಂಡು `ಭಗವಂತನೆ, ನಾನು ನಿತ್ಯವೂ ಮೀನುಹಿಡಿಯುವ ಕೆಲಸದಿಂದಲೇ ಜೀವನವನ್ನು ಮಾಡಿತ್ತಿದ್ದೇನಷ್ಟೆ. ಇದರಿಂದ ಪ್ರಾಣಿಹಿಂಸೆಯಾಗುವದಿಲ್ಲವೆ? ನನಗೆ ಪರಲೋಕದಲ್ಲಿ ಎಂಥ ದುರ್ಗತಿಯಾಗುವದೋ ಎಂದು ನನಗೆ ಅಂಜಿಕೆಯಾಗಿರುತ್ತದೆ. ಈ ಪಾಪದಿಂದ ಪಾರಾಗುವದಕ್ಕೆ ನನಗೆ ಯಾವದಾದರೊಂದು ಉಪಾಯವನ್ನು ಉಪದೇಶಮಾಡಬೇಕು' ಎಂದು ಕೇಳಿಕೊಂಡನಂತೆ. ಆಗ ಭಿಕ್ಷುವು `ಎಲಾ, ನೀನು ಮೀನು ಹಿಡಿಯುವಾಗ ನದಿಯನ್ನು ಪೂರ ಅಡ್ಡಗಟ್ಟುತ್ತೀಯೇನು ?' ಎಂದು ಕೇಳಿದನಂತೆ. `ಇಲ್ಲ ಸ್ವಾಮಿ, ಸ್ವಲ್ಪಭಾಗವನ್ನು ಬಿಟ್ಟೇ ಇರುತ್ತೇನೆ' ಎಂದು ಬೆಸ್ತನು ಹೇಳಿದ್ದಕ್ಕೆ ಭಿಕ್ಷು `ಸರಿ, ಹಾಗಾದರೆ ; ನಿನ್ನದೇನೂ ತಪ್ಪಿಲ್ಲ. ಬಿಟ್ಟಿರುವ ಪ್ರವಾಹದಲ್ಲಿ ಅವು ತಪ್ಪಿಸಿಕೊಳ್ಳಬಹುದು. ಆದ್ದರಿಂದ ನಿನಗೆ ಹಿಂಸಾದೋಷವಿಲ್ಲ' ಎಂದನಂತೆ ! ಅಹಿಂಸೆಯಾಗಲೂಬೇಕು, ಮೀನುತಿನ್ನಲೂಬೇಕು ; ಇಂಥ ಕುಂಟುಯುಕ್ತಿಗಳು ಸರಿಯಲ್ಲ. ಇರುವ ನಿಜವನ್ನು ನಾವು ಮರೆಯುವಂತಿಲ್ಲ. ಪೂರ್ಣ ಅಹಿಂಸೆಯು ಯಾವ ಪ್ರಾಣಿಗೂ ಯಾವ ಹಿಂಸೆಯನ್ನೂ ಮಾಡದೆ ಇರುವದೆಂಬುದು, ಮನುಷ್ಯಮಾತ್ರಕ್ಕೆ ಆಗದ ವ್ಯಾಪಾರವು. ತನ್ನ ಯೋಗ್ಯತೆಗೆ ತಕ್ಕಂತೆ ಆದಷ್ಟು ಅಲ್ಪಹಿಂಸೆಯಿಂದ, ಯಾವದೊಂದು ಪ್ರಾಣಿಗೂ ಬೇಕೆಂತಲೇ ತನ್ನ ಸ್ವಾರ್ಥಕ್ಕಾಗಿ ಹಿಂಸೆಯನ್ನು ಮಾಡದೆ, ಇರುವದೇ ಅಹಿಂಸೆ - ಎಂಬ ತತ್ತ್ವವನ್ನು ಹಿಡಿಯಬೇಕು. ಅನಿವಾರ್ಯವಾದ ಹಿಂಸೆಯನ್ನು ಹಿಂಸೆ ಎಂದು ತಿಳಿಯುವದಕ್ಕೆ ಕಾರಣವೂ ಇಲ್ಲ.

ಗೀತೆಯಲ್ಲಿ ಉಪದೇಶಿಸಿರುವ ಅಹಿಂಸೆಯು ಪರಿಪೂರ್ಣವಾದ ಅಹಿಂಸೆಯೇ ; ವಾಕ್ಕಿನಿಂದ ಕಠಿಣವಾದ ನುಡಿಗಳನ್ನಾಡುವದು, ವಕ್ರವಾದ ಅರ್ಥವನ್ನು ಸೂಚಿಸಿ ಒಬ್ಬರನ್ನು ನೋಯಿಸುವದು, ಹೆದರಿಸುವ ಬಿರುನುಡಿಗಳನ್ನಾಡುವದು - ಇವೆಲ್ಲ ಹಿಂಸೆಯೇ. ಹಿಂಸೆಯ ಮಾತನ್ನೇ ಆಡದೆ ಇದ್ದರೂ ಲೇಖನಿಯ ವ್ಯಾಪಾರದಿಂದಲೇ ಜನರಿಗೆ ಹಿಂಸೆಯಾಗುವ ವಾಕ್ಯಗಳನ್ನು ಬರೆದರೂ ಶಸ್ತ್ರದಿಂದ ಒಬ್ಬರನ್ನು ಇರಿದಷ್ಟೇ ಹಿಂಸೆಯಾಗಬಹುದಾಗಿದೆ. ಮತ್ತೊಬ್ಬರಿಗೆ ಹಿಂಸೆಯನ್ನು ಮಾಡುವ ದುರಾಲೋಚನೆಗಳನ್ನು ಮನಸ್ಸಿನಲ್ಲಿ ಮಾಡುವದೂ ಹಿಂಸೆಯೇ. ತ್ರಿಕರಣಗಳಲ್ಲಿ ಈ

ಯಾವ ಹಿಂಸೆಯನ್ನು ಮಾಡಿದರೂ ಮನಸ್ಸಿಗೆ ಕಾಲುಷ್ಯವುಂಟಾಗುವದು ; ತತ್ತ್ವವನ್ನು ತಿಳಿಯುವದಕ್ಕೆ ಅಡ್ಡಿಯಾಗುವದು. ದೇಹಾತ್ಮಬುದ್ಧಿಯು ಬೆಳೆಯುವದು. ವಾಲ್ಮೀಕಿಯು ಮೊದಲು ತಾನಿದ್ದ ಕಿರಾತವೃತ್ತಿಯಲ್ಲಿ ಜನರಿಗೆ ಮಾಡಬಾರದ ಹಿಂಸೆಯನ್ನು ಮಾಡುತ್ತಿದ್ದರೂ ತಾನು ಹಿಂಸಕನೆಂಬ ಅರಿವುಕೂಡ ಇಲ್ಲದೆ ಇರುತ್ತಿದ್ದನು. ಹಾಗೆಯೇ ನಮ್ಮಗಳಿಗೆ ನಾವು ಹಿಂಸಾವೃತ್ತಿಯ ಜೀವನವನ್ನು ಮಾಡುತ್ತಿರುವೆವೆಂಬ ಅರಿವೇ ಇಲ್ಲದಂತಾಗಿದೆ. ನಾರದರ ಉಪದೇಶದಿಂದ ವಾಲ್ಮೀಕಿಯು ತನ್ನ ಪಾಪದ ಮಟ್ಟವನ್ನು ಅರಿತುಕೊಂಡನಲ್ಲದೆ ಅದನ್ನು ಬಿಟ್ಟು ಅದಕ್ಕೆ ಪ್ರತಿಪಕ್ಷವಾದ ಸರ್ವಭೂತಪ್ರೇಮವನ್ನೂ ಸಂಪಾದಿಸಿಕೊಂಡನು. ಪರಮಾತ್ಮನ ಭಕ್ತನಾಗಿ ಲೋಕಕ್ಕೆ ಆದರ್ಶಪ್ರಾಯವಾದ ರಾಮಾಯಣವನ್ನು ರಚಿಸಿದನು. ಗುನ್ನಂಪಟ್ಟೆಯೇ ಚಿನ್ನವೆಂದು ತಿಳಿದಿರುವ ಮಕ್ಕಳಂತೆ ನಾವು ಈಗಿನ ಹಿಂಸಾವೃತ್ತಿಯೇ ನಮಗೆ ಸ್ವಾಭಾವಿಕವೆಂದು ಭಾವಿಸಿಕೊಂಡಿರುತ್ತೇವೆ. ದೊಡ್ಡವರ ಉಪದೇಶದಿಂದ ನಿಜವನ್ನು ಅರಿತುಕೊಂಡರೆ ಚಿತ್ತಕಲ್ಮಷವನ್ನು ಹೆಚ್ಚಿಸುವ ಹಿಂಸೆಯನ್ನು ಬಿಟ್ಟು ಪ್ರತಿಪಕ್ಷಭಾವನೆಯಿಂದ ಸರ್ವಪ್ರೇಮವನ್ನು ಬರಮಾಡಿಕೊಳ್ಳುವೆವು. ಭಗವಂತನ ಕೃಪೆಯನ್ನು ಸಂಪಾದಿಸಿ ಅಹಿಂಸೆಯನ್ನು ನಮ್ಮ ಸ್ವಭಾವವಾಗಿ ಮಾಡಿಕೊಳ್ಳುವದಕ್ಕೂ ಹವಣಿಸುವೆವು.



## ೧೦೦. ಕ್ಷಾಂತಿ 13 - (7)

### (26-9-48)

ಅಮಾನಿತ್ವಾದಿಗಳು ಜ್ಞಾನಕ್ಕೆ ಉಪಯೋಗವಾಗುವದರಿಂದ ಜ್ಞಾನವು ಬೇಕಾದವರು ಅವನ್ನು ಅವಶ್ಯವಾಗಿ ಅನುಷ್ಠಾನಮಾಡಲೇಬೇಕೆಂಬುದು ತಾನೇ ಸಿದ್ಧವಾಗಿದೆ. ಆದರೆ ಜ್ಞಾನವು ಬೇಕಿಲ್ಲದವರೊ? ಮುಮುಕ್ಷುಗಳಲ್ಲದವರೂ ಇವನ್ನು ಮಾಡಬೇಕೆ? ಈ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಬಾದರಾಯಣರು ರಚಿಸಿರುವ `ಸರ್ವಥಾಪಿ ತ ಏವೋಭಯಲಿಜ್ಗಾತ್' (ಸೂ. ೩-೪ - ೩೪ ) ಎಂಬ ಸೂತ್ರದಲ್ಲಿ ಸೂಚಿಸಿರುವ ನ್ಯಾಯವನ್ನು ನೆನಪಿಗೆ ತಂದುಕೊಳ್ಳಬೇಕು. ವೈದಿಕಕರ್ಮಗಳು ಆಯಾ ವರ್ಣಾಶ್ರಮಗಳಿಗೋಸ್ಕರ ವಿಹಿತವಾಗಿದ್ದರೂ ಬರಿಯ ವರ್ಣಾಶ್ರಮಕ್ಕೆ ಮಾತ್ರ ಅವನ್ನು ವಿಧಿಸಿಲ್ಲ; ಅದೇ ಕರ್ಮಗಳನ್ನು ಜ್ಞಾನೋತ್ಪತ್ತಿಗಾಗಿಯೂ ಉಪಯೋಗಿಸಬೇಕು. ಏಕೆಂದರೆ ವರ್ಣಾಶ್ರಮದವರಿಗೂ ಆ ಕರ್ಮಗಳನ್ನು ವಿಧಿಸಿದೆ, ಜ್ಞಾನೋತ್ಪತ್ತಿಗೆಂದೂ ವಿಧಿಸಿದೆ - ಎಂದು ಸೂತ್ರಕಾರರು ನಿರ್ಧರಿಸಿರುತ್ತಾರೆ. ಅದರಂತೆ ಇಲ್ಲಿಯೂ ಅಮಾನಿತ್ವಾದಿಗಳು ಜ್ಞಾನಕ್ಕಾಗಿ ವಿಧಿಸಿರುವದರಿಂದ ಇವು ಜ್ಞಾನೋತ್ಪತ್ತಿಗೆ ಸಹಕಾರಿಗಳಾಗಿ ಅವಶ್ಯವಾಗಿರಲೇಬೇಕು. ಆದರೆ ಯಾರಿಗೆ ಆತ್ಮಜ್ಞಾನದ ಇಚ್ಛೆಯಿರುವದಿಲ್ಲವೋ ಅವರು ತಮ್ಮ ಅಭ್ಯುದಯಕ್ಕಾಗಿ ಇವನ್ನು ಅವಶ್ಯವಾಗಿ ನಡೆಯಿಸಬೇಕು. ಲೋಕವು ನೆಮ್ಮದಿಯಿಂದ ಇರಬೇಕಾದರೆ ಜನರು ಇವನ್ನು ಅವಶ್ಯವಾಗಿ ಅನುಷ್ಠಾನಮಾಡಬೇಕು; ಪರಗತಿಗೂ ಇವು ಅವಶ್ಯವಾಗಿ ಬೇಕಾಗಿರುತ್ತವೆ.

ಮನುಷ್ಯನು ಸಮಾಜದಲ್ಲಿ ವಿನೀತನೆಂದೂ ದೊಡ್ಡಮನುಷ್ಯನೆಂದೂ ಎನ್ನಿಸಿಕೊಳ್ಳುವದಕ್ಕೆ ಈ ಅಮಾನಿತ್ವಾದಿಗಳು ಒಳ್ಳೆಯ ಹೆಗ್ಗುರುತುಗಳಾಗುವವು. ಇವು ನಟನೆಯ ರೂಪದಲ್ಲಿದ್ದರೂ ಸಾಕು, ಜನರಿಗೆ ಇವು ನಟನೆಯೆಂದು ತಿಳಿಯದೆ ಇರುವವರೆಗೂ ಪೂಜ್ಯವಾಗಿಯೇ ಇರುವವು. ಇನ್ನು ನಿಜವಾಗಿಯೇ ಇದ್ದರೆ ಹೇಳುವದೇನು?

ಪಶ್ಚಿಮದೇಶದಲ್ಲಿ ``ಅರ್ಥಕ್ರಿಯಾತತ್ತ್ವಶಾಸ್ತ್ರ" (Pragmatic Philosophy) ಎಂಬ ಒಂದಾನೊಂದು ಬಗೆಯ ತರ್ಕಪ್ರಧಾನವಾದ ತತ್ತ್ವಶಾಸ್ತ್ರ ಉಂಟು. ಆ ದೃಷ್ಟಿಯವರು ಹೇಳುವದೇನೆಂದರೆ ಯಾವದು ಎಲ್ಲಿಯವರೆಗೂ ಸಪ್ರಯೋಜನವಾಗಿ ಕೆಲಸಮಾಡುತ್ತಿರುವದೋ ಅಲ್ಲಿಯವರೆಗೆ ಅದು ತತ್ತ್ವವೆನಿಸುವದು. ಉದಾಹರಣೆಗೆ ಒಂದಾನೊಂದು ಕಾಲದಲ್ಲಿ ಸೂರ್ಯನು ಭೂಮಿಯ ಸುತ್ತಲೂ ತಿರುಗುತ್ತಿರುವನೆಂದು ಜನರು ತಿಳಿದುಕೊಂಡಿದ್ದರು; ಆಗ ಅದನ್ನು ನಂಬಿಕೊಂಡೇ ಜನರು ತಮ್ಮ ವ್ಯವಹಾರವನ್ನು ಸಾಗಿಸುತ್ತಿದ್ದರು. ಆದ್ದರಿಂದ ಆಗ ಅದು ಸತ್ಯವೇ ಎನಿಸಿತ್ತು. ಆದರೆ ಈಗ ಭೌತಿಕವಿಜ್ಞಾನಶಾಸ್ತ್ರದವರು ಸೂರ್ಯನ ಸುತ್ತಲೂ ಭೂಮಿಯೂ ಉಳಿದ ಗ್ರಹಗಳೂ ಸುತ್ತುತ್ತವೆ ಎಂದು ಶೋಧನೆಮಾಡಿ ಕಂಡುಹಿಡಿದಿರುತ್ತಾರೆ; ಈಗ ಆ ಹಳೆಯ ತತ್ತ್ವವು ಕೆಲಸಮಾಡುವದಿಲ್ಲ. ಅದು ಬಾಧಿತವಾಯಿತು. ಆದ್ದರಿಂದ ಅದು ಈಗ ಸತ್ಯವಲ್ಲ - ಎಂದು ಆ ವಾದಿಗಳ ಮತ. ಇದು ಸರಿಯಲ್ಲ. ಏಕೆಂದರೆ ಆಗ ನಿಜ, ಸುಳ್ಳು - ಎಂಬ ವ್ಯವಸ್ಥೆಯೇ ಇಲ್ಲವಾಗುವದು. ಸುಳ್ಳು, ಕಳ್ಳತನ - ಇವು ಅಡ್ಡಿಯಿಲ್ಲದೆ ನಡೆಯುವವರೆಗೂ ಸರಿಯಾದ ನಡತೆಯೆನಿಸಿಯಾವೇನು? ಎಂದಿಗೂ ಇಲ್ಲ. ತಪ್ಪು ಯಾವಾಗಲೂ ತಪ್ಪೇ, ನಿಜವು ಯಾವಾಗಲೂ ನಿಜವೇ. ಖೋಟಿ ನಾಣ್ಯವು ಒಬ್ಬರ ಕೈಯಿಂದ ಒಬ್ಬರ ಕೈಗೆ ಬಹುಕಾಲ ಸಾಗಿದರೆ ಅಷ್ಟು ಕಾಲದವರೆಗೆ ಅದು ಸರಿಯಾದ ನಾಣ್ಯವಾಗಿದ್ದು ಆಮೇಲೆ ಸಲ್ಲದ ನಾಣ್ಯವಾಯಿತೆಂದು ಹೇಳುವದಕ್ಕಾದೀತೆ? ಎಂದಿಗೂ ಇಲ್ಲ. ಸರಿಯಾದ ನಾಣ್ಯವು ಯಾವಾಗಲೂ ಸಾಗುತ್ತದೆ; ಸಲ್ಲದ್ದು ಸಾಗಿತೆಂಬ ಭ್ರಾಂತಿಯಾಗುತ್ತದೆ. ಅಷ್ಟೆ.

ಅಮಾನಿತ್ವಾದಿಗಳು ಕೆಲವು ಕಾಲದವರೆಗೆ ಮಾತ್ರ ಕೆಲಸಮಾಡಿ ಆಮೇಲೆ ಸಲ್ಲದ ನಾಣ್ಯದಂತೆ ಕಾರ್ಯಕಾರಿಯಾಗದೆ ನಿಲ್ಲುವ ಸಾಧನಗಳಲ್ಲ. ಅವು ನಿಜವಾಗಿಯೂ ಆತ್ಮಜ್ಞಾನಕ್ಕೆ ಸಾಧನಗಳು. ಯಾವಾಗಲೂ ಎಲ್ಲಾ ದೇಶಗಳಲ್ಲಿಯೂ ಅವು ಸಾಧನಗಳೇ. ಯಾರು ಬೇಕಾದರೂ ಇವನ್ನು ಅನುಷ್ಠಾನಮಾಡಿನೋಡಬಹುದು. ಧರ್ಮಕ್ಕೂ ಇಹಪರಸುಖಕ್ಕೂ ಮೋಕ್ಷಕ್ಕೂ ಇವು ಸಾಧನಗಳಾಗಿವೆ - ಎಂದು ಶ್ರುತಿಯಲ್ಲಿದೆ. ಬಲ್ಲವರು ಇವನ್ನು ಸಾಧನಮಾಡಿ ನೋಡಿ ಇವುಗಳಿಂದ ಸತ್ಫಲಗಳನ್ನು ಪಡೆದುಕೊಂಡೂ ಇರುತ್ತಾರೆ. ಇವುಗಳನ್ನು ಅನುಸರಿಸುವದು ಮೊದಮೊದಲು ಕಷ್ಟವಾಗಬಹುದು. ಆದರೆ ಎಲ್ಲಾ ಕಷ್ಟವನ್ನೂ ಎದುರಿಸಿಕೊಂಡು ಇವನ್ನು ಸಾಧಿಸಿದರೆ ಅವಶ್ಯವಾಗಿ ಫಲವನ್ನು ಕೊಟ್ಟೇಬಿಡುವವು. ಆದ್ದರಿಂದ ಇವು ತಾತ್ಕಾಲಿಕಸತ್ಯಸಾಧನಗಳಲ್ಲ. ತ್ರೈಕಾಲಿಕಸತ್ಯಸಾಧನಗಳು. ಇವುಗಳನ್ನು ನಾವೆಲ್ಲರೂ ಅನುಷ್ಠಾನಮಾಡಿ ಫಲವನ್ನು ಪಡೆದುಕೊಂಡು ಸುಖಿಸಬಹುದು.

ಪ್ರಕೃತದಲ್ಲಿ ಕ್ಷಾಂತಿಯ ವಿಚಾರವನ್ನು ಮಾಡಬೇಕಾಗಿದೆ. ಕ್ಷಾಂತಿ ಎಂದರೆ ಮತ್ತೊಬ್ಬರು ಅಪರಾಧವನ್ನು ಮಾಡಿದ್ದರೂ ವಿಕಾರವನ್ನು ಹೊಂದದೆ ಇರುವ ಸ್ವಭಾವವು. ಯಾವನು ಏನುಮಾಡಿದರೂ ಸುಮ್ಮನಿದ್ದರೆ ಅಷ್ಟು ಮಾತ್ರದಿಂದ ಕ್ಷಮೆ ಎನಿಸುವದಿಲ್ಲ; ಅದನ್ನು ಜನರು ಹೇಡಿತನವೆನ್ನುತ್ತಾರೆ. ಶಾಸನಮಾಡುವ ಶಕ್ತಿಯೂ ಇದ್ದು ಸಹಿಸುವ ಗುಣವು ಕ್ಷಾಂತಿಯು. ಈ ಗುಣವು ಕ್ಷತ್ರಿಯನಿಗೆ ದೊಡ್ಡ ಭೂಷಣವೆಂದು ಹೊಗಳುತ್ತಾರೆ. ದಂಡಿಸುವ ಅಧಿಕಾರವನ್ನು ನಿಷ್ಕಾರಣವಾಗಿ ಉಪಯೋಗಿಸಬಾರದು; ದಂಡನೆಯು ನ್ಯಾಯ ಪ್ರಾಪ್ತವಾದಾಗ ತಕ್ಕಷ್ಟೇ ಉಪಯೋಗಿಸಬೇಕು. ಅದು ಕ್ಷಮಾಗುಣಯುಕ್ತವಾಗಿರುವ ದಂಡವೆನಿಸುತ್ತದೆ. ಶ್ರೀರಾಮಚಂದ್ರಮೂರ್ತಿಯು ಕಾಕಾಸುರನ ಮೇಲೆ ಬಿಟ್ಟ ಅಸ್ತ್ರವನ್ನು ಕೂಡ ಹಿಂತೆಗೆದುಕೊಳ್ಳುವದಕ್ಕೆ ಸಿದ್ಧನಾಗಿದ್ದನು; ಅಂಥ ಕ್ಷಾಂತಿಯ ಮೂರ್ತಿಯು ಆತನು! ನಾನು ಕಂಡಂತೆ ಒಬ್ಬ ಅಧಿಕಾರಿಗಳು ತಮ್ಮ ಕೈಕೆಳಗಿನ ಉದ್ಯೋಗಸ್ಥರು ಯಾವ ತಪ್ಪನ್ನು ಮಾಡಲಿ, ಅದನ್ನು ಕೂಲಂಕಷವಾಗಿ ವಿಚಾರಮಾಡಿ ಯತ್ನವಿಲ್ಲದೆ ಶಿಕ್ಷೆಮಾಡಲೇಬೇಕಾಗಿಬಂದರೆ ಆಗಲೂ ಶಾಂತಿಯುತರಾಗಿ ಅಪರಾಧಿಗೆ ಎಚ್ಚರಿಕೆ ಕೊಟ್ಟು ಸರಿಯಾದ ಮಾರ್ಗಕ್ಕೆ ತಿರುಗಿಸುವದಕ್ಕೆ ಅವಶ್ಯವಾದಷ್ಟುಮಟ್ಟಿನ ಶಿಕ್ಷೆಯನ್ನು ಮಾತ್ರ ಕೊಡುತ್ತಿದ್ದರು. ನ್ಯಾಯಕ್ಕಾಗಿ ಅವರು ಮಾಡಿದ ದಂಡನೆಯಿಂದ ವ್ಯಥೆಪಟ್ಟವರು ಕೂಡ 'ಅವರದೇನೂ ತಪ್ಪಿಲ್ಲ; ಅಧಿಕಾರಿಗಳಾಗಿ ಮಾಡತಕ್ಕದ್ದನ್ನೇ ಮಾಡಿರುತ್ತಾರೆ' ಎಂದು ಮೆಚ್ಚುತ್ತಿದ್ದರು. ಇದು ಅಧಿಕಾರಿಗಳಲ್ಲಿ ಇರಬೇಕಾದ ಕ್ಷಮಾಗುಣವು. ಆದರೆ ಜ್ಞಾನಕ್ಕೆ ಬೇಕಾಗಿರುವ ಗುಣವು ಹೀಗೆ ಸಾಪೇಕ್ಷವಾಗಿರುವದಿಲ್ಲ. ಮುಮುಕ್ಷುಗಳಾದವರು ಮತ್ತೊಬ್ಬರು ತಮ್ಮನ್ನು ಬಯ್ಯಲಿ, ಹೊಡೆಯಲಿ, ಮನಸ್ಸಿನಲ್ಲಿ ಯಾವ ಪ್ರತೀಕಾರಬುದ್ಧಿಯೂ ಇಲ್ಲದೆ ಸಮಾಧಾನ ಚಿತ್ತದಿಂದಲೇ ವರ್ತಿಸುವರು ! ಇದು ಎಲ್ಲರಿಗೂ ಸಾಧ್ಯವಿಲ್ಲ. ಆದರೂ ನಾವುಗಳೆಲ್ಲರೂ - ಜ್ಞಾನವನ್ನು ಬಯಸದವರು ಕೂಡ- ಕೈಯಲ್ಲಾದಮಟ್ಟಿಗಾದರೂ ಕ್ಷಮೆಯನ್ನು ಅನುಸರಿಸಿದರೆ ಅದರಿಂದ ಕಲ್ಯಾಣವಾದೀತೇ ಹೊರತು ಎಂದಿಗೂ ತೊಂದರೆಯುಂಟಾಗುವದಿಲ್ಲ.

ಈಗಿನ ಕಾಲದಲ್ಲಿ ಜನರಲ್ಲಿ ಪ್ರತೀಕಾರಬುದ್ಧಿಯು ತುಂಬಿರುತ್ತದೆ. ಅಂಥವರು ಸುಮ್ಮನಿದ್ದರೆ ಪ್ರತೀಕಾರಬುದ್ಧಿಯಿಲ್ಲದ್ದರಿಂದ ಎಂದು ಭಾವಿಸಬಾರದು; ಅವರು ಏನೂ ಮಾಡಲಾರದೆ ಇರುತ್ತಾರೆ, ಆದ್ದರಿಂದ ಸುಮ್ಮನಿರುತ್ತಾರೆ. ಆದರೂ ಪ್ರತೀಕಾರಬುದ್ಧಿಯು ಉದಯಿಸಿದರೆ ಅದರ ದುಷ್ಫಲವು ಆಗಲಿಲ್ಲವೆಂದು ಭಾವಿಸಬಾರದು. ಹೊರಗೆ ಯಾವ ಫಲವೂ ಕಾಣದಿದ್ದರೂ ಒಳಗೆ ಆ ಬುದ್ಧಿಗೆ ಅವಕಾಶವನ್ನು ಕೊಟ್ಟವನಿಗೆ ಜ್ವರ ಬಂದಂತೆ ತಳಮಳವುಂಟಾಗುತ್ತದೆ. ಈಗ ವ್ಯಕ್ತಿಗಳೂ ಜನರ ಗುಂಪುಗಳೂ ರಾಷ್ಟ್ರಗಳೂ ಪ್ರತೀಕಾರಬುದ್ಧಿಯನ್ನು ಬಹಳವಾಗಿ ಬೆಳೆಸುತ್ತಾ ಇರುತ್ತವೆ. ಅಕ್ಷಮೆಯೇ ನಮ್ಮಗಳ ಸ್ವಭಾವವಾಗಿಬಿಟ್ಟಿರುತ್ತದೆ! ಅದರಲ್ಲಿಯೂ ಅಲ್ಪಶಕ್ತಿಯ ವ್ಯಕ್ತಿಗಳ ಮೇಲೆ, ಗುಂಪುಗಳಮೇಲೆ, ಅಥವಾ ರಾಷ್ಟ್ರಗಳ ಮೇಲೆ ಅಧಿಕಶಕ್ತಿಯವರು ತೋರಿಸುವ ಪ್ರತೀಕಾರಬುದ್ಧಿಯು ಅಷ್ಟಿಷ್ಟಲ್ಲ! ವೈರದಿಂದ ವೈರವು ಎಂದಿಗೂ ಶಾಂತವಾಗಲಾರದು - ಎಂಬ ಹಿರಿಯರ ವಚನವನ್ನು ನಾವು ಈಗ

ಸಂಪೂರ್ಣವಾಗಿ ಮರೆತಿರುವಂತೆ ಭಾಸವಾಗುತ್ತಿದೆ. ಒಳಗೆ ಪ್ರತೀಕಾರಬುದ್ಧಿಯನ್ನು ಅಡಗಿಸಿಕೊಂಡು ಮೇಲೆ ಕ್ಷಾಂತಿಯನ್ನು ನಟಿಸುವ ಶಕುನಿಮಾವನ ಕ್ಷಮೆಯು ಏತಕ್ಕೂ ಬಾರದು.

ನಿಜವಾದ ಕ್ಷಾಂತಿಯ ಸ್ವರೂಪವೇನು? ಮತ್ತೊಬ್ಬರಿಂದ ನಮಗೆ ಏನಾದರೂ ಅಪಕಾರವಾಗಿದ್ದರೆ ಅವರಿಗೆ ತಿಳಿವಳಿಕೆಯಿಲ್ಲದ್ದರಿಂದ ತಾನೆ? ಆದ್ದರಿಂದ ನಾವು ಅವರಿಗೆ ಸರಿಯಾದ ತಿಳಿವಳಿಕೆ ಬರುವಂತೆ ಮಾಡಿದರೆ, ಅವರಿಗೆ ಪ್ರೀತಿಯಿಂದ ಪ್ರತ್ಯುಪಕಾರವನ್ನು ಮಾಡಿದರೆ, ಆಗ ಅದು ನಿಜವಾದ ಕ್ಷಮೆ ಎನಿಸುವದು. ಜ್ಞಾನಿಗಳಿಗೆ ಇಂಥ ಕ್ಷಮೆ ಸಹಜವಾಗಿರುತ್ತದೆ. ನಮಗೆ ಉಪಕಾರವನ್ನು ಮಾಡಿದವರಿಗೆ ಪ್ರತ್ಯುಪಕಾರವನ್ನು ಮಾಡಿದರೆ ಅದರಲ್ಲೇನು ವಿಶೇಷ? ಅಪಕಾರಿಗಳಿಗೆ ಉಪಕಾರವನ್ನೇ ಮಾಡುವವನೇ ಸಾಧು - ಎಂದು ಬಲ್ಲವರು ಹೇಳುತ್ತಾರೆ. ಸಾಧುಗಳಿಗೆ ಕ್ಷಮೆಯೇ ಅಲಂಕಾರವು. ಕ್ಷಮೆಯ ಪರಾಕಾಷ್ಠೆಯನ್ನು ಎಲ್ಲಿ ಕಾಣಬೇಕು? ಭಗವಂತನನ್ನು ನೋಡಿರಿ. ಆತನು ಪುಣ್ಯವಂತರನ್ನು ಹೇಗೋ ಹಾಗೆ ಪಾಪಿಗಳನ್ನೂ ಕಾಪಾಡುತ್ತಲೇ ಇರುತ್ತಾನೆ. ಆಸ್ತಿಕನ ಮೇಲೆ ಹೇಗೋ ಹಾಗೆ ನಾಸ್ತಿಕನ ಮೇಲೂ ಕನಿಕರವನ್ನು ತೋರಿಸುತ್ತಿದ್ದಾನೆ. ಆತನನ್ನು ಹೃದಯದಲ್ಲಿಟ್ಟ ಸಾಧುಗಳು ಕ್ಷಮಾವಂತರಾಗಿರುವದು ಏನಾಶ್ಚರ್ಯ?

ಪುರಾಣಗಳಲ್ಲಿ ಆಗಾಗ್ಗೆ ಋಷಿಗಳು ಕೋಪದಿಂದ ಶಾಪವನ್ನು ಕೊಟ್ಟರೆಂದು ಬರೆದಿರುವದನ್ನು ಕೇಳಿರುತ್ತೇವೆ. `ಮುನಿಗಳಿಗೆ ಮುನಿಸು ಮೂಗಿನ ತುದಿಯಲ್ಲಿರುತ್ತದೆ' ಎಂದು ಇದರಿಂದ ತೀರ್ಮಾನವನ್ನು ಮಾಡಿಕೊಳ್ಳಬಾರದು. ಆ ಕಥೆಗಳಲ್ಲಿರುವ ತತ್ತ್ವವನ್ನು ನಾವು ನೋಡಬೇಕಾಗುತ್ತದೆ. ಭಾರತಾಂತರ್ಗತವಾದ ಗಜೇಂದ್ರಮೋಕ್ಷದಲ್ಲಿ ಒಂದು ಕಥೆಯಿದೆ. ಹಾಹಾ ಹೂಹೂ ಎಂಬವರಿಬ್ಬರು ಗಂಧರ್ವರು ಸಂಗೀತವಿದ್ಯಾವಿಶಾರದರು. ಒಬ್ಬರಮೇಲೊಬ್ಬರು ಆ ಶಾಸ್ತ್ರದಲ್ಲಿ ಸ್ಪರ್ಧೆಯನ್ನು ಮಾಡುತ್ತಿದ್ದರು. ಇಂದ್ರನು ಕೂಡ ಅವರಲ್ಲಿ ಯಾರಿಗೆ ಹೆಚ್ಚಿನ ನೈಪುಣ್ಯವಿದೆ ಎಂಬುದನ್ನು ನಿರ್ಧರಿಸಲಾರದೆ ಇದ್ದನು. ಆ ಸುರೇಶ್ವರನ ಅಪ್ಪಣೆಯಂತೆ ಅವರಿಬ್ಬರೂ ದೇವಲನೆಂಬ ಮುನಿಶ್ರೇಷ್ಠನ ಬಳಿಗೆ ಬಂದು ``ಸ್ವಾಮಿ, ನಮ್ಮಿಬ್ಬರಲ್ಲಿ ಯಾವನು ಗಾನವಿಶಾರದನೋ ಅವನಿಗೆ ಜಯವನ್ನು ದಯಪಾಲಿಸಬೇಕು" ಎಂದು ಕೇಳಿಕೊಂಡರು. ಆದರೆ ಆತನು ಮೌನವ್ರತದಲ್ಲಿದ್ದುದರಿಂದ ಏನೂ ಮಾತಾಡದೆ ಇದ್ದನು. ಅವರಿಗೆ ಅಸಮಾಧಾನವಾಯಿತು. `ಇವನು ನಿಜವಾಗಿ ಗೀತವಾದ್ಯಗಳ ವಿಚಾರವನ್ನು ತಿಳಿಯದ ಮೂಢನಾಗಿರಬೇಕು; ಇಲ್ಲದಿದ್ದರೆ ಹೀಗೆ ನಮ್ಮ ಗಾನವನ್ನು ಕೇಳಿಯೂ ಸುಮ್ಮನಿರುವನೆ?' ಎಂದು ಗಟ್ಟಿಯಾಗಿ ಮಾತನಾಡಿಕೊಂಡರು. ಆಗ ದೇವಲನು ಕ್ರುದ್ಧನಾಗಿ `ಎಲಾ, ವಿದ್ಯಾಮದದಿಂದ ಉನ್ಮತ್ತರಂತೆ ವರ್ತಿಸುವಿರಲ್ಲ! ಈ ಹೂಹೂ ಗಂಧರ್ವನು ಮೊಸಳೆಯಾಗಿ ಜನಿಸಲಿ! ಹಾಹಾ ಎಂಬ ನೀನು ಮದ್ದಾನೆಯಾಗು!' ಎಂದು ಶಪಿಸಿದನು. ಆಗ ಅವರಿಬ್ಬರೂ ಭಯಗ್ರಸ್ತರಾಗಿ ಆತನ ಕಾಲ್ಗಳಿಗೆರಗಿ ತಮಗೆ ವಿಶಾಪವಾಗುವ ಬಗೆಯನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡರು. ದೇವಲನು `ಮುಂದೆ ನಿಮ್ಮಿಬ್ಬರಿಗೂ ಜಗಳವಾಗಿ ಮೊಸಳೆಯು ಮದ್ದಾನೆಯ ಕಾಲನ್ನು ಹಿಡಿದು

ಎಳೆಯುವ ಸಮಯಕ್ಕೆ ಆ ಆನೆಗೆ ಪೂರ್ವಜನ್ಮದ ಸ್ಮೃತಿಯು ಬರುವದು; ಆಗ ಅದು ನಾರಾಯಣನ ಸ್ತೋತ್ರವನ್ನು ಮಾಡಿ ಆತನ ಪ್ರಸಾದದಿಂದ ನಿಮ್ಮಿಬ್ಬರಿಗೂ ವಿಶಾಪವಾಗುವಂತೆ ಮಾಡುವದು' ಎಂದು ಅನುಗ್ರಹಪೂರ್ವಕವಾಗಿ ಹೇಳಿದನಂತೆ! ಇಲ್ಲಿ ಮುನಿಯ ಕೋಪದಿಂದಾದ ಶಾಪವೇ ಆ ಗಂಧರ್ವರಿಗೆ ಅನುಗ್ರಹವಾಯಿತು. ಇಲ್ಲದಿದ್ದರೆ ಗೀತವಿದ್ಯಾವಿಶಾರದರೆಂದು ದಾಂಭಿಕತನದಿಂದ ಮೆರೆಯುತ್ತಿದ್ದ ಅವರಿಗೆ ಪರಮಾತ್ಮನ ಸ್ಮರಣೆ ಎಲ್ಲಿಂದ ಬರುತ್ತಿತ್ತು? ಈ ಕಥೆಯಲ್ಲಿ ದೇವಲಋಷಿಯ ಕೋಪವು ಎದ್ದು ಕಾಣುವದೊ? ಕ್ಷಮಾಗುಣವು ಎದ್ದುಕಾಣುವದೊ? - ನೀವು ಈಗ ತೀರ್ಮಾನಿಸಿಕೊಳ್ಳಬಹುದು.

ಈ ಕಲಿಯುಗದಲ್ಲಿಯೂ ಕ್ಷಮಾಸಾಗರರಾದ ಸಾಧುಗಳಿಗೇನೂ ಕಡಿಮೆಯಿಲ್ಲ. ಹಿಂದಕ್ಕೆ ನಾನು ದಾವಣಗೆರೆಯಲ್ಲಿದ್ದಾಗ ಒಮ್ಮೆ ಬ್ರಹ್ಮಾನಂದರೆಂಬ ಒಬ್ಬ ಸಾಧುಗಳು ಆ ಊರಿಗೆ ದಯಮಾಡಿಸಿದ್ದರು. ಅವರನ್ನು ಊರಿನ ಭಕ್ತರು ಸತ್ಕಾರಪೂರ್ವಕವಾಗಿ ಕಳುಹಿಸಿಕೊಡುವದಕ್ಕೆಂದು ರೈಲ್ವೆ ಸ್ಟೇಷನ್‌ಗೆ ಬಂದಿದ್ದರು. ರೈಲು ಬರುವದು ತಡವಾಗಿದ್ದರಿಂದ ಸಾಧುಗಳು ದೂರದಲ್ಲಿ ಒಂದು ಕಡೆ ಕುಳಿತಿದ್ದರು. ಆ ಊರಿನಲ್ಲಿದ್ದ ಒಬ್ಬ ಸರ್ಕಾರಿ ಉದ್ಯೋಗಸ್ಥರು ಅಲ್ಲಿಗೆ ಬಂದರು. ಅವರು ಸಂಸ್ಕೃತದಲ್ಲಿ ತಕ್ಕಮಟ್ಟಿಗೆ ವಿದ್ಯಾವಂತರು. ಕೌಪೀನವನ್ನು ಧರಿಸಿ ಬಿಳಿಯ ಧಾವಳಿಯನ್ನು ಹೊದ್ದುಕೊಂಡು ತಲೆಗೊಂದು ಟೊಪ್ಪಿಗೆಯನ್ನು ಹಾಕಿಕೊಂಡು ದೂರದಲ್ಲಿ ಕುಳಿತಿದ್ದ ಈ ಬೈರಾಗಿಯನ್ನು ಕಳಿಹಿಸಿಕೊಡುವದಕ್ಕೆ ಇಷ್ಟೊಂದು ಜನ ಏತಕ್ಕೆ ನೆರೆದಿದೆಯೋ ತಿಳಿಯಬೇಕು ಎಂಬ ಕುತೂಹಲವು ಅವರಿಗೆ ಉಂಟಾಯಿತೋ ಅಥವಾ ತಮ್ಮ ವಿದ್ಯಾಪ್ರೌಢಿಮೆಯನ್ನು ಈ ಸಾಧುಗಳ ಮುಂದೆ ಮೆರೆಯಿಸಿಕೊಳ್ಳಬೇಕೆಂಬ ಹಮ್ಮು ಉದಯಿಸಿತೋ ಹೇಳಲಾರೆ. ಅಂತೂ ಅವರು ಸಾಧುಗಳ ಬಳಿಗೆ ಬಂದ ಕೂಡಲೆ ಸಂಸ್ಕೃತದಲ್ಲಿ ಮಾತನಾಡಿಸುವದಕ್ಕೆ ಮೊದಲುಮಾಡಿದರು. ಸಾಧುಗಳ ಮಾತ್ರ `ರಾಮ್ ರಾಮ್' ಎಂದೇ ಉತ್ತರವನ್ನು ಕೊಡುತ್ತಿದ್ದರು. ಸಂಭಾಷಣೆಯ ಒಂದು ಭಾಗವು ಹೀಗೆ ನಡೆಯಿತು! `ಕುತ ಆಯಾತಾ ಭವನ್ತಃ?'; `ರಾಮರಾಮ್!'; `ಕುತ್ರ ವಾ ಗಮ್ಯತೇ?', `ರಾಮರಾಮ್!'; `ಕಿಮೇತೇ ಭವತಾಂ ಶಿಷ್ಯಾಃ?' `ರಾಮರಾಮ್!'; `ಕಿಮುಪದಿಶ್ಯತೇ ಏತೇಭ್ಯಃ?', `ರಾಮರಾಮ್!' ಆ ಉದ್ಯೋಗಸ್ಥರಿಗೆ ಹಿಡಿಸಲಾರದಷ್ಟು ಕೋಪವು ಬಂದಿತು. ತಾವು ಕೇಳುವ ಪ್ರಶ್ನೆಗೆ ಯಾವ ಉತ್ತರವನ್ನೂ ಕೊಡದೆ `ರಾಮ ರಾಮ್!' ಎಂದೇ ಹೇಳುತ್ತಾ ಬಂದರೇನು ಗತಿ? ಇದು ಸಾಧುತನವೊ, ಅಹಂಕಾರವೊ? ಎಂದುಕೊಂಡು `ಮಮ ಪ್ರಶ್ನಾನಾಂ ಕಿಮುತ್ತರಮ್? ನೂನಂ ಭವತಾಂ ಚಿತ್ತಮ್ ಅನ್ಯತ್ರ ವ್ಯಾಪೃತಮ್!' ಎಂದರು. ಅಧಿಕಾರಿಗಳ ದಂಭವೂ ಕೋಪವೂ ಅವರ ವಾಣಿಯ ಧ್ವನಿಯಿಂದಲೂ ಅವರ ಮುಖಭಂಗಿಯಿಂದಲೂ ಹೊರಸೂಸುತ್ತಿದ್ದವು. ಆದರೆ ಇದಕ್ಕೂ ಸಾಧುಗಳು ಶಾಂತತೆಯಿಂದ `ರಾಮ ರಾಮ್!' ಎಂದೇ ಉತ್ತರವನ್ನು ಕೊಟ್ಟರು ! ಆ ಅಧಿಕಾರಿಗಳಿಗೆ ಏನೂ ತೋಚಲಿಲ್ಲ. ಆ ಸಾಯಂಕಾಲ ನಾವಿಬ್ಬರೂ ಒಂದುಕಡೆ ಸೇರಿದಾಗ `ನಿಮ್ಮ ಸಾಧುಗಳೇಕೆ ಹೀಗಾಡುತ್ತಾರೆ? ಸಾಧುಗಳಿಗೆ ಇಂಥ ಹೆಮ್ಮೆಯಿರಬಹುದೆ? ಅಥವಾ ತಾವು ನಾಮಸ್ಮರಣೆ ಮಾಡುವವರೆಂಬುದನ್ನು

ತೋರಿಸಿಕೊಳ್ಳುವ ದಾಂಭಿಕತನವೊ, ಇದು?' ಎಂದು ಕೇಳಿದರು. ಆಗ ನಾನು ನನ್ನ ಅಭಿಪ್ರಾಯವನ್ನು ಅವರಿಗೆ ತಿಳಿಸಿದೆನು. ನಿಜವಾಗಿ ಆ ಮಹಾತ್ಮರು ಯಾವಾಗಲೂ `ರಾಮ ರಾಮ್!' ಎನ್ನುತ್ತಲೇ ಇರುತ್ತಿದ್ದರು. ಅವರಿಗೆ ರಾಮನಾಮವೇ ಜೀವನವಾಗಿತ್ತು. ತಾವು ಎಲ್ಲಿ ಹೋದರೂ ಅಲ್ಲಿ ಉಳಿದುಕೊಳ್ಳಬೇಕೆಂದು ಸ್ಥಲದವರು ನಿರ್ಬಂಧಿಸಿದರೆ `ರಾಮನಾಮದ ತೇರಾ ಕೋಟಿ ಜಪ (ಹದಿಮೂರು ಕೋಟಿಯ ಜಪ) ವನ್ನು ನೀವೆಲ್ಲರೂ ಸೇರಿ ಅನುಷ್ಠಾನ ಮಾಡುವದಾದರೆ ಇರುತ್ತೇನೆ' ಎನ್ನುತ್ತಿದ್ದರು. ಅವರಿಗೆ `ತೇರಾ ಕೋಟಿ ಬ್ರಹ್ಮಾನಂದರು' ಎಂಬ ಅನ್ವರ್ಥವಾದ ಹೆಸರೂ ಬಂದಿತ್ತು. ಹೀಗಿರುವಲ್ಲಿ ರೈಲ್ವೇಸ್ಟೇಷನ್ ಬಳಿಯಿದ್ದಾಗ `ರಾಮ ರಾಮ್" ಎಂದದ್ದು ದಾಂಭಿಕತನವಾದೀತೆ? ಇನ್ನು ಅಧಿಕಾರಿಗಳು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರವು `ರಾಮ ರಾಮ್" ಎಂಬ ಮಾತಿನಿಂದಲೇ ಬರುವಹಾಗಿದ್ದರೆ ಅವರೇಕೆ ಬೇರೆ ಮಾತನಾಡಬೇಕು? ನೋಡಿರಿ: `ನೀವೆಲ್ಲಿಂದ ಬಂದಿರಿ? ಎಲ್ಲಿಗೆ ಹೋಗುತ್ತೀರಿ?' ಎಂಬ ಪ್ರಶ್ನೆಗಳಿಗೆ `ರಾಮ ರಾಮ್" ಎಂಬ ಉತ್ತರವು ಹೇಗೆ ಹೊಂದುತ್ತದೆ! ನಾವೆಲ್ಲ ಪರಬ್ರಹ್ಮಮೂರ್ತಿಯಾದ ರಾಮನಿಂದಲೇ ಬಂದಿರುವೆವು, ಅವನಲ್ಲಿಗೇ ಹೋಗುವೆವು. ಇದನ್ನು ಚೆನ್ನಾಗಿ ಬಲ್ಲ ಸಾಧುಗಳು ಪ್ರಶ್ನೆಗೆ ಉತ್ತರವನ್ನು ಕೊಡುವ ನೆಪದಿಂದಲೇ ಒಂದು ದೊಡ್ಡ ಉಪದೇಶವನ್ನು ಮಾಡಿದರು. `ಇವರೆಲ್ಲ ನಿಮ್ಮ ಶಿಷ್ಯರೊ?' ಎಂಬ ಪ್ರಶ್ನೆಗೆ `ನನಗೆ ಎಲ್ಲರೂ ರಾಮಸ್ವರೂಪರೇ' ಎಂಬ ಉತ್ತರವು ಹೊಂದುವದಿಲ್ಲವೆ? ಇನ್ನು `ಇವರಿಗೇನು ಉಪದೇಶಮಾಡುತ್ತೀರಿ?' ಎಂದು ಕೇಳಿದ್ದಕ್ಕೆ `ರಾಮ ರಾಮ್!' ಎಂಬುದು ಎಂಥ ಸಮಂಜಸವಾದ ಉತ್ತರವು! `ನನ್ನ ಪ್ರಶ್ನೆಗಳಿಗೆ ಉತ್ತರವೇನು? ನಿಮ್ಮ ಮನಸ್ಸು ಎಲ್ಲಿಯೋ ವ್ಯಾಪೃತವಾಗಿರಬೇಕು!' ಎಂದು ಅಧಿಕಾರಿಗಳು ಕ್ರೋಧದಿಂದ ಕೇಳಿದರೂ `ನಿಮ್ಮ ಪ್ರಶ್ನೆಗೆಲ್ಲ ರಾಮ ರಾಮ್! ಎಂಬುದೇ ಉತ್ತರವು; ನನ್ನ ಮನಸ್ಸು ರಾಮರಾಮ್ ಎಂಬ ನಾಮದಲ್ಲಿಯೇ ವ್ಯಾಪೃತವಾಗಿದೆ' ಯೆಂದೇ ಉತ್ತರವನ್ನು ಕೊಟ್ಟ ಸಾಧುಗಳ ಕ್ಷಮಾಗುಣವು ಎಂಥದ್ದು!

ಅಕ್ಷಮೆಗೆ ಅಶಕ್ತಿ, ಅಸಹನೆ, ಅಜ್ಞಾನ, ಪರಮಾತ್ಮನಿಂದ ವಿಮುಖರಾಗಿರುವದು - ಇವೇ ಮುಖ್ಯಕಾರಣಗಳು. ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡಬೇಕು - ಎಂದು ಕಲ್ಪಿಸಿಕೊಳ್ಳುವದೇ ಅಕ್ಷಮೆ. ಅದನ್ನು ತಡೆದುಕೊಂಡು ನಾವು ಕ್ಷಮೆಯ ನಿಧಿಯಾದ ಪರಮಾತ್ಮನನ್ನೂ ಅವನ ಭಕ್ತರ ಅನುಗ್ರಹವನ್ನೂ ಪಡೆದುಕೊಂಡು ಕ್ಷಮಾಗುಣವನ್ನು ಸಂಪಾದಿಸಿಕೊಳ್ಳಬೇಕು. ಈ ಕ್ಷಮಾಗುಣವು ಒಂದು ಜ್ಞಾನಸಾಧನವು.

ಆರ್ಜವ ಎಂಬುದು ಈ ಪಟ್ಟಿಯಲ್ಲಿರುವ ಮುಂದಿನ ಗುಣವು. ಆರ್ಜವ ಎಂದರೆ ಋಜುತೆ; ಮನಸ್ಸು, ವಾಕ್ಕು, ಕಾಯ - ಇವು ಮೂರರಲ್ಲಿಯೂ ಒಂದೇ ಸಮನಾಗಿರುವ ಸ್ವಭಾವವು. ಇದಕ್ಕೆ ವಿರುದ್ಧವಾದದ್ದು ಒಳಗೊಂದು ಹೊರಗೊಂದು ಬಗೆಯಾಗಿರುವ ಕುಟಿಲತೆ. ಒಬ್ಬ ಸುಭಾಷಿತಕಾರನು `ಮಹಾತ್ಮರಿಗೆ ಮನಸ್ಸಿನಲ್ಲಿಯೂ ಒಂದೇ, ವಾಕ್ಕಿನಲ್ಲಿಯೂ ಒಂದೇ, ಕರ್ಮದಲ್ಲಿಯೂ ಒಂದೇ, ಆದರೆ ದುರಾತ್ಮರಿಗೆ ಮನಸ್ಸಿನಲ್ಲಿ ಒಂದು, ವಾಕ್ಕಿನಲ್ಲಿ ಇನ್ನೊಂದು,

ಕರ್ಮದಲ್ಲಿ ಮತ್ತೊಂದು ಹೀಗೆ ಇರುತ್ತದೆ' ಎಂದಿರುತ್ತಾನೆ. ಹೀಗೆ ಒಂದೊಂದು ಕರಣದಲ್ಲಿ ಒಂದೊಂದು ಬಗೆಯಾಗಿರುವದು ವ್ಯವಹಾರಕೌಶಲವೆಂದೂ ಇಲ್ಲದಿದ್ದರೆ ಆರ್ಜವವನ್ನೇ ಅನುಸರಿಸಿದರೆ ಜನರು ನಮ್ಮನ್ನು ಸುಲಿಗೆಮಾಡಿಬಿಡುವರೆಂದೂ ಕೆಲವರು ಹೆದರಿಸುವದುಂಟು. ರಾಜನೀತಿಯಲ್ಲಿ ವಂಚನೆ, ಮಾಯಾ, ಕಪಟ ಇವುಗಳಿರುವವನೇ ನಿಪುಣನೆಂದೂ ಎಣಿಸುವದುಂಟು. ಆದರೆ ಈ ವಕ್ರನೀತಿಯು ಈಗಿನವರಲ್ಲಿ ಹೆಚ್ಚುತ್ತಾ ಹೋದಹಾಗೆಲ್ಲ, ನಮ್ಮ ದಿನದಿನದ ವ್ಯವಹಾರದಲ್ಲಿ ಬಿಕ್ಕಟ್ಟುಗಳು ಹೆಚ್ಚುತ್ತಾಬಂದಿರುವವೆಂಬುದನ್ನು ನಾವು ಗಮನಿಸಿದರೆ, ಋಜುತ್ವದ ಹೆಚ್ಚುಗಾರಿಕೆಯು ಎದ್ದುಕಾಣುವದು. ಲೋಕದಲ್ಲಿ ಋಜುತ್ವವಿಲ್ಲದವರು ಹೆಚ್ಚುತ್ತಿರುವದರಿಂದಲೂ ಅಂಥವರು ಜನನಾಯಕರ ಸ್ಥಾನದಲ್ಲಿಯೂ ಸೇರಿಕೊಳ್ಳುತ್ತಿರುವದರಿಂದಲೂ ಆರ್ಜವವು ಅತ್ಯವಶ್ಯವಾದ ಗುಣವೆಂದು ಮಾಡುವ ಉಪದೇಶವು ಯಾವ ಪರಿಣಾಮವನ್ನೂ ಮಾಡದೆ ಇರುತ್ತದೆ. ಸಾಮಾನ್ಯಸ್ಥಲಗಳಲ್ಲಿ ಮಾಡಿದ ಪಾಪವು ಕ್ಷೇತ್ರಗಳಲ್ಲಿ ಹೋಗುವದೆಂದೂ, ಆದರೆ ಕ್ಷೇತ್ರದಲ್ಲಿಯೇ ಇದ್ದುಕೊಂಡು ಮಾಡಿದ ಪಾಪವು ವಜ್ರಲೇಪವಾಗುವದೆಂದೂ ಶಾಸ್ತ್ರವಚನವಿದೆ. ಇದರಂತೆ ತಿಳಿಯದ ಮೂಢಜನರು ಅನುಸರಿಸುವ ಅನಾರ್ಜವವನ್ನು ಮೇಲಿನ ಸ್ಥಾನದಲ್ಲಿರುವವರು ತಮ್ಮ ಋಜುತ್ವದ ಮೇಲುಪಙ್ಕ್ತಿಯಿಂದಲೂ ನಯಭಯಯುಕ್ತವಾದ ಉಪದೇಶಗಳಿಂದಲೂ ಪರಿಹಾರಮಾಡಬಹುದು. ಆದರೆ ಸಮಾಜದ ನಡತೆಗೆ ಹೊಣೆಗಾರರಾಗಿರುವವರೇ ಅನಾರ್ಜವವನ್ನು ಸ್ವೀಕರಿಸಿದರೆ, ಮೆಚ್ಚಿದರೆ, ಅಥವಾ ಜನರಿಗೆ ರೀತ್ಯಂತರದಿಂದ ಉಪದೇಶಮಾಡಿದರೆ ಆಗುವ ಹಾನಿಯನ್ನು ಹೇಳುವದೇನಿದೆ? ಈಗಿನ ಕಾಲದಲ್ಲಿ ಕ್ಷಮೆಯಿಲ್ಲದಿರುವವರ ಸಂಖ್ಯೆಯು ಹೆಚ್ಚುತ್ತಿರುವಂತೆಯೇ ಋಜುತ್ವವಿಲ್ಲದವರ ಸಂಖ್ಯೆಯೂ ಹೆಚ್ಚುತ್ತಿದೆ. ದಿನದಿನದ ವ್ಯವಹಾರವು ಸಾಗುವದಕ್ಕೆ ಇದರಿಂದ ಎಷ್ಟು ಅಡ್ಡಿಯಾಗುವದೆಂಬುದನ್ನು ಪ್ರತಿಯೊಬ್ಬನೂ ಅರಿತಿದ್ದಾನೆ; ಆದರೆ ತನ್ನ ಅನಾರ್ಜವದಿಂದ ಯಾರಿಗೂ ತೊಂದರೆ ಇಲ್ಲವೆಂದೇ ಪ್ರತಿಯೊಬ್ಬನೂ ಬಗೆಯುತ್ತಿದಾನೆ! ಆದ್ದರಿಂದ ಲೋಕವ್ಯವಹಾರದ ಹಾದಿಯಲ್ಲಿ ಮುಳ್ಳು ಎಳೆದುಕೊಳ್ಳುವ ಜನರ ಈ ವ್ಯಾಪಾರವನ್ನು ಬಲ್ಲವರು ಕೂಡಲೆ ತಡೆಗಟ್ಟಬೇಕು. ವ್ಯವಹಾರಕ್ಕೇ ಅನಾರ್ಜವವು ತಡೆಯಾಗಿರುವಾಗ ಧರ್ಮಜ್ಞಾನಗಳ ವಿಷಯದಲ್ಲಿ ಇದು ಎಂಥ ಪ್ರತಿಬಂಧಕವಾಗಿರುವದೆಂಬುದನ್ನು ಹೇಳುವದೇನಿದೆ?

ನಾವು ಋಜುತ್ವವೆಂದರೇನೆಂಬ ಪುಸ್ತಕಜ್ಞಾನವನ್ನು ಮಾತ್ರ ಸಂಪಾದಿಸಿಕೊಂಡರೆ ಸಾಲದು. ಅದನ್ನು ಅನುಭವದಲ್ಲಿ ಕಂಡುಕೊಳ್ಳಬೇಕು. ಆಗಲೇ ಅದರ ಪ್ರಯೋಜನವು ಲಭಿಸುತ್ತದೆ. ಈ ಸಾಧನಗಳೆಲ್ಲ ಅಂತಃಕರಣಕ್ಕೇ ಸೇರಿದವುಗಳು. ಆದ್ದರಿಂದ ಇವು ಅಂತಃಕರಣದಲ್ಲಿ ಅನುಭವಗೋಚರವಾಗಬೇಕು. ಆತ್ಮಪರೀಕ್ಷೆಯಿಂದಲೇ ಈ ಸಾಧನಗಳು ನಮಗೆ ಅಳವಟ್ಟಿರುವವೋ ಇಲ್ಲವೋ ನೋಡಿಕೊಳ್ಳಬೇಕು. ಹೀಗೆ ಮಾಡುತ್ತಾಬಂದರೆ ಇವು ಕಾಲಾನುಕಾಲಕ್ಕೆ ಜ್ಞಾನಸಾಧನವಾಗುತ್ತವೆ.



# ೧೦೧. ಆಚಾರ್ಯೋಪಾಸನೆ 13 - (7)

## (17-10-48)

ಜ್ಞಾನಸಾಧನಗಳೊಳಗೆ ಈ ಹೊತ್ತು ಆಚಾರ್ಯೋಪಾಸನೆಯ ವಿಚಾರವಾಗಬೇಕಾಗಿದೆ. ತತ್ತ್ವಾರ್ಥವನ್ನು ತಿಳಿಸುವವರಲ್ಲಿ ಗೌರವವನ್ನು ತೋರಿಸುವದು ಎಲ್ಲಾ ದೇಶಗಳಲ್ಲಿಯೂ ಉಂಟು. ಆದರೆ ಆಚಾರ್ಯರನ್ನು ಪರಮಾತ್ಮನೆಂದೇ ತಿಳಿದು ಉಪಾಸನೆಮಾಡುವದು ನಮ್ಮ ದೇಶದಲ್ಲಿ ಮಾತ್ರ ಆಚರಣೆಯಲ್ಲಿರುವ ಕ್ರಮವು.

ತತ್ತ್ವಜ್ಞಾನವು ವರ್ತಮಾನಪತ್ರಿಕೆಗಳಲ್ಲಿ ಬರುವ ಸುದ್ದಿಯ ಜ್ಞಾನದಂತಲ್ಲ. ಸುದ್ದಿಕೊಡುವವರಿಗೆ ತಕ್ಕಷ್ಟು ಕಾಲದ ಅವಕಾಶವಿಲ್ಲದಿರುವದರಿಂದಲೂ ದೇಶಾಂತರದ ಭಾಷೆಯಲ್ಲಿ ತಂತಿಯ ಮೂಲಕವಾಗಿ ಮುಟ್ಟುವ ಸುದ್ದಿಯನ್ನು ದೇಶಭಾಷೆಯ ಅನುವಾದದಿಂದ ತಿಳಿಸಿಕೊಡಬೇಕಾಗಿರುವದರಿಂದ ಆ ಕ್ರಮದಲ್ಲಿ ಆಗಬಹುದಾದ ಪ್ರಮಾದಗಳಿಂದಲೂ ಸುದ್ದಿಯೂ ಸರಿಯಾಗಿ ತಲುಪುವದಕ್ಕೆ ಎಡೆಯಿಲ್ಲದಂತೆ ಆಗಿರುತ್ತದೆ. ನಿನ್ನೆ ಕೊಟ್ಟ ಸುದ್ದಿಯು ಸುಳ್ಳೆಂದು ಈ ದಿನದ ಪತ್ರಿಕೆಯಲ್ಲಿ ಬರೆದರೂ ನಿನ್ನೆ ಏನಿತ್ತೆಂಬುದನ್ನು ಓದುವದಕ್ಕೆ ಕೂಡ ಬಿಡುವಿಲ್ಲದ ವಾಚಕರೇ ಬಹಳ; ಆದ್ದರಿಂದ ಜನರು ಬಂದಷ್ಟು ಸುದ್ದಿಗೇ ಶರಣುಹೋಗಬೇಕಾಗಿದೆ. ಇದೇನೋ ವಿಷಾದಕರವೇ ಸರಿ. ಆದರೆ ಎಷ್ಟೋ ಸಲ ನಿಜವಾದ ಸುದ್ದಿಯೇ ತಿಳಿದರೂ ಅದರಿಂದಾಗುವ ಲಾಭವು ಅಷ್ಟರಲ್ಲಿಯೇ ಇರುತ್ತದೆ. ತತ್ತ್ವಜ್ಞಾನವೂ ವರ್ತಮಾನದ ಸುದ್ದಿಯ ಜ್ಞಾನದ ಸ್ಥಾನದಲ್ಲಿದ್ದಿದ್ದರೆ ಯಾರಾದರೂ ಎಲ್ಲಿಯಾದರೂ ಅದನ್ನು ಸಂಪಾದಿಸಿಕೊಳ್ಳಬಹುದಾಗಿತ್ತು. ಆದರೆ ಹಾಗಿಲ್ಲ. ಯಾರಲ್ಲಿಗೆ ಹೋಗಿ ವಿಷಯವನ್ನು ಚರ್ಚಿಸಿ ತತ್ತ್ವವನ್ನು ನಿರ್ಧಾರಮಾಡಿಕೊಳ್ಳಬೇಕೋ ಅಂಥವರ ಬಳಿಗೆ ಹೋಗಿ ವಿಷಯವನ್ನು ತಿಳಿದುಕೊಳ್ಳಲು ನಾವು ಸಿದ್ಧರಾಗಿರುವದಿಲ್ಲ. ನಮಗೆ ಏನಾದರೂ ತಿಳಿದರೆ ಸಾಕು ಎಂದು ಅಷ್ಟಕ್ಕೇ ತೃಪ್ತಿಪಡುತ್ತೇವೆ. ಆದ್ದರಿಂದ ನಮಗೆ ತತ್ತ್ವವು ದಕ್ಕದೆ ಇದೆ.

ನಿಜವಾಗಿ ನೋಡಿ. ಹಸಿದವನು ಹೊಟ್ಟು ತಿನ್ನಬಹುದೇನು? ತಿನ್ನುವದಕ್ಕೆ ಒಳ್ಳೆಯ ಪದಾರ್ಥವು ಬೇಡವೆ, ಆ ಪದಾರ್ಥವನ್ನು ಕೂಡಿಟ್ಟಿರುವ ಅಂಗಡಿಯವನು ಯಾರೆಂಬ ತಿಳಿವಳಿಕೆ ಬೇಡವೆ? ಉಂಡ ಬಾಯಿಗೆ ಒಗ್ಗರಣೆ ಎಂದ ಹಾಗೆ ಚಿನಕುರಳಿಸ್ಥಾನದಲ್ಲಿ ತತ್ತ್ವಜ್ಞಾನವು ಇರಬಾರದು. ಹಾಗಿದ್ದರೆ ಈಗಿನ ಕಾಲದಲ್ಲಿ ತತ್ತ್ವಜ್ಞಾನವನ್ನು ತಿಳಿಸುವದಕ್ಕೆ ಅನೇಕ ಪುಸ್ತಕಗಳಿವೆ. ಅವುಗಳ ಮೂಲಕವಾಗಿ ಪರಮಾರ್ಥವನ್ನು ತಿಳಿದುಕೊಳ್ಳಬಹುದಾಗಿತ್ತು. ನಿಜವಾಗಿಯೂ ಹಾಗಿಲ್ಲ. ಅದನ್ನು ಆಚಾರ್ಯರ ಮೂಲಕವೇ ತಿಳಿದುಕೊಳ್ಳಬೇಕು. `ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' ಎಂದು ಶ್ರುತಿಯು ಹೇಳುತ್ತಿದೆ. ಗುರುಮೇವ - ಗುರುವಿನ ಹತ್ತಿರಕ್ಕೇ ಹೋಗಬೇಕು. ಅಭಿಗಚ್ಛೇತ್- ಅಭಿಪ್ರಾಯಪೂರ್ವಕವಾಗಿ ಹೋಗಬೇಕು. ತತ್ತ್ವಜ್ಞಾನವೇ ನಮಗೆ ಬೇಕು ಎಂಬ ಹಂಬಲಿಕೆಯಿಂದ ಹೋಗಬೇಕು, ಸುಮ್ಮನೆ ಕುತೂಹಲದಿಂದ ಹೋಗತಕ್ಕದ್ದಲ್ಲ;

ಅಥವಾ ತಾನೇ ವಿಚಾರಮಾಡಿದರಾಯಿತು ಎಂದು ಔದಾಸೀನ್ಯದಿಂದ ಇರತಕ್ಕದ್ದೂ ಅಲ್ಲ. ಗುರುವಿನ ಹತ್ತಿರಕ್ಕೇ, ಅಭಿಮಾನಪೂರ್ವಕವಾಗಿಯೇ ಹೋಗಬೇಕು. ಮನೆಗೆ ಬೆಂಕಿ ಹತ್ತಿರುವ ಕಾಲದಲ್ಲಿ ಯಾರೂ ಉಪನ್ಯಾಸವನ್ನು ಕೇಳುವದಕ್ಕೆ ನಿಲ್ಲುವದಿಲ್ಲ; ಅವರಿಗೆ ಬೆಂಕಿಯನ್ನು ಆರಿಸುವದಕ್ಕೆ ನೀರು ಬೇಕಾಗಿರುತ್ತದೆ. ಇದರಂತೆ ತಾಪತ್ರಯದಿಂದ ತಪ್ತರಾಗಿರುವವರಿಗೆ ಬರಿಯ ಪುಸ್ತಕಗಳ ಓದು ಸಾಲದು, ಜಾಣರಾದವರು ಮಾಡುವ ಭಾಷಣಗಳೂ ಸಾಲವು. ಅವರಿಗೆ ಅನಿತ್ಯವಾದ ಫಲದಿಂದ ತೃಪ್ತಿಯಿಲ್ಲ; ನಿತ್ಯ ಫಲವೇ ಅವರಿಗೆ ಬೇಕಾಗಿರುತ್ತದೆ. ಅವರ ತಪ್ತಹೃದಯಕ್ಕೆ ಶಾಂತಿ ಬೇಕು. ಆದ್ದರಿಂದಲೇ ಅಂಥ ಶಾಂತಿಯನ್ನು ಕೊಡಬಲ್ಲ ಗುರುವಿನ ಬಳಿಗೇ ಹೋಗಬೇಕು ಎಂದು ಶ್ರುತಿಯು ಹೇಳುತ್ತಿದೆ. ಶ್ರೀಶಂಕರಾಚಾರ್ಯರು ಈ ವಾಕ್ಯದ ತಾತ್ಪರ್ಯವನ್ನು ತಿಳಿಸುವದಕ್ಕೆ ಹೊರಟಾಗ ಹೇಳಿರುವದೇನೆಂದರೆ `ಶಾಸ್ತ್ರಜ್ಞನಾದರೂ ಸ್ವಾತಂತ್ರ್ಯದಿಂದ ಬ್ರಹ್ಮಜ್ಞಾನವನ್ನು ಹುಡುಕಬಾರದು ಎಂಬುದು ಗುರುವನ್ನೇ ಎಂದು ಒತ್ತಿಹೇಳಿರುವದರ ಪ್ರಯೋಜನವು'. `ಅದನ್ನು ಪ್ರಣಿಪಾತದಿಂದಲೂ ಪರಿಪ್ರಶ್ನೆಯಿಂದಲೂ ಸೇವೆಯಿಂದಲೂ ತಿಳಿದುಕೊ; ತತ್ತ್ವದರ್ಶಿಗಳಾದ ಜ್ಞಾನಿಗಳು ಈ ಜ್ಞಾನವನ್ನು ನಿನಗೆ ಉಪದೇಶಮಾಡುವರು' ಎಂದು ಇಲ್ಲಿಯಂತೆ ಹಿಂದೆಯೂ ಹೇಳಿಯೇ ಇರುತ್ತದೆ.

ಇಲ್ಲಿ ಆಚಾರ್ಯನನ್ನು ಉಪಾಸನೆಮಾಡಬೇಕೆಂದು ಹೇಳಿರುತ್ತದೆ. ಉಪಾಸನೆ ಎಂದರೇನು? ತಾತ್ಪರ್ಯದಿಂದ ಆಚಾರ್ಯನನ್ನೇ ಸೇವಿಸುತ್ತಿರುವದು; ಸುಮ್ಮನೆ ಕುತೂಹಲದಿಂದ ಒಂದೆರಡು ದಿನ ದೊಡ್ಡವರನ್ನು ದರ್ಶನಮಾಡಿ ಅವರ ಸೇವೆಯನ್ನು ಮಾಡಿದೆನೆಂದರೆ ಸಾಲದು. ಪ್ರಾಣಾಪಾಯ ಸಮಯದಲ್ಲಿ ವೈದ್ಯರನ್ನು ಹೇಗೆ ಅನುಸರಿಸುವೆವೋ, ಬಾಯಾರಿಕೆಯಾದಾಗ ಜಲಾಶಯವನ್ನೇ ಹೇಗೆ ಸೇರುವೆವೋ ಹಾಗೆ ಆಚಾರ್ಯರ ಸೇವೆಯನ್ನು ಮಾಡಬೇಕು. ಅದೇಕೆ? ಎಂದರೆ ಆಚಾರ್ಯನೆಂದರೇನೆಂಬುದನ್ನು ಮೊದಲು ತಿಳಿದುಕೊಂಡರೆ ಈ ಪ್ರಶ್ನೆಗೆ ಉತ್ತರವು ಸಿಕ್ಕುತ್ತದೆ. ಆಚಾರ್ಯನಾದವನು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆಗಿರುತ್ತಾನೆ. ಶ್ರೋತ್ರಿಯನೆಂದರೆ ಶಾಸ್ತ್ರದ ಹೃದಯವನ್ನೆಲ್ಲ ಬಲ್ಲವನಾಗಿ ನಮ್ಮ ಸಂಶಯಗಳನ್ನೆಲ್ಲ ಕತ್ತರಿಸಬಲ್ಲವನು. ಬ್ರಹ್ಮನಿಷ್ಠನೆಂದರೆ ಪರಮಾತ್ಮನೇ ತನ್ನ ಆತ್ಮನೆಂಬುದನ್ನು ನಿಶ್ಚಯಿಸಿಕೊಂಡು ಆತನಲ್ಲಿಯೇ ನೆಲೆನಿಂತಿರುವವನು. ಇಂಥ ಆಚಾರ್ಯನಿಗೆ ಎಲ್ಲರೂ ಬಂದು ನನ್ನನ್ನು ಸೇವೆಮಾಡಲಿ ಎಂಬ ಹವಣಿಕೆಯೇನೂ ಇರುವದಿಲ್ಲ. `ಗುರುಗಳನ್ನು ಸೇವಿಸದಿದ್ದರೆ ಗುಟ್ಟನ್ನು ಬಿಡುವಂತಿಲ್ಲ' ಎಂಬ ಸಾಮಾನ್ಯಜನರ ನುಡಿಯು ಆತನಿಗೆ ಅನ್ವಯಿಸುವದಿಲ್ಲ. ತತ್ತ್ವವನ್ನು ತಿಳಿದುಕೊಳ್ಳುವವರು ಬಂದರೆ ಸಾಕು ; ಯೋಗ್ಯರಾದ ಶಿಷ್ಯರಿಗೆ ಎಂದು ಈ ತತ್ತ್ವವನ್ನು ಹೇಳಿಯೇನು? - ಎಂದೇ ಅವನು ಚಡಪಡಿಸುತ್ತಿರುತ್ತಾನೆ. ಆದ್ದರಿಂದ ಆತನನ್ನು ಸೇವೆಮಾಡುವದು ರಹಸ್ಯವನ್ನು ಕಸಿದುಕೊಳ್ಳುವದಕ್ಕಲ್ಲ. ಮತ್ತೇಕೆ? ಎಂದರೆ ಪರಮಾರ್ಥತತ್ತ್ವವು ಅತ್ಯಂತವಾಗಿ ಸೂಕ್ಷ್ಮವಾಗಿರುತ್ತದೆ. ಸ್ಥೂಲದೃಷ್ಟಿಯಿಂದ ಅದನ್ನು ತಿಳಿಯುವದಕ್ಕೆ ಆಗುವದಿಲ್ಲ. ಕೂಟಸ್ಥವಾಗಿ ಅಚಿಂತ್ಯವಾಗಿ ಅವ್ಯಕ್ತವಾಗಿರುವ ಆ ಅತೀಂದ್ರಿಯತತ್ತ್ವವನ್ನು ನಾವೇ ತಿಳಿದುಕೊಳ್ಳಲಾರೆವು.

ನಮಗೆ ಉತ್ಕೃಷ್ಟವಾದ ದ್ರಾಕ್ಷಿಯ ಹಣ್ಣಿನ ಸವಿ ಬೇಕೆಂದಿಟ್ಟುಕೊಳ್ಳಿ; ಆ ಸವಿಯು ರಸವಿಲ್ಲದೆ, ರಸವು ದ್ರಾಕ್ಷಿಯ ಹಣ್ಣಿಲ್ಲದೆ ಸಿಕ್ಕೀತೆ? ಇದರಂತೆ ಆಚಾರ್ಯರ ಪ್ರೇಮರಸದಲ್ಲಿ ಬ್ರಹ್ಮತತ್ತ್ವದ ಸವಿಯ ಆನಂದವು ದೊರಕುತ್ತದೆ. ಪ್ರೇಮದಿಂದ ಅವರು ಒಂದು ಮಾತನಾಡಿದರೂ ಸಾಕು, ಪರಮಾತ್ಮನ ಪ್ರೇಮವು ನಮ್ಮ ಹೃದಯದಲ್ಲಿಯೂ ಉಕ್ಕಿ ಹರಿಯುವದು!

ಭಗವಂತನಿಗೆ ಸರ್ವಪ್ರಾಣಿಗಳಲ್ಲಿಯೂ ನಿರುಪಾಧಿಕವಾದ ಪ್ರೇಮವಿರುತ್ತದೆ. ಆ ಭಗವಂತನು ಪ್ರಹ್ಲಾದನ ಮೇಲಿನ ಪ್ರೇಮದಿಂದ ಅಚೇತನವಾದ ಕಂಬದಿಂದ ಕೂಡ ಹೊರಕ್ಕೆ ಬಂದು ತನ್ನ ನಿರುಪಮಪ್ರೇಮದ ಮಹಿಮೆಯನ್ನು ತೋರಿಸಿಕೊಂಡನು! ಅಂಥ ಪ್ರೇಮವೇ ಭಗವದ್ಭಕ್ತನಾದ ಜ್ಞಾನಿಯಲ್ಲಿಯೂ ಇರುತ್ತದೆ. ಪ್ರೇಮವನ್ನು ನಾವು ಬಲವಂತವಾಗಿ ಎಳೆದುಕೊಳ್ಳುವದಕ್ಕಾಗುವದಿಲ್ಲ; ಆಚಾರ್ಯನೇ ನಮಗೆ ಕೊಡಬೇಕು. ನಾವು ನಮ್ಮ ಅಹಂತೆಯನ್ನು ಕಳೆದುಕೊಳ್ಳಬೇಕು; ವಿನಯದಿಂದ ಆಚಾರ್ಯನನ್ನು ಸೇವಿಸಬೇಕು. ಹಾಗಾದರೆ ಆತನ ಪ್ರೇಮರಸವು ಎತ್ತರದ ಸ್ಥಲದಿಂದ ತಗ್ಗಿಗೆ ಹರಿದುಬರುವ ನೀರಿನಂತೆ ನಮ್ಮ ಹೃದಯಕ್ಕೂ ಇಳಿದುಬರುವದು. ಆದ್ದರಿಂದ ಅಹಂತೆಯನ್ನು ಮಟ್ಟುಮಾಡುವದಕ್ಕಾಗಿ ಆಚಾರ್ಯಸೇವೆಯು ಅತ್ಯವಶ್ಯವಾಗಿರುತ್ತದೆ.

ಹೀಗೆ ಎಷ್ಟು ದಿನ ಸೇವೆಮಾಡುತ್ತಿರಬೇಕು? - ಎಂದು ಯಾರಾದರೂ ಕೇಳಬಹುದು. ಆದರೆ ಇದೊಂದು ಕಾಲೇಜ್ ಕೋರ್ಸ್‌ನಂತಲ್ಲ; ಇಂತಿಷ್ಟು ಫೀ ಕೊಡಬೇಕು, ಇಷ್ಟು ದಿನ ಟರ್ಮ್ ತುಂಬಬೇಕು - ಎಂಬ ನಿಯಮದಿಂದ ಸಿಕ್ಕುವ ಫಲವಲ್ಲ, ಇದು. ನೀನು ಹೀಗೆ ಇಂತಿಷ್ಟು ಕಾಲ ಸೇವೆಮಾಡಿದರೆ ನಾನು ಅನುಗ್ರಹಿಸುವೆನು - ಎಂದು ಯಾವ ಆಚಾರ್ಯನೂ ಹೇಳುವದಿಲ್ಲ. ಇದೆಲ್ಲ ಪ್ರೇಮದ ಕಾರ್ಯವು. ಒಂದೇ ದಿನದಲ್ಲಿ ನಮಗೆ ಆಚಾರ್ಯನ ಅನುಗ್ರಹವು ಆಗಬಹುದು; ಅಥವಾ ಅತಿದೀರ್ಘಕಾಲವನ್ನೇ ತೆಗೆದುಕೊಳ್ಳಬಹುದು. ನಮ್ಮ ಪ್ರಯತ್ನವನ್ನು ನಾವು ಮಾಡುತ್ತಿರಬೇಕು; ಕಾಲಾನುಕಾಲಕ್ಕೆ ಫಲವು ತಾನೇ ಆಗುವದು. ಆಚಾರ್ಯರ ಇಂಗಿತವನ್ನರಿತು ಅವರಿಗೆ ಸಂತೋಷವನ್ನು ಉಂಟುಮಾಡುವದು ನಮ್ಮ ಕೆಲಸ. ಆಮೇಲೆ ಅನುಗ್ರಹವನ್ನು ಮಾಡಿ - ಎಂದು ಹೇಳಿಕೊಳ್ಳಬೇಕಾದದ್ದೇನೂ ಇಲ್ಲ. ಬೀಜವನ್ನು ಬಿತ್ತಿದಮೇಲೆ ಗೊಬ್ಬರವನ್ನೂ ನೀರನ್ನೂ ಹಾಕುವದು ನಮ್ಮ ಭಾಗದ ಕೆಲಸವು; ಆಮೇಲೆ ಅದು ತಾನೇ ಮೊಳೆತು ಚಿಗುರಿ ಮರವಾಗಿ ಹಣ್ಣುಬಿಡುವದು. ಅದಕ್ಕೆ ತಕ್ಕಷ್ಟು ಕಾಲವು ಬೇಕೇಬೇಕು.

ಆಚಾರ್ಯಸೇವೆಯ ಸ್ವರೂಪವು ಏನೆಂಬುದು ಈಗ ನಮಗೆ ಸ್ವಲ್ಪ ತಿಳಿಯುತ್ತದೆ. ಅಹಂಕಾರವು ಮಟ್ಟಾಗುವದು ಇದರಲ್ಲಿ ಪರಮಧ್ಯೇಯವು. ತತ್ಪರತೆಯೂ ಶ್ರದ್ಧೆಯೂ ಇಂದ್ರಿಯನಿಗ್ರಹವೂ ಇದಕ್ಕೆ ಅಂಗಗಳು. ಗುರುವನ್ನು ಸಾಕ್ಷಾತ್ಪರಮೇಶ್ವರನೆಂದೇ ಭಾವಿಸಬೇಕು. `ಆಚಾರ್ಯಂ ಮಾಂ ವಿಜಾನೀಯಾತ್' ಎಂದೇ ಭಗವಂತನು ಹೇಳಿರುತ್ತಾನೆ. ಸೇವೆಗೆ ಹೊರಗಿನ ಕರ್ಮವು ಮುಖ್ಯವಲ್ಲ; ಭಕ್ತಿಯೇ ಮುಖ್ಯ. ಆಚಾರ್ಯರ ಅನುಗ್ರಹವೆಂಬುದು ಭಗವಂತನ

ದಯೆ. ನಾವು ಮಾತ್ರ ನಮ್ಮ ಸರ್ವಸ್ವವನ್ನೂ ಅರ್ಪಿಸಿಬಿಡಬೇಕು. ಸರ್ವಸ್ವವೆಂದರೆ ಹಣಕಾಸು, ಆಸ್ತಿ - ಮುಂತಾದದ್ದಲ್ಲ; ಮುಖ್ಯವಾಗಿ ಅಹಂತೆಯನ್ನು ಅರ್ಪಿಸಿಬಿಡಬೇಕು. ನಾನುನನ್ನದೆಂಬ ಅಭಿಮಾನವು ಪೂರ್ಣವಾಗಿ ತೊಲಗಬೇಕು. ಆಚಾರ್ಯನಿಗೂ ಭಗವಂತನಿಗೂ ಯಾವದೊಂದು ಭೇದವೂ ಇಲ್ಲವೆಂದು ನಂಬಬೇಕು. ಮೊದಲು ಭಗವಂತನೂ ಆಚಾರ್ಯನೂ ಒಂದಾಗಿರುತ್ತಾರೆ. ಆಚಾರ್ಯನ ಅನುಗ್ರಹವಾದಾಗ ಗುರುಶಿಷ್ಯರಿಬ್ಬರೂ ಒಂದಾಗುವರು. ಈ ಮೂಲಕವಾಗಿ ಶಿಷ್ಯನೂ ಭಗವಂತನೂ ಒಂದಾಗುವರು. ಆಚಾರ್ಯನು ಯಾವದೋ ಒಂದು ಮಂತ್ರಶಕ್ತಿಯಿಂದ, ಯಾವದೋ ಮಾಯೆಯಿಂದ, ಇಂಥ ಸಿದ್ಧಿಯನ್ನು ಪಡೆದುಕೊಂಡಿರುತ್ತಾನೆಂದು ತಿಳಿಯಬಾರದು. ಸರ್ವಸ್ವವನ್ನೂ ತೊರೆದು ಭಗವಂತನಲ್ಲಿ ನೆಲೆನಿಂತಿರುವದೇ ಅವನ ಮಹಿಮೆ; ಅದೇ ಅವನ ಮಂತ್ರ, ಮಾಯೆ - ಎಲ್ಲವೂ. `ಬ್ರಹ್ಮಣ್ಯುಪರತಃ ಶಾನ್ತಃ ನಿರಿನ್ಧನ ಇವಾನಲಃ' ಎಂದಂತೆ ಬ್ರಹ್ಮದಲ್ಲಿಯೇ ಉಪರತಿಯನ್ನು ಪಡೆದು ಕಟ್ಟಿಗೆಯನ್ನೇ ಸುಟ್ಟು ಸುಮ್ಮನಿರುವ ಬೆಂಕಿಯ ಹಾಗೆ ಭಗವಂತನಲ್ಲಿ ನೆಲೆನಿಂತು ಶಾಂತಿಯಿಂದೊಡಗೂಡಿರುವದೇ ಆಚಾರ್ಯನ ಸ್ವಭಾವವು. ಇಂಥವನನ್ನು ಶ್ರದ್ಧಾಭಕ್ತಿಗಳಿಂದ ಸೇವಿಸಿದರೆ, ಆತನ ದರ್ಶನ, ಸ್ಪರ್ಶನ, ಸಂಭಾಷಣ, ಸೇವೆ - ಮುಂತಾದವುಗಳಿಂದ ಸಂಸ್ಕಾರವನ್ನು ಹೊಂದಿದ ಶಿಷ್ಯನಿಗೆ ಸಿದ್ಧಿಯಾಗುವದು. ತಪಸ್ವಿಯಾದ ಅರ್ಚಕನು ಮಾಡಿದ ಪೂಜೆಯಿಂದ ಕಲ್ಲಿನ ಪ್ರತಿಮೆಯಲ್ಲಿಯೂ ಮಹಿಮೆಯು ತೋರಿಕೊಳ್ಳುತ್ತದೆ. ಚೇತನನಾದ ಶಿಷ್ಯನು ಭಗವದಭಿನ್ನನಾದ ಆಚಾರ್ಯನನ್ನು ಸೇವೆಗೈದರೆ ಫಲಪ್ರಾಪ್ತಿಯಾಗುವದು ಆಶ್ಚರ್ಯವೆ? ಜ್ಞಾನಾಂಜನಶಲಾಕೆಯಿಂದ ಮನಸ್ಸೆಂಬ ಒಳಗಣ್ಣನ್ನು ತೆರೆಯುವಂತೆ ಮಾಡುವ ಪರಮಾನುಗ್ರಹವೇ ದೊರೆಯುವದು.

ಹಿಂದಕ್ಕೆ ಬ್ರಹ್ಮಚಾರಿಗಳು ಕೆಲವರು ಗುರುವಿನ ಸಮೀಪದಲ್ಲಿಯೇ ತಮ್ಮ ಜೀವಿತಕಾಲದಲ್ಲೆಲ್ಲ ಇದ್ದುಕೊಂಡು ಸೇವೆಮಾಡುತ್ತಿದ್ದರು. ಅವರು ಗುರುವಿನ ಹತ್ತಿರದಲ್ಲಿಯೇ ಇದ್ದು ವೇದಾಧ್ಯಯನವಿಚಾರಾದಿಗಳಿಂದ ತಮ್ಮ ಶರೀರವನ್ನು ಸವೆಯಿಸಿ ಈ ಲೋಕದ ವ್ಯಾಪಾರವನ್ನು ಮುಗಿಸುತ್ತಿದ್ದರು. ಇಂಥವರಿಗೆ ನೈಷ್ಠಿಕಬ್ರಹ್ಮಚಾರಿಗಳೆಂದು ಹೆಸರು. ಇಂಥವರಿಗೆ ದೇವಯಾನ ಮಾರ್ಗದಿಂದ ಅತ್ಯಂತವಾಗಿ ಮೇಲ್ತರದ ಪುಣ್ಯಲೋಕವೇ ಪ್ರಾಪ್ತವಾಗುತ್ತದೆ ಎಂದು ಉಪನಿಷತ್ತಿನಲ್ಲಿ ಹೇಳಿರುತ್ತದೆ. ನೈಷ್ಠಿಕಬ್ರಹ್ಮಚರ್ಯ, ವಾನಪ್ರಸ್ಥ, ಸಂನ್ಯಾಸ - ಮುಂತಾದ ಆಚರಣೆಗಳಲ್ಲಿ ಕೆಲವನ್ನು ಕಲಿವರ್ಜ್ಯವೆಂದು ಸ್ಮೃತಿಗಳಲ್ಲಿ ಪರಿಗಣಿಸಿರುವದುಂಟು. ವೇದವಿಹಿತವಾದದ್ದನ್ನು ಹೀಗೆ ತಿರಸ್ಕರಿಸುವದೇಕೆಂದು ಕೆಲವರು ಅಚ್ಚರಿಪಡುವರು. ಈ ಆಚಾರಗಳು ಎಲ್ಲರಿಗೂ ಸುಲಭಸಾಧ್ಯವಲ್ಲ; ಇಂದ್ರಿಯನಿಗ್ರಹವನ್ನು ಮಾಡಿದ ಮಹಾವೀರ್ಯರಿಗೆ ಮಾತ್ರ ದಕ್ಕುತ್ತದೆ. ಆದ್ದರಿಂದ ಈ ಕಲಿಯುಗದಲ್ಲಿ ಸರಿಯಾದ ಅಧಿಕಾರಿಗಳು ಸಿಕ್ಕುವದಿಲ್ಲವೆಂದೂ ಅನಧಿಕಾರಿಗಳು ಇವನ್ನು ಅನುಷ್ಠಾನಮಾಡಿ ಈ ಉತ್ತಮ ಧ್ಯೇಯಗಳಿಗೇ ಕಲಂಕವನ್ನು ತರುವ ಸಂಭವವಿದೆಯೆಂದೂ ಮನದಂದು ಸ್ಮೃತಿಕಾರರು ಹೀಗೆ ಬರೆದಿರುತ್ತಾರೆ, ಅಷ್ಟೆ.

ಆಚಾರ್ಯೋಪಾಸನೆ ಎಂಬುದೊಂದು ವ್ರತ. ಅದು ಒಂದು ದೊಡ್ಡ ಸಾಧನವು; ಮುಖ್ಯ ಸಾಧನಗಳೆಲ್ಲ ಒಂದು ತೂಕವಾದರೆ ಬ್ರಹ್ಮಚರ್ಯೆಯಿಂದ ಶ್ರದ್ಧಾತಾತ್ಪರ್ಯಪೂರ್ವಕವಾಗಿ ಗುರುಸೇವೆಯನ್ನು ಮಾಡಿಕೊಂಡು ಜ್ಞಾನವನ್ನು ಸಂಪಾದಿಸುವದಕ್ಕೆ ಯತ್ನಿಸುವದೇ ಒಂದು ತೂಕ. ಈಗಿನ ಕಾಲದಲ್ಲಿ ಆಚಾರ್ಯಂಮನ್ಯರು ಹೇರಳವಾಗಿರುತ್ತಾರೆ. ತಮ್ಮ ಪುರುಷಾರ್ಥವನ್ನು ತಾವು - ಸಾಧಿಸಿಕೊಳ್ಳಲಾರದೆ ಇದ್ದರೂ ಹೆರರ ಪುರುಷಾರ್ಥ ಸಾಧನೆಯ ಗುತ್ತಿಗೆಯನ್ನು ಹೊರುವದಕ್ಕೆ ತವಕಿಸುತ್ತಿರುವ ಮೂಢರು ಹಲವರು ಇರುತ್ತಾರೆ. ದಾಂಭಿಕರೂ ವಂಚಕರೂ ಗುರುಪೀಠವನ್ನೇರುವದಕ್ಕೆ ಸಿದ್ಧರಾಗಿರುತ್ತಾರೆ. ಗುರುವಾಗಿರುವದೆಂಬುದೇ ಒಂದು ಕಳ್ಳ ಸಂತೆಯ ವ್ಯಾಪಾರವಾಗಿಬಿಟ್ಟಿದೆ. ಆಚಾರ್ಯಸೇವೆಯು ನಮ್ಮಲ್ಲಿ ರಕ್ತಗತವಾಗಿರುತ್ತದೆ. ಆದ್ದರಿಂದ ನಮಗೆ ಸಹಜವಾಗಿ ಶ್ರದ್ಧೆಯುಂಟಾಗಿಬಿಡುತ್ತದೆ. ನಮ್ಮ ಮನಸ್ಸಿನ ತಾಪತ್ರಯಕ್ಕೆ ಏನಾದರೂ ಸಮಾಧಾನವು ಸಿಕ್ಕೀತೆಂಬ ಒಳ್ಳೆಯ ಭಾವನೆಯಿಂದ ಇಂಥ ಧೂರ್ತರ ಬಲೆಗೆ ಬಿದ್ದು ಮೋಸಹೋಗುವೆವು. ಹಾಗಾದರೆ ಗುರುಸೇವೆಯೆಂಬ ಸಾಧನವನ್ನೇ ಬಿಟ್ಟುಬಿಡೋಣವೆ? ಎಂದು ಕೇಳಬಹುದು; ಹಾಗಲ್ಲ. ಭಿಕ್ಷುಕರ ಭಯದಿಂದ ಅಡಿಗೆಯನ್ನೇನೂ ನಾವು ಮಾಡದೆ ಇರುವದಿಲ್ಲ. ಅದರಂತೆ ವಂಚಕರ ಅಂಜಿಕೆಯಿಂದ ಆಚಾರ್ಯೋಪಾಸನೆಯೆಂಬ ಅಮೂಲ್ಯಸಾಧನವನ್ನು ಬಿಡುವದಕ್ಕೆ ಕಾರಣವೇನೂ ಇಲ್ಲ.

ಕಂಡಕಂಡವರನ್ನು ಗುರುಗಳೆಂದು ನಂಬುವದೂ ಮೂರ್ಖತನವು; ಎಲ್ಲರನ್ನೂ ಸಂಶಯಯುಕ್ತವಾದ ಕಣ್ಣಿನಿಂದ ನೋಡುತ್ತಾ ಶ್ರೇಯಸ್ಸಿನಿಂದಲೇ ವಂಚಿತನಾಗುವದೂ ಮೂರ್ಖತನವು. ತತ್ತ್ವದ ಬಾಯಾರಿಕೆಯು ನಮಗೆ ನಿಜವಾಗಿದ್ದರೆ ಸರಿಯಾದ ಗುರುವಿನ ಪಾದಕಮಲದ ಅರವಟ್ಟಿಗೆಯೇನೂ ದೂರವಾಗಿರುವದಿಲ್ಲ. ತತ್ತ್ವಜಿಜ್ಞಾಸುವಾಗಿರುವವನಿಗೆ ಮೋಸಗಾರರ ಮಾತು, ಚರ್ಯೆ - ಮುಂತಾದವುಗಳಿಂದ ಅವರು ಠಕ್ಕರೆಂಬುದು ಬಲುಬೇಗನೆ ಗೊತ್ತಾಗಿ ಬಿಡುವದು; ನಿಜವಾದ ಗುರುಗಳ ಮಹಿಮೆಯೂ ಮನವರಿಕೆಯಾಗಿಯೇ ತೀರುವದು. ದೊಡ್ಡವರು ಸಹಜವಾಗಿರುತ್ತಾರೆ. ಅವರಲ್ಲಿ ಮಾಯಾವಂಚನಾದಿಗಳು ಯಾವವೂ ಇರುವದಿಲ್ಲ. ಪಾಪಾಚರಣೆಗೆ ಒಂದಿಷ್ಟೂ ಎಡೆಯಿರುವದಿಲ್ಲ. ಸದ್ಗುರುಗಳೆಂಬುದಕ್ಕೆ ಅವರ ವಿದ್ಯೆ, ಮಾತಿನ ಚಮತ್ಕಾರ, ಶಬ್ದಾಡಂಬರ, ಶಾಸ್ತ್ರವಚನಗಳ ಸೂರೆ - ಇವು ಯಾವವೂ ಗುರುತಲ್ಲ. ಸಹಜವಾದ ವರ್ತನೆ, ಸರಳವಾದ ಮಾತುಕಥೆ - ಇವೆರಡರಿಂದಲೇ ಅವರು ನಮ್ಮನ್ನು ಸನ್ಮಾರ್ಗಕ್ಕೆ ಎಳೆಯುತ್ತಾರೆ. ಅವರ ಬಳಿಯಲ್ಲಿದ್ದರೆ ನಮಗೆ ಪಾಪವಾಸನೆಯು ದೂರವಾಗುತ್ತದೆ; ಅವರ ಸದ್ಬೋಧೆಯಿಂದ ನಮ್ಮ ಶೋಕಮೋಹಗಳು ಸಡಿಲವಾಗುತ್ತವೆ. ಇದೇ ನಿಜವಾದ ಗುರುಗಳ ಗುರುತು.

ಹಿಂದಕ್ಕೆ ನಾರದರು ಭಗವಾನ್ ಸನತ್ಕುಮಾರರ ಬಳಿಗೆ ಶಿಷ್ಯರಾಗಿ ಬಂದರು. ಆಗ ಸನತ್ಕುಮಾರು `ನಿನಗೇನು ತಿಳಿಯುತ್ತದೆ?' ಎಂದು ಕೇಳಿದರು. ನಾರದರು ವೇದಗಳು, ಇತಿಹಾಸಪುರಾಣಗಳು, ವ್ಯಾಕರಣ, ಗಣಿತ - ಮುಂತಾದ ಆಗಿನ ಕಾಲದ ವಿದ್ಯೆಯನ್ನೆಲ್ಲ

ಕಲಿತಿದ್ದರು. ಆದರೆ ಆತ್ಮವಿದ್ಯೆಯನ್ನು ಕಲಿತಿರಲಿಲ್ಲ. `ಆತ್ಮನನ್ನು ಅರಿತುಕೊಂಡರೆ ಶೋಕವನ್ನು ದಾಟಬಹುದು - ಎಂದು ಬಲ್ಲವರಿಂದ ಕೇಳಿರುತ್ತೇನೆ. ದಯವಿಟ್ಟು ನನಗೆ ಆತ್ಮವಿದ್ಯೆಯನ್ನು ಹೇಳಿಕೊಡಬೇಕು' ಎಂದು ಕೇಳಿಕೊಂಡರು. ಸನತ್ಕುಮಾರರು `ನೀನು ಕಲಿತಿರುವದೆಲ್ಲ ಬರಿಯ ನಾಮವು ; ಆದರೆ ಆನಂದರೂಪನಾದ ಪರಮಾತ್ಮವಸ್ತುವನ್ನು ತಿಳಿದುಕೊಂಡರೆ ಮಾತ್ರ ಶೋಕವು ಹೋಗುವದು' ಎಂದು ತಿಳಿಸಿದರು. ಅವರು ತಿಳಿಸಿಕೊಟ್ಟ ಭೂಮವಿದ್ಯೆಯಿಂದ ನಾರದರು ಅವಿದ್ಯಾಸಮುದ್ರದ ಪಾರವನ್ನು ಕಂಡುಕೊಂಡರು, ಶೋಕವನ್ನೂ ದಾಟಿದರು. ಇದೇ ಸದ್ಗುರುವಿನ ಅನುಗ್ರಹವು. ಸದ್ಗುರುವು ಬರಿಯ ನಾಮರೂಪವಾದ ಮಾತುಗಳನ್ನು ಆಡುವವನಲ್ಲ. ರೋಗಿಯ ಬಳಿಯಲ್ಲಿ ವೈದ್ಯಶಾಸ್ತ್ರದ ಉಪನ್ಯಾಸವನ್ನು ಮಾಡಿದರೆ ರೋಗವು ಹರಿದೀತೆ? ಸದ್ಗುರುವೆಂದರೆ ಬರಿಯ ವೇದಾಂತದ ಎಂಜಲುಮಾತುಗಳನ್ನು ಆಡಿದರಾದೀತೆ? ಕರುಣೆಯಿಂದ ಆಚಾರ್ಯನು ಆಡಿದ ಮಾತು ನಮಗೆ ಮನಶ್ಶಾಂತಿಯನ್ನು ಕೊಡಬೇಕು. ಅದೇ ಆತನು ಸದ್ಗುರುವೆನ್ನುವದಕ್ಕೆ ಸಾಕ್ಷಿ.

ಆಚಾರ್ಯನ ಬಳಿಗೆ ವಿನಯದಿಂದ ಹೋಗಬೇಕು. ನಿರ್ವಂಚನೆಯಿಂದ ಅವನ ಉಪದೇಶವನ್ನು ಕೇಳಬೇಕು. ಆತನನ್ನು ಉಪಾಸನೆಮಾಡುತ್ತಿರಬೇಕು. ಉಪಾಸನೆ ಎಂದರೆ ಹತ್ತಿರವೇ ಇರುವದು, ಶರೀರದಿಂದ ಗುರುಶಿಷ್ಯರು ಹತ್ತಿರವಿದ್ದರೆ ಸಾಲದು; ವಿನಯದ ಮಾತುಕಥೆಗಳನ್ನು ಆಡಿದರೂ ಸಾಲದು. ಹೃದಯದಿಂದ ಹತ್ತಿರವಿರಬೇಕು. ಇಬ್ಬರು ಶೆಟ್ಟರು ಮಾತನಾಡುತ್ತಿದ್ದರಂತೆ. ಮನೆಯ ಶೆಟ್ಟಿ ನಗದುಹಣವನ್ನು ಎಣಿಸುತ್ತಿದ್ದನು. ತಟ್ಟನೆ ಗಾಳಿ ಬೀಸಿದ್ದರಿಂದ ದೀಪವು ಆರಿಹೋಯಿತು. ಕೂಡಲೆ ಅವನು ಹತ್ತಿರವಿದ್ದ ಸ್ನೇಹಿತನ ಕೈಹಿಡಿದುಕೊಂಡು `ಭಾವ, ಎಷ್ಟು ದಿನವಾಯಿತು, ನಮ್ಮ ಮನೆಗೆ ಊಟಕ್ಕೆ ಬಂದು! ಈ ಹೊತ್ತು ನಿಜವಾಗಿ ಬಂದೇತೀರಬೇಕು!' ಎಂದು ಕೂಗಿಕೊಂಡನು. `ಒಳಗಡೆ ಯಾರೊ? ದೀಪವನ್ನು ತನ್ನಿರೊ, ದೀಪ ಆರಿಹೋಗಿದೆ!' ಎಂದೂ ಕೂಗಿಹೇಳುತ್ತಿದ್ದನು. ನೆರೆಮನೆಯ ಶೆಟ್ಟಿ `ಅವಶ್ಯ ಆಗಲಪ್ಪ, ಬರುತ್ತೇನೆ; ಅದೇನು ಹೆಚ್ಚಿನ ಮಾತು ! ಬಿಡು!' ಎಂದರೂ ಕೈಬಿಡದೆ `ಖಂಡಿತ ಬರಬೇಕು ತಿಳಿಯಿತೆ?' ಎಂದು ಹೇಳುತ್ತಲೇ ಇದ್ದನು. ಇಷ್ಟರಲ್ಲಿ ಮನೆಯವರು ದೀಪವನ್ನು ತಂದರು. ಆಗ ಅವನು `ಎಲ್ಲಪ್ಪ! ನಮ್ಮಂಥವರ ಮನೆಗೆ ಎಷ್ಟು ಬೇಡಿಕೊಂಡರೆತಾನೆ ಬಂದೀಯೆ?' ಎಂದು ಕೈಬಿಟ್ಟನಂತೆ ! ಗುರುಶಿಷ್ಯರ ಹೃದಯಗಳು ಹೀಗೆ ದೂರವಿರಬಾರದು. ಆಚಾರ್ಯರ ಹೃದಯವೇ ಶಿಷ್ಯರ ಹೃದಯದಲ್ಲಿರಬೇಕು. ಅವರು ನಿಜವಾಗಿ ಆಚಾರ್ಯರಾಗಿದ್ದರೆ, ನಾವು ನಿಜವಾಗಿಯೂ ಶಿಷ್ಯರಾಗಿದ್ದರೆ, ಅವರೂ ಶಾಸ್ತ್ರದ ಅರ್ಥವನ್ನು ತಿಳಿದು ತಾವೂ ಅದರಂತೆ ನಡೆಯುತ್ತಾ ನಮಗೂ ಬೋಧಿಸುವವರಾಗಿದ್ದರೆ, ನಾವೂ ತತ್ಪರತೆಯಿಂದಲೂ ಪ್ರೇಮದಿಂದಲೂ ಅಹಂತಾನಿರಸನಪೂರ್ವಕವಾಗಿ ಅವರಿಗೆ ಶರಣುಹೋಗಿದ್ದರೆ, ಅವಶ್ಯವಾಗಿ ಅವರ ಅನುಗ್ರಹದಿಂದ ನಮ್ಮ ಹೃದಯದಲ್ಲಿ ಅಧ್ಯಾತ್ಮಪ್ರಕಾಶವು ಆಗಿಯೇತೀರುತ್ತದೆ.

ಇದೊಂದು ಶಾಸ್ತ್ರವು. ಶಾಸ್ತ್ರೀಯವಾದ ರೀತಿಯಿಂದ ನಾವು ಆಚಾರ್ಯೋಪಾಸನೆಯನ್ನು ಮಾಡಿದರೆ ಆತ್ಮಜ್ಞಾನಿಯಾದ ಆಚಾರ್ಯನು ನಮ್ಮ ಇಷ್ಟಾರ್ಥಗಳೆಲ್ಲವನ್ನೂ ನೆರವೇರಿಸಬಲ್ಲನು, `ತಸ್ಮಾದಾತ್ಮಜ್ಞಂ ಹ್ಯರ್ಚಯೇತ್ ಭೂತಿಕಾಮಃ' ಆದ್ದರಿಂದ ಆತ್ಮಜ್ಞಾನಿಯನ್ನು ಭೂತಿಕಾಮನಾದವನು ಅರ್ಚಿಸಬೇಕು - ಎಂದು ಶ್ರುತಿ ಸಾರುತ್ತಿದೆ. ಇಂಥ ಪ್ರಯೋಗವನ್ನು ಮಾಡಿದರೆ ಇಂಥ ಫಲಿತವುಂಟಾಗುವದೆಂದು ಭೌತಿಕವಿಜ್ಞಾನಶಾಸ್ತ್ರಜ್ಞರು ಕಂಡುಹಿಡಿದಿದ್ದಾರಲ್ಲವೆ? ಇದರಂತೆ ಆತ್ಮವಿದ್ಯಾವಿಶಾರದರು ಆಚಾರ್ಯನನ್ನು ಹೀಗೆ ಹೀಗೆ ಉಪಾಸನೆ ಮಾಡಿದರೆ ನಮ್ಮ ಇಷ್ಟಾರ್ಥಗಳೆಲ್ಲ ನೆರವೇರುವವೆಂದು ಕಂಡುಹಿಡಿದಿರುತ್ತಾರೆ. ಆದರೆ ಭೌತಿಕಸಾಸ್ತ್ರದ ಫಲಿತವುಂಟಾಗುವದಕ್ಕೆ ಪ್ರಯೋಗವನ್ನು ಸರಿಯಾಗಿ ಮಾಡಲೇಬೇಕಲ್ಲವೆ? ಅದರಂತೆ ಆಚಾರ್ಯೋಪಾಸನೆಯನ್ನೂ ಒಂದಾನೊಂದು ವಿಶಿಷ್ಟಕ್ರಮದಲ್ಲಿ ಮಾಡಬೇಕು. ಅದನ್ನು ಸಕಾಮರಾಗಿ ಮಾಡಿದರೆ ಇಷ್ಟಾರ್ಥಗಳೆಲ್ಲವೂ ನೆರವೇರುವವು; ನಿಷ್ಕಾಮರಾಗಿ ಮಾಡಿದರೆ ಅವರಿಗೆ ಪುನರ್ಜನ್ಮವೇ ತಪ್ಪುವದು. `ಉಪಾಸತೇ ಪುರುಷಂ ಯೇ ಹ್ಯಕಾಮಾಸ್ತೇ ಶುಕ್ರಮೇತದತಿ ವರ್ತನ್ತಿ ಧೀರಾಃ' ಎಂಬ ಶ್ರುತಿಯ ತಾತ್ಪರ್ಯವೇ ಇದು. ಈ ರೀತಿಯಲ್ಲಿ ಸಹಜವಾಗಿ, ಸಂಶಯಬುದ್ಧಿಯನ್ನೆಲ್ಲ ಬಿಟ್ಟು, ಆಚಾರ್ಯಸೇವೆಯನ್ನು ಮಾಡಿದರೆ ಕಡುಖಂಡಿತವಾಗಿ ಇಹಪರಫಲಗಳು ದೊರೆಯುವವು - ಎಂಬ ದೃಢವಾದ ನಂಬಿಕೆಯು ನನಗೆ ಬರಿಯ ಶಾಸ್ತ್ರಾಭ್ಯಾಸದಿಂದಲೇ ಅಲ್ಲ, ನಾನು ಮಾಡಿರುವ ಅಲ್ಪಪ್ರಯತ್ನದಿಂದಲೂ ಆಗಿದೆ. ಜ್ಞಾನಸಾಧನವನ್ನು ಮಾಡಿದರೆ ಜ್ಞಾನವು ನಿಶ್ಚಯವಾಗಿ ಉಂಟಾಗುತ್ತದೆ ಎಂಬ ನಂಬಿಕೆಯು ನನಗೆ ಬಂದಿದೆ. ನನ್ನ ಪ್ರಯತ್ನವು ಪೂರ್ತಿಯಾಗಿಲ್ಲ, ಫಲವೂ ಪೂರ್ತಿಯಾಗಿಲ್ಲ. ಆದರೆ ಸಾಧನಫಲಗಳ ಸಂಬಂಧದಲ್ಲಿ ಯಾವ ಸಂಶಯವೂ ನನಗಿಲ್ಲ.

ಅಕೃತ್ರಿಮವಾದ ಪ್ರೇಮವನ್ನು ಉಪಯೋಗಿಸಿಕೊಂಡು ಆಚಾರ್ಯಸೇವೆಯನ್ನು ಮಾಡಿ ನೋಡಿರಿ. ಅವರ ಅನುಗ್ರಹದಿಂದ ನಿಮಗೆ ಆಗುವ ಉತ್ತಮಫಲವನ್ನು ನೀವೇ ಕಂಡುಕೊಳ್ಳುವಿರಿ. ಆ ಸದ್ಗುರುನಾಥನಾದ ಭಗವಂತನ ಅನುಗ್ರಹದಿಂದ ನಮಗೆಲ್ಲ ನಿಜವಾದ ಮುಮುಕ್ಷುತ್ವವೂ ಜಿಜ್ಞಾಸುತ್ವವೂ ಬರಲಿ ಆಚಾರ್ಯೋಪಾಸನೆಯ ಸೌಭಾಗ್ಯವು ದೊರೆಯಲಿ ! - ಎಂದು ಹಾರೈಸೋಣ !



# ೧೦೨. ಶೌಚ 13 - (7)

**(24-10-48)**

ಆಚಾರ್ಯೋಪಾಸನೆಯು ವಿಚಾರವಾಯಿತು. ಈಗ ಶೌಚದ ವಿಚಾರವನ್ನು ಪ್ರಾರಂಭಿಸಬೇಕಾಗಿದೆ. ಈಗ ಹೇಳುತ್ತಿರುವ ಸಾಧನಗಳನ್ನು ಸಂಪಾದಿಸಿಕೊಂಡು ಏನು ಪ್ರಯೋಜನ? - ಎಂಬ ಪ್ರಶ್ನೆಗೆ ಮೊದಲೇ ಉತ್ತರವನ್ನು ಹೇಳಿದ್ದಾಗಿದೆ. ಜ್ಞಾನವೆಂಬುದು ಬಹು ಅಮೂಲ್ಯವಾದದ್ದು. ಅದರ ಸಂಪಾದನೆಗೆ ಇವು ಅತ್ಯವಶ್ಯವಾಗಿರುತ್ತವೆ. ಆ ಜ್ಞಾನದಿಂದಲೂ ಆಗಬೇಕಾದದ್ದೇನು? ಹಿಂದೆ ಅನೇಕರು ಜ್ಞಾನಕ್ಕಾಗಿ ಪ್ರಯತ್ನಪಟ್ಟಿರುತ್ತಾರೆ, ಆದ್ದರಿಂದ ನಾವೂ ಪ್ರಯತ್ನಿಸಬೇಕು - ಎಂಬುದು ಸಮಂಜಸವಾದ ಉತ್ತರವಾಗಲಾರದು. ಅನೇಕರು ಭೂಮಿಯ ಸುತ್ತಲೂ ಪ್ರಯಾಣಮಾಡಿರುತ್ತಾರೆ; 'ಬೈಸಿಕಲ್ಲು ಮೇಲೆ ಸವಾರಿಮಾಡಿ ಅಥವಾ ಕಾಲುನಡಿಗೆಯಿಂದ, ಅಥವಾ ಮತ್ತೆ ಯಾವದಾದರೊಂದು ಪ್ರಕಾರದಿಂದ, ಇಂತಿಷ್ಟು ಕಾಲದಲ್ಲಿ ಭೂಮಿಯನ್ನು ಒಂದು ಸುತ್ತು ಪ್ರದಕ್ಷಿಣೆಮಾಡಿಬಂದರು' - ಎಂದು ವರ್ತಮಾನಪತ್ರಿಕೆಗಳಲ್ಲಿ ಹಾಕಿಸಿಕೊಂಡಿರುತ್ತಾರೆ. ಆದರೆ ಅಂಥ ಅಂಧಾನುಕರಣದಿಂದ ನಮಗೆ ಬರುವ ಭಾಗ್ಯವೇನು? ಹಿಂದೆ ಭೂಪ್ರದಕ್ಷಿಣೆ ಎಂಬುದೊಂದು ಪುಣ್ಯಕರ್ಮವಾಗಿತ್ತು. ಭೂ ದೇವತೆಯ ಪ್ರದಕ್ಷಿಣೆಯಿಂದ ಪಾಪನಿವೃತ್ತಿಯಾಗುತ್ತದೆ ಎಂಬ ನಂಬಿಕೆಯು ನಮ್ಮ ಪೂರ್ವಜರಿಗೆ ಇತ್ತು. ಆದ್ದರಿಂದ ಆ ಕರ್ಮವು ಆಗ ಸಪ್ರಯೋಜನವೂ ಆಗಿತ್ತೆಂದು ಹೇಳಬಹುದು. ಆದರೆ ಈಗಿನ ಪ್ರದಕ್ಷಿಣೆಯು ಹಾಗಿಲ್ಲ. ಬರಿಯ ಅನುಕರಣೆ ಮಾತ್ರ. ಹೀಗೆಯೇ ಜ್ಞಾನಸಂಪಾದನೆಯೂ ಬರಿಯ ಒಂದು ಹವ್ಯಾಸವೊ, ಅಥವಾ ಅದರಿಂದಾಗುವ ವಿಶೇಷಪ್ರಯೋಜನವೇನಾದರೂ ಉಂಟೊ? ಎಂದು ವಿಚಾರಮಾಡುವದು ಅವಶ್ಯವಾಗಿರುತ್ತದೆ.

ಈಗ ನಮ್ಮಗಳಿಗೆ ಶರೀರದಲ್ಲಿ ನಾನು ಎಂಬ ಬುದ್ಧಿಯಿರುತ್ತದೆ. ಕೆಲವರಿಗೆ ಈ ಶರೀರದಲ್ಲಿ ನಾನಿದ್ದೇನೆ ಎಂಬ ಜ್ಞಾನವಿರುತ್ತದೆ. ಹೇಗಾದರೂ ಇರಲಿ, ಶರೀರಾಭಿಮಾನವಿರುವವರೆಗೆ ಶರೀರದಲ್ಲಾಗುವ ಸುಖದುಃಖಗಳು ತಟ್ಟುತ್ತಿರುತ್ತವೆ. ಒಂದು ಶರೀರದ ಅಭಿಮಾನವು ಅದರ ಸುಖದುಃಖಗಳನ್ನು ತರುವದಾದರೆ ಒಂದು ಕುಟುಂಬದ ಅಭಿಮಾನವು ಅದರ ಸುಖದುಃಖಗಳನ್ನು ಅವಶ್ಯವಾಗಿ ತರುತ್ತದೆ. ಹೀಗೆಯೇ ಊರು, ದೇಶ - ಮುಂತಾದವುಗಳಲ್ಲಿ ಅಭಿಮಾನವಿರುವವರಿಗೂ ಅಷ್ಟಷ್ಟು ಸುಖದುಃಖಗಳು ತಪ್ಪದೆ ಆಗುವವು; ಆದ್ದರಿಂದ ಎಲ್ಲರ ಆತ್ಮನೂ ಆಗಿರುವ ಜ್ಞಾನಿಗೆ ಎಲ್ಲರ ಸುಖದುಃಖಗಳೂ ಆಗಬೇಕಾಯಿತಲ್ಲ! - ಎಂದು ಕೆಲವರು ಶಂಕಿಸಬಹುದು. ಪರಮಾರ್ಥದೃಷ್ಟಿಯಿಂದ ನೋಡಿದರೆ ದುಃಖವು ಅವರವರ ಪಾಪದ ಫಲವಾಗಿ ಬರುತ್ತದೆ. ಆದರೆ ಜ್ಞಾನಿಗೆ ಯಾವ ಪಾಪವೂ ಇರುವದಿಲ್ಲವಾಗಿ ಅವನಿಗೆ ಯಾವ ದುಃಖವೂ ಇರುವದಿಲ್ಲ, ಸಕಲರ ಆನಂದವೂ ಅವನದೇ ಆಗಿರುತ್ತದೆ. ಇನ್ನು ವ್ಯಾವಹಾರಿಕದೃಷ್ಟಿಯಿಂದ ನೋಡಿದರಂತೂ ಎಲ್ಲರ ಸುಖದುಃಖಗಳನ್ನೂ ಜ್ಞಾನಿಗಳು ತಮ್ಮ ಸುಖದುಃಖದಂತೆ ಎಂದು

ಎಣಿಸಿ ಸಕಲರ ಹಿತವನ್ನೂ ಸಾಧಿಸುವದರಲ್ಲಿಯೇ ನಿರತರಾಗಿರುತ್ತಾರೆ. ಆದ್ದರಿಂದ ಎಲ್ಲರೂ ಅವರಿಗೆ ಹಿತವನ್ನೇ ಕೋರುತ್ತಾರೆ. ನಾವೆಲ್ಲರೂ ತಿಳಿದಿರುವಂತೆ ಮಹಾತ್ಮಗಾಂಧಿಯವರು ಎಲ್ಲರ ಸುಖವನ್ನೂ ಕೋರುತ್ತಿದ್ದರಷ್ಟೆ ; ಆದ್ದರಿಂದ ಎಲ್ಲರೂ ಅವರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿದ್ದರು. ಆದರೆ ಜ್ಞಾನಿಗಳಾದವರಲ್ಲಿ ಒಂದು ವಿಶೇಷವಿದೆ. ಅದೇನೆಂದರೆ ಅವರು ಮತ್ತೊಬ್ಬರ ಹಿತವನ್ನು ಬಯಸುತ್ತಿದ್ದರೂ ತಾವು ಮಾತ್ರ ಅದಕ್ಕೆ ಪ್ರತಿಯಾಗಿ ಏನನ್ನೂ ಕೋರುತ್ತಿರುವದೇ ಇಲ್ಲ. ಪ್ರತ್ಯುಪಕಾರವನ್ನು ಬಯಸುವವನು ಉಪಕಾರವನ್ನು ಕೋರುವ ದುಃಸ್ಥಿತಿಗೆ ಇಳಿಯಬೇಕಷ್ಟೆ, ಯಾವಾಗಲೂ ಆನಂದದಿಂದಿರುವ ಜ್ಞಾನಿಗಳಿಗೆ ಅಂಥ ದುರವಸ್ಥೆಯು ಬರುವ ಸಂಭವವೇ ಇಲ್ಲ. ಇಂಥ ಜ್ಞಾನವು ಯಾರಿಗೆ ತಾನೆ ಬೇಡ? ಈ ಜ್ಞಾನಕ್ಕಾಗಿ ಪ್ರಕೃತದಲ್ಲಿ ಹೇಳುತ್ತಿರುವ ಅಮಾನಿತ್ವಾದಿಸಾಧನಗಳು ಬೇಕಾಗಿರುತ್ತವೆ.

ಪ್ರಕೃತವಾಗಿರುವ ಶೌಚವನ್ನು ವಿಚಾರಕ್ಕೆ ತೆಗೆದುಕೊಳ್ಳೋಣ. ಶೌಚವೆಂದರೆ ಶುಚಿತ್ವವು. ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ - ಎಂಬ ಎರಡು ಶರೀರಗಳು ಉಪಾಧಿಯಾಗಿರುತ್ತವೆ. ಇವುಗಳನ್ನು ಬಿಟ್ಟು ಮನುಷ್ಯನು ಇರುವಂತೆಯೇ ಇಲ್ಲ. ಇವು ಘಳಿಗೆಘಳಿಗೆಗೂ ಅಶುಚಿಯಾಗುತ್ತಲೇ ಇರುವವು. ಇವುಗಳನ್ನು ಆಗಿಂದಾಗ್ಗೆ ತಕ್ಕ ಉಪಾಯಗಳಿಂದ ಶುಚಿಮಾಡಿಕೊಳ್ಳುತ್ತಲೇ ಇರಬೇಕು. ಅತ್ಯಂತಪವಿತ್ರವಾಗಿರುವ ಆತ್ಮಸ್ವರೂಪದ ಜ್ಞಾನವು ಉಂಟಾಗಬೇಕಾದರೆ ಇವುಗಳನ್ನು ಶುಚಿಯಾಗಿಟ್ಟುಕೊಳ್ಳುವ ಅಭ್ಯಾಸವು ಬೇಕು.

ಎಷ್ಟೋ ಜನರಿಗೆ ದೇಹವನ್ನು ಶುಚಿಯಾಗಿಟ್ಟುಕೊಳ್ಳುವ ಅಭ್ಯಾಸವೇ ಇರುವದಿಲ್ಲ. ಕೆಲವರ ಆಚಾರದಲ್ಲಿ ಪ್ರತಿದಿನವೂ ಸ್ನಾನಮಾಡುವದು, ಒಗೆದ ಶುಭ್ರವಾದ ಬಟ್ಟೆಗಳನ್ನು ಧರಿಸುವದು - ಇವುಗಳು ಇರುತ್ತವೆ. ಆದರೆ ಇನ್ನು ಕೆಲವರು ಎಂಟು ಹತ್ತು ದಿನಗಳಿಗೊಂದು ಸಲ ಕೂಡ ಸ್ನಾನಮಾಡುವದಿಲ್ಲ. ಜನರಿಗೆಲ್ಲ ಜ್ಞಾನವು ಬೇಕಾಗಿರುತ್ತದೆ ; ಅದನ್ನು ಎಲ್ಲರಿಗೂ ಏಕೆ ಬೋಧೆ ಮಾಡಬಾರದು? - ಎಂದು ಕೇಳುತ್ತಾರೆ. ಆದರೆ ಜ್ಞಾನದ ಸಾಧನವಿಲ್ಲದವರಿಗೆ ಜ್ಞಾನವನ್ನು ಬೋಧಿಸಿದರಾದರೂ ಹೇಗೆ ತಿಳಿಯಬೇಕು ? ಆತ್ಮಜ್ಞಾನವನ್ನು ರಹಸ್ಯವಾಗಿಟ್ಟುಕೊಳ್ಳಲು ಕಾರಣವಿಲ್ಲ ; ಎಲ್ಲರಿಗೂ ಬೋಧಿಸುವದು ಯುಕ್ತ - ಎಂದು ಕೆಲವರು ವಾದಿಸುತ್ತಾರೆ. ಒಂದು ದೃಷ್ಟಿಯಿಂದ ಇದು ನಿಜ. ಆದರೆ ಮತ್ತೊಂದು ದೃಷ್ಟಿಯಿಂದ ಜ್ಞಾನವು ಅನಧಿಕಾರಿಗಳಿಗೆ ಎಂದೆಂದಿಗೂ ರಹಸ್ಯವೇ ಆಗಿರುತ್ತದೆ. ಅವರಿಗೆ ಎಷ್ಟು ಗಟ್ಟಿಯಾಗಿ ಕೂಗಿ ಹೇಳಿದರೂ ತತ್ತ್ವವು ತಿಳಿಯುವಂತಿರುವದಿಲ್ಲ. ಆತ್ಮಜ್ಞಾನವು ಉದಯವಾಗುವದಕ್ಕಿಂತ ಮೊದಲು ಮನುಷ್ಯತ್ವಜ್ಞಾನವಾದರೂ ಇರಬೇಕಲ್ಲವೆ?

ಎಲ್ಲಾ ಜನರಿಗೂ ಜ್ಞಾನವನ್ನು ಹೇಳಿಸಬೇಕೆಂದು ಕೆಲವರು ಪ್ರಯತ್ನಿಸುತ್ತಿದ್ದಾರೆ. ಹರಿಜನರಿಗೆ ಅಸ್ಪೃಶ್ಯತ್ವವನ್ನು ಕಳೆಯಬೇಕು ; ಇತರರಂತೆಯೇ ಸಮಾನವಾದ ಹಕ್ಕನ್ನು ಕೊಡಬೇಕು. ಅವರಿಗೆ ಬೇಕಾದ ಲೌಕಿಕಜ್ಞಾನವನ್ನು ಕೊಡಬೇಕು ; ಬೇಕಾದ ಅನುಕೂಲ್ಯಗಳನ್ನು

ಕಲ್ಪಿಸಬೇಕು. ಅವರಿಗೆ ಯಾವ ಸಾಮಾಜಿಕ ಆಧ್ಯಾತ್ಮಿಕಜ್ಞಾನವನ್ನು ಸಂಪಾದಿಸುವದಕ್ಕೂ ಅಡ್ಡಿಯಿರಬಾರದು - ಎಂದು ಅವರು ವಾದಿಸುತ್ತಾರೆ. ಯಾರೊಬ್ಬರಿಗೂ ಯಾವ ತಿಳಿವಳಿಕೆಗೂ ಅಡ್ಡಿಯಿರಬಾರದೆಂಬುದು ಯುಕ್ತವೇ ಸರಿ. ಆದರೆ ಮೊಟ್ಟಮೊದಲು ಈ ಜನರಿಗೆ ಆರ್ಥಿಕದಾರಿದ್ರ್ಯವನ್ನು ಕಳೆದುಕೊಳ್ಳುವ ಸನ್ನಿವೇಶವನ್ನು ಏರ್ಪಡಿಸುವದು ಅತ್ಯವಶ್ಯವಲ್ಲವೆ? ಡಾಕ್ಟರ್ ಆನಿ ಬೆಸೆಂಟ್ ಎಂಬ ಪ್ರಸಿದ್ಧ ಪಾಶ್ಚಾತ್ಯ ಮಹಿಳೆಯು ಒಂದಾನೊಂದು ಪ್ರಸಂಗದಲ್ಲಿ 'ಈ ಜನರಿಗೆ ಮೊಟ್ಟಮೊದಲು ಕೊಡಬೇಕಾದ ವಿದ್ಯಾಭ್ಯಾಸವೆಂದರೆ ತಕ್ಕಷ್ಟು ಸೋಪನ್ನು ಒದಗಿಸಿಕೊಟ್ಟು ಅದರ ಉಪಯೋಗವನ್ನು ಕಲಿಸಿಕೊಡುವದು' ಎಂದು ಬರೆದಿರುತ್ತಾಳೆ. ಇದು ಬಹಳ ಅರ್ಥಗರ್ಭಿತವಾದ ವಾಕ್ಯವು. ಹರಿಜನರೆಂದು ಹೆಸರಿಟ್ಟಮಾತ್ರದಿಂದಲಾಗಲಿ, ದೇವಾಲಯಗಳಿಗೆ ಪ್ರವೇಶದ ಹಕ್ಕನ್ನು ಕೊಟ್ಟರಾಗಲಿ, ಕೆಲವು ಅಧಿಕಾರಸ್ಥಾನಗಳನ್ನು ಅವರಿಗೆ ಮೀಸಲಿಟ್ಟರಾಗಲಿ, ಅವರ ಅಸ್ಪೃಶ್ಯತೆಯು ನಿಜವಾಗಿ ಹೋಗಲಾರದು. ಆ ಜನರು ತಮ್ಮ ಮನೆಗಳನ್ನು ಚೊಕ್ಕಟವಾಗಿರಿಸಿಕೊಳ್ಳುವಂತೆಯೂ ತಮ್ಮ ಬೀದಿಯಲ್ಲಿ ಯಾವ ಕೊಳಕೂ ಇಲ್ಲದಂತೆ ಮಾಡಿಕೊಳ್ಳುವ ಪದ್ಧತಿಯನ್ನೂ ಆಹಾರ, ಬಟ್ಟೆ, ನಡೆನುಡಿಗಳು - ಇವೆಲ್ಲವನ್ನೂ ಚೊಕ್ಕಟವಾಗಿರಿಸಿಕೊಳ್ಳುವಂತೆಯೂ ಮಾಡಿಸಬೇಕು. ಈಗ ಸದ್ಯಕ್ಕೆ ಅವರ ಕೇರಿಗಳೂ ಮನೆಗಳೂ ಶರೀರವೂ ಹಾಗಿರಲಿ, ಸವರ್ಣರೆಂದು ಹಿಂದುಗಳು ಗಣಿಸಿರುವ ಮೇಲುತರದವರೆಂದುಕೊಳ್ಳುವವರೂ ಅನೇಕರು ಶುಚಿಯಾದ ಆಹಾರವಿಹಾರಗಳನ್ನು ಇಟ್ಟುಕೊಂಡಿರುವುದಿಲ್ಲ. ಶರೀರವೇ ಶುದ್ಧವಾಗಿಲ್ಲದವನಿಗೆ ಚಿತ್ತಶುದ್ಧಿ ಎಷ್ಟು ದೂರವಾಯಿತು! ಇನ್ನು ಜ್ಞಾನವೆಂಬುದು ಎಷ್ಟು ದೂರವಾಯಿತು!

ಶರೀರವು ಯಾವಾಗಲೂ ಅಶುಚಿಯೇ. ಇದರಲ್ಲಿ ಜೊಲ್ಲು, ಸಿಂಬಳ, ಪಿಸುರು, ಕೊಗ್ಗಿ, ಬೆವರು - ಮುಂತಾದ ಹತ್ತು ಮಲಗಳು ಹೊರಕ್ಕೆ ಬರುತ್ತಲೇ ಇರುವವು. ಇದನ್ನು ಎಷ್ಟು ಸಲ ತೊಳೆದುಕೊಂಡರೂ ಸಾಲದು. ಇದರ ಸಂಪರ್ಕದಿಂದ ಬಟ್ಟೆಯೂ ಆಹಾರವೂ ನೀರೂ ಹೂಗಂಧಾದಿಗಳೂ ಅಶುಚಿಯಾಗುತ್ತಿರುವವು. ಇಂಥ ದೇಹವನ್ನು ನಾನು ಎಂದು ತಿಳಿಯುವದು ಎಂಥ ಮೌಢ್ಯವಾಯಿತು ! ಶರೀರವು ಅಶುಚಿ ಎಂಬುದು ನಮಗೆ ಆಗಾಗ್ಗೆ ಮನಸ್ಸಿಗೆ ಬರುತ್ತಲೇ ಇರಬೇಕು. ಊಟಮಾಡಿದರೆ, ಶೀನಿದರೆ, ಕೆಮ್ಮಿದರೆ, ಕ್ಯಾಕರಿಸಿದರೆ, ಮಲಮೂತ್ರ ವಿಸರ್ಜನೆಮಾಡಿದರೆ ಆಯಾ ಅವಯವಗಳನ್ನೂ ಕೈಕಾಲುಗಳನ್ನೂ ಚೊಕ್ಕಟವಾಗಿ ತೊಳೆದುಕೊಂಡು ಶುದ್ಧಾಚಮನವನ್ನು ಮಾಡುವ ಪದ್ಧತಿಯು ದ್ವಿಜರಲ್ಲೆಲ್ಲ ಇದ್ದದ್ದು ಈಗ ಬ್ರಾಹ್ಮಣರಲ್ಲಿಕೂಡ ಕಡಿಮೆಯಾಗುತ್ತಾಬಂದಿದೆ. ಅಶುಚಿಯಾದ ಆಹಾರವನ್ನಾಗಲಿ ಪದಾರ್ಥಗಳನ್ನಾಗಲಿ ಪ್ರಾಣಿಗಳನ್ನಾಗಲಿ ಜನರನ್ನಾಗಲಿ ಮುಟ್ಟಬಾರದು; ಇದು ಆ ಪದಾರ್ಥಗಳ, ಪ್ರಾಣಿಗಳ, ಅಥವ ಜನರಮೇಲಿನ ಅನಾದರದಿಂದ ಅಲ್ಲ. ನಮ್ಮ ದೇಹವು ಮೊದಲೇ ಅಪವಿತ್ರವಾಗಿದ್ದು ಎಷ್ಟು ತೊಳೆದರೂ ಅಶುದ್ಧವಾಗುತ್ತಿರುವದರಿಂದ, ಇದನ್ನು ಆದಷ್ಟು ಮಟ್ಟಿಗೂ ಹೊರಗಿನ ಅಶುಚಿಪದಾರ್ಥಗಳ ಸಂಬಂಧದಿಂದ ಬಿಡುಗಡೆಮಾಡಿಸಬೇಕೆಂಬ

ಉದ್ದೇಶದಿಂದ. ಇದೇ ಅಸ್ಪೃಶ್ಯತೆಯ ರಹಸ್ಯವು. ಕೆಲವು ಜನರುಗಳು ಮಾತ್ರ ಅಶ್ಪೃಶ್ಯರೆಂದು ತಿಳಿಯುವದಾಗಲಿ ಅವರನ್ನು ಸಮಾಜದಿಂದ ದೂರ ಇಡಿಸುವದಾಗಲಿ ಅಸ್ಪೃಶ್ಯತಾಪಾಲನೆಯಲ್ಲ; ಅವರನ್ನು ಎಲ್ಲರಮೇಲೂ ಛೂ ಬಿಡುವದು ಅಸ್ಪೃಶ್ಯತಾನಿವಾರಣೆಯೂ ಅಲ್ಲ.

ಇದುವರೆಗೆ ಹೇಳಿದ್ದು ಬಾಹ್ಯಶೌಚವಾಯಿತು. ಇನ್ನು ಅಂತರಶೌಚವು ಇದಕ್ಕಿಂತ ಹೆಚ್ಚಿನದಾಗಿರುತ್ತದೆ. ಏಕೆಂದರೆ ಶರೀರವು ಅಶುಚಿಯಾಗಿದೆ ಎಂಬುದನ್ನು ಲಕ್ಷ್ಯವಿಟ್ಟು ನೋಡಿದರೆ ಇಂದ್ರಿಯಗಳಿಗೂ ಗೋಚರವಾಗುತ್ತದೆ. ಆದರೆ ಮನಸ್ಸು ಇಂದ್ರಿಯಗೋಚರವಲ್ಲ ; ಆದ್ದರಿಂದಲೇ ಅದನ್ನು ಸೂಕ್ಷ್ಮ ಶರೀರವೆನ್ನುವರು. ಈ ಸೂಕ್ಷ್ಮಶರೀರವು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ -ಮುಂತಾದವುಗಳಿಂದ ಅಶುಚಿಯಾಗುತ್ತಲೇ ಇರುತ್ತದೆ. ವ್ಯವಹಾರದಲ್ಲಿ ನಾವು ಅಶುಚಿಯಾದ ದೇಹವನ್ನೂ ಆ ದೇಹದ ಸಂಬಂಧದಿಂದ ಹೆಂಡತಿ, ಮಗ, ನೆಂಟರಿಷ್ಟರು, ಪ್ರಾಣಿಗಳು, ಹೊಲಮನೆ, ಹಣಕಾಸು - ಮುಂತಾದವುಗಳನ್ನೂ ನಾನು, ನನ್ನದು - ಎಂದುಕೊಂಡು ಅಶುಚಿಯಲ್ಲಿಯೇ ಶುಚಿಬುದ್ಧಿಯಿಂದ ಮನಸ್ಸನ್ನು ಮಲಿನಗೊಳಿಸುತ್ತಿರುವೆವು. ಮೃಜ್ಜಲಾದಿಗಳಿಂದ ಹೇಗೆ ಶರೀರವನ್ನು ಶುಚಿಗೊಳಿಸಬೇಕೋ ಹಾಗೆಯೇ ಕಾಮಾದಿಗಳನ್ನು ಪ್ರತಿಪಕ್ಷಭಾವನೆಯಿಂದ ಶುಚಿಗೊಳಿಸುತ್ತಿರಬೇಕು. ಎಲ್ಲರಲ್ಲಿಯೂ ಪ್ರೇಮ, ಕರುಣೆ, ಮೈತ್ರಿ, ಶಾಂತಿ, ಔದಾರ್ಯ, ವಿವೇಕ, ಎಚ್ಚರಿಕೆ - ಮುಂತಾದ ಗುಣಗಳನ್ನು ಅಭ್ಯಾಸಮಾಡಿದಂತೆಲ್ಲ ಮನಸ್ಸಿನ ಮಲಗಳು ತೊಲಗುತ್ತಾಬರುವವು. ಇದು ಬಹಳ ಕಷ್ಟಸಾಧ್ಯವಾದ ಕೆಲಸ. ಶರೀರವು ಅಶುಚಿ ಎಂಬ ತಿಳಿವಳಿಕೆಯಿದ್ದ ಹೊರತು, ಶರೀರವನ್ನು ಆಗಿಂದಾಗ್ಯೆ ಚೊಕ್ಕಟವಾಗಿರಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿದ್ದ ಹೊರತು, ಮನಸ್ಸು ಅಶುಚಿಯೆಂಬ ತಿಳಿವಳಿಕೆಯು ಬರುವದಿಲ್ಲ; ಅದರ ಕಶ್ಮಲವನ್ನು ನೀಗಿಕೊಳ್ಳುವ ಪ್ರಯತ್ನವನ್ನು ಯಾರೂ ಮಾಡುವದೂ ಇಲ್ಲ.

ನಾವು ಮೊಟ್ಟಮೊದಲು ಅಶುಚಿಯಾದ ಆಹಾರ, ಅಶುಚಿಯಾದ ಮಾತು ಕಥೆ-ಇವುಗಳನ್ನು ಬಿಡುವದಕ್ಕೆ ಪ್ರಯತ್ನಿಸಬೇಕು. ಬಳಿಕ ಅಶುಚಿಯಾದ ಆಲೋಚನೆಗಳನ್ನು ಮನಸ್ಸಿನಿಂದ ತೊಲಗಿಸಿಕೊಳ್ಳುವದಕ್ಕೆ ಪ್ರಯತ್ನಿಸಬಹುದು. ಎಲ್ಲೆಂದರೆ ಅಲ್ಲಿ ಆಹಾರವನ್ನು ಸ್ವೀಕರಿಸುವುದು, ಎಲ್ಲೆಂದರೆ ಅಲ್ಲಿ ಪಾನಗಳನ್ನು ಕುಡಿಯುವದು, ಯಾವ ಬಟ್ಟೆಗಳನ್ನಾದರೂ ಹೊದೆಯುವದು, ಸುವಾಸನೆ ಬಂದ ಮಾತ್ರದಿಂದ ಮೂಲದ್ರವ್ಯದ ಅಶುಚಿತ್ವವನ್ನು ಮನಸ್ಸಿಗೆ ತಂದುಕೊಳ್ಳದೆ ಸೆಂಟುಗಳು, ಅತ್ತರುಗಳು - ಮುಂತಾದ ಹೆಸರುಗಳಿಂದ ಹೂಗಂಧ ಮುಂತಾದ ದ್ರವ್ಯಗಳನ್ನು ಸೇವಿಸುವದು - ಇಂಥ ಅಶುಚಿಯಾದ ಆಚಾರಗಳನ್ನು ಮೊದಲು ಬಿಟ್ಟುಬಿಡಬೇಕು. ಈ ಶರೀರಕ್ಕೆ ಯಾವಾಗ ಎಲ್ಲಿಂದ ಅಶುಚಿಯಾದ ವಸ್ತುಗಳ ಸಂಪರ್ಕವುಂಟಾಗುವದೋ ಎಂದು ಅಂಜುತ್ತಿರಬೇಕು. ಅಶುಚಿಯಾದ ಜನರ ವ್ಯವಹಾರವೆಲ್ಲವೂ ಅಶುಚಿಯಾಗಿರುವದು. ಮಾತಿನಲ್ಲಿ ಸುಳ್ಳು, ಕಪಟದ ಮಾತು, ಕಠೋರವಚನ, ಬಯ್ಗುಳು, ಭಂಡಮಾತು ಮುಂತಾದವುಗಳೆಲ್ಲ ಅಶುಚಿಯಾದ ಜನರ ಸಹವಾಸದಿಂದಲೂ ಅಶುಚಿಯಾದವರೊಡನೆ ನಿಕಟಸಂಬಂಧವನ್ನು ಬೆಳೆಯಿಸಿಕೊಳ್ಳುವದರಿಂದಲೂ ಹೆಚ್ಚುವವು. ಇವೆಲ್ಲಕ್ಕಿಂತಲೂ ಹೆಚ್ಚಾಗಿ ಅಶುಚಿಜನರ ಸಂಗವೂ

ಅಶುಚಿವಸ್ತುಗಳ ಸೇವನೆಯೂ ಅಶುಚಿವಾಕ್ಕುಗಳ ಭಾಷಣವೂ ನಮ್ಮ ಮನಸ್ಸಿನಮೇಲೆ ನಮಗೂ ತಿಳಿಯದಂತೆ ಅತ್ಯಂತ ಅಪಾಯಕರವಾದ ಪರಿಣಾಮವನ್ನುಂಟುಮಾಡುವವು. ಮನಸ್ಸು ಕೆಟ್ಟರೆ ಮನುಷ್ಯನೇ ಕೆಡುವನು.

ಆದ್ದರಿಂದ ನಾವು ಮೊಟ್ಟಮೊದಲು ಮನುಷ್ಯತ್ವಜ್ಞಾನವನ್ನು ಸಂಪಾದಿಸಿಕೊಂಡು ನಿಜವಾದ ಮನುಷ್ಯರಂತೆ ನಡೆಯುವದನ್ನು ಕಲಿಯಬೇಕು. ಮನುಷ್ಯರಾಗುವದಕ್ಕೆ ಎಲ್ಲರಿಗೂ ಹಕ್ಕಿದೆ. ನಮ್ಮಲ್ಲಿ ಈಗ ಅನೇಕರು ಮನುಷ್ಯಾಕೃತಿಯ ಮೃಗಗಳಾಗಿರುತ್ತೇವೆ. ಮನುಷ್ಯತ್ವವನ್ನು ಸಂಪಾದಿಸಿಕೊಂಡಮೇಲೆ ದೈವೀಸಂಪತ್ತಿನ ಗುಣಗಳನ್ನು ಸಂಪಾದಿಸಿಕೊಂಡು ದೇವತೆಗಳಾಗಬಹುದು. ಆ ಹಕ್ಕು ನಮಗೆಲ್ಲರಿಗೂ ಇದೆ. ಇಷ್ಟೇ ಅಲ್ಲ, ನಮ್ಮೆಲ್ಲರಿಗೂ ಒಬ್ಬ ಪರಮಾತ್ಮನೇ ನಿಜವಾಗಿ ಆತ್ಮನಾಗಿರುತ್ತಾನೆ. ಅಂಥ ಪರಮಾತ್ಮನ ಸ್ವಭಾವವನ್ನು ಅನುಕರಣಮಾಡಿ `ಸೋಽಹಮ್-ಅವನೇ ನಾನು' ಎಂದು ಭಾವಿಸುವ ಹಕ್ಕು ನಮಗೆಲ್ಲರಿಗೂ ಇದೆ. ಈಗ ನಾವು ಈ ಪರಮಾತ್ಮಜ್ಞಾನಕ್ಕೆ ಬಹಳ ದೂರ ಇರುತ್ತೇವೆ. ಅತ್ಯಂತವಾಗಿ ನಿತ್ಯಶುದ್ಧನಾಗಿರುವ ಪರಮಾತ್ಮನಿಗೂ ಅತ್ಯಂತ ಅಶುಚಿಯಾಗಿರುವ ನಮಗೂ ಎಲ್ಲಿಂದೆಲ್ಲಿಗೆ! ನಮ್ಮ ಶರೀರಾದಿಗಳನ್ನು ಎಷ್ಟು ಶುಚಿಮಾಡಿದರೂ ಅವು ನಿತ್ಯಶುಚಿಯಾಗಿರುವದಿಲ್ಲ. ಆದರೇನು? ಅಪವಿತ್ರನಾಗಲಿ ಪವಿತ್ರನಾಗಲಿ ಎಂಥ ಕೆಟ್ಟ ಅವಸ್ಥೆಯನ್ನೇ ಪಡೆದಿರಲಿ, ಆ ಪರಮಾತ್ಮನ ಸ್ಮರಣೆಯನ್ನು ಮಾಡಿದರೆಸಾಕು, ನಮಗೆ ಹೊರಗಿನ ಒಳಗಿನ ಶೌಚವು ಬಂದಂತಾಗುವದು.

ಪರಮಾತ್ಮನಿಗೆ ಎಲ್ಲರಮೇಲೂ ದಯೆಯಿರುತ್ತದೆ. ಎಲ್ಲರೂ ಯಾವಾಗಲೂ ಶುಚಿಯಾಗಿರಬೇಕೆಂಬುದೇ ಆತನ ಸಂಕಲ್ಪವು. ಆತನು ಸೃಷ್ಟಿಮಾಡಿರುವ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ - ಇವೆಲ್ಲವೂ ಅತ್ಯಂತ ಶುಚಿಯಾಗಿರುತ್ತವೆ. ಮನುಷ್ಯನ ಪಾಪಾಚರಣೆಯಿಂದ ಅವು ಆಗಾಗ್ಗೆ ಅಶುಚಿಯಾದಂತೆ ತೋರಬಹುದು; ಆದರೇನು? ಕಾಲಕ್ರಮದಲ್ಲಿ ಅವು ಶುದ್ಧವಾಗುತ್ತಲೇ ಇರುವವು. ಇವುಗಳನ್ನು ಕೆಡಿಸಿದವನು ಹಿರಣ್ಯಕಶಿಪುವಿನಂತೆ ಅಸುರನೆನಿಸುತ್ತಾನೆ, ತಾನೂ ಶುಚಿಯಾಗಿದ್ದು ಅವುಗಳನ್ನೂ ಶುಚಿಯಾಗಿಟ್ಟುಕೊಂಡವನು ಪ್ರಹ್ಲಾದನಂತೆ ಭಕ್ತವರನಾಗಿರುತ್ತಾನೆ. ಆತ್ಮಜ್ಞಾನಿಗಳು ಯಾವಾಗಲೂ ಪರಮಾತ್ಮನಿಷ್ಠೆಯಲ್ಲಿರುವದರಿಂದ ನಿತ್ಯಶುದ್ಧಸ್ವರೂಪರೇ ಆಗಿರುತ್ತಾರೆ. ಅವರಿಗೆ ಅಶುಚಿಯಾಗಿರುವವರನ್ನು ಕಂಡರೆ ತಿರಸ್ಕಾರವುಂಟಾಗುವದಿಲ್ಲ; ಅವರ ಮೇಲೆ ಕನಿಕರವುಂಟಾಗುತ್ತದೆ. ಅವರು ತಮ್ಮ ನಡೆನುಡಿಗಳಲ್ಲಿ ಶುದ್ಧಾಚಾರವೆಂದರೇನೆಂಬುದನ್ನು ಎಲ್ಲರಿಗೂ ಸಾರುತ್ತಿರುವರು. ಅಂಥವರ ಅನುಗ್ರಹದಿಂದ ನಮಗೆ ಶುಚಿತ್ವದ ತಿಳಿವಳಿಕೆಯೂ ಚಿತ್ತಶುದ್ಧಿಯೂ ಅದರ ಮೂಲಕ ಆತ ಜ್ಞಾನವೂ ಸುಲಭವಾಗಿ ದೊರಕುವವು.



# ೧೦೩. ಸ್ಥೈರ್ಯ, ಆತ್ಮವಿನಿಗ್ರಹ 13 - (7)

**(31-10-48)**

ಹಿಂದಿನ ದಿನ ಶೌಚದ ವಿಷಯವನ್ನು ಹೇಳಿದ್ದಾಯಿತು. ಅದೊಂದು ಬಹುಮುಖ್ಯಸಾಧನ. ನಿರ್ಮಲವಾದ ಶರೀರೇಂದ್ರಿಯಗಳೇ ನಮ್ಮ ಸ್ವಾಧೀನಕ್ಕೆ ಬರುವವು. ಸ್ವೇಚ್ಛಾಚಾರದಲ್ಲಿ ಬಿಟ್ಟಿರುವ ಶರೀರೇಂದ್ರಿಯಗಳು ನಮ್ಮ ಸ್ವಾಧೀನದಲ್ಲಿರುವದಿಲ್ಲ; ಅಂಥವುಗಳನ್ನು ಜ್ಞಾನಸಾಧನವಾಗಿ ಉಪಯೋಗಿಸುವದಕ್ಕೆ ಆಗುವದೇ ಇಲ್ಲ.

ಈಗ ಮೊದಲನೆಯ ಶ್ಲೋಕದಲ್ಲಿ ಉಳಿದಿರುವ ಸ್ಥೈರ್ಯ, ಆತ್ಮವಿನಿಗ್ರಹ - ಎಂಬ ಗುಣಗಳನ್ನು ಕುರಿತು ವಿಚಾರಮಾಡೋಣ. ಸ್ಥೈರ್ಯವೆಂದರೇನು? ಸ್ಥಿರತ್ವವು. ಯಾವದನ್ನು ಮಾಡುವೆವೋ ಆ ಸಾಧನವನ್ನೇ ಪಟ್ಟುಹಿಡಿದು ಅದರಲ್ಲಿಯೇ ನಿಂತೇಬಿಡುವದು ಸ್ಥೈರ್ಯವು. ಸಾಧನವನ್ನು ಮಾಡುವದು ಮೊದಲನೆಯದು. ಅದರಲ್ಲಿಯೇ ನಿಂತುಬಿಡುವದು ಎರಡನೆಯದು.

ಈಗ ನಾವುಗಳು ಉಪನ್ಯಾಸವನ್ನು ಹೇಳುವ ಕೇಳುವ ಪದ್ಧತಿಯನ್ನು ಇಟ್ಟುಕೊಂಡಿರುತ್ತೇವಷ್ಟೆ. ಇದು ನಮಗೆ ಪಾಶ್ಚಾತ್ಯರ ಮೂಲಕ ಬಂದದ್ದು. ಹೀಗೆ ಉಪನ್ಯಾಸಮಾಡುವದು ಪಾರ್ಲಿಮೆಂಟಿನಲ್ಲಿ ಬೇಕಾಗುತ್ತದೆ ಎಂದು ಪಾಶ್ಚಾತ್ಯರು ಏರ್ಪಡಿಸಿರಬಹುದೆಂದು ಕಾಣುತ್ತದೆ. ಅತಿಪ್ರಾಚೀನಕಾಲದಲ್ಲಿ ಯೂರೋಪಿನ ನಾಗರಿಕತೆಗೆ ಮೂಲಸ್ಥಾನವಾಗಿದ್ದ ಗ್ರೀಸ್‌ದೇಶದಲ್ಲಿ ಈ ಉಪನ್ಯಾಸಪದ್ಧತಿಯಿತ್ತು. ಆ ದೇಶದಲ್ಲಿ ತತ್ತ್ವಜ್ಞಾನಿಗಳು ಒಂದೊಂದು ಸ್ಕೂಲು - ವಾದಸ್ಥಾನವನ್ನು ಏರ್ಪಡಿಸಿ ತಮ್ಮಲ್ಲಿಗೆ ಶಿಷ್ಯರಾಗಿ ಬಂದವರಿಗೆ ಉಪನ್ಯಾಸಗಳ ಮೂಲಕ ತಮ್ಮ ಅಭಿಪ್ರಾಯವನ್ನು ಹೇಳಿಕೊಡುತ್ತಿದ್ದರು. ಅವರಿಗೆ ನಿಯತಕಾಲಿಕದಕ್ಷಿಣೆ ಕೊಟ್ಟು ಅನೇಕರು ಅಲ್ಲಿ ಶಿಕ್ಷಿತರಾಗುವದಕ್ಕೆ ಬರುತ್ತಿದ್ದರು. ರಾಜಕೀಯದಲ್ಲಿ ಪ್ರಸಿದ್ಧರಾದ ದೊಡ್ಡದೊಡ್ಡ ಮನೆತನದವರು ಕೂಡ ಆ ಸ್ಕೂಲುಗಳಲ್ಲಿ ತಯಾರಾಗುತ್ತಿದ್ದರು. ಆಯಾ ವಿದ್ಯಾಸ್ಥಾನದ ಅಧಿಪತಿಗಳಾದ ಮಹಾಶಯರು ತಾವು ತಾವು ಮನನಮಾಡಿದ ತತ್ತ್ವಗಳನ್ನು ಉಪನ್ಯಾಸಗಳ ಮೂಲಕ ಶಿಷ್ಯರುಗಳಿಗೆ ಹೇಳಿಕೊಡುತ್ತಿದ್ದರು. ಅವೆಲ್ಲ ಸೇರಿ ದೊಡ್ಡ ಉದ್ಗ್ರಂಥಗಳಾಗಿರುತ್ತವೆ. ಪ್ಲೇಟೊ, ಅರಿಸ್ಟಾಟಲ್ - ಇಂಥ ತತ್ತ್ವವಿಚಾರಕರಾದ ಮೂಲಪುರುಷರು ನಮ್ಮ ದೇಶದ ಪ್ರಾಚೀನಋಷ್ಯಾಶ್ರಮಗಳಂಥ ವಿದ್ಯಾಸ್ಥಾನಗಳನ್ನು ಸ್ಥಾಪಿಸಿಕೊಂಡು ಜನರಿಗೆ ಬೋಧಿಸುತ್ತಿದ್ದರು. ನಮ್ಮ ದೇಶದಲ್ಲಿ ತತ್ತ್ವಜಿಜ್ಞಾಸುಗಳಾದವರು ಇಂಥ ಗುರುಗಳನ್ನು ಹುಡುಕಿಕೊಂಡು ಹೋಗಿ ಅವರ ಅನುಜ್ಞೆಯಿಂದ ಅವರ ಶಿಷ್ಯರಾಗುತ್ತಿದ್ದರು. ಆ ಮಹಾತ್ಮರು ಶಿಷ್ಯರನ್ನಾಗಿ ಸ್ವೀಕರಿಸಿ ಅವರಿಗೆ ತಿಳಿಸಿಕೊಟ್ಟ ಅಮೋಘತತ್ತ್ವಗಳು ಆಯಾ ಗುರುಗಳ ಉಪನ್ಯಾಸಗಳು. ವಸಿಷ್ಠರಂಥ ಕುಲಪತಿಗಳು ಇಂಥ ಉಪನ್ಯಾಸಕರೆನ್ನಬಹುದು. ಉಪನ್ಯಾಸವೆಂದರೆ ಹರಟೆಯಲ್ಲ, ಶ್ರದ್ಧೆಯಿಂದ ಕೇಳುವ ಶಿಷ್ಯರಿಗೆ ಸದ್ಗುರುವಾದವನು ಮಾಡುವ ಬೋಧೆ.

ಸ್ಥೈರ್ಯವೆಂಬುದು ಒಂದು ದಿನದ ಉಪನ್ಯಾಸ, ಬರಿಯ ಮಾತು, ಎಂದು ಕೇಳಿಕೇಳಿ ಬಿಡತಕ್ಕ ವಸ್ತುವಲ್ಲ. ಅಧ್ಯಾತ್ಮಸಾಧನೆಯಲ್ಲಿ ನಿಂತುಬಿಡುವದೇ ಸ್ಥೈರ್ಯವು. ಸ್ವಾತಿಮಳೆಯು ಬಂದಾಗ ಒಂದು ಬಗೆಯ ಹುಳು ಅದನ್ನು ನುಂಗಿ ಅದನ್ನೊಂದು ಮುತ್ತನ್ನೇ ಮಾಡುತ್ತದೆ ಎಂದು ಹಿಂದಿನವರ ನಂಬಿಕೆಯಿತ್ತು. ಒಂದು ಹನಿಯನ್ನು ಆ ಮುತ್ತಿನ ಹುಳು ಮುತ್ತಾಗಿ ಮಾಡಿಕೊಂಡಂತೆ ಅಮಾನಿತ್ವಾದಿಸಾಧನಗಳನ್ನು ಆಚರಿಸುವದಕ್ಕೆ ಮೊದಲುಮಾಡಿ ಅವುಗಳಲ್ಲಿಯೇ ನೆಲೆನಿಂತು ತನಗೆ ಅಳವಟ್ಟ ಉತ್ತಮಸಾಧನವಾಗಿ ಮಾರ್ಪಡಿಸಿಕೊಂಡರೆ ಸ್ಥೈರ್ಯವೆನಿಸುತ್ತದೆ. ಸಾಧನವೂ ತಾನೂ ಒಂದಾಗಿಬಿಡುವಂತೆ ಅದನ್ನು ಅಳವಡಿಸಿಕೊಂಡರೆ ಸ್ಥೈರ್ಯವಾಯಿತು. ಆಹಾರವು ಸಾತ್ಮ್ಯವಾಗುವಂತೆ ಸಾಧನವು ನಮ್ಮ ಅಂತಃಕರಣಕ್ಕೆ ಸಾತ್ಮ್ಯವಾಗಿ ಸೇರಿಕೊಳ್ಳಬೇಕು. ಹೊಸದಾಗಿ ಮರಗಾಲುಕಟ್ಟಿಕೊಂಡವನು ತಟ್ಟಾಡುತ್ತಿರುತ್ತಾನೆ; ಯಾವಾಗ ಎಲ್ಲಿ ಬೀಳುವೆನೋ ಎಂದು ಅಂಜಿಕೆ. ಆದರೆ ಕೆಲವು ದಿನಗಳು ಬಿಡದೆ ಸಾಧನಮಾಡಿದವನಿಗೆ ಮರಗಾಲೂ ಕಾಲಿನ ಒಂದು ಭಾಗವೇ ಆಗಿದ್ದರೆ ಹೇಗೋ ಹಾಗೆ ಆಗಿಬಿಡುತ್ತದೆ. ಇದರಂತೆ ಅಮಾನಿತ್ವಾದಿಸಾಧನಗಳನ್ನು ಅಭ್ಯಾಸಮಾಡುತ್ತಿದ್ದು ಕಾಲಾನುಕಾಲಕ್ಕೆ ಅದೇ ನಮ್ಮ ಸ್ವಭಾವವಾಗಿಬಿಟ್ಟರೆ ಸ್ಥೈರ್ಯವು ಬಂದಂತೆ ಆಯಿತು. ಪೈಲುವಾನರು ಹುಡುಗರಿಗೆ ಮರಗಾಲಿನ ಉಪಯೋಗವನ್ನು ಅಭ್ಯಾಸದಿಂದಲೇ ಕಲಿಯುವಂತೆ ಹೇಗೆ ಮಾಡುವರೋ ಅದರಂತೆ ಗುರುಗಳೂ ಅಮಾನಿತ್ವಾದಿಸಾಧನಗಳನ್ನು ತಾವು ತೋರಿಸುವದು, ಶಿಷ್ಯರಿಂದ ಮಾಡಿಸುವದು - ಹೀಗೆ ಮಾಡಿಮಾಡಿ ಕೊನೆಗೆ ಅವುಗಳಲ್ಲಿ ಸ್ಥೈರ್ಯವನ್ನು ಅನುಗ್ರಹಿಸುವರು.

ಲೋಕದಲ್ಲಿ ದೊಡ್ಡವರೆಂದೆನಿಸಿಕೊಂಡವರೆಲ್ಲ ಹೀಗೆ ಸಾಧನಗಳನ್ನು ಅಭ್ಯಾಸಮಾಡಿ ಸ್ಥೈರ್ಯವನ್ನು ಕೊನೆಮುಟ್ಟಿಸಿದವರೇ ಆಗಿರುತ್ತಾರೆ. ಸಾಧನವನ್ನು ಮಾಡುವಾಗ ಸೋಲುವದು ಸಹಜ. ಮರಗಾಲುಕಟ್ಟಿಕೊಂಡವನು ಎಷ್ಟುಸಲ ಬಿದ್ದರೂ ಅಷ್ಟುಸಲ ಮತ್ತೆ ಎದ್ದು ಸಾಧನಮಾಡುವಂತೆ ಮಹಾತ್ಮಾಗಾಂಧಿಯಂಥವರು ಅಹಿಂಸಾದಿತತ್ತ್ವಗಳನ್ನು ಮತ್ತೆ ಮತ್ತೆ ಅಭ್ಯಾಸಮಾಡಿ ಸಫಲರಾಗಿರುತ್ತಾರೆ. ಇಂಥವರ ಯೋಗ್ಯತೆ ಹೀಗೆ ಎಂದು ನಾವು ಹೇಳುವ ಸ್ಥಿತಿಗೆ ಅವರು ಬರುವಹೊತ್ತಿಗೆ ಅವರಿಗೆ ಆಯಾ ಸಾಧನಗಳಲ್ಲಿ ಸ್ಥೈರ್ಯವು ಅಳವಟ್ಟಿರುವದು. ಒಂದೇ ಸಮನೆ ಬಿಡದೆ ಕ್ರಮವರಿತು ಸಾಧನಮಾಡಿ ನಿಲುಗಡೆಗೆ ಬಂದವರೇ ದೊಡ್ಡವರು. ಅವರೇ ಸ್ಥೈರ್ಯಕ್ಕೆ ಉದಾಹರಣೆ. ಏನೋ ಕೆಲವು ದಿನ ಮಾಡಿಬಿಡುವ ವಿಷಯವಲ್ಲ, ಇದು. ಬೆಂಗಳೂರಿನಲ್ಲಿ ಬೆಳ್ಳಾವೆ ವೆಂಕಟನಾರಣಪ್ಪನವರೆಂಬ ಮಹನೀಯರಿದ್ದರು. ಅವರನ್ನು ನೋಡಿದವರು ಈಗಲೂ ಅನೇಕರು ಇರುತ್ತಾರೆ. ಅವರು ಶರೀರದಲ್ಲಿಯೂ ಮನಸ್ಸಿನಲ್ಲಿಯೂ ಅತ್ಯಂತಶುದ್ಧರು, ಶ್ರಮಜೀವಿಗಳು. ಅವರ ಕ್ರಮಜೀವನವನ್ನು ನೋಡಿ ಬೆರಗಾದವರು ಎಷ್ಟೋ ಮಂದಿ ಈಗಲೂ ಇರುತ್ತಾರೆ. ಅವರು ಸೆಂಟ್ರಲ್ ಕಾಲೇಜಿಗೆ ಪ್ರೊಫೆಸರ್ ಆದಮೇಲೂ ಬಸವನಗುಡಿಯಿಂದ ಸೆಂಟ್ರಲ್ ಕಾಲೇಜ್‌ವರೆಗೂ ಕಾಲುನಡಿಗೆಯಿಂದಲೇ ಬರುತ್ತಿದ್ದರು ; ಆದರೆ ಒಂದು ದಿನವಾದರೂ ಹೊತ್ತುಮೀರಿ ಬಂದವರಲ್ಲ. ಕೆಲಸದಲ್ಲಿ ಒಂದಿಷ್ಟೂ ಸೋಮಾರಿತನವನ್ನು

ತೋರಿಸಿದವರಲ್ಲ. ಅವರು ಬ್ರಾಹ್ಮಣರ ಒಂದು ಭೋಜನಗೃಹವನ್ನು ಏರ್ಪಡಿಸಿದ್ದರು. ಅಲ್ಲಿ ಹುಡುಗರೆಲ್ಲರೂ ತಮ್ಮತಮ್ಮ ಕಾರ್ಯಗಳನ್ನು ತಾವೇ ಮಾಡಿಕೊಂಡು ಸ್ವಲ್ಪಖರ್ಚಿನಿಂದಲೇ ಭೋಜನಗೃಹದ ವ್ಯವಸ್ಥೆ ಮಾಡುವ ರೀತಿಯನ್ನು ಕಲಿಸಿಕೊಟ್ಟಿದ್ದರು. ಒಂದಾನೊಂದು ಶಿವಾಲಯವನ್ನು ಏರ್ಪಡಿಸಿ ಅದರ ಪೂಜೆ, ಸೇವೆ - ಮುಂತಾದವುಗಳಿಗೆ ತಮ್ಮ ತನು ಮನೋಧನಗಳನ್ನು ಅರ್ಪಿಸಿದ್ದರು ; ಕರ್ನಾಟಕಸಾಹಿತ್ಯಪರಿಷತ್ತಿನಲ್ಲಿ ಬಹುಕಾಲ ಶ್ರಮಪಟ್ಟು ಕೆಲಸಮಾಡಿ ಜನರ ಮನಸ್ಸನ್ನು ಒಲಿಸಿಕೊಂಡಿದ್ದರು ; ಭೌತಿಕವಿಜ್ಞಾನದ ಹಲವು ಲೇಖನಗಳನ್ನು ಕನ್ನಡದಲ್ಲಿ ಬರೆದು ಪ್ರಸಿದ್ಧರಾಗಿದ್ದರು. ಇಷ್ಟೆಲ್ಲ ಇದ್ದರೂ ಬಹಿರಾಡಂಬರವು ಒಂದಿಷ್ಟೂ ಇಲ್ಲದೆ ಸಾಮಾನ್ಯರಂತೆ ತೋರುತ್ತಿದ್ದರೂ ಅವರ ಶಾರೀರಬಲವೂ ಮಾನಸಿಕಬಲವೂ ಬ್ರಹ್ಮವರ್ಚಸ್ಸೂ ಯಾರಿಗಾದರೂ `ಹೀಗಿರಬೇಕಲ್ಲ!' ಎನ್ನಿಸುವಂತೆ ಮಾಡುತ್ತಿದ್ದವು. ಇದೆಲ್ಲ ಅವರಿಗೆ ಹೇಗೆ ದೊರೆಯಿತು? ತಾವು ಮಾಡುತ್ತಿದ್ದ ಸಾಧನದಲ್ಲಿ ತ್ರಿಕರಣದ ಶುದ್ಧಿಯಿಂದ ನೆಲೆನಿಂತದ್ದರಿಂದ. 'ಶರೀರಂ ವಾ ಪಾತಯಾಮಿ, ಕಾರ್ಯಂ ವಾ ಸಾಧಯಾಮಿ' - ಈ ಪ್ರಯತ್ನದಲ್ಲಿ ನನ್ನ ಶರೀರವಾದರೂ ಬಿದ್ದು ಹೋಗಬೇಕು, ಇಲ್ಲವೆ ಕಾರ್ಯವಾದರೂ ಕೈಗೂಡಬೇಕು - ಎಂಬ ಸ್ಥಿರತ್ವವೇ ಇಂಥ ದೊಡ್ಡವರ ದೊಡ್ಡಸ್ತಿಕೆಗೆ ಕಾರಣವಾಯಿತು. ಅಧ್ಯಾತ್ಮಸಾಧನದಲ್ಲಿ ಇಂಥ ಸ್ಥಿರತ್ವವಿದ್ದರೆ ಅದು ಉತ್ತಮವಾದ ಸ್ಥೈರ್ಯವೆನಿಸುತ್ತದೆ.

ಪ್ರಾಕೃತರಾದ ಮನುಷ್ಯರಿಗೆ ವಿಷಯದಲ್ಲಿ ಸ್ಥೈರ್ಯವಿರುತ್ತದೆ. ಹೇಗಾದರೂ ಮಾಡಿ, ಎಷ್ಟುಸಲ ಸೋತರೂ. ಎಷ್ಟು ಅಪಮಾನವಾದರೂ, ಸಗ್ಗದೆ ಆಯಾ ವಿಷಯಗಳನ್ನು ಸಾಧಿಸಿಯೇ ಬಿಡಬೇಕೆಂಬ ಸ್ಥೈರ್ಯವೇ ಮನುಷ್ಯರಿಗೆ ಒಂದಾದ ಮೇಲೊಂದು ಕಷ್ಟವು ಬಂದೊದಗುವದಕ್ಕೆ ಕಾರಣವಾಗಿರುತ್ತದೆ. ಪಾಪವನ್ನು ಮಾಡಿಯೇ ಜನರು ನರಕಕ್ಕೆ ಹೋಗುತ್ತಾರೆ; ಆದರೆ ಅಲ್ಲಿಯೂ ತಾವು ನರಕಕ್ಕೆ ಬರುವದಕ್ಕೆ ಕಾರಣವೇನೆಂಬುದನ್ನು ಚಿಂತಿಸದೆ ಮತ್ತೂ ಪಾಪವನ್ನೇ ಮಾಡುತ್ತಿರುತ್ತಾರೆ. ಕಳ್ಳತನಮಾಡಿಮಾಡಿ ಜೈಲಿಗೆ ಬಿದ್ದು ಬಿದ್ದು ಕೊನೆಗೆ ಮನಸ್ಸು ಮೊಂಡಾಗಿ ಕಳ್ಳತನವನ್ನೇ ತಮ್ಮ ಜೀವನದ ಗುರಿಯಾಗಿ ಮಾಡಿಕೊಂಡ ಮೂರ್ಖರೂ ಉಂಟು. ಮಿಲ್ಟನ್ ಎಂಬ ಇಂಗ್ಲಿಷು ಕವಿಯು ತನ್ನ ಒಂದು ಸುಪ್ರಸಿದ್ಧ ಕಾವ್ಯದಲ್ಲಿ `ಮನಸ್ಸು ಸಂಕಲ್ಪ ಮಾಡಿದರೆ ನರಕವನ್ನು ಸ್ವರ್ಗವಾಗಿ ಮಾಡಿಕೊಳ್ಳಲೂಬಹುದು, ಸ್ವರ್ಗವನ್ನು ನರಕವಾಗಿ ಮಾಡಿಕೊಳ್ಳಲೂಬಹುದು' ಎಂದಿರುತ್ತಾನೆ. ಪ್ರಾಕೃತಜನರು ವಿಷಯಗಳಲ್ಲಿಯೇ ಮನಸ್ಸನ್ನಿಟ್ಟುಕೊಂಡಿದ್ದು ಈ ಜೀವನವನ್ನೆಲ್ಲ ನರಕವಾಗಿ ಮಾಡಿಕೊಂಡಿರುತ್ತಾರೆ. ವಿಷಯಗಳನ್ನು ಭೋಗಿಸುವ ಹೊಸಹೊಸ ರೀತಿಗಳನ್ನು ಹುಡುಕುವದೇ ಅವರ. ಪದ್ಧತಿಯಾಗಿಬಿಟ್ಟಿದೆ; ಇಂದ್ರಿಯಗಳಿಗೆ ವಿಷಯಭೋಗದಲ್ಲಿ ಕೌಶಲವು ಹೆಚ್ಚುತ್ತಲೇ ಇರುತ್ತದೆ ; ಅದರಿಂದ ದುಃಖವು ಹೆಚ್ಚುತ್ತಲೂ ಇದೆ. ಹೀಗೆ ವಿಷಯಭೋಗದಲ್ಲಿಯೇ ಸ್ಥಿರೀಭಾವವುಂಟಾಗಿರುವದರಿಂದ ನಮಗೆ ಈ ಲೋಕವೆಲ್ಲವೂ ನರಕವಾಗಿಬಿಟ್ಟಿದೆ. ಪ್ರಪಂಚವನ್ನು ಸರಿಯಾಗಿ ಉಪಯೋಗಿಸಿಕೊಂಡರೆ ಸ್ವರ್ಗವಾಗಿಯೇ ಮಾರ್ಪಡಿಸಿಕೊಳ್ಳಬಹುದು. ನಿಜವಾಗಿ ನೋಡಿದರೆ

ಪ್ರಪಂಚವು ಸ್ವರ್ಗವೂ ಅಲ್ಲ, ನರಕವೂ ಅಲ್ಲ. ಅದು ಇರುವಂತೆಯೇ ಇದೆ. ಆದರೆ ನಮ್ಮ ನಮ್ಮ ನಡತೆಯಿಂದ ಅದು ಸ್ವರ್ಗವೋ ನರಕವೋ ಆಗುತ್ತಿದೆ. ವಿಷಯಗಳಲ್ಲಿ ಸ್ಥೈರ್ಯವನ್ನು ಪಡೆದವರಿಗೆ ನರಕವಾಗುತ್ತದೆ, ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡಿದರೆ ಸ್ವರ್ಗವಾಗುತ್ತದೆ.

ನಾವೆಲ್ಲರೂ ನಿಜವಾಗಿ ಆನಂದರೂಪನಾದ ಪರಮಾತ್ಮನಲ್ಲಿಯೇ ಇರುತ್ತೇವೆ. 'ಈ ಭೂತಗಳೆಲ್ಲವೂ ಆನಂದರೂಪದಿಂದಲೇ ಬಂದಿರುತ್ತವೆ; ಆನಂದದಲ್ಲಿಯೇ ಇದ್ದು ಜೀವಿಸಿಕೊಂಡಿವೆ; ಕೊನೆಗೆ ಆನಂದವನ್ನು ಕುರಿತೇ ಹೋಗಿ ಅದರಲ್ಲಿ ಸೇರಿಹೋಗುವವು. ಆನಂದವೇ ಬ್ರಹ್ಮವು ' ಎಂದು ಶ್ರುತಿಯು ಸಾರುತ್ತಿದೆ. ಸುಖದುಃಖಗಳ ರೂಪವಾಗಿರುವ ಸ್ವರ್ಗನರಕಗಳನ್ನು ಮೀರಿರುವ ಪರಮಾತ್ಮಸ್ಥಿತಿಯೇ ಆನಂದವು. ಆ ಆನಂದದ ಒಂದು ತೊಟ್ಟಿನ ಪ್ರತಿಬಿಂಬವು ನಮ್ಮ ಸುಖವು. ಲೋಕದಲ್ಲಿರುವ ಬಗೆಬಗೆಯ ಸುಖಗಳಿಗೆಲ್ಲ ಒಂದು ಕೇಂದ್ರವಿದೆ. ಆದರೆ ನಾವು ಅದನ್ನು ಮರೆತು, ಅದನ್ನು ಬಿಟ್ಟು ದೂರದ ಕಗ್ಗಾಡಿಗೆ ಬಂದು ಸಂಕಟಪಡುತ್ತಿದ್ದೇವೆ. ಯಾವಾಗಲೂ ನಗುತ್ತಿರುವ ಆನಂದಸ್ಥಿತಿಯು ಒಂದು ನಿಜವಾಗಿಯೂ ಇದೆ. ಆದರೆ ಅದು ಎಲ್ಲರಿಗೂ ಸುಲಭಸಾಧ್ಯವಲ್ಲ. `ಹೆಚ್ಚು ಆಹಾರವನ್ನು ಬೆಳೆಯಿರಿ !' ಎಂದು ಜನರಿಗೆ ಉಪದೇಶಿಸುವಂತೆ ಹೆಚ್ಚು `ಆನಂದವನ್ನು ಬೆಳೆಯಿರಿ !' ಎಂದು ಕೂಗೆಬ್ಬಿಸಿದರೆ ಆನಂದವು ಜನರಿಗೆ ಸಿಕ್ಕಲಾರದು. ಆನಂದಸ್ವರೂಪನಾದ ಪರಮಾತ್ಮನ ಕಡೆಗೆ ತಿರುಗಬೇಕು; ಆಗ ಮಾತ್ರ ಆನಂದವು ಸಿಕ್ಕುತ್ತದೆ. ಇದು ಪರಮಾತ್ಮನ ಅನುಗ್ರಹದಿಂದಲೂ ಆತನ ಭಕ್ತರ ಅನುಗ್ರಹದಿಂದಲೂ ಸಾಧ್ಯವಾಗುವದು. ಪರಮಾತ್ಮನನ್ನು ಬಿಟ್ಟು ಬೇರೆಕಡೆಗೆ ತಿರುಗಿರುವದೇ ದುಃಖವು, ಪರಮಾತ್ಮನ ಕಡೆಗೆ ತಿರುಗುವದೇ ಆನಂದವು.

ಹೊರಗಿನ ವಿಷಯಗಳಿಂದ ನಮಗೆ ಕಷ್ಟಗಳು ಬರುತ್ತಿರಬಹುದು. ಆದರೆ ಆನಂದರೂಪನಾದ ಪರಮಾತ್ಮನನ್ನು ಪಡೆದುಕೊಂಡವನಿಗೆ ಅವೆಲ್ಲವನ್ನೂ ಆನಂದವಾಗಿ ಮಾರ್ಪಡಿಸಿಕೊಳ್ಳುವ ಶಕ್ತಿ ಇರುತ್ತದೆ. ಮುಳ್ಳಿನಗಿಡ ಲೋಕದಲ್ಲಿ ಎಷ್ಟಿಲ್ಲ? ಆದರೆ ವಿವೇಕಿಗಳು ಅವನ್ನು ಬೇಲಿಗೆ ಹಾಕುತ್ತಾರೆ ; ಅವನ್ನು ತುಳಿದು ಅಳುವದಿಲ್ಲ, ಸಾಧನದ ಸಾರವೆಲ್ಲ ಇಷ್ಟೇ. ಆನಂದರೂಪನಾದ ಪರಮಾತ್ಮನನ್ನು ಮುಟ್ಟುವದಕ್ಕೆ ಆತ್ಮಜ್ಞಾನವು ಬೇಕು ; ಆತ್ಮಜ್ಞಾನಕ್ಕೆ ಅಮಾನಿತ್ವ, ಅದಂಭಿತ್ವ, ಅಹಿಂಸಾ, ಕ್ಷಾಂತಿ, ಆರ್ಜವ, ಆಚಾರ್ಯೋಪಾಸನೆ - ಮುಂತಾದ ಸಾಧನಗಳಲ್ಲಿ ಸ್ಥೈರ್ಯವಿರಬೇಕು.

ಈಗ **ಆತ್ಮವಿನಿಗ್ರಹ** ಎಂಬುದನ್ನು ಕುರಿತು ಕೆಲವು ಮಾತುಗಳನ್ನು ಹೇಳುವೆನು. ಇಲ್ಲಿ ಆತ್ಮವೆಂಬುದು ಶರೀರ, ಇಂದ್ರಿಯ - ಇವುಗಳ ಹೆಸರು. ಇವು ನಮಗೆ ಉಪಕಾರವನ್ನೂ ಮಾಡುವವು, ಅಪಕಾರವನ್ನೂ ಮಾಡುವವು. ಆದ್ದರಿಂದಲೇ `ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ' ಎಂದು ಹಿಂದೆ ಹೇಳಿದ್ದಾಗಿರುತ್ತದೆ. ಇಂದ್ರಿಯಗಳನ್ನು ಸ್ವೇಚ್ಛೆಯಿಂದ ಹರಿಯುವದಕ್ಕೆ ಬಿಟ್ಟರೆ ಅವು ಎತ್ತೆತ್ತಲೋ ಹೋಗುತ್ತವೆ. ಅವುಗಳಿಗೆ ವಿಷಯಭೋಗವನ್ನು ಮಾಡಿಸಿ, ಸರಿಯಾದ ಕೆಲಸವನ್ನು ಕೊಡಿಸದೆ ಇದ್ದರೆ ಅವು ಕೊಬ್ಬಿ ನಮಗೆ

ಶತ್ರುಗಳಾಗುವವು. ಅವು ಯಾವಾಗ ಏನು ಮಾಡಿ ಏನು ಅನರ್ಥವನ್ನು ತರುವವೋ ಯಾರು ಬಲ್ಲರು ? - ಎಂದು ಅಂಜಿಕೊಂಡೇ ಇರಬೇಕು. ಕೆಲಸಕ್ಕೆ ಬಾರದ ಮಾತು, ಕೆಟ್ಟ ನೋಟ - ಮುಂತಾದವುಗಳು ಅವುಗಳ ಸ್ವಭಾವವಾಗಿ ಬಿಟ್ಟಿರುತ್ತದೆ.

ಒಬ್ಬ ಕಳ್ಳನು ಒಂದು ಪುಸ್ತಕವನ್ನು ಬರೆದನಂತೆ. ಅವನು ಕಳ್ಳರು ಮಾಡುವ ಕಳ್ಳತನದ ವಿಚಾರವನ್ನೆಲ್ಲ ವರ್ಣಿಸಿ ಎಚ್ಚರದಿಂದಿರಿ ! ಎಂದು ಜನರಿಗೆ ಬುದ್ಧಿವಾದವನ್ನು ಬರೆದನಂತೆ. ತೀರಕೊನೆಯಲ್ಲಿ `ಈಗ ನಾನು ಒಂದು ತೀರ್ಮಾನವನ್ನು ಮಾಡಿಕೊಂಡಿರುತ್ತೇನೆ ; ಈ ನನ್ನ ಕೈ ಎಷ್ಟೋ ವೇಳೆಗಳಲ್ಲಿ ಕಳ್ಳತನವನ್ನು ಮಾಡಿದೆ, ಇದರ ಮೋಸಕೃತ್ಯಗಳನ್ನು ಕುರಿತು ಇದರಿಂದಲೇ ಈ ಪುಸ್ತಕವನ್ನು ಬರೆಯಿಸಿರುತ್ತೇನೆ. ಆದರೆ ಇನ್ನು ಯಾವಾಗಲಾದರೂ ಈ ಕೈ ಕನ್ನವನ್ನು ಕೊರೆದು ನಿಮಗೆ ನಾನು ಸಿಕ್ಕಿದರೆ ಈ ಕೈಯನ್ನೇ ಕತ್ತರಿಸಿ ಬಿಡಿರಿ. ಏಕೆಂದರೆ ಇದು ತಾನೆ ಕನ್ನವನ್ನು ಕೊರೆಯುವದು?' ಎಂದು ಬರೆದನಂತೆ. ಆದರೂ ಕೈಯನ್ನು ಕತ್ತರಿಸಿಹಾಕುವದು ಜಾಣತನವಲ್ಲ. ಅದರಿಂದ ದಾನ, ಈಶ್ವರಪೂಜೆ - ಮುಂತಾದ ಒಳ್ಳೆಯ ಕೆಲಸವನ್ನು ಮಾಡುವದಕ್ಕಾಗುವದಿಲ್ಲವೆ? ಹೀಗೆ ಮಾಡುವದೇ ಆತ್ಮವಿನಿಗ್ರಹವು. ನನಗೆ ಒಬ್ಬ ದೊಡ್ಡ ಮನುಷ್ಯರು ಒಂದು ಕಥೆಯನ್ನು ಹೇಳಿದರು. ಅವರು ಒಂದು ಮನೆಯನ್ನು ಹೊಸದಾಗಿ ಬೆಂಗಳೂರಿನ ಬಸವನಗುಡಿ ಎಂಬ ಭಾಗದಲ್ಲಿ ಕಟ್ಟಿಸಿದ್ದರು. ಅವರ ಸ್ನೇಹಿತರೊಬ್ಬರು ಅದನ್ನು ನೋಡುವದಕ್ಕೆ ಬಂದಿದ್ದರಂತೆ. `ಮನೆಯಲ್ಲಿರುವ ಭಾಗಗಳಲ್ಲೆಲ್ಲ ಉಪಯೋಗವಾಗಿವೆಯೆ? ಇನ್ನೇನಾದರೂ ಹೆಚ್ಚುಕಡಿಮೆಯಾಗಬೇಕಾದದ್ದಿದೆಯೊ?' ಎಂದು ಮಿತ್ರರನ್ನು ಕೇಳಿದರಂತೆ. ಆಗ ಅವರು `ಎಲ್ಲವೂ ಸರಿಯಾಗಿದೆ. ಆದರೆ ಹೊರಗಿನಿಂದ ಆಗಂತುಕರು ಯಾರಾದರೂ ಬಂದರೆ, ಅವರಿಗೊಂದು ಕೊಟ್ಟಡಿ ಬೇಕಲ್ಲವೆ?' ಎಂದರು. ಮನೆಯ ಯಜಮಾನರು `ಸರಿಯೆ, ಆದರೆ ಈಗಲೇ ಬಹಳ ಖರ್ಚಾಗಿದೆ. ಸಾವಕಾಶವಾಗಿ ಆ ಕೊಟ್ಟಡಿಯನ್ನು ಕಟ್ಟಿಸುತ್ತೇನೆ' ಎಂದು ಉತ್ತರವನ್ನು ಕೊಟ್ಟರು. ಒಂದೆರಡು ದಿನಗಳು ಇದ್ದು ಸ್ನೇಹಿತರು ಹೊರಟುಹೋದರು. ಆದರೆ ಅವರ ಹಾಸಿಗೆಯನ್ನು ಸುತ್ತಿದಾಗ ಅದರ ಕೆಳಗೆ ಐನೂರು ರೂಪಾಯಿಗಳ ನೋಟು ಇದ್ದಿತು. ಕೂಡಲೆ ಈ ವಿಷಯವನ್ನು ಆ ಮಿತ್ರರಿಗೆ ತಂತಿ ಮೂಲಕ ತಿಳಿಸಲಾಯಿತು. ಆದರೆ ಅವರು `ನಾನೇನೂ ನೋಟನ್ನು ಮರೆತುಬಿಟ್ಟಿಲ್ಲ. ನೀವು ಹೇಳಿದ್ದ ಕೊಟ್ಟಡಿಯನ್ನು ಕೂಡಲೆ ಕಟ್ಟಿಸಿಬಿಡಿರಿ. ಅದಕ್ಕಾಗಿಯೇ ಹಣವನ್ನು ಬಿಟ್ಟುಬಂದೆನು' ಎಂದು ಉತ್ತರವನ್ನು ಕೊಟ್ಟರಂತೆ ! ಎಂಥ ಉಪಕಾರಕ್ಕೆ ಅವರು ತಮ್ಮ ಕೈಯನ್ನು ಉಪಯೋಗಿಸಿಕೊಂಡರು.

ಹೀಗೆಯೇ ನಾವು ನಮ್ಮ ನಾಲಗೆ, ಕಣ್ಣು, ಕಿವಿ, ಕಾಲು - ಮುಂತಾದ ಎಲ್ಲಾ ಅವಯುವಗಳನ್ನೂ ಲೋಕೋಪಕಾರಕ್ಕಾಗಿಯೂ ಪರಮಾತ್ಮನ ಸೇವೆಗಾಗಿಯೂ ಉಪಯೋಗಿಸಿಕೊಳ್ಳಬಹುದು. ಅವುಗಳು ನಮಗೆ ಅಪಕಾರಿಗಳಾಗಿ ವರ್ತಿಸುವದಕ್ಕೆ ಬದಲಾಗಿ ಕೆಟ್ಟ ಪ್ರವೃತ್ತಿಗಳನ್ನು ಬಿಟ್ಟು ಒಳ್ಳೆಯ ಮಾರ್ಗದಲ್ಲಿಯೇ ನಡೆಯುವಂತೆ ತಿದ್ದಬಹುದು. ಇದೇ ಆತ್ಮವಿನಿಗ್ರಹವೆಂಬ ಸಾಧನವು.

---

# ೧೦೪. ಆತ್ಮವಿನಿಗ್ರಹ, ವೈರಾಗ್ಯ 13 - (7-8)

(7-11-48)

**ಆತ್ಮವಿನಿಗ್ರಹದ** ವಿಚಾರವಾಗಿ ಹಿಂದಿನ ದಿನವೇ ಸ್ವಲ್ಪ ಹೇಳಿತ್ತು. ಕಾರ್ಯಕರಣಗಳನ್ನು ಹಿಡಿತದಲ್ಲಿಡುವದೇ ಆತ್ಮವಿನಿಗ್ರಹವು. ಚಪಲಚಿತ್ತರಾದವರಿಗೆ ಇಂದ್ರಿಯಗಳನ್ನಾಗಲಿ ಮನಸ್ಸನ್ನಾಗಲಿ ಒಂದು ಕಡೆಯಲ್ಲಿ ಇಡುವದಕ್ಕೆ ಬರುವದಿಲ್ಲ. ಆತ್ಮವಿನಿಗ್ರಹವು ಬಹುದಿವಸಗಳ ಅಭ್ಯಾಸದಿಂದ ಬರತಕ್ಕದ್ದು. ನಮ್ಮ ಶರೀರೇಂದ್ರಿಯಗಳು ನಾವು ಅವುಗಳನ್ನು ಹೇಗೆ ಇಟ್ಟುಕೊಳ್ಳುವೆವೋ ಹಾಗೇ ಆಗಿಬಿಡುವವು. ಅಭ್ಯಾಸದಿಂದ ಮಾಡಿಕೊಂಡ ಪದ್ಧತಿಯು ನಮ್ಮ ಸ್ವಭಾವವೇ ಆಗಿಬಿಡುತ್ತದೆ. ಪಾಶ್ಚಾತ್ಯರು ನೆಟ್ಟಗೆ ನಿಲ್ಲುವದು, ಕೈಕಾಲುಗಳನ್ನು ನೆಟ್ಟಗೆ ಇಟ್ಟುಕೊಳ್ಳುವದು - ಮುಂತಾದವುಗಳನ್ನು ಬಹುಕಾಲದಿಂದ ಅಭ್ಯಾಸ ಮಾಡಿಕೊಂಡಿರುವದರಿಂದ ಅವರಿಗೆ ಕೈಕಾಲುಗಳನ್ನು ಮಡಿಸಿಕೊಳ್ಳುವದು ಬಹಳ ಕಷ್ಟಸಾಧ್ಯವಾಗಿದೆ. ಪದ್ಮಾಸನದಲ್ಲಿ ಕುಳಿತುಕೊಳ್ಳುವದು, ಬೆರಳುಗಳನ್ನು ಮಡಿಸಿ ಕೆಲಸಕ್ಕೆ ಉಪಯೋಗಿಸುವದು - ಮುಂತಾದವು ಅವರಿಗೆ ಕಷ್ಟತರವಾದ ಕೆಲಸಗಳಾಗಿವೆ. ಶರೀರೇಂದ್ರಿಯಗಳನ್ನು ಯಾವ ಗೀಳಿಗೆ ಬಿಟ್ಟರೆ ಅದೇ ಜಾಡನ್ನು ಹಿಡಿಯುವವು. ಒಬ್ಬ ಶಿಪಾಯಿಯು ಕೆಲಸದಿಂದ ನಿವೃತ್ತನಾದ ಬಳಿಕವೂ ದಾರಿಯಲ್ಲಿ ನಡೆಯುತ್ತಿದ್ದಾಗ ಒಬ್ಬನು `ನಿಲ್ಲು' (Halt !) ಎಂದು ಕೂಗಿದನು ; ಕೂಡಲೆ ಶಿಪಾಯಿ ನಿಂತುಬಿಟ್ಟನು ! ಕೆಲಸದಲ್ಲಿದ್ದಾಗ ಕವಾಯಿತು ಮಾಡಿಮಾಡಿ ಅವನಿಗೆ ಅಷ್ಟು ಅಭ್ಯಾಸವಾಗಿತ್ತು! ಶ್ರೀರಾಮಕೃಷ್ಣಪರಮಹಂಸರವರು ಒಂದು ಕಥೆಯನ್ನು ಹೇಳಿದ್ದಾರೆ: ಕೆಲವು ಜನ ಸಂನ್ಯಾಸಿಗಳು ಒಂದು ಕಡೆ ಕುಳಿತುಕೊಂಡು ಯಾವದೋ ವಿಚಾರವನ್ನು ಮಾಡುತ್ತಿದ್ದರು ; ಅಷ್ಟರಲ್ಲಿ ಆ ದಾರಿಯಲ್ಲಿ ಒಬ್ಬ ಹೆಣ್ಣುಮಗಳು ಬಂದು ಹೋದಳು. ಒಬ್ಬ ಸಂನ್ಯಾಸಿಯು ಅತ್ತಕಡೆಗೆ ಕತ್ತೆತ್ತಿ ನೋಡಿದನು. ವಿಚಾರಿಸಿದ್ದರಲ್ಲಿ ಅವನೊಬ್ಬನು ಗೃಹಸ್ಥಾಶ್ರಮದಿಂದ ಸಂನ್ಯಾಸಿಯಾದವನೆಂದೂ ಮಿಕ್ಕವರೆಲ್ಲರೂ ಬ್ರಹ್ಮಚಾರಿಗಳಾಗಿದ್ದು ಅಲ್ಲಿಂದಲೇ ತುರೀಯಾಶ್ರಮವನ್ನು ಹೊಂದಿದ್ದರೆಂದೂ ಗೊತ್ತಾಯಿತು ! ತನ್ನನ್ನು ತಾನೇ ಯಾವನು ಹಿಡಿತದಲ್ಲಿ ಇಟ್ಟುಕೊಂಡಿರುತ್ತಾನೋ ಅವನು ತನಗೆ ತಾನೇ ಬಂಧು; ಯಾವನು ತನ್ನನ್ನು ತಾನು ಹಿಡಿತದಲ್ಲಿಟ್ಟುಕೊಂಡಿರುವದಿಲ್ಲವೋ ಅವನು ತನಗೆ ತಾನೇ ಶತ್ರು - ಎಂದು ಹಿಂದೆ ಭಗವಂತನು ಅಪ್ಪಣೆಕೊಡಿಸಿರುವದಕ್ಕೆ ಇದೇ ಕಾರಣ. ಸಿನೆಮ, ನಾಟಕ - ಮುಂತಾದವುಗಳನ್ನು ನೋಡಿದ ಕಣ್ಣು, ಸಂಗೀತವೇ ಮುಂತಾದವುಗಳನ್ನು ಕೇಳಿದ ಕಿವಿ, ಸುವಾಸನೆಯ ಹೂಗಂಧ ಮುಂತಾದವನ್ನು ಮೂಸಿದ ಮೂಗು, ಹರಟೆಹೊಡೆಯುವ ಅಥವಾ ಹೋಟಲುತಿಂಡಿತಿನ್ನುವ ಅಭ್ಯಾಸದ ನಾಲಗೆ - ಇವೇ ಮುಂತಾದವುಗಳಿಗೆ ಆಯಾ ಅಭ್ಯಾಸವನ್ನು ಬಿಡುವದು ಕಷ್ಟ. ಆದ್ದರಿಂದ ಆತ್ಮವಿನಿಗ್ರಹವನ್ನು ಚೆನ್ನಾಗಿ ಅಭ್ಯಾಸಮಾಡಿಕೊಳ್ಳಬೇಕು.

ಕುದುರೆಗೆ ನಡಗೆ ಕಲಿಸಬೇಕು ಎನ್ನುವವನು, ಅದನ್ನು ನಾಗಾಲೋಟ ಓಡಿಸುವದು, ಕುಕ್ಕಲುನಡಗೆ - ಮುಂತಾದ ಬೇರೆಬೇರೆಯ ಬಗೆಗಳಲ್ಲಿ ನಡೆಯಿಸಿ ನಡೆಯಿಸಿ ಹೇಗೆ ಅಭ್ಯಾಸಮಾಡಿಸುತ್ತಾನೋ ಹಾಗೆಯೇ ಈಗ ಶರೀರವನ್ನೂ ಇಂದ್ರಿಯಗಳನ್ನೂ ಬೇರೆಬೇರೆಯ ಅಭ್ಯಾಸಗಳಿಂದ ವಶಪಡಿಸಿಕೊಳ್ಳಬೇಕು. ದೇಹವನ್ನು ದಂಡಿಸದೆ ಪರಗತಿಯಾಗಲಾರದೆಂದು ಸರ್ವಜ್ಞನು ಹೇಳಿರುತ್ತಾನಷ್ಟೆ ; ಅದಕ್ಕೂ ಇದೇ ಅರ್ಥ. ಶರೀರವನ್ನು ದಂಡಿಸಬೇಕೆಂದು ಬರಿಯ ಮೊಂಡತನದಿಂದ ಉಪವಾಸ - ವನವಾಸಗಳಿಂದ ಶರೀರವನ್ನು ಸೊರಗಿಸುವದೇನೂ ಸರಿಯಲ್ಲ. ಅಂಥ ಉಗ್ರತಪಸ್ಸು ರಾಜಸವಾಗುವದೇ ಹೊರತು ಸಾತ್ತ್ವಿಕವಾಗಿ ತತ್ತ್ವವಿಚಾರಕ್ಕೆ ಅನುಕೂಲವೆನಿಸುವದಿಲ್ಲ.

ಸ್ವಾಧೀನವಾಗಿಲ್ಲದ ಶರೀರೇಂದ್ರಿಯಗಳು ಏನೇನಾದರೂ ಮಾಡುವವು. ಸಾತ್ತ್ವಿಕವಿಚಾರಗಳನ್ನು ತೆಗೆದರೆ ಕಂಡಕಂಡ ಕಡೆಗೆ ಹರಿಯುವವು. ದೊಡ್ಡವರು ಕುಳಿತಿರುವಾಗ ಕೈಕಾಲುಗಳನ್ನು ನೀಡಿಕೊಳ್ಳುವದು, ಸಭೆಯಲ್ಲಿ ಅಡ್ಡಮಾತು ತೆಗೆಯುವದು, ದೇವಸ್ಥಾನದಲ್ಲಿ ವೃತ್ತಾಂತಪತ್ರಿಕೆಗಳನ್ನು ಓದುವದು, ಅಥವಾ ವೃತ್ತಾಂತಗಳನ್ನು ಚರ್ಚಿಸುವದು - ಇವೇ ಮುಂತಾದ ದುರಭ್ಯಾಸಗಳು ಆತ್ಮವಿನಿಗ್ರಹವಿಲ್ಲದ್ದರಿಂದಲೇ ಉಂಟಾಗಿರುವವು. ಹಿಂದಿನ ಆರ್ಯಸಂಪ್ರದಾಯದ ಆಚಾರಗಳಿಂದ ಆತ್ಮವಿನಿಗ್ರಹಕ್ಕೆ ಬೇಕಾದ ಸಹಾಯವು ದೊರಕುತ್ತಿತ್ತು. ಬೆಳಗ್ಗೆ ಏಳುವದು, ಸ್ನಾನ, ದೇವರಪೂಜೆ, ತೀರ್ಥಪ್ರಸಾದವಿನಿಯೋಗ - ಮುಂತಾದವುಗಳನ್ನು ಮಾಡಿಕೊಂಡೇ ವ್ಯವಹಾರಕ್ಕೆ ಹೊರಡಬೇಕು ; ಕ್ಲಿಪ್ತಕಾಲದಲ್ಲಿ ಆಹ್ನಿಕವನ್ನು ಮಾಡಿಕೊಂಡು ಎಲ್ಲರೂ ಒಟ್ಟಿಗೆ ಕಲೆತು ಊಟಮಾಡಬೇಕು ; ಮಕ್ಕಳಿಗೆ ತಿಂಡಿತೀರ್ಥಗಳು ಎಲ್ಲವೂ ನಿಯತಕಾಲದಲ್ಲಿ ನಿಯತ ರೀತಿಯಿಂದ ದೊರಕಬೇಕು -ಇಂಥ ಪದ್ಧತಿಗಳಿಂದ ನಮ್ಮ ಜನಾಂಗಕ್ಕೆ ಆತ್ಮವಿನಿಗ್ರಹವು ಸುಲಭವಾಗಿ ದಕ್ಕುತ್ತಿತ್ತು. ಆದರೆ ಈಗ ಈ ಆಚಾರವು ಮಾಯವಾಗಿದೆ ; ನಮ್ಮ ನಡೆನುಡಿಗಳೆಲ್ಲ ತಲೆಕೆಳಗಾಗಿವೆ. ಶರೀರೇಂದ್ರಿಯಗಳನ್ನು ಸ್ವೇಚ್ಛೆಯಾಗಿ ಹರಿಯಬಿಡುತ್ತಿದ್ದೇವೆ. ಇದರಿಂದ ಇಹಲೋಕದ ಸುಖವೇ ದೂರವಾಗುತ್ತಿದೆ; ಇನ್ನು ಪರಲೋಕದ ಸುದ್ದಿಯಾದರೂ ಎಲ್ಲಿ ಬಂತು ? ಇದರ ಫಲವಾಗಿ ನಮಗೆ ಆತ್ಮಜ್ಞಾನವೆಂಬುದು ಬಲುದೂರವಾಗಿದೆ.

**ಇಂದ್ರಿಯಾರ್ಥೇಷು ವೈರಾಗ್ಯಮ್** : ವೈರಾಗ್ಯವೆಂಬುದು ನಮ್ಮ ದೇಶಕ್ಕೇ ಮೀಸಲಾದ ಮಾತು. ಮಿಕ್ಕದೇಶದಲ್ಲಿ ಸಂನ್ಯಾಸವೆಂಬುದು ಒಂದು ಲಾಂಛನಾಸ್ಪದವಾದ ಆಚಾರವೆಂದು ಎಣಿಸಲ್ಪಟ್ಟಿದೆ. ಆದರೆ ನಮ್ಮ ದೇಶದವರು ಬಹುಕಾಲದಿಂದಲೂ ಅದು ಅಮೃತತ್ವಕ್ಕೆ ಅಸಾಧಾರಣವಾದ ಹಾದಿಯೆಂದು ಭಾವಿಸಿರುತ್ತಾರೆ. ಐತಿಹಾಸಿಕಕಾಲದಲ್ಲಿ ಸಮರ್ಥ ರಾಮದಾಸರ ಭಗವೀವಸ್ತ್ರವನ್ನು ರಾಷ್ಟ್ರಧ್ವಜವೆಂದು ಗೌರವಿಸುತ್ತಿದ್ದ ಶಿವಾಜಿಯಂಥ ಮಹನೀಯರನ್ನು ಸ್ಮರಿಸಿಕೊಳ್ಳಬೇಕು. ವೈದಿಕವಾಙ್ಮಯವನ್ನು ತಮ್ಮ ವ್ಯಾಖ್ಯಾನಗಳಿಂದ ಭರತಖಂಡದ ಎಲ್ಲ

ಜನರಿಗೂ ಸುಬೋಧವಾಗಿ ಮಾಡಿದ ಶ್ರೀವಿದ್ಯಾರಣ್ಯಸ್ವಾಮಿಗಳವರು ತಮ್ಮ ಪೂರ್ವಾಶ್ರಮದಲ್ಲಿ ವಿಜಯನಗರದ ರಾಜ್ಯಸ್ಥಾಪನೆಗೆ ಮಾಡಿದ ಸಹಾಯವನ್ನೂ ನಾವು ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ವೈರಾಗ್ಯವನ್ನು ಜನರಿಗೆ ಬೋಧಿಸಿದ ಇಂಥ ಮಹನೀಯರು ಅಭಾವವೈರಾಗ್ಯದವರಲ್ಲವೆಂಬುದು ಆಗ ನಮಗೆ ಮನದಟ್ಟಾಗುವದು. ದಾಸ್ಯವೃತ್ತಿಯಿಂದ ಬಹುಕಾಲ ಜೀವನಮಾಡಿ ದಟ್ಟದರಿದ್ರರಾಗಿರುವ ಈಗಿನ ಜನರಿಗೆ ಭೋಗಕ್ಕೆ ವಿಷಯಗಳೇ ಇಲ್ಲದ್ದರಿಂದ ವೈರಾಗ್ಯಬೋಧನೆಯು ಅರ್ಥರಹಿತವಾಗಿರುತ್ತದೆ. ಆದ್ದರಿಂದ ವೈರಾಗ್ಯದ ಬೆಲೆಯು ಕಡಿಮೆಯಾಯಿತು, ಅಥವಾ ಅದೇ ಕಣ್ಮರೆಯಾಯಿತು - ಎಂಬಂಥ ಕಾಲವು ಬಂದಿರುತ್ತದೆ.

ಈಗ ನಮಗೆ ಸ್ವಾತಂತ್ರ್ಯವು ಬಂದಿದೆಯೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿರುವೆವು. ಆದರೆ ನಮ್ಮ ಇಂದ್ರಿಯಗಳು ನಮ್ಮ ಸ್ವಾಧೀನಕ್ಕೆ ಬಂದಿವೆಯೇನು? ಇಲ್ಲ. ನಾವೇ ಅವಕ್ಕೆ ವಶರಾಗಿರುತ್ತೇವೆ. ಪದಾರ್ಥಗಳಿಗೆ ಬೆಲೆಕಟ್ಟಬಲ್ಲವರಿಗೆ ವೈರಾಗ್ಯವು ದೊರಕುತ್ತದೆ. ಯಾವನಿಗೆ ಹೆಚ್ಚಿನ ಸ್ಥಿತಿಯು ಬೇಕೋ ಅವನು ಕಡಿಮೆಯ ಬೆಲೆಯ ಪದಾರ್ಥಗಳನ್ನು ಅವಶ್ಯವಾಗಿ ಬಿಡುತ್ತಾನೆ. ಈಗ ನಮಗೆ ಪದಾರ್ಥಗಳ ಬೆಲೆಯೂ ತಿಳಿಯದು, ನಮ್ಮ ಬೆಲೆಯೂ ತಿಳಿಯದು. ನಿಜವಾದ ವೈರಾಗ್ಯವು ಇದ್ದಾಗ ನಮ್ಮ ದೇಶವು ಹೇಗಿದ್ದಿತು? ಸ್ವಲ್ಪ ವಿಚಾರಿಸಿ ನೋಡಿರಿ. ಜನಕಚಕ್ರವರ್ತಿಯು ಅನಾಸಕ್ತಿಯಿಂದ ರಾಜ್ಯಭಾರವನ್ನು ಮಾಡುತ್ತಿರುವಲ್ಲಿ ಅವನ ರಾಜ್ಯಕ್ಕೆ ವಿದೇಹರಾಜ್ಯವೆಂಬ ಅನ್ವರ್ಥವಾದ ಹೆಸರು ಬಂದಿತ್ತು. ಅಲ್ಲಿರುವವರಲ್ಲಿ ಬಲುಮಂದಿ ವಿದೇಹರು, ದೇಹಾಭಿಮಾನವಿಲ್ಲದವರೇ ಆಗಿದ್ದರು. ಇತಿಹಾಸಕಾಲದಲ್ಲಿ ಅತ್ಯಂತ ವಿಸ್ತಾರವಾದ ರಾಜ್ಯವನ್ನು ಆಳುತ್ತಿದ್ದ ಅಶೋಕನು ಎಂಥ ವೈರಾಗ್ಯಶಿಖಾಮಣಿಯಾಗಿದ್ದನು! ನಮ್ಮ ದೇಶದ ಜನರಿಗೆ ವೈರಾಗ್ಯವಿದ್ದಾಗ ಹೆಚ್ಚಿನ ಗೌರವವೂ ಇತ್ತು.

ಆದರೆ ಬರಿಯ ಅಭಾವವೈರಾಗ್ಯವು ಏತಕ್ಕೂ ಬರುವದಿಲ್ಲ. ಪದಾರ್ಥಗಳ ಯೋಗ್ಯತೆಯನ್ನು ನಿರ್ಣಯಿಸಿಕೊಂಡು ಅವನ್ನು ಬಿಟ್ಟು ಹೆಚ್ಚಿನ ಸ್ಥಿತಿಗೆ ಏರಬೇಕೆಂಬ ಹವಣಿಕೆಯೇ ವೈರಾಗ್ಯವು. ಹಿಂದಿನ ಕಾಲದಲ್ಲಿ ರಾಜರುಗಳು ತಮ್ಮ ಮಕ್ಕಳಿಗೆ ರಾಜ್ಯವನ್ನು ಕೊಟ್ಟು ತಪೋವನಕ್ಕೆ ತೆರಳುತ್ತಿದ್ದರೆಂದು ನಮ್ಮ ದೇಶದ ವಾಙ್ಮಯದಲ್ಲಿನ ಅನೇಕ ಕಥೆಗಳಲ್ಲಿ ಕಂಡುಬರುತ್ತದೆ. ಆ ವೈರಾಗ್ಯಕ್ಕೆ ಹೆಚ್ಚಿನ ಸುಖದ ಆಸೆಯೇ ಕಾರಣ. ಸಾಮಾನ್ಯಗೃಹಸ್ಥರಿಗೂ ಕೂಡ ವೈರಾಗ್ಯವನ್ನು ಶಾಸ್ತ್ರದಲ್ಲಿ ಉಪದೇಶಿಸಿರುತ್ತದೆ. ಹಿತಮಿತವಾಗಿ ರಾಗದ್ವೇಷವಿಲ್ಲದೆ ವಿಷಯಗಳನ್ನು ಭೋಗಿಸಿದವನಿಗಲ್ಲವೆ, ಇಹಸೌಖ್ಯವು?

ಆದರೆ ಇಷ್ಟಿದ್ದರೆ ಸಾಲದು. ಇಂದ್ರಿಯಾರ್ಥಗಳ ಭೋಗವೇ ನಮ್ಮ ಗುರಿಯಲ್ಲ. ವಿಷಯಗಳನ್ನು ಭೋಗಿಸುವದು ಪಶುಗಳಿಗೂ ಇದೆಯಲ್ಲ ! ಮನುಷ್ಯನದೇನು ಹೆಚ್ಚುಗಾರಿಕೆ? ಮನುಷ್ಯನು ಹುಟ್ಟಿರುವದು ಪ್ರಕೃತಿಯ ಆಳಾಗಿರುವದಕ್ಕಲ್ಲ. ಅದನ್ನು ಸ್ವಾಧೀನಕ್ಕೆ ತಂದುಕೊಂಡು ಆಳುವ ಸ್ಥಿತಿಗೆ ಏರಬೇಕು - ಎಂದು ಕೆಲವರು ಹೇಳುತ್ತಾರೆ.

ಈ ದೃಷ್ಟಿಯಿಂದ ಅನೇಕ ಯಂತ್ರಗಳನ್ನು ಕಂಡುಹಿಡಿದು ಈಗಿನ ನಾಗರಿಕರೆಂದೆನಿಸಿಕೊಂಡವರು ವಿವಿಧಭೋಗಗಳನ್ನು ಅನುಭವಿಸುತ್ತಿರುತ್ತಾರೆ. ಆದರೇನು? ಯಂತ್ರಗಳೆಂಬಿವು ಕಂಪೆನಿಗಳಿಗೆ ಅಧೀನ, ಕಂಪೆನಿಗಳು ಆಶೆಗೆ ಅಧೀನ. ಎಷ್ಟೇ ಯಂತ್ರಗಳನ್ನು ಕಂಡುಹಿಡಿಯಲಿ, ಈಗಿನ ಜನರು ಆಶೆಗೆ ದಾಸರಾಗಿರುತ್ತಾರೆ. `ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಮ್" ಎಂದಿರುವಂತೆ ಪರವಶವಾಗಿರುವದರಿಂದ ದುಃಖವೇ ಹೊರತು ಸುಖವಿಲ್ಲ. ಕಾಮಕ್ರೋಧಗಳಿಗೆ ಪರವಶರಾಗಿರುವವರಿಗೆ ಸುಖವೆಲ್ಲಿ ಬಂತು? ಈಗಿನ ನಮ್ಮ ತಿಳಿವಳಿಕೆ ಸರಿಯಲ್ಲ. ಇದಕ್ಕೆ ವಶರಾಗಿ ನಾವು ವೈರಾಗ್ಯವನ್ನು ಕಡೆಗಣಿಸಿರುತ್ತೇವೆ ; ಇದರಿಂದ ನಾವು ಬಹಳ ಕೆಳಕ್ಕೆ ಇಳಿದಿದ್ದೇವೆ. ಮನುಷ್ಯನು ಈ ಪ್ರಕೃತಿಯನ್ನು ಏರಿ ದೇವತೆಯಾಗಬಹುದು - ಎಂಬುದನ್ನು ಮರೆತಿದ್ದೇವೆ.

ವಿರಕ್ತರು ಎಂದರೆ ಕೈಯಲ್ಲಿ ಸಾಗದವರು ಎಂದು ಭಾವಿಸಬಾರದು. ವಸಿಷ್ಠರು, ಭರದ್ವಾಜರು - ಮುಂತಾದ ಮಹಾಮಹಿಮರನ್ನು ನೆನಪಿಸಿಕೊಳ್ಳಿರಿ. ವಿಶ್ವಾಮಿತ್ರ, ಭರತ-ಮೊದಲಾದ ಸಪರಿವಾರರಾದ ರಾಜರಿಗೆ ಅತಿಥಿಸತ್ಕಾರವನ್ನು ಮಾಡಿ ಹಾಲುತುಪ್ಪದ ಕೋಡಿಹರಿಯಿಸಿದ ಸಿದ್ಧಪುರುಷರು ಅವರು ! ಆದರೂ ಅವರು ಕೌಪೀನಧಾರಣೆಯಿಂದ ತೃಪ್ತರಾಗಿ ಯಾವ ಭೋಗವನ್ನೂ ಬಯಸದೆ ಇದ್ದರು. ಇಂಥ ಕ್ಷುದ್ರಸಿದ್ಧಿಗಳಿಗಿಂತ ಹೆಚ್ಚಿನ ಮಹಾಸಿದ್ಧಿಯೊಂದು ಇದೆ ಎಂಬುದು ಅವರ ಮುಖಲಕ್ಷಣದಿಂದ ಕಂಡುಬರುತ್ತಿತ್ತು. ಅನೇಕ ರಾಜರುಗಳು ಅವರ ಬಳಿಗೆ ಶರಣುಬಂದು, ಅವರನ್ನು ಸತ್ಕರಿಸಿ ಇಷ್ಟಾರ್ಥಗಳನ್ನು ಪಡೆದು ಕೃತಾರ್ಥರಾಗುತ್ತಿದ್ದರು! ರಾಜರು ಮಿಕ್ಕವರ ದೃಷ್ಟಿಯಿಂದ ಎಷ್ಟೇ ದೊಡ್ಡವರಾದರೂ ಋಷಿಗಳ ದೃಷ್ಟಿಯಿಂದ ಅವರ ಸ್ಥಾನವು ತಗ್ಗಿನದು. ಇಂಥ ಉನ್ನತಸ್ಥಾನವು ಅವರಿಗೆ ಏತರಿಂದ ಬಂದಿತ್ತು? ವೈರಾಗ್ಯದಿಂದ, ಪರಮಾತ್ಮನನ್ನು ತಮ್ಮ ಹೃದಯದಲ್ಲಿಟ್ಟುಕೊಂಡಿದ್ದ ಆನಂದಾನುಭವದಿಂದ. ಶ್ರುತಿಯಲ್ಲಿ ``ಪರಮಾತ್ಮನು ಆನಂದಸ್ವರೂಪನಾಗಿರುತ್ತಾನೆ, ಆ ರಸವನ್ನು ಹೊಂದಿರುವದರಿಂದಲೇ ದೊಡ್ಡವರು ಅನಂದಿಗಳಾಗಿರುತ್ತಾರೆ" ಎಂದಿದೆ. ಋಷಿಗಳೆಂದರೆ ಆನಂದದ ಸಾಹುಕಾರರು. ಸಾಹುಕಾರರಿಂದ ಹಣವನ್ನು ಸಾಲವಾಗಿ ಮಿಕ್ಕವರು ಪಡೆದುಕೊಳ್ಳುತ್ತಾರಲ್ಲವೆ ? ಹಾಗೆ ಋಷಿಗಳಿಂದ ಮಿಕ್ಕವರು, ರಾಜರು ಕೂಡ, ಆನಂದವನ್ನು ಸಾಲವಾಗಿ ತರಬೇಕಾಗಿತ್ತು. ಎಷ್ಟೋ ರಾಜರು ಅವರ ಬಳಿಗೆ ಬಂದು ವ್ಯಕ್ತಿಯಾಗಿ ತಮಗೆ ಬೇಕಾದ ಇಷ್ಟಾರ್ಥಗಳನ್ನಲ್ಲದೆ ರಾಜರಾಗಿ ತಾವು ಹೇಗೆ ನಡೆದುಕೊಳ್ಳಬೇಕೆಂಬ ತಿಳಿವಳಿಕೆಯನ್ನೂ ಅವರಿಂದ ಸಂಪಾದಿಸಿಕೊಳ್ಳುತ್ತಿದ್ದರು.

ಆದರೆ ಹಠದಿಂದ ವಿಷಯಗಳನ್ನು ಕಿತ್ತೊಗೆಯುವದು ವೈರಾಗ್ಯವಲ್ಲ. ವಿಷಯತ್ಯಾಗವು ಸಹಜವಾಗಿರಬೇಕು. ವೈರಾಗ್ಯವು ವೈರಾಗ್ಯಕ್ಕಾಗಿ ಬೇಕಿರುವದಿಲ್ಲ ; ಒಂದಾನೊಂದು ಹೆಚ್ಚಿನ ಸ್ಥಿತಿಯನ್ನು ಪಡೆಯುವದಕ್ಕಾಗಿ ಅದು ಬೇಕಾಗಿರುತ್ತದೆ. ಜಗತ್ತಿನ ರಸವೇ ಪರಮಾತ್ಮ ; ಅದನ್ನು ಪಡೆದುಕೊಳ್ಳುವದಕ್ಕಾಗಿ ವಿರಕ್ತರು ಪ್ರಪಂಚವನ್ನು ಬಿಟ್ಟುಬಿಟ್ಟಿರುತ್ತಾರೆ. ನಮ್ಮನ್ನು

ಗೋಳುಗುಟ್ಟಿಸುತ್ತಿರುವದು ಪ್ರಪಂಚವೆಂಬ ಈ ಶಿಪ್ಪೆ ; ಆದರೆ ಇದರ ರಸವಾದ ಪರಮಾತ್ಮತತ್ತ್ವವು ಆನಂದದಾಯಕವಾಗಿರುತ್ತದೆ. ಸರಿಯಾಗಿ ನೋಡಿದರೆ ಪ್ರಪಂಚದಲ್ಲಿ ಯಾವ ದೋಷವೂ ಇಲ್ಲ ; ನಮ್ಮ ದೃಷ್ಟಿಯಲ್ಲಿ ಮಾತ್ರ ದೋಷವಿರುತ್ತದೆ. ಪ್ರಪಂಚವನ್ನು ಸರಿಯಾಗಿ ನೋಡಿದರೆ ಇದು ಪರಮಾತ್ಮನೇ ಆಗಿರುವದು. ಮೇಲುಮೇಲುಗಡೆಯಲ್ಲಿ ನೋಡುವವರಿಗೆ ಇಂದ್ರಿಯಾರ್ಥಗಳೆಂಬ ನಿಸ್ಸಾರಪದಾರ್ಥವಾಗಿರುವದು. ನಿಸ್ಸಾರವಾದ ಮೇಲ್ಭಾಗವನ್ನು ಬಿಟ್ಟು ಒಳಗಿನ ಸಾರವಾದ ಪರಮಾತ್ಮನನ್ನು ಹಿಡಿದುಕೊಳ್ಳುವದೇ ವೈರಾಗ್ಯವು. ಇಂದ್ರಿಯಗಳು, ಮನಸ್ಸು - ಇವುಗಳು ಕೂಡ ನಿಜವಾಗಿ ಪರಮಾತ್ಮನೇ. ಆದರೆ ನಾವು ಅವನ್ನು ಪರಮಾತ್ಮನಾಗಿ ಕಾಣುವದನ್ನು ಕಲಿತುಕೊಳ್ಳಬೇಕು. ಯಾರು ಪರಮಾತ್ಮಲೋಕವನ್ನು ಬಯಸುತ್ತಾರೋ ಅವರು ಪುತ್ರೈಷಣೆ, ವಿತ್ತೈಷಣೆ, ಲೋಕೈಷಣೆ - ಎಂಬ ಎಲ್ಲಾ ಬಯಕೆಗಳನ್ನೂ ಬಿಟ್ಟೆದ್ದು ಸರ್ವತ್ಯಾಗವನ್ನು ಮಾಡುತ್ತಾರೆ - ಎಂದು ಶ್ರುತಿಯಲ್ಲಿ ಹೇಳಿರುವದಕ್ಕೆ ಇದೇ ಅರ್ಥ. ದೂರಕ್ಕೆ ನೋಡಿದಾಗ ಹಾವೆಂದು ಕಾಣಿಸುತ್ತಿದ್ದದ್ದು ಹತ್ತಿರಕ್ಕೆ ಹೋದರೆ ಹಗ್ಗವಾದರೆ ಆಗ ನಮ್ಮ ಭಯವೆಲ್ಲವೂ ದೂರವಾಗುವಂತೆ ವೈರಾಗ್ಯವನ್ನು ಅವಲಂಬಿಸಿ ನಾವು ಪರಮಾತ್ಮನ ಬಳಿಗೆ ಹೋದರೆ ಈ ಪ್ರಪಂಚದ ಭಯವೆಲ್ಲವೂ ದೂರವಾಗುತ್ತದೆ. ಪ್ರಪಂಚತ್ಯಾಗವನ್ನು ಮಾಡಬೇಕಾಗಿರುವದು ವೈರದಿಂದಲ್ಲ, ಪರಮಾತ್ಮನ ಮೇಲಿನ ಪ್ರೀತಿಯಿಂದ.

ಪರಮಾತ್ಮನೆಂಬ ರತ್ನವಿರುವ ಬೆಲೆಯುಳ್ಳ ಪೆಟ್ಟಿಗೆಯು, ಈ ಪ್ರಪಂಚವು. ಪೆಟ್ಟಿಗೆಯನ್ನು ರತ್ನಕ್ಕಾಗಿ ಕಾಪಾಡಿಕೊಳ್ಳುವಂತೆ ಪ್ರಪಂಚವನ್ನು ಕಾಪಾಡಿಕೊಂಡು, ಪರಮಾತ್ಮನ ಕಡೆಗೆ ಲಕ್ಷ್ಯವಿಟ್ಟುಕೊಂಡಿರಬೇಕು. ರತ್ನವು ಕೈಯಲ್ಲಿದ್ದಾಗ ಪೆಟ್ಟಿಗೆಯ ಮೋಹವನ್ನು ಬಿಡುವಂತೆ, ಪರಮಾತ್ಮನೇ ದೊರೆತಾಗ ಈ ಪ್ರಪಂಚದಲ್ಲಿ ನಮಗೆ ಯಾವ ಮಮತೆಯೂ ಇರುವದಿಲ್ಲ. ಆದ್ದರಿಂದ ಹೆಚ್ಚಿನ ವೈರಾಗ್ಯವು ಇಲ್ಲದಿದ್ದವರೂ ಈ ಪ್ರಪಂಚದಲ್ಲಿ ಅಹಂತೆಯನ್ನು ಬಿಟ್ಟು ಜೀವನವನ್ನು ಸಾಗಿಸುತ್ತಿರಬೇಕು. ಬಾಡಿಗೆಯಮನೆಯಲ್ಲಿರುವವನು ತಾನಿರುವವರೆಗೂ ಮನೆಯನ್ನು ಚೊಕ್ಕಟವಾಗಿ ಇಟ್ಟುಕೊಂಡಿರುತ್ತಾನೆ ! ಆದರೆ `ಈ ಮನೆಯನ್ನು ನಾನು ಬಿಡಬೇಕಾಗುವದು' ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡೇ ಇರುತ್ತಾನೆ. ಯಾವದಾದರೊಂದು ಆಸ್ತಿಯ ರಕ್ಷಕನೆಂದು ಸರ್ಕಾರದಿಂದ ಗೊತ್ತಾಗಿರುವವನು ಅದು ತನ್ನ ಆಸ್ತಿಯೋ ಎಂಬಂತೆ ನೋಡಿಕೊಂಡಿರುತ್ತಾನೆ. ಆದರೆ ಅದರಲ್ಲಿ ಯಾವ ಹೆಚ್ಚಿನ ಮಮತೆಯನ್ನೂ ಇಟ್ಟುಕೊಂಡಿರುವದಿಲ್ಲ. ಇದರಂತೆ ದಾನ, ಧರ್ಮ, ಪರೋಪಕಾರ - ಮುಂತಾದವುಗಳಿಂದ ಈ ಪ್ರಪಂಚದಲ್ಲಿರುವ ಮಮತೆಯನ್ನು ಕಡಿಮೆಮಾಡಿಕೊಳ್ಳುತ್ತಾ ಇರುವವನಿಗೆ ಕ್ರಮಕ್ರಮವಾಗಿ ವೈರಾಗ್ಯವು ಅಳವಟ್ಟು ಜ್ಞಾನದಿಂದ ಕೊನೆಯಲ್ಲಿ ಪರಮಾತ್ಮಪ್ರಾಪ್ತಿಯೇ ಆಗುವದು.

# ೧೦೫. ಅನಹಂಕಾರ 13 - (8)
## (14-11-48)

ಸ್ಥೈರ್ಯವೇ ಮುಂತಾದ ಮೂರು ಗುಣಗಳನ್ನು ವಿವರಿಸಿದ್ದಾಯಿತು. ಪದಾರ್ಥಗಳಿಗೆ ಹೆಚ್ಚಿನ ಬೆಲೆಯನ್ನು ಕೊಟ್ಟು ಅವುಗಳ ಸಂಪರ್ಕದಿಂದ ಮನಸ್ಸನ್ನು ರಂಗುಮಾಡಿಕೊಳ್ಳುವದೇ ರಾಗವು - ಎಂದು ತಿಳಿದುಕೊಂಡದ್ದಾಯಿತು. ಪದಾರ್ಥಗಳನ್ನು ದ್ವೇಷಿಸಿದರೂ ರಾಗದಿಂದಾಗುವಂತೆಯೇ ಮನಸ್ಸು ಕಲುಷದಿಂದ ರಂಗಾಗುವದರಿಂದ ಅದೂ ಮನಸ್ಸಿನ ಸಹಜಸ್ಥಿತಿಯಲ್ಲ. ರಾಗದ್ವೇಷಗಳಿಂದ ಮನಸ್ಸಿನಲ್ಲಿ ಯಾವ ರೂಪಾಂತರವೂ ಆಗದೆ ಸಹಜವಾಗಿರುವದೇ ವೈರಾಗ್ಯವು. ವಿಷಯಗಳನ್ನು ಕಂಡಾಗ, ಸ್ಮರಿಸಿದಾಗ ಅಥವಾ ಅನುಭವಿಸಿದಾಗ ಯಾವ ಪ್ರತಿಕ್ರಿಯೆಯೂ ಯಾವ ಮನಸ್ಸಿನಲ್ಲಿ ಆಗುವದಿಲ್ಲವೋ ಅದೇ ನಿಜವಾದ ವಿರಕ್ತಮನಸ್ಸು - ಎಂದು ತಿಳಿದುಕೊಳ್ಳಬೇಕು.

ಈಗ **ಅನಹಂಕಾರ**ದ ವಿಷಯವಾಗಿ ಸ್ವಲ್ಪ ವಿಚಾರಮಾಡೋಣ. ಇದೊಂದು ಬಹುಮುಖ್ಯವಾದ ಸಾಧನವು. ಅಹಂಕಾರವೆಂದರೇನು ? ಅಹಂ ಎಂಬ - ನಾನು ಎಂಬ-ಅಭಿಮಾನವನ್ನು ಕೇಂದ್ರವಾಗಿ ಮಾಡಿಕೊಂಡು ವರ್ತಿಸುವದು. "ಅಹಂಕರಣಮ್ ಅಹಂಕಾರಃ" ನಾನು ಎಂದು ಕಲ್ಪಿಸಿಕೊಳ್ಳುವಿಕೆ, ತನ್ನನ್ನು ತಾನೇ ಬೇರ್ಪಡಿಸಿ ಕಲ್ಪಿಸಿಕೊಂಡು ಹಿಗ್ಗುವಿಕೆ - ಎಂಬುದೇ ಅಹಂಕಾರವು.

ಮಕ್ಕಳಿಗೆ ನಾನು ಎಂಬ ಬುದ್ಧಿ ಇರುವದಿಲ್ಲ. ಒಂದು ಮಗುವಿಗೆ ಸೀತೆ ಎಂದು ಹೆಸರಿದೆ ಎಂದು ಇಟ್ಟುಕೊಳ್ಳಿ. ಅದನ್ನು ನಾವು `ಸೀತೆ ಬಂದಳು' ಎಂದರೆ ತಾನೂ `ಸೀತೆ ಬಂದಳು' ಎಂದೇ ಹೇಳುತ್ತದೆ ; ಅದಕ್ಕೆ `ನಾನು ಬಂದೆ' ಎನ್ನುವ ಅರಿವು ಇನ್ನೂ ಹುಟ್ಟಿಯೇ ಇರುವದಿಲ್ಲ. ಮುಂದೆ ಒಂದಾನೊಂದು ಕಾಲದಲ್ಲಿ ನಾನು ಎಂಬ ಬುದ್ಧಿ ಎದ್ದುಕೊಳ್ಳುತ್ತದೆ; ಗಿಡ ಹುಟ್ಟಿ ಬೆಳೆಯುವಂತೆಯೇ ಇದು ಬೆಳೆಯುವದು. ಸಾಮಾನ್ಯಜನರು ಇದಕ್ಕೆ ಗೊಬ್ಬರಹಾಕಿ ನೀರೆರೆದು ಪೋಷಿಸುವರು. ತಿರ್ಯಕ್ಪ್ರಾಣಿಗಳಿಗೂ ಈ ನಾನು ಎಂಬ ಅಭಿಮಾನವು ಕಾಣುವದಿಲ್ಲ. ಅವಕ್ಕೆ ಹಸಿವು ಮುಂತಾದ ಭಾವಗಳು ಎದ್ದುಕೊಂಡಾಗ ಮಾತ್ರ ಅವಿಚಾರಬುದ್ಧಿಯಿಂದಲೇ ಅವು ತಮಗೆ ಬೇಕಾದ ಪದಾರ್ಥಗಳ ಲಾಭಕ್ಕೂ ಬೇಡವಾದವುಗಳ ಪರಿಹಾರಕ್ಕೂ ಹವಣಿಸುವವು. ನಾಯಿ, ಕೋತಿ - ಮುಂತಾದ ಪ್ರಾಣಿಗಳು ಬಹಳ ಜಾಣತನವನ್ನು ತೋರಿಸುವದರಿಂದ ಅವಕ್ಕೂ ಈ `ನಾನು' ಎಂಬ ಬುದ್ಧಿಯು ಇರುತ್ತದೆ ಎಂದು ಕಲ್ಪಿಸುವ ಹಾಗಾಗುತ್ತದೆ. ಆದರೂ ನಾನು, ನೀನು - ಮುಂತಾದ ಅರಿವುಗಳು ಅಂತಃಕರಣದಲ್ಲಿ ಪ್ರಾಣಿಗಳಿಗೆ ಎದ್ದುಕೊಳ್ಳುತ್ತವೆ ಎಂಬುದಕ್ಕೆ ಸಾಕಾದಷ್ಟು ಆಧಾರವು ಇನ್ನೂ ದೊರೆತಿಲ್ಲ. ಒಬ್ಬ ತಾರ್ಕಿಕನು ಒಬ್ಬ ಗಾಣಿಗನ ಅಂಗಡಿಗೆ ಹೋಗಿ ಸ್ವಲ್ಪ ಎಣ್ಣೆ ವ್ಯಾಪಾರ ಮಾಡಿದನು. ಗಾಣಿಗನು ಅಂಗಡಿಯಮೇಲೆಯೇ ಇದ್ದುಕೊಂಡಿದ್ದು

ಆಗಿಂದಾಗ್ಗೆ ಗಾಣದ ಎತ್ತು ನಿಂತಾಗ ಒಳಕ್ಕೆ ಹೋಗಿ ಅದನ್ನು ಬಾರುಕೋಲಿನಿಂದ ಹೊಡೆದು ಗಾಣವನ್ನು ಸುತ್ತವಂತೆ ಮಾಡುತ್ತಿದ್ದನು. ಇದನ್ನು ಕಂಡ ತಾರ್ಕಿಕನು ಕುತೂಹಲದಿಂದ `ಏನಯ್ಯ, ಎತ್ತು ಒಳಗೆ ಸುತ್ತದೆ ನಿಂತಿದೆ ಎಂಬುದು ನಿನಗೆ ಹೇಗೆ ತಿಳಿಯುತ್ತದೆ?' - ಎಂದು ಕೇಳಿದನು. ಅವನು ``ಸ್ವಾಮಿ, ಅದರ ಕೊರಳಿಗೆ ಕಟ್ಟಿರುವ ಘಂಟೆಯ ಸದ್ದು ನಿಂತರೆ ಅದು ನಡೆಯುತ್ತಿಲ್ಲ ಎಂದು - ಗೊತ್ತುಮಾಡಿಕೊಳ್ಳುತ್ತೇನೆ" ಎಂದು ಉತ್ತರವನ್ನು ಕೊಟ್ಟನು. ತಾರ್ಕಿಕನಿಗೆ ಇಲ್ಲಿ ಒಂದು ಶಂಕೆ ಬಂತು : `ಏನಯ್ಯ, ಒಂದು ವೇಳೆ ನಿಮ್ಮ ಎತ್ತು ನಿಂತ ಬಳಿಯಲ್ಲೇ ಕತ್ತನ್ನು ಅಲ್ಲಾಡಿಸಿದರೊ? ಆಗಲೂ ಸದ್ದಾಗುವದಿಲ್ಲವೆ? ಎಂದು ಕೇಳಿದನು. ಆಗ ಗಾಣಿಗನು, `ಸ್ವಾಮಿ, ತಾವು ತರ್ಕಶಾಸ್ತ್ರದವರೆಂದು ಕಾಣುತ್ತದೆ; ಆದರೆ ನಮ್ಮ ಎತ್ತು ಇನ್ನೂ ಅಷ್ಟು ತರ್ಕ ಕಲಿತಿಲ್ಲ' ಎಂದು ಉತ್ತರವಿತ್ತನಂತೆ! ತರ್ಕಬುದ್ಧಿ ಬಂದಾಗಲೇ ನಾನು, ಇವನು, ಅದು - ಎಂದು ಮುಂತಾಗಿ ಪ್ರತ್ಯಯಗಳು ವಿವಿಕ್ತವಾಗಿ ಏರ್ಪಡುವವೆಂದು ತಿಳಿಯಬೇಕು. ಆದ್ದರಿಂದಲೇ ತಿರ್ಯಕ್ಪ್ರಾಣಿಗಳಿಗೆ ಈ ನಾನು ಎಂಬ ಬುದ್ಧಿಯು ಬರುವಂತೆಯೇ ಇಲ್ಲ.

ಇದಿರಲಿ. ಈ ನಾನು ಎಂಬ ಬುದ್ಧಿಯು ಬಂದ ಬಳಿಕ ನನ್ನದು ಎಂಬ ಬುದ್ಧಿಯು ಬರುವದು. ನಾಯಿ ಮುಂತಾದ ಪ್ರಾಣಿಗಳಲ್ಲಿ `ನಾನು' ಎಂಬುದರ ಆಭಾಸವು ಇರುತ್ತದೆ ಎಂದು ಆಗಲೆ ಹೇಳಿರುತ್ತೇನಷ್ಟೆ ; ಇದರಂತೆ ಅವಕ್ಕೆ `ನನ್ನದು' ಎಂಬುದರ ಅಭಾಸವೂ ಇರುತ್ತದೆ. ಇಂಥ ಪ್ರಾಣಿಗಳು ಇಂಥಿಂಥ ಸಂದರ್ಭದಲ್ಲಿ ಹೀಗೆ ಹೀಗೆ ನಡೆಯುವವು ಎಂದು ಮನಃಶ್ಶಾಸ್ತ್ರಜ್ಞರು ಅನೇಕ ಪ್ರಯೋಗಗಳಿಂದ ಕಂಡುಹಿಡಿದಿರುತ್ತಾರೆ. ಮನುಷ್ಯನಿಗೆ ಮಾತ್ರವೇ ನಾನು ಎಂಬ ನಿಜವಾದ ಬುದ್ಧಿಯು ಉಂಟಾಗುತ್ತದೆ. ಈ ಬುದ್ಧಿಯನ್ನು ಹೇಗೆ ಉಪಯೋಗಿಸಬೇಕು ಎಂಬುದನ್ನು ಕುರಿತು ಅಧ್ಯಾತ್ಮಶಾಸ್ತ್ರಜ್ಞರು ಬಹಳ ಸೂಕ್ಷ್ಮವಾಗಿ ವಿಚಾರಮಾಡಿ ಒಂದು ಶಾಸ್ತ್ರವನ್ನೇ ಏರ್ಪಡಿಸಿರುತ್ತಾರೆ. `ಅಧ್ಯಾತ್ಮವಿದ್ಯೆ' ಎಂದರೆ ನಾನು ಯಾರು? ಎಂಬುದರ ಪರಮಾರ್ಥವನ್ನು ಕಂಡುಹಿಡಿಯುವ ವಿದ್ಯೆಯು.

ತನ್ನ ಸ್ವರೂಪವಾಗಿಯೇ ಇರುವ ನಾನು ಒಂದು, ತನ್ನಂತೆಯೇ ಕಾಣುತ್ತಿರುವ ನಾನು ಒಂದು - ಇವೆರಡನ್ನೂ ವಿಂಗಡಿಸಿಕೊಳ್ಳುವದಕ್ಕೆ ಅಧ್ಯಾತ್ಮವಿದ್ಯೆಯ ತಿಳಿವಳಿಕೆಯು ಬೇಕಾಗುತ್ತದೆ. ಶಿವಾಜಿಯು ತನ್ನಂತೆಯೇ ಇರುವ ಒಬ್ಬ ಮನುಷ್ಯನನ್ನು ಹತ್ತಿರವಿಟ್ಟುಕೊಂಡಿದ್ದು ಔರಂಗಸೇಬನಿಗೆ ಮೋಸವನ್ನು ಮಾಡಿ ಸೆರೆಮನೆಯಿಂದ ತಪ್ಪಿಸಿಕೊಂಡು ಹೋದನು ಎಂಬ ಕಥೆಯು ಇತಿಹಾಸದಲ್ಲಿ ಪ್ರಸಿದ್ಧವಾಗಿರುತ್ತದೆ. ಕಳೆದ ಜರ್ಮನ್ ಯುದ್ಧದಲ್ಲಿ ಹಿಟ್ಲರನು ತನ್ನಂತೆ ಇರುವ ನಾಲ್ಕು ಜನರನ್ನು ಇಟ್ಟುಕೊಂಡಿದ್ದನೆಂದು ಹೇಳುತ್ತಾರೆ. ನಿಜವಾದ ನಾನು (ಅಹಂ) `ಪೂರ್ಣಾಹಂತೆ' ಎನಿಸುವದು. ಇದು ಸರ್ವರಿಗೂ ಒಂದೇ; ಇದನ್ನೇ **ಪರಬ್ರಹ್ಮ** ಎಂದು ಅಧ್ಯಾತ್ಮವಿದ್ಯೆಯಲ್ಲಿ ನುರಿತವರು ಹೇಳುತ್ತಾರೆ. ಆದರೆ ಇದರ ಪ್ರತಿಬಿಂಬದಂತಿರುವ ಎರಡನೆಯ `ನಾನು' ಎಂಬುದು ಬೇರೆ ಉಂಟು. ಅದು ಒಬ್ಬೊಬ್ಬರಿಗೂ ಬೇರೆಬೇರೆಯಾಗಿರುತ್ತದೆ. ಒಬ್ಬನೇ ಮನುಷ್ಯನಿಗೆ ಬೇರೆಬೇರೆ ಕನ್ನಡಿಗಳಲ್ಲಿ ಬೇರೆಬೇರೆಯಾಗಿ ಕಾಣುವ ಪ್ರತಿಬಿಂಬಗಳಂತೆ ಈ ನಾನು ಇರುತ್ತದೆ.

ಭೂತಗನ್ನಡಿಯಲ್ಲಿ ಶರೀರವು ಉಬ್ಬಿಕೊಂಡು ಕಾಣುವಂತೆ ಕೆಲಕೆಲವರಲ್ಲಿ ಈ ನಾನು ಬಹಳ ಉಬ್ಬಿರುತ್ತದೆ. ಈ ನಾನು ಎಂಬುದರ ಸುತ್ತಲೂ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ - ಎಂಬ ರೂಪದ ನಾನುಗಳ ಕೋಳಗಳು ಬೇರೆ ಕಟ್ಟಿಕೊಂಡಿರುತ್ತವೆ. ಯಾರಲ್ಲಿ ನಾನು ಎಂಬುದು ಮಿತಿಮೀರಿರುತ್ತದೆಯೋ ಅವರು ರಾವಣಾದಿಗಳಂತೆ ಅಸುರರೆನಿಸಿ ಬಾಳುವರು. ಅವರನ್ನು ಕಂಡರೆ ಲೋಕವೇ ತಲ್ಲಣಿಸುವದು. ಮಿಕ್ಕವರಲ್ಲಿ ಇದು ಬೇರೆಬೇರೆಯ ಪರಿಮಾಣದಿಂದ ಕಾಣಿಸಿಕೊಳ್ಳುತ್ತಿರುವದು ; ದರೋಡೆಕಾರ, ಠಕ್ಕ, ಗಂಟುಕಳ್ಳ, ರಾತ್ರಿಯ ಕನ್ನಗತ್ತರಿಯ ಕಳ್ಳ - ಎಂದು ಮುಂತಾಗಿ ಕಳ್ಳರಲ್ಲಿ ಬಗೆಬಗೆಯ ಅಂತಸ್ತಿನವರಿರುವಂತೆಯೇ ಅಹಂಕಾರಿಗಳಲ್ಲಿಯೂ ಬೇರೆಬೇರೆಯ ಅಂತಸ್ತಿನವರು ಇರುತ್ತಾರೆ. ಕೆಲವರಂತೂ ತಮ್ಮಲ್ಲಿರುವ `ನಾನು' ಎಂಬುದನ್ನು ಹೊರಗೆ ತೋರಿಸಿಕೊಳ್ಳದೆಯೇ ಬಹುಸೂಕ್ಷ್ಮರೂಪದಲ್ಲಿಯೇ ಇಟ್ಟುಕೊಂಡಿದ್ದು ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೆ.

ಮೇಲೆ ವರ್ಣಿಸಿರುವ ಎರಡು ಬಗೆಯ ಅಹಂಕಾರವಲ್ಲದೆ ಮೂರನೆಯದೊಂದು ಅಹಂಕಾರವುಂಟು. ಭಗವದ್ಭಕ್ತರು, ಮಹಾತ್ಮರು - ಇಂಥವರಲ್ಲಿರುವ ಅಹಂಕಾರವು ಹಲ್ಲು ಮುರಿದ ಹಾವಿನಂತೆ ತನ್ನ ದುಷ್ಪರಿಣಾಮವನ್ನೆಲ್ಲ ಕಳೆದುಕೊಂಡುಬಿಟ್ಟಿರುವದು. `ಪರಮಾತ್ಮನ ದಾಸನು ನಾನು' ಎಂಬ ಸಾತ್ತ್ವಿಕಾಹಂಕಾರವು ಅವರದು. `ಅಹಂ' ಎಂಬುದು ಬಹಳ ಕೆಟ್ಟದು ಎಂದು ಶಾಸ್ತ್ರದಲ್ಲಿ ವರ್ಣಿಸಿದ್ದರೂ ಪರಮಾತ್ಮನ ದಾಸನು ನಾನು ಎಂಬ ರೂಪವನ್ನು ತಳೆದಾಗ ಅದು ಉತ್ತಮಪರಿಣಾಮವನ್ನು ಮಾಡುವದು. ``ದಾಸೋಽಹಂ ಕೋಸಲೇನ್ದ್ರಸ್ಯ" ಎಂದು ಘೋಷಿಸಿದ ಹನುಮಂತನ ಸಾತ್ತ್ವಿಕಾಹಂಕಾರವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಮತ್ತೆ ಕೆಲವರು ಮಹಾತ್ಮರಿಗೆ ಅಹಂಕಾರವೇ ಇರುವದಿಲ್ಲ; ಅವರು ಅಹಂಕಾರದ ಯೋಗ್ಯತೆಯನ್ನು ತಿಳಿದು ಅದನ್ನು ಪರಮಾತ್ಮನಲ್ಲಿ ಲಯಮಾಡಿಕೊಂಡುಬಿಟ್ಟಿರುತ್ತಾರೆ. ನಮಗೆ ಅಹಂಕಾರವೆಂದು ತೋರಿದರೂ ಅವರ ದೃಷ್ಟಿಯಿಂದ ಅದು ಇರುವದೇ ಇಲ್ಲ. ಒಂದು ಮನೆಯ ಮುಂದೆ ಗಾರೆಯಲ್ಲಿ ನಾಯಿಮಾಡಿ ಬಣ್ಣ ಬಳಿದಿದ್ದರು; ಅದನ್ನು ನೋಡಿದರೆ ನಿಜವಾದ ನಾಯಿ ಎಂಬಂತೆಯೇ ಅರಿಯದವರಿಗೆ ಅಂಜಿಕೆಯನ್ನುಂಟುಮಾಡುವಂತಿತ್ತು. ಆದರೂ ಅದು ನಾಯಿಯ ಆಕೃತಿಮಾತ್ರವೇ ಹೊರತು ನಾಯಿಯಲ್ಲ. ಅದರಂತೆ ಜ್ಞಾನಿಗಳಲ್ಲಿ ತೋರುವ ಅಹಂಕಾರವು ಆಭಾಸವೇ ಹೊರತು ಅಹಂಕಾರವಲ್ಲ.

ಹೀಗೆ ಯಾವ ಜ್ಞಾನವು ಬಂದರೆ ಕಾಮ, ಕ್ರೋಧ, ಅಹಂಕಾರ - ಮುಂತಾದವುಗಳು ತೋರಿದರೂ ನಿಜವಾಗಿ ಇರುವದಿಲ್ಲವೋ ಆ ಜ್ಞಾನವನ್ನು ಪಡೆಯುವದಕ್ಕಾಗಿ ಮಾಡುವ ಸಾಧನಕ್ಕೆ **ಅನಹಂಕಾರ**ವೆಂದು ಹೆಸರು. ನಮ್ಮಲ್ಲಿರುವ ಅಹಂ (ನಾನು) ಎಂಬುದನ್ನು ನಮ್ಮ ಸ್ವಾಧೀನದಲ್ಲಿಟ್ಟುಕೊಂಡು ಇನ್ನೊಂದು ಕಡೆಗೆ ತಿರುಗಿಸುವದು ಅನಹಂಕಾರವಾಗುವದು. ಅಹಂಕಾರದ ಬಾಲವು ಮಮ (ನನ್ನದು) ಎಂಬುದು ; ನಾನು ಎಂಬುದನ್ನು ನೇರಾಗಿ ಮಟ್ಟು ಮಾಡುವದಕ್ಕೆ ಪ್ರಯತ್ನಮಾಡುವ ಮೊದಲು ಈ `ನನ್ನದು' ಎಂಬುದನ್ನು ಮಟ್ಟುಮಾಡಬೇಕು.

ಪರಮೇಶ್ವರನ ಭಕ್ತಿ, ಶಮ, ದಮ - ಮುಂತಾದವುಗಳಿಂದ ಮಮತೆಯನ್ನೂ ಆ ಮೂಲಕ ಅಹಂತೆಯನ್ನೂ ಕಳೆದುಕೊಳ್ಳಬೇಕು. ಅಹಂ ಎಂಬುದು ಒಂದು ಫುಟ್‌ಬಾಲ್ (ಕಾಲುಚೆಂಡಿ) ನಂತೆ. ಗಾಳಿ ತುಂಬಿದಷ್ಟೂ ಅದು ಉಬ್ಬಿಕೊಳ್ಳುತ್ತದೆ ; ಅಂಥ ಚೆಂಡನ್ನು ಎಲ್ಲರೂ ಎಲ್ಲಾ ಕಡೆಯಿಂದಲೂ ಒದೆಯುವರು. ಮಮತೆಯ ಗಾಳಿ ಕಡಿಮೆಯಾದಷ್ಟೂ ಅಹಂ ಎಂಬ ಕಾಲುಚೆಂಡು ಚಪ್ಪಟೆಯಾಗುತ್ತದೆ.

ಅಹಂಕಾರವನ್ನು ಮಟ್ಟುಮಾಡಲು ಇರುವ ಒಂದೇ ಒಂದು ಅತ್ಯುತ್ತಮವಾದ ಅತಿಸುಲಭವಾದ ಸಾಧನ ಎಂದರೆ ಸತ್ಸಂಗವು. ಸೂರ್ಯನ ಮುಂದೆ ಮಿಂಚುಹುಳುವಿನ ಬೆಳಕು ಮಂಕಾಗುವಂತೆ ನಿರಹಂಕಾರಿಗಳಾದ ಸಾಧುಗಳ ಮುಂದೆ ಸಾಧಕರ ಅಹಂಕಾರವು ಮಂಕಾಗುವದು. ಆತ್ಮಜ್ಞಾನವೆಂಬ ಸೂರ್ಯನಿಗೆ ಮರೆಯಾಗುವ ಅಹಂಕಾರವೆಂಬ ಮೋಡವು ಸತ್ಸಂಗವೆಂಬ ಗಾಳಿಗೆ ಅತ್ತ ಸರಿಯುವದು.

ಅಹಂಕಾರವು ಮನುಷ್ಯನಿಗೆ ಮಾತ್ರ ಬರುವದೆಂದು ಆಗಲೇ ಹೇಳಿರುತ್ತೇನೆ. ಅದು ಮಮತೆಯ ಮೂಲಕ ಹೊರಗಿನ ಶರೀರವೇ ಮುಂತಾದವುಗಳಿಗೆ ಅಂಟಿಕೊಂಡಿರುತ್ತದೆ. ತೆಂಗಿನಕಾಯಿ ಹಸಿಯಾಗಿರುವ ಚಿಪ್ಪಿಗೆ ಅಂಟಿಕೊಂಡಿರುತ್ತದೆ. ಆದರೆ ಒಣಗಿದ ಬಳಿಕ ಅದು ಗಿಟುಕಾಗಿ ತಾನೇತಾನಾಗಿ ಉಳಿಯುತ್ತದೆ. ಅಹಂಕಾರವು ತೆಂಗಿನಕಾಯಿಯಂತೆಯೇ ಒಣಗಿ ಚಿಪ್ಪಿನ ಸಂಸರ್ಗವನ್ನು ಬಿಟ್ಟು ಬೇರೆಯಾಗಿ ಸಾತ್ತ್ವಿಕಾಹಂಕಾರವೆನಿಸಿಕೊಂಡು ಕೊನೆಗೆ ಪರಮಾತ್ಮನಲ್ಲಿ ಬೆರೆತುಹೋಗುವದು. ಹೀಗೆ ಅಹಂಕಾರವನ್ನು ಸತ್ಸಾಧನಗಳ ಮೂಲಕವಾಗಿ ಪರಮಾತ್ಮನಲ್ಲಿ ಸೇರಿಸಿಕೊಳ್ಳುವದಕ್ಕೆ ಮಾಡುವ ಪ್ರಯತ್ನವೇ ಅನಹಂಕಾರವು.

## ೧೦೬. ದೋಷಾನುದರ್ಶನ 13 - (8)

**(21-11-48)**

ಜ್ಞಾನಸಾಧನಗಳಲ್ಲಿ ಈ ದಿನ 'ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್' ಎಂಬುದನ್ನು ಕುರಿತು ವಿಚಾರಮಾಡಬೇಕು. ಜನ್ಮ, ಮೃತ್ಯು, ಜರೆ - ಮುಂತಾದವುಗಳಲ್ಲಿ ದೋಷವನ್ನು ಕಾಣುವದು ಅಥವಾ ಜನ್ಮಾದಿಗಳಲ್ಲಿ ದುಃಖವೆಂಬ ದೋಷವನ್ನು ಕಾಣುವದು - ಎಂಬುದೇ ಈ ಸಾಧನವು.

ದುಃಖವನ್ನು ಬಿಡಿಸಿಕೊಳ್ಳುವದು, ಪ್ರಪಂಚವನ್ನು ದುಃಖಮಯವಾಗಿ ಕಾಣುವದು - ಎಂಬುದು ವೀರರಿಗೆ ತಕ್ಕದ್ದಲ್ಲ ; ಹೇಡಿಗಳು ಮಾತ್ರ ಈ ಅಶುಭ ದೃಷ್ಟಿಯನ್ನು ಅವಲಂಬಿಸುತ್ತಾರೆ. ಏಷಿಯಖಂಡದವರು ದುಃಖದೃಷ್ಟಿಯ ಸ್ವಭಾವದವರಾದ್ದರಿಂದ ನಾಗರಿಕತೆಯಲ್ಲಿ

ಹಿಂದುಬಿದ್ದಿರುತ್ತಾರೆ ಎಂದು ಪಾಶ್ಚಾತ್ಯರು ಜರಿಯುತ್ತಿದ್ದರು. ವಸ್ತುಸ್ಥಿತಿಯು ಈಗ ಬದಲಾಗುತ್ತಿರುವದು ನಿಮಗೆಲ್ಲ ಗೊತ್ತೇ ಇದೆ. ಏಷಿಯಾಖಂಡವು ಹಿಂದೆ ಎಂದೆಂದಿಗೂ ಕೆಳಗೆ ಇರಲಿಲ್ಲ; ಯೂರೋಪುಖಂಡವು ಯಾವಾಗಲೂ ಉಚ್ಚಸ್ಥಿತಿಯಲ್ಲಿ ಇರಲೂ ಇಲ್ಲ. ಈ ದೇಶಗಳ ಉನ್ನತಿಯೂ ಅವನತಿಯೂ ತಕ್ಕಡಿಯಂತೆ ತೂಗಾಡುತ್ತಾ ಮಾರ್ಪಡುತ್ತಲೇ ಇರುತ್ತದೆ. ಒಂದಾನೊಂದು ಕಾಲದಲ್ಲಿ ಯೂರೋಪುಖಂಡದವರೆಗೂ ಏಷಿಯಾದವರ ಪ್ರಭಾವವು ಬೀರುತ್ತಿತ್ತು. ಪೂರ್ವದೇಶಗಳ ನಾಗರಿಕತೆಯನ್ನು ಉಪಯೋಗಿಸಿಕೊಂಡೇ ಯೂರೋಪಿನವರು ಕೃತಾರ್ಥರಾಗುತ್ತಿದ್ದ ಕಾಲವೂ ಇತ್ತು. ಭರತಖಂಡದ ತಿಳಿವಳಿಕೆಯು ಆಗ ಮಿಕ್ಕ ಕಡೆಗೆಲ್ಲ ಬೆಳಕುಕೊಡುತ್ತಿತ್ತು; ಚೆಂಗಿಸ್‌ಖಾನ್ ಮತ್ತೆ ಓಗ್ದೈಖಾನರಂಥ ಮಂಗೋಲವೀರರ ದಂಡಯಾತ್ರೆಯು ಯೂರೋಪಿನವರೆಗೂ ಆವರಿಸಿತ್ತು. `ವೆಲ್ಸ್' ಎಂಬಾತನು ಬರೆದಿರುವ ಭೂಮಂಡಲದ ಇತಿಹಾಸವನ್ನು ನೋಡಿದರೆ ಏಷಿಯಾದವರು ಆಗಿನ ಕಾಲದಲ್ಲಿ ಎಂಥ ಮೇಲುಮಟ್ಟದ ನಾಗರಿಕತೆಯನ್ನು ಪಡೆದಿದ್ದರೆಂಬುದು ತಿಳಿಯಬರುತ್ತದೆ.

ಈ ಗುರುಪೀಠದಿಂದ ಕೆಳಕ್ಕೆ ಪೂರ್ವದೇಶಗಳು ಇಳಿಯುವದಕ್ಕೂ ಯೂರೋಪುಖಂಡವು ಮೇಲಕ್ಕೇರುವದಕ್ಕೂ ಮುಖ್ಯಕಾರಣವು ಭೌತಿಕ ವಿಜ್ಞಾನಶಾಸ್ತ್ರವನ್ನು ಪಶ್ಚಿಮದೇಶದವರು ಉಪಯೋಗಿಸಿಕೊಂಡದ್ದೇ ಆಗಿದೆ. ನಮ್ಮವರು ಈ ಶಾಸ್ತ್ರದ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳದೆ ಬಿಟ್ಟುಬಿಟ್ಟರು. ಯೂರೋಪಿನವರು ತಮ್ಮ ವಿಜ್ಞಾನದ ತಿಳಿವಳಿಕೆಯನ್ನು ದುರುಪಯೋಗಮಾಡಿಕೊಂಡರು.ಮದ್ದುಗುಂಡುಗಳು, ನೀರಿನ ಆವಿಯ ಶಕ್ತಿ, ವಿದ್ಯುಚ್ಛಕ್ತಿ, ವಾಯುನೌಕೆ- ಮುಂತಾದವನ್ನು ಕಂಡುಹಿಡಿದುಕೊಂಡು ಪ್ರಬಲರಾದರು: ಅವುಗಳ ಸಹಾಯದಿಂದ ಇತರರನ್ನು ತುಳಿದು ನಾವು ಮೇಲುಮಟ್ಟದವರು ಎಂದು ಹೆಮ್ಮೆಪಟ್ಟರು. ಈ ಸ್ಥಿತಿಯಲ್ಲಿಯೇ ನಮ್ಮವರು ಹೇಳುವ `ದುಃಖದೋಷಾನುದರ್ಶನ' ವೇ ಮುಂತಾದ ಭಾವಗಳನ್ನು ಕಂಡು ನಗುವದಕ್ಕೆ ಆರಂಭಿಸಿದರು. ಆದರೆ ಜ್ಞಾನವು ಯಾರೊಬ್ಬರಿಗೂ ಮೀಸಲಲ್ಲ: ಯಾರು ಬೇಕಾದರೂ ಅದನ್ನು ಕಲಿಯಬಹುದು. ಅದನ್ನು ಉತ್ತಮವಾದ ರೀತಿಯಲ್ಲಿ ಉಪಯೋಗಿಸಲೂಬಹುದು. ಯಾವ ವಿಷಯದಲ್ಲಿಯೇ ಆಗಲಿ, ವಸ್ತು ಹೇಗೆ ಇರುತ್ತದೆಯೋ ಹಾಗೆಯೇ ತಿಳಿದುಕೊಳ್ಳುವದು ಜ್ಞಾನವು; ಸರಿಯಾಗಿ ತಿಳಿದುಕೊಳ್ಳದಿರುವದೂ ತಪ್ಪಾಗಿ ತಿಳಿದುಕೊಳ್ಳುವದೂ ಅಜ್ಞಾನವು.

ಜ್ಞಾನದಿಂದ ಸುಖ, ಅಜ್ಞಾನದಿಂದ ದುಃಖ - ಎಂಬುದು ತತ್ತ್ವಾರ್ಥ. ಜನ್ಮಾದಿಗಳಲ್ಲಿ ದುಃಖವಿದೆ- ಎಂಬುದನ್ನು ಭರತಖಂಡದವರು ಕಲ್ಪಿಸಿ ಹೇಳಿರುವದಿಲ್ಲ. ಅದೊಂದು ವಸ್ತುಸ್ಥಿತಿ.

ನ್ಯಾಯ? ಪಶ್ಚಿಮದೇಶದವರು ಇದನ್ನು ಅರಿತುಕೊಳ್ಳಲಿಲ್ಲ. ಅದರ ಫಲವನ್ನು ಈಗೀಗ ಅನುಭವಿಸುವದಕ್ಕೆ ಮೊದಲಿಟ್ಟಿರುತ್ತಾರೆ. ಅಮೇರಿಕದವರು ಆಟಂಬಾಂಬ್ ಎಂಬ ಮಾರಣಾಸ್ತ್ರವನ್ನು ಕಂಡುಹಿಡಿದಿರುತ್ತಾರೆ. ಜಪಾನ್‌ದೇಶದ ಮೇಲೆ ಅದನ್ನು ಉಪಯೋಗಿಸಿ ಮೈಲಿಗಟ್ಟಲೆಯ ಪ್ರದೇಶವನ್ನು ನಿರ್ಮಾನುಷವಾಗಿ- ಅಲ್ಲ, ಯಾವ ಜಂತುಗಳೂ ಮರಗಿಡಗಳೂ

ಇಲ್ಲದಂತೆ - ಮಾಡಿ ಈ ಅವಾಂತರಪ್ರಲಯದಿಂದ ಮಾನವಕೋಟಿಯನ್ನೇ ಚಕಿತರನ್ನಾಗಿ ಮಾಡಿಬಿಟ್ಟಿರುತ್ತಾರೆ. ಜನವನ್ನೆಲ್ಲ ತಮ್ಮ ವಶದಲ್ಲಿಟ್ಟುಕೊಳ್ಳಬಹುದೆಂದು ಅವರು ಹಗಲುಗನಸುಗಳನ್ನು ಕಾಣುತ್ತಿರುವಷ್ಟರಲ್ಲಿ ರಷ್ಯದೇಶದವರು ತಾವೂ ಅದನ್ನು ಕಂಡುಹಿಡಿದುಕೊಂಡಿರುತ್ತೇವೆಂದು ಕೊಚ್ಚಿಕೊಳ್ಳುತ್ತಿದ್ದಾರೆ. ಈ ಇಬ್ಬರ ಪೈಪೋಟಿಯಲ್ಲಿ ಲೋಕಕ್ಕೆ ಇನ್ನೂ ಎಂಥೆಂಥ ಅಪಾಯಗಳು ಬಂದೊದಗಲಿವೆಯೋ ಎಂದು ಜನರು ತಲ್ಲಣಿಸುತ್ತಿದ್ದಾರೆ. ಯಾವ ಲೌಕಿಕಜ್ಞಾನವನ್ನೇ ಆಗಲಿ ದುರುಪಯೋಗಮಾಡಿಕೊಳ್ಳುವದಕ್ಕೆ ಅವಕಾಶವಿರುತ್ತದೆ, ಅದರಿಂದ ದುಃಖವೂ ಉಂಟಾಗುತ್ತದೆ ಎಂಬುದು ಮತ್ತೆ ನಿದರ್ಶನಕ್ಕೆ ಬರುತ್ತಿದೆ. ಭೌತಿಕಶಾಸ್ತ್ರಜ್ಞಾನದ ದುರುಪಯೋಗದಿಂದ ಆಗಿರುವ ದುಷ್ಪರಿಣಾಮವನ್ನು ಕಂಡ ಸಾಮಾನ್ಯಜನರು ಈ ಶಾಸ್ತ್ರವೇ ಬೇಡ ಎಂದು ತಪ್ಪಾಗಿ ತಿಳಿಯುವದಕ್ಕೂ ಅವಕಾಶವಾಗಿರುತ್ತದೆ.

ಅಂತೂ ಈ ಪ್ರಪಂಚದಲ್ಲಿ ಜನ್ಮಾದಿಗಳೂ ಅವುಗಳಲ್ಲಿ ದುಃಖದೋಷವೂ ನಿಶ್ಚಿತವಾಗಿ ಇದೆ. ಇದನ್ನು ತಿಳಿದುಕೊಳ್ಳುವದೇ ಜ್ಞಾನಕ್ಕೆ ಮೊದಲನೆಯ ಮೆಟ್ಟಿಲು. ``ದುಃಖದೋಷಾನುದರ್ಶನ" ಎಂಬ ಮಾತಿನಲ್ಲಿರುವ ``ಅನು" ಎಂಬ ಉಪಸರ್ಗದ ಬೆಲೆಯನ್ನು ತಿಳಿದುಕೊಳ್ಳಬೇಕು. ಈ ಪ್ರಪಂಚದಲ್ಲಿ ದುಃಖದೋಷವು ಇದೆ ; ಇರುವದನ್ನು ಇಲ್ಲವೆಂದು ತಿಳಿಯುವದು ಜಾಣತನವಲ್ಲ. ನಾವು ಅದನ್ನು ಇಲ್ಲವೆಂದಮಾತ್ರದಿಂದ ಅದು ಇಲ್ಲವಾದೀತೆ? ದೊಡ್ಡವರು ಅದರ ನಿಜವನ್ನು ಬಲ್ಲರು ; ಅವರ ದೃಷ್ಟಿಯನ್ನು ಅನುಸರಿಸಿ ಇದ್ದದ್ದನ್ನು ಇದ್ದಂತೆ ತಿಳಿಯುವದೇ **'ದುಃಖದೋಷಾನುದರ್ಶನವು'**. ಭರತಖಂಡದವರು ಜನಾಂಗಗಳಲ್ಲಿ ಬಹಳ ಹಿರಿಯವರು. ಉಳಿದವರು ಇನ್ನೂ ಅನಾಗರಿಕರಾಗಿರುವಾಗಲೇ ಅವರು ಐಹಿಕಸುಖದ ಮೇಲುಮಟ್ಟವನ್ನು ಮುಟ್ಟಿ ಅದರ ಎಲ್ಲೆಕಟ್ಟನ್ನು ತಿಳಿದುಕೊಂಡಿದ್ದರು. ಈ ಲೋಕದಲ್ಲಿ ಜನ್ಮಾದಿಗಳಿರುವದೂ ಅವುಗಳಲ್ಲಿ ದುಃಖವು ಬೆನ್ನುಹತ್ತಿಕೊಂಡೇ ಇರುವದೂ ನಿಜವೆಂಬುದನ್ನೂ ನಿಶ್ಚಯಿಸಿದ್ದರು. ಅವರಿಂದೀಚೆಗೆ ಹಲವು ಜನಾಂಗಗಳು ಮೈದೋರಿ ಮೈಗರೆದಿವೆ ; ಆದರೆ ಈ ಸನಾತನತತ್ತ್ವವನ್ನು ತಿಳಿದುಕೊಂಡ ಭಾರತೀಯರು ಇನ್ನೂ ಬಾಳುತ್ತಿದ್ದಾರೆ. ಪ್ರಪಂಚದಲ್ಲಿ ದುಃಖವಿದೆ ; ಅದನ್ನು ಮೊದಲು ಒಪ್ಪಬೇಕು. ದುಃಖವನ್ನು ಮುಚ್ಚಿ, ಯಾವ ದುಃಖವೂ ಇಲ್ಲ ಎಂದು ಕೊಚ್ಚಿಕೊಳ್ಳುವದು ಹೆಮ್ಮೆಯ ದೃಷ್ಟಿ, ಅಜ್ಞಾನದ ದೃಷ್ಟಿ. ಯಾರಿಗೆ ಆನಂದವು ಬೇಕೋ ಅವರು ದುಃಖದ ಅಸ್ತಿತ್ವವನ್ನು ಮೊದಲು ಕಂಡುಕೊಳ್ಳಬೇಕು. ಬರಿಯ ದುಃಖವನ್ನು ಮಾರ್ಪಡಿಸಿಕೊಂಡರೆ ಏನಾದೀತು? ಹಳೆಯ ಅಳುವಾದರೇನು, ಹೊಸ ಅಳುವಾದರೇನು ? ಎಲ್ಲಾ ಅಳುವೇ. ಆನಂದಭವನವನ್ನು ಕಟ್ಟಬೇಕಾದರೆ ಅಳುವಿಗೆ ಮೂಲವಾದ ದುಃಖವನ್ನು ಬಿಡಿಸಿ ನೋಡಬೇಕಾದದ್ದು ಅತ್ಯವಶ್ಯ. ಆದ್ದರಿಂದ ಈಗ ಜನ್ಮಮೃತ್ಯುಜರಾರೋಗಗಳಲ್ಲಿರುವ ದುಃಖದೋಷವನ್ನು ಸ್ವಲ್ಪ ಬಿಡಿಸಿನೋಡೋಣ.

**ಜನ್ಮದೋಷ :** ಹುಟ್ಟುವಾಗ ಆಗುವ ದುಃಖವು ಯಾವ ಬಗೆಯದೆಂಬುದು ನಮಗೆ ತಿಳಿಯದು. ಆದರೆ ಶಾಸ್ತ್ರದಲ್ಲಿ ಇದರ ಪ್ರಕಾರವನ್ನು ವರ್ಣಿಸಿರುವದನ್ನು ನಾವು ಮನದಂದುಕೊಳ್ಳುವದು ಒಳ್ಳೆಯದು. ತಾಯಿತಂದೆಗಳ ಸ್ವೇಚ್ಛಾಪ್ರವರ್ತನೆಯಿಂದ ಗರ್ಭದಮೇಲೆ ಮಹಾಪರಿಣಾಮವಾಗುವದು. ಹುಟ್ಟುವ ಮಗು ಬಡಕಲಾಗಿರುವದು, ಅಥವಾ ಅಂಗವಿಕಲವಾಗಿರುವದು - ಈ ಎಲ್ಲವೂ ಆಗಿನ ಸ್ಥಿತಿಯಲ್ಲಾಗುವ ದೋಷಗಳ ಫಲವು. ಗರ್ಭದಲ್ಲಿ ಇರುವಾಗ ಹಿಂದಿನ ಜನ್ಮಗಳ ಸ್ಮರಣೆಯು ಬರುವದೆಂತಲೂ `ಹಿಂದಿನ ಕರ್ಮಗಳ ಫಲವಾಗಿ ಈಗ ಯೋನಿವಾಸವು ನನಗೆ ಬಂದಿರುತ್ತದೆ ; ಹೇಗಾದರೂ ಮಾಡಿ ಈ ಸ್ಥಲದಿಂದ ಮುಕ್ತನಾದೆನೆಂದರೆ ಮುಂದಕ್ಕೆ ಪರಮೇಶ್ವರನನ್ನು ಶರಣುಹೊಂದುವೆನು, ಸಾಂಖ್ಯಯೋಗಗಳನ್ನು ಅಭ್ಯಾಸಮಾಡುವೆನು' - ಎಂದು ಪಶ್ಚಾತ್ತಾಪದಿಂದ ಜೀವನು ಪ್ರತಿಜ್ಞೆಮಾಡುವನೆಂತಲೂ ಗರ್ಭೋಪನಿಷತ್ತಿನಲ್ಲಿ ವರ್ಣಿಸಿದೆ. ಪಾಪಿಯು ಪಶ್ಚಾತ್ತಾಪದಿಂದ ಆಗಾಗ್ಗೆ `ಇಂದಿನಿಂದ ಸರಿಯಾದ ಮಾರ್ಗದಲ್ಲಿ ನಡೆಯುವೆನು; ಇನ್ನು ಇಂಥ ಸಂಕಟಕ್ಕೆ ಸಿಕ್ಕಿಕೊಳ್ಳುವದಿಲ್ಲ' - ಎಂದು ಪ್ರತಿಜ್ಞೆಮಾಡುವಂತೆಯೂ ಅಪರಾಧಿಯಾದವನು ಕೋರ್ಟಿನ ಮುಂದೆ ನಿಂತಿರುವಾಗ `ದೇವರ ದಯೆಯಿಂದ ಈ ಸಲಕ್ಕೆ ನನಗೆ ಬಿಡುಗಡೆಯಾದರೆ ಇನ್ನು ಮುಂದೆ ಎಂದಿಗೂ ಕಳ್ಳತನವನ್ನು ಮಾಡೆನು, ಎಂದಿಗೂ ಕೊಲೆಪಾತಕನಾಗುವುದಿಲ್ಲ' ಎಂದುಕೊಳ್ಳುವಂತೆಯೂ ಗರ್ಭದಲ್ಲಿರುವ ಜೀವನು ಮುಂಧೆ ಪುಣ್ಯದ ಹಾದಿಯಲ್ಲಿಯೇ ನಡೆಯುತ್ತಾ ಅಧ್ಯಾತ್ಮಸಾಧನಗಳನ್ನು ಕೈಕೊಳ್ಳುವೆನು ಎಂದುಕೊಳ್ಳುವನಂತೆ. ಆದರೆ ಹುಟ್ಟಿದನೊ ಇಲ್ಲವೊ, ಮಾಯಿಕವಾದ ವೈಷ್ಣವವಾಯುವಿನ ಸಂಪರ್ಕದಿಂದ ಹಿಂದಿನ ಸ್ಮರಣೆಯನ್ನೆಲ್ಲ ಕಳೆದುಕೊಂಡು ಬಿಡುತ್ತಾನಂತೆ! ಹಿಂದಿನ ಜನ್ಮದಲ್ಲಿ ಸಂಪಾದಿಸಿಕೊಂಡಿದ್ದ ಅನುಭವವೆಲ್ಲ ವ್ಯರ್ಥವಾಗಿ, ಮತ್ತೆ ಮೊಟ್ಟಮೊದಲಿನಿಂದ ಒಂದೊಂದಾಗಿ ಕಲಿತುಕೊಳ್ಳಬೇಕಾಗಿ ಬರುತ್ತದೆ, ಹೊಸಜನ್ಮದಲ್ಲಿ.

**ಮೃತ್ಯುದೋಷ :** ಜನ್ಮದ ಭೀತಿಗಿಂತಲೂ ಮರಣದ ಭೀತಿಯು ಬಹಳ. ಶಾಸ್ತ್ರದಲ್ಲಿ ಒಬ್ಬೊಬ್ಬ ಜೀವನಿಗೂ ಜನನಮರಣಗಳು ಸಾಲುಸಾಲಾಗಿ ಬರುತ್ತಿರುವವೆಂದು ಹೇಳಿದ್ದರೂ ಮೃತ್ಯುವೆಂದರೆ ನಮಗೆ ಯಾರಿಗೂ ಹಿಂದೆ ಸತ್ತಿದ್ದಕಾಲಕ್ಕೆ ಆದ ದುಃಖದ ಅರಿವು ಇರುವದಿಲ್ಲ. ಆದರೂ ಮೃತ್ಯುವೆಂದರೆ ಅಂಜಿಕೆ ನಮಗೆ! ಎಷ್ಟೋ ಜನರು ಜಾತಕದಂತೆ ಇಷ್ಟನೆಯ ವರ್ಷಕ್ಕೆ ತಮಗೆ ಮರಣವಾಗುವದೆಂಬ ಫಲಜ್ಯೋತಿಷ್ಯದ ವಚನದಿಂದಲೇ ಅಂಜಿಕೊಂಡು ಕಾಲಯಾಪನೆಮಾಡುತ್ತಿರುತ್ತಾರೆ. ಕೆಲವರಿಗಂತೂ ತಾವೇ ಸತ್ತಿರುವಂತೆಯೂ ನಂಟರಿಷ್ಟರೆಲ್ಲ ತಮಗಾಗಿ ಅಳುತ್ತಿರುವಂತೆಯೂ ಕನಸಾಗುವದೂ ಉಂಟು . ! ಈಸೋಪನ ಕಥೆಯೊಂದರಲ್ಲಿ ಮೃತ್ಯುವಿನ ಅಂಜಿಕೆಯನ್ನು ಬಹುಸ್ವಾರಸ್ಯವಾಗಿ ವರ್ಣಿಸಿರುತ್ತದೆ. ಒಬ್ಬ ಕಟ್ಟಿಗೆಯವನು ಕಾಡಿನಿಂದ ಒಂದು ಹೊರೆ ಸೌದೆಯನ್ನು ಹೊತ್ತುಕೊಂಡು ಬಂದು ಬಿಸಿಲಿನ ಝಳದಿಂದ ತಪಿಸುತ್ತಾ ಹೊರೆಯನ್ನು ಕೆಳಗಿರಿಸಿ ಉಸ್ಸೆಂದು ಆಯಾಸದಿಂದ ಕುಳಿತುಕೊಂಡನು.

ಅವನು 'ಅಪ್ಪ, ಈ ಸಂಕಟವನ್ನು ತಾಳಲಾರೆನು, ಮೃತ್ಯುವೆ, ನೀನಾದರೂ ಬರಬಾರದೆ ? ಎಂದುಕೊಳ್ಳುತ್ತಿರುವಷ್ಟರಲ್ಲಿ ಮೃತ್ಯುದೇವತೆಯೇ ಅವನಿಗೆ ಪ್ರತ್ಯಕ್ಷವಾಗಿ "ಏನಪ್ಪ, ಏತಕ್ಕೆ ಕರೆದೆ!" ಎಂದು ಕೇಳಿತಂತೆ. ಆಗ ವಿಷಯವನ್ನು ತಿಳಿದುಕೊಂಡ ಮಾತ್ರದಿಂದಲೇ ಆ ಕಟ್ಟಿಗೆಯವನಿಗೆ ಮೈಯಲ್ಲ ಜುಮ್! ಎಂದಿತಂತೆ. ಆದರೆ ಧೈರ್ಯವನ್ನು ತಂದುಕೊಂಡು 'ಈ ಹೊರೆ ಬಹಳ ಭಾರ; ಇದನ್ನು ಹೊರಿಸುವವರು ಯಾರೂ ಇಲ್ಲವಲ್ಲ! ಎಂದು ಯೋಚಿಸಿಕೊಂಡೆ, ದಯವಿಟ್ಟು ಸ್ವಲ್ಪ ಹೊರಿಸಿ ಹೋಗು, ಮಹಾರಾಯ' ಎಂದನಂತೆ ! ಹಿಂದೆ ವಿಭೂತಿಗಳ ವರ್ಣನೆಯಲ್ಲಿ ಭಗವಂತನು ಸರ್ವಹರಮೃತ್ಯುವೇ ನಾನು ಎಂದು ಹೇಳಿಕೊಂಡಿರುವದನ್ನು ಈಗ ನೆನಪಿಗೆ ತಂದುಕೊಳ್ಳಬಹುದು. ಕಣ್ಣಿಗೆ ಮೃತ್ಯು, ಕಾಲಿಗೆ ಮೃತ್ಯು, ಹಣಕ್ಕೆ ಮೃತ್ಯು, ಅಧಿಕಾರಹರಮೃತ್ಯು - ಈ ಎಲ್ಲಾ ಅಲ್ಪಮೃತ್ಯುಗಳು ; ಪ್ರಾಣಸಹಿತವಾಗಿ ಎಲ್ಲವನ್ನೂ ಅಪಹರಿಸುವ ಮೃತ್ಯುವಿನ ಮುಂದೆ ಯಾರಾದರೂ ತಗ್ಗಬೇಕು. ಈ ಮೃತ್ಯುವಿನ ಅಂಜಿಕೆಯಿಲ್ಲದವರು ಯಾರು ತಾನೆ ಇದಾರೆ ? ಜೀವನದಲ್ಲಿ ಮೃತ್ಯುವಿನ ಭಯವಿಲ್ಲವೆಂದು ಯಾರಾದರೂ ನಂಬುವರೆ ? ಮೃತ್ಯುವಿಗೆ ನಾನು ವಶವಲ್ಲ- ಎಂದುಕೊಳ್ಳುವವರು ಯಾರು? ವೈದ್ಯನು 'ಚಿಂತೆಯಿಲ್ಲ, ಪ್ರಾಣಕ್ಕೆ ಭಯವಿಲ್ಲ, ಅಂಜಬೇಡಿ!' ಎಂದು ಧೈರ್ಯವನ್ನು ಹೇಳಿದರೂ ನಮ್ಮ ಈ ಪ್ರಿಯಮಿತ್ರನ, ಕಾಂತನ, ಅಥವಾ ತಂದೆಯ ಪ್ರಾಣವು ಯಾವಾಗ ಹಾರಿಹೋಗುವದೋ ಎಂದು ಸುತ್ತಲೂ ಆಪ್ತರಿಷ್ಟರು ಕಣ್ಣು ಕಣ್ಣು ಬಿಡುತ್ತಾ ಕುಳಿತಿರುವರು! ಮೃತ್ಯುವು ವೈದ್ಯನ ಎದೆಗಾರಿಕೆಯನ್ನು ನೋಡಿ ನಗುತ್ತಿರುವನು. ಶ್ರುತಿಯಲ್ಲಿ ಹೇಳಿರುವಂತೆ ಇಡಿಯ ಜಗತ್ತೇ ಮೃತ್ಯುವಿನ ಹಿಡಿತಕ್ಕೆ ಸಿಕ್ಕಿ ನರಳಾಡುತ್ತಿರುವದು. ಮರಣಕಾಲದಲ್ಲಿ ಇಂದ್ರಿಯಗಳು ಸಡಿಲವಾಗುವವು ; ಮಾತನಾಡುವದಕ್ಕೆ ಆಗುವದಿಲ್ಲ ಒಂದೊಂದು ಮರ್ಮದಲ್ಲಿಯೂ ನೋವು ಆಗುವದಕ್ಕೆ ಪ್ರಾರಂಭಿಸುವದು. ಅದುವರೆಗೆ ತಾನು ಮಾಡಿದ್ದ ಕರ್ಮಗಳ ಫಲಗಳು, ನೆರವೇರದೆ ಉಳಿದುಕೊಂಡ ಮನೋರಥಗಳು, ಚಿಕ್ಕವರೂ ನಿರ್ಗತಿಕರೂ ಆಗಿರುವ ಹೆಂಡಿರುಮಕ್ಕಳ ಭವಿಷ್ಯವನ್ನು ಚಿಂತಿಸಿ ಆಗುವ ಕಳವಳ - ಇವೇ ಮುಂತಾದ ದುಃಖಗಳ ಪರಂಪರೆಯು ಆವರಿಸಿಕೊಳ್ಳುವದು. ಇದನ್ನು ಯೋಚಿಸಿಕೊಂಡರೆ ಸಾಕು ; ಮೈನಡುಗದವರು ಯಾರಿದ್ದಾರೆ? ಮರಣದಲ್ಲಿರುವ ಈ ದುಃಖದೋಷವನ್ನು ಅನ್ವಾಲೋಚನೆ ಮಾಡುವದು ಒಂದು ಜ್ಞಾನಸಾಧನ.

ಇನ್ನು **ಜರಾದುಃಖದೋಷ.** ಜನ್ಮಮರಣಗಳಲ್ಲಿ ಆಗುವ ದುಃಖವನ್ನು ಮತ್ತೊಬ್ಬರ ಜನ್ಮಮರಣಗಳನ್ನು ನೋಡಿ ಊಹಿಸುವದರಿಂದಲೂ ಶಾಸ್ತ್ರೋಪದೇಶದಿಂದಲೂ ತಿಳಿದುಕೊಳ್ಳಬೇಕಾಗಿದೆ. ಜನ್ಮಮರಣಗಳ ದುಃಖವು ಹೇಗೆ ಬಿಟ್ಟೀತು ?- ಎಂಬುದೂ ಈಗ ನಮಗೆ ತಿಳಿಯುವಂತಿಲ್ಲ ; ಆದರೂ ನಮ್ಮ ಆತ್ಮನು ಜನ್ಮಮರಣರಹಿತನೆಂಬುದು ಜ್ಞಾನದಿಂದ ಗೊತ್ತಾಗುವದೆಂದರೆ ಜ್ಞಾನದ ಆಶೆಯೂ ಜ್ಞಾನಸಾಧನಗಳ ಅನುಷ್ಠಾನದಲ್ಲಿ ಶ್ರದ್ಧೆಯೂ ಉಂಟಾಗುತ್ತವೆ. ಆದರೆ ಮುಪ್ಪಿನಿಂದಾಗುವ ದುಃಖವು ಪ್ರತ್ಯಕ್ಷವಾಗಿಯೇ ನಮಗೆಲ್ಲರಿಗೂ ಈ ಜನ್ಮದಲ್ಲಿಯೇ ಉಂಟಾಗುತ್ತದೆ. ಮುಪ್ಪಿನಲ್ಲಿ ಎರಡು ಬಗೆಯಿದೆ. ವಯಸ್ಸು ಹೆಚ್ಚಿ

ಕಾಲಕ್ರಮದಲ್ಲಿ ಕಾಣಿಸಿಕೊಳ್ಳುವ ಮುಪ್ಪು ಒಂದು. ತಲೆ ನರೆತು ಅಲ್ಲಾಡುವದು ; ಮೈಚರ್ಮವು ಸುಕ್ಕಿಕೊಳ್ಳುವದು, ಆಹಾರವು ಜೀರ್ಣಿಸದಿರುವದು, ನಿದ್ರೆಯು ಹತ್ತದೆ ಇರುವದು, ಚಿಂತೆಗಳು ಹತ್ತುವದು - ಇವೆಲ್ಲ ಜರೆಯ ಲಕ್ಷಣಗಳು. ಸ್ವೇಚ್ಛಾಪ್ರವೃತ್ತಿಯಿಂದ ನರಗಳು ಸಡಲಿ ಏಳುವದಕ್ಕಾಗಲಿ ಕೂರುವದಕ್ಕಾಗಲಿ ವೇಗದಿಂದ ನಡೆದಾಡುವದಕ್ಕಾಗಲಿ ಆಗದೆ ಶಕ್ತಿ ಕುಂದುವದು ಮತ್ತೊಂದು ಬಗೆಯ ಮುಪ್ಪು. ಆಸೆಯು ಉಳಿದುಕೊಂಡು, ಬೇಕಾದ ಪದಾರ್ಥಗಳನ್ನು ಒದಗಿಸಿಕೊಳ್ಳುವ ಅಥವಾ ಅನುಭವಿಸುವ ಶಕ್ತಿಯು ಇಲ್ಲದಿರುವದೇ ಮುಪ್ಪಿನ ವಿಶೇಷವು. ತರುಣತರುಣಿಯರಾದವರು ತಮ್ಮನ್ನು ನೋಡಿ ನಗುತ್ತಿರುವ ಮತ್ತು ಅಪಮಾನಗೊಳಿಸುವ ದುಃಖವು ಆಗ ಸಂಕಟಗೊಳಿಸುತ್ತಿರುವದು. ಮುಪ್ಪಿನಲ್ಲಿ ಅಶಕ್ತಿಯು ಹೆಚ್ಚಿದಂತೆ ಕೋಪವೂ ಹೆಚ್ಚುವದು; ಕೈಯಲ್ಲಿ ಸಾಗದವನ ಕೋಪವು ಅವನಿಗೇ ವ್ಯಥೆಯನ್ನುಂಟುಮಾಡುವದೇ ಹೊರತು ಮತ್ತೆ ಯಾರಮೇಲೂ ಅದರ ಪರಿಣಾಮವುಂಟಾಗಿರುವಹಾಗಿರುವದಿಲ್ಲ. ಮುಪ್ಪಿನ ಕಾಲಕ್ಕೆ ಹಿಂದಿನ ಅನುಭವದಿಂದ ಆಗಿರುವ ತಿಳುವಳಿಕೆಯೇನೋ ಇರುತ್ತದೆ; ಆದರೆ ಆ ತಿಳಿವಳಿಕೆಯನ್ನು ತಾನು ಉಪಯೋಗಿಸಿಕೊಳ್ಳುವಂತಿರುವದಿಲ್ಲ; ಆದರೆ ತನ್ನ ಅನುಭವವನ್ನು ಮತ್ತೊಬ್ಬರಿಗೆ ತಿಳಿಯಹೇಳೋಣವೆಂದರೆ ಆ ಬುದ್ಧಿವಾದವನ್ನು ಕೇಳುವವರು ತೀರ ಕಡಿಮೆ, ಅಥವಾ ಇರುವದೇ ಇಲ್ಲ ! ಮುಪ್ಪಿನ ಕಾಲಕ್ಕೆ ಜೀವವಿಮೆ ಮುಂತಾದವುಗಳನ್ನು ಮಾಡಿಕೊಂಡು ಸುಖಜೀವನಕ್ಕೆ ಏರ್ಪಡಿಸಿಕೊಳ್ಳತಕ್ಕದ್ದು ಅವಶ್ಯವೆಂಬುದನ್ನು ಎಲ್ಲರೂ ಬಲ್ಲರು ; ಆದರೆ ಸೌಕರ್ಯಗಳೂ ತಿಳಿವಳಿಕೆಯೂ ಇಲ್ಲದೆ ಅಂಥ ಏರ್ಪಾಡು ಯಾವದೊಂದನ್ನೂ ಮಾಡಿಕೊಳ್ಳಲಿಲ್ಲವಲ್ಲ ಎಂಬ ಪಶ್ಚಾತ್ತಾಪವು ಮಾತ್ರ ದುಃಖವನ್ನುಂಟುಮಾಡುತ್ತಿರುವದು. ವಯಸ್ಸು ಆದಂತೆಲ್ಲ ಈ ಜನ್ಮದ ವ್ಯವಹಾರವು ಮುಗಿದಿರುತ್ತದೆ. ಆದರೆ ಸಾವು ಇನ್ನೂ ಬಂದಿರುವದಿಲ್ಲ ; ಈಗ ಜನರಿಗೆ ತನ್ನ ವ್ಯವಹಾರಕ್ಕಾಗಿ ಇಷ್ಟೊಂದು ಕಷ್ಟವನ್ನು ಕೊಡಬೇಕಲ್ಲ !- ಎಂಬ ಚಿಂತೆಯು ಆವರಿಸಿಕೊಳ್ಳುವದು. ಮರಣದ ವಿಷಯವನ್ನು ಆಲೋಚಿಸಿಕೊಂಡಹಾಗೆಲ್ಲ 'ಅಯ್ಯೋ, ಪರಲೋಕದಲ್ಲಿ ಆಗುವ ದುಃಖವು ಯಾವ ರೀತಿಯದೊ? ಪಾಪವನ್ನು ಹೇರಳವಾಗಿ ಮಾಡಿರುತ್ತೇನೆ, ಪುಣ್ಯವನ್ನು ಮಾಡಿಯೇ ಇಲ್ಲವಲ್ಲ !'- ಎಂಬ ಪರಿತಾಪವು ದುಃಖಪಡಿಸುತ್ತಿರುವದು. ಈ ದುಃಖಪರಂಪರೆಯೆಲ್ಲ ಬರಿಯ ಕಲ್ಪನೆ ಎಂದು ಯಾರುತಾನೆ ಹೇಳುತ್ತಾರೆ? ಇದು ಇರತಕ್ಕದ್ದೇ ಅಲ್ಲವೆ ? ಇದನ್ನು ಮನಸ್ಸಿಗೆ ತಂದುಕೊಳ್ಳದೆ ಕಣ್ಣುಮುಚ್ಚಿಕೊಂಡು ವ್ಯವಹರಿಸಿದಮಾತ್ರದಿಂದ ಜೀವನವು ಸುಖಮಯವಾದೀತೆ?

**ವ್ಯಾಧಿದುಃಖ** : ಜನ್ಮ, ಮೃತ್ಯು, ಜರೆ- ಇವುಗಳಂತೆಯೇ ನಮಗೆ ರೋಗವೂ ಉಂಟಾಗುವದೆಂಬುದು ಸರ್ವವಿದಿತವಾದ ವಿಷಯ. ಇದನ್ನು ಮಾತ್ರ ನಾವು ಮನಸ್ಸಿಗೆ ತಂದುಕೊಳ್ಳುವದಿಲ್ಲ. ರೋಗವು ಯಾರೊಬ್ಬರಿಗೂ ಬೇಕಿಲ್ಲ ; ಆದರೆ ಯಾರೊಬ್ಬರೂ ಅದರಿಂದ ಮುಕ್ತರಾಗಿರುವದಿಲ್ಲ. ವ್ಯಾಧಿ, ರೋಗ - ಈ ಶಬ್ದಗಳ ಅವಯವಾರ್ಥವನ್ನು ಲಕ್ಷ್ಯವಿಟ್ಟು ತಿಳಿಯುವದರಿಂದ ಪ್ರಯೋಜನವುಂಟು. ಆಧಿ ಎಂದರೆ ಮನಸ್ಸಿನಲ್ಲಿ ಆಗುವ ವ್ಯಥೆಯು ;

ವ್ಯಾಧಿ ಎಂದರೆ ಆಧಿಗೆ ಕಾರಣವಾಗಿರುವ ವಿಶೇಷರೂಪದ ಶರೀರದಲ್ಲಾಗುವ ಸಂಕಟವು. ರೋಗವು ಎಂದರೆ ನೋಯಿಸುವದು, ಕರೆಕರೆಗೊಳಿಸುವದು. ಶರೀರವೆಂಬುದೇ ರೋಗದ ಮೂರ್ತಿಯು, ರೋಗಗಳ ಮೊಟ್ಟೆ ; ಈ ಶರೀರದಲ್ಲಿ ಪ್ರತಿಯೊಂದು ಘಳಿಗೆಯಲ್ಲಿಯೂ ಏನಾದರೊಂದು ರೋಗವು ಸಿದ್ಧವಾಗುತ್ತಲೇ ಇರುವದು. ಈಶ್ವರನು ಶರೀರವನ್ನು ಚರ್ಮದಿಂದ ಮುಚ್ಚದಿದ್ದರೆ ಒಳಗಿನ ಭೀಕರಸ್ಥಿತಿಯು ಗೊತ್ತಾಗುತ್ತಿತ್ತು! ಕೆಲವು ನಗರಗಳಲ್ಲಿ ಬೀದಿಯ ಕೆಳಗಡೆಯೇ ಹೊಲಸು ನೀರು ಕೊಚ್ಚಿಕೊಂಡು ಹೋಗುವದಕ್ಕೆ ಏರ್ಪಾಡುಮಾಡಿರುತ್ತಾರೆ ; ಮೇಲೆ ನಡೆದಾಡುವವರಿಗೆ ಎಲ್ಲೆಲ್ಲಿ ಯಾವ ಯಾವ ಚರಂಡಿಯು ಎತ್ತೆತ್ತ ಹೋಗಿದೆ ಎಂಬುದೇ ತಿಳಿಯದಂತಾಗಿ ಕೆಲವು ವೇಳೆ ನೀರು ಕಟ್ಟಿಹೋಗಿ ದುರ್ವಾಸನೆಯು ಉಂಟಾಗುವಂತೆ ನಮ್ಮ ನಮ್ಮ ಶರೀರದ ಒಳಗಡೆಯಲ್ಲಿ ಆರೋಗ್ಯಕ್ಕೆ ಹಾನಿಯನ್ನು ತರುವ ಯಾವಯಾವ ರಸಗಳು ವಸ್ತುಗಳು ಏರ್ಪಡುತ್ತಿವೆ ಎಂಬುದು ನಮಗೆ ತಿಳಿದಿರುವದಿಲ್ಲ ; ಮನುಷ್ಯನು ದುರ್ಬಲನಾದಾಗ, ಅದರಲ್ಲಿಯೂ ವಿಶೇಷವಾಗಿ ಮುಪ್ಪಿನಲ್ಲಿ, ಈ ರೋಗಗಳು ಒಂದೊಂದಾಗಿ ಕಾಣಿಸಿಕೊಳ್ಳುವವು. ಇವುಗಳ ಸ್ವರೂಪವನ್ನೂ ನಿದಾನವನ್ನೂ ತಿಳಿದುಕೊಳ್ಳುವದು ಅವಶ್ಯವಲ್ಲವೆ ? ಆಹಾರವಿಹಾರಗಳಲ್ಲಿ ಹೀಗೆಹೀಗೆ ನಡೆದುಕೊಳ್ಳಬೇಕೆಂದು ಬುದ್ಧಿಯು ಹೇಳುತ್ತಲೇ ಇರುವದು; ನಾಲಗೆಯೂ ಮಿಕ್ಕ ಇಂದ್ರಿಯಗಳೂ ನಮ್ಮನ್ನು ಅಪಥ್ಯಸೇವನೆಯಲ್ಲಿಯೂ ಅಸದಾಚಾರಗಳಲ್ಲಿಯೂ ಕೆಡಹುತ್ತಲೇ ಇರುವವು ! ರೋಗವು ಆಗಾಗ್ಗೆ ಕಾಣಿಸಿಕೊಂಡು ಎಚ್ಚರಿಕೆಕೊಡುತಲೇ ಇರುವದು ; ಅವಿವೇಕಿಗಳು ತಮ್ಮ ತಮ್ಮ ವ್ಯಾಪಾರದಲ್ಲಿ ಎಂದಿನಂತೆ ವರ್ತಿಸುತ್ತಲೇ ಇರುವರು ! ಹಣವಂತರಿಗೆ ರೋಗನಿವಾರಣೋಪಾಯಗಳನ್ನು ಅನುಸರಿಸುವದಕ್ಕೆ ಅವಕಾಶವಿದೆ, ನಿಜ. ಆದರೆ ಇಂಜೆಕ್ಷನ್‌ಗಳು, ಆಪರೇಷನ್‌ಗಳು, ಟಾನಿಕ್‌ಗಳು, ಆರೋಗ್ಯಸ್ಥಳಗಳ ವಾಸ - ಎಂದುಮುಂತಾಗಿ ಅವರು ಹಲವು ಉಪಾಯಗಳನ್ನು ಕೈಕೊಂಡರೂ ಹಿಂಜರಿಯದ ಮೊಂಡುರೋಗಗಳು ಬೇರೆ ಇವೆ ! ಅವಕ್ಕಾಗಿ ತಾವು ಮಾಡಿದ ಧನವ್ಯಯವನ್ನು ನೆನೆನೆನೆದು ಆಗುವ ಮನೋರೋಗಗಳು ಬೇರೆ!

ಹೀಗೆ ಜನ್ಮಮೃತ್ಯುಜರಾವ್ಯಾಧಿಗಳ ಮೂಲಕವಾಗಿ ಜೀವನದಲ್ಲಿರುವ ದುಃಖದೋಷಗಳು ಅನಂತವಾಗಿರುವವು. ಇವುಗಳನ್ನು ಕುರಿತು ಸಮಾಲೋಚನೆ ಮಾಡುತ್ತಿರುವದು ಜ್ಞಾನಕ್ಕೆ ಒಂದು ದೊಡ್ಡ ಸಾಧನವಾಗುವದು. ಲೋಕದಲ್ಲಿ ಕೆಲವರು ಯಾವಾಗಲೂ ಈ ದುಃಖಗಳಲ್ಲಿ ತಾದಾತ್ಮ್ಯವನ್ನು ಹೊಂದಿ ನರಳುತ್ತಲೇ ಇರುವರು ; ಅವರಿಗೆ ದುಃಖಮಯಸಂಸಾರದಲ್ಲಿರುವದೇ ಸ್ವಾಭಾವಿಕವೆಂದು ತೋರುತ್ತಿರುವದು. ಇನ್ನು ಕೆಲವರು ಅವಿವೇಕಿಗಳಂತೂ ದುಃಖವನ್ನೇ ಸುಖವೆಂದು ಭಾವಿಸಿಕೊಂಡಿರುವಷ್ಟು ಕೆಳಮಟ್ಟಕ್ಕೆ ಇಳಿದಿರುತ್ತಾರೆ. ಆದರೆ ಯಾವ ಮಹನೀಯರು ಜನ್ಮಾದಿಗಳಲ್ಲಿ ತೋರುವ ಸುಖದುಃಖ ಎರಡಕ್ಕೂ ಹೊರಚ್ಚಾಗಿದ್ದು ಸಾಕ್ಷೀಭೂತರಾಗಿ ಅವನ್ನು ನೋಡುತ್ತಿರುವರೋ ಅವರು ಸಂಸ್ಪರ್ಶದಿಂದಾಗುವ ಸುಖವೆಲ್ಲವೂ ನಿಜವಾಗಿ ದುಃಖಕ್ಕೆ ಕಾರಣವೇ ಎಂಬುದನ್ನು ಮನಗಂಡು ಪರಮಾರ್ಥಸುಖರೂಪನಾದ ಪರಮಾತ್ಮನಲ್ಲಿ ನೆಲೆಸಿರುತ್ತಾರೆ. ಅವರು

ತಮ್ಮ ಅನುಭವವನ್ನು ಉಳಿದವರ ಮೇಲಿನ ಕೃಪೆಯಿಂದ ತಿಳಿಸಿಕೊಡುವದಕ್ಕೂ ಸಿದ್ಧರಾಗಿರುತ್ತಾರೆ. ಅಂಥ ಮಹನೀಯರ ದರ್ಶನವನ್ನು ಅನುಸರಿಸಿ ಈ ಜನ್ಮಾದಿಗಳಲ್ಲಿರುವ ದುಃಖವನ್ನು ``ಅನುದರ್ಶನ" ಮಾಡುತ್ತಿರಬೇಕು. ಪರಮಾನಂದವೊಂದು ನಿಜವಾಗಿದ್ದರೆ ನಾವೇಕೆ ಅದನ್ನು ಪಡೆದುಕೊಳ್ಳುವ ಯತ್ನವನ್ನು ಮಾಡಬಾರದು? - ಎಂಬ ಬುದ್ಧಿಯು ಇದರಿಂದ ಉಂಟಾಗುವದು. ಅದರಿಂದ ಜ್ಞಾನವು ಉತ್ಪನ್ನವಾಗುವದಕ್ಕೆ ದಾರಿಯಾಗುವದು.



## ೧೦೭. ಅಸಕ್ತಿ, ಅನಭಿಷ್ವಂಗ 13 - (9)

**(28-11-48)**

ಈ ದಿನ **ಅಸಕ್ತಿ, ಪುತ್ರದಾರಗೃಹಾದಿಗಳಲ್ಲಿ ಅನಭಿಷ್ವಂಗ** - ಎಂಬ ಸಾಧನವನ್ನು ಕುರಿತು ಮಾತನಾಡಬೇಕಾಗಿದೆ. ಸಕ್ತಿ ಎಂದರೆ ಮನಸ್ಸು ಅಂಟಿಕೊಂಡಿರುವದು. ಯಾವದಾದರೊಂದು ವಿಷಯದಲ್ಲಿ ಪ್ರೀತಿಯಿಂದ ಮನಸ್ಸು ಅಂಟಿಕೊಂಡಿರುವದು ಸಕ್ತಿಯು; ಅದಲ್ಲದಿರುವದು ಅಸಕ್ತಿ. ಹೀಗೆಯೇ ಹೆಂಡಿರು, ಮಕ್ಕಳು - ಮುಂತಾದವರಲ್ಲಿ ಅಭಿಷ್ವಂಗ, ಎಂದರೆ ಅದನ್ನೇ ಪ್ರೀತಿಯಿಂದ ಅಪ್ಪಿಕೊಂಡಿರುವದು ; ಹೆಂಡಿರು, ಮಕ್ಕಳು, ಹೊಲಮನೆ, ಹಣಕಾಸು, ಆಳುಕಾಳು - ಮುಂತಾದವುಗಳನ್ನು ಏನುಮಾಡಿದರೂ ಬಿಡಲೊಲ್ಲದ ಮನಸ್ಸಿನ ಭಾವವೇ ಅಭಿಷ್ವಂಗವು, ಅದಲ್ಲದ್ದು ಅನಭಿಷ್ವಂಗವು. ಈ ಅಸಕ್ತಿಯು, ಅನಭಿಷ್ವಂಗವು, ಜ್ಞಾನಕ್ಕೆ ಒಂದು ದೊಡ್ಡ ಸಾಧನವು.

ಜ್ಞಾನದಲ್ಲಿ ಸಂನ್ಯಾಸಿಗಳಿಗೆ ಮುಖ್ಯಾಧಿಕಾರವು. ಸರ್ವಕರ್ಮಗಳನ್ನೂ ಪುತ್ರದಾರಾದ್ಯಭಿಮಾನವನ್ನೂ ತೊರೆದು ಪರಮಾತ್ಮನೇ ಗತಿ ಎಂದು ಯಾರು ಶರಣುಬಂದಿರುವರೋ ಅವರಿಗೆ ಪರಮಾತ್ಮನು ತನ್ನ ಸ್ವರೂಪಜ್ಞಾನವನ್ನೂ ಪ್ರೇಮವನ್ನೂ ಅನುಗ್ರಹಿಸುತ್ತಾನೆ. ಆದ್ದರಿಂದಲೇ ಶಾಸ್ತ್ರದಲ್ಲಿ ಏಷಣಾತ್ರಯದ ತ್ಯಾಗವನ್ನು ಒಂದು ಸಾಧನವಾಗಿ ಹೇಳಿರುತ್ತದೆ. ಆದರೆ ಸಂನ್ಯಾಸಿಗಳಿಗೆ ಹೆಂಡಿರು, ಮಕ್ಕಳು - ಮುಂತಾದ ಪರಿಗ್ರಹವೇ ಇಲ್ಲದ್ದರಿಂದ ಅವರಿಗೆ ಈ ಅನಭಿಷ್ವಂಗವನ್ನು ಉಪದೇಶಿಸಿ ಫಲವೇನು ? - ಎಂದು ಯಾರಾದರೂ ಕೇಳಬಹುದು. ಮತ್ತು ಗೃಹಸ್ಥರಿಗೆ ಪುತ್ರದಾರಾದಿಗಳೇನೋ ಇರುತ್ತಾರೆ. ಅವರು ಪುತ್ರದಾರಾದಿಗಳಲ್ಲಿ ಅಭಿಮಾನವನ್ನು ಇಡಬಾರದೆ ? ಹೆಂಡಿರುಮಕ್ಕಳ ಅಭಿಮಾನವನ್ನು ತೊರೆದು ಸ್ವೇಚ್ಛಾಪ್ರವೃತ್ತಿಯಿಂದ ತಿರುಗುವ ಗೃಹಸ್ಥರೇ ಜ್ಞಾನಕ್ಕೆ ಅಧಿಕಾರಿಗಳೆ? ಅಂಥವರನ್ನು ಶಿಷ್ಟರು ನಿಂದಿಸುವದಿಲ್ಲವೆ ? ಎಂದೂ ಕೇಳಬಹುದು.

ಇದಕ್ಕೆ ಸಮಾಧಾನವೇನೆಂದರೆ, ಇಲ್ಲಿ ಅಸಕ್ತಿ, ಅನಭಿಷ್ವಂಗ - ಇವನ್ನು ಸಂನ್ಯಾಸಿಗಳಿಗೂ ಗೃಹಸ್ಥರಿಗೂ ಸಮಾನವಾಗಿಯೇ ಅನ್ವಯಿಸಿಕೊಳ್ಳುವದಕ್ಕೆ ಬರುತ್ತದೆ. ಸಂನ್ಯಾಸಿಗಳು ಹೊರಗಿನ

ಹೊಲಮನೆ, ಹೆಂಡಿರುಮಕ್ಕಳು - ಮುಂತಾದವರನ್ನು ಬಿಟ್ಟು ಆಶ್ರಮಾಂತರಕ್ಕೆ ಬಂದಿರಬಹುದು. ಆದರೆ ಅವರ ಮನಸ್ಸಿನ ಸ್ಥಿತಿಯೇನು ? ಅವರ ಮನಸ್ಸು ಹಿಂದಿನ ಇಷ್ಟಾನಿಷ್ಟಗಳ ವಿಷಯದಲ್ಲಿ ಈಗಲೂ ಅವ್ಯಕ್ತರಾಗದ್ವೇಷಗಳನ್ನು ತೋರಿಸುತ್ತಿರುವದೊ, ಅಥವಾ ಅವುಗಳ ತೊಡಕನ್ನು ಸಂಪೂರ್ಣವಾಗಿ ಕೊಡವಿಕೊಂಡಿರುವದೊ? ಅದೀಗ ಪ್ರಶ್ನೆ. ಪಂಚದಶಿಯಲ್ಲಿ ಒಂದು ಕಥೆಯಿದೆ. ಒಬ್ಬ ಸಂನ್ಯಾಸಿಯು ವೇದಾಂತವಿಚಾರವನ್ನು ಮಾಡುತ್ತಿರಲು ಅವನ ಗುರುವು ಎಷ್ಟು ಹೇಳಿಕೊಟ್ಟರೂ ಅವನಿಗೆ ತತ್ತ್ವವು ತಿಳಿಯದೆಹೋಯಿತು. ಇದರ ಕಾರಣವನ್ನು ವಿಚಾರಿಸಿದ್ದರಲ್ಲಿ ಶಿಷ್ಯನಿಗೆ ಪೂರ್ವಾಶ್ರಮದಲ್ಲಿದ್ದ ತನ್ನ ಒಂದು ಎಮ್ಮೆಯ ನೆನಪು ಆಗಾಗ್ಗೆ ಬರುತ್ತಿತ್ತೆಂದೂ ಈ ವಿಕ್ಷೇಪದಿಂದ ಅವನ ಮನಸ್ಸಿಗೆ ತತ್ತ್ವವು ಹಿಡಿಸುವದು ಕಷ್ಟವಾಗಿತ್ತೆಂದೂ ತಿಳಿಯಬಂತು. ಕೊನೆಗೆ ಗುರುವು ಆ ಎಮ್ಮೆಯನ್ನೇ ಪ್ರಧಾನವಿಷಯವಾಗಿ ಮಾಡಿಕೊಂಡು ಹೇಗೋ ಆತ್ಮತತ್ತ್ವಕ್ಕೆ ಅವತರಣಿಕೆಯನ್ನು ಮಾಡಿಕೊಂಡನೆಂದೂ ಆಗ ಆ ಶಿಷ್ಯನಿಗೆ ವೇದಾಂತಾರ್ಥದಲ್ಲಿ ಬುದ್ಧಿಯು ನಿಂತಿತೆಂದೂ ಅಲ್ಲಿ ಹೇಳಿರುತ್ತದೆ. ಸಂನ್ಯಾಸಿಗಳಿಗಾದರೂ ಹೀಗೆ ಹಿಂದಿನ ಆಶ್ರಮದ ವಸ್ತುಗಳಲ್ಲಿ ಆಸಕ್ತಿಯೂ ಅಭಿಷ್ವಂಗವೂ ಉಂಟಾಗುವದಕ್ಕೆ ಅವಕಾಶವಿದೆ. ಹಿಂದಿನ ವಾಸನೆಯು ಇದ್ದರೆ ತತ್ತ್ವಜ್ಞಾನಕ್ಕೆ ಅಡ್ಡಿ ಎಂಬುದಿಷ್ಟೇ ಅಲ್ಲ ; ಅದು ಎದ್ದುಕೊಂಡು ಪ್ರಬಲವಾದರೆ ಮತ್ತೆ ಮೊದಲಿಗಿಂತಲೂ ಹೆಚ್ಚಿನ ಅಭಿಮಾನದಿಂದ ಸಂನ್ಯಾಸಿಯು ಗೃಹಸ್ಥಾಶ್ರಮಕ್ಕೆ, ಅಥವಾ ಆಶ್ರಮದ ಕಟ್ಟಿಲ್ಲದ ಸ್ವೇಚ್ಛಾಪ್ರವೃತ್ತಿಗೆ, ಧಾವಿಸಲೂಬಹುದು. ಹಿಂದಕ್ಕೆ ನಾನು ತಿಳಿದಂತೆ ಒಬ್ಬ ಸ್ಕೂಲು ಮೇಷ್ಟರು ದೊಡ್ಡವರ ಬಳಿಗೆ ಹೋಗಿ ಯತ್ಯಾಶ್ರಮವನ್ನು ಸ್ವೀಕರಿಸಿದರು ; ಆಗಲೂ ಅವರು ಯಾವದೋ ಉತ್ಸಾಹದ ಭರದಲ್ಲಿಯೇ ಹೋಗಿರಬೇಕೆಂದು ಕಾಣುತ್ತದೆ. ಏಕೆಂದರೆ ಕೆಲವು ದಿನಗಳಲ್ಲಿಯೇ ಅವರಿಗೆ ತಮ್ಮ ಹಿಂದಿನ ಆಶ್ರಮದ ಮನೆಯ ನೆನಪು ಬಂದಿತು. ಗುರುಗಳು ಎಷ್ಟು ಹೇಳಿದರೂ ಕೇಳದೆ ಊರಿಗೇ ನೇರಾಗಿ ಬಂದುಬಿಟ್ಟರು ; ಹೆಂಡತಿಯು ಮನೆಯಿಂದ ಎಲ್ಲಿಗೋ ಹೋಗಿದ್ದು ಹಿಂತಿರುಗುವದರೊಳಗೆ ಅವರು ಮಗುವಿನ ತೊಟ್ಟಿಲನ್ನು ತೂಗುತ್ತಿದ್ದರಂತೆ! ಆಸಕ್ತಿ ಎಂಬುದರ ಹಾವಳಿ ಇಷ್ಟರಮಟ್ಟಿಗೆ ಇರುತ್ತದೆ.

ಇನ್ನು ಗೃಹಸ್ಥನಾದವನು ಮನೆಯಲ್ಲಿದ್ದರೂ ಪುತ್ರದಾರಾದಿಗಳಲ್ಲಿ ಹೆಚ್ಚಿನ ಅಭಿಷ್ವಂಗವಿಲ್ಲದೆ ಇರಬೇಕೆಂಬುದು ನ್ಯಾಯವೇ ಆಗಿದೆ. ಇದರ ಅಭಿಪ್ರಾಯವು ಹೆಂಡಿರುಮಕ್ಕಳನ್ನು ದ್ವೇಷಿಸಬೇಕೆಂದಾಗಲಿ ಹೊಡೆದೋಡಿಸಬೇಕೆಂದಾಗಲಿ ಇರುವದಿಲ್ಲ. ಶಾಸ್ತ್ರದ ಅಕ್ಷರಾರ್ಥವನ್ನು ತೆಗೆದುಕೊಂಡು ಅಪಾರ್ಥ ಕಲ್ಪಿಸಿಕೊಳ್ಳಬಾರದು ; ಉಪದೇಶದ ಭಾವವನ್ನು ಗ್ರಹಿಸಬೇಕು. ಯಾವನೋ ಒಬ್ಬ ಲಿಂಗಾಯಿತನು ಪರಮೇಶ್ವರನ ಸಾಕ್ಷಾತ್ಕಾರವು ತನಗೆ ಬೇಗ ಆಗಲಿ ಎಂದು ಕುಡುಗೋಲಿನಿಂದ ಕತ್ತುಕೊಯ್ದುಕೊಂಡನೆಂದು ವರ್ತಮಾನಪತ್ರಗಳಲ್ಲಿ ಮೊನ್ನೆ

ಬ್ರುರ

ತಡೆಯಲಾರದೆ ತನ್ನ ಶಿರಸ್ಸನ್ನೇ ಒಪ್ಪಿಸುವದಕ್ಕೆ ಹೊರಡಲು ಕೂಡಲೆ ಆತನು ಪ್ರಸನ್ನನಾದನು -

ಎಂಬುದನ್ನು ಅವನು ಓದಿರಬೇಕು. ಭಕ್ತನಾದವನು ಪರಮೇಶ್ವರನಿಗಾಗಿಯೇ ದೇಹಧಾರಣೆಮಾಡಬೇಕು ಎಂಬ ಭಾವವನ್ನು ಹಿಡಿಯಲಾರದೆ ಆ ಕಥೆಗೆ ಅಪಾರ್ಥವನ್ನು ಮಾಡಿಕೊಂಡಿದ್ದರ ಫಲವಿದು !

ಪ್ರಕೃತದಲ್ಲಿ ಅನಭಿಷ್ವಂಗ ಎಂದರೆ ಪುತ್ರದಾರಾದಿಗಳಲ್ಲಿ ಮಿತಿಮೀರಿದ ಪ್ರೇಮವನ್ನು ಮಾಡಿ ಧರ್ಮವನ್ನು ಬಿಡಬಾರದು ಎಂಬ ಅಭಿಪ್ರಾಯವನ್ನು ಕಲ್ಪಿಸಬೇಕೇ ಹೊರತು ಪುತ್ರದಾರಾದಿಗಳನ್ನು ಶತ್ರುಗಳಂತೆ ದ್ವೇಷಿಸಬೇಕು ಎಂದು ಕಲ್ಪಿಸುವದಕ್ಕೆ ಹೋಗಬಾರದು. ಸೀತಾದೇವಿಯಂಥ ಆದರ್ಶಪತ್ನಿಯು ಇದ್ದರೆ ಧರ್ಮಸಾಧನೆಗಾಗಲಿ ಜ್ಞಾನಸಾಧನಕ್ಕಾಗಲಿ ಅಡ್ಡಿಯಾದೀತೆ? ಒಮ್ಮೆ ರಾಮನೂ ಸೀತೆಯೂ ಜೊತೆಯಲ್ಲಿ ಅರಣ್ಯದಲ್ಲಿ ಸಂಚರಿಸುತ್ತಿರುವಾಗ ಸೀತೆಯು `ಶ್ರೀರಾಮನೆ, ನಾನು ಏನೂ ತಿಳಿಯದವಳು ; ಆದರೂ ನನಗೆ ತಿಳಿದಿರುವ ವಿಷಯವನ್ನು ನಿನಗೆ ಅರಿಕೆಮಾಡಿಕೊಳ್ಳುವದು ನನ್ನ ಕರ್ತವ್ಯವು. ನಾವು ಇಲ್ಲಿ ಬಂದಿರುವದು ತಪಶ್ಚರ್ಯೆಗಾಗಿ. ಋಷಿಗಳ ಮಧ್ಯದಲ್ಲಿರುವ ನಮಗೆ ಶಸ್ತ್ರಾಸ್ತ್ರಗಳಿಂದ ಆಗಬೇಕಾದದ್ದೇನು? ಹಿಂದೆ ಯಾವನೋ ಒಬ್ಬ ಋಷಿಯು ತನ್ನ ಕೈಯಲ್ಲಿ ಕೆಲವು ಕಾಲ ಒಂದು ಕತ್ತಿಯಿದ್ದದ್ದರಿಂದ ಸಿಕ್ಕಸಿಕ್ಕ ಗಿಡಗಳನ್ನೂ ಮರಗಳನ್ನೂ ಪ್ರಾಣಿಗಳನ್ನೂ ಕೊಂದು ದೋಷಿಯಾದನು ಎಂದು ಒಂದು ಕಥೆಯನ್ನು ಹೇಳುತ್ತಾರೆ. ತಪೋವನದಲ್ಲಿ ಶಸ್ತ್ರಧಾರಿಯಾಗಿರುವದು ಯುಕ್ತವಲ್ಲವೆಂದು ನನಗೆ ತೋರುತ್ತದೆ. ಇದ್ದದ್ದನ್ನು ನಿನಗೆ ನೆನಪುಕೊಟ್ಟಿರುತ್ತೇನೆ. ತತ್ತ್ವವನ್ನು ಕಲಿಸಿಕೊಡುವದಕ್ಕೆ ಬಂದಳೆಂದು ಬಗೆಯಬೇಡ' ಎಂದು ಬಿನ್ನವಿಸಿಕೊಂಡಳಂತೆ ! ಆಗ ಶ್ರೀರಾಮನು `ನೀನು ಹೇಳುವದು ನಿಜ ; ಆದರೆ ಇಲ್ಲಿರುವ ಋಷಿಗಳು ನನ್ನ ಸಹಾಯವನ್ನು ಕೇಳಿಕೊಂಡಿರುತ್ತಾರೆ ; ಇವರಿಗೆ ರಾಕ್ಷಸರಿಂದ ಬಹಳ ಹಿಂಸೆಯಾಗುತ್ತಿದೆ. ಇವರನ್ನು ಪರಪೀಡೆಯಿಂದ ರಕ್ಷಿಸುವದು ಕ್ಷತ್ರಿಯನೂ ರಾಜಪುತ್ರನೂ ಆದ ನನ್ನ ಕರ್ತವ್ಯವಲ್ಲವೆ?' ಎಂದು ಉತ್ತರಕೊಟ್ಟನಂತೆ. ಇಂಥ ಆದರ್ಶದಾಂಪತ್ಯವು ಧರ್ಮಾಭಿವೃದ್ಧಿಗೇ ಕಾರಣವಾಗುವದು. ಜನಕಮಹಾರಾಜನು ಮದುವೆಯ ಕಾಲದಲ್ಲಿ `ಈ ನನ್ನ ಮಗಳಾದ ಸೀತೆಯು, ನಿನ್ನ ಸಹಧರ್ಮಚಾರಿಣಿಯಾಗಿರುವಳು' ಎಂದು ಹೇಳಿದ್ದ ವಚನವನ್ನು ಅಕ್ಷರಶಃ ಪಾಲಿಸಿದವಳು ಸೀತೆ. ಹೀಗೆಯೇ ದ್ರೌಪದಿಯ ಸಹಾಯದಿಂದ ಧರ್ಮರಾಯನೂ ವನವಾಸದಲ್ಲಿ ಕೂಡ ಅತಿಥಿಸತ್ಕಾರವನ್ನು ಮಾಡುತ್ತಾ ಕಾಲಯಾಪನೆಮಾಡಿದನೆಂದು ವರ್ಣಿಸಿರುತ್ತಾರೆ. ಧರ್ಮಾರ್ಥಕಾಮಗಳಲ್ಲಿ ಹೆಂಡತಿಯು ಗಂಡನನ್ನೂ ಗಂಡನು ಹೆಂಡತಿಯನ್ನೂ ಬಿಟ್ಟು ಅತ್ಯಾಚಾರಕ್ಕೆ ಹೋಗಬಾರದು ಎಂದು ಶಾಸ್ತ್ರದಲ್ಲಿ ಹೇಳಿದೆ. ಆದ್ದರಿಂದ ಪುತ್ರದಾರಾದಿಗಳಲ್ಲಿರುವ ಪ್ರೇಮವು ಧರ್ಮಕ್ಕೆ ಕುಂದನ್ನು ತರದಂತೆ ನೋಡಿಕೊಳ್ಳಬೇಕು ಎಂಬುದೇ ಇಲ್ಲಿ ವಿವಕ್ಷಿತ. ಹೆಂಡಿರುಮಕ್ಕಳಲ್ಲಿನ ಅತಿಪ್ರೇಮದಿಂದ ಧರ್ಮವನ್ನು ಬಿಟ್ಟು ಹೋಗಬಾರದು. ನಚಿಕೇತನು `ನನ್ನನ್ನು ಯಾರಿಗೆ ದಕ್ಷಿಣೆಯಾಗಿ ಕೊಡುವೆ?' ಎಂದು ಕೇಳಿದಾಗ ಸಿಟ್ಟಿನಿಂದ ತಂದೆಯು `ನಿನ್ನನ್ನು ಯಮನಿಗೆ ಕೊಟ್ಟಿರುವೆನು !' ಎಂದು ನುಡಿದದ್ದನ್ನೂ ಆದರೆ ನಚಿಕೇತನು `ನಿನ್ನ ವಚನವನ್ನು

ಸತ್ಯವಾಗಿ ಮಾಡಿಕೊ!' ಎಂದು ಹೇಳಿ ಯಮಲೋಕಕ್ಕೂ ಹೋಗಿ ಆತನ ಅನುಗ್ರಹದಿಂದ ತತ್ತ್ವಜ್ಞಾನವನ್ನೇ ಸಂಪಾದಿಸಿದ್ದನ್ನೂ ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು.

ಅದೇ ನಚಿಕೇತನಿಗೆ ಯಮನು ಎಷ್ಟು ಬಗೆಯ ಕಾಮುಗಳನ್ನೂ ರಥಗಳನ್ನೂ ನೃತ್ಯಗೀತಾದಿಗಳನ್ನೂ, ಭೂಮಿಯನ್ನೂ, ಅಧಿಪತ್ಯವನ್ನೂ, ದೀರ್ಘಾಯುಷ್ಯವನ್ನೂ, ಇಹಲೋಕದ ಸರ್ವಸೌಖ್ಯಗಳನ್ನೂ ಕೊಡುತ್ತೇನೆಂದರೂ ತನಗೆ ತತ್ತ್ವಜ್ಞಾನವೇ ಬೇಕೆಂದು ಅವನು ಕೇಳಿಕೊಂಡದ್ದನ್ನು ಮನದಂದರೆ ಧರ್ಮಜ್ಞಾನಗಳಿಗಾಗಿ ಯಾವದನ್ನಾದರೂ ಬಿಡುವದಕ್ಕೆ ಸಿದ್ಧನಾಗಿರಬೇಕು, ಆದರೆ ಹೆಂಡಿರುಮಕ್ಕಳು ಮುಂತಾದವುಗಳ ಪ್ರೀತಿಗಾಗಿ ಧರ್ಮಜ್ಞಾನಗಳನ್ನು ಬಿಡಬಾರದು - ಎಂಬ ತತ್ತ್ವವೇ ಹೊರಡುತ್ತದೆ. ತತ್ತ್ವಜ್ಞಾನಕ್ಕೆ ಸರಿಯಾದದ್ದು ಮತ್ತೆ ಯಾವದು ಇದೆ? ಸಮುದ್ರಪರ್ಯಂತವಾದ ಇಡಿಯ ಭೂಮಿಯನ್ನು ಸರ್ವಸಂಪತ್ತುಗಳ ಸಮೇತವಾಗಿ ಕೊಟ್ಟರೂ ಜ್ಞಾನವೇ ಅದಕ್ಕಿಂತ ಹೆಚ್ಚಿನದೆನಿಸುವದು ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಈ ಭಾವವನ್ನೇ ಇಲ್ಲಿ ಅಸಕ್ತಿ, ಅನಭಿಷ್ವಂಗ - ಎಂಬ ಮಾತುಗಳಿಂದ ತಿಳಿಸಿರುತ್ತದೆ. ಧರ್ಮಪತ್ನಿ, ಧರ್ಮಪುತ್ರ, ಧರ್ಮದಿಂದ ಸಂಪಾದಿಸಿದ ಆಸ್ತಿ, ಆಳು, ಕಾಳು, ವಿದ್ಯೆ, ಕೀರ್ತಿ - ಎಲ್ಲವೂ ಧರ್ಮಮಯವಾಗಿರಬೇಕು. ಕಾಮಕ್ಕೆ ವಶನಾಗಿ ಸ್ವೇಚ್ಛಾಪ್ರವೃತ್ತಿಯಿಂದ ಧರ್ಮವನ್ನು ಮುಳುಗಿಸಬಾರದು. ನಾವು ಸಂಪಾದಿಸುವ ಸಕಲದ್ರವ್ಯಗಳೂ ಧರ್ಮಕ್ಕಾಗಿ ವಿನಿಯೋಗವಾಗಬೇಕು; ಅಧರ್ಮದಿಂದ ಅನುಭವಿಸುವ ಭೋಗಕ್ಕೆ ವಿನಿಯೋಗವಾಗಬಾರದು. ಜನರು ನನಗೆ ವಿರಾಮವಿಲ್ಲ, ನನಗೆ ಕೆಲಸವಿದೆ - ಎಂದು ಕ್ಷಣವೂ ಬಿಡುವಿಲ್ಲದೆ ಕೆಲಸಮಾಡುತ್ತಲೂ ಸಂಪಾದನೆ ಮಾಡುತ್ತಲೂ ಅದರಲ್ಲಿಯೇ ಜೀವನವನ್ನು ಪರಿಸಮಾಪ್ತಿಮಾಡುತ್ತಾರೆ. ಆದರೆ ಅವರು ಬಿಡುವಿಲ್ಲದೆ ವ್ಯವಹಾರಮಾಡಿದ್ದಾಗಲಿ ಧನವನ್ನು ದುಡಿದದ್ದಾಗಲಿ ಪ್ರಧಾನವಲ್ಲ ; ಆ ಕೆಲಸವು ಯಾವ ರೂಪದ್ದು? ದುಡಿದದ್ದು ಹೇಗೆ? ಹೇಗೆ ವಿನಿಯೋಗವಾಯಿತು? ಅದನ್ನು ನೋಡಬೇಕು. ಹೆಂಡಿರುಮಕ್ಕಳಿಗಾಗಿ, ಅದರಲ್ಲಿಯೂ ತಾತ್ಕಾಲಿಕ ಉಪಭೋಗಗಳಿಗಾಗಿ ವಿಲಾಸಕ್ಕಾಗಿ ನಾವು ದುಡಿದಿದ್ದರೆ ಆಗ ನಮ್ಮ ಇಡಿಯ ಬಾಳೇ ವ್ಯರ್ಥವಾದಂತಾಯಿತು ; ಧರ್ಮಕ್ಕಾಗಿ ಎಷ್ಟೇ ಸ್ವಲ್ಪ ವಿನಿಯೋಗವಾಗಿರಲಿ, ಅಷ್ಟು ಮಟ್ಟಿಗೆ ಅದು ಸಾರ್ಥಕವಾದಂತಾಯಿತು. ಮಾನವನ ಜೀವನಕ್ಕೆ ಒಂದು ಗುರಿ ಇರಬೇಕು. ಧರ್ಮಜ್ಞಾನಗಳೇ ಗುರಿಯಾಗಿರಲಿ ; ಧರ್ಮಜ್ಞಾನಗಳಿಗಾಗಿಯೇ ಮಿಕ್ಕದ್ದೆಲ್ಲವೂ ವಿನಿಯೋಗವಾಗಲಿ ! ಇದನ್ನು ಮರೆಯಬಾರದು. ಒಬ್ಬ ಬ್ರಾಹ್ಮಣನು ಒಮ್ಮೆ ನನ್ನೊಡನೆ ಮಾತನಾಡುವಾಗ `ನಾನು ಈವರೆಗೆ ಮಾಡಿದ ಗ್ರಂಥರಚನೆಯ ಉದ್ದೇಶವು ನೆರವೇರಿತು, ನನ್ನ ಮನಸ್ಸಿನಲ್ಲಿದ್ದ ಅಭಿಪ್ರಾಯವು ಇಂದಿಗೆ ಕಾರ್ಯಮುಖವಾಯಿತು, ನನ್ನ ಹೆಂಡತಿಯ ಕೊರಳಲ್ಲಿ ಒಂದು ಅಡ್ಡಿಕೆ (Neck Lace) ಹಾಕಿ ಆಕೆಯ ಇಷ್ಟಾರ್ಥವನ್ನು ಕೈಗೂಡಿಸಬೇಕೆಂದು ಎಷ್ಟೋ ವರ್ಷಗಳಿಂದ ಹಂಬಲಿಸುತ್ತಿದ್ದೆ. ಇಂದಿಗೆ ಆ ಹಂಬಲಿಕೆಯು

ಹಣ್ಣಾಯಿತು' ಎಂದನು. ಎಂಥ ವಿಪರೀತಬುದ್ಧಿಯು ! ಬ್ರಾಹ್ಮಣಜನ್ಮಕ್ಕೆ ಇದೇಯೆ ಸಾಫಲ್ಯ ! ಜೀವನದ ಗುರಿಯು ಮನಸ್ಸಿನಲ್ಲಿಲ್ಲದ, ಮಿತಿಮೀರಿದ ಅಭಿಷ್ವಂಗಕ್ಕೆ ಇದೊಂದು ಉದಾಹರಣೆ.

ಇನ್ನು ಸಂನ್ಯಾಸಿಗಳ ವಿಷಯವಂತೂ ಹೇಳಬೇಕಾದದ್ದೇ ಇಲ್ಲ. ತ್ಯಾಗವೇ ಅವರ ಉಸಿರು. ``ತ್ಯಾಗದಿಂದಲೇ ಅಮೃತತ್ವವನ್ನು ಪಡೆಯುತ್ತಾರೆ" ಎಂದು ಶ್ರುತಿ ಸಾರುತ್ತಿದೆ. ತ್ಯಾಗವೇ ಬದುಕು, ಭೋಗವೇ ಸಾವು - ಎಂಬುದು ಅವರ ಜೀವನಸೂತ್ರವಾಗಿರಬೇಕು. ಲೋಕದಲ್ಲಿ ಮನುಷ್ಯನು ಅಭಿಮಾನವನ್ನೂ ಆಸಕ್ತಿಯನ್ನೂ ಬಿಟ್ಟಷ್ಟೂ ಬದುಕಿದ, ಹಿಡಿದಷ್ಟೂ ಸತ್ತ ಎಂದು ತಿಳಿಯಬೇಕು. ನಿಜವಾದ ಭೋಗವು ಯಾವದು ? ಪರಮಾತ್ಮನ ಆನಂದಭೋಗವೇ ಭೋಗ ; ತ್ಯಾಗವೆಂದರೆ ಯಾವದು ? ಸಂಗದ, ಅಭಿಷ್ವಂಗದ, ತ್ಯಾಗವೇ ತ್ಯಾಗ. `ಎಷ್ಟು ಬಿಡಬೇಕು ?' ಎಂದು ಕೇಳಬಾರದು, `ಹೇಗೆ ಬಿಡಬೇಕು ?' ಎಂದು ಕೇಳಬೇಕು. ಮನಸ್ಸಿನಲ್ಲಿ ಒಂದು ಧರ್ಮವಿರುತ್ತದೆ. ಅದಕ್ಕೆ ಪದಾರ್ಥವು ದೊಡ್ಡದಾಗಲಿ ಸಣ್ಣದಾಗಲಿ ಯಾವದು ಸಿಕ್ಕಿದರೆ ಅದನ್ನು ಹಿಡಿದುಕೊಂಡುಬಿಡುತ್ತದೆ; ಅದೇ ಸಕ್ತಿ, ಅದೇ ಅಭಿಷ್ವಂಗ. ಈ ಸಕ್ತಿಯನ್ನು, ಈ ಅಭಿಷ್ವಂಗವನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕು. ಬಿಡುವದರಲ್ಲಿ `ನಾನು ಇದನ್ನು ಬಿಟ್ಟಿದ್ದೇನೆ' ಎಂಬ ಅಭಿಮಾನವೂ ಇರಬಾರದು; ಅದೂ ಅಭಿಷ್ವಂಗವೇ. `ಯೇನ ತ್ಯಜಸಿ ತತ್ ತ್ಯಜ' ಎಂಬಂತೆ ಯಾವ ಅಭಿಮಾನವನ್ನು ಇಟ್ಟುಕೊಂಡು ಎಲ್ಲವನ್ನೂ ಬಿಟ್ಟಿರುವೆನು - ಎನ್ನುವೆವೋ ಆ ಅಭಿಮಾನವನ್ನೂ ಮೊದಲು ಬಿಟ್ಟುಬಿಡಬೇಕು. ಅಭಿಮಾನತ್ಯಾಗವೇ ಸರ್ವತ್ಯಾಗವು. ಹೀಗೆ ಸಕ್ತಿಯನ್ನೂ ಅಭಿಮಾನವನ್ನೂ ಬಿಡುವದು ಜ್ಞಾನದ ಹತ್ತಿರಕ್ಕೇ ಸಾಧಕನನ್ನು ಒಯ್ಯುವದು.



## ೧೦೮. ಸಮಚಿತ್ತತ್ವ 13 - (9)

**(5-12-48)**

ಈಗ ನಾವು ವಿಚಾರಮಾಡುತ್ತಿರುವ ಅಮಾನಿತ್ವಾದಿಗಳನ್ನು ಮುಖ್ಯವಾಗಿ ಜ್ಞಾನಕ್ಕಾಗಿಯೇ ಹೇಳಿರುತ್ತದೆಯಾದರೂ ಜ್ಞಾನದ ಇಚ್ಛೆಯಿಲ್ಲದವರಿಗೆ ಇವುಗಳ ಗೋಜೇ ಬೇಡವೆಂದು ತಿಳಿಯುವಹಾಗಿಲ್ಲ. ಇವು ಸಾಧಾರಣಜನರಿಗೂ ನಿತ್ಯಜೀವನಕ್ಕೆ ಬೇಕಾಗಿರುತ್ತವೆ. ವೇದದಲ್ಲಿ `ಸತ್ಯವನ್ನು ಹೇಳು', `ಧರ್ಮವನ್ನು ಆಚರಿಸು', ಎಂದು ಅಪ್ಪಣೆಮಾಡಿರುತ್ತದೆ ; ಈ ಉಪದೇಶವು ವೇದಾಧ್ಯಯನಪೂರ್ವಕವಾಗಿ ಕರ್ಮವನ್ನು ಆಚರಿಸುವ ದ್ವಿಜರಿಗೆ ಮಾತ್ರ ಅನ್ವಯಿಸತಕ್ಕದ್ದು ಎಂದು ಹೇಳುವದಕ್ಕೆ ಆದೀತೆ? ರಾಷ್ಟ್ರದ ಕಾನೂನಿನಂತೆ ನಡೆಯುವದಕ್ಕೆ ಹೇಗೆ ರಾಷ್ಟ್ರದವರೆಲ್ಲರೂ ಬದ್ಧರೋ ಹಾಗೆ ಅಮಾನಿತ್ವಾದಿಗಳಿಗೆ ಎಲ್ಲರೂ ಅಧಿಕಾರಿಗಳು. ಸುಖವು ಬೇಕು ಎಂದು ಎಲ್ಲರೂ ಬಯಸುತ್ತಾರಾದ್ದರಿಂದ ನಿತ್ಯಸುಖಕ್ಕೆ ಸಾಧನವಾದ ಜ್ಞಾನವೂ ಎಲ್ಲರಿಗೂ ಬೇಕು. ವೇದಾಧ್ಯಯನ,

ಸಂಸ್ಕೃತದ ಜ್ಞಾನ - ಮುಂತಾದವು ಎಲ್ಲರಿಗೂ ಬೇಕಾಗದೆ ಇರಬಹುದು. ವೇದದಲ್ಲಿ ಸಂಸ್ಕೃತದಲ್ಲಿ ಹೇಳಿರುವ ತತ್ತ್ವಜ್ಞಾನವನ್ನು ಯಾವದೇ ಭಾಷೆಯಲ್ಲಿರುವ ಗ್ರಂಥಗಳನ್ನಾದರೂ ಓದಿ, ಅಥವಾ ಯಾವ ಗುರುಗಳಲ್ಲಾದರೂ ಸೇವಾದಿಗಳನ್ನು ಮಾಡಿ ಪಡೆದುಕೊಳ್ಳಬಹುದು. ಬೆಂಕಿಯು ಸುಡುತ್ತದೆ ಎಂಬ ತಿಳಿವಳಿಕೆಯನ್ನು ಯಾವ ಭಾಷೆಯ ಯಾವ ವಾಕ್ಯದಿಂದ ಪಡೆದುಕೊಂಡರೂ ಅದೇ ತಿಳಿವಳಿಕೆಯೇ. ಹೀಗೆಯೇ ವೇದಾಂತವಿಜ್ಞಾನವನ್ನು ಎಲ್ಲರೂ ಹೇಗಾದರೂ ಮಾಡಿ ಸಂಪಾದಿಸಿಕೊಳ್ಳಬೇಕು. ಅದಕ್ಕೆ ಶಾಸ್ತ್ರದ ಅಧ್ಯಯನವೇ ಬೇಕೆಂಬ ನಿರ್ಬಂಧವೇನೂ ಇಲ್ಲ ; ಶಾಸ್ತ್ರಜ್ಞಾನವು ಎಲ್ಲರಿಗೂ ಅವಶ್ಯವೂ ಅಲ್ಲ. ತತ್ತ್ವವು ಎಲ್ಲಾ ದೇಶಕಾಲಗಳಲ್ಲಿಯೂ ಒಂದೇ ಆಗಿರುತ್ತದೆಯಾದ್ದರಿಂದ ಯಾರುಬೇಕಾದರೂ ಅದರ ಜ್ಞಾನವನ್ನು ಸಂಪಾದಿಸಿಕೊಳ್ಳಬಹುದು, ಜ್ಞಾನವನ್ನು ಪಡೆದುಕೊಂಡು ಆನಂದಿಸುವ ಹಕ್ಕು ಎಲ್ಲರಿಗೂ ಇದ್ದೇ ಇದೆ.

ಇರಲಿ, ಈಗ `ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು' ಎಂಬ ಸಾಧನದ ವಿಚಾರವನ್ನು ಪ್ರಾರಂಭಿಸೋಣ. ಇಷ್ಟೋಪಪತ್ತಿಗಳಲ್ಲಿಯೂ ಅನಿಷ್ಟೋಪಪತ್ತಿಗಳಲ್ಲಿಯೂ ಯಾವಾಗಲೂ ಸಮಚಿತ್ತನಾಗಿರುವದು ಎಂದು ಈ ವಾಕ್ಯದ ಅರ್ಥ. ಇಷ್ಟೋಪಪತ್ತಿಗಳೂ ಅನಿಷ್ಟೋಪಪತ್ತಿಗಳೂ ಎರಡೂ ತಾವುತಾವಾಗಿಯೇ ಉಂಟಾಗುತ್ತಿರುತ್ತವೆ. ಇವುಗಳು ನಾವು ಬಾ ಎಂದ ಮಾತ್ರದಿಂದ ಬರುವದಿಲ್ಲ ; ಬರಬೇಡ ಎಂದರೆ ಬಿಡುವದೂ ಇಲ್ಲ. ಅನಿಷ್ಟವು ಬಂದೊದಗಿದಾಗ ದುಃಖವು ಉಂಟಾಗಿಯೇ ತೀರುತ್ತದೆ ;ಇಷ್ಟ ಬಂದೊದಗಿದಾಗ ಸುಖವೂ ಆಗಿಯೇ ತೀರುತ್ತದೆ. ಇವು ಬಂದಾಗ ಅಥವಾ ಬರುತ್ತಿರುವಾಗ ಮನಸ್ಸು ಏಳುವದೂ ಇಳಿಯುವದೂ ಉಂಟು. ಗ್ರೀಸ್‌ದೇಶದ ಎಪಿಕ್ಟೀಟಸ್ ಎಂಬ ತತ್ತ್ವವಿಚಾರಕನು ಹೇಳಿರುವದೇನೆಂದರೆ ಲೋಕದಲ್ಲಿ ಕೆಲವು ವಸ್ತುಗಳು ನಮ್ಮ ಅಧೀನವಾಗಿರುತ್ತವೆ ; ಕೆಲವು ಅಧೀನವಾಗಿರುವದಿಲ್ಲ. ಯಾವವು ನಮ್ಮ ಅಧೀನವಾಗಿವೆಯೋ ಅವನ್ನು ನಮ್ಮ ವಶದಲ್ಲಿಯೇ ಇಟ್ಟುಕೊಂಡು, ನಮ್ಮ ವಶದಲ್ಲಿಲ್ಲದವುಗಳನ್ನು ಕೈಬಿಡುವದು ಮನುಷ್ಯನ ಜಾಣತನವು - ಎಂದಿರುತ್ತಾನೆ. ಇಷ್ಟಾನಿಷ್ಟಗಳು ಬಾರದಂತೆ ಮಾಡಿಕೊಳ್ಳುವದು ನಮ್ಮ ಕೈಯಲ್ಲಿರುವದಿಲ್ಲ ; ಆದರೆ ಅವುಗಳು ಬಂದೊದಗಿದಾಗ ಮನಸ್ಸನ್ನು ಏರುಪೇರುಮಾಡಿಕೊಳ್ಳದೆ ಇರುವದು ನಮ್ಮ ವಶದಲ್ಲಿರುತ್ತದೆ.

ಬಂದ ಇಷ್ಟಾನಿಷ್ಟಗಳ ಉಬ್ಬರವಿಳಿತಗಳಿಂದ ನಮ್ಮ ಮನಸ್ಸಿನಲ್ಲಿಯೂ ಏರಿಳಿತಗಳಾದರೆ ಶರೀರದ ಸ್ವಾಸ್ಥ್ಯವು ಕೆಡುತ್ತದೆ, ಮನಸ್ಸು ಕಲುಷಿತವಾಗುತ್ತದೆ, ತತ್ತ್ವಾರ್ಥದಲ್ಲಿ ಮನಸ್ಸನ್ನು ಏಕಾಗ್ರತೆಗೊಳಿಸುವದಕ್ಕೆ ಆಗದೆಹೋಗುತ್ತದೆ. ಉದಾಹರಣೆಗೆ ನಮ್ಮ ನಿರೀಕ್ಷಣೆಗೆ ಅತ್ಯಂತವಿರುದ್ಧವಾದ, ನಮಗೆ ಅನಿಷ್ಟವನ್ನೇ ಮಾಡುವ, ಯಾವದಾದರೊಂದು ಸಂದರ್ಭವು ಉಪಸ್ಥಿತವಾದರೆ ಆಗ ನಮಗೆ ಕೋಪವುಂಟಾಗಬಹುದು. ಕೋಪರೂಪವಾದ ಅಲೆಯು ಮನಸ್ಸಿನಲ್ಲಿ ಎದ್ದಾಗ ಶರೀರವನ್ನೆಲ್ಲ ಅದು ಬಿಸಿಮಾಡಿಸುತ್ತದೆ ; ಕಣ್ಣುಗಳು ಕೆಂಪಾಗುತ್ತವೆ. ತುಟಿಗಳು ಅಲುಗಾಡುತ್ತವೆ, ಔಡುಕಚ್ಚುತ್ತಾರೆ, ಮೈನಡುಗುತ್ತದೆ. ಇದು ಒಂದು ಬಗೆಯ

ಪರಿಣಾಮ. ಮತ್ತೆ ಕೆಲವರಿಗೆ ಕೋಪವು ಬಂದರೆ ಅವರು ಅದನ್ನು ತಮ್ಮಲ್ಲಿಯೇ ಅಡಗಿಸಿಕೊಂಡು ಹೊರಕ್ಕೆ ತೋರಿಸದೆ ಇರುತ್ತಾರೆ; ಅವರು ಯಾವ ಮಾತನ್ನೂ ಆಡುವದಿಲ್ಲ. ಆದರೂ ಕೋಪದ ಪರಿಣಾಮವು ಅವರ ಮೇಲೆ ಆಗಿರುವದೇ ಇಲ್ಲವೆಂದು ಭಾವಿಸಬಾರದು. ಅವರು ಒಳಗೊಳಗೇ ಕುದಿಯುತ್ತಿರುತ್ತಾರೆ. ಹೀಗೆ ಒಂದೊಂದು ಭಾವವು ಬಂದಾಗಲೂ ಅದದಕ್ಕೆ ವಶನಾಗುವವನು ಆಯಾ ಭಾವಕ್ಕೆ ತಕ್ಕಂತೆ ಮನಸ್ಸನ್ನು ಮಾರ್ಪಡಿಸಿಕೊಳ್ಳುತ್ತಾ ಹೋಗುತ್ತಾನೆ. ಇದರಿಂದ ಅವನು ಮನಸ್ಸು ಕೆಟ್ಟು, ಧೃತಿಯಿಲ್ಲದೆ, ಯಾವದೊಂದು ಉತ್ತಮ ಉದ್ಯೋಗಕ್ಕೂ ಅರ್ಹನಲ್ಲದೆ ಹೋಗುತ್ತಾನೆ.

ಚತುರನಾದವನು ಯಾವಾಗ ಏನು ಬಂದರೂ ಅದಕ್ಕೆ ತಕ್ಕಂತೆ ಒಳಗೆ ವರ್ತಿಸಿಕೊಂಡು ಅದರ ಹೊಡೆತಕ್ಕೆ ಸಿಕ್ಕಿಕೊಳ್ಳದಂತೆ ನೋಡಿಕೊಳ್ಳುತ್ತಾನೆ. ಹೊರಗೆ ನಡೆಯುತ್ತಿರುವ ಘಟನೆಗಳಲ್ಲಿ ಕೆಲವನ್ನು ನಾವು ನಮಗೆ ಸಂಬಂಧಿಸಿಕೊಂಡಿದ್ದೇವೆ; ಆದ್ದರಿಂದ ಅವು ಬಂದೊದಗಿದಾಗ ನಮ್ಮ ಮನಸ್ಸಿನಲ್ಲಿ ಕೂಡಲೆ ಪ್ರತಿಕ್ರಿಯೆಯಾಗುತ್ತದೆ. ಅದರಿಂದಲೇ ನಮ್ಮ ಚಿತ್ತಸಮುದ್ರದಲ್ಲಿ ಅಲೆಗಳ ಏಳುಬೀಳುಗಳು ಆಗುತ್ತಿರುವವು. ಆದರೆ ನಾವು ನಮಗೆ ಸಂಬಂಧಿಸಿಕೊಳ್ಳದ ಎಷ್ಟೋ ಘಟನೆಗಳೂ ಇರುತ್ತವೆ. ಅವು ನಮ್ಮ ಮನಸ್ಸನ್ನು ಅಲುಗಾಡಿಸುವದಿಲ್ಲ. ಇದರಿಂದ ನಮಗೆ ಆಗಬಹುದಾಗಿದ್ದ ಎಷ್ಟೋ ಅನರ್ಥಗಳು ತಪ್ಪಿರುತ್ತವೆ. ಈ ರಹಸ್ಯವನ್ನು ನಾವು ತಿಳಿದುಕೊಳ್ಳಬೇಕು.

ಮನುಷ್ಯನ ಜೀವನವು ಏತಕ್ಕೆ ? ತಿಂದು ಉಂಡು ಸುಖಿಸುವದಕ್ಕೆ ಎಂದು ಕೆಲವರು ತಿಳಿದುಕೊಂಡಿರುತ್ತಾರೆ. ಆದರೆ ಒಬ್ಬ ಮನುಷ್ಯನು ನಿಜವಾಗಿ ಎಷ್ಟು ತಿನ್ನಬಹುದು ? ಅದಕ್ಕಾಗಿ ಈ ಇಡಿಯ ಜೀವನವೆ ? ಇನ್ನು ಕೆಲವರು ಹಣವನ್ನು ಕೂಡಿಹಾಕುವದಕ್ಕೇ ಜೀವನವು ಎಂದು ತಿಳಿದುಕೊಂಡಿರುತ್ತಾರೆ. ಆದರೆ ಆ ಹಣದ ವಿನಿಯೋಗವೇನು ? ಅದನ್ನು ಕೂಡಿಹಾಕುವದರ ಉದ್ದೇಶವೇನು ? - ಎಂಬುದೇ ಅವರ ಮನಸ್ಸಿಗೆ ಹತ್ತಿರುವದಿಲ್ಲ. ಜಾನ್ಸನ್ ಎಂಬಾತನು ದಾರಿಯಲ್ಲಿ ಹೋಗುವಾಗ ಲಾಂದ್ರದ ಕಂಬಗಳಿಗೆ ಒಂದು ಏಟು ಕೊಡದೆ ಮುಂದಕ್ಕೆ ಹೋಗುತ್ತಿರಲಿಲ್ಲವಂತೆ; ಆದರೆ ಹಾಗೇಕೆ ಹೊಡೆಯಬೇಕು ? - ಎಂಬುದನ್ನು ಅವನು ಎಂದಿಗೂ ವಿಚಾರಮಾಡಿರಲಿಲ್ಲ. ಅದೊಂದು ಅವನ ಪದ್ಧತಿ. ಅಷ್ಟೆ. ನಮ್ಮಲ್ಲಿ ಅನೇಕರು ಜೀವನದ ಉದ್ದೇಶದ ವಿಷಯಕ್ಕೆ ಹೀಗೆಯೇ ಯಾವ ವಿಚಾರವನ್ನೂ ಮಾಡದೆ ನಡೆದುಕೊಳ್ಳುತ್ತಿರುತ್ತಾರೆ. ಕೆಲವರು ಶಾರೀರಬಲಕ್ಕಾಗಿ, ಕೆಲವರು ಹಣಕ್ಕಾಗಿ, ಮತ್ತೆ ಕೆಲವರು ಕುಟುಂಬಭರಣಕ್ಕಾಗಿ, ಇನ್ನು ಕೆಲವರು ವಿದ್ಯೆಗಾಗಿ, ಇನ್ನೂ ಕೆಲವರು ಕೀರ್ತಿಗಾಗಿ, ಒಬ್ಬರು ಅಧಿಕಾರಕ್ಕಾಗಿ, ಮತ್ತೊಬ್ಬರು ಬಿರುದಿಗಾಗಿ - ಹೀಗೆಲ್ಲ ಒಂದೊಂದು ಗುರಿಯನ್ನು ಇಟ್ಟುಕೊಂಡಿರುತ್ತಾರೆ: ಅನೇಕರು ಜೀವನಕ್ಕೆ ಯಾವದೊಂದು ಗುರಿಯೂ ಇಲ್ಲದೆ ಸಮಯ ಬಂದಂತೆ ಕೆಲಸಮಾಡುತ್ತಾ ಹೋಗುತ್ತಿರುತ್ತಾರೆ. ಆದರೆ ನಿಜವಾಗಿ ಜೀವನಕ್ಕೆ ಹೆಗ್ಗುರಿಯೇನು? ಜನರಿಗೆ ತಿಳಿಯಲಿ, ತಿಳಿಯದಿರಲಿ, ಅವರೆಲ್ಲರೂ ಭಗವತ್ಸ್ವರೂಪವನ್ನು ಅರಿತು ಕೃತಾರ್ಥರಾಗುವದಕ್ಕೆ ಹೊರಟಿರುತ್ತಾರೆ. ಅದೇ ಜೀವನದ ಪರಮೋದ್ದೇಶವು. ಮಿಕ್ಕದ್ದೆಲ್ಲ ಅದಕ್ಕೆ ಸಿದ್ಧರಾಗುವದಕ್ಕೆ ಒಂದೊಂದು ನೆಪವು. ಸ್ಕೂಲಿನಲ್ಲಿ

ಓದುವಾಗ ಆ ಓದು ಬರಹಗಳನ್ನು ಮುಂದೆ ಜೀವನದಲ್ಲಿ ಏತಕ್ಕೆ ಉಪಯೋಗಿಸಬೇಕಾಗುವದೆಂಬುದನ್ನು ಅರಿಯದೆ ಇರುವ ವಿದ್ಯಾರ್ಥಿಗಳಂತೆಯೂ ಗರಡಿಮನೆಯಲ್ಲಿ ಮಾಡುವ ಸಾಮು ಮುಂದೆ ಏತಕ್ಕೆಂಬುದನ್ನು ಅರಿಯದ ಸಾಧಕರಂತೆಯೂ ಜನರು ಜೀವನದ ಉದ್ದೇಶವನ್ನು ತಿಳಿದುಕೊಳ್ಳದೆಯೇ ವರ್ತಿಸುತ್ತಿದ್ದಾರೆ. ನಾವು ಬೇರೆಬೇರೆಯ ಉದ್ಯೋಗಗಳಲ್ಲಿ ನಿರತರಾಗಿರುತ್ತೇವೆ; ಬೇರೆಬೇರೆಯ ಗುರಿಗಳನ್ನು ಇಟ್ಟುಕೊಂಡಿದ್ದೇವೆಂದೂ ಭಾವಿಸಿರುತ್ತೇವೆ. ಆದರೆ ಇದೆಲ್ಲ ಒಂದಾನೊಂದು ಪರಮಧ್ಯೇಯಕ್ಕೆ ಗುರಿ. ಸಮಚಿತ್ತತೆಯೇ ನಮಗೆ ಬೇಕಾಗಿರುವದು ; ಈ ಸಮಚಿತ್ತತೆಯ ಮೂಲಕವಾಗಿ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳಬೇಕಾಗಿರುವದು. ಇದಕ್ಕಾಗಿ ನಾವೆಲ್ಲರೂ ತಿಳಿದೋ ತಿಳಿಯದೆಯೋ ಹಿಗೆಲ್ಲ ಹಲವು ಬಗೆಯಲ್ಲಿ ವ್ಯಾಪೃತರಾಗುತ್ತಿರುವೆವು !

ಸಮಚಿತ್ತತ್ವವು ಜೀವನದ ಎಷ್ಟೋ ಸಮಸ್ಯೆಗಳನ್ನು ಬಿಡಿಸಬಲ್ಲದು. ಜೀವನದಲ್ಲಿ ಕಷ್ಟಗಳು ಆಗಾಗ್ಗೆ ಕಾಣಿಸಿಕೊಳ್ಳುವದು ನಿಶ್ಚಯ; ಜನರು ಕಷ್ಟಗಳೇ ಬರಬಾರದೆಂದು ಹಾರೈಸುತ್ತಿರುವರು. ಇದು ಆಗದ ಮಾತು. ಕಷ್ಟಗಳು ಬರಲಿ ; ಆದರೆ ನಾವು ಅವುಗಳನ್ನು ಎದುರಿಸುವದಕ್ಕೆ ಸಿದ್ಧರಾಗಬೇಕು. `ಕಷ್ಟ ಬೇಕಾದಷ್ಟು ಬರಲಿ ; ನಿನ್ನ ಕೃಪೆ ಮಾತ್ರ ಇರಲಿ!' ಎಂದು ಒಬ್ಬ ಭಾಗವತೋತ್ತಮರು ಭಗವಂತನನ್ನು ಬೇಡಿಕೊಂಡಿರುತ್ತಾರೆ. ಯಾವನಿಗೆ ಸಮಚಿತ್ತತೆಯ ಅನುಗ್ರಹವು ಆಗಿರುತ್ತದೆಯೋ ಅವನು ಎಂಥ ಪರ್ವತದಂಥ ಕಷ್ಟಬಂದರೂ ಅಗಸ್ತ್ಯಮುನಿಯಂತೆ ಅದನ್ನು ದಾಟಿಹೋಗುವನು. ಕಷ್ಟ ಬರಲಿ, ಸುಖ ಬರಲಿ, ಎಲ್ಲದಕ್ಕೂ ಸಿದ್ಧರಾಗಿದ್ದು ಮನಸ್ಸಿನ ಸಮಸ್ಥಿತಿಯನ್ನು ಕಳೆದುಕೊಳ್ಳದೆ ಇರುವದಕ್ಕೆ ಪ್ರಯತ್ನಿಸುತ್ತಿರಬೇಕು. ಒಂದಾನೊಂದು ಕಾಲದಲ್ಲಿ ಅಮೆರಿಕದ ಸುಪ್ರಸಿದ್ಧ ಮಹಾಪುರುಷನಾದ ಎಮರ್ಸನ್ ಎಂಬುವನು ಉದ್ಯಾನವನದಲ್ಲಿ ಸಂಚರಿಸುತ್ತಾ ಇದ್ದನಂತೆ. ಅವನ ಅಡಿಗೆಯವನೊಬ್ಬ ವಿವೇಕಹೀನನು : ಯಾರೋ ಅವನಿಗೆ `ಈ ಭೂಮಂಡಲವೇ ನಾಶವಾಗಿಬಿಡುವದು' ಎಂಬ ಭೀತಿಯನ್ನು ಅಂಟಿಸಿಬಿಟ್ಟರು. ಕೂಡಲೆ ಈ ಸಂಗತಿಯನ್ನು ತನ್ನ ಧಣಿಗೆ ವರದಿ ಮಾಡಿಬಿಡಬೇಕೆಂದು ಓಡುತ್ತೋಡುತ್ತ ಬಂದು `ಸ್ವಾಮೀ, ಭೂಮಂಡಲವೇ ಹಾಳಾಗಿಬಿಡುವದಂತಲ್ಲ !' ಎಂದು ಕೂಗಿಕೊಂಡನಂತೆ. ಎಮರ್ಸನ್ನನು ಶಾಂತಚಿತ್ತದಿಂದ ``ಒಳ್ಳೆಯದು ಹಾಗಾದರೆ, ಭೂಲೋಕದ ಗೋಜಿಲ್ಲದೆಯೇ ಇರುವೆನು" ಎಂದನಂತೆ ! ಚಿತ್ತದ ಸಮತೆಯನ್ನಳವಡಿಸಿಕೊಂಡಿರುವವನು ಹೀಗಿರಬೇಕು. ಯಾವ ಇಷ್ಟವು ಬರಲಿ, ಯಾವ ಅನಿಷ್ಟವು ಬರಲಿ; ಅಥವಾ ಯಾವ ಇಷ್ಟಾನಿಷ್ಟಗಳು ಹೋಗಿಬಿಡಲಿ, ಮನಸ್ಸಿನ ಸಮತೆ ಮಾತ್ರ ಹಾಗೆಯೇ ಇರಬೇಕು. ಗೋಗ್ರಹಣಕಾಲದಲ್ಲಿ ಕೌರವಸೈನ್ಯವನ್ನು ಕಂಡು ರಥದಿಂದ ಧುಮುಕಿ ಓಡಿದ ಉತ್ತರಕುಮಾರನ, ಅಥವಾ ಅರ್ಜುನನ ಗಾಂಢೀವಧನುಸ್ಸಿನ ಟೇಂಕಾರವನ್ನು ಕೇಳಿದ ಮಾತ್ರದಿಂದ ಕಕ್ಕಾಬಿಕ್ಕಿಯಾದ ಕುರುಸೇನಾನಾಯಕರ ಮನಃಸ್ಥಿತಿಯವರು ಈ ಜೀವನಕ್ಕೆ ತಕ್ಕವರಲ್ಲ. ಮರಗಾಲಮೇಲೆ ನಿಲ್ಲುವವರು, ಹಗ್ಗದಮೇಲೆ ನಡೆಯುವವರು, ಅಥವಾ ಬೈಸಿಕಲ್ಲು ಸವಾರಿಮಾಡುವವರು ಹೇಗೆ ಶರೀರವನ್ನು ಸಮತೆಯಲ್ಲಿಟ್ಟುಕೊಂಡಿರುವರೋ ಹಾಗೆ ಎಲ್ಲಾ

ಸಂದರ್ಭದಲ್ಲಿಯೂ ಚಿತ್ತವನ್ನು ಅತ್ತಿತ್ತ ಚಲಿಸದಂತೆ ಸಮತೆಯಲ್ಲಿಟ್ಟುಕೊಂಡಿರಬಲ್ಲವರೇ ಈ ಜೀವನದಲ್ಲಿ ಆನಂದವನ್ನು ಹೊಂದುವರು.

ಮನುಷ್ಯನಿಗೆ ಆಗಾಗ್ಗೆ ಇಷ್ಟಾನಿಷ್ಟಗಳು ಬಂದು ಕಾಣಿಸಿಕೊಳ್ಳುತ್ತಲೇ ಇರುವವು. ಬೇಕುಗಳು ಬಂದಾಗ ಹಿಗ್ಗುವದು, ಬೇಡಗಳು ಬಂದಾಗ ತಗ್ಗುವದು - ಇದೇ ಸಾಮಾನ್ಯರ ಸ್ವಭಾವವಾಗಿರುವದು. ಆದರೆ ಇಂಥದ್ದೊಂದೇ ಬೇಕು, ಇಂಥದ್ದೊಂದೇ ಬೇಡ - ಎಂಬ ನಿಯಮವೇನೂ ಇರುವದಿಲ್ಲ. ನಿಮಗೆ ಈಗ ಬೇಕಾಗಿರುವದು ಇನ್ನು ಮುಂದೆ ಬೇಡವಾಗಬಹುದು; ಈಗ ಬೇಡವಾದದ್ದೇ ಮುಂದೆ ಬೇಕಾಗಬಹುದು. ಆದ್ದರಿಂದ ಈ ಹೊಯ್ದಾಡುತ್ತಿರುವ ಬೇಕುಬೇಡಗಳನ್ನನುಸರಿಸಿ ಚಿತ್ತವನ್ನೂ ಹೊಯ್ದಾಡುವದಕ್ಕೆ ಬಿಡಬಾರದು. ಭಗವಂತನು ಸಮತಾರೂಪನು ; ಅವನನ್ನು ಸಮತೆಯಿಂದಲೇ ಕಾಣಬಹುದು. ಅಷ್ಟೇ ಅಲ್ಲ. ಆ ಭಗವಂತನು ಸಮತಾರೂಪನು ಎಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡಿರುವದೇ ನಮ್ಮ ಚಿತ್ತಸಮತೆಗೂ ಸಾಧನವಾಗುವದು. ಲೋಕದಲ್ಲಿ ನಮಗೆ ಬೇಕುಬೇಡಗಳು ಬಂದೊದಗುತ್ತಿರುವದು ಬೇಕುಗಳನ್ನು ಸಂಪಾದಿಸಿಕೊಳ್ಳಲಿ, ಬೇಡಗಳನ್ನು ನಿವಾರಿಸಿಕೊಳ್ಳಲಿ ಎಂದಲ್ಲ ; ಮನಸ್ಸಿನ ಸ್ಥಿತಿಯನ್ನು ಯಾವಾಗಲೂ ಕಾಯ್ದುಕೊಂಡಿರುವದಕ್ಕೆ ಅವು ಸಾಧಕಗಳಾಗಲಿ ! - ಎಂದು. ``ಭಗವಂತ, ನನಗೆ ಇಂಥಿಂಥ ಬೇಕುಗಳನ್ನು ಕೊಡು!" ಎಂದು ಬೇಡುವದನ್ನು ಕಲಿಯಬಾರದು, `ಭಗವಂತ, ನಿನ್ನ ಸಂಕಲ್ಪದಂತೆ ಯಾವದು ನನಗೆ ಆಗಬೇಕೋ ಅದು ಆಗಲಿ ; ಆದರೆ ನನ್ನ ಚಿತ್ತಸಮತೆಯನ್ನು ನಾನು ಎಂದಿಗೂ ಕಳೆದುಕೊಳ್ಳದಂತೆ, ಸರ್ವಸಮನಾದ ನಿನ್ನ ನೆನಪು ನನಗೆ ಯಾವಾಗಲೂ ಇರುವಂತೆ ಅನುಗ್ರಹಿಸು !" ಎಂದು ಬೇಡುವದನ್ನು ಕಲಿಯಬೇಕು.

ಸಮಚಿತ್ತತೆಯ ವಿಷಯದಲ್ಲಿ ಉಪನ್ಯಾಸಮಾಡುವದು ಸುಲಭ. ಆದರೆ ಸಮಚಿತ್ತನಾಗಿ ಇರುವದು ಕಷ್ಟ. ನಮ್ಮ ಚಿತ್ತವು ಜಿಂಕೆಯಂತೆ ಅತ್ತಿತ್ತ ಚಲಿಸುತ್ತಲೇ ಇರುತ್ತದೆ. ಅದನ್ನು ಹಿಡಿದು ನಿಲ್ಲಿಸುವೆನೆಂದು ನೀವು ಅಂದುಕೊಳ್ಳುವಷ್ಟರಲ್ಲಿ ಅದು ಟಣ್ಣನೆ ಎಲ್ಲಿಗೋ ಹಾರಿಹೋಗಿಬಿಡುತ್ತದೆ. ಚಿತ್ತವನ್ನು ಸ್ವತಂತ್ರವಾಗಿ ಹಿಡಿದು ಸಮತೆಯಲ್ಲಿಟ್ಟುಕೊಳ್ಳುವೆನೆಂಬ ಹೆಮ್ಮೆ ಬೇಡ. ಆ ಕೆಲಸವು ಅಷ್ಟು ಸುಲಭವಲ್ಲ. ಆದರೆ ಚಿತ್ತವನ್ನು ಚಿತ್ತಜನಯ್ಯನಾದ ಭಗವಂತನಿಗೆ ಅರ್ಪಿಸಿಬಿಡುವ ಸಾಧನವನ್ನು ಮಾಡಬಹುದು. ``ಭಗವಂತ, ಇನ್ನು ಮೇಲೆ ಈ ಚಿತ್ತವು ನಿನ್ನದು ; ನಿನಗೆ ಇಷ್ಟವಾದಂತೆ ಇದನ್ನು ನಡೆಯಿಸಿಕೊ" ಎಂದು ಆತನಿಗೆ ಇದನ್ನು ನಿವೇದನಮಾಡಿಬಿಡಿರಿ. ಹನುಮಂತನಂತೆ `ದಾಸೋಽಹಂ ಕೋಸಲೇನ್ದ್ರಸ್ಯ' ಎಂಬ ಮಂತ್ರವನ್ನು ಜಪಿಸಿ. ಸಹಜ ಚಂಚಲವಾಗಿರುವ ಈ ಚಿತ್ತವೇ ಕೊನೆಗೆ ಎಂಥ ಪ್ರಸಂಗದಲ್ಲಿಯೂ ಸಮತೆಯನ್ನು ಬಿಡದೆ ಇರುವದನ್ನು ಸ್ವಭಾವವಾಗಿ ಮಾಡಿಕೊಂಡುಬಿಡುವದು.



# ೧೦೯. ಅನನ್ಯಭಕ್ತಿ 13 - (10)
## (19-12-48)

ಜ್ಞಾನಸಾಧನಗಳನ್ನು ಒಂದೊಂದಾಗಿ ಹೇಳಿರುವದನ್ನು ಕೇಳಿ ಇಷ್ಟೊಂದು ಸಾಧನಗಳನ್ನು ನಾವುಗಳೆಲ್ಲರೂ ಮಾಡಲು ಸಾಧ್ಯವೆ ? - ಎಂದು ಕೆಲವರು ಎದೆಗೆಡುವ ಸಂಭವವಿದೆ. ಆದರೆ ಇಂಥ ಅಂಜಿಕೆಗೇನೂ ಕಾರಣವಿಲ್ಲ. ಏಕೆಂದರೆ `ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾ' ಜ್ಞಾನತಪಸ್ಸಿನಿಂದ ಪವಿತ್ರರಾಗಿ ಅನೇಕರು ನನ್ನ ಭಾವವನ್ನು ಪಡೆದುಕೊಂಡಿರುತ್ತಾರೆ - ಎಂದು ಭಗವಂತನೇ ಅಪ್ಪಣೆಕೊಡಿಸಿರುತ್ತಾನೆ. ಇದಲ್ಲದೆ ಈ ಜ್ಞಾನಸಾಧನಗಳಲ್ಲಿ ಒಂದು ರಹಸ್ಯವಿದೆ. ಕೆಟ್ಟ ಪದ್ಧತಿಗಳು ಹೇಗೆ ಒಂದನ್ನವಲಂಬಿಸಿದವನಿಗೆ ಮಿಕ್ಕವು ತಾವೇ ಬಂದು ಸೇರಿಕೊಳ್ಳುವವೋ ಹಾಗೆಯೇ ಇಲ್ಲಿ ಹೇಳಿರುವ ಅಧ್ಯಾತ್ಮಸಾಧನಗಳಲ್ಲಿ ಯಾವದೊಂದನ್ನು ಅನುಸರಿಸಿದರೂ ಸಾಕು, ಒಂದು ಕೊಂಡಿಯನ್ನು ಹಿಡಿದೆತ್ತಿದರೆ ಇಡಿಯ ಸರಪಳಿಯೇ ಕೈಗೆ ಸಿಕ್ಕುವಂತೆ ಮಿಕ್ಕವು ತಮಗೆ ತಾವೇ ಬಂದು ಸೇರಿಕೊಳ್ಳುತ್ತವೆ.

ಹಾಗಾದರೆ ಇಷ್ಟೊಂದು ಸಾಧನಗಳನ್ನು ಹೇಳಿರುವದೇಕೆ ? ಎಂದು ಯಾರಾದರೂ ಕೇಳಬಹುದು. ಸಾಧಕನಾದವನು ತನ್ನಲ್ಲಿ ಯಾವ ಕೊರತೆ ಇದೆಯೆಂಬುದನ್ನು ತಿಳಿದು ಅದನ್ನು ಭರ್ತಿಮಾಡಿಕೊಡುವ ಸಾಧನವನ್ನು ಕೈಕೊಳ್ಳಲಿ - ಎಂಬುದೇ ಉದ್ದೇಶ. ಈ ಪಟ್ಟಿಯು ಅಮಾನಿತ್ವದಿಂದ ಪ್ರಾರಂಭವಾಗಿರುವದರಿಂದ ಸಾಧಕನೂ ಅಮಾನಿತ್ವದಿಂದಲೇ ಆರಂಭಿಸಬೇಕೆಂಬ ನಿರ್ಬಂಧವೇನೂ ಇಲ್ಲ. ಈ ಸಾಧನಗಳ ಸ್ವಭಾವವನ್ನು ಕುರಿತು ಹಿಂದೆ ಹೇಳಿದ್ದನ್ನು ಇಲ್ಲಿ ಇನ್ನೊಮ್ಮೆ ನೆನಪಿಗೆ ತಂದುಕೊಳ್ಳುವದು ಒಳ್ಳೆಯದು.

ಅಮಾನಿತ್ವ, ಅದಂಭಿತ್ವ - ಮುಂತಾದವುಗಳನ್ನು ಬರಿಯ ಮಾನಿತ್ವಾಭಾವ, ದಂಭಿತ್ವಾಭಾವ,-ಎಂದು ಭಾವಿಸತಕ್ಕದ್ದಲ್ಲ. ಮಾನಿತ್ವವನ್ನೂ ತಪ್ಪಿಸಿಕೊಳ್ಳುವದಕ್ಕೆ ಮಾಡಬೇಕಾದ ಸಾಧನವಿಶೇಷವೇ ಅಮಾನಿತ್ವವು. ಹೀಗೆಯೇ ಅದಂಭಿತ್ವಾದಿಗಳನ್ನೂ ಅರಿಯಬೇಕು. ಈ ಅಮಾನಿತ್ವಾದಿಗಳು ಪರಿಪೂರ್ಣವಾಗಿರುವದು ಪರಮಾತ್ಮನಲ್ಲಿ ಮಾತ್ರ ಸಾಧ್ಯವು. ಆದ್ದರಿಂದ ಪರಮಾತ್ಮನನ್ನು ಲಕ್ಷ್ಯದಲ್ಲಿಡುವದು ಅಮಾನಿತ್ವವು ಅಳವಡುವದಕ್ಕೆ ಉತ್ತಮೋಪಾಯವು. ಒಬ್ಬನಲ್ಲಿ ಅಮಾನಿತ್ವವಿದ್ದಷ್ಟೂ ಪರಮಾತ್ಮನಿಗೆ ಹತ್ತಿರವಾಗುವನು. ಅಮಾನಿತ್ವವು ಪರಮಾತ್ಮನಿಗೆ ಉಪಲಕ್ಷಣವೆನ್ನಬಹುದು; ಆದ್ದರಿಂದ ನಮ್ಮ ಮನಸ್ಸನ್ನು ಪರಮಾತ್ಮಸ್ಥಿತಿಗೆ ಹೊಂದಿಸುವದಕ್ಕೆ ಮಾಡುವ ಪ್ರಯತ್ನವೇ ಅಮಾನಿತ್ವಾದಿಯಾದ ಅಧ್ಯಾತ್ಮಸಾಧನವು ಎಂದಾಯಿತು.

ಈ ಸಾಧನೆಗಳೆಲ್ಲ ಅಂತಃಕರಣಕ್ಕೆ. ಅಂತಃಕರಣದಲ್ಲಿ ಬೇರಬೇರೆಯ ಸಂಸ್ಕಾರಗಳು ಆಗಬೇಕಾಗಿದೆ; ಹಾಗಾದರೆ ಅದು ಪರಮಾತ್ಮನಿಗೆ ಹತ್ತಿರವಾಗುತ್ತದೆ. ಅನೇಕರಿಗೆ ಅಂತಃಕರಣದ

ಸ್ವಭಾವವನ್ನು ವಿಚಾರಮಾಡುವದಕ್ಕೆ ವಿರಾಮಕಾಲವೇ ಸಿಕ್ಕುವದಿಲ್ಲ. ಏಕೆಂದರೆ ಅಂತಃಕರಣವು ಯಾವಾಗಲೂ ಹೊರಗಿನ ವಿಷಯಗಳಿಗೆ ಸಂಬಂಧಪಟ್ಟ ಇಂದ್ರಿಯಗಳ ಚಾಕರಿಯಲ್ಲಿಯೇ ಕಾಲವನ್ನು ಹಾಕುತ್ತಿರುತ್ತದೆ. ಹೊರಗಿನ ವಿಷಯಗಳ ಚಿಂತೆಯನ್ನು ಬಿಟ್ಟರಲ್ಲವೆ, ಅದಕ್ಕೆ ತನ್ನ ವಿಚಾರವನ್ನು ಮಾಡುವದಕ್ಕೆ ಕಾಲವು ದೊರಕೀತು? ಸಾಮಾನ್ಯಜನರ ಅಂತಃಕರಣವು ಇಂದ್ರಿಯಗಳ ಪರಿಚಾರಕನಾಗಿರುತ್ತದೆ; ಅದು ತಾನೇ ಅಡುಗೆಯವನಾಗಬೇಕು. ತಾನೇ ತನ್ನೊಳಗೇ ತನ್ನನ್ನು ಕುರಿತು ವಿಚಾರವನ್ನು ಮಾಡಬೇಕು. ಈಗ ಹಾಗೇಕಿಲ್ಲ? ಎಂದರೆ ಅದು ಕೀಲುಕೊಟ್ಟರೆ ಬಹುಕಾಲದವರೆಗೆ ನಡೆಯುವ ಗಡಿಯಾರದಂತೆ ಇರುತ್ತದೆ. ಕೆಲವು ಗಡಿಯಾರಗಳಿಗೆ ಇಂದು ಕೀಲುಕೊಟ್ಟರೆ ಎಷ್ಟೋ ವರ್ಷಗಳವರೆಗೂ ನಡೆಯುತ್ತಲೇ ಇರುತ್ತವೆ; ಮನಸ್ಸು ಅಂಥ ಗಡಿಯಾರಗಳ ಹಾಗೆ ಇದೆ. ಆದರೆ ಇದು ಕ್ರಮಬದ್ಧಗಡಿಯಾರವಾಗಿಲ್ಲ. ಅದಕ್ಕೆ ನಾವು ಕೀಲಕೊಡುವಂತೆಯೂ ಇಲ್ಲ; ಅದೇ ನಮಗೆ ಕೀಲುಕೊಡುತ್ತದೆ. ಅದರಂತೆ ನಾವು ನಡೆಯುತ್ತಿದ್ದೇವೆ. ಅಂತಃಕರಣವು ಹದಗೆಟ್ಟ ಗಡಿಯಾರದಂತೆ ಈಗ ವೇಗವಾಗಿ ನಡೆಯುತ್ತದೆ; ಇನ್ನೊಂದು ಕ್ಷಣಕ್ಕೆ ಸುಮ್ಮನಾಗಿಬಿಡುತ್ತದೆ. ಆದ್ದರಿಂದಲೇ ನಾವು ಅಮಾನಿತ್ವಾದಿಗಳನ್ನು ಕುರಿತು ವಿಚಾರಮಾಡಿದರೂ ಅವುಗಳನ್ನು ಸರಿಯಾಗಿ ಅಭ್ಯಾಸಮಾಡಲಾರದೆ ಇರುವೆವು; ಅಮಾನಿತ್ವಾದಿಗಳಿಗೆ ವಿರುದ್ಧವಾದ ವೃತ್ತಿಗಳನ್ನೂ ಅವಲಂಬಿಸುತ್ತಿರುವೆವು; ಮನಸ್ಸು ನಮ್ಮ ಮಾತನ್ನು ಕೇಳುತ್ತಲೇ ಇಲ್ಲ!

ಈ ಸ್ಥಿತಿಯನ್ನು ನೇರ್ಪಡಿಸಿಕೊಳ್ಳುವದಕ್ಕೆ ನಾವೇನು ಮಾಡಬೇಕು?..... ಎಂದರೆ ಭಗವಂತನು ಇಂದಿನ ದಿನದ ವಿಷಯವಾದ ಸಾಧನದ ಕಡೆಗೆ ಕೈತೋರಿಸಿರುತ್ತಾನೆ. "**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ**" ಭಗವಂತನಲ್ಲಿ ಅನನ್ಯಯೋಗದಿಂದ ಮಾಡುವ ಅವ್ಯಭಿಚರಿತಭಕ್ತಿಯೇ ಅಂತಃಕರಣವನ್ನು ಸ್ವಾಧೀನಕ್ಕೆ ತಂದುಕೊಳ್ಳುವದಕ್ಕೆ ಉಪಾಯವು. ಇದಾದರೂ ನಮಗೆ ದಕ್ಕುವದು ಹೇಗೆ? - ಎಂದು ನೀವು ಕೇಳಬಹುದು. ಆದರೆ ಭಕ್ತಿ ಎಂಬುದು ಮಿಕ್ಕ ಸಾಧನಗಳಂತೆ ಅಲ್ಲ, ಈ ಸಾಧನವು ಬಹಳ ಸುಲಭವಾಗಿರುತ್ತದೆ. ಭಕ್ತಿಯನ್ನು ಮಾಡುವದಕ್ಕೆ ಪ್ರಾರಂಭಿಸಿದರೆ ಆಯಿತು: ನಾವು ಪರಮಾತ್ಮನ ಪ್ರೇಮಪ್ರವಾಹಕ್ಕೆ ಸಿಕ್ಕಿಬಿದ್ದಂತೆಯೇ. ನಾವು ಮಾತ್ರ ಅನನ್ಯರಾಗಬೇಕು. ಶ್ರುತಿಯಲ್ಲಿ `ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ' ಎಂದಿದೆ. ಆತ್ಮನನ್ನೇ ಕಾಣಬೇಕು, ಶ್ರವಣ ಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು. ಪರಮಾತ್ಮನನ್ನು ಕಾಣುವದೆಂದರೆ ಕೈಸುಟ್ಟುಕೊಂಡ ಮಗುವು ದೂರದಿಂದ ದೀಪವನ್ನು ನೋಡುವಂತೆ ಅಲ್ಲ; ಯಾವದನ್ನು ಕಂಡರೂ ಯಾವುದನ್ನು ಮುಟ್ಟಿದರೂ ಯಾವದನ್ನು ಮೂಸಿದರೂ ಯಾವದನ್ನು ಕೇಳಿದರೂ, ಯಾವದನ್ನು ಸವಿದರೂ ಅಲ್ಲೆಲ್ಲ ಭಗವಂತನನ್ನೇ ಕಾಣುವದು. ಯಾವಾಗಲೂ ಭಗವಂತನನ್ನೇ ಕಾಣುವದಕ್ಕೆ ನಾವು ಯಾವಾಗಲೂ ಆತನ ಕಡೆಗೇ ತಿರುಗಬೇಕಲ್ಲ! ನಮಗೆ ವಿಷಯಗಳ ವಿಷಯಕ್ಕೆ ಬೇಸರಿಕೆ ಬರಬೇಕಲ್ಲ! - ಎಂದು ಚಿಂತಿಸುವಹಾಗಿಲ್ಲ. ಏಕೆಂದರೆ ವಿಷಯಗಳು ತಾವೇ ನಮಗೆ ಮತ್ತೆ ಮತ್ತೆ ಬೇಸರವುಂಟಾಗುವಂತೆ

ಮಾಡುತ್ತಿರುತ್ತವೆ. ಆದರೆ ನಮ್ಮಲ್ಲಿ ಮೂಢರಾದವರು ಮತ್ತೆ ಮತ್ತೆ ಅವುಗಳು ಕೊಟ್ಟ ಎಚ್ಚರಿಕೆಯನ್ನು ಉಪಯೋಗಿಸಿಕೊಳ್ಳದೆ ಮತ್ತೂ ಮತ್ತೂ ಅವುಗಳಿಗೆ ಒಲಿಯುತ್ತಿರುವರು. ಪುಣ್ಯವಂತರಾದವರು ಒಂದು ಸಲ ವಿವೇಕವಾದರೆ ಸಾಕು, ಅಷ್ಟು ಮಾತ್ರದಿಂದಲೇ ವಿಷಯಗಳ ಸ್ವಭಾವವನ್ನು ಅರಿತು ಭಗವಂತನ ಕಡೆಗೆ ತಿರುಗಿಬಿಡುತ್ತಾರೆ. ಅಲ್ಲಿಂದ ಮುಂದಕ್ಕೆ ಭಗವಂತನೇ ಬೇಕೆಂದು ಹಂಬಲಿಸುತ್ತಾರೆ. ಅವರಿಗೆ ಆ ಭಗವಂತನೂ ಅನುಗ್ರಹಮಾಡಿ ತನ್ನ ಕಡೆಗೇ ಅವರನ್ನು

ಯಾರು ಭಗವಂತನ ಕಡೆಗೆ ಒಲಿಯುವರೋ ಅವರಿಗೆ ಭಗವಂತನೂ ಒಲಿಯುತ್ತಾನೆ. ಅವರು ಭಗವಂತನು ತಮಗೆ ಬೇಕೆಂದು ಪ್ರಯತ್ನಿಸಿದರೆ ಸಾಕು, ಕೈನೀಡಿ ಅಳುತ್ತಿರುವ ಮಗುವನ್ನು ಎತ್ತಿಕೊಂಡು ಮುದ್ದಿಸುವ ತಾಯಿಯಂತೆ ಎಂದೆಂದಿಗೂ ಭಗವಂತನು ಅವರನ್ನು ತನ್ನ ಕಡೆಗೇ ತಿರುಗುವಂತೆ ಮಾಡಿಬಿಡುತ್ತಾನೆ. ಭಗವಂತನ ಕಡೆಗೆ ತಿರುಗುವದಕ್ಕೂ ಅವನ ಜ್ಞಾನಕ್ಕೂ ಪ್ರಾಪ್ತಿಗೂ ಭಗವಂತನೇ ಅವರಿಗೆ ಸಾಧನವಾಗಿಬಿಡುತ್ತಾನೆ; ಮಿಕ್ಕ ಸಾಧನಗಳು ಭಕ್ತಿಯೆಂಬ ಪ್ರವಾಹಕ್ಕೆ ಬಂದು ತಮಗೆ ತಾವೇ ಧುಮುಕುವ ಉಪನದಿಗಳಾಗುವವು. ಪರಮಾತ್ಮನ ಕಡೆಗೆ ತಿರುಗುವದಕ್ಕೆ ಯಾವ ಕಾಲವು ಒಳ್ಳೆಯದು? ಎಂದಿನಿಂದ ಭಕ್ತಿಯನ್ನು ಮಾಡಲಿ? - ಎಂದು ಚಿಂತಿಸುವದನ್ನು ಬಿಡಿರಿ. ಇಂದೇ ಅದಕ್ಕೆ ತಕ್ಕ ಕಾಲವೆಂದು ಪ್ರಾರಂಭಿಸಿರಿ. ಭಕ್ತಿಗೆ ಯಾವ ಅಡ್ಡಿಗಳೂ ಇರುವದಿಲ್ಲ, ಎಲ್ಲವೂ ಅದಕ್ಕೆ ಸಹಕಾರಿಯೇ ಆಗಿರುತ್ತದೆ.

ನಾವುನಾವೇ ಅಮಾನಿತ್ವಾದಿಗಳನ್ನು ಅವಲಂಭಿಸುವದಕ್ಕೂ ಪರಮಾತ್ಮನನ್ನು ಅವಲಂಬಿಸಿ ಅವನ್ನು ಸಾಧಿಸುವದಕ್ಕೂ ಬಹಳ ವ್ಯತ್ಯಾಸವಿದೆ. ನಾವು ಎಷ್ಟೇ ಎಚ್ಚರವಾಗಿದ್ದರೂ ಸಾಧನಗಳನ್ನು ಮಾಡುತ್ತಿರುವಾಗ ಆಯಾ ಸಾಧನದ ಪ್ರತಿಪಕ್ಷವು ಹೇಗೋ ನೆನಪಾಗಿ ಮಾಡಬಾರದ್ದನ್ನು ಮಾಡಿಬಿಡುವೆವು. ಧರ್ಮರಾಯನಂಥ ಸತ್ಯನಿಷ್ಠನುಕೂಡ ಒಂದು ವಿಷಮಕಾಲದಲ್ಲಿ ತಮಗೆ ಜಯವು ಲಭಿಸಬೇಕೆಂಬ ಅಭಿಲಾಷೆಗೆ ಕಟ್ಟುಬಿದ್ದು `ಅಶ್ವತ್ಥಾಮೋ ಹತಃ ಕುಂಜರಃ ' ಎಂದು ಬಿಟ್ಟನು. ಅವನು ಹೇಳಿದ್ದು ಒಂದು ಆನೆಯ ವಿಷಯವೇ ಆದರೂ `ಈ ವಾಕ್ಯದಿಂದ ಅಶ್ವತ್ಥಾಮನು ಸತ್ತನೆಂಬ ಪ್ರತೀತಿಯೂ ಆಗಬಹುದು; ಅದು `ಗುರುಗಳಾದ ದ್ರೋಣರಿಗೆ ಅಪ್ರಿಯವಾದದ್ದು' ಎಂದು ತಿಳಿದೂತಿಳಿದೂ ರಾಜ್ಯಲೋಭದಿಂದ ಆ ವಾಕ್ಯವನ್ನು ನುಡಿದೇಬಿಟ್ಟನು; ಇನ್ನು ಸಾಮಾನ್ಯರಾದವರು ಅಮಾನಿತ್ವಾದಿಗಳನ್ನು ತಾವೇ ಅಳವಡಿಸಿಕೊಳ್ಳವದೆಂದರೇನು? ಆದರೆ ಪರಮಾತ್ಮನಲ್ಲಿ ಭಕ್ತಿಯಿಟ್ಟು ಸಾಧನಗಳನ್ನು ಅಭ್ಯಾಸಮಾಡುವವನು ಹಾಗಲ್ಲ. ಭಗವಂತನೇ ಸಾಧನಗಳನ್ನು ಆಗಗೊಳಿಸಿ ಫಲವನ್ನೂ ಅನುಗ್ರಹಿಸುತ್ತಾನೆ. `ತ್ರಾಹಿ ಮಾಂ ಕೃಪಯಾ ದೇವ' ದೇವ, ನೀನೇ ನನ್ನನ್ನು ಕಾಪಾಡಬೇಕು! ಎಂದು ಮೊರೆಯಿಟ್ಟರೆ ಸಾಕು. ಪರಮಾತ್ಮನೇ ಎಲ್ಲ ವಿಷಯಗಳ ಮತ್ತು ಇಂದ್ರಿಯಗಳ ಹಾವಳಿಯಿಂದ ನಮ್ಮನ್ನು ಪಾರುಮಾಡುವನು; ಭಕ್ತಿಯನ್ನು ಮೊಳೆಯಿಸುವನು, ಅದನ್ನು ಬೆಳೆಯಿಸುವನು, ಸಫಲವಾಗಿಯೂ ಮಾಡುವನು.

`ಅನನ್ಯವಾದ ಭಕ್ತಿ' ಎಂದರೆ ಪರಮಾತ್ಮನನ್ನು ಬಿಟ್ಟು ಮತ್ತೇನನ್ನೂ ಸ್ಮರಿಸದೆ ಪರಮಾತ್ಮನಲ್ಲಿಯೇ ಇಟ್ಟ ಭಕ್ತಿ; "ಅವ್ಯಭಿಚರಿತಭಕ್ತಿ" ಎಂದರೆ ಸ್ವಲ್ಪವೂ ತಪ್ಪದ ಭಕ್ತಿ. ಈಗ ಭಕ್ತಿಯನ್ನು ಮಾಡುವದು, ಆಮೇಲೆ ಬಿಡುವದು - ಎಂದು ಕ್ಲಿಪ್ತಕಾಲದಲ್ಲಿ ಮಾಡತಕ್ಕ ಸಾಧನವಲ್ಲ, ಇದು. ಅಷ್ಟೇ ಅಲ್ಲ; ಯಾವ ಸಾಧನವನ್ನೇ ಹಿಡಿಯಲಿ, ಅದರ ಜೊತೆಗೆ ಇದೊಂದನ್ನು ಹಿಡಿಯಲೇಬೇಕು. ಅಮಾನಿತ್ವವೆಂಬ ಸಾಧನವನ್ನು ಅಭ್ಯಾಸಮಾಡುವದೆಂದರೆ ಅವ್ಯಭಿಚರಿತವಾದ ಅನನ್ಯಭಕ್ತಿಯಿಂದೊಡಗೂಡಿ ಅಮಾನಿತ್ವವನ್ನು ಅಭ್ಯಾಸಮಾಡುವದು; ಇದರಂತೆ ಅದಂಭಿತ್ವವೆಂದರೂ ಅವ್ಯಭಿಚರಿತವಾದ ಅನನ್ಯಭಕ್ತಿಯೊಡನೆ ಅಭ್ಯಾಸಮಾಡುವ ಸಾಧನವೇ.

ಪರಮಾತ್ಮನ ಭಕ್ತಿಯು ಅಸ್ವಾಭಾವಿಕವಾದದ್ದಲ್ಲ; ಅದೇ ಸ್ವಾಭಾವಿಕವಾದದ್ದು. ನಾಲಗೆ ಕೆಟ್ಟವನಿಗೆ ಪದಾರ್ಥಗಳ ರುಚಿಯು ತೋರುವದಿಲ್ಲವಷ್ಟೆ; ಆದರೆ ರುಚಿ ತೋರುವುದು ಮನುಷ್ಯನ ಸ್ವಾಭಾವಿಕಸ್ಥಿತಿ. ಅಲ್ಲವೆ? ಇದರಂತೆ ಭಕ್ತಿಯೆಂಬುದೂ ಮನುಷ್ಯನಿಗೆ ಸಹಜವಾಗಿರುತ್ತದೆ. ಭಗವಂತನ ಪ್ರೇಮಕ್ಕಾಗಿ ಪ್ರಯತ್ನವನ್ನು ಮಾಡತಕ್ಕದ್ದು ಏನೂ ಇರುವದಿಲ್ಲ; ನಮ್ಮ ಅಂತಃಕರಣಕ್ಕೆ ರುಚಿತಪ್ಪಿಸಿರುವ ವಿಷಯಗಳನ್ನು ಬಿಟ್ಟುಬಿಡಬೇಕು, ಅಷ್ಟೆ. ಅಷ್ಟು ಮಾತ್ರದಿಂದಲೇ ಭಗವಂತನ ಭಕ್ತಿಯು ತಲೆದೋರುವುದು. ಇನ್ನೊಂದು ಮಾತು. ಭಕ್ತಿಯಿಂದ ಏನನ್ನಾದರೂ ಪಡೆದುಕೊಳ್ಳಬೇಕಾಗಿದೆ ಎಂದು ಎಣಿಸುವವನು ನಿಜವಾದ ಭಕ್ತನಲ್ಲ; `ಭಕ್ತಿಯು ಸ್ವಯಂಫಲರೂಪವಾದದ್ದು' ಎಂದು ಬ್ರಹ್ಮಕುಮಾರರಾದ ನಾರದರು ಹೇಳಿರುತ್ತಾರೆ. ಭಕ್ತಿಯೇ ಸಾಧನವು, ಭಕ್ತಿಯೇ ಫಲವು. ಪರಮಾತ್ಮನ ಭಕ್ತನು ಆ ಭಕ್ತಿಗೆ ಪ್ರತಿಯಾಗಿ ಏನನ್ನೂ ಬೇಡುವದಿಲ್ಲ; ಏಕೆಂದರೆ ಅವನಿಗೆ ಭಕ್ತಿಗಿಂತ ಹೆಚ್ಚಿನ ಪದಾರ್ಥವೇ ಇರುವದಿಲ್ಲ. ಫಲರೂಪವಾದ ಭಕ್ತಿಯನ್ನು ಜ್ಞಾನನಿಷ್ಠೆ ಎಂದು ಕರೆಯುತ್ತಾರೆ. ಪರಮಾತ್ಮನ ಹೊರತು ಮತ್ತೆ ಯಾವ ವಿಷಯವೂ ಆಗ ಇರುವದಿಲ್ಲ. ಪರಮಾತ್ಮನ ಭಕ್ತಿಯಂಥ ಮಧುರವಾದ ಸಾಧನವು ಯಾವದೂ ಇರುವದಿಲ್ಲ. ಭಕ್ತಿಗೆ ಯಾವದೊಂದು ಅಡ್ಡಿಯೂ ಇರುವದಿಲ್ಲ. ಬೆಂಕಿಯ ಬಿಸಿಬೆಳಕುಗಳಂತೆ ಭಕ್ತಿಜ್ಞಾನಗಳು ಒಂದೇ ಪದಾರ್ಥದ ಎರಡು ಶಕ್ತಿವಿಶೇಷಗಳು; ಅವು ಒಂದನ್ನು ಬಿಟ್ಟು ಒಂದು ಇರುವದೇ ಇಲ್ಲ. ಅಧ್ಯಾತ್ಮವಿದ್ಯೆಗಾಗಿ ತಮ್ಮ ಪ್ರಾಣವನ್ನು ಬಿಡುವದಕ್ಕೆ ಸಿದ್ಧರಾಗುವವರಿಗೆ ಅದರಲ್ಲಿ ಅಂಥ ಪ್ರೇಮವಿರಬೇಕೆಂದಾಗುತ್ತದೆ. ಹೀಗೆಯೇ ಜ್ಞಾನವಿಲ್ಲದ ಭಕ್ತಿಯಿಲ್ಲ. ಪ್ರಹ್ಲಾದನನ್ನು ಬೇಕಾದ ವರವನ್ನು ಕೇಳಿಕೊಳ್ಳುವಂತೆ ಭಗವಂತನು ಅಪ್ಪಣೆಮಾಡಿದಾಗ ಅವನು ಕೇಳಿಕೊಂಡದ್ದೇನು? `ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ। ತ್ವಾಮನುಸ್ಮರತಃ ಸಾ ಮೇ ಹೃದಯಾನ್ಮಾಪಸರ್ಪತು' ದೇವ, ಅವಿವೇಕಿಗಳಿಗೆ ವಿಷಯದಲ್ಲಿ ಎಂಥ ಪ್ರೀತಿಯಿರುವದೋ, ಅಂಥ ಪ್ರೀತಿಯು ನಿನ್ನ ಸ್ಮರಣೆಮಾಡುವದರಲ್ಲಿಯೇ ನನಗಿರಲಿ! ಆತ್ಮಜ್ಞಾನಿಗಳು ಎಲ್ಲವನ್ನೂ ತ್ಯಜಿಸುವದಕ್ಕೆ ಇದೇ ಕಾರಣ.

ಭಗವಂತನಲ್ಲಿ ಅವ್ಯಭಿಚರಿತವಾದ ಅನನ್ಯಭಕ್ತಿಯನ್ನಿಟ್ಟ ಮಹನೀಯರು ಲೋಕೋತ್ತರಮಾಹಿಮಾವಂತರು. ನಮ್ಮಗಳಿಗೆಲ್ಲ ಅಂಥ ಅಚಲವಾದ ಭಕ್ತಿಯು ದೊರಕದೆ ಇರಬಹುದು. ಭಗವಂತನನ್ನು ನಾವು ನೇರಾಗಿ ಕಂಡಿರುವದಿಲ್ಲ; ಆದ್ದರಿಂದ ಅವನಲ್ಲಿ ಅಂಥ ಭಕ್ತಿಯು ಹುಟ್ಟುವದು ಕಷ್ಟವಾದರೂ ಆದೀತು, ಆದರೆ ಆತನ ಭಕ್ತರು ನಮ್ಮ ಕಣ್ಣು ಮುಂದೆಯೇ ಓಡಾಡುತ್ತಿರುತ್ತಾರೆ. ಅಂಥವರ ಭಕ್ತಿಯನ್ನು ನಾವು ಮೊದಲು ಸಂಪಾದಿಸಿಕೊಳ್ಳಬೇಕು. ಅದು ಅತ್ಯಂತ ಸುಲಭ. ಏಕೆಂದರೆ ಸಾಧುಗಳು ಸರ್ವವನ್ನೂ ಪ್ರೀತಿಸುತ್ತಾರೆ; ಅವರ ದೃಷ್ಟಿಯಲ್ಲಿ ಇಡಿಯ ಬ್ರಹ್ಮಾಂಡವೇ ಭಗವನ್ಮಯವಾಗಿರುತ್ತದೆ. ಅವರನ್ನು ಕಂಡರೆ ಪ್ರೇಮವುಂಟಾಗದಂಥ ಕಠಿನಹೃದಯನು ಯಾವನೊಬ್ಬನೂ ಇಲ್ಲ. ಭಕ್ತರ ಭಕ್ತಿಯು ಮೊದಲಾಗಲಿ; ಭಗವಂತನ ಭಕ್ತಿಯು-ಅರುಣೋದಯವಾದ ಬಳಿಕ ಉಂಟಾಗುವ ಸೂರ್ಯೋದಯದಂತೆ - ತನಗೆ ತಾನೇ ಕಾಣಿಸಿಕೊಳ್ಳುವದು. ಇಂಥ ಅನನ್ಯಭಕ್ತಿಯೇ ಜ್ಞಾನವು; ಈ ಭಕ್ತಿಯಿಲ್ಲದಿದ್ದರೆ ಅಜ್ಞಾನವು. ಆದ್ದರಿಂದ ಜಿಜ್ಞಾಸುಗಳು ಅವ್ಯಭಿಚರಿತವಾದ ಅನನ್ಯಭಕ್ತಿಯನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು.



## ೧೧೦. ಅನನ್ಯಭಕ್ತಿ 13 - (10)

**(2-1-49)**

ಪರಮಾತ್ಮನಲ್ಲಿ ಅವ್ಯಭಿಚರಿತವಾದ ಅನನ್ಯಭಕ್ತಿಯಿರುವದೊಂದು ಜ್ಞಾನಸಾಧನವೆಂದು ಹಿಂದಿನ ದಿನ ಹೇಳಿತ್ತು. ಅದನ್ನು ಕುರಿತು ಇನ್ನೂ ಸ್ವಲ್ಪ ವಿಚಾರಮಾಡತಕ್ಕದ್ದಿದೆ. ಏಕೆಂದರೆ ಪರಮೇಶ್ವರನನ್ನು ಒಲಿಸಿಕೊಂಡ ಸಾಧನವೇ ನಿಜವಾದ ಸಾಧನ, ಅದರಿಂದಲೇ ನಮಗೆ ಪುರುಷಾರ್ಥವು ದೊರಕುತ್ತದೆ.

ಈ ಜಗತ್ತೆಲ್ಲವೂ ಪರಮೇಶ್ವರನ ನಿಯಮಕ್ಕೆ ಒಳಪಟ್ಟಿರುತ್ತದೆ. ಯಾವನು ಆ ನಿಯಮದ ಗುಟ್ಟನ್ನು ಅರಿತು ಅದಕ್ಕೆ ಹೊಂದಿಕೊಳ್ಳುವನೋ ಅವನೇ ಈ ಸಂಸಾರದಲ್ಲಿ ಸುಖವನ್ನು ಹೊಂದುವನು. ಇಲ್ಲದಿದ್ದರೆ ದುಃಖಕ್ಕೆ ಒಳಗಾಗುವನು. ಉದಾಹರಣೆಗೆ ನೋಡಿರಿ. ಬೆಂಕಿಯು ನಮಗೆ ಹಲವು ಕೆಲಸಗಳಿಗೆ ಉಪಯೋಗವಾಗುತ್ತದೆ. ಅದನ್ನು ದಿನದಿನವೂ ನಾವು ಉಪಯೋಗಿಸುತ್ತಿರುವದರಿಂದ ಬೆಂಕಿಯು ನಮ್ಮ ವಶದಲ್ಲಿದೆ ಎಂದು ನಾವು ತಿಳಿದುಕೊಂಡಿರುತ್ತೇವೆ. ಆದರೆ ನಿಜವೇನು? ಬೆಂಕಿಯು ಏನನ್ನು ಸೋಕಿದರೂ ನಿಯಮವಾಗಿ ಸುಡುತ್ತದೆ; ಅದರಿಂದ ವಸ್ತುಗಳಿಗೆ ಶಾಖವು ದೊರಕುತ್ತದೆ. ಬಿಸಿ, ಬೆಳಕು, ಅಡುವಿಕೆ - ಇವುಗಳು ಬೆಂಕಿಯಿಂದ ಆಗುವ ಫಲಗಳು. ಈ ನಿಯಮವನ್ನು ಅರಿತು ಯಾವನು ಅದನ್ನು ಉಪಯೋಗಿಸುತ್ತಾನೋ ಅವನಿಗೆ ಅದು ಬೇಕಾದ ಅನುಕೂಲ್ಯಗಳನ್ನು ಒದಗಿಸಿಕೊಡುತ್ತದೆ. ಬೆಂಕಿಯ ನಿಯಮವನ್ನು ಜನರು ಅನುಸರಿಸಿದರೆ ಪುರುಷಾರ್ಥಪ್ರಾಪ್ತಿಯೇ ಹೊರತು

ಬೆಂಕಿಯೇನೂ ಜನರ ಇಷ್ಟಾನಿಷ್ಟಗಳನ್ನು ಅನುಸರಿಸಿ ಆಗಾಗ್ಗೆ ತನ್ನ ಪ್ರಕೃತಿಯನ್ನು ಮಾರ್ಪಡಿಸುತ್ತಿರುವದಿಲ್ಲ. ಇದರಂತೆ ಗಾಳಿಯ ನಿಯಮವನ್ನೂ ಅರಿಯಬೇಕು. ಅದರಿಂದ ನಮಗೆ ಯಾವದಾದರೂ ಉಪಯೋಗವಾಗಬೇಕಾದರೆ ನಾವು ಅದರ ನಿಯಮಗಳನ್ನು ಅರಿತುಕೊಂಡು ಅವಕ್ಕೆ ಹೊಂದಿಕೊಂಡೇ ನಡೆಯಬೇಕು. ಹೀಗೆಯೇ ಸರ್ಕಾರದಲ್ಲಿ ನಮಗೆ ದೊರೆತಿರುವ ಸ್ವಾತಂತ್ರ್ಯವೂ ಸುಖದಾಯಕವಾಗುವದಕ್ಕೆ ಪ್ರಜೆಗಳ ಹೊಣೆಗಾರಿಕೆಯನ್ನೂ ರಾಜ್ಯಾಂಗರಚನೆಯ ನಿಯಮಗಳನ್ನೂ ನಾವು ಅರಿತುಕೊಂಡು ನಡೆಯುವದು ಅವಶ್ಯವಾಗಿ ಬೇಕು. ಗಂಗೆಯ ನೀರನ್ನು ಭೌತಿಕಜ್ಞಾನಿಗಳು ಪ್ರಯೋಗಗಳಿಂದ ಪರೀಕ್ಷಿಸಿ ತಮ್ಮ ಅಭಿಪ್ರಾಯವನ್ನು ಕೊಡುತ್ತಿರುವರಾದರೂ ಗಂಗೆಯು ನಿಜವಾಗಿ ವಿಷ್ಣುಪಾದದಿಂದ ಉದ್ಭವಿಸಿರುವ ಗಂಗೆಯೇ. ಕೆಲವು ನಿಯಮಗಳನ್ನನುಸರಿಸಿಯೇ ಗಂಗೆಯ ನೀರು ಇರುತ್ತದೆ: ಆದ್ದರಿಂದ ಅದರಲ್ಲಿ ಕೆಲವು ವಿಶೇಷಗುಣಗಳು ಕಂಡುಬರುತ್ತವೆ.

ಇವೆಲ್ಲ ಭೌತಿಕವಿಚಾರದ ದೃಷ್ಟಾಂತಗಳು. ಅಧ್ಯಾತ್ಮಸಾಧನಗಳಲ್ಲಿಯೂ ಹೀಗೆಯೇ ನಾವು ಕೆಲವು ನಿಯಮಗಳಿಗೆ ಒಳಪಟ್ಟೇ ಅಭ್ಯಾಸಮಾಡಬೇಕಾಗಿರುತ್ತದೆ. ಅಮಾನಿತ್ವಾದಿಸಾಧನಗಳನ್ನು ಪ್ರಯೋಗಿಸುವ ಸ್ವಾತಂತ್ರ್ಯವು ನಮಗೆಲ್ಲ ಇದ್ದರೂ ಈ ನಿಯಮಗಳಿಗೆ ಒಳಪಟ್ಟ ಸ್ವಾತಂತ್ರ್ಯವೇ ಅದು. ಈ ಸಾಧನಗಳೆಲ್ಲವೂ ಈಶ್ವರನ ಅನುಗ್ರಹದಿಂದಲೇ ನಮಗೆ ಅಳವಡಬೇಕಾಗಿರುತ್ತದೆ. ಏಕೆಂದರೆ ನಮ್ಮ ಅಂತಃಕರಣದ ಭಾವಗಳು ಆ ಭಗವಂತನ ಕಟ್ಟಳೆಗೆ ಒಳಪಟ್ಟೇ ನಮ್ಮ ಅಂತಃಕರಣದಲ್ಲಿ ಮೊಳೆಯುವವು, ಬೆಳೆಯುವವು, ಸಫಲವಾಗುವವು. ಆದ್ದರಿಂದಲೇ ಅಮಾನಿತ್ವಾದಿಗಳನ್ನು ಮಾಡುವಾಗಲೂ ಭಗವದ್ಭಕ್ತಿಯನ್ನು ಅಭ್ಯಾಸಮಾಡುತ್ತಿರಬೇಕೆಂದು ನಾವು ಹಿಂದೆ ಹೇಳಿರುವದು. ಭಗವದ್ಭಕ್ತಿಗೆ ಸಂಬಂಧಪಡದ ಅಮಾನಿತ್ವಾದಿಗಳು ಅಮಾನಿತ್ವವೇ ಮುಂತಾದ ಹೆಸರಿಗೆ ಅರ್ಹವಲ್ಲ. ಯಾವ ಸಾಧನವನ್ನು ಮಾಡಿದರೂ ಇದರಲ್ಲಿ ನನ್ನದೇನೂ ಇಲ್ಲ ; ಆ ಪರಮೇಶ್ವರನ ಅನುಗ್ರಹದಿಂದಲೇ ನಾನು ಸಾಧನವನ್ನು ಮಾಡುತ್ತಿದ್ದೇನೆ ; ಆತನೇ ಇದನ್ನು ಕೊನೆಮುಟ್ಟಿಸಿಕೊಡಬೇಕು - ಎಂದು ದೃಢವಾಗಿ ನಂಬಿರಬೇಕು. ಯಾವ ಸಾಧನವನ್ನು ಮಾಡಿದರೂ ಅಹಂಕಾರಕ್ಕೆ ಎಡೆಗೊಡಬಾರದು. ಬಲ್ಲವರು ಅಹಂಕಾರವನ್ನು ಹೀಗೆಂದು ವರ್ಣಿಸಿರುತ್ತಾರೆ.

ಬ್ರಹ್ಮಾನಂದನಿಧಿರ್ಮಹಾಬಲವತಾಹಙ್ಕಾರಘೋರಾಹಿನಾ ।
ಸಂವೇಷ್ಟ್ಯಾತ್ಮನಿ ರಕ್ಷ್ಯತೇ ಗುಣಮಯೈಶ್ಚಣ್ಡೈಸ್ತ್ರಿಭಿರ್ಮಸ್ತಕೈಃ ॥
ವಿಜ್ಞಾನಾಖ್ಯಮಹಾಸಿನಾ ದ್ಯುತಿಮತಾ ವಿಚ್ಛಿದ್ಯ ಶೀರ್ಷತ್ರಯಂ ।
ನಿರ್ಮೂಲ್ಯಾಹಿಮಿಮಂ ನಿಧಿಂ ಸುಖಕರಂ ಧೀರೋಽನುಭೋಕ್ತುಂ ಕ್ಷಮಃ ॥

'ಬ್ರಹ್ಮಾನಂದವೆಂಬ ನಿಧಿಯನ್ನು ಅಹಂಕಾರವೆಂಬ ಭಯಂಕರಸರ್ಪವು ಸುತ್ತಿಕೊಂಡು ಕಾಪಾಡುತ್ತಿರುವದು. ಆ ಸರ್ಪನಿಗೆ ಗುಣತ್ರಯವೆಂಬ ಮೂರು ಹೆಡೆಗಳಿರುವವು. ವಿಜ್ಞಾನವೆಂಬ

ಹೊಳೆಯುವ ದೊಡ್ಡ ಕತ್ತಿಯಿಂದ ಆ ಸರ್ಪದ ಮೂರು ತಲೆಗಳನ್ನು ಕತ್ತರಿಸಿ, ಆ ಸರ್ಪವನ್ನು ನಾಶಗೊಳಿಸಿ ಸುಖಕರವಾದ ನಿಧಿಯನ್ನು ಅನುಭವಿಸುವದಕ್ಕೆ ಧೀರನಾದವನೇ ಶಕ್ತನು ! ಅಹಂಕಾರವನ್ನು ಜ್ಞಾನದಿಂದ ಕತ್ತರಿಸುವೆನೆಂದು ಯಾವನಾದರೂ ಈಗಲೇ ಹೆಮ್ಮೆಯಿಂದ ಹೊರಟರೆ ಅದು ತನ್ನ ಮೂರು ಹೆಡೆಗಳಿಂದಲೂ ಅಪ್ಪಳಿಸಿ ಕೆಡಹುವದು ಖಂಡಿತ. ಆದರೆ ಅನನ್ಯಭಕ್ತಿಯೆಂಬ ಉಪಾಯವು ಅದರ ಅಂಜಿಕೆಯೇ ಇಲ್ಲದಂತೆ ಮಾಡಿಬಿಡುತ್ತದೆ.

ಭಕ್ತಿಯೆಂದರೆ ಪ್ರೇಮವು. ಭಗವಂತನಲ್ಲಿ ಪ್ರೇಮವು ಅನನ್ಯವಾಗಿರುವಂತೆ ಅವ್ಯಭಿಚಾರಿಯಾಗಿಯೂ ಇರಬೇಕು. ಆಗಲೇ ಇದನ್ನು ಐಕಾಂತಿಕ ಪರಮಭಕ್ತಿ ಎಂದು ಕರೆಯುತ್ತಾರೆ. ಶ್ರೀರಾಮಾನುಜಾಚಾರ್ಯರ ಅನುಯಾಯಿಗಳು 'ಭರನ್ಯಾಸ' ಎಂಬ ಶಬ್ದದಿಂದ ಕರೆಯುವ ಸಾಧನವನ್ನು ನಾವೆಲ್ಲರೂ ಮನದಂದುಕೊಳ್ಳಬೇಕು. ಭಗವಂತನ ಮೇಲೆ ಎಲ್ಲಾ ಭಾರವನ್ನೂ ಹಾಕಿ, ನಮ್ಮ ಅಧ್ಯಾತ್ಮಸಾಧನಗಳನ್ನು ಅನುಷ್ಠಾನಮಾಡುವದನ್ನು ಕಲಿಯಬೇಕು. ನಮಗೆ ಏನಾದರೂ ಕಷ್ಟವೊದಗಿದಾಗ ದೇವರಲ್ಲಿ ಮೊರೆಯಿಡುವದೂ ಸ್ವಲ್ಪಮಟ್ಟಿಗೆ ಆ ಕಷ್ಟವು ಮರೆಯಾದರೆ ದೇವರನ್ನು ಮರೆತುಬಿಡುವದೂ ಭಕ್ತಿಯೇ ಅಲ್ಲ ; ಇನ್ನು ಅದು ಅನನ್ಯ-ಅವ್ಯಭಿಚಾರಿಣಿಯಾದ ಭಕ್ತಿಯೆನಿಸುವದು ಹೇಗೆ ? ಈ ವಿಷಯಕ್ಕೆ ಒಂದು ಕಥೆಯನ್ನು ದೃಷ್ಟಾಂತವಾಗಿ ಹೇಳುತ್ತಾರೆ. ಒಬ್ಬ ಚಿಕ್ಕ ಹುಡುಗಿಗೆ ಅವಳ ಅಜ್ಜಿ ದೇವರ ವಿಷಯವನ್ನು ಆಗಾಗ್ಗೆ ಹೇಳುತ್ತಿದ್ದಳು. 'ನಿನಗೆ ಏನಾದರೂ ಸಂಕಟವು ಪ್ರಾಪ್ತವಾದರೆ ಬಳಿಯಲ್ಲಿ ಯಾರೊಬ್ಬರೂ ಇಲ್ಲದಿದ್ದರೂ ಭಗವಂತನು ಹತ್ತಿರವೇ ಇರುತ್ತಾನೆ. ಅವನಿಗೆ ಮೊರೆಯಿಟ್ಟರೆ ಎಲ್ಲಾ ಕಷ್ಟಗಳಿಂದಲೂ ಪಾರುಮಾಡುತ್ತಾನೆ' - ಎಂದು ಆ ಮುದುಕಿ ಹೇಳುತ್ತಿದ್ದಳು. ಒಂದು ದಿನ ಮನೆಯಲ್ಲಿ ಯಾರೂ ಇಲ್ಲ. ಎಲ್ಲರೂ ಎಲ್ಲಿಗೋ ಹೊರಟುಹೋಗಿರುತ್ತಾರೆ. ಹುಡುಗಿಯೊಂದೇ ಇದೆ. ಕತ್ತಲೆಯಾಗುತ್ತಲೂ ಬಂದಿದೆ. ಈಗ ಆ ಹುಡುಗಿಗೆ ಸ್ವಲ್ಪ ಅಂಜಿಕೆಯಾಯಿತು. ಕೂಡಲೇ ಅವಳು ಅಜ್ಜಿಯ ಉಪದೇಶವನ್ನು ನೆನಪಿಗೆ ತಂದುಕೊಂಡಳು. "ದೇವ, ನಾನು ಇಲ್ಲಿ ಒಂಟಿಯಾಗಿದ್ದೇನೆ. ಇನ್ನೂ ಹುಡುಗಿ ; ನನಗೆ ಹೆದರಿಕೆಯಾಗಿದೆ ಎಂಬುದು ನಿನಗೆ ತಿಳಿಯದೆ ಇಲ್ಲ. ಸಂಕಟವು ಬಂದಾಗ ನೀನೇ ಕಾಪಾಡುವವನು ಎಂದು ನಮ್ಮ ಅಜ್ಜಿ ಹೇಳುತ್ತಲೇ ಇರುತ್ತಾಳೆ. ಇಗೊ, ನಾನು ನಿನ್ನನ್ನು ಬೇಡಿಕೊಳ್ಳುತ್ತೇನೆ. ದಯವಿಟ್ಟು ಈ ಸಮಯದಲ್ಲಿ ನನ್ನನ್ನು ಕಾಪಾಡಬೇಕು" ಎಂದು ಕೇಳಿಕೊಂಡಳು. ಇಷ್ಟರಲ್ಲಿ ಅಜ್ಜಿಯೇ ಬಂದುಬಿಟ್ಟಳು. ಹುಡುಗಿಯು 'ದೇವ, ಇನ್ನೇನೂ ನೀನು ತೊಂದರೆ ತೆಗದುಕೊಳ್ಳಬೇಕಾದದ್ದಿಲ್ಲ; ಇಗೊ, ನಮ್ಮ ಅಜ್ಜಿ ಬಂದುಬಿಟ್ಟಳು. ಇದುವರೆಗೆ ನಿನಗೆ ಮೊರೆಯಿಟ್ಟು ಪೀಡಿಸಿದ್ದಕ್ಕೆ ಕ್ಷಮೆಬೇಡುತ್ತೇನೆ' ಎಂದಳಂತೆ ! ನಮ್ಮಲ್ಲಿ ಅನೇಕರ ಭಕ್ತಿಯು ಈ ಜಾತಿಗೆ ಸೇರಿದ್ದಾಗಿರುತ್ತದೆ. ನಮಗೇನಾದರೂ ಕಷ್ಟವಾಗಿದ್ದರೆ ಆಗ ದೇವರು ಬೇಕು; ಬಾಕಿಯ ಹೊತ್ತಿನಲ್ಲಿ ಬೇಡ ! ಇದು ಅನನ್ಯಭಕ್ತಿಯಲ್ಲ ಅವ್ಯಭಿಚರಿತಪ್ರೇಮವಂತೂ ಅಲ್ಲವೇ ಅಲ್ಲ.

ಪರಮೇಶ್ವರನೇ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿರಬೇಕು. ಜ್ಞಾನಕ್ಕಾಗಿ ಮಾಡುವ ಅಧ್ಯಾತ್ಮಸಾಧನಗಳಂತಿರಲಿ, ನಮ್ಮ ವ್ಯಾವಹಾರಿಕಕಾರ್ಯಗಳೆಲ್ಲಾ ಆತನದೇ ಕೈವಾಡವಿರುವದೆಂಬುದನ್ನು ನಾವು ದೃಢವಾಗಿ ನಂಬಬೇಕು, ಆತನಿಂದಲೇ ನಮ್ಮೆಲ್ಲರ ಪ್ರವೃತ್ತಿಯು ಸಾಗಿರುವದು, ಆತನಿಂದಲೇ ನಮ್ಮ ಇರವೆಲ್ಲವೂ ಪ್ರಾಪ್ತವಾಗಿರುವದು. ನಮ್ಮ ವ್ಯವಹಾರವೆಲ್ಲವೂ ಆತನ ಬಲದಿಂದಲೇ ಸಾಗುತ್ತಿರುವದು, ನಮ್ಮ ಪ್ರಯತ್ನಗಳೆಲ್ಲವೂ ಆತನ ಅನುಗ್ರಹದಿಂದಲೇ ಸಫಲವಾಗುತ್ತಿರುವುದು - ಎಂಬ ಗಟ್ಟಿಯಾದ ನಂಬಿಕೆಯು ನಮ್ಮಲ್ಲಿ ಬೇರುಬಿಟ್ಟುಕೊಂಡಹೊರತು ಭಕ್ತಿಯ ಸುಳಿವು ನಮ್ಮ ಕಡೆಗೆ ಬರುವುದಿಲ್ಲ. ಹಿಂದಿನ ಕಾಲದಲ್ಲಿ ನಮ್ಮ ಜನರಲ್ಲಿ ಈ ನಂಬಿಕೆಯು ಎಷ್ಟರಮಟ್ಟಿಗೆ ಬಲವಾಗಿತ್ತೆಂಬ ಬಗ್ಗೆ ನಾಸ್ತಿಕ್ಯವು ತಲೆದೋರುತ್ತಿರುವ ಈ ಕಾಲದಲ್ಲಿಯೂ ನಮ್ಮಗಳಲ್ಲಿರುವ ಆಚರಣೆಯಿಂದ ಊಹಿಸಿಕೊಳ್ಳಬಹುದಾಗಿದೆ. ಪೈಲುವಾನರು ತಮ್ಮ ಸಾಹಸವನ್ನು ತೋರಿಸುವಾಗ ಈ ಸ್ಮರಣೆಯ ಸೂಚಕವಾಗಿ ಸಲಾಮುಮಾಡಿ ಕೌಶಲ ಪ್ರದರ್ಶನವನ್ನು ಆರಂಭಿಸುವರು ; ಮರಹತ್ತುವವರು ಮರದ ಅಭಿಮಾನಿಯಾದ ದೇವರಿಗೆ ಕೈಮುಗಿದು ಹತ್ತುವರು ; ಬಡಗಿ, ಅಕ್ಕಸಾಲೆ - ಮುಂತಾದವರು ತಮ್ಮ ತಮ್ಮ ಆಯುಧಗಳ ಅಭಿಮಾನಿದೇವರುಗಳನ್ನು ಸ್ಮರಿಸಿ ನಮಸ್ಕರಿಸಿಯೇ ಉದ್ಯೋಗವನ್ನು ಆರಂಭಿಸುವರು. ಗ್ರಂಥಗಳನ್ನಾಗಲಿ ಯೋಗಕ್ಷೇಮದ ಕಾಗದಗಳನ್ನಾಗಲಿ ಬರೆಯುವವರು ತಮ್ಮ ತಮ್ಮ ಇಷ್ಟದೇವತೆಯನ್ನು ನಮಸ್ಕರಿಸಿದ ಮೇಲೆಯೇ ಅಥವಾ ನಾಮಸ್ಮರಣೆಮಾಡಿದ ಮೇಲೆಯೇ ಆಯಾ ಕಾರ್ಯವನ್ನು ಮೊದಲುಮಾಡುವರು. ಒಟ್ಟಿನಲ್ಲಿ ಯಾವ ಕಾರ್ಯವನ್ನೇ ಪ್ರಾರಂಭಿಸಲಿ, 'ನಾನು' ಎಂದರೆ ಬಿದ್ದ, ಪರಮೇಶ್ವರನನ್ನು ನಂಬಿದವನೇ ಗೆದ್ದ. ನಮ್ಮ ಕಾವ್ಯಗಳಲ್ಲಿರುವಂತೆ ಪುರಾಣಗಳಲ್ಲಿ ರಾವಣದುರ್ಯೋಧನಾದಿಗಳು ಅಹಂಕಾರದಿಂದಲೇ ಸೋಲನ್ನು ಪಡೆದರೆಂದೂ ಭಕ್ತರುಗಳು ಎಂದೆಂದಿಗೂ ಜಯಶೀಲರಾಗಿ ಇಹಪರಸುಖಗಳನ್ನು ಪಡೆದರೆಂದೂ ವರ್ಣಿಸಿರುವದರ ರಹಸ್ಯವೇ ಇದು.

ಭಗವಂತನ ಕೋಶವು ಎಂದಿಗೂ ಬರಿದಾಗುವದಲ್ಲ; ಆತನ ದಯೆಯು ಅಪಾರವಾಗಿರುತ್ತದೆ, ಸರ್ವರಲ್ಲಿಯೂ ಸಮಾನವಾಗಿರುತ್ತದೆ - ಎಂದು ಗುರುಹಿರಿಯರು ಹೇಳುತ್ತಿದ್ದಾರೆ. ಇದಕ್ಕೆ ದೃಢವಿಶ್ವಾಸವು ಬೇಕು, ಹೃದಯವನ್ನು ಅರಳಿಸಿಕೊಳ್ಳುವದು ಬೇಕು; ; ಬರಿಯ ಮೆದುಳಿನ ಶಕ್ತಿಯನ್ನು ಉಪಯೋಗಿಸಿಕೊಂಡು ಪ್ರಯೋಜನವಿಲ್ಲ. ಒಂದು ಕಲ್ಪಿತಾಖ್ಯಾನವನ್ನು ಹೇಳುತ್ತಾರೆ. ಒಮ್ಮೆ ಒಬ್ಬ ದೇವರ ಪೂಜಾರಿ ದೇವರಗುಡಿಯಲ್ಲಿಯೇ ಮಲಗಿಕೊಂಡುಬಿಟ್ಟನಂತೆ ; ವಿಭೀಷಣನ ಆಜ್ಞೆಯಿಂದ ಬಂದ ಒಬ್ಬ ರಾಕ್ಷಸನು ದೇವರ ನಿರ್ಮಾಲ್ಯವನ್ನು ಎತ್ತಿ ಬಟ್ಟೆಯಲ್ಲಿ ಕಟ್ಟುವಾಗ ಅವನನ್ನೂ ಸೇರಿಸಿಕೊಂಡು ಲಂಕೆಗೆ ಹೋದನಂತೆ. ಲಂಕೆಯಲ್ಲಿ ಪೂಜಾರಿಗೆ ಎಚ್ಚರವಾಯಿತು. ಭಯಭರಿತನಾಗಿ ನಡುಗುತ್ತಿದ್ದ ಅವನನ್ನು ವಿಭೀಷಣನು ಸಮಾಧಾನಗೊಳಿಸಿ ಅವನಿಗೆ ಲಂಕಾಪಟ್ಟಣದ ಐಶ್ವರ್ಯವನ್ನೆಲ್ಲ ತೋರಿಸಿ

ಅನರ್ಘ್ಯವಾದ ಕೆಲವು ವಸ್ತುಗಳನ್ನೂ ಕೊಟ್ಟು ಅವನಿಗೆ ಕಣ್ಣು ಮುಚ್ಚಿಕೊಳ್ಳುವಂತೆ ಹೇಳಿದನಂತೆ. ಅವನ ವಸ್ತ್ರದ ಕೊನೆಯಲ್ಲಿ ಒಂದು ಗಂಟುಹಾಕಿ "ಇದನ್ನು ಹಿಡಿದುಕೊಂಡಿರು ನೀನು ಸಮುದ್ರದಲ್ಲಿ ಕೂಡ ಮುಳುಗದೆ ಮುಂದಕ್ಕೆ ನಡೆಯಬಹುದು' ಎಂದು ಹೇಳಿ ಕಳುಹಿಸಿಬಿಟ್ಟನಂತೆ. ಪೂಜಾರಿಯು ಸಮುದ್ರದ ಮೇಲೆ ಸಲೀಸಾಗಿ ನಡೆಯುತ್ತಾ ಅರ್ಧದಾರಿ ಮುಗಿಸಿದನು. ಅಷ್ಟರಲ್ಲಿ ಅವನನ್ನೊಂದು ಕುತೂಹಲವು ಆವರಿಸಿಕೊಂಡಿತು. 'ನೀರಿನಲ್ಲಿಯೂ ನಾನು ಮುಳುಗದಿರುವಂತೆ ವಿಭೀಷಣನು ನನ್ನ ವಸ್ತ್ರದಲ್ಲಿ ಯಾವ ರಹಸ್ಯವನ್ನಿಟ್ಟಿದ್ದಾನೆ ? ಇದನ್ನು ತಿಳಿದುಕೊಂಡುಬಿಡಬೇಕು !' ಎಂದು ಅವನು ಸೆರಗಿನ ಗಂಟನ್ನು ಬಿಚ್ಚಿದನು. ನೋಡುತ್ತಾನೆ ಅದರಲ್ಲೊಂದು ಚೀಟಿಯಿದೆ ! ಅದನ್ನು ಬಹಳಸಂಭ್ರಮದಿಂದ ಬಿಚ್ಚಿನೋಡಿದನು. ಅದರಲ್ಲಿ 'ರಾಮ !' ಎಂಬ ನಾಮವನ್ನು ಬರೆದಿತ್ತು. ಪೂಜಾರಿಯು "ಅಯ್ಯೋ, ಇಷ್ಟೇಯೆ!" ಎಂದನು ; ಕೂಡಲೆ 'ಡುಮ್!' ಎಂದು ಸಮುದ್ರದಲ್ಲಿ ಮುಳುಗಿಕೊಂಡುಬಿಟ್ಟನು ! ಪರಮೇಶ್ವರನನ್ನು ನಂಬಿರುವ ಭಕ್ತರಿಗೂ ಲೌಕಿಕೋಪಾಯಗಳಿಂದ ತಮ್ಮ ಇಷ್ಟಾರ್ಥವನ್ನು ಸಾಧಿಸಿಕೊಳ್ಳುವೆವೆಂಬ ವ್ಯಾವಹಾರಿಕರಿಗೂ ಇರುವ ತಾರತಮ್ಯವು ಇಲ್ಲಿ ಗೊತ್ತಾಗುವಂತಿದೆ. ನಾವು ನಮ್ಮ ನಮ್ಮ ಕೆಲಸಗಳಿಂದ ನಮ್ಮ ಇಷ್ಟವಾದ ಫಲಗಳನ್ನು ಈಡೇರಿಸಿಕೊಳ್ಳುವೆವೆಂದು ನಂಬಿರುತ್ತೇವೆ. ಆದ್ದರಿಂದ ಈ ಕೆಲಸಗಳನ್ನು ಎಷ್ಟು ಶ್ರಮದಿಂದ ಮಾಡಿದರೆ ಫಲವೂ ಅಷ್ಟುಮಟ್ಟಿಗೆ ನೆರವೇರುವದೆಂದು ನಾವು ನಂಬಿರುತ್ತೇವೆ. ಆದರೆ ನಿಜವೇನು? ಆ ಭಗವಂತನ ದಯೆಯೇ ಈ ಸಂಸಾರಸಾಗರದಲ್ಲಿ ನಮ್ಮನ್ನು ತೇಲಿಸುತ್ತಿರುವದು. ನಮ್ಮ ನಮ್ಮ ಬಲವನ್ನೂ ಪ್ರಯತ್ನವನ್ನೂ ನಾವು ನಂಬಿದಾಗ ಅಷ್ಟಷ್ಟು ಆಳಕ್ಕೆ ಈ ಸಾಗರದಲ್ಲಿ ಮುಳುಗಿರುವೆವು!

ಈ ಪ್ರಪಂಚದಲ್ಲಿ ನಮಗೆ ಬೇಕಾದ ಆನುಕೂಲ್ಯಗಳನ್ನೆಲ್ಲ ಭಗವಂತನು ಕೊಟ್ಟಿರುತ್ತಾನೆ. ನಾವು ಸತ್ಪ್ರಯತ್ನದಿಂದ ಅದನ್ನು ಪಡೆದುಕೊಳ್ಳಬೇಕು. ನಮ್ಮ ಎದುರಿಗೇ ಹಣದ ಗಂಟು ಬಿದ್ದಿದ್ದರೂ ಕಣ್ಣುಬಿಟ್ಟಮೇಲೆಯೇ ಅದು ಕಾಣಿಸುವಂತೆ ಈಶ್ವರನ ಭಕ್ತಿಯಿಂದ ಕಣ್ಣುಬಿಟ್ಟು ನೋಡಿದಮೇಲೆ ಈ ಪ್ರಪಂಚದಲ್ಲಿ ನಮಗೆ ಬೇಕಾದ ಇಷ್ಟಸಾಧನಗಳು ಕಾಣಿಸಿಕೊಳ್ಳುವವು. ಈಶ್ವರಭಕ್ತಿಯೆಂಬುದೇನೂ ಕಷ್ಟವಲ್ಲ ; ಕಣ್ಣುಬಿಟ್ಟು ನೋಡುವಷ್ಟೇ ಸುಲಭವದು. ಆದರೆ ಅದರ ಮರ್ಮವನ್ನು ಬಲ್ಲವರಿಂದ ತಿಳಿದುಕೊಳ್ಳಬೇಕು. ಹಣ, ಹೊಲ, ಮನೆ, ಹೆಂಡಿರುಮಕ್ಕಳು, ಹೆಸರುವಾಸಿ - ಮುಂತಾದವುಗಳಲ್ಲಿ ನಮ್ಮಲ್ಲಿ ಒಬ್ಬೊಬ್ಬರಿಗೆ ಒಂದೊಂದರಲ್ಲಿ ಮನಸ್ಸು ನಿಂತುಬಿಟ್ಟಿರುತ್ತದೆ. ನಾವು ಎಲ್ಲಿಗೆ ಹೋದರೂ ಕುಳಿತಾಗ, ನಿಂತಾಗ, ಮಲಗಿದಾಗ, ಊಟಮಾಡುವಾಗ, ಉದ್ಯೋಗವನ್ನು ಮಾಡುವಾಗ - ಎಂದೆಂದಿಗೂ ತಪ್ಪದೆ ನಮ್ಮ ಮನಸ್ಸು ಆಯಾ ವಸ್ತುವಿನಲ್ಲಿ ಕುಳಿತುಬಿಟ್ಟಿರುತ್ತದೆ. ನಮ್ಮ ಮನಸ್ಸಿಗೂ ಆಯಾ ಪದಾರ್ಥಕ್ಕೂ ಮೊಳೆ ಬಡಿದಂಥ ಗಟ್ಟಿಯಾದ ಸಂಬಂಧವು ಆಗಿಬಿಟ್ಟಿರುತ್ತದೆ. ಹೀಗೆ ಭಗವಂತನಲ್ಲಿಯೇ ಅನನ್ಯವಾಗಿ ಪ್ರೇಮವು ನೆಟ್ಟುಕೊಳ್ಳಬೇಕು. ಪುರಂದರದಾಸರಿಗೆ ಮೊದಲು ಹಣದಮೇಲೆ ಅತ್ಯಂತವಾದ ಪ್ರೇಮವಿತ್ತು ; ಕೊನೆಗೆ ನಿಮಿತ್ತವಿಶೇಷದಿಂದ ಅವರಿಗೆ ಅದರಲ್ಲಿ ಅಸಾರತಾಬುದ್ಧಿಯುಂಟಾಯಿತು.

ಮೊದಲು ಸವಕಲು ದುಡ್ಡುಗಳನ್ನೆಲ್ಲ ಒಂದು ಬೇರೆಯ ಚೀಲದಲ್ಲಿ ಹಾಕಿ ಇಟ್ಟುಕೊಂಡಿದ್ದರಂತೆ; ಅದನ್ನೇ ವ್ಯವಹಾರದಲ್ಲಿ ಮೊದಲು ಉಪಯೋಗಿಸುವದಕ್ಕೆ ಪ್ರಯತ್ನಿಸುತ್ತಿದ್ದರಂತೆ. ಆದರೆ ಅವರಿಗೆ ವೈರಾಗ್ಯವು ಪ್ರಾಪ್ತವಾಗಿ ಭಗವಂತನ ಪ್ರೇಮವು ಅಂಕುರಿಸಲು ಹೊರಕ್ಕೆ ಬಂದು ಹೊಸ್ತಿಲಮೇಲೆ ತುಳಸಿಯ ದಳವನ್ನಿಟ್ಟು ನೀರುಬಿಟ್ಟು ಕದವನ್ನು ಹಾರಹೊಡೆದು ಹಾಗೆಯೇ ಹೊರಟೇಬಿಟ್ಟರು ! ಈ ಸಂಸಾರದಲ್ಲಿ ಭಗವಂತನೇ ಸಾರವೆಂದು ತಿಳಿದ ಮಹಾತ್ಮರಿಗೆ ಇಂಥ ಅನನ್ಯಭಕ್ತಿಯು ಉದ್ಭವಿಸುವದು !

ಯೋಗವನ್ನು ಮಾಡಲಿ, ಕರ್ಮವನ್ನು ಮಾಡಲಿ, ಜ್ಞಾನವನ್ನು ಸಂಪಾದಿಸಲಿ - ಭಗವದ್ಭಕ್ತಿಯೇ ಅವುಗಳ ಸಾರವಾಗಿರುವದು. ಭಕ್ತಿಯಿಲ್ಲದ್ದು ಯೋಗವಲ್ಲ, ಕರ್ಮವಲ್ಲ, ಜ್ಞಾನವೂ ಅಲ್ಲ. ಈ ರಹಸ್ಯವು ನಮ್ಮ ಮನಸ್ಸಿಗೆ ಹೊಳೆಯಬೇಕು. ಭಗವದ್ಭಕ್ತಿಗಿಂತ ಹೆಚ್ಚಿನ ಆನಂದಹೇತು ಎಲ್ಲಿಯೂ ಇಲ್ಲ ಎಂಬ ತತ್ತ್ವವನ್ನು ಮುಚ್ಚಿ ನಮಗೆ ವ್ಯವಹಾರದಲ್ಲಿಯೇ ಆಸಕ್ತಿಯು ಹೆಚ್ಚಾಗುವಂತೆ ಮಾಡುವದು ನಮ್ಮ ಅಹಂಕಾರವು, ಮಮಕಾರವು. ಹೆಂಡತಿಯ ಮಾತನ್ನು ಕೇಳುವ ಯಜಮಾನನು ಆಳುಕಾಳುಗಳನ್ನಾಗಲಿ ನೆಂಟರಿಷ್ಟರನ್ನಾಗಲಿ ನಂಬದೆ ಇರುವಂತೆ ಅಹಂಕೃತಿಗೆ ವಶನಾಗಿರುವವನು ಭಗವದ್ವಿಚಾರಕ್ಕೆ ಎಂದಿಗೂ ಮನವೊಲಿಯದೆ ಇರುತ್ತಾನೆ. ಈ ಅಹಂಕಾರಮಮಕಾರಗಳಿರುವವರೆಗೆ ನಮಗೆ ದುಃಖಕರವಾದ ಸಂಸಾರವೂ ಸುಖಮಯವಾಗಿ ತೋರುತ್ತಿರುವದು. ಈಶ್ವರಭಕ್ತಿಯಿಂದಲೇ ನಮ್ಮ ಚಿತ್ತದೋಷವೆಲ್ಲ ತೊಲಗಬೇಕು ; ಪರಮಪುರುಷಾರ್ಥದಲ್ಲಿ ಆಸೆಯು ಅಂಕುರಿಸಬೇಕು. ನಿಜವಾದ ಆನಂದದ ಸವಿಯು ಕಾಣುವದಕ್ಕೆ ಮೊದಲಾಗಬೇಕು. ಆ ಭಗವಂತನ ದಯೆಯಿಂದ ನಮ್ಮೆಲ್ಲರಿಗೂ ಭಕ್ತಿಯ ಕಡೆಗೆ ಒಲವು ಉಂಟಾಗಲಿ !

## ೧೧೧. ವಿವಿಕ್ತದೇಶಸೇವಿತ್ವ 13 - (10)

**(9-1-49)**

ಹಿಂದಿನ ದಿನ ಅನನ್ಯಭಕ್ತಿಯ ವಿಚಾರವಾಗಿ ಮಾತನಾಡಿರುತ್ತೇನೆ. ಅದು ಸರ್ವಕ್ಕೂ ಸಾರವಾದದ್ದು. ಭಕ್ತಿ ಎಂಬ ಸಾಧನವನ್ನು ಪಟ್ಟಿಯಲ್ಲಿ ನಡುವೆ ಹೇಳಿದ್ದರೂ ಹಿಂದಕ್ಕೂ ಮುಂದಕ್ಕೂ ಹೇಳಿರುವ ಸಾಧನಗಳಿಗೆಲ್ಲ ಹೊಂದಿಸಿಕೊಳ್ಳಬೇಕು. ಇಂದಿನ ವಿಚಾರದ ವಿಷಯವು ವಿವಿಕ್ತದೇಶಸೇವಿತ್ವವು. ಇದಕ್ಕೂ ಅನನ್ಯಭಕ್ತಿಯನ್ನು ಸೇರಿಸಿಕೊಂಡೇ ವಿಚಾರಮಾಡಬೇಕು. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ವಿಷಯವಿಮರ್ಶೆಗೆ ಹೋಗೋಣ.

ಭಗವಂತನು ಜಗತ್ತನ್ನು ಸೃಷ್ಟಿಸುವಾಗ ಮೊದಲು ವಿರಾಟ್ಪುರುಷನನ್ನು ಸೃಷ್ಟಿಸಿದನಂತೆ. ಆಗ ಆ ವಿರಾಟ್ಪುರುಷನು ತಾನೊಬ್ಬನೇ ಇದ್ದದ್ದರಿಂದ ಅವನಿಗೆ ಭಯವಾಯಿತಂತೆ. ಅವನು

ಕೂಡಲೆ ಮನಸ್ಸಿನಲ್ಲಿ ಹೀಗೆಂದು ಯೋಚಿಸಿಕೊಂಡನು: `ನಾನು ಒಬ್ಬನೇ ಇದ್ದೇನೆ; ಆದರೂ ನನಗೆ ಭಯವಾಗುತ್ತಿದೆಯಲ್ಲ! ಒಬ್ಬನೇ ಇರುವಾಗ ಯಾರಿಗೆ ಹೆದರಬೇಕು ?' ಹೀಗೆಂಬ ಯೋಚನೆ ಮನಸ್ಸಿಗೆ ಬಂತೋ ಇಲ್ಲವೋ, ಕೂಡಲೆ ಅವನ ಅಂಜಿಕೆಯು ಅತ್ತಲಾಯಿತು. ವಿರಾಟ್ಪುರುಷನು ಕಲ್ಪದ ಆದಿಯಲ್ಲಿ ಹುಟ್ಟಿ ಮುಂದಿನ ಸೃಷ್ಟಿಗೆ ಕಾರಣನಾಗುತ್ತಾನೆ. ಅಂಥ ಐಶ್ವರ್ಯಸ್ಥಾನವನ್ನು ಪಡೆಯುವದಕ್ಕೆ ಹಿಂದಿನ ಕಲ್ಪದಲ್ಲಿ ಅವನು ಉತ್ಕೃಷ್ಟವಾದ ಸಾಧನವನ್ನು ಮಾಡಿರಬೇಕಷ್ಟೆ. ಅಂಥ ಮಹನೀಯನಿಗೂ ತಾನು ಒಬ್ಬನೇ ಎಂಬ ಅಂಜಿಕೆಯಾಯಿತು! ಆದ್ದರಿಂದಲೇ ಏನೋ ಅವನಿಂದ ಸೃಷ್ಟರಾಗಿರುವ ನಮ್ಮಗಳಿಗೂ ಒಬ್ಬರೇ ಇದ್ದರೆ ಅಂಜಿಕೆಯಾಗುತ್ತಿರುವದು!

ಆದರೆ ವಿರಾಟ್ಪುರುಷನಿಗೆ ಧರ್ಮಜ್ಞಾನವೈರಾಗ್ಯೈಶ್ವರ್ಯಗಳು ಸಹಜವಾಗಿಯೇ ಸಿದ್ಧವಾಗಿರುತ್ತವೆ. ಆದ್ದರಿಂದ ಅವನಿಗೆ ಹಿಂದಿನ ವಾಸನೆಯಿಂದ ಉಂಟಾಗಿದ್ದ ಈ ಭಯವು ಉತ್ತರಕ್ಷಣದಲ್ಲಿಯೇ ಮಾಯವಾಯಿತು. ವಿರಾಟ್‌ಪುರುಷನಿಗೆ ಯಾವ ಆಚಾರ್ಯನ ಉಪದೇಶವೂ ಬೇಕಾಗಿರುವದಿಲ್ಲ; ಏಕೆಂದರೆ ಅವನ ಚಿತ್ತವು ಅಂಥ ಶುದ್ಧವಾದದ್ದು ! ಅವನಿಗೆ `ನಾನು ಯಾರಿಗೆ ಅಂಜಬೇಕು? ಇನ್ನೊಬ್ಬರೇ ಇಲ್ಲವಲ್ಲ! ಎರಡನೆಯ ವಸ್ತುವಿನಿಂದಲಲ್ಲವೆ, ಭಯವಾಗಬೇಕು?" ಎಂಬ ಯೋಜನೆಯು ಮನಸ್ಸಿಗೆ ಬಂತು. ಅದೇ ವಿರಾಟ್ ಪುರುಷನಿಂದ ಸೃಷ್ಟರಾಗಿರುವ ನಾವುಗಳೂ ಇದನ್ನು ಆಲೋಚಿಸಿಬೇಕು. ಭಯಕ್ಕೆ ಕಾರಣವೇನು? ನಾವು ಒಬ್ಬರೇ ಇರುವಲ್ಲಿ ನಮಗೆ ಅಂಜಿಕೆಯಾಗುವದಕ್ಕೆ ಕಾರಣವೇ ಇಲ್ಲ. ಭಗವಂತನು ನಮ್ಮ ಆತ್ಮನೇ ಆಗಿದ್ದು ನಮ್ಮೊಳಗೇ ಇರುತ್ತಾನೆ. ಆತನಂತೂ ಯಾವ ಭಯಕ್ಕೂ ಕಾರಣನಲ್ಲ. ಹೀಗಿರುವಲ್ಲಿ ನಮಗೆ ಅಂಜಿಕೆ ಏತಕ್ಕೆ ಆಗಬೇಕು.?

ಎರಡನೆಯವರಿಂದ ನಮಗೆ ಆ ಭಯವಿರುವದೆಂಬುದು ಸುಪ್ರಸಿದ್ಧವಾಗಿರುತ್ತದೆ. ಮತ್ತೊಬ್ಬರಿಗೆ ಯಾವ ವಸ್ತುವಿನ ಮೇಲೆ ಆಶೆ ಇರುತ್ತದೆಯೋ ಅದನ್ನು ನಾವು ಮುಚ್ಚಿಟ್ಟುಕೊಂಡಿದ್ದರೆ ಆಗ ಆ ಎರಡನೆಯವರಿಂದ ನಮಗೆ ಭಯವಾಗುತ್ತದೆ. ನಾವು ಇನ್ನೊಬ್ಬನಿಗೆ ಅನ್ಯಾಯವನ್ನು ಮಾಡಿದ್ದರೆ ಆ ಇನ್ನೊಬ್ಬನು ಪ್ರತೀಕಾರವನ್ನು ಮಾಡುವನೆಂಬ ಭಯವು ನಮಗಿರುತ್ತದೆ. ಈಗ ಪ್ರತಿಯೊಂದು ದೇಶದವರೂ ಸೈನ್ಯವನ್ನೂ ಆಯುಧಗಳನ್ನೂ ಶೇಖರಿಸುವದರಲ್ಲಿ ನಿರತರಾಗಿರುತ್ತಾರೆ. ಪ್ರತಿಯೊಬ್ಬರಲ್ಲಿಯೂ ರಕ್ಷಣೆಮಾಡಿಕೊಳ್ಳಬೇಕಾದ ಪದಾರ್ಥಗಳ ರಾಶಿಯಿರುತ್ತದೆ. ಪ್ರತಿಯೊಂದು ದೇಶಕ್ಕೂ ಮತ್ತೊಂದು ದೇಶದ ಅಂಜಿಕೆಯು ತುಂಬಿರುತ್ತದೆ. ಆದ್ದರಿಂದ ಎಲ್ಲಿಯವರೆಗೆ ನಾವು ನಮಗಿಂತ ಮಿಕ್ಕವರನ್ನು ಬೇರೆಯಾಗಿ ಎಣಿಸುವೆವೋ, ಅಲ್ಲಿಯವರೆಗೆ ನಮಗೆ ಅಂಜಿಕೆಯು ತಪ್ಪಿದ್ದಲ್ಲ. ಅಲ್ಲಿಯವರೆಗೆ `ನಾವು ಒಬ್ಬರೇ ಆಗಿರುವೆವಲ್ಲ, ಏನು ಗತಿ! ಜನಬಲ, ಧನಬಲ, ಸೈನ್ಯಬಲ - ಮುಂತಾದವುಗಳಿಂದ ಭಯನಿವಾರಣೆಯನ್ನು ಮಾಡಿಕೊಳ್ಳಬೇಕು' ಎಂದು ಹೆದರುತ್ತಿರುವೆವು.

ಆದರೆ ಪರಮಾರ್ಥದೃಷ್ಟಿಯಿಂದ ನೋಡಿದರೆ ಏಕಾಂತವಾಸದಲ್ಲಿ ಯಾವ ಭಯವೂ ಇರುವದಿಲ್ಲ. ಏಕೆಂದರೆ ಏಕಾಂತದಲ್ಲಿ ಭಗವಂತನಿರುತ್ತಾನೆ. ಭಗವಂತನು ನಮ್ಮೆಲ್ಲರಿಗೂ ಆತ್ಮನು ಎಂಬ ತತ್ತ್ವವು ಏಕಾಂತವಾಸದಿಂದಲೇ ನಮಗೆ ತಿಳಿದೀತು. ಇದೊಂದು ಜ್ಞಾನಸಾಧನವು. `ಇದೇ ಜ್ಞಾನವೆನಿಸುವದು, ಮಿಕ್ಕದ್ದೆಲ್ಲವೂ ಅಜ್ಞಾನವು' ಎಂದು ಭಗವಂತನು ಹೇಳಿರುತ್ತಾನೆ. ಆದ್ದರಿಂದ ಏಕಾಂತವಾಸವಲ್ಲದ್ದು ಅಜ್ಞಾನವು; ಅಜ್ಞಾನವು ಭಯಕ್ಕೆ ಕಾರಣವೂ ಆಗಿರುತ್ತದೆ.

`ಆದರೆ ಒಬ್ಬರೇ ಇದ್ದರೆ?', `ನಾನು ಒಂಟಿ, ಆದ್ದರಿಂದ ಭಯ' - ಇಂಥ ಮಾತುಗಳನ್ನು ಅಜ್ಞರು ಆಗಾಗ ಆಡುತ್ತಲೇ ಇರುತ್ತಾರೆ, ಮನುಷ್ಯನು ಸಮಾಜಪ್ರಿಯನಾದ ಪ್ರಾಣಿಯು; ಜನರು ಒಟ್ಟಿಗೆ ಇದ್ದಷ್ಟೂ ಅಭಿವೃದ್ಧಿ, ಬಲಗಳು ಲಭಿಸುವವು. ಜನರು ಸೇರಿಕೊಂಡು ಕವಾಯತ್ತುಮಾಡುತ್ತಿರುವಾಗ ನೋಡಿರಿ. ಸೈನ್ಯದ ಶಿಸ್ತನ್ನು ನೋಡಿ; ಆಗ ಎಂಥ ಆನಂದವಾಗುತ್ತದೆ! - ಎಂದು ಜನರು ವರ್ಣಿಸುವದುಂಟು. ಅದು ಸುಳ್ಳಲ್ಲ. ಹೊರಗಿನ ಅಂಜಿಕೆಯನ್ನು ಕಳೆದುಕೊಳ್ಳುವ ಹುರುಪನ್ನು ಸಂಪಾದಿಸಿಕೊಳ್ಳುವದಕ್ಕೆ ಜನರು ಒಟ್ಟು ಸೇರುವದೊಂದು ಉಪಾಯವೇ ಸರಿ. ಆದರೆ ಆ ಅಂಜಿಕೆಯೂ ಆ ಪರಿಹಾರೋಪಾಯವೂ ಎರಡೂ ಕೃತಕವಾಗಿರುತ್ತವೆ. ಮನುಷ್ಯನು ಸಮಾಜಪ್ರಿಯನೆಂಬುದು ನಿಜ; ಆದರೆ ಪರಮೈಕಾಂತವಾಸವನ್ನು ಮಾಡಬಲ್ಲವನು ಮನುಷ್ಯನೊಬ್ಬನೇ ಎಂಬುದು ಅದಕ್ಕಿಂತಲೂ ಹೆಚ್ಚಿನ ನಿಜವು. ಏಕಾಂತವಾಸವನ್ನು ಮಾಡುವದು, ಇಂದ್ರಿಯಗಳನ್ನು ಸೆಳೆದುಕೊಳ್ಳವದು, ದೇಹ ಭಾವವನ್ನೇ ಮರೆತು ಪರಮೇಶ್ವರನ ಚಿಂತನೆಯಲ್ಲಿ ಮುಳುಗುವದು- ಇವೆಲ್ಲ ಮನುಷ್ಯನೊಬ್ಬನಿಗೆ ಮಾತ್ರವೇ ಸಾಧ್ಯವಾಗಿರುತ್ತದೆ. ಭಗವತ್ತತ್ತ್ವದಲ್ಲಿ ಐಕ್ಯವನ್ನು ಪಡೆದು ಆ ಆನಂದವನ್ನು ಸುತ್ತಲೂ ಬೀರುವ, ಮಿಕ್ಕವರನ್ನೂ ಆ ಪ್ರಶಾಂತವಾತಾವರಣದಲ್ಲಿ ಸಾಧುಗಳನ್ನಾಗಿ ಮಾಡುವ, ಸಾಮರ್ಥ್ಯವು ಮನುಷ್ಯನಿಗೆ ಮಾತ್ರ ಇರುತ್ತದೆ. ಈ ಘನವಾದ ತತ್ತ್ವವನ್ನು ನಾವು ಆಲೋಚಿಸಬೇಕು.

'ಏಕಾಂತವಾಸದಲ್ಲಿ ಧ್ಯಾನಯೋಗವನ್ನು ಅನುಸರಿಸಿದ ಋಷಿಗಳು ಆ ಪರಮಾತ್ಮನ ಶಕ್ತಿಯನ್ನು ಕಂಡುಹಿಡಿದುಕೊಂಡರು' ಎಂದು ಉಪನಿಷತ್ತಿನಲ್ಲಿ ಹೇಳಿರುತ್ತದೆ. ಕೊಲಂಬಸ್ ಮೊದಲಾದವರು ಅಮೆರಿಕವೇ ಮುಂತಾದ ದೇಶಗಳನ್ನು ಕಂಡುಹಿಡಿದದ್ದಕ್ಕಿಂತಲೂ ಈ ಶೋಧವು ಮಾನವಜಾತಿಗೇ ಅತ್ಯಮೂಲ್ಯವಾದದ್ದು. ವಿಕ್ಷೇಪವುಂಟಾಗದೆ ಇರುವ ಏಕಾಂತಸ್ಥಾನದಲ್ಲಿದ್ದುಕೊಂಡು ಮಾಡುವ ಧ್ಯಾನಾಭ್ಯಾಸದಿಂದ ಆಗುವ ಆನಂದವನ್ನು ನಾವು ಸ್ವಂತ ಅನುಭವದಿಂದಲೇ ತಿಳಿದುಕೊಳ್ಳಬೇಕಾಗಿರುತ್ತದೆ. ವ್ಯವಹಾರದಲ್ಲಿ ಪ್ರತಿದಿನವೂ ನಾವು ಮೋಸಹೋಗುತ್ತಲೇ ಇರುವೆವು; ಬೇರೆ ಬೇರೆ ವಿಕ್ಷೇಪಗಳಿಗೆ ಒಳಗಾಗುತ್ತಲೇ ಇರುವೆವು. ಧ್ಯಾನಯೋಗವನ್ನು ಅಭ್ಯಾಸಮಾಡಿದಂತೆ ವ್ಯವಹಾರದಲ್ಲಿ ನಮ್ಮ ಮನಸ್ಸು ಆಯಾ ನಿಮಿತ್ತಗಳಿಂದ ಏರಿಳಿತಗಳನ್ನು ಅನುಭವಿಸುವದು, ತಳಮಳಗೊಳ್ಳುವದು, ನಮ್ಮನ್ನು ಸಂಕಟಕ್ಕೆ ಗುರಿಮಾಡುವದು- ಇವೆಲ್ಲ ತಿಳಿಯುತ್ತದೆ, ಮನಸ್ಸು ಸ್ತಿಮಿತಕ್ಕೆ ಬರುತ್ತದೆ. ಶಕ್ತಿಯುತವಾದ ಏಕಾಗ್ರತೆಯು ದೊರಕುತ್ತದೆ. ವ್ಯವಹಾರದಲ್ಲಿ ವಿಷಯಗಳ ಪ್ರವಾಹದ ಸೆಳೆತಕ್ಕೆ ಸಿಕ್ಕದೆ ಹೊರಗೇ ಇದ್ದುಕೊಂಡು ಸಾಕ್ಷಿಯಾಗಿ ನೋಡುವ ಅಭ್ಯಾಸವುಂಟಾಗುತ್ತದೆ.

ವಿವಿಕ್ತದೇಶವೆಂದರೆ ಶುಚಿಯಾದ ಸ್ಥಲ, ಸಜ್ಜನರಿರುವ ಸ್ಥಲ, ವಿಷಯಗಳ ಸೆಳೆತವಿಲ್ಲದ ಸ್ಥಲ. ಹಸುಗಳನ್ನು ಕೆಲವು ದಿನಗಳವರೆಗೆ ಮೇಯುವ ಪ್ರದೇಶಕ್ಕೂ ಮನೆಗೂ ಹಗ್ಗಕಟ್ಟಿ ತಿರುಗಾಡಿಸುತ್ತಿದ್ದರೆ ಆಮೇಲೆ ಅವು ತಾವಾಗಿಯೇ ಮೇವಿನ ಸ್ಥಲಕ್ಕೂ ಮನೆಗೂ ಅಡ್ಡಾಡುವ ಅಭ್ಯಾಸವನ್ನು ಮಾಡಿಕೊಂಡುಬಿಡುತ್ತವೆ. ನಮ್ಮಗಳ ಮನಸ್ಸೂ ಹಾಗೆಯೇ. ನಮಗೆ ಹೊರಗಿನ ವ್ಯವಹಾರದಿಂದುಂಟಾದ ಸುಖ, ದುಃಖ, ಭಯ ಮುಂತಾದವು ನಮ್ಮ ಅಂತಃಕರಣದಲ್ಲಿ ತುಂಬಿಕೊಂಡಿರುತ್ತವೆ. ನಾವು ಒಬ್ಬರೇ ಇದ್ದರೂ ವ್ಯವಹಾರದ ಪರಿಣಾಮವು ತಪ್ಪಿರುವದಿಲ್ಲ. ಆದರೆ ಏಕಾಂತವಾಸದಲ್ಲಿ ಮಾಡುವ ಧ್ಯಾನಾದಿಗಳ ಸವಿಯು ಮನಸ್ಸಿಗೆ ಹತ್ತಿದರೆ ಅದರ ಪರಿಣಾಮವು ನಮ್ಮ ಮೇಲೂ ನಮ್ಮ ಸುತ್ತಲಿರುವ ಜನರ ಮೇಲೂ ಆಗುತ್ತಿರುವದು. ಏಕಾಂತವಾಸದ ಫಲವನ್ನು ಪಡೆದಿದ್ದ ಶ್ರೀರಾಮಕೃಷ್ಣಪರಮಹಂಸರ ಬಳಿಗೆ ಭಾರಿಭಾರಿಯ ವಿದ್ವಾಂಸರುಗಳು ಬಂದು ನಿಜವಾದ ವೇದಾಂತವನ್ನು ಸ್ವಲ್ಪಸ್ವಲ್ಪ ತಿಳಿದುಕೊಂಡು ಹೊಗುತ್ತಿದ್ದರೆಂಬುದನ್ನು ನೀವು ಓದಿರಬಹುದು. ಸೂಕ್ಷ್ಮವಾದ ಗ್ರಹಣಶಕ್ತಿ, ಮೇಧಾಶಕ್ತಿ, ಮೆದುಳಿನ ಜ್ಞಾನ - ಇವುಗಳೆಲ್ಲ ಒಂದು ಜಾತಿ ; ಆದರೆ ವೇದಾಂತಜ್ಞಾನವೇ ಒಂದು ಜಾತಿ. ನಿಜವಾದ ವೇದಾಂತಜ್ಞಾನವು ಒಂದಾನೊಂದು ಗುಪ್ತಾಸ್ತ್ರವಿದ್ದಂತೆ ಇರುವದು. ಅದು ಸಮಯವು ಬಂದಾಗ ನಮಗೆ ಉಪಯೋಗಕ್ಕೆ ಬರುವಂತೆ ಇರುತ್ತದೆ. ಮಿಕ್ಕವಿಷಯಗಳ ಜ್ಞಾನವು ಪಾಠಹೇಳಿಸಿಕೊಂಡು ಕಲಿತುಕೊಳ್ಳತಕ್ಕದ್ದು. ಇಷ್ಟು ಘಂಟೆಯ ಪಾಠಕ್ಕೆ ಇಷ್ಟು ರೂಪಾಯಿ - ಎಂದು ನಿಗದಿಮಾಡಿಕೊಂಡು ಕಲಿಯಬಹುದು. ಆದರೆ ವೇದಾಂತಜ್ಞಾನವು ಇಂಥದ್ದಲ್ಲ. ಇದ್ದದ್ದನ್ನು ಇದ್ದಂತೆ ಧ್ಯಾನಿಸಿ ತಿಳಿದುಕೊಳ್ಳತಕ್ಕದ್ದು. ಈ ಅರಿವು ಆಧ್ಯಾತ್ಮಿಕವಾಗಿರುತ್ತದೆ. ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಪ್ರಾಣಿಗಳಿಗೆಲ್ಲ ಒಬ್ಬನೇ ಆತ್ಮನಿರುವನು, ಅವನೇ ನನ್ನ ಆತ್ಮನು - ಎಂಬ ಜ್ಞಾನವದು. ಇದನ್ನು ವಿವಿಕ್ತದೇಶಗಳಲ್ಲಿ ಕುಳಿತುಮಾಡುವ ಏಕಾಗ್ರತೆಯ ಧ್ಯಾನದಿಂದ ಸಂಪಾದಿಸಿಕೊಳ್ಳಬೇಕಾಗಿರುತ್ತದೆ.

ವಿವಿಕ್ತದೇಶವೆಂದರೆ ವಿಕ್ಷೇಪಗಳನ್ನೆಲ್ಲ ದೂರಮಾಡಿರುವ ಸ್ಥಾನವೆಂದು ಆಗಲೇ ಹೇಳಿರುತ್ತೇನೆ. ಶ್ರೀ ರಾಮಕೃಷ್ಣಪರಮಹಂಸರು ಇಂಥ ವಿವಿಕ್ತದೇಶದಲ್ಲಿ ಸಂಪಾದಿಸಿದ ಪರಮಾರ್ಥಜ್ಞಾನವನ್ನು ಕೇಳುವದಕ್ಕೆ ಯಾವದಾದರೂ ಅಧಿಕಾರಿಗಳು ಬಂದಾರೆ ! - ಎಂದು ತವಕಪಡುತ್ತಿದ್ದರಂತೆ. ಮುಂದೆ ಅಮೆರಿಕವೇ ಮುಂತಾದ ಪರದೇಶಗಳಲ್ಲಿ ಈ ಜ್ಞಾನದ ಒಸಗೆಯ ಪ್ರಚಾರವು ಆಗುವದು ಎಂಬುದು ಅವರಿಗೆ ಆಗಲೇ ಕಣ್ಣಿಗೆ ಕಟ್ಟಿದಂತೆ ಕಾಣುತ್ತಿತ್ತಂತೆ; ಶ್ರೀರಮಣ ಮಹರ್ಷಿಗಳು ವಿವಿಕ್ತದೇಶಸೇವೆಯಿಂದ ಪಡೆದ ಜ್ಞಾನವನ್ನು ಸಂಗ್ರಹಿಸಿಕೊಳ್ಳಲು ಎಷ್ಟು ಜನರು ಅವರ ಬಳಿಗೆ ಬಂದು ಅವರನ್ನು ಸೇವಿಸುತ್ತಾರೆ, ನೋಡಿರಿ! ತತ್ತ್ವವು ನಮ್ಮೊಳಗೇ ಇದೆ. ಅದು ಏಕಾಂತವಾಸದಿಂದ ಒಳಗೆ ನೋಡಿದರೆ ತಿಳಿಯಬರತಕ್ಕದ್ದಾಗಿದೆ. ಅದು ಪುಸ್ತಕಗಳಲ್ಲಿಲ್ಲ; ಪುಸ್ತಕಗಳನ್ನು ಓದಿ ಓದಿ ಮನಸ್ಸನ್ನು ಹೊಲಗೆಡಿಸಿಕೊಳ್ಳಬಾರದು.

ವಿವಿಕ್ತದೇಶಸೇವಿತ್ವ, ಏಕಾಂತವಾಸ - ಎಂದು ಈ ದಿನ ನಾನು ಒತ್ತಿ ಒತ್ತಿ ಹೇಳುವದನ್ನು ಕೇಳಿ ಯಾವದೋ ಒಂದು ದೂರದಲ್ಲಿರುವ ಗವಿಯಲ್ಲಿ ಕುಳಿತುಕೊಳ್ಳುವದು ಅದು ಎಂದು ಭಾವಿಸಿಕೊಳ್ಳಬಾರದು. ಗುಹಾವಾಸವು ಕೆಟ್ಟದ್ದಲ್ಲ ; ಆದರೆ ವಿವಿಕ್ತದೇಶದ ಪರಮಫಲವನ್ನು ದೊರಕಿಸಿಕೊಳ್ಳದೆ ಗುಹೆಯಲ್ಲಿದ್ದರೇನು? ಹಾವುಹಲ್ಲಿಗಳೂ ಗುಹೆಯಲ್ಲಿರುತ್ತವೆ. ದೇಹವು ತಾನೊಂದೇ ಒಂದು ಅಜ್ಞಾತಸ್ಥಲದಲ್ಲಿರುವದಲ್ಲ, ಏಕಾಂತವಾಸವು. ವಿವಿಕ್ತದೇಶಸೇವಿತ್ವಕ್ಕೆ ಮುಖ್ಯವಾದ ಗುರುತು ಮನಸ್ಸಿನಲ್ಲಿ ವಿಕ್ಷೇಪವಿಲ್ಲದಿರುವದು. ನಿಮಗೆಲ್ಲ ತಿಳಿದಂತೆ ದಿವಂಗತ ಶೇಷಮ್ಮನವರು ಒಬ್ಬ ಸ್ತ್ರೀಮಾತ್ರ. ಅವರು ಈ ಆಶ್ರಮದ ಸೇವೆಯಲ್ಲಿ ನಿರತರಾಗಿದ್ದರು. ಇಲ್ಲಿಗೆ ಬಂದವರ ಯೋಗಕ್ಷೇಮವನ್ನು ಸ್ವಾರ್ಥವನ್ನು ಬಿಟ್ಟು ನೋಡಿಕೊಳ್ಳುತ್ತಿದ್ದರು. ಯಾವಾಗಲೂ ಭಗವನ್ನಾಮವನ್ನು ಹೇಳಿಕೊಳ್ಳುತ್ತಾ ಕಾಲವನ್ನು ಹಾಕುತ್ತಿದ್ದರು. ನೋಡುವದಕ್ಕೆ ಅವರು ಬಯಲಿನಲ್ಲಿಯೇ ಇದ್ದರು. ಆದರೇನು? ಅವರಿಗೆ ಅಕಸ್ಮಾತ್ತಾಗಿ ದೇಹಯಾತ್ರೆಯನ್ನು ಮುಗಿಸುವ ಕಾಲವು ಬಂದಿತು. ಮನಸ್ಸಿನಲ್ಲಿ ಯಾವ ಯೋಚನೆಯನ್ನೂ ಹತ್ತಿಸಿಕೊಳ್ಳಲಿಲ್ಲ. ರಾತ್ರೆಯೆಲ್ಲ ಭಗವನ್ನಾಮವನ್ನು ಉಚ್ಚರಿಸುತ್ತಿದ್ದರು ; ಬೆಳಗ್ಗೆ ಭಾಷ್ಯಾದಿಗಳನ್ನು ಓದುವವರನ್ನು ಗಟ್ಟಿಯಾಗಿ ಹೇಳುವಂತೆ ಕೇಳಿಕೊಂಡರು. ಅವರಿಗೆ ಮಾತನಾಡುವದು ಕಷ್ಟವಾಗುತ್ತಿರುವಾಗ `ತೀರ್ಥವನ್ನು ಕೊಡಿ' ಎಂದರು. ಅದನ್ನು ತೆಗೆದುಕೊಂಡು `ಹೋಗಿಬರುತ್ತೇನೆ' - ಎಂದು ಈ ಲೋಕದ ವ್ಯವಹಾರವನ್ನು ಪೂರ್ತಿಗೊಳಿಸಿದರು ! ಅವರಿಗೆ ವ್ಯವಹಾರದಲ್ಲಿಯೂ ಎಂಥ ಮನಃಸ್ಸಮಾಧಾನವು ಬಂದಿತು! ಏಕಾಂತವಾಸವೆಂದರೆ ಭಗವಂತನ ಸ್ಮರಣೆಯೊಂದೇ ಬರುವ ಸ್ಥಲದಲ್ಲಿರುವದು. ಅಂಥ ವಿಕ್ಷೇಪರಹಿತವಾಗಿ ತಾನೇತಾನಾಗಿದ್ದು ಪರಮಾತ್ಮನಲ್ಲಿ ಒಂದಾಗುವದೇ ವಿವಿಕ್ತದೇಶಸೇವಿತ್ವದ ಗುರಿಯು.

## ೧೧೨. ಅರತಿರ್ಜನಸಂಸದಿ 13 - (10)

**(16-1-49)**

ವಿವಿಕ್ತದೇಶಸೇವಿತ್ವದ ವಿಷಯವನ್ನು ಹಿಂದೆ ಹೇಳಿದ್ದಾಗಿದೆ. ಈಗ `ಜನರ ಸಂದಣಿಯಲ್ಲಿ ರತಿಯಿಲ್ಲದಿರುವದು' ಎಂಬ ಸಾಧನದ ವಿಷಯವನ್ನು ಮಾತನಾಡಬೇಕಾಗಿದೆ. ಜನರಲ್ಲಿ ಸೇರದೆ ಇರುವದರಿಂದ ಏನು ಪ್ರಯೋಜನವಿದ್ದೀತು?' - ಎಂದು ಕೆಲವರು ಯೋಚಿಸಬಹುದು. ಇದನ್ನು ಮನದಟ್ಟುಮಾಡಿಕೊಳ್ಳುವದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು. ಮನೆಯಲ್ಲಿ ಎಲ್ಲೆಲ್ಲಿಯೂ ಕುರ್ಚಿ, ಬೆಂಚು, ಮೇಜು, ಬೀರು - ಮುಂತಾದ ಸಾಮಾನುಗಳನ್ನು ತುಂಬಿರುವಾಗ ನಮಗೆ ಯಾವ ನಷ್ಟವು ಆಗಿರುತ್ತದೆ ಎಂಬುದು ಅವುಗಳನ್ನು ತೆಗೆದುಹಾಕಿದಾಗ ತಿಳಿಯುತ್ತದೆ. ಮನೆಯಲ್ಲಿರುವ ಒಂದೊಂದು ಸಾಮಾನೂ ಅಷ್ಟಷ್ಟು ವಾಯುವನ್ನು ಹೊರಕ್ಕೆ ಹಾಕಿರುತ್ತದೆ ; ಆದ್ದರಿಂದ ಆ ಸಾಮಾನುಗಳನ್ನು ತೆಗೆದರೆ ಅಷ್ಟು ವಾಯುವಿಗೆ ಎಡೆಮಾಡಿಕೊಟ್ಟಂತೆ ಆಗುವದು. ಅಲ್ಲವೆ? ಇದರಂತೆ ನಮ್ಮ ಮನಸ್ಸಿನಲ್ಲಿ ನೂರಾರು ಆಲೋಚನೆಗಳು ತುಂಬಿರುವಾಗ ಅವಕ್ಕೆ

ಅನುಗುಣವಾದ ಬೇರೆ ಆಲೋಚನೆಗಳನ್ನು ಮನಸ್ಸು ಎಳೆದುಕೊಳ್ಳುತ್ತಿರುತ್ತದೆ ; ಅದಕ್ಕೆ ಅನುಗುಣವಾದ ಸಂಕಲ್ಪಗಳನ್ನೂ ಕಾಮಗಳನ್ನೂ ಕರ್ಮಗಳನ್ನೂ ನಾವು ಬರಮಾಡಿಕೊಳ್ಳುತ್ತಿರುತ್ತೇವೆ. ಮನುಷ್ಯನು ಏಕಾಂತವಾಸದಲ್ಲಿರುವದರಿಂದ ಆಗುವ ಪ್ರಯೋಜನವನ್ನೂ ಜನಸಂದಣಿಯಲ್ಲಿಯೇ ವ್ಯವಹರಿಸುತ್ತಿರುವದರಿಂದಾಗುವ ಹಾನಿಯನ್ನೂ ಈಗ ನಾವು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳಬಹುದು. ಈಗಿನ ಸ್ಥಿತಿಯಲ್ಲಿ ನಾವು ಒಬ್ಬರೇ ಇರುವಾಗಲೂ ನಮ್ಮ ಮನಸ್ಸಿನಲ್ಲಿ ಅನಂತಸಂಖ್ಯೆಯ ಆಲೋಚನೆಗಳು ಒಂದರ ಹಿಂದೊಂದು ಬುದಬುದನೆ ಎದ್ದುಕೊಳ್ಳುತ್ತಲೇ ಇರುತ್ತವೆ. ಅನೇಕ ಆಲೋಚನೆಗಳ ಸಂತೆಯೇ ನಮ್ಮ ಮನಸ್ಸು; ಆ ಆಲೋಚನೆಗಳನ್ನು ಒಂದಕ್ಕೊಂದನ್ನು ಸಂಬಂಧಿಸಿಕೊಂಡೇ ನಮ್ಮ ವ್ಯವಹಾರವು ಸಾಗುತ್ತಿರುವದು. ಒಂದು ತೊಟ್ಟು ನೀರು ಒಂದು ಗರಿಕೆಯ ಮೇಲೆ ನಿಂತಿದ್ದರೆ ಅದರ ಮೇಲೆ ಬೀಳುವ ಸೂರ್ಯಕಿರಣದ ಸಂಪರ್ಕದಿಂದ ಆ ನೀರಿನಲ್ಲಿ ಸೂರ್ಯನ ಸಣ್ಣ ಪ್ರತಿಬಿಂಬವೊಂದು ಕಾಣಿಸುತ್ತದೆ ; ಆ ಪ್ರತಿಬಿಂಬವು ಬೇರೆಬೇರೆಯ ಕಡೆಯಿಂದ ನೋಡಿದಂತೆಲ್ಲ ಬೇರೆಬೇರೆಯ ಬಣ್ಣಗಳಾಗಿ ತೋರುತ್ತಿರುವದನ್ನು ನಮ್ಮಲ್ಲಿ ಕೆಲವರು ನೋಡಿರಬಹುದು. ನಮ್ಮ ಮನಸ್ಸಿನಲ್ಲಿ ಜನರ ಮತ್ತು ಪದಾರ್ಥಗಳ ಸಂಸರ್ಗದಿಂದ ಆಗುವ ಸಂಸ್ಕಾರಗಳು ಹೀಗೆ ಬೇರೆಬೇರೆ ಬಣ್ಣಗಳನ್ನು ಧರಿಸಿ ಬೇರೆಬೇರೆಯ ಕಾಲದಲ್ಲಿ ನಮ್ಮನ್ನು ಪ್ರಚೋದನೆಮಾಡುತ್ತಿರುವವು. ಸಾವಿರಾರು ಹಗ್ಗಗಳನ್ನು ಕಟ್ಟಿ ಒಬ್ಬ ಮನುಷ್ಯನನ್ನು ದಿಕ್ಕುದಿಕ್ಕಿಗೆ ಎಳೆದರೆ ಆಗುವ ಗಾಸಿಯೇ ನಮ್ಮ ಮನಸ್ಸಿಗೆ ಜನಸಂಗದಿಂದಲೂ ಪದಾರ್ಥಗಳ ಭಾವನೆಯಿಂದಲೂ ಆಗುತ್ತಿರುವದು ಎಂಬುದನ್ನು ಏಕಾಂತವಾಸವನ್ನು ಮಾಡಿ ಮನಸ್ಸನ್ನು ಪರೀಕ್ಷಿಸಿಕೊಳ್ಳುವದರಿಂದ ಗೊತ್ತುಪಡಿಸಿಕೊಳ್ಳಬಹುದು.

ಈ ರೀತಿಯಲ್ಲಿ ಒಬ್ಬೊಬ್ಬ ಮನುಷ್ಯನೂ ತನ್ನೊಡನೆ ಒಂದೊಂದು ಆಲೋಚನೆಯ ಬ್ರಹ್ಮಾಂಡವನ್ನು ತಂದಿರುತ್ತಾನೆ. ಅನೇಕ ಜನರು ಒಟ್ಟಿಗೆ ಸೇರುವಾಗ ಅವರ ಆಲೋಚನೆಗಳು ಒಬ್ಬರಿಂದೊಬ್ಬರ ಮನಸ್ಸನ್ನು ಬೇಡವೆಂದರೂ ಆಕ್ರಮಿಸುತ್ತಾ ``ನಮ್ಮ ಯೋಗಕ್ಷೇಮವನ್ನು ವಿಚಾರಿಸಿಕೊ" ಎಂದು ಬಲಾತ್ಕರಿಸುತ್ತಿರುವವು. ಆಸ್ತಿಕಜನರು ಧ್ಯಾನಪೂಜಾದಿಗಳನ್ನು ನಡೆಯಿಸುತ್ತಿರುವ ದೇವಾಲಯದಲ್ಲಿ ನಾಸ್ತಿಕರನ್ನು ಬಲಾತ್ಕಾರದಿಂದ ಕಾನೂನು ಮೂಲಕ ಸಮಾಜಸುಧಾರಕರು ಹೊಗಿಸುತ್ತಿರುವಂತೆ ಜನರು ಒಬ್ಬರ ಮನಸ್ಸಿನಲ್ಲೊಬ್ಬರು ತಮ್ಮತಮ್ಮ ಭಾವಗಳನ್ನೂ ಆಲೋಚನೆಗಳನ್ನೂ ಹೊಗಿಸುತ್ತಾ ಮತ್ತೊಬ್ಬರ ಮನಸ್ಸಿನ ಪಾವಿತ್ರ್ಯವನ್ನು ಕೆಡಿಸುತ್ತಲೂ ತಾವೂ ಕೆಡಿಸಿಕೊಳ್ಳುತ್ತಲೂ ಇರುತ್ತಾರೆ. ಹೀಗೆ ಸಾಮಾನ್ಯಜನರ ಸಂಗದಿಂದ ಮನಸ್ಸಿನ ನೆಮ್ಮದಿಗೆ ಭಂಗವಾಗುತ್ತಿರುತ್ತದೆ; ಹೊಸದಾಗಿ ಪವಿತ್ರವಾದ ಆಲೋಚನೆಗಳು ಹುಟ್ಟುವದಕ್ಕೆ ಅಡ್ಡಿಯಾಗಿರುತ್ತದೆ ; ಇರುವ ಆಲೋಚನೆಗಳು ಅಪವಿತ್ರವಾದ ಸಂಸ್ಕಾರಗಳಾಗಿ ನಮ್ಮ ಅಂತಃಕರಣದಲ್ಲಿ ತುಂಬಿಕೊಂಡಿರುತ್ತವೆ. ಹೊಸದಾಗಿ ಮನಸ್ಸಿಗೆ ಉತ್ತಮಸಂಸ್ಕಾರವನ್ನು ಉಂಟುಮಾಡಿಕೊಳ್ಳುವ ಮೊದಲು ಆ ಕುಸಂಸ್ಕಾರಗಳನ್ನಾದರೂ ಕಡಿಮೆಮಾಡಿಕೊಳ್ಳಬೇಕಲ್ಲವೆ? ಇದಕ್ಕಾಗಿಯೇ ಮುಮುಕ್ಷುಗಳಿಗೆ `ಜನಸಂದಣಿಯಲ್ಲಿ ಅರತಿ' ಎಂಬ ಸಾಧನವನ್ನು ಉಪದೇಶಿಸಿರುತ್ತದೆ.

ಈಗಿನ ಕಾಲದಲ್ಲಿ ಏಕಾಂತವಾಸವನ್ನು ಜರಿಯುವ ವಾಡಿಕೆ ಹೆಚ್ಚಾಗುತ್ತಿದೆ. `ಮನುಷ್ಯನು ಸಮಾಜಜೀವಿಯಾಗಿರುತ್ತಾನೆ. ಅನೇಕ ಜನರು ಒಕ್ಕಡೆಯಲ್ಲಿ ಸೇರುವದರಿಂದ ವಿಚಾರವಿನಿಮಯವನ್ನು ಮಾಡಿಕೊಳ್ಳಬಹುದು ; ಜ್ಞಾನವೃದ್ಧಿಯನ್ನೂ ಮಾಡಿಕೊಳ್ಳಬಹುದು. ಒಂದು ಜನಾಂಗದ ನಾಗರಿಕತೆಯು ಹೆಚ್ಚಿದಂತೆ ಆ ಜನಾಂಗದವರಿಗೆ ಪರಸ್ಪರ ಸಂಬಂಧವು ಹೆಚ್ಚು ಹೆಚ್ಚು ನಿಕಟವಾಗಬೇಕು ; ಜನರು ಒಬ್ಬರನ್ನೊಬ್ಬರು ಅಗಲಿ ಕಾಡುಮೃಗಗಳಂತೆ ಒಂಟಿಯಾಗಿ ತಿರುಗುವದು ಹೇಗೆ ನಾಗರಿಕತೆಯ ಗುರುತಾದೀತು ?' - ಎಂದು ಅನೇಕರು ಏಕಾಂತವಾಸವನ್ನು ಆಕ್ಷೇಪಿಸುವರು. ಈ ಆಕ್ಷೇಪಣೆಯಲ್ಲಿ ನಿಜವೂ ಇದೆ. ಮನುಷ್ಯರ ಪರಸ್ಪರಸಂಗದಿಂದ ವಿಚಾರವಿನಿಮಯವು ಆಗುತ್ತದೆ ಎಂಬುದು ಖಂಡಿತ. ಆದರೆ ಆ ವಿನಿಮಯವು ಯಾವ ಜಾತಿಯದಾಗಿರಬೇಕು? ಒಬ್ಬನ ತಲೆನೋವನ್ನು ತೆಗೆದುಕೊಂಡು ತನ್ನ ಮೂಗುನೋವನ್ನು ಅವನಿಗೆ ಕೊಟ್ಟಿದ್ದರಿಂದ ಯಾರಿಗೆ ಯಾವ ಲಾಭವಾದೀತು? ಒಬ್ಬರಿಗೊಬ್ಬರು ತಮ್ಮ ವಿಚಾರಗಳನ್ನು ಕೊಡಬೇಕಾದರೆ ಒಟ್ಟು ಸೇರುವ ಜನರಲ್ಲಿ ಯಾವದಾದರೂ ಉತ್ತಮವಿಚಾರಗಳು ಇರಬೇಕಲ್ಲವೆ? ಕುಸಂಸ್ಕಾರದ ಅಂತಃಕರಣವುಳ್ಳ ಜನರು ಒಟ್ಟುಗೂಡಿದರೆ ಆಗುವ ಲಾಭಕ್ಕಿಂತಲೂ ಅಪಾಯವೇ ಹೆಚ್ಚಾಗಿರುತ್ತದೆ. ಪ್ರಕೃತದಲ್ಲಿ `ಅರತಿರ್ಜನಸಂಸದಿ' ಎಂಬಲ್ಲಿ ಜನರು ಎಂದರೆ ಪ್ರಾಕೃತ ಜನರು. ಜನಸಂಸತ್ತಿನಲ್ಲಿ, ಅರತಿಯಿರಬೇಕು ಎಂದರೆ ಪ್ರಾಕೃತಜನರ ಸಂಗವನ್ನು ಮಾಡುವದರಲ್ಲಿ ರತಿಯಿರಬಾರದು ಎಂದು ಅರ್ಥ. ಉತ್ತಮಸಂಸ್ಕಾರವುಳ್ಳ ಸಜ್ಜನರ ಸಂಗದಲ್ಲಿ ಪ್ರೀತಿಯಿರಬಾರದು ಎಂದೇನೂ ಅರ್ಥವಲ್ಲ. ಪ್ರಾಕೃತರೆಂದರೆ ಪ್ರಕೃತಿಗೇ ತಮ್ಮನ್ನು ಮಾರಿಕೊಂಡುಬಿಟ್ಟಿರುವ ಕೀಳು ಜನರು. ಪ್ರಾಕೃತರು ಸೇರಿದರೆ ಪ್ರಾಕೃತವಾದ ಮಾತುಗಳನ್ನೇ ಅದರಲ್ಲಿಯೂ ವಿಶೇಷವಾಗಿ ತಮ್ಮತಮ್ಮ ವಿಷಯದ ವ್ಯರ್ಥಾಲಾಪಗಳನ್ನೇ ಆಡುತ್ತಿರುವರು. ಪ್ರಾಕೃತಜನರಿಗೆ ಯಾವದೊಂದು ದೊಡ್ಡ ಪುರುಷಾರ್ಥದ ಅಭಿಲಾಷೆಯೂ ಇರುವದಿಲ್ಲ ; ಅವರಿಗೆ ಹೇಗಾದರೂ ಕಾಲವನ್ನು ಕಳೆಯುವದು ಇಷ್ಟವಾಗಿರುವದು. ಆಟಪಾಠಗಳು, ಮತ್ತೊಬ್ಬರಮೇಲೆ ಚಾಡಿ, ತಮಗೆ ನೇರಾಗಿ ಸಂಬಂಧವಿಲ್ಲದ ವೃತ್ತಾಂತಗಳು, ಅನವಶ್ಯವಾದ ಹಾಸ್ಯಗಳು, ಕಾಮಕ್ರೋಧಾದಿಗಳನ್ನು ಎಬ್ಬಿಸುವ ಬೀಳುನುಡಿಗಳು - ಇಂಥವುಗಳೇ ಅವರ ಸಂಭಾಷಣೆಯಿಂದಾಗುವ ಫಲವು. ಇಂಥ ಜನರೊಡನೆ ಮಾತನಾಡುತ್ತಿದ್ದರೆ ಸ್ವಲ್ಪಹೊತ್ತಿನೊಳಗಾಗಿಯೇ ಇವನು ವಕೀಲನೊ, ವರ್ತಕನೊ, ಪರಿಚಾರಕನೊ, ಜೂಜುಗಾರನೊ - ತಿಳಿದುಬಿಡುತ್ತದೆ ; ಏಕೆಂದರೆ ಅವರಿಗೆ ತಮ್ಮತಮ್ಮ ವಿಷಯವನ್ನು ಕೊಚ್ಚಿಕೊಳ್ಳುವದರಲ್ಲಿಯೇ ಪ್ರೀತಿ ಹೆಚ್ಚು. ಇಂಥ ಜನರ ಸಂಗದಿಂದ ನಮಗೆ ಏನು ಲಾಭವಾದೀತು? ಮೈಕೊಳೆಯಾಗಿರುವವನು ಕೆಸರನ್ನು ಬಳಿದುಕೊಳ್ಳುವದಕ್ಕೆ ಹವಣಿಸುವಂತೆ ಇಂಥ ಪ್ರಾಕೃತಜನರ ಸಂಗವನ್ನು ಬಯಸುವದು ವ್ಯರ್ಥಕಾಲಕ್ಷೇಪವೂ ಅನರ್ಥಗಳ ಸ್ವಾಗತವೂ ಆಗುತ್ತದೆ. ಆದ್ದರಿಂದಲೇ ದೊಡ್ಡವರು ಮುಮುಕ್ಷುಗಳಾದವರಿಗೆ ಸರ್ವಸಂಗಪರಿತ್ಯಾಗವನ್ನು ಉಪದೇಶಿಸಿರುತ್ತಾರೆ :

**ಅಹಿಮಿವ ಜನಯೋಗಂ ಸರ್ವದಾ ವರ್ಜಯೇದ್ಯಃ**
**ಕುಣಪಮಿವ ಸುನಾರೀಂ ತ್ಯಕ್ತಕಾಮೋ ವಿರಾಗೀ ।**
**ವಿಷಮಿವ ವಿಷಯಾನ್ ಯೋ ಮನ್ಯಮಾನೋ ದುರನ್ತಾನ್**
**ಜಯತಿ ಪರಮಹಂಸೋ ಮುಕ್ತಿಭಾವಂ ಸಮೇತಿ ॥**

ಜನರ ಸಂಗತಿಯನ್ನು ಯಾವಾಗಲೂ ಹಾವು ಕಂಡಂತೆ ಹೆದರಿಬಿಟ್ಟೋಡಬೇಕು ; ಸುಂದರಸ್ತ್ರೀಯನ್ನು ಹೆಣವನ್ನು ಕಂಡಂತೆ ಅಸಹ್ಯವಾಗಿ ಕಾಣಬೇಕು; ವಿಷಯಗಳನ್ನು ವಿಷದಂತೆ ಕಂಡು ಕಾಮಗಳನ್ನೆಲ್ಲ ತ್ಯಜಿಸಿ ವಿರಕ್ತನಾಗಬೇಕು. ಅಂಥ ಪರಮಹಂಸನೇ ಮುಕ್ತಿಯನ್ನು ಪಡೆಯುವನು - ಎಂದು ಬಲ್ಲವರು ಹೇಳುತ್ತಾರೆ.

ಆದರೆ ಇಂಥ ಏಕಾಂತವಾಸಪ್ರಿಯರಾಗಿ ಅದರಿಂದ ಆನಂದವನ್ನು ಪಡೆದುಕೊಳ್ಳುವ ಮಹನೀಯರು ಬಹುವಿರಳರಾಗಿರುತ್ತಾರೆ. ಪ್ರಾಕೃತರಿಗೆ ಏಕಾಂತವಾಸವು ಬಹಳ ಬೇಜಾರನ್ನು ಉಂಟುಮಾಡುತ್ತದೆ. ಏಕಾಂತದಲ್ಲಿ ಕುಳಿತು `ರಾಮ', `ರಾಮ' - ಎಂದು ಎರಡು ಘಂಟೆ ಜಪಿಸಿರಿ ಎಂದರೆ - ಸಾಮಾನ್ಯರಿಗೆ ಯಾವದೋ ಕಠಿಣಸಜ ವಿಧಿಸಿದಷ್ಟು ಸಂಕಟವಾಗುತ್ತದೆ.

ಇದಕ್ಕೆ ಏನು ಮಾಡಬೇಕು? ಪ್ರಾಕೃತಜನರ ಸಂಗವನ್ನು ಮಾಡಿದರೆ ಹಾನಿಯುಂಟೆಂಬುದು ಖಂಡಿತ. ಇನ್ನು ಅವರನ್ನು ಬಿಟ್ಟು ಏಕಾಂತವಾಸವನ್ನು ಮಾಡುವದಕ್ಕೆ ಮೊದಲುಮಾಡಿದರೆ ಅಲ್ಲಿ ನಮಗೆ ಬೇಸರವುಂಟಾಗುತ್ತದೆ; ಕುವಾಸನೆಗಳು ಸಮಯವನ್ನು ಕಾದಿದ್ದು ಎದ್ದುಕೊಳ್ಳುತ್ತವೆ. ಹೀಗೆ ಎರಡು ಕಡೆಯಲ್ಲಿಯೂ ನಮಗೆ ತೊಂದರೆಯೇ ಕಾದಿರುತ್ತವೆ. ಆದ್ದರಿಂದ ಮೊಟ್ಟ ಮೊದಲು ಕುಸಂಗವನ್ನು ಪೂರ್ಣವಾಗಿ ಬಿಟ್ಟುಬಿಡುವದಕ್ಕೆ ಯಾವದಾದರೊಂದು ಉಪಾಯವನ್ನು ಕಂಡುಕೊಳ್ಳಬೇಕಾಯಿತು. ಹಾಗಿಲ್ಲದೆ ಪ್ರಾಕೃತರ ಸಂಗವನ್ನು ಬಿಡಬೇಕೆಂದು ಪ್ರಯತ್ನಮಾಡಿದರೂ ಅದು ಸಾಗುವದಿಲ್ಲ. `ಸ್ತ್ರೀಧನನಾಸ್ತಿಕಚರಿತ್ರಂ ನ ಶ್ರವಣೀಯಮ್' ಎಂದು ನಾರದಭಕ್ತಿಸೂತ್ರವಿದೆ. ಸ್ತ್ರೀಯರ, ಧನದ, ನಾಸ್ತಿಕರ ಚರಿತ್ರವನ್ನು ಕಿವಿಯಲ್ಲಿಯೂ ಕೇಳ ಕೂಡದು. ದುಸ್ಸಂಗವುಳ್ಳವರ ಸಂಗವನ್ನು ಮೊದಲು ಬಿಡಬೇಕು. ಅಂಥವರ ಸಂಗದಲ್ಲಿ ದ್ವೇಷವಿರಬೇಕೆಂದೇನೂ ಅಭಿಪ್ರಾಯವಲ್ಲ; ಅವರ ಸಂಗದಲ್ಲಿ ರತಿಯಿರಬಾರದು. ದೆವ್ವದ ಕಥೆ ಹೇಳುವವರು ಒಬ್ಬರಮೇಲೊಬ್ಬರು ಪೈಪೋಟಿ ಮಾಡುವಂತೆ ಸಂಗಿಗಳಾದ ಜನರು ವಿಷಯಸಂಗದ ಮಾತನ್ನೇ ಮತ್ತೆ ಮತ್ತೆ ಆಡುತ್ತಿರುವರು. ಅವರ ಸಂಗವನ್ನು ಬಿಡಬೇಕೆಂದು ನಾವು ಪ್ರಯತ್ನಮಾಡಿದಷ್ಟೂ ಮತ್ತೆ ಮತ್ತೆ ಹೆಚ್ಚುಹೆಚ್ಚಾಗಿ ಅದರ ಸಂಗವೇ ನಮಗೆ ಗಂಟುಬೀಳುವದು. ಇದಕ್ಕಿರುವ ಒಂದೇ ಒಂದು ಉಪಾಯವೆಂದರೆ ಸಜ್ಜನರ ಸಂಗವು. ಸಜ್ಜನರೆಂದರೆ ಯಾರು ? ಯಾರು ಪರಮಾತ್ಮನಲ್ಲಿ ಅಹೈತುಕವಾದ ಭಕ್ತಿಯನ್ನಿಟ್ಟುಕೊಂಡಿರುವರೋ ಅಂಥ ಮಹನೀಯರು. ಸೂಚಿಕಾಂತಶಿಲೆಯು ಕಬ್ಬಿಣವನ್ನು ತನ್ನ ಕಡೆಗೇ ಎಳೆಯುವಂತೆ ಪರಮಾತ್ಮನು ತನ್ನ ಭಕ್ತರನ್ನು ತನ್ನ ಕಡೆಗೇ ಎಳೆಯುತ್ತಿರುವನು; ಅವರಲ್ಲಿಯೇ ನೆಲಸಿರುವನು. ಇಷ್ಟೇಕೆ? ಭಕ್ತರಿಗೂ ಆ ಭಗವಂತನಿಗೂ ಭೇದವಿರುವದೇ ಇಲ್ಲ.

ಸತ್ಸಂಗದಿಂದ ಆಗುವ ಮಹಾಫಲವನ್ನು ಭಾಗವತದಲ್ಲಿ ನಾರದರ ಉದಾಹರಣೆಯಿಂದ ವರ್ಣಿಸಿರುತ್ತದೆ. ನಾರದರು ಪೂರ್ವಜನ್ಮದಲ್ಲಿ ಒಬ್ಬ ಶೂದ್ರ ಸ್ತ್ರೀಯ ಮಕ್ಕಳು. ಒಂದು ಕಾಲದಲ್ಲಿ ಅವರಿದ್ದ ಸ್ಥಳದಲ್ಲಿ ಕೆಲವರು ಋಷಿಗಳು ಬಂದು ನಿಂತರು. ತಾಯಿಯು ಮಗನನ್ನು ಅವರ ಸೇವೆಗೆ ಹತ್ತಿಸಿದಳು. ಋಷಿಗಳು ಆ ಹುಡುಗನ ಸೇವೆಯಿಂದ ಪ್ರಸನ್ನರಾಗಿ ತಾವು ಹೋಗುವಾಗ ಭಗವಂತನ ನಾಮವನ್ನು ಉಪದೇಶಿಸಿ ಭಗವದಾರಾಧನೆಯ ಕ್ರಮವನ್ನು ಹೇಳಿಕೊಟ್ಟರು. ಇದರಿಂದ ಅವರಿಗೆ ಬರುಬರುತ್ತಾ ವೈರಾಗ್ಯವು ಹೆಚ್ಚಿ ತಮ್ಮ ತಾಯಿಯ ಮರಣಾನಂತರದಲ್ಲಿ ಅವರು ಕಾಡಿಗೆ ಹೋಗಿ ಭಗವಂತನ ಪ್ರೇಮವನ್ನು ಸಂಪಾದಿಸಿಕೊಂಡರು. ಜನ್ಮಾಂತರದಲ್ಲಿ ದೇವರ್ಷಿತ್ವವನ್ನೇ ಪಡೆದುಕೊಂಡರು. ಹೀಗೆ ಭಗವದ್ಭಕ್ತರಾದ ಮಹನೀಯರ ಸಂಗವು ದುರ್ಲಭವೂ ಅಗಮ್ಯವೂ ಅಮೂಲ್ಯವೂ ಆಗಿರುತ್ತದೆ. ಭಕ್ತರ ಸಂಗದಿಂದ ಪ್ರಾಕೃತರ ಸಂಗವು ಸುಲಭವಾಗಿ ಬಿಟ್ಟುಹೋಗುತ್ತದೆ. ಭಗವದ್ಭಕ್ತಿಯೆಂಬ ಮಳೆಯಂಗಿಯನ್ನು ತೊಟ್ಟವರಿಗೆ ಕುಸಂಗದ ಮಳೆಯು ಕುಂಭದ್ರೋಣವಾಗಿ ಹೊರಗೆ ಸುರಿಯುತ್ತಿದ್ದರೂ ಅದರ ದೋಷವು ತಟ್ಟುವದಿಲ್ಲ.

ಆದ್ದರಿಂದ ಮೊದಲು ಕುಸಂಗವನ್ನು ಬಿಡುವದಕ್ಕೆ ಸತ್ಸಂಗವೇ ಉಪಾಯವು. ಪ್ರಾಕೃತಜನರಿಗೆ ಸಾತ್ತ್ವಿಕವಾದ ಅಭ್ಯಾಸಗಳು ರುಚಿಸುವದಿಲ್ಲ. ಆದ್ದರಿಂದ ನೀವು ಪ್ರಾಕೃತಜನರನ್ನು ದ್ವೇಷಿಸಬೇಕಾದದ್ದಿಲ್ಲ ; ಸಾತ್ತ್ವಿಕಸಾಧನಗಳನ್ನು ಕೈಗೊಂಡರಾಯಿತು. ಹಿಂದಿನ ಆಶ್ರಮದಲ್ಲಿ ನನಗೆ ಕೆಲವರು ಜನರ ಸ್ನೇಹಿತರ ಸಹವಾಸದಿಂದ ಇಸ್ಪೀಟಿನ ಹವ್ಯಾಸವು ಬಂದಿತ್ತು ; ಅದೇ ಸ್ಥಲದಲ್ಲಿ ನಾವುಗಳು ಮತ್ತೊಮ್ಮೆ ಸೇರಿದಾಗ ನಾನು ಅಲ್ಲಿಯ ವಿದ್ಯಾಶಾಲೆಯ ಮುಖ್ಯೋಪಾಧ್ಯಾಯನಾದೆನು. ಅವರು ನನ್ನ ಸಹೋಪಾಧ್ಯಾಯರಾದರು. ಆದರೂ ಅವರು ಪೂರ್ವಪರಿಚಯದ ಬಲದಿಂದ ನಮ್ಮ ಮನೆಗೇ ಬಂದು ಇಸ್ಪೀಟಿನ ಆಟವನ್ನು ಅಲ್ಲಿಯೇ ಪ್ರಾರಂಭಿಸಿದರು. ಆದರೆ ನಾನು ಏನೂ ಅನ್ನದೆ ಬೃಹದಾರಣ್ಯಕೋಪನಿಷತ್ತನ್ನು ಬಿಚ್ಚಿನೋಡುವುದಕ್ಕೆ ಮೊದಲುಮಾಡಿದೆನು. ಆಮೇಲೆ ಆ ಜನರು ಒಬ್ಬೊಬ್ಬರಾಗಿ ಹೊರಟುಹೋದರು. ಮುಂದೆ ನಮ್ಮ ಮನೆಯಲ್ಲಿ ಇಸ್ಪೀಟಿನ ಸುದ್ದಿಯೇ ಇಲ್ಲದಂತೆ ಆಯಿತು. ಅದರ ಬದಲು ವೇದಾಂತದಲ್ಲಿ ಅಭಿರುಚಿಯುಳ್ಳ ಜನರು ಒಬ್ಬೊಬ್ಬರಾಗಿ ಆ ಮನೆಗೆ ಬರುವದಕ್ಕೆ ಆರಂಭಿಸಿದರು. ಹೀಗಿದೆ, ಸಾತ್ತ್ವಿಕಾಭ್ಯಾಸಗಳ ಫಲ ! ಆದ್ದರಿಂದ ನಾವು ಪ್ರಾಕೃತರ ಸಂಗವನ್ನು ಬಿಡುವದಕ್ಕೆ ಮೊದಲು ಸಾತ್ತ್ವಿಕಸಾಧನಗಳನ್ನು ಕೈಗೊಳ್ಳಬೇಕು ; ಅದಕ್ಕಿಂತಲೂ ಮೊದಲು ಸಾತ್ತ್ವಿಕಸಾಧನಗಳನ್ನು ಮಾಡುತ್ತಿರುವ ಸಜ್ಜನರ ಮೇಲುಪಙ್ಕ್ತಿಯನ್ನು ಅನುಸರಿಸಬೇಕು. ಅರತಿರ್ಜನಸಂಸದಿ- ಎಂಬ ಸಾಧನದ ವಿಚಾರದಲ್ಲಿ ತಿಳಿದುಕೊಳ್ಳಬೇಕಾದದ್ದೇ ಇದು.

ಯಾವ ಮಹನೀಯನಿಗೆ ಪ್ರಾಕೃತಜನರ ಸಂಗದಲ್ಲಿ ಅರತಿಯುಂಟಾಗುವದೋ ಯಾವ ಮಹನೀಯನಿಗೆ ಏಕಾಂತದಲ್ಲಿದ್ದು ಸಾತ್ತ್ವಿಕಾಭ್ಯಾಸಗಳನ್ನೂ ವಿಶೇಷವಾಗಿ ಭಗವದ್ಧ್ಯಾನವನ್ನೂ ಮಾಡುವದರಲ್ಲಿ ರುಚಿಯು ತೋರುವದೋ ಅವನು ಜ್ಞಾನಕ್ಕೆ ತಕ್ಕ ಅಧಿಕಾರಿಯಾಗುವನು.

# ೧೧೩. ಅಧ್ಯಾತ್ಮಜ್ಞಾನನಿತ್ಯತ್ವ, ತತ್ತ್ವಜ್ಞಾನಾರ್ಥದರ್ಶನ 13 - (11)

**(23-1-49)**

ಇನ್ನೆರಡು ಸಾಧನಗಳನ್ನು ವಿವರಿಸಿದರೆ `ಏತಜ್ಜ್ಞಾನಮಿತಿ ಪ್ರೋಕ್ತಮ್' ಇದೇ ಜ್ಞಾನವೆನಿಸುವದು - ಎಂದು ಭಗವಂತನು ತಿಳಿಸಿರುವ ಸಾಧನಗಳನ್ನು ಮುಗಿಸಿದಂತೆ ಆಗುತ್ತದೆ. ಇಲ್ಲಿ ತಿಳಿಸುವ ಸಾಧನಗಳನ್ನು ತಾನುತಾನು ಮಾಡಿಯೇ ಅರಿತುಕೊಳ್ಳಬೇಕು; ಬರಿಯ ಶಾಸ್ತ್ರದಿಂದ ತಿಳಿವಳಿಕೆಯಾಗುವದಿಲ್ಲ. ಅಡಿಗೆಮಾಡತಕ್ಕವರೆಲ್ಲ ಪಾಕಶಾಸ್ತ್ರವನ್ನು ಓದಿಯೇ ಅಡಿಗೆಮಾಡುವದನ್ನು ಕಲಿಯುವದಿಲ್ಲವಷ್ಟೆ. ಆದರೂ ಶಾಸ್ತ್ರದಲ್ಲಿ ವಿಷಯವನ್ನು ಕ್ರಮಪಡಿಸಿ ತಿಳಿಸಿರುತ್ತದೆಯಾದ್ದರಿಂದ ತನ್ನ ಅನುಭವದಲ್ಲಿರುವ ಸಾಧನಗಳ ತತ್ತ್ವವನ್ನು ಕ್ರಮವರಿತು ತಿಳಿದುಕೊಳ್ಳುವದಕ್ಕೆ ಶಾಸ್ತ್ರದ ತಿಳಿವಳಿಕೆಯೂ ಪ್ರಯೋಜನಕ್ಕಾಗುತ್ತದೆ. ಜ್ಞಾನಸಾಧನಗಳನ್ನು ಇಲ್ಲಿ ಹೇಳಿರುವದು ಜ್ಞಾನಕ್ಕಿರುವ ಅಡ್ಡಿಗಳನ್ನು ಕಳೆದುಕೊಳ್ಳುವದಕ್ಕೋಸ್ಕರ; ಮಾನಿತ್ವಾದಿಗಳಿರುವವರಿಗೆ ಜ್ಞಾನವುಂಟಾಗಲಾರದು, ಆದ್ದರಿಂದ ಅಮಾನಿತ್ವಾದಿಗಳನ್ನು ಅಭ್ಯಾಸಮಾಡಬೇಕು ಎಂಬುದರಲ್ಲಿಯೇ ತಾತ್ಪರ್ಯವಿದೆ. ಅಮಾನಿತ್ವದಿಂದ ಹಿಡಿದು ತತ್ತ್ವಜ್ಞಾನಾರ್ಥದರ್ಶನದವರೆಗಿನ ಜ್ಞಾನಸಾಧನಗಳ ಪಟ್ಟಿಯನ್ನು ಉದ್ದಕ್ಕೆ ಹೇಳಿರುವದನ್ನು ಕಂಡು ಯಾರೂ ಬೆಚ್ಚುಬೀಳುವ ಕಾರಣವಿಲ್ಲ. ಏಕೆಂದರೆ ಇಲ್ಲಿ ಹೇಳಿರುವ ಸಾಧನಗಳನ್ನೆಲ್ಲ ಪ್ರತಿಯೊಬ್ಬನೂ ಒಂದಾಗುತ್ತಲೊಂದನ್ನು ತೆಗೆದುಕೊಂಡು ಅನುಷ್ಠಾನಕ್ಕೆ ತಂದುಕೊಳ್ಳಬೇಕೆಂದೇನೂ ಭಗವಂತನ ಅಭಿಪ್ರಾಯವಿರುವದಿಲ್ಲ. ಅಂಗಡಿಯಲ್ಲಿ ಅನೇಕಸಾಮಾನುಗಳನ್ನು ಇಟ್ಟಿದ್ದರೂ ಜನರು ತಮತಮಗೆ ಬೇಕಾದ ಸಾಮಾನುಗಳನ್ನು ಕೊಳ್ಳುವದಕ್ಕೆ ಹೋಗುವರೇ ಹೊರತು ಅಲ್ಲಿರುವ ಸಾಮಾನುಗಳೆಲ್ಲವನ್ನೂ ತಾವು ಒಬ್ಬರೇ ಕೊಳ್ಳಬೇಕೆಂದು ಯಾರೂ ಎಣಿಸುವಂತಿಲ್ಲ. ಇದರಂತೆಯೇ ಜ್ಞಾನಕ್ಕೆ ಅಡ್ಡಿಯಾಗಿರುವ ಯಾವ ದೋಷವು ತಮ್ಮ ಚಿತ್ತದಲ್ಲಿದೆಯೆಂದು ತೋರುವದೋ ಅದನ್ನು ಕಳೆದುಕೊಳ್ಳುವದಕ್ಕೆ ತಕ್ಕ ಆಯಾ ಸಾಧನವನ್ನು ಆರಿಸಿಕೊಂಡು ಪ್ರಯತ್ನಿಸಬೇಕು. ಅಷ್ಟೆ.

ಈ ದಿನ **ಅಧ್ಯಾತ್ಮಜ್ಞಾನನಿತ್ಯತ್ವ, ತತ್ತ್ವಜ್ಞಾನಾರ್ಥದರ್ಶನ** - ಇವುಗಳ ವಿಷಯವನ್ನು ವಿಚಾರಕ್ಕೆ ತೆಗೆದುಕೊಳ್ಳಬೇಕಾಗಿದೆ. ಮನುಷ್ಯನು ತನ್ನ ವಿಚಾರವೊಂದನ್ನು ಬಿಟ್ಟು ಮಿಕ್ಕದ್ದೆಲ್ಲವನ್ನೂ ವಿಚಾರಮಾಡುತ್ತಿರುತ್ತಾನೆ ; ಅವನಿಗೆ ತನ್ನ ವಿಚಾರವನ್ನು ಮಾಡಿಕೊಳ್ಳುವದಕ್ಕೆ ವಿರಾಮವೇ ಇರುವದಿಲ್ಲ. ``ಅಧ್ಯಾತ್ಮವಿದ್ಯೆ ಎಂದರೆ ಒಂದು ಕಾಡಿನಂತೆ ಇರುತ್ತದೆ; ಇದರಲ್ಲಿ ಯಾವಯಾವ ವಿಷಯಗಳನ್ನು ಹೇಳುತ್ತಾರೋ ನಾವು ಈಗ ತಿಳಿದುಕೊಂಡಿದ್ದೇವೆಯೋ, ಮುಂದೆ ಏನು ತಿಳಿದುಕೊಳ್ಳಬೇಕೋ ಒಂದೂ ತಿಳಿಯದಾಗಿದೆ" ಎಂದು ಗೊಣಗಿಕೊಳ್ಳುವವರು ಅನೇಕರು ಉಂಟು. ಒಬ್ಬ ಸಾಧುಗಳು `ಎಲ್ಲ ಪುರಾಣವನರಿತಿಹೆನೆಂಬೆಯು ನಿನ್ನ ಪುರಾಣವನೀನರಿಯೆ' ಎಂದು ಪ್ರಾಕೃತಮಾನವನನ್ನು ಹಂಗಿಸಿರುತ್ತಾರೆ. ನಿಜವಾಗಿಯೂ ಇದು ಶೋಚನೀಯವು. ಏಕೆಂದರೆ

ಅಧ್ಯಾತ್ಮವಿದ್ಯೆಯು ತನ್ನ ಸ್ವರೂಪಕ್ಕೇ ಸಂಬಂಧಪಟ್ಟದ್ದು. ತನ್ನ ಪರಮಾರ್ಥಸ್ವರೂಪವು ಯಾವದು ಎಂಬ ವಿಚಾರಕ್ಕೇ ಅವಕಾಶವಿಲ್ಲದವನ ಬಾಳು ನಿರರ್ಥಕವಲ್ಲವೆ?

ಎಲ್ಲಾ ಪದಾರ್ಥಗಳೂ ಲೋಕದಲ್ಲಿ ತಾವು ತಾವು ಇರುವಂತೆ ಇದ್ದುಕೊಂಡಿರುತ್ತವೆ. ಆದರೆ ಯಾರಿಗೆ ಯಾವ ಪದಾರ್ಥವು ಬೇಕೋ ಅವರು ಅದರ ವಿಚಾರವನ್ನು ಮಾಡುತ್ತಾರೆ. ಇದರಂತೆ ಆತ್ಮಾನಾತ್ಮವಿವೇಕಜ್ಞಾನವು ಎಲ್ಲರಿಗೂ ಬೇಕಾಗುವದಿಲ್ಲ ; ಎಲ್ಲಿಯೋ ಕೆಲವರು ಪುಣ್ಯಾತ್ಮರಿಗೆ ಮಾತ್ರ ಆಗುತ್ತದೆ. ಯಾವಾಗ ಮನುಷ್ಯನು ನಿತ್ಯವೂ ಆತ್ಮಸ್ವರೂಪವನ್ನೇ ಕುರಿತು ಪ್ರೇಮದಿಂದ ವಿಚಾರಮಾಡುತ್ತಿರುವನೋ ಆಗ ಅವನಿಗೆ ಅಧ್ಯಾತ್ಮಜ್ಞಾನನಿತ್ಯತ್ವವು ಎಂಬ ಸಾಧನವು ಅಳವಟ್ಟಂತೆ ಆಯಿತೆಂದು ತಿಳಿಯಬೇಕು. ನಮ್ಮ ಪರಿಚಿತನಾದವನೊಬ್ಬನು ಕಳ್ಳತನದಲ್ಲಿ ನಿಪುಣನೆಂದು ಇಟ್ಟುಕೊಳ್ಳಿರಿ. ಅವನು ನಮ್ಮ ಮನೆಯಲ್ಲಿದ್ದಾನೆ. ರಾತ್ರೆಯಲ್ಲಿ ಅವನಿಗೆ ನಿದ್ರೆಯೇ ಸರಿಯಾಗಿ ಬರುವದಿಲ್ಲ ; ಮನೆಯಲ್ಲಿ ಬೆಲೆಯುಳ್ಳ ಒಡವೆವಸ್ತುಗಳನ್ನು ಎಲ್ಲಿಟ್ಟಿರುವರು ಎಂಬುದರ ಆಲೋಚನೆಯಲ್ಲಿಯೇ ಅವನು ಜಾಗರಣೆಮಾಡುತ್ತಿರುವನು. ಇಂಥಲ್ಲಿ ಹಣವನ್ನೂ ಬೆಲೆಯುಳ್ಳ ಪದಾರ್ಥಗಳನ್ನೂ ಇಟ್ಟಿರುವರೆಂದೂ ತಾನು ಮಲಗಿರುವ ಕೋಣೆಯು ಆ ಸ್ಥಳಕ್ಕೆ ಸಮೀಪವಾಗಿರುವದೆಂದೂ ತಿಳಿದಿದ್ದರಂತೂ ಅವನಿಗೆ ಆ ಪದಾರ್ಥಗಳನ್ನು ಯಾವಾಗ ಹೇಗೆ ವಶಪಡಿಸಿಕೊಂಡೇನು - ಎಂಬ ಯೋಚನೆಯು ಅತ್ಯಂತ ಬಲವಾಗಿ ಹತ್ತಿಕೊಂಡುಬಿಟ್ಟಿರುವದು. ಅವನು ಎಡೆಬಿಡದೆ ತನ್ನ ಕಾರ್ಯಸಾಧನೆಗೆ ಉಪಾಯವನ್ನು ಕಂಡುಕೊಳ್ಳುವದರಲ್ಲಿಯೇ ನಿರತನಾಗಿರುವನು. ಅಲ್ಲವೆ ? ಸಾಧಕನಾದವನಿಗೆ ಅಧ್ಯಾತ್ಮಜ್ಞಾನವನ್ನು ಸಂಪಾದಿಸಿಕೊಳ್ಳುವದರಲ್ಲಿ ಅಂಥ ಹಂಬಲಿಕೆಯಿರಬೇಕು. ಇದೇ ಅಧ್ಯಾತ್ಮಜ್ಞಾನನಿತ್ಯತ್ವವು.

ನಮ್ಮಲ್ಲಿ ಒಬ್ಬೊಬ್ಬರ ಮನಸ್ಸು ಒಂದೊಂದು ವಸ್ತುವಿನಲ್ಲಿ ಕುಳಿತುಬಿಟ್ಟಿರುತ್ತದೆ. ನಮಗೂ ಆ ಪದಾರ್ಥಕ್ಕೂ ಮೊಳೆಬಡಿದಂತೆ ಬಲವಾಗಿ ನಿತ್ಯಸಂಬಂಧವಾಗಿಬಿಟ್ಟಿರುತ್ತದೆ. ಅಲ್ಲವೆ? ಅದರಂತೆಯೇ ಅಧ್ಯಾತ್ಮಜ್ಞಾನಕ್ಕೂ ನಮಗೂ ಬಲವಾದ ಗಂಟು ಬಿದ್ದಿರಬೇಕು. ಶ್ರುತಿಯಲ್ಲಿ `ಆತ್ಮನನ್ನೇ ಹುಡುಕಬೇಕು, ಆತನನ್ನೇ ಅರಿತು ಅನುಭವಕ್ಕೆ ತಂದುಕೊಳ್ಳಬೇಕು' ಎಂದು ಮತ್ತೆ ಮತ್ತೆ ಹೇಳಿರುತ್ತದೆ. ಅಧ್ಯಾತ್ಮಜ್ಞಾನದಲ್ಲಿ ಯಾರಿಗೆ ನಿತ್ಯವೂ ಆಶೆಯುಂಟಾಗಿರುವದೋ, ಅವರು ಎಂದಿಗೆ ನಾವು ಆ ಜ್ಞಾನವನ್ನು ಸಂಪಾದಿಸಿಯೇವು ಎಂದು ಹಾತುವರಿಯುತ್ತಿರುವರು; ಇದರಿಂದ ಅವರಿಗೆ ಮಿಕ್ಕ ವಿಷಯಗಳಲ್ಲೆಲ್ಲ ಪೂರ್ಣವೈರಾಗ್ಯವುಂಟಾಗಿಬಿಟ್ಟಿರುತ್ತದೆ. ಧನಧಾನ್ಯಸಮೃದ್ಧವಾಗಿರುವ ಇಡಿಯ ಭೂಮಂಡಲವೂ ಅವರ ದೃಷ್ಟಿಯಲ್ಲಿ ಅಧ್ಯಾತ್ಮಜ್ಞಾನಕ್ಕಿಂತ ತೀರ ಕಡಿಮೆಯ ಬೆಲೆಯದಾಗಿರುವದು. ಈಗ ನಾವು ಕಲಿಯುತ್ತಿರುವ ವಿದ್ಯೆಗೆ ಬೆಲೆ ಬಹಳ ಕಡಿಮೆ. ಭೌತಿಕಶಾಸ್ತ್ರದ ತಿಳಿವಳಿಕೆಯಿಂದ ಈಗಿನ ನಾಗರಿಕಜನರು ಎಷ್ಟೋ ಅದ್ಭುತಶಕ್ತಿಗಳನ್ನು ಸಂಪಾದಿಸಿಕೊಂಡಿರುತ್ತಾರೆ. ಅವರ ಸಾಹಸವು ಹಿಂದಿನ ಕಾಲದವರಿಗೆ ಹೋಲಿಸಿದರೆ ಬಹಳ ಆಶ್ಚರ್ಯಕರವಾಗಿರುತ್ತದೆ. ಆದರೇನು ? ಅದರ ಬೆಲೆಯೇನೂ ಅಷ್ಟು ಹೆಚ್ಚಿನದಲ್ಲ. ಒಬ್ಬ

ತರುಣನು ಮನೆಯನ್ನು ಬಿಟ್ಟು ಎಷ್ಟೋ ವರ್ಷಗಳವರೆಗೆ ಕಾಡಿನಲ್ಲಿ ಏಕಾಂತವಾಗಿ ತಪಸ್ಸು ಮಾಡಿ ಕೊನೆಗೆ, ಪ್ರಸನ್ನವಾದ ದೇವತೆಯಿಂದ ನೀರಿನ ಮೇಲೆ ನಡೆಯುವ ವಿದ್ಯೆಯನ್ನು ಕಲಿತುಕೊಂಡುಬಂದನಂತೆ. ಊರಿನವರೆಲ್ಲರೂ ಅವನ ಕೌಶಲಕ್ಕೆ ಬೆರಗಾಗಿ ಅವನನ್ನು ತಾಯಿಯ ಮುಂದೆ ಹೊಗಳಲು ಆಕೆಯು ``ಅಯ್ಯೊ! ಈ ಹುಡುಗನಿಗೆ ಆಯುಸ್ಸು ವ್ಯರ್ಥವಾಗಿಹೋಯಿತಲ್ಲ! ಇಷ್ಟು ವರ್ಷಗಳವರೆಗೆ ಕಷ್ಟಪಟ್ಟು ಒಂದಾಣೆಯ ಬೆಲೆಯ ವಿದ್ಯೆಯನ್ನು ಕಲಿತುಕೊಂಡುಬಂದನಲ್ಲ! ನಮ್ಮೂರ ಅಂಬಿಗನಿಗೆ ಒಂದಾಣೆ ಕೊಟ್ಟರೆ ನದಿಯಿಂದ ಆಚೆಗೆ ದಾಟಿಸಿಬಿಡುತ್ತಾನೆ. ನೀರಿನ ಮೇಲೆ ಆಚೆಯ ದಡಕ್ಕೆ ಹೋಗುವದಕ್ಕೆ ಈ ತಪಸ್ಸನ್ನು ಮಾಡಬೇಕಿತ್ತೆ?' ಎಂದು ಪಶ್ಚಾತ್ತಾಪಪಟ್ಟಳಂತೆ. ನಮ್ಮ ವಿದ್ಯೆಯು ಹೀಗೆ ವ್ಯರ್ಥಕಾಲಕ್ಷೇಪದ್ದಾಗಿದೆ. ಹಿಂಸಾಪ್ರಧಾನವಾದ ಮರಣಕಿರಣಗಳು, ಆಟಂಬಾಂಬು - ಮುಂತಾದವುಗಳನ್ನು ಕಂಡುಹಿಡಿಯುವದರಲ್ಲಿ ಮುಗಿದಿದೆ, ನಮ್ಮ ತಿಳಿವಳಿಕೆ ; ಎಲ್ಲೆಲ್ಲಿಯೂ ಒಬ್ಬ ಆತ್ಮನೇ ಇರುತ್ತಾನೆ ; ಎಲ್ಲಾ ಪ್ರಾಣಿಗಳಿಗೂ ನಮ್ಮ ಆತ್ಮನಾದ ಪರಮಾತ್ಮನೇ ಆತ್ಮನು - ಎಂಬ ವಿದ್ಯೆಯನ್ನು ಅನುಭವಕ್ಕೆ ತಂದುಕೊಂಡರೆ ಆಗುವ ಲಾಭವೇನು, ನೋಡಿರಿ; ಎಲ್ಲರಲ್ಲಿಯೂ ಸಮವಾದ ಪ್ರೇಮ, ಎಲ್ಲಾ ದಿಕ್ಕುಗಳಲ್ಲಿಯೂ ಆನಂದದ ಸೂರೆ ! ಇದನ್ನು ಬಿಟ್ಟು ಮಿಕ್ಕ ಕ್ಷುದ್ರವಿದ್ಯೆಗಳಿಂದ ನಮಗೆ ಆಗಬೇಕಾದದ್ದೇನು? ಒಬ್ಬ ಸ್ನೇಹಿತರು ಅನೇಕ ಉಪಾಸನಾತತ್ತ್ವಗಳನ್ನು ತಿಳಿದವನೆಂಬ ಒಬ್ಬಾತನ ಕಥೆಯನ್ನು ನನಗೆ ಹೇಳಿದ್ದರು. ಆತನು ಶ್ರುತಿಗಳಲ್ಲಿ ಹೇಳಿರುವ ವಿದ್ಯೆಗಳೆಂಬ ಹಲವು ಉಪಾಸನೆಗಳ ವಿಷಯವಾಗಿ ಓದಿ ತಿಳಿದುಕೊಂಡಿದ್ದನು. ಆ ತಿಳಿವಳಿಕೆಯನ್ನು ಒಂದೊಂದು ವಿದ್ಯೆಗೆ ಇಂತಿಷ್ಟೆಂದು ಬೆಲೆಕಟ್ಟಿ ಏನೂ ತಿಳಿಯದ ಜನರಿಗೆ ಮಾರುತ್ತಿದ್ದನು. ಒಂದು ದಿನ ಇಂಥ ಶಿಷ್ಯರಲ್ಲಿ ಒಬ್ಬನಾದ ಒಬ್ಬ ದೊಡ್ಡ ಅಧಿಕಾರಿಯೊಡನೆ ಕುದುರೆಗಾಡಿಯಲ್ಲಿ ಕುಳಿತು ಕಚೇರಿಯ ಕಡೆಗೆ ಹೋಗುತ್ತಿರುವಲ್ಲಿ ನಡುವೆ ಪೇಟೆಯಲ್ಲಿ ಆತನು `ರಾಯರೆ, ಸ್ವಲ್ಪ ಕಾಗದ ಬೇಕಲ್ಲ !' ಎಂದನು ; ರಾಯರು ಕೂಡಲೆ ಗಾಡಿಯಿಂದ ಅತ್ತ ತಿರುಗಿ ತಮ್ಮ ಸಾಲದ ಅಂಗಡಿಯವನಿಗೆ ``ಅಪ್ಪ, ಈ ಶಾಸ್ತ್ರಿಗಳಿಗೆ ಅವರು ಕೇಳಿದಷ್ಟು ಕಾಗದವನ್ನು ಕೊಟ್ಟು ನಮ್ಮ ಲೆಕ್ಕಕ್ಕೆ ಬರೆದುಬಿಡಿ!" ಎಂದು ಹೇಳಿ ಶಾಸ್ತ್ರಿಯನ್ನು ಅಲ್ಲಿಯೇ ಕೆಳಕ್ಕಿಳಿಸಿ ತಾವು ಕಚೇರಿಗೆ ಹೋಗಿಬಿಟ್ಟರು. ಇತ್ತ ಶಾಸ್ತ್ರಿಯು ಅಂಗಡಿಯವನಿಂದ ನೂರಾರು ರೀಮು ಕಾಗದಗಳನ್ನು ಕೊಂಡು ಗಾಡಿಯ ಮೇಲೆ ಹಾಕಿಕೊಂಡು ಹೋಗಿ ಮತ್ತೊಬ್ಬನಿಗೆ ಮಾರಿಬಿಟ್ಟು ಹಣವನ್ನು ತೆಗೆದುಕೊಂಡು ಪರಾರಿಯಾದನಂತೆ. ರಾಯರಿಗೆ ಅಂಗಡಿಯವರಿಂದ ಆ ತಿಂಗಳು ಬಾಕಿಗೆ ಬಿಲ್ಲು ಬಂದ ಬಳಿಕವೇ ವಿಷಯವು ತಿಳಿಯಿತಂತೆ! ಇಂಥ ಕ್ಷುಲ್ಲಕವಿದ್ಯೆಗಳನ್ನು ನಾವು ಏನೆಂದು ಕರೆಯಬೇಕು? ಅಧ್ಯಾತ್ಮಜ್ಞಾನಕ್ಕೂ ಮಿಕ್ಕ ಜ್ಞಾನಗಳಿಗೂ ಇರುವ ತಾರತಮ್ಯವೇ ಇದು. ಮಿಕ್ಕಜ್ಞಾನಗಳು ಎಂಥ ಘನವಾದ ಹೆಸರನ್ನು ಪಡೆದಿರಲಿ, ಅವೆಲ್ಲ ಸ್ವಾರ್ಥಕ್ಕೆ ವಿನಿಯೋಗವಾಗತಕ್ಕವೇ ಹೊರತು ಪರಮಪುರುಷಾರ್ಥಕ್ಕೆ ಕಾರಣವಾದವಲ್ಲ ; ಅವುಗಳಿಂದ ಸಾರ್ವತ್ರಿಕಹಿತವೂ ತನ್ನ ಕಲ್ಯಾಣವೂ ಆಗುವದಿಲ್ಲ.

ಜ್ಞಾನಿಗಳಿಗೆ ಈ ಪ್ರಪಂಚವು ಕಾಣುವ ಬಗೆಯೇ ಬೇರೆ. ಪದಾರ್ಥಗಳು ನೋಡುವವರ ದೃಷ್ಟಿಭೇದದಿಂದ ಬೇರೆಬೇರೆಯಾಗಿ ಕಾಣಬರುವವು. ಒಂದು ದೇವಸ್ಥಾನದ ಮುಂಭಾಗದಲ್ಲಿ ಇಬ್ಬರು ನಿಂತಿದ್ದರು. ಅವರಲ್ಲಿ ಒಬ್ಬನು ಇಲ್ಲಿ ಎಷ್ಟು ಜನರಿಗೆ ಊಟಕ್ಕೆ ಎಲೆಹಾಕಬಹುದು?- ಎಂಬುದನ್ನು ಯೋಚಿಸಹತ್ತಿದನು. ಮತ್ತೊಬ್ಬನು ಇಲ್ಲೊಂದು ಭಾಷಣವನ್ನು ಮಾಡಿದರೆ ಎಷ್ಟು ಜನ ಸಭೆ ಸೇರಬಹುದು? - ಎಂಬುದನ್ನು ಕುರಿತು ಆಲೋಚಿಸತೊಡಗಿದನು. ಇದರಂತೆ ಪ್ರಾಕೃತರಿಗೆ ಈ ಜಗತ್ತು ಅನೇಕ ಭೇದಗಳಿಂದ ಕೂಡಿರುವಂತೆ ಕಾಣುವದು ; ಅದರಲ್ಲಿ ರಾಗದ್ವೇಷಾದಿಗಳಿಗೆ ಪಾತ್ರರಾದ ಶತ್ರುಮಿತ್ರಾದಿಗಳು ಇರುವಂತೆ ಕಾಣುವದು. ಆದರೆ ವಿವೇಕಿಗಳಿಗೆ ಎಲ್ಲೆಲ್ಲಿಯೂ ಪರಮಾತ್ಮನೇ ಕಾಣಿಸುವನು. ಹೀಗೆ ಅಧ್ಯಾತ್ಮಜ್ಞಾನವು ನಮ್ಮ ದೃಷ್ಟಿಕೋನವನ್ನೇ ಮಾರ್ಪಡಿಸುವದೆಂಬುದನ್ನರಿತು ನಾವು ನಿತ್ಯವೂ ಅಧ್ಯಾತ್ಮಜ್ಞಾನದಲ್ಲಿಯೇ ಪ್ರೀತಿಯನ್ನು ತೋರಿಸಬೇಕು. ಇಂಥ ಅಧ್ಯಾತ್ಮಜ್ಞಾನನಿತ್ಯತ್ವವೇ ಪರಮಾರ್ಥಜ್ಞಾನಕ್ಕೆ ಮುಖ್ಯಸಾಧನವಾಗುವದು.

ಇನ್ನು **ತತ್ತ್ವಜ್ಞಾನಾರ್ಥದರ್ಶನ**ವೆಂಬ ಮತ್ತೊಂದು ಸಾಧನವನ್ನು ವಿಚಾರಮಾಡೋಣ. ತತ್ತ್ವಜ್ಞಾನವೆಂದರೇನು? ಅಮಾನಿತ್ವಾದಿಸಾಧನಗಳನ್ನು ಭಾವನೆಮಾಡಿಮಾಡಿ ಅವು ಪರಿಪಕ್ವವಾದರೆ ತತ್ತ್ವಜ್ಞಾನವೇ ಉಂಟಾಗಿಬಿಡುತ್ತವೆ. ಆ ಜ್ಞಾನದಿಂದ ಆಗತಕ್ಕದ್ದು **ಮೋಕ್ಷ**. ಈ ತತ್ತ್ವಜ್ಞಾನಾರ್ಥವಾದ ಮೋಕ್ಷವನ್ನು ಕುರಿತು ಆಲೋಚಿಸುವದೇ ತತ್ತ್ವಜ್ಞಾನಾರ್ಥದರ್ಶನವೆಂಬ ಸಾಧನವು. ಈಗ ನಾವು ಇರುವದು ಬಂಧವು; ನಾವು ಕಾಮಾದಿಗಳಿಗೆ ಕಟ್ಟುಬಿದ್ದು ಕಂಡಕಂಡ ಕರ್ಮಗಳನ್ನು ಮಾಡುತ್ತಾ ಒಳ್ಳೆಯ ಕೆಟ್ಟ ಕರ್ಮಗಳನ್ನು ಅನುಭವಿಸುತ್ತಾ ಸುಖದುಃಖಗಳನ್ನು ಅನುಭವಿಸುತ್ತಿರುವೆವು. ಈ ಬಂಧದಿಂದ ಬಿಡುಗಡೆಯಾಗಿ ಎಲ್ಲೆಲ್ಲಿಯೂ ಆತ್ಮನನ್ನು ಕಂಡು ಆನಂದಿಸುವ ಮೋಕ್ಷವು ನಮಗೆ ಬೇಕು - ಎಂದು ಹಾತುವರಿಯುವುದೇ ತತ್ತ್ವಜ್ಞಾನಾರ್ಥದರ್ಶನವು. ಯಾವನಿಗೆ ಏತರ ಹಂಬಲು ಹತ್ತಿಕೊಂಡಿರುವದೋ ಅವನಿಗೆ ಅದರ ಪ್ರಾಪ್ತಿಗಾಗಿ ಸಾಧನವನ್ನು ಮಾಡಬೇಕೆಂಬ ಅಭಿಲಾಷೆಯುಂಟಾಗುತ್ತದೆ ; ಅವನೇ ಅದನ್ನು ಮಾಡುವ ಹವಣಿಕೆಯನ್ನು ಮಾಡುತ್ತಾನೆ; ಅವನಿಗೇ ಅದರ ಫಲವು ಪ್ರಾಪ್ತಿಯಾಗುತ್ತದೆ. ನಮಗೆ ಮೋಕ್ಷವೇ ಬೇಡದಿದ್ದರೆ ಅದಕ್ಕಾಗಿ ಜ್ಞಾನವನ್ನು ಸಂಪಾದಿಸುವ ಇಚ್ಛೆ ಎಲ್ಲಿಂದ ಬರುತ್ತದೆ? ಆ ಇಚ್ಛೆಯಿಲ್ಲದಿದ್ದರೆ ಜ್ಞಾನಸಾಧನವಾದ ಅಮಾನಿತ್ವಾದಿಗಳನ್ನು ಅನುಷ್ಠಾನಮಾಡುವದಾದರೂ ಎಲ್ಲಿಂದ ನಮ್ಮ ಮನಸ್ಸಿಗೆ ಬರಬೇಕು ?

ಮೊಟ್ಟಮೊದಲು ನಾವು ಬದ್ಧರಾಗಿದೇವೆ ಎಂಬ ಜ್ಞಾನವು ಬರಬೇಕು. ಯಾವನಿಗೆ ತಾನಿರುವ ಮನೆಯು ಇಷ್ಟರಲ್ಲಿಯೇ ಬೀಳುವದು ಎಂಬ ನಿಶ್ಚಿತವಾದ ಅರಿವು ಇರುವದಿಲ್ಲವೋ ಅವನು ಎಂದಿಗೂ ಆ ಮನೆಯನ್ನು ಬಿಟ್ಟು ಕೂಡಲೆ ಹೊರಗೆ ಹೋಗಬೇಕೆಂಬ ಯೋಚನೆಯನ್ನು ಮಾಡಲಾರನು. ಆದ್ದರಿಂದ ನಮ್ಮ ಈಗಿನ ಸ್ಥಿತಿಯನ್ನೂ ಅದರಿಂದ ಆಗುತ್ತಿರುವ ಅನರ್ಥಗಳನ್ನೂ

ಕಂಡು ಸಂಸಾರಕ್ಕೆ ಬೇಸತ್ತು ಇದರಿಂದ ಹೇಗಾದರೂ ಬಿಡುಗಡೆಯಾಗಬೇಕೆಂದು ನಾವು ತಿಳಿದುಕೊಂಡಿರಬೇಕು. ಇಷ್ಟೇ ಅಲ್ಲ. ಇದನ್ನು ಬಿಟ್ಟು ಅತ್ಯಂತವಾಗಿ ಬಯಸತಕ್ಕ ಪರಮಾನಂದದ ಸ್ಥಿತಿಯೊಂದು ಇದೆ; ಅದು ಜ್ಞಾನದಿಂದಲೇ ದೊರಕತಕ್ಕದ್ದು - ಎಂಬ ಜ್ಞಾನವು ನಮಗೆ ಸ್ಫುಟವಾಗಿ ಉಂಟಾಗಿರಬೇಕು. ಹಾಗಾದರೆ ಮಾತ್ರ ನಾವು ಮಾನಿತ್ವಾದಿಗಳಿಂದ ತಪ್ಪಿಸಿಕೊಳ್ಳಬೇಕೆಂದೂ ಅಮಾನಿತ್ವಾದಿಗಳನ್ನು ಪಡೆಯಬೇಕೆಂದೂ ಬಯಸುವೆವು. ಇದನ್ನೇ **ಮುಮುಕ್ಷುತ್ವ**ವೆಂದು ಬಲ್ಲವರು ಕರೆಯುವರು. ಈ ಮುಮುಕ್ಷುತ್ವವನ್ನೇ ಇಲ್ಲಿ ತತ್ತ್ವಜ್ಞಾನಾರ್ಥದರ್ಶನವೆಂದು ಕರೆದಿದೆ.

ಶರೀರಾದಿಗಳನ್ನು ತಾನೆಂದು ತಿಳಿದಿರುವದೇ ನಮ್ಮಲ್ಲಿ ಮಾನಿತ್ವಾದಿ ದೋಷಗಳುಂಟಾಗಿರುವದಕ್ಕೆ ಕಾರಣವು. ಈ ದೋಷಗಳಿಂದಲೇ ನಮಗೆ ಸಂಸಾರಬಂಧವುಂಟಾಗಿದೆ. ಶರೀರಾದಿಗಳಿಗಿಂತಲೂ ತೀರ ಭಿನ್ನನಾಗಿ ತೀರ ವಿಲಕ್ಷಣನಾಗಿ ಇವುಗಳ ದೋಷವು ಸ್ವಲ್ಪವೂ ಸೋಂಕದ ಸ್ವರೂಪದವನಾದ ಪರಮಾತ್ಮನೇ ನಮ್ಮ ಆತ್ಮನು ಎಂಬ ಜ್ಞಾನವೇ ಈ ಬಂಧದಿಂದ ಬಿಡುಗಡೆಯನ್ನುಂಟುಮಾಡುವ ಸಾಧನವು - ಎಂಬ ಅಭಿಪ್ರಾಯವು ಮನಸ್ಸಿನಲ್ಲಿ ಮೂಡಿದ ಹೊರತು ಆ ಜ್ಞಾನಕ್ಕಾಗಿ ನಾವು ಎಂದೂ ಪ್ರಯತ್ನಿಸುವ ಹಾಗಿಲ್ಲ. ಆ ಜ್ಞಾನವು ಬೇಕಾದ ಹೊರತು ನಾವು ಅಮಾನಿತ್ವಾದಿಗಳನ್ನು ಸ್ವಾಗತಿಸುವಂತೆಯೂ ಇಲ್ಲ. ನನಗೂ ಒಂದು ದಿನ ಜ್ಞಾನವು ಬರಲಿ, ಅದರಿಂದ ಮೋಕ್ಷವುಂಟಾಗುವದು - ಎಂಬ ಔದಾಸೀನ್ಯದ ಅರಿವು ಮುಮುಕ್ಷುತೆಯಲ್ಲ. ಆ ಅರಿವಿನಿಂದ ಯಾವ ಸಾಧನವನ್ನು ಮಾಡುವ ಇಚ್ಛೆಯೂ ಉಂಟಾಗಲಾರದು. ತಲೆಗೆ ಬೆಂಕಿಹತ್ತಿಸಿಕೊಂಡವನು ತಡಮಾಡದೆ ಬೇಗ ಹೋಗಿ ಒಂದು ಕೊಳದಲ್ಲಿ ಮುಳುಗಿ ತಾಪವನ್ನು ಆರಿಸಿಕೊಳ್ಳುವಂತೆ 'ಈ ಸಂಸಾರತಾಪದಿಂದ ಎಂದಿಗೆ ಬಿಡುಗಡೆಯಾದೀತು?'- ಎಂದು ಹಂಬಲಿಸುತ್ತಿರುವ ಮುಮುಕ್ಷುವೇ ಅಮಾನಿತ್ವಾದಿಸಾಧನಗಳನ್ನು ಮಾಡುವದಕ್ಕೆ ಯತ್ನಿಸುವನು. ಆದ್ದರಿಂದ ತತ್ತ್ವಜ್ಞಾನಾರ್ಥದರ್ಶನಗಳನ್ನು ಇಲ್ಲಿ ಜ್ಞಾನಸಾಧನವೆಂದು ಹೇಳಿರುವದು ಯುಕ್ತವೇ ಆಗಿದೆ. ಏಕೆಂದರೆ ಯಾವನಿಗೆ ಯಾವದರ ಅಭಿಲಾಷೆಯಿದೆಯೋ ಅವನು ಅದಕ್ಕೆ ಪ್ರಯತ್ನಿಸುತ್ತಾನೆ; ಆದ್ದರಿಂದ ಮೋಕ್ಷಾರ್ಥವಾದ ಜ್ಞಾನವನ್ನು ಬಯಸುವವನೇ ಜ್ಞಾನಸಾಧನದ ಅಭ್ಯಾಸಕ್ಕಾಗಿ ಪ್ರಯತ್ನಿಸುತ್ತಾನೆ. ಆದ್ದರಿಂದ ಜ್ಞಾನಾರ್ಥವಾದ ಮೋಕ್ಷವನ್ನು ಕುರಿತು ಹಂಬಲಿಕೆಯನ್ನು ತಂದುಕೊಳ್ಳುವದೆಂಬ ತತ್ತ್ವಜ್ಞಾನಾರ್ಥದರ್ಶನವು ಒಂದು ಮುಖ್ಯವಾದ ಜ್ಞಾನ ಸಾಧನವೆನಿಸುತ್ತದೆ.



# ೧೧೪. ಜ್ಞಾನ, ಅಜ್ಞಾನ 13 - (11)

## (31-1-49)

ಅಮಾನಿತ್ವದಿಂದ ಹಿಡಿದು ತತ್ತ್ವಜ್ಞಾನಾರ್ಥದರ್ಶನದವರೆಗೆ ಸಾಧನಗಳನ್ನು ಹೇಳಿದ್ದಾಯಿತು. ನಾನು ಹಿಂದೆಯೇ ಹೇಳಿರುವಂತೆ ಈ ಸಾಧನಗಳನ್ನೆಲ್ಲ ಒಟ್ಟಿಗೆ ಮಾಡಬೇಕೆಂಬುದೇನೂ ಇಲ್ಲ. ಇವುಗಳಲ್ಲಿ ಒಂದನ್ನು ಅಥವಾ ಎರಡನ್ನು ತಮ್ಮತಮ್ಮ ಮನಃಸ್ಥಿತಿಗೆ ಅನುಗುಣವಾಗಿ ಆರಿಸಿಕೊಂಡು ಅನುಷ್ಠಾನಕ್ಕೆ ತಂದುಕೊಂಡರೂ ಸಾಕು; ಅಷ್ಟರಿಂದಲೇ ಮಿಕ್ಕವುಗಳು ತಮಗೆತಾವೇ ಬಂದು ಸೇರುವವು. ಇಂಥದ್ದೊಂದು ಸಾಧನವು ತನಗೆ ಬೇಕೆಂಬುದು ತನ್ನತನ್ನ ಮನಸ್ಸಿನ ಅಂತಸ್ತಿನಿಂದ ತಾನೇ ಗೊತ್ತಾಗುತ್ತದೆ. ತಮ್ಮತಮ್ಮ ರುಚಿಗೆ ಅನುಸಾರವಾಗಿ ಆಯಾ ಸಾಧನವನ್ನು ಮಾಡಿ ಅದರಿಂದಲೇ ಆದರ್ಶಜೀವನವನ್ನು ಸಾಗಿಸಿದ ಮಹನೀಯರನೇಕರು ಆಗಿಹೋಗಿರುತ್ತಾರೆ. ಉದಾಹರಣೆಗೆ ಮಹಾತ್ಮಗಾಂಧಿಯವರು ಸತ್ಯ, ಅಹಿಂಸೆ-ಇವುಗಳನ್ನು ತಮ್ಮ ಧ್ಯೇಯವಾಗಿ ಇಟ್ಟುಕೊಂಡಿದ್ದೇನೆ ಎಂದಿರುತ್ತಾರೆ. ಅದರಿಂದ ಅವರಲ್ಲಿ ಮಿಕ್ಕ ಸಾಧನಗಳು ಇರಲಿಲ್ಲವೆಂದೇನೂ ನಾವು ಎಣಿಸುವದಿಲ್ಲ. ತತ್ತ್ವಜ್ಞಾನಾರ್ಥವಾಗಿ ಅಮಾನಿತ್ವಾದಿಗಳನ್ನು ಅನುಷ್ಠಿಸದಿದ್ದರೂ ಅವುಗಳಿಂದ ಪ್ರಯೋಜನವುಂಟೇ ಉಂಟು. ಆದರೆ ನಾವು ಇಲ್ಲಿ ವಿಮರ್ಶಿಸುತ್ತಿರುವದು ಅವು ತತ್ತ್ವಜ್ಞಾನಕ್ಕೆ ಸಾಧನವೆಂಬ ದೃಷ್ಟಿಯಿಂದಲೇ. ಇಲ್ಲಿ ಹೇಳಿರುವಷ್ಟೇ ಜ್ಞಾನಸಾಧನಗಳು ಎಂದು ಭಾವಿಸಬಾರದು. ಭಗವಂತನು ಕೆಲವನ್ನು ಮಾತ್ರ ಉಪಲಕ್ಷಣವಾಗಿ ಹೇಳಿರುತ್ತಾನೆ.

ಜ್ಞಾನಕ್ಕಾಗಿ ಸಾಧನಗಳನ್ನು ಮಾಡಬೇಕೆನ್ನುವವರು ತಿಳಿದುಕೊಳ್ಳಬೇಕಾದ ಒಂದು ವಿಷಯವಿದೆ. ನಮ್ಮ ವ್ಯವಹಾರವು ಸಾಗುವುದಕ್ಕೆ ನಾನು ಎಂಬ ಬುದ್ಧಿಯು ಒಂದು ಸಾಧನವಾಗಿರುತ್ತದೆ. ಒಂದು ಹಾಸುಗಲ್ಲನ್ನು ಎತ್ತಿ ಮತ್ತೊಂದು ಕಡೆಗೆ ಸಾಗಿಸುವದಕ್ಕೆ ಒಂದು ಕಬ್ಬಿಣದ ಅಥವಾ ಬಿದಿರಿನ ಕೋಲನ್ನು ಸನ್ನೆಯಾಗಿ ಉಪಯೋಗಿಸುವಂತೆ ವ್ಯವಹಾರವು ಸಾಗುವದಕ್ಕೆ ಈ 'ನಾನು'ಎಂಬುದನ್ನು ಒಂದು ಸನ್ನೆಯಾಗಿ ನಾವು ಉಪಯೋಗಿಸುತ್ತಿರುವೆವು. ಆದರೆ ಸನ್ನೆಯು ಸಹಾಯ ಮಾತ್ರ; ಅದಕ್ಕೆ ಮತ್ತೇನೂ ಹೆಚ್ಚಿನ ಬೆಲೆಯಿಲ್ಲ. ಇದರಂತೆ "ನಾನು ಎಂಬುದು ವ್ಯವಹಾರವು ಸಾಗಲು ಸಹಾಯವು ಮಾತ್ರ" ಎಂಬುದನ್ನು ನಾವು ನೆನಪಿನಲ್ಲಿಡಬೇಕು ; ಅದೇ ಪ್ರಧಾನವೆಂದೂ ಅದಿಲ್ಲದಿದ್ದರೆ ನಮ್ಮ ಇರವೇ ಹೋಗಿಬಿಡುವದೆಂದೂ ತಿಳಿಯಬಾರದು. ಹೀಗೆ ಲೋಕದಲ್ಲಿ ನಮಗೆ ಪ್ರಸಿದ್ಧವಾಗಿರುವ ಅಹಂ (ನಾನು) ಎಂಬುದು ವ್ಯವಹಾರವನ್ನು ಸಾಗಿಸುವದಕ್ಕೆ ಅವಶ್ಯವಾದರೂ ನಮ್ಮ ಪರಮಾರ್ಥವಾದ ಇರವಿಗೆ ಇದು ಸೇರಿರುವದಿಲ್ಲ. ಈ ನಿಜವನ್ನು ಮರೆತು ಅಹಂಕಾರವನ್ನೇ ಮುಂದುಮಾಡಿಕೊಂಡಿರುವದನ್ನು ನಮ್ಮ ಜೀವನಕ್ಕೆಲ್ಲ ಸೂತ್ರವಾಗಿ ಮಾಡಿಕೊಂಡು ನಡೆದರೆ ಪರಮಾರ್ಥಜ್ಞಾನಕ್ಕೆ ಇದರಿಂದ ಅಡ್ಡಿಯಾಗುತ್ತದೆ. ಆದ್ದರಿಂದಲೇ ಜ್ಞಾನವು ಬೇಕೆನ್ನುವ ಮುಮುಕ್ಷುವು ಈ ಅಹಂಕಾರವನ್ನು ಮಟ್ಟುಮಾಡುವ ಅಮಾನಿತ್ವಾದಿಸಾಧನಗಳನ್ನು ಬಿಡದೆ ಅನುಷ್ಠಾನಮಾಡಬೇಕೆಂದು ಶಾಸ್ತ್ರದಲ್ಲಿ ಉಪದೇಶಿಸಿರುತ್ತದೆ.

ನಮ್ಮ ಪರಮಾರ್ಥವಾದ ನಾನು ಎಂಬುದೊಂದು ಇದೆ. ಅದು ನಿಜವಾಗಿ ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಪ್ರಾಣಿಗಳಲ್ಲೆಲ್ಲ ನಾನು ಎನ್ನಿಸಿಕೊಳ್ಳುವದಕ್ಕೆ ತಕ್ಕದ್ದು. ಆ ನಾನು ಜ್ಞಾನವೈರಾಗ್ಯಾದಿಗಳ ಪರಮಾವಧಿಯುಳ್ಳ ಬ್ರಹ್ಮನಲ್ಲಿ ಎಷ್ಟರಮಟ್ಟಿಗೆ ಪೂರ್ಣವಾಗಿ ಇದ್ದುಕೊಂಡಿರುತ್ತದೆಯೋ ನಿಂತಲ್ಲಿ ನಿಂತಿರುವ ಮೋಟುಮರದಲ್ಲಿಯೂ ಅಷ್ಟರಮಟ್ಟಿಗೇ ಪೂರ್ಣವಾಗಿ ಇದ್ದುಕೊಂಡಿರುತ್ತದೆ. ಇದನ್ನೇ ಪರಮಾತ್ಮನು ಎಂದು ಶಾಸ್ತ್ರದೃಷ್ಟಿಯುಳ್ಳವರು ಕರೆಯುತ್ತಾರೆ. ಈ ಪರಮಾತ್ಮನಲ್ಲಿ ಪ್ರೇಮವನ್ನು ಬೆಳೆಯಿಸಿಕೊಳ್ಳುವದು, ಲೌಕಿಕವಾದ ಅಹಂಕಾರವನ್ನು ಮಟ್ಟುಮಾಡುವದು - ಈ ಎರಡರಲ್ಲಿಯೇ ಇದುವರೆಗೆ ವರ್ಣಿಸಿರುವ ಅಮಾನಿತ್ವಾದಿಗಳೆಲ್ಲವೂ ಅಡಕವಾಗಿರುವವು.

ಅಹಂಕಾರವನ್ನು ಮಟ್ಟುಮಾಡಿ ನಿಜವಾದ ಪರಮಾತ್ಮವಸ್ತುವಿನಲ್ಲಿ ನಿರತಿಶಯಪ್ರೇಮವನ್ನುಂಟುಮಾಡುವ ಜ್ಞಾನವು ಬರುವದಕ್ಕೆ ಅಮಾನಿತ್ವಾದಿಗಳು ಸಾಧನವಾಗಿರುವದರಿಂದ ಈ ಸಾಧನ ಗಣವನ್ನು ಜ್ಞಾನವೆಂದೇ ಕರೆಯುತ್ತಾರೆ. 'ಲೇಖಣಿಯೇ ನನ್ನ ಜೀವನ' ಎಂದು ಒಬ್ಬನೆಂದರೆ ಜೀವನಕ್ಕೆ ಸಾಧನ ಎಂದು ಅರ್ಥವಷ್ಟೆ ; ಹೀಗೆಯೇ ಅಮಾನಿತ್ವಾದಿಗಳು 'ಜ್ಞಾನ' ಎಂದರೆ ಜ್ಞಾನಕ್ಕೆ ಸಾಧನ ಎಂದು ಅಭಿಪ್ರಾಯ. ಅಮಾನಿತ್ವಾದಿಗಳು ಇದ್ದರೆ ಜ್ಞಾನ, ಇಲ್ಲದಿದ್ದರೆ ಜ್ಞಾನವಿಲ್ಲ - ಎಂದೇ ಅರ್ಥ. ದೀಪವಿದ್ದರೇ ಬೆಳಕು ಇರುವದು, ಇಲ್ಲದಿದ್ದರೆ ಇಲ್ಲ. ಅದರಂತೆ ಅಮಾನಿತ್ವಾದಿಗಳು ಇದ್ದರೇ ತತ್ತ್ವಜ್ಞಾನವುಂಟಾಗುತ್ತದೆ, ಇಲ್ಲದಿದ್ದರೆ ಇಲ್ಲ.

ವ್ಯವಹಾರದಲ್ಲಿ ಜ್ಞಾನವು ಉಂಟಾಗಬೇಕಾದರೆ ಆಯಾ ವಸ್ತುವಿನ ಕಡೆಗೆ ನಮ್ಮ ಅಂತಃಕರಣವೂ ಇಂದ್ರಿಯಗಳೂ ತಿರುಗಬೇಕು ; ಆ ವಸ್ತುವಿನ ಸಂಬಂಧವನ್ನು ಪಡೆಯಬೇಕು. ಅಲ್ಲವೆ ? ಆದರೆ ಈ ಆತ್ಮಜ್ಞಾನವು ಹೊರಮುಖವಾದ ಮನಇಂದ್ರಿಯಗಳಿಂದ ಆಗುವದಿಲ್ಲ. ಏಕೆಂದರೆ ಅವನು ನಮ್ಮ ಅಂತರಾತ್ಮನಾಗಿರುತ್ತಾನೆ. 'ಏಷ ತ ಆತ್ಮಾನ್ತರ್ಯಾಮ್ಯಮೃತಃ' ಇವನೇ ನಿನ್ನೊಳಗಿರುವ ಆತ್ಮನು, ಅಂತರ್ಯಾಮಿಯು, ಅಮೃತನು - ಎಂದು ಶ್ರುತಿಯು ಹೇಳುತ್ತಿದೆ. ಪರಮಾತ್ಮನು ಆಕಾಶದಂತೆ ಎಲ್ಲೆಲ್ಲಿಯೂ ಇರುತ್ತಾನೆಂಬುದು ನಿಜ. ಆಕಾಶವು ಎಲ್ಲೆಲ್ಲಿಯೂ ಇದ್ದರೂ ಆಕಾಶದಲ್ಲಿಯೇ ಸೂರ್ಯಚಂದ್ರಾದಿಗಳೆಲ್ಲವೂ ಇದ್ದರೂ ಆಯಾವಸ್ತುಗಳಲ್ಲಿರುವ ಆಕಾಶ ಎಂದು ನಾವು ವ್ಯವಹರಿಸುತ್ತೇವೆ. ಸೂರ್ಯನಲ್ಲಿ, ಚಂದ್ರನಲ್ಲಿ, ಗಿರಿನದಿಸಮುದ್ರಗಳಲ್ಲಿ ಬೆಟ್ಟಗಳಲ್ಲಿ ಗವಿಗಳಲ್ಲಿ ಗಡಿಗೆಯಲ್ಲಿ ಮಡಕೆಯಲ್ಲಿ ಕುಡಿಕೆಯಲ್ಲಿ ಬೇರೆಬೇರೆಯಾಗಿ ಆಕಾಶವು ಇರುವಂತೆ ತೋರುತ್ತದೆ. ಇದರಂತೆ ಆತ್ಮನು ಸರ್ವತ್ರವೂ ಇರುತ್ತಾನೆ; ನಿಜವಾಗಿ ಆತ್ಮನಲ್ಲಿಯೇ ಎಲ್ಲವೂ ಇರುತ್ತದೆ. ಆದರೂ ಅವನು ಒಂದೊಂದು ಪ್ರಾಣಿಯ ಶರೀರದ ಒಳಗೇ ಇರುವಂತೆ ತೋರುತ್ತಿರುತ್ತಾನೆ. ಆದ್ದರಿಂದ ನಮ್ಮನಮ್ಮ ಒಳಗೇ ಈ ಆತ್ಮನನ್ನು ಕಂಡುಕೊಳ್ಳಬೇಕು ; ಆಗಲೇ ಆತ್ಮಜ್ಞಾನವು ಆಗುತ್ತದೆ.

ಆತ್ಮವಸ್ತುವನ್ನು ಕಾಣುವದಕ್ಕೆ ನಮ್ಮನಮ್ಮ ಅಂತಃಕರಣವೇ ಮರೆಯಾದಂತೆ ಇರುತ್ತದೆ. ಅಂತಃಕರಣದಲ್ಲಿ ಮುಖ್ಯವಾಗಿ ಎರಡು ದೋಷಗಳಿರುತ್ತವೆ. ಮೊದಲನೆಯದಾಗಿ ಅದು ಹೊರಗಡೆಗೇ ನೋಡುವ ಸ್ವಭಾವವುಳ್ಳದ್ದಾಗಿರುತ್ತದೆ; ಎರಡನೆಯದಾಗಿ ಅದು ತಾನು ನೋಡುವ ವಸ್ತುವು ತನಗೇ ಬೇಕೆಂದು ಬಯಸುವದು. ಸಾಮಾನ್ಯವಾಗಿ ಜನರಿಗೆ ಹೊರಗಡೆಗೆ ನೋಡುವ ಸ್ವಭಾವವಿರುವದೇ ಹೊರತು ಒಳಗೆ ನೋಡುವ ಸ್ವಭಾವವಿರುವದಿಲ್ಲ ; ನಮ್ಮ ಇಂದ್ರಿಯಗಳು ಹೊರಕ್ಕೆ ತೆಗೆಯುವ ಕದಗಳುಳ್ಳ ಕಿಟಕಿಗಳಂತೆ ಇರುತ್ತವೆ. ಅಂತಃಕರಣವು ಅವುಗಳ ಮೂಲಕವೇ ಹೊರಕ್ಕೆ ಇಣಿಕಿನೋಡುವ ಸ್ವಭಾವದ್ದಾಗಿರುತ್ತದೆ. ಹೀಗಿರುವದರಿಂದ ನಾವು ನಮ್ಮ ಒಳಗಡೆಗೆ ತಿರುಗಿನೋಡುವದೇ ಅಪೂರ್ವ ; ಒಳಗಿರುವ ಆತ್ಮನ ದರ್ಶನವು ಹೇಗೆ ಆಗಬೇಕು ? ಇದಲ್ಲದೆ ಸರಕಾರಿಯ ಉದ್ಯೋಗದಿಂದ ನಿವೃತ್ತರಾಗುವದೇ ತಡ, ಮತ್ತೊಂದು ಉದ್ಯೋಗವನ್ನು ನೋಡಿಕೊಳ್ಳುವದಕ್ಕೆ ಉಜ್ಜುಗಿಸುವ ಜನರಂತೆ, ಅಂತಃಕರಣವು ಒಂದು ವಿಷಯದಿಂದ ಹಿಂತಿರುಗಬೇಕೆನ್ನುವಷ್ಟರಲ್ಲಿ ಮತ್ತೊಂದು ವಿಷಯದ ಕಡೆಗೆ ತಿರುಗುತ್ತಿರುವದು. ಇದು ನೋಡಿದ್ದನ್ನೆಲ್ಲ ರಾಗದ್ವೇಷಾದಿಗಳಿಂದಲೇ ನೋಡುತ್ತಿರುವದರಿಂದ ಅದಕ್ಕೆ ಯಾವ ಯಾವ ವಿಷಯದ ಸಂಬಂಧವಾಗುವದೋ ಅದರ ಕಲ್ಮಷಗಳೆಲ್ಲ ಹತ್ತಿಕೊಳ್ಳುತ್ತಿರುವವು. ಹೀಗೆ ವಿಷಯದಿಂದ ವಿಷಯಕ್ಕೆ ಹಾರುತ್ತಾ, ಅದನ್ನು ತನಗೆ ಬೇಕೆಂದು ಅಥವಾ ಬೇಡವೆಂದು ರಾಗದ್ವೇಷಗಳಿಂದ ಕಾಣುತ್ತಾ ಮೇಲಿಂದ ಮೇಲೆ ಕಲ್ಮಷಯುಕ್ತವಾಗುತ್ತಿರುವದು ಅಂತಃಕರಣದ ಸ್ವಭಾವವಾಗಿರುತ್ತದೆ. ಇಂಥ ಅಂತಃಕರಣದಲ್ಲಿ ಆತ್ಮನ ಅರಿವು ಹೇಗೆ ಹೊಳೆಯಬೇಕು ?

ಈ ಅಂತಃಕರಣದ ಸ್ವಭಾವವನ್ನು ಬಲ್ಲವರು ಜನರಿಗೆ ಉಪದೇಶಿಸುವದೇನೆಂದರೆ "ಅಮಾನಿತ್ವಾದಿಗಳನ್ನು ಎಡೆಬಿಡದೆ ಅಭ್ಯಾಸಮಾಡಿರಿ ; ಹೊರಗೆ ನೋಡುವ ಕೆಟ್ಟ ಅಭ್ಯಾಸವನ್ನು ತಪ್ಪಿಸಿ ನಿಮ್ಮನಿಮ್ಮ ಒಳಗೇ ನೋಡುವ ಅಭ್ಯಾಸವನ್ನು ಮಾಡಿರಿ. ಹಾಗಾದರೆ ನಿಮಗೆ ಆತ್ಮನ ಜ್ಞಾನವಾಗುವದು." ಅಂತಃಕರಣದೊಳಗೆ ಹೊಸದಾಗಿ ಏನನ್ನೂ ತುಂಬಬೇಕಾಗಿಲ್ಲ. ಅದರಲ್ಲಿ ತುಂಬಿಕೊಂಡಿರುವ ಅನಾತ್ಮವಿಷಯಗಳ ವಾಸನೆಗಳನ್ನು ಹೊರಹುಯ್ದು ಅದನ್ನು ಸ್ವಚ್ಛಗೊಳಿಸಬೇಕು. ಅಮಾನಿತ್ವಾದಿಗಳೇ ಅಂತಃಕರಣವನ್ನು ಸ್ವಚ್ಛಗೊಳಿಸುವದಕ್ಕೆ ಉಪಾಯ. ಅಂತಃಕರಣವು ಸ್ವಚ್ಛವಾದರೆ ಅದರ ಹಿಂದೆಯೇ ಯಾವಾಗಲೂ ಹೊಳೆಯುತ್ತಿರುವ ಆತ್ಮನ ಪ್ರತಿಚ್ಛಾಯೆಯು ಬೀಳುವದು ; ಅದೇ ಆತ್ಮಜ್ಞಾನವು.

ಅಂತಃಕರಣವೂ ಮಿಕ್ಕ ವಸ್ತುಗಳಂತೆ ಗುಣತ್ರಯರೂಪವಾಗಿರುತ್ತದೆ. ಯಾರ ಅಂತಃಕರಣದಲ್ಲಿ ತಮೋಗುಣವು ಪ್ರಬಲವಾಗಿರುವದೋ ಅವರಿಗೆ ಶಾಸ್ತ್ರದಲ್ಲಿ ಕರ್ಮಗಳೆಂಬ ಸಾಧನವನ್ನು ಹೇಳಿರುತ್ತದೆ. ಅದರಿಂದ ರಜಸ್ಸು ಹೆಚ್ಚಿ ತಮಸ್ಸು ಹಿಮ್ಮೆಟ್ಟುತ್ತದೆ. ತೀರ್ಥಯಾತ್ರೆಗಳು, ಬಲ್ಲವರ ಸೇವೆ, ಜೀವರುಗಳಿಗೆ ಉಪಕಾರವನ್ನು ಮಾಡುವದು - ಮುಂತಾದ

ಸಾಧನಗಳ ಮೂಲಕ ಈ ತಮಸ್ಸನ್ನು ಹಿಮ್ಮೆಟ್ಟಿಸಿಕೊಳ್ಳಬೇಕು. ರಜೋಗುಣವು ಹೆಚ್ಚಾದವನು ಸಾತ್ತ್ವಿಕವಾದ ಸಾಧನಗಳನ್ನು ಕೈಗೊಳ್ಳಬೇಕು. ಅಮಾನಿತ್ವಾದಿಗಳು ಸಾತ್ತ್ವಿಕಸಾಧನಗಳು ; ಇವುಗಳಿಂದ ರಜೋಗುಣದ ಕಾರ್ಯಗಳು ಹಿಮ್ಮೆಟ್ಟುವವು. ಚಿತ್ತವು ಇದರಿಂದ ಶುದ್ಧವಾಗುವದು; ಆತ್ಮಜ್ಞಾನವುಂಟಾಗುವದು.

ಈ ಕಾರಣದಿಂದಲೇ 'ಇದೇ ಜ್ಞಾನವೆನಿಸುವದು, ಇದಕ್ಕೆ ವಿಪರೀತವಾದದ್ದು ಅಜ್ಞಾನವು.' ಯಾವಯಾವದು ಅಮಾನಿತ್ವಾದಿಗಳಿಗೆ ಅನುಗುಣವಾಗಿರುವದೋ ಅದೆಲ್ಲವೂ ಜ್ಞಾನವೇ, ಎಂದರೆ ಜ್ಞಾನಸಾಧನವೇ. ಯಾವಯಾವದು ಅವಕ್ಕೆ ವಿಪರೀತವಾಗಿರುವ ನಡತೆಯೋ, ಯಾವಯಾವದು ಅಮಾನಿತ್ವಾದಿಗಳ ಅಭ್ಯಾಸಕ್ಕೆ ತಡೆಯಾಗಿರುವದೋ, ಅದೆಲ್ಲವೂ ಅಜ್ಞಾನವು, ಎಂದರೆ ಅಜ್ಞಾನಕ್ಕೆ ಕಾರಣವಾಗಿರುವದು - ಎಂದು ತಿಳಿಯಬೇಕು. ನಾವು ಅಜ್ಞಾನವನ್ನು ಅಭಿವೃದ್ಧಿಗೊಳಿಸುವ ಕಾರ್ಯಗಳನ್ನು ಮಾಡುತ್ತಾ ಅಮಾನಿತ್ವಾದಿಗಳನ್ನೂ ಸಾಧಿಸುತ್ತೇವೆಂದು ಬಗೆಯುವದು ಪಶ್ಚಿಮಮುಖವಾಗಿ ಹೊರಟು ಪೂರ್ವಕ್ಕೆ ಹೋಗುತ್ತಿದ್ದೇವೆಂದು ಬಗೆಯುವಂತೆಯೇ ಸರಿ. ಅಹಂಕಾರವನ್ನು ಹೆಚ್ಚಿಸುವ ಕಾರ್ಯಗಳು ಅಹಂಕಾರವನ್ನು ಮಟ್ಟುಮಾಡುವದಕ್ಕೆ ಹೇಗೆತಾನೆ ಸಾಧನವಾದಾವು ? ಎಂದಿಗೂ ಆಗಲಾರವು. ಆದ್ದರಿಂದ ನಾವು ನಿಜವಾಗಿ ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದಬೇಕೆಂದು ಹಾತುವರಿಯುವವರಾದರೆ ಅದಕ್ಕೆ ಪ್ರತಿಕೂಲವಾಗಿರುವ ಅಜ್ಞಾನಸಾಧನಗಳನ್ನೆಲ್ಲ ಕೂಡಲೆ ಬಿಟ್ಟುಬಿಡಬೇಕು. ಅಮಾನಿತ್ವಾದಿಗಳಲ್ಲಿ ನಮಗೆ ಅತ್ಯವಶ್ಯವೆಂದು ಕಾಣುವ ಸಾಧನಗಳನ್ನು ಆರಿಸಿಕೊಂಡು ಆಚರಣೆಗೆ ತಂದುಕೊಳ್ಳಬೇಕು.

ನಮ್ಮ ಮನಸ್ಸಿನ ಸ್ಥಿತಿಯು ಹೇಗಿರುವದೋ ನಮ್ಮ ಹೊರವಲಯವೂ ಹಾಗೇ ಆಗುವದು. ಸಂಗೀತ ಕಛೇರಿಯನ್ನು ಏರ್ಪಡಿಸಿರುವಾಗ ಸಭೆಯಲ್ಲಿ ಗುಜುಗುಜುಶಬ್ದವು ಕೇಳಬರುತ್ತದೆ; ಆದರೆ ಹಾಡುವವನು ಸಂಗೀತದಲ್ಲಿಯೇ ಮನಸ್ಸಿಟ್ಟು ಆದರದಿಂದ ಹಾಡುವದಕ್ಕೆ ಮೊದಲುಮಾಡಿದರೆ ಸರಿ, ಕೂಡಲೆ ಸದ್ದಡಗಿಬಿಡುವದು. ಇದರಂತೆ ನಾವು ಹೊರಗಿನ ಪ್ರಪಂಚದಲ್ಲಿ ಶಾಂತಿಯನ್ನು ಕಾಣುವದಕ್ಕೆ ನಮ್ಮ ಮನಸ್ಸಿನಲ್ಲಿ ಮೊದಲು ಶಾಂತಿಯನ್ನು ಕಂಡುಕೊಳ್ಳಬೇಕು. ಅಮಾನಿತ್ವಾದಿಗಳನ್ನು ಮನದಂದುಕೊಂಡು, ಅದೇ ಭಾವವನ್ನು ಎತ್ತಿಹಿಡಿದು, ಆ ಭಾವಗಳಿಗೆ ತವರುಮನೆಯಾದ ಪರಮಾತ್ಮನ ಪ್ರೇಮವನ್ನು ಬೆಳೆಯಿಸಿಕೊಳ್ಳುತ್ತಾ ಹೋದರೆ ನಮ್ಮ ಸನ್ನಿವೇಶವೇ ಬದಲಾಯಿಸುವದು. ನಮ್ಮ ಮುಖಮುದ್ರೆಯಿಂದಲೇ ಜನರು ಉತ್ತಮಪ್ರತಿಕ್ರಿಯೆಯನ್ನು ಮಾಡುವ ಪ್ರಚೋದನೆಯಾಗುವದು. ಆದ್ದರಿಂದ ನಾವು ಈ ಅಮಾನಿತ್ವಾದಿಗಳೆಂಬ ಜ್ಞಾನಸಾಧನಗಳನ್ನು ಮನಮುಟ್ಟಿ ಅಭ್ಯಾಸಮಾಡುವ ಶಕ್ತಿಯನ್ನು ಕೊಡೆಂದು ಪರಮಾತ್ಮನನ್ನು ಪ್ರಾರ್ಥಿಸೋಣ.



# ೧೧೫. ಜ್ಞೇಯವಾದ ಪರಬ್ರಹ್ಮ 13 - (12)

**(6-2-49)**

ಅಮಾನಿತ್ವಾದಿಜ್ಞಾನಸಾಧನಗಳನ್ನು ತಿಳಿಸಿದ್ದಾಯಿತು. ಈ ಸಾಧನಗಳಿಂದ ಅರಿಯಬೇಕಾಗಿರುವ ಜ್ಞೇಯದ ಸ್ವರೂಪವೇನು ? ಯಾವ ಜ್ಞೇಯತತ್ತ್ವದ ಅರಿವನ್ನು ಸಂಪಾದಿಸಿಕೊಳ್ಳುವದಕ್ಕಾಗಿ ಇಷ್ಟೊಂದು ಸಾಧನಗಳನ್ನು ಮಾಡಬೇಕು ? ಅದರ ಜ್ಞಾನದಿಂದ ಆಗುವ ಪ್ರಯೋಜನವಾದರೂ ಏನು ? ಎಂಬ ಪ್ರಶ್ನೆಯು ಸಹಜವಾಗಿ ಎದ್ದುಕೊಳ್ಳುತ್ತದೆ. ಈ ಪ್ರಶ್ನೆಗಳಿಗೆ ಮುಂದಿನ ಎರಡು ಉಪನ್ಯಾಸಗಳಲ್ಲಿ ಉತ್ತರವನ್ನು ಸ್ವಲ್ಪಮಟ್ಟಿಗೆ ಹೇಳುವೆನು.

ಭಗವಂತನ ಸ್ವರೂಪವೇನು ? - ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವದು ಕಷ್ಟ. ಈಶ್ವರಭಾವನೆಯ ಬೆಳವಣಿಗೆಯನ್ನು ಕುರಿತು ಈಗಿನ ಸಂಶೋಧಕರು ವಿಚಿತ್ರವಾದ ವಿವಿಧ ಅಭಿಪ್ರಾಯಗಳನ್ನು ಪ್ರಕಟಿಸಿರುತ್ತಾರೆ. ತಿಳಿವಳಿಕೆಯಿಲ್ಲದ ಕಾಡುಜನರು ಅದ್ಭುತವಾದ ದೃಶ್ಯಗಳಿಂದ ಈಶ್ವರನೊಬ್ಬನು ಇದ್ದಾನೆಂದು ಊಹಿಸಿ ತಮ್ಮತಮ್ಮ ಕಲ್ಪನೆಗಳನ್ನು ಹೊರಕ್ಕೆ ತಂದರು. ಆ ಈಶ್ವರ ಭಾವನೆಯು ರೂಪುಗೊಂಡು ಈಗಿನ ಈಶ್ವರಕಲ್ಪನೆಗೆ ತಳಹದಿಯಾಯಿತು ಎಂದು ಕೆಲವರು ಹೇಳುತ್ತಾರೆ. ಚಿಕ್ಕಮಕ್ಕಳು ಜಡಪದಾರ್ಥಗಳನ್ನು ಚೇತನವೆಂಬಂತೆ ಭಾವಿಸಿ ವ್ಯವಹರಿಸುವವು. ಉದಾಹರಣೆಗೆ ಕುರ್ಚಿಯ ಮೇಲೆ ಕುಳ್ಳಿರಿಸಿದ ಒಂದು ಮಗು ಕೆಳಕ್ಕೆ ಬಿದ್ದು ಪೆಟ್ಟಾದರೆ, ಕುರ್ಚಿಯು ತನ್ನನ್ನು ಕೆಡವಿದಂತೆ ಭಾವಿಸಿ ಅದನ್ನು ಹೊಡೆಯುವದು, ಬಯ್ಯುವದು-ಹೀಗೆಲ್ಲ ಮಾಡುವದು ನಮ್ಮಗಳ ಅನುಭವದಲ್ಲಿದೆ. ಪ್ರಕೃತಿಯಲ್ಲಿ ಚೇತನರಾದ ದೇವತೆಗಳು ಇರುವರೆಂಬ ಕಲ್ಪನೆಗೆ ಮಾನವವರ್ಗದ ಶೈಶವಾವಸ್ಥೆಯೇ ಕಾರಣ ಎಂದು ಇದರಿಂದ ಕೆಲವರು ತರ್ಕಿಸಿರುತ್ತಾರೆ. ಕಾಡುಜನರು ಅದ್ಭುತದೃಶ್ಯಗಳನ್ನು ಕಂಡು ಭಯಭಕ್ತಿಯನ್ನು ತೋರಿಸುವರು; ದೊಡ್ಡಕಲ್ಲು, ಮರ, ಭಯಂಕರ ಪ್ರಾಣಿಗಳು - ಇವುಗಳನ್ನೆಲ್ಲ ಭೀತಿಯಿಂದ, ಪ್ರೀತಿಯಿಂದ ಅಥವಾ ಇವೆರಡರ ಮಿಶ್ರದಿಂದ ಪೂಜಿಸುವರು. ನಾಗರಿಕತೆಯ ಕೀಳ್ಮಟ್ಟವೇ ಈ ಪ್ರಕೃತಿಪೂಜೆಗೆ ಕಾರಣವೆಂಬುದು ಸ್ಪಷ್ಟವಾಗಿದೆ. ಮಾನವನು ತನ್ನ ಕಲ್ಪನೆಯ ದೇವರನ್ನು ತನ್ನಂತೆಯೇ, ತನ್ನ ರೂಪವನ್ನು ಭೂತಗನ್ನಡಿಯಿಂದ ನೋಡಿದಂತೆ ಬೆಳೆಯಿಸಿ, ಕಲ್ಪಿಸಿಕೊಂಡಿರುತ್ತಾನೆ. ನಾಲ್ಕು ಕೈಗಳು, ಹಲವು ತಲೆಗಳು, ಮೃಗದ ಮನುಷ್ಯನ ಆಕಾರದ ಮಿಶ್ರಣ, ರೆಕ್ಕೆಗಳು, ಮುಂತಾದ ವಿಚಿತ್ರಾಕಾರವನ್ನು ದೇವರಿಗೆ ಕಲ್ಪಿಸಿರುವದು ಈ ದೃಷ್ಟಿಯಿಂದ. ಅಂತೂ ಈಶ್ವರಕಲ್ಪನೆಯು ಅಜ್ಞನಾದ ಅನಾಗರಿಕನಾದ, ಅವಿಚಾರಿಯಾದ ಮನುಷ್ಯನ ಕಲ್ಪನೆ - ಎಂದು ಕೆಲವರು ನಾಸ್ತಿಕಪರಿಶೋಧಕರ ಅಭಿಪ್ರಾಯವಾಗಿರುತ್ತದೆ.

ಈಗಿನ ಕಾಲದಲ್ಲಂತೂ ಆಸ್ತಿಕರಿಗಾಗಲಿ ನಾಸ್ತಿಕರಿಗಾಗಲಿ ಈಶ್ವರವಿಚಾರಕ್ಕೆ ಕಾಲವೇ ಇರುವದಿಲ್ಲ. ಸರ್ಕಾರದವರು ನಾವು ಧರ್ಮದ ವಿಷಯದಲ್ಲಿ ತಟಸ್ಥರು, ನಮ್ಮದು ಲೌಕಿಕಸರ್ಕಾರ, ಎನ್ನುತ್ತಿದ್ದಾರೆ. ಪ್ರಜೆಗಳು ಮೇಲಿಂದ ಮೇಲೆ ಆಗುತ್ತಿರುವ

ರಾಜಕೀಯವಿಪ್ಲವಗಳಿಂದ ತಮ್ಮ ಹೊಟ್ಟೆಬಟ್ಟೆಗೆ ಸಿಕ್ಕಿದರೆ ಸಾಕೆಂದು ಕೆಲವರು ; ರಾಜಕೀಯವಿಚಾರ, ವಿದ್ಯಾವಿಚಾರ, ಭೌತಿಕಜ್ಞಾನವಿಚಾರ - ಮುಂತಾದವುಗಳಲ್ಲಿಯೇ ಈಗ ಸಂಶೋಧವು ಅವಶ್ಯವಾಗಿರುವದರಿಂದ ಈಶ್ವರ ವಿಚಾರದಂಥ ಅತೀಂದ್ರಿಯವಿಚಾರಕ್ಕೆ ಬಿಡುವು ಇಲ್ಲವೆಂದು ಕೆಲವರು - ಹೀಗೆಲ್ಲ ಈ ವಿಚಾರದಲ್ಲಿ ಉದಾಸೀನರಾಗಿರುತ್ತಾರೆ.

ಆದರೂ ಅಧ್ಯಾತ್ಮಶಾಸ್ತ್ರದಲ್ಲಿ ಈಶ್ವರತತ್ತ್ವದ ವಿಷಯಕ್ಕೆ ಏನು ಹೇಳಿದೆ ಎಂಬ ವಿಚಾರವು ಈಗಲೂ ಕೆಲವರ ಚಿತ್ತವನ್ನು ಸೆಳೆದುಕೊಳ್ಳುತ್ತಿದೆ. ಅಮಾನಿತ್ವಾದಿಸಾಧನಗಳಿಂದ ಅರಿತುಕೊಳ್ಳಬೇಕಾಗಿರುವ ಜ್ಞೇಯತತ್ತ್ವವು ಎಂಥದ್ದೆಂಬುದಕ್ಕೆ ಭಗವಂತನು ಗೀತೆಯಲ್ಲಿ ಹೇಳಿರುವ ವರ್ಣನೆಯು ಇಂಥವರ ಮನಸ್ಸಿನ ಮೇಲೆ ಯಾವ ಪರಿಣಾಮವನ್ನು ಮಾಡುವದೆಂಬುದನ್ನೂ ಅವರವರೇ ಕಂಡುಕೊಳ್ಳಬೇಕಾಗಿದೆ.

ಈಶ್ವರನು ಗಂಡೆಂದೂ ಹೆಣ್ಣೆಂದೂ ಹುಡುಗನೆಂದೂ ಬಗೆಬಗೆಯಾಗಿ ಭಕ್ತರ ಕಲ್ಪನೆಗಳು ಕಂಡುಬರುತ್ತವೆ. ಅಧ್ಯಾತ್ಮಶಾಸ್ತ್ರದ ದೃಷ್ಟಿಯಿಂದ ಈಶ್ವರನು ಗಂಡೂ ಅಲ್ಲ, ಹೆಣ್ಣೂ ಅಲ್ಲ, ನಪುಂಸಕನೂ ಅಲ್ಲ ``ನೈವ ಸ್ತ್ರೀ ನ ಪುಮಾನೇಷ ನ ಚೈವಾಯಂ ನಪುಂಸಕ: ಯದ್ಯಚ್ಛರೀರಮಾದತ್ತೇ ತೇನ ತೇನ ಸ ಯುಜ್ಯತೇ' ಯಾರಯಾರ ಶರೀರದಲ್ಲಿರುವನೋ ಆಯಾ ರೂಪದಿಂದ ಆತನನ್ನು ಕರೆಯುವರು. ಸ್ವರೂಪದಿಂದ ಯಾವ ಲಿಂಗವೂ ಅವನಿಗಿರುವದಿಲ್ಲ. ಯಾವ ವಿಶೇಷವೂ ಅವನಿಗಿರುವದಿಲ್ಲ. ಭಗವಂತನ ವಚನವನ್ನು ಕೇಳಿರಿ :

**ಜ್ಞೇಯಂ ಯತ್ ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।**
**ಅನಾದಿಮತ್ ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ 13-12**

`ಜ್ಞೇಯವಾಗಿರುವ ತತ್ತ್ವವನ್ನು ಹೇಳುವೆನು ; ಅದನ್ನರಿತುಕೊಂಡರೆ ಅಮೃತವನ್ನು ಪಡೆದುಕೊಳ್ಳುತ್ತಾನೆ. ಅದು ಅನಾದಿಯಾದ ಪರಬ್ರಹ್ಮವು, ಅದು ಸತ್ತೆನಿಸುವದಿಲ್ಲ, ಅಸತ್ತೂ ಎನಿಸುವದಿಲ್ಲ'. ಆ ಜ್ಞೇಯತತ್ತ್ವಕ್ಕೆ ಆದಿಯೇ ಇಲ್ಲ. ಇಂಥ ಕಾಲದಲ್ಲಿ ಅದು ಹುಟ್ಟಿತು ಎಂದಾಗಲಿ ಇಂಥ ಕಾಲದಿಂದ ಹಿಂದೆ ಅದು ಇರಲಿಲ್ಲವೆಂದಾಗಲಿ ಹೇಳುವದಕ್ಕೆ ಆಗುವಂತಿಲ್ಲ. ನಮ್ಮೆಲ್ಲರ ಆತ್ಮನೇ ಆಗಿರುವ ಪರಮೇಶ್ವರತತ್ತ್ವವು ಅನಾದಿಯಾದದ್ದು; ಏಕೆಂದರೆ ಕಾಲವು ಕೂಡ ಅದಕ್ಕೆ ವಿಷಯವಾಗಿರುತ್ತದೆ. ಕಾಲವೂ ಅದರಿಂದ ಉಂಟಾಗಿ, ಅದರಲ್ಲಿ ತೋರಿಕೊಂಡು, ಅದರಲ್ಲಿ ಲಯವಾಗುತ್ತದೆ. ಕಾಲವನ್ನು ಮೀರಿರುವ ಅದನ್ನು ಕಲ್ಪನೆಯೆಂದು ಹೇಳುವದಕ್ಕೆ ಕೂಡ ಬರುವದಿಲ್ಲ. ಏಕೆಂದರೆ ಕಲ್ಪನೆಯ ವಸ್ತು ಯಾವದಾದರೊಂದು ದೇಶದಲ್ಲಿ ಯಾವದಾದರೊಂದು ಕಾಲದಲ್ಲಿರುವದೆಂದು ಕಲ್ಪಿತವಾಗುತ್ತದೆ ; ಕಲ್ಪನೆಮಾಡುವವನ ಆತ್ಮನೇ, ಸ್ವರೂಪವೇ, ಆಗಿರುವ ಪರಮಾತ್ಮನನ್ನು ಕಲ್ಪನೆಯೆನ್ನುವದು ತರ್ಕವಿರುದ್ಧವು, ಅನುಭವವಿರುದ್ಧವು.

ಈ ತತ್ತ್ವವು ಪರಬ್ರಹ್ಮವು. ಬ್ರಹ್ಮವೆಂದರೆ ದೊಡ್ಡದು. ಎಲ್ಲಕ್ಕಿಂತಲೂ ಮಿಗಿಲಾದದ್ದು. ದೇಶ, ಕಾಲ, ವಸ್ತು - ಯಾವದೊಂದರ ಕಟ್ಟೂ ಇಲ್ಲದ್ದು, ಅನಂತವಾದದ್ದು - ಎಂಬುದನ್ನು `ಬ್ರಹ್ಮ' ಎಂಬ ಮಾತು ಸೂಚಿಸುವದು. ಬ್ರಹ್ಮ ಎಂಬ ಶಬ್ದಕ್ಕೆ ದೊಡ್ಡದೆಂಬುದೇ ವಾಚ್ಯಾರ್ಥವಾದ್ದರಿಂದ ಸಾಪೇಕ್ಷವಾಗಿ ಮತ್ತೊಂದಕ್ಕಿಂತ ದೊಡ್ಡದು ಎಂಬರ್ಥವಾಗಬಾರದೆಂದು ಅಧ್ಯಾತ್ಮಶಾಸ್ತ್ರದಲ್ಲಿ ಅದನ್ನು `ಪರಂ ಬ್ರಹ್ಮ' ಎಂದು ಕರೆಯುತ್ತಾರೆ. ಪರಬ್ರಹ್ಮವೆಂದರೆ ಯಾವದೊಂದು ಎಲ್ಲೆಕಟ್ಟೂ ಇಲ್ಲದ ಅನಂತವಾದ ತತ್ತ್ವವು.

ಇಂಥ ತತ್ತ್ವವನ್ನು ಮನುಷ್ಯನು ಸತ್ತೆಂದಾಗಲಿ ಅಸತ್ತೆಂದಾಗಲಿ ಹೇಳುವದಕ್ಕೆ ಎಂದಿಗೂ ಬರುವದಿಲ್ಲ. ಏಕೆಂದರೆ ಸತ್ತೆಂದರೆ ಕಾಲದೇಶಗಳಲ್ಲಿ ತೋರುವ ನಾಮರೂಪವುಳ್ಳ ವಸ್ತು ; ಅಸತ್ತೆಂದರೆ ಅದರ ಬೀಜರೂಪವಾದ ಕಾರಣಸ್ಥಿತಿ. ಆದರೆ ಕಾಲದೇಶಗಳನ್ನು ಮೀರಿರುವ ಈ ಬ್ರಹ್ಮವನ್ನು ಸತ್ತೆಂದಾಗಲಿ ಅಸತ್ತೆಂದಾಗಲಿ ಕರೆಯುವದು ಹೇಗೆ ?

ಇಂಥ ವಸ್ತುವನ್ನು ನಾವು ತಿಳಿಯುವದು ಹೇಗೆ ? ಅದರಲ್ಲಿ ಯಾವದಾದರೊಂದು ಧರ್ಮವು ಇದ್ದರಲ್ಲವೆ, ಅದನ್ನು ಇಂಥದ್ದು ಎಂದು ನಾವು ತಿಳಿದುಕೊಳ್ಳಬಹುದು, ಮತ್ತೊಬ್ಬರಿಗೆ ಮಾತಿನಿಂದ ತಿಳಿಸಲೂಬಹುದು? ಇಂಥ ಅತ್ಯಂತನಿರ್ವಿಶೇಷವಾದ ವಸ್ತುವಿನ ಕಲ್ಪನೆಯಾದರೂ ಹೇಗೆ ಬರುತ್ತದೆ? ಈ ವಸ್ತುವು ಅತ್ಯಂತವಾಗಿ ಇಲ್ಲವೇ ಇಲ್ಲವೆಂದು ಏತಕ್ಕೆ ಹೇಳಬಾರದು ? - ಎಂದು ಯಾರಾದರೂ ಕೇಳಬಹುದು. ಈ ಪ್ರಶ್ನೆಗೆ ಆಗಲೇ ಉತ್ತರವನ್ನು ಹೇಳಿದ್ದಾಗಿದೆ. ಯಾವದೊಂದು ಧರ್ಮವೂ ಇಲ್ಲದಿದ್ದರೂ ಈ ತತ್ತ್ವವು ನಮ್ಮೆಲ್ಲರ ಆತ್ಮನೇ ಆಗಿರುತ್ತದೆ. ತನಿನಿದ್ರೆಯಲ್ಲಿ ಯಾವ ವಸ್ತುವಿನ ಅನುಭವವೂ ನಮಗೆ ಇರುವದಿಲ್ಲ. ಆದರೆ ನಾವು ಆ ಅವಸ್ಥೆಯನ್ನು ಅನುಭವಿಸುತ್ತಿರುವದರಿಂದ ನಮ್ಮ ಸ್ವರೂಪವು ಆಗಲೂ ಇದ್ದುಕೊಂಡಿರುತ್ತದೆ. ಆ ಸ್ವರೂಪವನ್ನು ದ್ರವ್ಯವೆಂದಾಗಲಿ, ಕರ್ಮವೆಂದಾಗಲಿ, ಸಾಮಾನ್ಯವೆಂದಾಗಲಿ, ವಿಶೇಷವೆಂದಾಗಲಿ ಕರೆಯುವದಕ್ಕೆ ಆಗುವಹಾಗಿರುವದಿಲ್ಲ. ಅದು ಅಭಾವವೆಂದೂ ಹೇಳುವದಕ್ಕಿಲ್ಲ ; ಏಕೆಂದರೆ ಅದು ನಮ್ಮ ಸ್ವರೂಪವೇ ಆಗಿರುತ್ತದೆ. ಹೀಗೆ ಸತ್ತೂ ಅಲ್ಲದ, ಅಸತ್ತೂ ಅಲ್ಲದ, ದೇಶಕಾಲವಸ್ತುಗಳ ಕಟ್ಟಿಲ್ಲದ ಆತ್ಮವಸ್ತುವು ನಮಗೆಲ್ಲರಿಗೂ ಸುಷುಪ್ತಿಯಲ್ಲಿ ಅನುಭವಕ್ಕೆ ಬರುತ್ತದೆ. ಈ ನಮ್ಮೆಲ್ಲರ ಆತ್ಮನಾಗಿರುವದೇ ಪರಬ್ರಹ್ಮವು ; ಅದನ್ನೇ ಚೆನ್ನಾಗಿ ಅರಿತುಕೊಳ್ಳಬೇಕು - ಎಂದು ಅಧ್ಯಾತ್ಮಶಾಸ್ತ್ರದಲ್ಲಿ ಹೇಳಿರುತ್ತದೆ.

ಈ ತತ್ತ್ವವನ್ನು ಅರಿತುಕೊಳ್ಳುವದೆಂದರೆ ಹೇಗೆ? ಅದನ್ನು ಅರಿಯುವದಕ್ಕೆ ಹಿಂದೆ ಹೇಳಿದ ಅಮಾನಿತ್ವಾದಿಗಳು ಏತಕ್ಕೆ ಬೇಕು? ಅದನ್ನು ಅರಿತುಕೊಂಡದ್ದರಿಂದ ಆಗುವ ಪ್ರಯೋಜನವಾದರೂ ಏನು? - ಎಂಬೀ ಪ್ರಶ್ನೆಗಳಿಗೆ ಮುಂದೆ ನಾವು ಉತ್ತರವನ್ನು ಕಂಡುಕೊಳ್ಳಬೇಕಾಗಿದೆ.



# ೧೧೬. ಬ್ರಹ್ಮಜ್ಞಾನದಿಂದ ಅಮೃತಪ್ರಾಪ್ತಿ 13 - (12)

(13-2-49)

``ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ" ಎಂಬ ಶ್ಲೋಕದಲ್ಲಿ, ಪರಬ್ರಹ್ಮವೇ ನಮ್ಮ ಆತ್ಮನೆಂಬ ಜ್ಞಾನದಿಂದ ಅಮೃತವನ್ನು ಹೊಂದುತ್ತಾನೆ ಎಂದು ಹೇಳಿದೆಯಷ್ಟೆ. ಇಲ್ಲಿ ಒಂದು ಶಂಕೆಯುಂಟಾಗುತ್ತದೆ. `ಜ್ಞೇಯವನ್ನು ತಿಳಿದರೆ ಅಮೃತವನ್ನು ಪಡೆಯುತ್ತಾನೆ' ಎಂದರೆ ಅದನ್ನು ತಿಳಿದುಕೊಂಡಮಾತ್ರದಿಂದ ಇಲ್ಲಿಯೇ ಈಗಲೇ ಸಾವನ್ನು ತಪ್ಪಿಸಿಕೊಳ್ಳುತ್ತಾನೆ ಎಂದರ್ಥ. ಆದರೆ ಇದು ಹೇಗೆ ಸಾಧ್ಯ? ನಾವೆಲ್ಲರೂ ಮರ್ತ್ಯರೇ. ಸಾವನ್ನು ತಪ್ಪಿಸಿಕೊಳ್ಳುವ ಮೋಕ್ಷಕ್ಕೆ ಉಪಾಯವನ್ನು ಹೇಳುವದಕ್ಕೆ ಹೊರಟಿದ್ದವರು ಯಾರೂ ಈಗ ಇರುವದಿಲ್ಲ ; ಅವರೆಲ್ಲರೂ ಸಾವಿಗೆ ತುತ್ತಾಗಿರುತ್ತಾರೆ. ಯಾವದಾದರೂ ಮಗುವು ಹುಟ್ಟಿದರೆ ಮಾರಕವು ಯಾವಾಗ ಎಲ್ಲಿ ಕಾಣುತ್ತದೆ ಎಂಬುದನ್ನು ಜಾತಕವನ್ನು ನೋಡುವವರು ಅವಶ್ಯವಾಗಿ ನೋಡುತ್ತಾರೆ; ಆಯಸ್ಸಿನ ಪರಿಮಾಣವನ್ನು ನೋಡುವದು ಜಾತಕಜ್ಞಾನದಲ್ಲಿ ಒಂದು ಮುಖ್ಯವಾದ ಭಾಗವಾಗಿಬಿಟ್ಟಿದೆ. ಸಾವಿಲ್ಲದವರು ಯಾರು ತಾನೆ ಇರುವರು? ಹಿಂದೆ ಧರ್ಮರಾಯನನ್ನು ಯಕ್ಷನು ಕೇಳಿದ ಅನೇಕ ಪ್ರಶ್ನೆಗಳಲ್ಲಿ `ಜಗತ್ತಿನಲ್ಲೆಲ್ಲ ಮಿಗಿಲಿಲ್ಲದ ಆಶ್ಚರ್ಯವು ಯಾವದು?' - ಎಂಬುದೊಂದು ಪ್ರಶ್ನೆಯು. ಅದಕ್ಕೆ ಧರ್ಮರಾಯನು ಕೊಟ್ಟ ಉತ್ತರವು ಎಂದಿಗೂ ಮನನೀಯವಾಗಿರುತ್ತದೆ. `ಅಹನ್ಯಹನಿ ಭೂತಾನಿ ಪ್ರವಿಶನ್ತಿ ಯಮಾಲಯಮ್! ಶೇಷಾಃ ಸ್ಥಾವರಮಿಚ್ಛನ್ತಿ ಕಿಮಾಶ್ಚರ್ಯಮತಃ ಪರಮ್?' ಪ್ರಾಣಿಗಳು ದಿನದಿನವೂ ಯಮಾಲಯಕ್ಕೆ ತೆರಳುತ್ತಲೇ ಇರುವವು; ಆದರೂ ಉಳಿದವರು ಸ್ಥಿರವಾಗಿರುತ್ತೇವೆಂದು ನಂಬಿಕೊಂಡಿರುತ್ತಾರೆ. ಇದಕ್ಕಿಂತ ಆಶ್ಚರ್ಯವು ಮತ್ತೆ ಯಾವದಿದೆ? - ಎಂಬುದು ಧರ್ಮರಾಯನ ಉತ್ತರವು. ಸಂಜೀವಿನ್ಯಾದಿಗಳಿಂದ ಸತ್ತವರು ಬದುಕಿದರು ಎಂದು ಪುರಾಣಗಳಲ್ಲಿ ಹೇಳಿದೆ; ಅಮೃತವನ್ನು ಕುಡಿದವರು ಸಾವಿಲ್ಲದವರಾಗುತ್ತಾರೆ ಎಂದೂ ವರ್ಣಿಸಿದೆ. ಆದರೆ ಜ್ಞಾನಮಾತ್ರದಿಂದ ಅಮೃತವನ್ನು ಹೊಂದುತ್ತಾನೆ ಎಂದು ಭಗವಂತನು ಹೇಳಿರುವದನ್ನು ಹೇಗೆ ನಾವು ಮನಗಾಣಬೇಕು?

ಈ ಶಂಕೆಗೆ ಪರಿಹಾರವೇನೆಂದರೆ, ಜ್ಞಾನಮಾತ್ರದಿಂದ ನಾವು ಅಮೃತರಾಗುವೆವೆಂಬ ವಾಗ್ದಾನದಲ್ಲಿ ಒಂದು ತತ್ತ್ವವು ಅಡಗಿರುತ್ತದೆ. `ನ ಭವತ್ಯಮೃತಂ ಮರ್ತ್ಯಂ ನ ಮರ್ತ್ಯಮಮೃತಂ ತಥಾ। ಪ್ರಕೃತೇರನ್ಯಥಾಭಾವೋ ನ ಕಥಂಚಿದ್ಭವಿಷ್ಯತಿ" ಸ್ವಭಾವದಿಂದ ಮರ್ತ್ಯವಾಗಿದ್ದದ್ದು ಏತರಿಂದಲೂ ಅಮೃತವಾಗಲಾರದು; ಸ್ವಭಾವದಿಂದ ಅಮೃತವಾಗಿರುವದು ಎಂದಿಗೂ ಮರ್ತ್ಯವಾಗಲಾರದು. ಸ್ವಭಾವವು ಎಂದಿಗೆ ತಾನೆ ಬೇರೆಯಾದೀತು? ನಾವು ನಿಜವಾಗಿ ಮರ್ತ್ಯರೇ ಆಗಿದ್ದರೆ ನಮ್ಮ ಸ್ವಭಾವಜ್ಞಾನದಿಂದ ನಾವು ಎಂದಿಗೂ ಅಮೃತರಾಗಲಾರೆವು. ಆದ್ದರಿಂದ ನಮ್ಮ ಪರಮಾರ್ಥಸ್ವರೂಪವು ಅಮೃತವೇ ಆಗಿರುತ್ತದೆ; ಆದರೂ ಅಜ್ಞಾನದಿಂದ ನಾವು ಈಗ

ಮರ್ತ್ಯರಾಗಿರುತ್ತೇವೆ. ಸೂರ್ಯನ ಅಥವಾ ಬೆಂಕಿಯ ಔಷ್ಣ್ಯವು ಅದು ತಣ್ಣಗಿದೆಯೆಂದು ತಿಳಿದ ಮಾತ್ರದಿಂದ ತಣ್ಣಗಾಗುವದೇನು? ಇಲ್ಲ. ಸೂರ್ಯನ ಅಥವಾ ಬೆಂಕಿಯ ಔಷ್ಣ್ಯವು ಏನು ಮಾಡಿದರೆ ತಾನೆ ಬದಲಾಯಿಸುವದು? ಎಂದಿಗೂ ಬದಲಾಯಿಸದು. ಆದ್ದರಿಂದ ಬಲ್ಲವರು ಹೀಗೆಂದಿದ್ದಾರೆ: "ಆತ್ಮಾ ಕರ್ತ್ರಾದಿರೂಪಶ್ಚೇನ್ಮಾಕಾಙ್ಕ್ಷೀಸ್ತರ್ಹಿ ಮುಕ್ತತಾಮ್ । ನ ಹಿ ಸ್ವಭಾವೋ ಭಾವಾನಾಂ ನಿವರ್ತೇತೌಷ್ಣ್ಯವದ್ರವೇಃ ॥' ಆತ್ಮನು ಕರ್ತೃಭೋಕ್ತೃವೆಂಬುದೇ ಅವನ ಸ್ವಭಾವವಾಗಿದ್ದರೆ ಮುಕ್ತಿಯನ್ನು ಬಯಸಬೇಡಿರಿ; ಏಕೆಂದರೆ ವಸ್ತುಸ್ವಭಾವವು ಸೂರ್ಯನ ಕಾವಿನಂತೆ ಎಂದಿಗೂ ನಿವೃತ್ತಿಯಾಗಲಾರದು - ಎಂದು ಶ್ಲೋಕದ ಅರ್ಥ. ಮರ್ತ್ಯತ್ವವು ಅಜ್ಞಾನದಿಂದ ಆಗಿರುತ್ತದೆ; ಅಮೃತತ್ವವು ಜ್ಞಾನದಿಂದ ದೊರಕುತ್ತದೆ.

ಜ್ಞಾನದಿಂದ ಆಗುವ ಫಲವು ಹೊಸದಾಗಿ ಉಂಟಾಗುವದಲ್ಲ, ಅದು ಅಪ್ರಾಪ್ತಪ್ರಾಪ್ತಿಯಲ್ಲ; ಪ್ರಾಪ್ತಪ್ರಾಪ್ತಿಯು. ಒಂದು ರೈಲಿನಲ್ಲಿ ಒಂದು ಗಾಡಿಯ ಭಾಗವು ಯಾರೂ ಕುಳಿತುಕೊಳ್ಳದೆ ಬರಿದಾಗಿತ್ತು. ಆದರೂ ಯಾರೊಬ್ಬರೂ ಆದರಲ್ಲಿ ಬಂದು ಕೂರಲಿಲ್ಲ. ಕೆಲವರು ಬಂದುಬಂದು ನೋಡಿ ನೋಡಿ `ಏಕೋ ಇಲ್ಲಿ ಜನರು ಕೂತಿಲ್ಲ; ಇಲ್ಲಿ ಕೂರಬಾರದೇನೊ'- ಎಂದು ಕೊಂಡು ಸುಮ್ಮನೆ ಅತ್ತ ಹೋಗುತ್ತಿದ್ದರು. ಇಷ್ಟರಲ್ಲಿ ಒಬ್ಬಿಬ್ಬರು ಅಲ್ಲಿ ಬಂದು ಕೂತರು. ಹಾಗಾದರೆ ಕೂರಬಹುದೆಂದು ತೋರುತ್ತದೆ - ಎಂದು ಆ ಗಾಡಿಯಲ್ಲಿಯೇ ಇದ್ದ ಮಿಕ್ಕವರೂ ಕೆಲವರು ಬಂದು ಸೇರಿದರು. ಮೊದಲು ಏಕೆ ಬರಲಿಲ್ಲ? ಅವರಿಗೆ ಕೂತುಕೊಳ್ಳಬಹುದೆಂಬ ಜ್ಞಾನವಿರಲಿಲ್ಲ, ಅಲ್ಲಿ ಸ್ಥಲವೇನೋ ಇತ್ತಾದರೂ ಅಜ್ಞಾನದಿಂದ ಅವರಿಗೆ ಸ್ಥಲವಿರಲಿಲ್ಲ. ಇದರಂತೆ ಅಜ್ಞಾನದಿಂದ ನಮಗೆ ಈಗ ಮರ್ತ್ಯತ್ವವಿದೆ, ಅಮೃತತ್ವವಿಲ್ಲ. ಜ್ಞಾನದಿಂದ ಮರ್ತ್ಯತ್ವವು ಹೋಗಿ ಅಮೃತತ್ವವು ಪ್ರಾಪ್ತವಾಗುವದು.

ಜ್ಞಾನದಿಂದ ಅಜ್ಞಾನವು ಹೋಗಿ ಜ್ಞಾನವು ಸಫಲವಾಗಬೇಕಾದರೆ, ಅಜ್ಞಾನದಿಂದ ಅಪ್ರಾಪ್ತವಾಗಿದ್ದು ಜ್ಞಾನದಿಂದ ನಿತ್ಯಪ್ರಾಪ್ತವೆಂದು ತಿಳಿದುಬರಬೇಕಾದರೆ, ಅಜ್ಞಾನವೂ ಜ್ಞಾನವೂ ನಮ್ಮ ವಿಷಯದಲ್ಲಿಯೇ ಆಗಿರಬೇಕು. ಒಂದು ಕಂಬವು ಅವಿಕ್ರಿಯವೆಂದು ಅರಿತರೆ ನಾವು ಅವಿಕ್ರಿಯರಾಗುವದಿಲ್ಲ; ಬ್ರಹ್ಮವು ನಮಗಿಂತ ಬೇರೆಯಾಗಿದ್ದು ಅದು ಸತ್ತೂ ಅಲ್ಲ, ಅಸತ್ತೂ ಅಲ್ಲ, ಅಮೃತರೂಪವಾದದ್ದು - ಎಂದು ನಾವು ಅರಿತುಕೊಂಡರೂ ನಮಗೆ ಅಮೃತ ಪ್ರಾಪ್ತಿಯಾಗಲಾರದು. ಆದರೆ ಇಲ್ಲಿ ಜ್ಞೇಯವಾದ ಬ್ರಹ್ಮವನ್ನು ಅರಿತುಕೊಂಡರೆ ಅಮೃತಪ್ರಾಪ್ತಿಯಾಗುವದು ಎಂದು ಹೇಳಿರುವದರಿಂದ ಈ ಬ್ರಹ್ಮವು ನಮ್ಮ ಆತ್ಮತತ್ತ್ವವೇ ಎಂದಾಗುತ್ತದೆ. ಭಗವಂತನು ಹಿಂದೆ `ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ 'ಕ್ಷೇತ್ರಜ್ಞನು ನಾನೆಂದೇ ತಿಳಿ' ಎಂದು ಹೇಳಿಯೂ ಇರುತ್ತಾನೆ. ಆದ್ದರಿಂದ ಜ್ಞೇಯವಾದ ಪರಬ್ರಹ್ಮವು ನಮ್ಮ ಆತ್ಮನೇ; ಇದರ ಸ್ವರೂಪವನ್ನು ಅರಿತುಕೊಂಡಮಾತ್ರದಿಂದ ಅಮೃತಪ್ರಾಪ್ತಿಯಾಗಬೇಕಾದರೆ ನಾವು ಸ್ವಭಾವದಿಂದಲೇ ಅಮೃತರಾಗಿರಬೇಕು - ಎಂದಾಗುತ್ತದೆ.

ಸ್ವಭಾವದಿಂದಲೇ ನಾವು ಅಮೃತರಾಗಿದ್ದರೆ ಅದನ್ನು ಪಡೆದುಕೊಳ್ಳುವದು ಇಷ್ಟೊಂದು ಕಷ್ಟವಾಗಬೇಕೆ ? ನಮಗಿಂತ ಹೊರಗಿರುವ ವಸ್ತುವನ್ನು ಪಡೆದುಕೊಳ್ಳುವದು ಒಂದು ವೇಳೆ ಕಷ್ಟವಾದರೂ ಆಗಬಹುದು. ನಮ್ಮನ್ನು ನಾವು ಅರಿತುಕೊಳ್ಳುವದು, ನಮ್ಮ ಸ್ವರೂಪವನ್ನು ಪಡೆದುಕೊಳ್ಳುವದು, ಕಷ್ಟವಾಗಿರುವದಕ್ಕೇನು ಕಾರಣ? - ಎಂದು ಕೆಲವರು ಕೇಳುವರು. ಇದಕ್ಕೆ ಉತ್ತರವಾಗಿ ಒಂದು ಆಖ್ಯಾಯಿಕೆಯನ್ನು ಹೇಳುವರು: ಒಮ್ಮೆ ಅಮೆರಿಕದೇಶದಲ್ಲಿ ಒಬ್ಬ ಕಳ್ಳನನ್ನು ಅವನ ಸ್ನೇಹಿತರು ಮಾತನಾಡಿಸುತ್ತಿದ್ದರು. ಅವನು ಎಷ್ಟೋ ಬಾರಿ ಬಂದೀಖಾನೆಗಳಿಂದ ತಪ್ಪಿಸಿಕೊಂಡು ಪರಾರಿಯಾಗಿದ್ದನು. ಗೆಳೆಯರು ಅವನನ್ನು `ನಿನಗೆ ಯಾವ ಸೆರೆಮನೆಯಿಂದ ತಪ್ಪಿಸಿಕೊಳ್ಳುವುದು ಬಹಳ ಕಷ್ಟವಾಯಿತು?' ಎಂದು ಕೇಳಿದರು. ಅವನು `ಬಾಗಿಲಿಗೆ ಬೀಗಮುದ್ರೆ ಇಲ್ಲದ ಸೆರೆಮನೆಯಿಂದ ಬಿಡಿಸಿಕೊಂಡು ಬರುವದೇ ಎಲ್ಲಕ್ಕಿಂತ ಬಹಳ ಕಷ್ಟವಾಯಿತು' ಎಂದನು. ಆ ಮನೆಯ ಬಾಗಿಲನ್ನು ತೆಗೆಯುವದಕ್ಕೆ ಅವನು ಮಾಡಿದ ಪ್ರಯತ್ನಗಳೆಲ್ಲ ವಿಫಲವಾಯಿತು; ಕೊನೆಗೆ ಸಾಕಾಗಿ ಬೇಸರದಿಂದ ಬಾಗಿಲಿಗೆ ಬೆನ್ನುಕೊಟ್ಟು ಒರಗಿ ಕೂತುಕೊಂಡನು. ಆದರೆ ಏನು ಹೇಳುವದು! ಆಗಲೆ ಬಾಗಿಲು ತೆರೆದುಕೊಂಡಿತು. ಬಾಗಿಲು ಬಂದೀಖಾನೆಯ ಒಳಕ್ಕೆ ತೆರೆದುಕೊಳ್ಳುವದರ ಬದಲು ಹೊರಗಡೆಗೆ ತೆಗೆದುಕೊಳ್ಳುವಂತೆ ಮಾಡಿದ್ದೆಂದು ಆಗ ಅವನಿಗೆ ತಿಳಿಯಬಂತು; ಇದರಂತೆ ನಮಗೆ ನಿಜವಾಗಿ ಯಾವ ಬಂಧವೂ ಇಲ್ಲವೇ ಇಲ್ಲ. ಯಾವ ಮರ್ತ್ಯತ್ವವೂ ಇಲ್ಲವೇ ಇಲ್ಲ. ಆದರೆ ನಾವು ಬದ್ಧರೆಂದೂ ಸ್ವಭಾವದಿಂದ ಮರ್ತ್ಯರೆಂದೂ ಮಾಡಿಕೊಂಡುಬಿಟ್ಟಿರುವೆವು. ಬಹುಕಾಲ ಬದುಕಿರುವದಕ್ಕಾಗಿ ಧಾತುಪುಷ್ಟಿಯ ಔಷಧಿಗಳನ್ನು ತೆಗೆದುಕೊಳ್ಳುವೆವು, ಕಾಯಕಲ್ಪವನ್ನು ಮಾಡಿಸಿಕೊಳ್ಳುವೆವು. ಆದರೆ ನಾವು ದೇಹವಲ್ಲವೇ ಅಲ್ಲ; ಈ ದೇಹಕ್ಕೆ ಯಾವ ಸಂಸ್ಕಾರವನ್ನೂ ಮಾಡಿ ನಾವು ಅಮೃತತ್ವವನ್ನು ಪಡೆದುಕೊಳ್ಳಬೇಕಾದದ್ದೇ ಇಲ್ಲ; ನಿಜವಾಗಿ ನಮ್ಮ ಪರಮಾರ್ಥಸ್ವರೂಪದಿಂದ ನಾವು ಎಂದೆಂದಿಗೂ ಅಮೃತರೇ. ಕಳ್ಳನಿಗೆ ಬಾಗಿಲಿನ ಸ್ವಭಾವವು ತಿಳಿದಕೊಡಲೆ ಅವನು ಮುಕ್ತನಾದಂತೆ, ನಮಗೆ ನಮ್ಮ ನಿತ್ಯಮುಕ್ತನಾದ ಆತ್ಮನ ಸ್ವಭಾವದ ಅರಿವಾದ ಕೂಡಲೆ ನಾವು ಅಮೃತರಾಗುವೆವು. ನಾವು ಎಂದೆಂದಿಗೂ ಅಮೃತರೇ ಎಂಬ ಅರಿವೂ ನಮಗೆ ಆಗುವದು.

ಜ್ಞಾನದಿಂದ ಬಂಧನಿವೃತ್ತಿ ಎಂಬುದಕ್ಕೆ ಹಲವು ನಿದರ್ಶನಗಳು ನಮಗೆ ಅನುಭವದಲ್ಲಿ ತೋರುತ್ತವೆ. ಜ್ಞಾನವು ಅಜ್ಞಾನವನ್ನು ಮಾತ್ರ ಕಳೆಯುತ್ತದೆ; ಫಲತಃ ಅನರ್ಥನಿವೃತ್ತಿಯೂ ಆಗುತ್ತದೆ. ದೀಪ ಹಚ್ಚಿದ್ದರಿಂದ ಕತ್ತಲೆಯು ಹೋಗುತ್ತದೆ; ಕತ್ತಲೆಯಲ್ಲಿ ವಸ್ತುಗಳನ್ನು ಕಾಣದೆ ನಾವು ಎಡಹುವದು, ಮುಗ್ಗರಿಸುವದು - ಮುಂತಾದ ಅನರ್ಥಗಳು ಆಗುತ್ತಿದ್ದದ್ದು ಕೂಡಲೆ ನಿಂತುಬಿಡುತ್ತದೆ. ನಾವು ರೈಲುಪ್ರಯಾಣಕ್ಕೆ ಸಿದ್ಧರಾಗುತ್ತಿರುವಲ್ಲಿ ರೈಲು ಕೂಗಿನ ಶಬ್ದವು ಕೇಳಿಸಿದರೆ ಇದು ನಮ್ಮ ರೈಲಿನ ಶಬ್ದ ಎಂಬ ಭ್ರಾಂತಿಯಿಂದ ನಮಗೆ ಆಗುವ ಕಳವಳವೂ ಸಂಭ್ರಮವೂ `ಇದು ಮತ್ತೊಂದು ರೈಲು' ಎಂಬ ಜ್ಞಾನವಾದ ಕೂಡಲೆ ನಿಂತುಹೋಗುವದು. ಭ್ರಾಂತಿಕಾಲದಲ್ಲಿ ವೇಗದಿಂದ ಓಡುತ್ತಿರುವವರು `ಇದು ನಮ್ಮ ರೈಲಲ್ಲ' ಎಂಬ ಜ್ಞಾನವಾದ ಕ್ಷಣದಲ್ಲಿಯೇ ನಾಚಿಕೆಯಿಂದ ಓಟವನ್ನು ನಿಲ್ಲಿಸಿಬಿಡುವೆವು. ಪದಾರ್ಥವನ್ನು

ಕಳೆದುಕೊಂಡಿದ್ದವರು ಹುಡುಕಿಹುಡುಕಿ ಬೇಸತ್ತಿರುವಾಗ ತಟ್ಟನೆ ಆ ಪದಾರ್ಥವು ನಮ್ಮ ಜೇಬಿನಲ್ಲಿಯೇ ಇದೆ ಎಂಬ ತಿಳಿವು ಬಂದರೆ ಕೂಡಲೆ ಹುಡುಕುವ ಆಯಾಸವು ತಪ್ಪುವದು; ಇತ್ಯಾದಿ. ಪ್ರಕೃತದಲ್ಲಿ ಆತ್ಮಜ್ಞಾನವು ಆತ್ಮವಿಷಯಕವಾದ ಅಜ್ಞಾನವನ್ನು ಕಳೆಯುತ್ತದೆ; ನಾವು ಮರ್ತ್ಯರೆಂಬ ತಿಳಿವಳಿಕೆಯಿಂದ ಆಗಿದ್ದ ಅನರ್ಥಗಳನ್ನೆಲ್ಲ ಹೋಗಲಾಡಿಸಿಬಿಡುತ್ತದೆ. ನಮ್ಮ ಮರ್ತ್ಯತ್ವವು ಹೋಗಿ ಅಮೃತಪ್ರಾಪ್ತಿಯು ಆಗಿಬಿಡುತ್ತದೆ. ಮಿಕ್ಕ ಜ್ಞಾನಗಳು ಆಯಾ ವಿಷಯದ ಅಜ್ಞಾನವನ್ನು ಮಾತ್ರ ಕಳೆಯುತ್ತವೆ; ಆ ಅಜ್ಞಾನದಿಂದ ಆಗಿದ್ದ ಅನರ್ಥಗಳು ಮಾತ್ರ ಆಯಾ ಜ್ಞಾನದಿಂದ ಕಳೆದುಹೋಗುವವು. ಆದರೆ ಆತ್ಮಜ್ಞಾನವು ಹಾಗಲ್ಲ; ಮಿಕ್ಕದ್ದೆಲ್ಲವೂ ಆತ್ಮನಲ್ಲಿಯೇ ಹುಟ್ಟುಗಟ್ಟಿರುತ್ತದೆಯಾದ್ದರಿಂದ ಸಕಲವಿಧವಾದ ಅನರ್ಥಗಳೂ ಆತ್ಮಾಜ್ಞಾನದಿಂದಲೇ ಆಗಿರುತ್ತವೆ ಎನ್ನಬಹುದು; ಆತ್ಮಜ್ಞಾನದಿಂದ ಸಕಲ ಅಜ್ಞಾನಕೃತವಾದ ಅನರ್ಥಗಳೂ ಆತ್ಯಂತಿಕವಾಗಿ ಕೂಡಲೆ ತೊಲಗಿಬಿಡುತ್ತವೆ. ಆದ್ದರಿಂದ ನಿಜವಾದ ಅರ್ಥದಲ್ಲಿ ಆತ್ಮನೊಬ್ಬನೇ ಜ್ಞೇಯನು; ಏಕೆಂದರೆ ಆತ್ಮಜ್ಞಾನದಿಂದಲೇ ಅಜ್ಞಾನವು ಪೂರ್ಣವಾಗಿ ತೊಲಗುತ್ತದೆ. ಅಜ್ಞಾನವನ್ನು ತೊಲಗಿಸುವದೇ ಜ್ಞಾನವು. ಆದ್ದರಿಂದಲೇ ಶ್ರುತಿಯು "**ಏತಜ್ಜ್ಞೇಯಂ ನಿತ್ಯಮೇವಾತ್ಮಸಂಸ್ಥಂ ನಾತಃಪರಂ ವೇದಿತವ್ಯಂ ಹಿ ಕಿಂಚಿತ್**" ಆತ್ಮಸ್ವರೂಪದಿಂದಿರುವ ಈ ಬ್ರಹ್ಮತತ್ತ್ವವೇ ನಿತ್ಯಜ್ಞೇಯವು; ಇದಕ್ಕಿಂತ ಹೆಚ್ಚಿನ ಜ್ಞೇಯವು ಮತ್ತೆಯಾವದೂ ಇಲ್ಲ - ಎಂದು ಹೇಳಿರುತ್ತದೆ.

ನಮ್ಮೊಳಗೆ ನಾಮರೂಪವಿಲಕ್ಷಣವಾದ, ನಾಮರೂಪವಿವರ್ಜಿತವಾದ ಒಂದಾನೊಂದು ಸಾಕ್ಷಿತತ್ತ್ವವಿದೆ. ಅದು ಎಲ್ಲವನ್ನೂ ನೋಡತಕ್ಕದ್ದು, ಸಾಕ್ಷಾತ್ತಾಗಿ ನೇರಾಗಿ ನೋಡುವವನಿಗೆ ಸಾಕ್ಷಿಯೆಂಬ ಅನ್ವರ್ಥನಾಮವು ಬರುತ್ತದೆ ಎಂದು ವ್ಯಾಕರಣದಲ್ಲಿ ಹೇಳಿದೆ. ನಾನು ವಿಷಯಗಳ ರೂಪವನ್ನು ಕಣ್ಣಿಂದ ನೋಡುತ್ತೇನೆ, ಶಬ್ದವನ್ನು ಕಿವಿಯಿಂದ ಕೇಳುತ್ತೇನೆ; ವಾಸನೆಯನ್ನು ಮೂಗಿನಿಂದ ಮೂಸುತ್ತೇನೆ, ರುಚಿಯನ್ನು ನಾಲಿಗೆಯಿಂದ ಸವಿಯುತ್ತೇನೆ, ಸ್ಪರ್ಶವನ್ನು ಕೈಗಳಿಂದ ಮುಟ್ಟುತ್ತೇನೆ - ಎಂದು ಮುಂತಾಗಿ ಅರಿವಾಗುವಾಗ ನನ್ನ ಜ್ಞಾನವು ಸಾಕ್ಷಾತ್ತಾಗಿ ಆಗುವದಿಲ್ಲ; ಏಕೆಂದರೆ ಅದು ಮನಸ್ಸು ಮತ್ತು ಕರಣಗಳ ಮೂಲಕ ಆಗುತ್ತದೆ. ಆದರೆ ಮನಸ್ಸನ್ನೇ ಅರಿಯುವಾಗ ಹಾಗಲ್ಲ. ನಾನೇ ನೇರಾಗಿ ಮನಸ್ಸನ್ನು ಅರಿಯುತ್ತೇನೆ. ಯಾವ ಚೈತನ್ಯಸ್ವರೂಪದಿಂದ ಹೀಗೆ ನಾನು ಮನಸ್ಸಿನ ಎಲ್ಲಾ ವೃತ್ತಿಗಳನ್ನೂ ವಿಷಯೀಕರಿಸುತ್ತಿರುವೆನೋ ಅದೇ **ಸಾಕ್ಷಿಯು.** ಈ ಸಾಕ್ಷಿಯನ್ನು ಕುರಿತು ಶ್ರುತಿಯಲ್ಲಿ ಹೀಗೆಂದಿದೆ: '**ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ। ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ** ॥' ಈ ಸಾಕ್ಷಿಯು ಒಂದೇ; ಎರಡು ಸಾಕ್ಷಿಯನ್ನು ಕಲ್ಪಿಸುವದಕ್ಕೆ ಕೂಡ ಬರುವಂತಿಲ್ಲ. ಸಾಕ್ಷಿಗಿಂತ ಬೇರೆಯಾದದ್ದೆಲ್ಲವೂ ಅದಕ್ಕೆ ಸಾಕ್ಷ್ಯವಾಗಿರುತ್ತದೆ. ಸರ್ವಭೂತಗಳಲ್ಲಿಯೂ ಒಬ್ಬನೇ ಸಾಕ್ಷಿಯು ಅವರವರ ಸ್ವರೂಪವಾಗಿ ಕಾಣುತ್ತಿರುವನು; ಸರ್ವಭೂತಗಳಿಗೂ ಒಳಗಿರುವ ಆತ್ಮನು ಅವನೇ. ಈ ಸಾಕ್ಷಿಯು ಸರ್ವವ್ಯಾಪಿಯು; ಏಕೆಂದರೆ ಅವನಿಗೆ ದೇಶಕಾಲಾದಿಗಳೂ ಸಾಕ್ಷ್ಯವಾಗಿರುವದರಿಂದ ಯಾವ ಪರಿಚ್ಛೇದವೂ ಇರುವದಿಲ್ಲ.

ಅವನು ದೇವನು, ತಾನೇ ಬೆಳಗತಕ್ಕವನು; ಅವನನ್ನು ಬೆಳಗುವ ಮತ್ತೊಂದು ವಿಷಯವು ಇರುವದಿಲ್ಲ. ಎಲ್ಲರ ಕರ್ಮಗಳಿಗೂ ಫಲಗಳು ಆ ಸಾಕ್ಷಿಯ ಸಾನ್ನಿಧ್ಯದಿಂದಲೇ ಆಗುತ್ತಿರುವವು; ಆದ್ದರಿಂದ ಕರ್ಮಫಲದಾತನಾದ ಈಶ್ವರನೇ ಅವನು. ಇಂಥ ಸಾಕ್ಷಿಯು, ಚೈತನ್ಯವು, ಅದ್ವಿತೀಯವಾಗಿರುತ್ತದೆ; ಅದಕ್ಕೆ ಪರಿಚ್ಛೇದಕವಾದ ಸ್ವತಃ ಸತ್ತೆಯುಳ್ಳ ದ್ವಿತೀಯವಸ್ತುವೇ ಇರುವದಿಲ್ಲ. ಅದಕ್ಕೆ ಯಾವ ಧರ್ಮವೂ ಇರುವದಿಲ್ಲ. ಏಕೆಂದರೆ ಧರ್ಮವೆಂದು ನಾವು ಕಲ್ಪಿಸಬಹುದಾದ್ದೆಲ್ಲವನ್ನೂ ಈ ಸಾಕ್ಷಿಯೇ ಬೆಳಗುತ್ತಾನೆ; ವಿಷಯವು ವಿಷಯಿಯ ಧರ್ಮವಾಗಲೇ ಆರದು. ಒಬ್ಬ ಋಷಿಯಿಂದ ಹಿಡಿದು ಚಂಡಾಲನವರೆಗೂ ಈ ಆತ್ಮನೊಬ್ಬನೇ, ಆತ್ಮನು ನಾನು, ಎಂದು ನಾವೆಲ್ಲರೂ ಕರೆದುಕೊಳ್ಳುತ್ತಿರುವದರ ತಿರುಳು. ಬಾಲ್ಯ, ಯೌವನ, ಕೌಮಾರ-ಮುಂತಾದ ಎಲ್ಲಾ ಅವಸ್ಥೆಗಳಲ್ಲಿಯೂ ಮಾರ್ಪಡದೆ ಶರೀರ, ಇಂದ್ರಿಯ - ಮುಂತಾದವುಗಳನ್ನೆಲ್ಲ ಅವುಗಳ ಮಾರ್ಪಾಡುಗಳ ಸಮೇತವಾಗಿ ನೋಡುತ್ತಿರುವ ಕೂಟಸ್ಥ ಚೈತನ್ಯವು ಅವನು.

ಇಂಥ ಆತ್ಮಸ್ವರೂಪವನ್ನು ಅರಿತುಕೊಳ್ಳದೆ ಅನಾತ್ಮವನ್ನು ನಾನೆಂದು ತಿಳಿದುಕೊಂಡಿರುವದೇ ಅಜ್ಞಾನವು; ಈ ಅಜ್ಞಾನದಿಂದಲೇ ನಾವು ಮರ್ತ್ಯರಾಗಿರುವೆವು. ಆದರೆ ನಿಜವಾದ ನಮ್ಮ ಆತ್ಮಸ್ವರೂಪವನ್ನು ಅರಿತುಕೊಂಡರೆ ಕೂಡಲೆ ನಿತ್ಯವೂ ಅಮೃತಸ್ವರೂಪರೇ ಆಗಿರುವೆವೆಂಬ ಜ್ಞಾನವುಂಟಾಗುವದು. ಒಬ್ಬನು ಕ್ಷಯರೋಗಿಯಾದ ತನ್ನ ಮಗನ ಚಿಕಿತ್ಸೆಯಲ್ಲಿ ನಿರತನಾಗಿ ತನಗೆ ಆ ರೋಗವು ಅಂಟುವ ಅಪಾಯವಿದೆ ಎಂಬುದನ್ನು ಮರೆಯಬಹುದಷ್ಟೆ. ಇದರಂತೆ ಅನಾತ್ಮಗಳ ಅಭಿಮಾನದಿಂದ ನಾವು ಅನಾತ್ಮದ ಧರ್ಮವಾದ ಮರ್ತ್ಯತ್ವವೆಂಬ ಅಂಟುರೋಗಕ್ಕೆ ತುತ್ತಾಗಿರುತ್ತೇವೆ. ಯಾವನಾದರೂ ವೈದ್ಯನು ಕ್ಷಯರೋಗದ ಭಯಂಕರ ಸಾಂಕ್ರಾಮಿಕತೆಯ ಪರಿಣಾಮವನ್ನು ನೆನಪು ಕೊಟ್ಟು ಅಭಿಮಾನಿಯಾದ ತಂದೆಯನ್ನು ಎಚ್ಚರಿಸುವಂತೆ ಸದ್ಗುರುವು ನಮ್ಮನ್ನು ಎಚ್ಚರಿಸುವನು. "ನೀವು ಮರ್ತ್ಯರಲ್ಲ. ನೀವು ಶರೀರೇಂದ್ರಿಯಾದಿ ಅನಾತ್ಮಸ್ವರೂಪರಲ್ಲ. ಇವೆಲ್ಲವನ್ನೂ ನೇರಾಗಿ ಕೂಟಸ್ಥವಾಗಿ ನೋಡುತ್ತಿರುವ ಸಾಕ್ಷಿಚೈತನ್ಯಸ್ವರೂಪರು; ನೀವು ನಿತ್ಯವೂ ಅಮೃತಸ್ವರೂಪರೇ ಆಗಿರುವಿರಿ" ಎಂದು ಬುದ್ಧಿವಾದವನ್ನು ಹೇಳುವನು. ಆಗ ಜ್ಞೇಯವಾದ ಪರಮಾರ್ಥವನ್ನು ನಾವು ಅರಿತುಕೊಂಡು ವ್ಯಾವಹಾರಿಕದೃಷ್ಟಿಯಿಂದ ಅಮೃತರಾಗುವೆವು. ಪರಮಾರ್ಥವಾಗಿ ನಾವು ಎಂದೆಂದಿಗೂ ಅಮೃತರೇ ಆಗಿರುವೆವು.

ಯಾವ ಕಾರಣದಿಂದಲೂ ನಾವು ನಮ್ಮ ನಿಜವಾದ ಅಮೃತವಾದ ಆನಂದಸ್ವರೂಪವನ್ನು ಮರೆಯಬಾರದು; ಅದರ ವಿಚಾರವನ್ನು ಮಾಡುತ್ತಿರಬೇಕು. ಅದರ ಕಡೆಗೆ ಮನದಂದು ಕೊಂಡಮಾತ್ರದಿಂದ ಮರ್ತ್ಯತ್ವದಿಂದ ಬಿಡುಗಡೆಯನ್ನು ಹೊಂದಿ ಅಮೃತರಾಗುವೆವು. ಅನಾತ್ಮದಲ್ಲಿ ಅಭಿಮಾನಮಾಡಿದಷ್ಟೂ ನಮಗೆ ಮರ್ತ್ಯತ್ವವು ಹೆಚ್ಚುಹೆಚ್ಚು ಕಾಣಿಸುವದು. ಆದ್ದರಿಂದ ನಾವು ನಮ್ಮ ಪರಮಾರ್ಥಸ್ವರೂಪವಾದ ಈ ಜ್ಞೇಯದ ಕಡೆಗೆ ಲಕ್ಷ್ಯವಿಟ್ಟು ಅಮೃತತ್ವವನ್ನು ಪಡೆದುಕೊಳ್ಳಲು ಪ್ರಯತ್ನಿಸಬೇಕು.

# ೧೧೭. ಜ್ಞೇಯವಸ್ತುವನ್ನು ತಿಳಿಸುವದಕ್ಕೆ ಉಪಾಯ 13 - (12-14) (20-2-49)

ಅಮಾನಿತ್ವಾದಿಗುಣಗಳುಳ್ಳವನೇ ಜ್ಞಾನಾಧಿಕಾರಿ ಎಂದು ತಿಳಿಸಿದ್ದಾಯಿತು. ಆ ಅಧಿಕಾರಗುಣಗಳುಳ್ಳವನು ವಿಚಾರಿಸಿ ತಿಳಿದುಕೊಳ್ಳಬೇಕಾಗಿರುವ ಜ್ಞೇಯಸ್ವರೂಪವನ್ನು `ಅನಾದಿಮತ್ ಪರಂ ಬ್ರಹ್ಮ, ನ ಸತ್ತನ್ನಾಸದುಚ್ಯತೇ' ಎಂದು ತಿಳಿಸಿದ್ದಾಯಿತು. ಆದಿಯಿಲ್ಲದ್ದೂ ದೇಶಕಾಲವಸ್ತುಗಳ ಎಲ್ಲೆಕಟ್ಟು ಇಲ್ಲದ್ದೂ ಬ್ರಹ್ಮವು. ಅದು ಸತ್ತಲ್ಲ, ಎಂದರೆ ನಾಮರೂಪಗಳುಳ್ಳ ಕಾರ್ಯರೂಪವಲ್ಲ; ವ್ಯಾಕೃತಪ್ರಪಂಚದಲ್ಲಿರುವ ಯಾವದೂ ಅದರ ಪರಮಾರ್ಥರೂಪವಲ್ಲ. ಅದು ಅಸತ್ತೂ ಅಲ್ಲ. ಎಂದರೆ ನಾಮರೂಪಗಳ ವ್ಯಾಕರಣವಾಗುವ ಪೂರ್ವಾವಸ್ಥೆಯ ಕಾರಣರೂಪವೂ ಅಲ್ಲ. ಸತ್ತಿಗಿಂತಲೂ ಅಸತ್ತಿಗಿಂತಲೂ ವಿಲಕ್ಷಣವಾಗಿ ಎರಡನ್ನೂ ತನ್ನ ನಿತ್ಯಚೈತನ್ಯಪ್ರಕಾಶದಿಂದ ನೇರವಾಗಿ ನೋಡುತ್ತಿರುವದೇ ಆತ್ಮಸ್ವರೂಪವಾದ ಬ್ರಹ್ಮವು. ಸೃಷ್ಟಿಯಲ್ಲಿ ವೃಕ್ಷದಂತೆ ವ್ಯಾಕೃತವಾಗಿರುವ ಪ್ರಪಂಚಕ್ಕಿಂತಲೂ ಪ್ರಲಯದಲ್ಲಿ ಬೀಜದಂತೆ ಅವ್ಯಾಕೃತವಾಗಿರುವ ಪ್ರಪಂಚದ ಸೂಕ್ಷ್ಮರೂಪಕ್ಕಿಂತಲೂ ಬೇರೆಯಾಗಿರುವ ಸದಸದ್ವಿಲಕ್ಷಣವಾಗಿ, ಇವುಗಳಿಂದ ಉಪಲಕ್ಷಿತವಾಗಿರುವ ಚೈತನ್ಯವೇ ಜ್ಞೇಯವಾದ ಬ್ರಹ್ಮವು. ದ್ರವ್ಯ, ಗುಣ, ಜಾತಿ, ಕ್ರಿಯೆ - ಮುಂತಾದ ಕಲ್ಪನೆಗಳನ್ನೆಲ್ಲ ಮೀರಿರುವದರಿಂದ ಅದನ್ನು `ಇದಲ್ಲ, ಇದಲ್ಲ' ಎಂದೇ ಶ್ರುತಿಗಳು ತಿಳಿಸುತ್ತಿವೆ.

ಆತ್ಮನ ಸ್ವರೂಪವನ್ನು ವಾಕ್ಕಿನಿಂದ ವರ್ಣಿಸುವದು ಆಗಲಾರದೆಂಬುದನ್ನು ತಿಳಿಸುವದಕ್ಕೆ ಒಂದು ಆಖ್ಯಾಯಿಕೆಯನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಬಾಷ್ಕಲಿ ಎಂಬಾತನು ಬಾಧ್ವ - ಎಂಬವನನ್ನು ಬ್ರಹ್ಮಸ್ವರೂಪವನ್ನು ತಿಳಿಸೆಂದು ಪ್ರಾರ್ಥಿಸಲು ಆತನು ಯಾವ ಮಾತನ್ನೂ ಆಡದೆ ಇದ್ದನು. ಸುಮ್ಮನಿದ್ದ ಬಾಧ್ವನನ್ನು ಈ ಬಾಷ್ಕಲಿಯು `ದಯವಿಟ್ಟು ತಿಳಿಸಿಕೊಡು' ಎಂದು ಎರಡು ಮೂರು ಸಲ ಕೇಳಿಕೊಂಡನು; ಬಾಧ್ವನು `ಹೇಳುತ್ತಲೇ ಇರುವೆವು, ಆದರೆ ನೀನು ಮಾತ್ರ ಅರಿತುಕೊಳ್ಳಲಾರದೆ ಇರುವೆ; ಏಕೆಂದರೆ ಈ ಆತ್ಮನು ಉಪಶಾಂತನಾಗಿರುವನು' ಎಂದನು. ಜ್ಞೇಯವಾದ ಬ್ರಹ್ಮವು ಪ್ರಪಂಚೋಪಶಮವಾಗಿರುತ್ತದೆ. ಸ್ಥೂಲವಾಗಿರುವ ವಸ್ತುಗಳನ್ನು ಕೂಡ ಅಸಾಧಾರಣಗುಣಗಳಿಂದ ವರ್ಣಿಸುವದು ಕೆಲವರಿಗೆ ಮಾತ್ರ ಸಾಧ್ಯವು; ಸೂಕ್ಷ್ಮವಾಗಿರುವ ವಸ್ತುಗಳನ್ನು ವಿವರಿಸುವದು ಇನ್ನೂ ಕಡಿಮೆಯ ಸಂಖ್ಯೆಯ ಜನರಿಗೆ ದಕ್ಕುವದು. ಆದರೆ ಸ್ಥೂಲಸೂಕ್ಷ್ಮರೂಪಗಳಿಗಿಂತಲೂ ಬೇರೆಯಾಗಿ ನಿರ್ಧರ್ಮಕವಾಗಿರುವ ಪರಬ್ರಹ್ಮವನ್ನು ಯಾರು ತಾನೆ ಹೇಗೆ ವರ್ಣಿಸಲಾಪರು? ಸ್ಥೂಲಸೂಕ್ಷ್ಮಗಳೆರಡನ್ನೂ ಬೆಳಗುವ ಜ್ಯೋತಿಗಳ ಜ್ಯೋತಿಯಾದ ಈ ಆತ್ಮವಸ್ತುವನ್ನು ವಿಷಯಾಕರಿಸಿ ಚಿಂತಿಸುವದಾಗಲಿ ವರ್ಣಿಸುವದಾಗಲಿ ಎಂದಿಗೂ ಆಗಲಾರದು; ಆದರೆ ಅದು ನಮ್ಮ ಆತ್ಮನೇ ಆಗಿರುವದರಿಂದ ಅದನ್ನು ಇಲ್ಲವೆನ್ನುವುದೂ ಆಗುವದಿಲ್ಲ. ಸ್ವರೂಪದಿಂದ ಆತ್ಮನನ್ನು ವರ್ಣಿಸಲಾಗದೆಂಬುದನ್ನು ನೆನಪುಕೊಡುವದಕ್ಕಾಗಿ ಶ್ರುತಿಯು `ನೇತಿ, ನೇತಿ' ಎನ್ನುವದೇ ಹೊರತು ಅದೇ ಇಲ್ಲವೆಂಬ ಅಭಿಪ್ರಾಯದಿಂದಲ್ಲ.

ಅನಾತ್ಮದಲ್ಲಿ ಅಂಟಿಕೊಂಡಿರುವ ಮನಸ್ಸಿನ ಜನರನ್ನು ಆತ್ಮಸ್ವರೂಪದ ಕಡೆಗೆ ತಿರುಗಿಸುವದು ಅಸಾಧ್ಯ. ಆದ್ದರಿಂದ ಅದನ್ನು ಅನಾತ್ಮಸ್ವರೂಪಧರ್ಮಗಳ ನಿಷೇಧದಿಂದಲೇ ತಿಳಿಯಪಡಿಸಬೇಕಾಗಿರುತ್ತದೆ. ಮನುಷ್ಯನು ಹೊರಗಿರುವ ವಸ್ತುಗಳ ಕಾಮದಿಂದ ಅವುಗಳಲ್ಲಿಯೇ ಮನಸ್ಸಿಟ್ಟಿರುವವನು; ಪತ್ನೀಪುತ್ರಕ್ಷೇತ್ರಾದಿಗಳಲ್ಲಿ ಅಹಂತಾಮಮತಾಬುದ್ಧಿಯಿಂದ ಹೊರಮುಖವಾಗಿರುವ ಚಿತ್ತವಿರುವವರಿಗೆ ಬುದ್ಧಿಯು ಆತ್ಮನ ಕಡೆಗೆ ತಿರುಗುವುದು ಅತ್ಯಂತ ಕಷ್ಟವಾಗಿರುತ್ತದೆ. ಅನಾತ್ಮಧರ್ಮಗಳನ್ನು ತಮ್ಮ ಮೇಲೆ ಹಾಕಿಕೊಂಡಿರುವವರಿಗೆ ಆತ್ಮನ ಪರಮಾರ್ಥಸ್ವರೂಪವನ್ನು ತಿಳಿಯುವದು ಅತ್ಯಂತಕಷ್ಟವಾಗಿರುತ್ತದೆ. ಯಾರು ಇಂದ್ರಿಯವೇದ್ಯವಾದ ವಿಷಯಗಳಲ್ಲಿ ನಿತ್ಯವೂ ಅಭಿಮಾನವುಳ್ಳವರಾಗಿರುವರೋ ಅವರನ್ನು ಬಹಿರ್ಮುಖರು ಎನ್ನುತ್ತಾರೆ; ಅಂಥವರಿಗೆ ಆತ್ಮನು ದಪ್ಪವಾಗಿ ಅಥವಾ ಸಣ್ಣದಾಗಿ, ಕೆಂಪಾಗಿ ಅಥವಾ ಕಪ್ಪಾಗಿ, ಉದ್ದವಾಗಿ ಅಥವಾ ಗಿಡ್ಡವಾಗಿ, ಭಾರವಾಗಿ ಅಥವಾ ಹಗುರವಾಗಿ - ಹೀಗೆ ಯಾವದಾದರೊಂದು ಗುಣದಿಂದ ಕೂಡಿರಲೇಬೇಕು; ಇಲ್ಲದಿದ್ದರೆ ಆತ್ಮನೆಂಬ ವಸ್ತುವೇ ಇರಲಾರದು ಎಂಬ ಭ್ರಾಂತಿಯುಂಟಾಗುತ್ತದೆ. ಅವರಿಗೆ ತತ್ತ್ವವನ್ನು ತಿಳಿಸಿಕೊಡುವದುಕ್ಕಾಗಿ ಶ್ರುತಿಯು ಅಸ್ಥೂಲ, ಅನಣು- ಮುಂತಾದ ಅತದ್ಧರ್ಮನಿವೃತ್ತಿಯ ಮೂಲಕ ವಸ್ತುವನ್ನು ತಿಳಿಸುತ್ತದೆ. ಬ್ರಹ್ಮದಲ್ಲಿ ಸ್ಥೂಲತ್ವಾದಿಗಳ ಅಭಾವವು ಇರುತ್ತದೆ ಎಂದೇನೂ ಇದರ ಅಭಿಪ್ರಾಯವಲ್ಲ; ಬ್ರಹ್ಮವೇ ಇಲ್ಲವೆಂದೂ ಇದರ ಅಭಿಪ್ರಾಯವಲ್ಲ. ಬ್ರಹ್ಮವು ನಮ್ಮ ಆತ್ಮನೇ ಆಗಿರುವದರಿಂದ ಅದು ಇಲ್ಲವೆಂಬುದು ಅಸಾಧ್ಯ; ನಾನೇ ಇಲ್ಲವೆಂದು ಯಾವನಿಂದಲೂ ಕಲ್ಪಿಸುವದಕ್ಕೆ ಕೂಡ ಆಗುವಹಾಗಿಲ್ಲ. ಅನಾತ್ಮಧರ್ಮಗಳನ್ನು ಆತ್ಮನಿಗೆ ಅಂಟಿಸಿಕೊಳ್ಳಬಾರದು ಎಂಬುದನ್ನು ಮಾತ್ರ ಈ ಶ್ರುತಿಯು ನಮಗೆ ತಿಳಿಸುತ್ತಿದೆ. `ನ ಸತ್ತನ್ನಾಸದುಚ್ಯತೇ' ಎಂಬ ವಾಕ್ಯಕ್ಕೆ ಇದೇ ಅಭಿಪ್ರಾಯ.

ಸತ್ತು ಎಂಬ ಶಬ್ದಪ್ರತ್ಯಯಕ್ಕೆ ವಿಷಯವಲ್ಲವೆಂದದ್ದರಿಂದ ಅದೇ ಇಲ್ಲವೆಂಬ ಶಂಕೆ ಬರಬಹುದೆಂಬ ಅಭಿಪ್ರಾಯದಿಂದ ಭಗವಂತನು ಎಲ್ಲಾ ಜೀವರ ಕರಣಗಳೆಂಬ ಉಪಾಧಿಯ ಮೂಲಕ ಬ್ರಹ್ಮದ ಅಸ್ತಿತ್ವವನ್ನು ತಿಳಿಸಿಕೊಟ್ಟಿರುತ್ತಾನೆ. ಅಧ್ಯಾತ್ಮಶಾಸ್ತ್ರದಲ್ಲಿ ನಿರ್ವಿಶೇಷವಸ್ತುವನ್ನು ತಿಳಿಸಿಕೊಡುವದಕ್ಕಾಗಿ ಉಪಯೋಗಿಸಿರುವ ಈ ಕ್ರಮಕ್ಕೆ **ಅಧ್ಯಾರೋಪಾಪವಾದನ್ಯಾಯವೆಂದು ಹೆಸರು.** `ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಞ್ಚಂ ಪ್ರಪಞ್ಚ್ಯತೇ' ಎಂಬ ಅಭಿಯುಕ್ತರ ನುಡಿಯೊಂದನ್ನು ಶ್ರೀ ಶಂಕರಾಚಾರ್ಯರು ಈ ಸಂದರ್ಭದಲ್ಲಿ ಉದಾಹರಿಸಿರುತ್ತಾರೆ. ನಿಷ್ಪ್ರಪಂಚವಾದ, ನಿರ್ಭೇದವಾದ, ಯಾವ ವಿಶೇಷವೂ ಇಲ್ಲದ ಆತ್ಮವಸ್ತುವಿನಲ್ಲಿ ಉಪಾಧಿದರ್ಮಗಳನ್ನು ಅಧ್ಯಾರೋಪಮಾಡಿ, ಅವು ಇಲ್ಲದಿದ್ದರೂ ಇದ್ದಂತೆ ಒಪ್ಪಿಕೊಂಡು, ಆ ಮೂಲಕ ತತ್ತ್ವವನ್ನು ತಿಳಿಸುವುದು ಅಧ್ಯಾರೋಪವು. ಆದರೆ ನಿಜವಾಗಿಯೂ ಆ ಉಪಾಧಿಧರ್ಮಗಳು ಆತ್ಮತತ್ತ್ವಕ್ಕೆ ಸೇರಿಕೊಂಡಿಲ್ಲ ಎಂಬುದನ್ನು ತಿಳಿಯಪಡಿಸುವದಕ್ಕಾಗಿ ಆ ಧರ್ಮಗಳನ್ನು ಅಲ್ಲಗಳೆಯುವದು ಅಪವಾದವು. ಸಂಖ್ಯಾಜ್ಞಾನವನ್ನು ಮಾಡಿಕೊಡುವದಕ್ಕಾಗಿ ಕೆಲವು ಗೀಟಿನ ಗುರುತುಗಳನ್ನು ಉಪಯೋಗಿಸುವಾಗ ಸಂಖ್ಯೆಯು ರೇಖಾರೂಪವೇ ಎಂಬ

ಭ್ರಾಂತಿಯನ್ನು ಅಲ್ಲಗಳೆಯುವದು ಹೇಗೆ ಅವಶ್ಯವಾಗುವದೋ ಹಾಗೆ ಆತ್ಮಜ್ಞಾನವನ್ನು ಉಪಾಧಿಗಳ ಮೂಲಕ ಮಾಡಿಕೊಟ್ಟು ಆತ್ಮನಲ್ಲಿ ಉಪಾಧಿಗಳ ಧರ್ಮಗಳನ್ನು ಅಲ್ಲಗಳೆಯುವದು ಅವಶ್ಯವಾಗುತ್ತದೆ. ಪ್ರಕೃತದಲ್ಲಿ ಕರಣಧರ್ಮಗಳನ್ನು ಆತ್ಮನಲ್ಲಿ ಅಧ್ಯಾರೋಪಮಾಡಿ ಆತ್ಮನ ಇರವನ್ನು ತಿಳಿಸಿಕೊಟ್ಟಿರುವದು ಹೇಗೆಂದರೆ:

**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ॥ 13-13**

ಅದಕ್ಕೆ ಎಲ್ಲೆಲ್ಲಿಯೂ ಕೈಕಾಲುಗಳಿರುವವು, ಎಲ್ಲೆಲ್ಲಿಯೂ ಕಣ್ಣು ತಲೆ ಬಾಯಿಗಳಿರುವವು; ಎಲ್ಲೆಲ್ಲಿಯೂ ಕಿವಿಗಳಿರುವವು. ಅದು ಸರ್ವವನ್ನೂ ವ್ಯಾಪಿಸಿಕೊಂಡಿರುತ್ತದೆ. ಎಲ್ಲೆಲ್ಲಿ ದೇಹಗಳಲ್ಲಿ ಕೈಕಾಲು ಮುಂತಾದ ಅವಯುವಗಳು ಕಾಣಬರುವವೋ ಅವೆಲ್ಲವೂ ಜ್ಞೇಯುವಾದ ಆತ್ಮಚೈತನ್ಯಶಕ್ತಿಯಿರುವದರಿಂದಲೇ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಿರುವವು. ಆದ್ದರಿಂದ ಯಾವ ಚೈತನ್ಯದ ನಿಮಿತ್ತದಿಂದ ಅವು ತವ್ಮು ತವ್ಮು ಕಾರ್ಯವನ್ನು ನೆರವೇರಿಸಬಲ್ಲವಾಗಿರುವವೋ ಆ ಚೈತನ್ಯವು ಅವಶ್ಯವಾಗಿ ಇದೆ - ಎಂದು ಜ್ಞೇಯದ ಸದ್ಭಾವಕ್ಕೆ ಅವು ಹೊಗೆಯು ಬೆಂಕಿಯ ಇರವಿಗೆ ಲಿಂಗವಾಗಿರುವಂತೆ ಲಿಂಗವಾಗಿರುತ್ತವೆ. ಆತ್ಮಚೈತನ್ಯವ್ಯಾಪ್ತವಲ್ಲದ್ದು ಯಾವದೊಂದೂ ಲೋಕದಲ್ಲಿಲ್ಲ. ಆದ್ದರಿಂದ ಪ್ರತಿಯೊಂದು ವಸ್ತುವೂ ಒಂದಲ್ಲ ಒಂದು ರೀತಿಯಿಂದ ಚೈತನ್ಯವನ್ನು ಅರಿಯುವದಕ್ಕೆ ದ್ವಾರವಾಗಿರುತ್ತದೆ. ಮನುಷ್ಯನಿಗೆ ಕಣ್ಣು, ಕಿವಿ, ಕೈ, ಕಾಲುಗಳ ಮೂಲಕವೇ ಸ್ವಾಭಾವಿಕವಾಗಿ ಜ್ಞಾನವು ತೋರಿಕೊಳ್ಳುತ್ತದೆಯಾದ್ದರಿಂದ ಈ ಕರಣಗಳ ದ್ವಾರದಿಂದಲೇ ಆತ್ಮಚೈತನ್ಯವನ್ನು ತಿಳಿಸಿಕೊಟ್ಟಿದೆ. ಆದರೆ ಆತ್ಮಚೈತನ್ಯಕ್ಕೆ ಈ ಕರಣಗಳು ಅವಶ್ಯವಾಗಿ ಇರಲೇಬೇಕೆಂಬ ನಿಯಮವೇನೂ ಇರುವದಿಲ್ಲ. ಈ ಆತ್ಮನು ಕಣ್ಣಿಗೆ ಕಣ್ಣು, ಕಿವಿಗೆ ಕಿವಿ ಎಂದು ಮುಂತಾಗಿ ಶ್ರುತಿಯಲ್ಲಿ ತಿಳಿಸಿರುತ್ತದೆ. ಕಣ್ಣಿನಲ್ಲಿ ಮಾಡುವ ವ್ಯಾಪಾರವು ಆತ್ಮಚೈತನ್ಯಪ್ರಯುಕ್ತವು; ಕಿವಿಯಲ್ಲಿರುವ ಕೇಳುವ ವ್ಯಾಪಾರವೂ ಆತ್ಮಚೈತನ್ಯಪ್ರಯುಕ್ತವಾಗಿದೆ. ಪ್ರತಿಯೊಂದು ಕರಣದ ವ್ಯಾಪಾರವೂ ಚಿದ್ವ್ಯಾಪ್ತವಾಗಿರುತ್ತದೆ. ಪ್ರತಿಯೊಂದು ವೃತ್ತಿಯೂ ಚಿದ್ವ್ಯಾಪ್ತವಾಗಿ ಚಿದಾಭಾಸವಾಗಿರುತ್ತದೆ. ಹೀಗೆ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವ ಬಿಂಬಚೈತನ್ಯವೇ ಆತ್ಮನು. ಈ ಆತ್ಮ ಚೈತನ್ಯದಲ್ಲಿಯೇ ನಾವು ಹುಟ್ಟಿ, ಇದ್ದು ಇದರಲ್ಲಿಯೇ ಅಡಗುತ್ತಿರುವೆವು. ನಮ್ಮ ಸ್ವರೂಪಸ್ಥಿತಿವ್ಯಾಪಾರಗಳೆಲ್ಲವೂ ಈ ಚೈತನ್ಯದಿಂದಲೇ ನಮಗೆ ದೊರಕಿರುತ್ತದೆ. ಒಂದು ಎಂಜಿನ್ನು ನಡೆಯುವದಕ್ಕೆ ಯಂತ್ರಿಯಾದ ಸಾರಥಿಯು ಕಾರಣನಾಗಿರುವಂತೆ ನಮ್ಮೆಲ್ಲರ ದರ್ಶನ, ಸ್ಪರ್ಶನ, ಮುಂತಾದ ವ್ಯಾಪಾರಗಳಿಗೆ ಮೂಲಕಾರಣನಾದವನೇ ಪರಮಾತ್ಮನು.

ಈಗ ಸರ್ವೇಂದ್ರಿಯಗಳ ವ್ಯಾಪಾರವೂ ಈ ಆತ್ಮನಲ್ಲಿ ನಿಜವಾಗಿದೆ ಎಂಬ ಶಂಕೆಯು ನಿಂತೀತೆಂಬ ಅಂಜಿಕೆಯಿಂದ ಭಗವಂತನು, ಅಧ್ಯಾರೋಪಮಾಡಿದ ಈ ಕರಣಧರ್ಮಗಳು ಆತ್ಮನಲ್ಲಿಲ್ಲವೆಂದು ಹೇಳುತ್ತಿದಾನೆ:

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ॥ 13-14**

ಎಲ್ಲಾ ಜ್ಞಾನೇಂದ್ರಿಯಗಳು, ಎಲ್ಲಾ ಕರ್ಮೇಂದ್ರಿಯಗಳು, ಬುದ್ಧಿಮನಸ್ಸುಗಳೆಂಬ ಅಂತಃಕರಣಗಳು- ಈ ಎಲ್ಲಾ ಇಂದ್ರಿಯಗಳ ವ್ಯಾಪಾರಗಳಿಂದಲೂ ತೋರಿಕೊಳ್ಳುತ್ತಿರುವದರಿಂದ ಅದು ಸರ್ವೇಂದ್ರಿಯಗುಣಾಭಾಸವು. ನಿಜವಾಗಿ ನೋಡಿದರೆ ಅದರಲ್ಲಿ ಯಾವ ಇಂದ್ರಿಯಗಳೂ ಇರುವದಿಲ್ಲ. ಆದ್ದರಿಂದ ಅದಕ್ಕೆ ಇಂದ್ರಿಯವ್ಯಾಪಾರಗಳು ಯಾವವೂ ನಿಜವಾಗಿ ಸೇರಿರುವದಿಲ್ಲ. ಅದು ಸರ್ವೇಂದ್ರಿಯವಿವರ್ಜಿತವು. ಹೀಗಿದ್ದರೂ ಅದು ಸರ್ವಭೃತ್ತು, ಎಲ್ಲವನ್ನೂ ಸದ್ಬುದ್ಧಿಯ ಅನುಗಮದಿಂದ ಭರಣಮಾಡುತ್ತಿರುವದು, ಎಂಥ ಕಲ್ಪನೆಯಾಗಲಿ, ಬಿಸಿಲುಕುದುರೆಯೇ ಮುಂತಾದವುಗಳು ಕೂಡ ಈ ಸದ್ಬುದ್ಧಿಗಮ್ಯವಾದ ಆತ್ಮನೆಂಬ ಆಸ್ಪದದಲ್ಲಿಯೇ ಕಲ್ಪಿತವಾಗಿರುತ್ತವೆ. ಇದರಲ್ಲಿ ಯಾವ ಗುಣವೂ ಇಲ್ಲ ; ಆದರೂ ಶಬ್ದಾದಿದ್ವಾರದಿಂದ ಸುಖದುಃಖಮೋಹರೂಪವಾಗಿ ಪರಿಣತವಾಗುವ ಗುಣಗಳನ್ನು ಭೋಗಿಸುತ್ತಿರುವದು. ಹೀಗೆ ಶಬ್ದಾದಿಗಳು ಯಾವ ಚೈತನ್ಯಕ್ಕೆ ಭೋಗವನ್ನು ತಂದುಕೊಡುವವೋ ಅದೊಂದು ಇದೆ ಎನ್ನುವದಕ್ಕೆ ಇವು ದ್ವಾರವಾಗಿರುತ್ತವೆ. ಅಂತೂ ಜ್ಞೇಯವನ್ನು ತಿಳಿಯುವದಕ್ಕೆ ಅಸತ್ತಾಗಿರುವ ಸರ್ವೇಂದ್ರಿಯಗಳ ವ್ಯಾಪಾರವೂ ಅವುಗಳಿಂದಾಗುವ ಅಸತ್ತಾದ ಭೋಗವೂ ಲಿಂಗವಾಗಿರುತ್ತವೆ. ಸ್ವತಃ ನೋಡಿದರೆ ಅದರಲ್ಲಿ ಯಾವ ಇಂದ್ರಿಯಗಳ ವ್ಯಾಪಾರವಾಗಲಿ ಭೋಗವಾಗಲಿ ಇರುವದೇ ಇಲ್ಲ. ಇಂಥದ್ದು ಈ ಜ್ಞೇಯವು.

## ೧೧೮. ಜ್ಞೇಯದಲ್ಲಿ ತೋರುವ ವಿರೋಧಾಭಾಸಗಳು 13 - (14)

**(27-2-49)**

ಜ್ಞೇಯವಾದದ್ದನ್ನು ತಿಳಿಸುತ್ತೇನೆ ; ಅಮಾನಿತ್ವಾದಿಗಳಿಂದ ಕೂಡಿದವನು ತಿಳಿಯಬೇಕಾಗಿರುವ ಪರಮಾರ್ಥವೊಂದು ಇದೆ. ಅದೇ ನಿಜವಾಗಿ ಜ್ಞೇಯವು, ಆತ್ಮವ್ಯತಿರಿಕ್ತವಾದ ವಸ್ತುಗಳು ಜ್ಞೇಯವಲ್ಲ - ಎಂದು ಭಗವಂತನು ಪ್ರಾರಂಭಿಸಿರುತ್ತಾನೆ. ಅದು ಸತ್ತೂ ಅಲ್ಲ, ಅಸತ್ತೂ ಅಲ್ಲ - ಎಂದು ಸದಸದ್ವ್ಯತಿರಿಕ್ತತ್ವವನ್ನೂ ಹೇಳಿರುತ್ತಾನೆ. ಇಲ್ಲಿ ಒಂದು ಶಂಕೆಯೇಳಬಹುದು. ಆತ್ಮವ್ಯತಿರಿಕ್ತವಾದ ವಸ್ತುಗಳು ಇಲ್ಲದೆ ಇದ್ದರೆ ಅವುಗಳಿಗಿಂತ ಬೇರೆ ಎಂದಾದರೂ ಹೇಳುವದು ಹೇಗೆ ? ಇದಕ್ಕೆ ಸಮಾಧಾನವೇನೆಂದರೆ ಕನಸಿನ ಪದಾರ್ಥಗಳನ್ನು ನೆನೆಸಿಕೊಳ್ಳುವಾಗ ಅವು ಅಸತ್ತಾದರೂ ಅವುಗಳು 'ಹಾಗಿದ್ದವು' 'ಹೀಗಿದ್ದವು' ಎಂದು ಎಚ್ಚರದಲ್ಲಿಯೂ ನಾವು ವರ್ಣಿಸುವೆವಲ್ಲವೆ ? ಆದಮಾತ್ರಕ್ಕೆ ಅವು ನಿಜವಾಗಿದ್ದವೆಂದಾಗಲಿ, ಅಥವಾ ಅವು ತೋರಿಕೊಳ್ಳಲೇಇಲ್ಲವೆಂದಾಗಲಿ ಆಗುವದಿಲ್ಲವಷ್ಟೆ. ಇದರಂತೆ ಆತ್ಮವ್ಯತಿರಿಕ್ತವಾದ

ವಸ್ತುಗಳನ್ನು ಅನುವಾದಮಾಡಿಕೊಂಡು ಪರಮಾರ್ಥವು ಅವಕ್ಕಿಂತ ವ್ಯತಿರಿಕ್ತವಾಗಿದೆ ಎಂದು ಹೇಳುವದರಲ್ಲಿ ಯಾವ ದೋಷವೂ ಇರುವದಿಲ್ಲ. ಹಾವು ಹಾವು ಎಂದು ಅನುವಾದಮಾಡಿಕೊಂಡು ಹಗ್ಗವನ್ನು ತಿಳಿಸಿದರೆ ಹಾವು ಕಚ್ಚುವ ಹಾವಾಗುವದಿಲ್ಲ, ಬುಸುಗುಟ್ಟುವ ಹಾವೂ ಆಗುವದಿಲ್ಲ. ಅಲ್ಲವೆ ? ಇದರಂತೆ ಪರಮಾರ್ಥವನ್ನು ತಿಳಿಸಿಕೊಡುವದಕ್ಕೆ ಉಪಯೋಗಿಸುವ ವ್ಯಾವಹಾರಿಕ ಪದಾರ್ಥವನ್ನೂ ಅರಿಯಬೇಕು. ಕನಸಿನ ಪದಾರ್ಥಗಳೆಲ್ಲ ಹೇಗೆ ಜ್ಞೇಯಾಭಾಸಗಳೋ ಹಾಗೆಯೇ ಎಚ್ಚರದಲ್ಲಿ ತೋರುವ ಅನಾತ್ಮವಸ್ತುಗಳೂ ಜ್ಞೇಯಾಭಾಸಗಳು. ಆತ್ಮವಸ್ತುವೊಂದೇ ಜ್ಞೇಯವು.

ಆತ್ಮನು ಸದಸದ್ವ್ಯತಿರಿಕ್ತನಾದರೂ ಶೂನ್ಯವಲ್ಲ. ಸರ್ವೇಂದ್ರಿಯಗುಣಾಭಾಸವು, ಸರ್ವೇಂದ್ರಿಯವಿವರ್ಜಿತವು - ಎಂದು ಆತ್ಮತತ್ತ್ವವನ್ನು ವರ್ಣಿಸಿರುವದರ ಅಭಿಪ್ರಾಯವನ್ನು ನಾವು ಸರಿಯಾಗಿ ತಿಳಿದುಕೊಳ್ಳಬೇಕು. ಸರ್ವೇಂದ್ರಿಯವ್ಯಾಪಾರಗಳಲ್ಲಿ ತಾನು ವ್ಯಾಪೃತವಾಗಿರುವಂತೆ ತೋರುವದು, ನಿಜವಾಗಿ ಯಾವ ಇಂದ್ರಿಯದ ವ್ಯಾಪಾರವೂ ಅದಕ್ಕೆ ಸಂಬಂಧಿಸಿರುವದಿಲ್ಲ. ತತ್ತದಿಂದ್ರಿಯಗಳು ತತ್ತದ್ವ್ಯಾಪಾರವನ್ನು ಮಾಡುತ್ತವೆ, ಆತ್ಮನು ನಿರ್ಲಿಪ್ತನು - ಎಂದು ಕೆಲವರು ವೇದಾಂತಿಗಳು ಅಂದುಕೊಂಡು ಸ್ವೇಚ್ಛಾವಿಹಾರದಲ್ಲಿ ತೊಡಗುವದುಂಟು. ಇಲ್ಲಿ ಹೇಳಿರುವ ತತ್ತ್ವಕ್ಕೂ ಅವರ ಮತಕ್ಕೂ ಇರುವ ವಿವೇಕವನ್ನು ಅರಿತುಕೊಳ್ಳಬೇಕು. ಒಂದೂರಿನಲ್ಲಿ ಎಲ್ಲರೂ ಇಂಥ ವೇದಾಂತಿಗಳೇ ಇದ್ದರಂತೆ. ಆವೂರಿಗೆ ವೇದಾಂತಪುರಿ ಎಂಬ ಹೆಸರು ಬಂದಿತ್ತಂತೆ. ಆವೂರಿಗೆ ಭಿಕ್ಷೆಗೆ ಬರುತ್ತಿದ್ದ ಒಬ್ಬ ದಾಸಯ್ಯನು ಯಾರ ಮನೆಗೆ ಬಂದರೂ "ಕೊಡುವವರು ಯಾರು ? ತೆಗೆದುಕೊಳ್ಳುವವರು ಯಾರು, ಹೋಗೋ ದಾಸಯ್ಯ !" ಎಂದು ವೇದಾಂತದ ಆಭಾಸದ ಮಾತುಗಳನ್ನು ಆಡಿ ಹಿಂತಿರುಗಿಸುತ್ತಿದ್ದರಂತೆ. ಒಂದು ದಿನ ಆ ದಾಸಯ್ಯನು ಒಬ್ಬರ ಮನೆಯೊಳಕ್ಕೆ ದಿಟ್ಟತನದಿಂದ ನುಗ್ಗಿ ಮೂಲೆಯಲ್ಲಿ ರಾಶಿಹಾಕಿದ್ದ ಧಾನ್ಯವನ್ನೇ ಬವನಾಸಿಯಲ್ಲಿ ತುಂಬಿಕೊಂಡುಬಿಟ್ಟನಂತೆ. ಆಗ ಮನೆಯವನು ಆಕ್ಷೇಪಿಸಲು 'ಹೇಳುವವರು ಯಾರು, ಕೇಳುವವರು ಯಾರು ? ಸುಮ್ಮನಿರೋ ನಮ್ಮಪ್ಪ !' ಎಂದು ವೇದಾಂತದ ಉತ್ತರವನ್ನೇ ಕೊಟ್ಟನಂತೆ ! ಹೀಗಲ್ಲ, ಇಲ್ಲಿ ಹೇಳಿರುವದು. ಯಾವ ಆತ್ಮನ ಸನ್ನಿಧಿಯಿಂದ ನೋಡುತ್ತೇನೆ, ಕೇಳುತ್ತೇನೆ - ಎಂದು ಮುಂತಾಗಿ ಇಂದ್ರಿಯಗಳ ವ್ಯಾಪಾರದಿಂದಾಗುವ ಅನುಭವವು ತೋರುತ್ತಿರುವದೋ, ಸರ್ವತ್ರ ಅನುಸ್ಯೂತವಾಗಿರುವ ಆ ಅನುಭವಸ್ವರೂಪವೇ ಆತ್ಮನು. ಆತ್ಮನಲ್ಲಿ ನಿಜವಾಗಿ ನೋಟ, ಕೇಳುವಿಕೆ - ಮುಂತಾದ ಇಂದ್ರಿಯವ್ಯಾಪಾರಗಳು ಇರುವದಿಲ್ಲ. 'ಗರಿಕೆಯ ಹುಲ್ಲಿನ ಮೇಲಿರುವ ನೀರಿನ ಹನಿಯಲ್ಲಿ ಸೂರ್ಯನ ಪ್ರತಿಬಿಂಬವು ಬಿದ್ದಿರುತ್ತದೆ ; ಅದು ಬೇರೆಬೇರೆಯ ಕೋನದಿಂದ ನೋಡಿದಾಗ ಊದ, ನೀಲ, ಆಕಾಶಬಣ್ಣ, ಹಸುರು, ಹಳದಿ, ಕಿತ್ತಲೆಯಬಣ್ಣ, ಕೆಂಪು ಮುಂತಾಗಿ ಕಾಣುವುದು. ಅಲ್ಲಿ ವಜ್ರವೈಡೂರ್ಯಾದಿಗಳ ಹೊಳಪು ತೋರಿದರೂ ನಿಜವಾಗಿ ವಜ್ರವೈಢೂರ್ಯಗಳೇನೂ

ಇರುವದಿಲ್ಲ. ಸ್ಫಟಿಕದಲ್ಲಿ ಕೆಂಪು ಬಣ್ಣವು ಹೂವಿನ ಸಂಬಂಧದಿಂದ ತೋರುವಂತೆ ಉಪಾಧಿಗಳ ನಿಮಿತ್ತದಿಂದ ಆತ್ಮನಲ್ಲಿ ತೋರುವ ಸಾಂಸಾರಿಕಧರ್ಮಗಳು ಯಾವವೂ ಅವನಿಗೆ ನಿಜವಾಗಿ ಸೇರಿರುವದಿಲ್ಲ.

ಕನಸನ್ನು ಕಾಣುವಾಗ ಎಚ್ಚರವು ನಮಗಿರುವದಿಲ್ಲ ; ಎಚ್ಚರವಾಗಿರುವಾಗ ನಾವು ಕನಸನ್ನು ಕಾಣುವದಿಲ್ಲ. ಆಯಾ ಅವಸ್ಥೆಯಲ್ಲಿ ಆಯಾ ಧರ್ಮಗಳು ಆತ್ಮನಲ್ಲಿರುವಂತೆ ತೋರಿದರೂ ಅವಸ್ಥಾಧರ್ಮಗಳಿಂದ ಆತ್ಮನು ಕಟ್ಟುಬಿದ್ದಿರುವದಿಲ್ಲವೆಂಬುದು ಒಂದವಸ್ಥೆಯನ್ನು ಬಿಟ್ಟು ಮತ್ತೊಂದು ಅವಸ್ಥೆಗೆ ಸಲೀಸಾಗಿ ಬಂದುಬಿಡುವದರಿಂದ ಸ್ಫುಟವಾಗುತ್ತದೆ. ಅವಸ್ಥೆಗಳ ಅನುಭವಗಳು ಆಭಾಸಮಾತ್ರವಾಗಿವೆ. ಅವುಗಳಿಂದ ಆತ್ಮನಲ್ಲಿ ಯಾವ ವಿಕಾರವೂ ಆಗುವುದಿಲ್ಲ. ಕನಸಿನ ಊಟದಿಂದ ಎಚ್ಚರದ ಹಸಿವು ಅಡಗಿರುವದಿಲ್ಲ. ಇದರಂತೆ ಎಚ್ಚರದಲ್ಲಿ ನೋಡುವದು, ಕೇಳುವದು, ಮೂಸುವದು, ಮುಟ್ಟುವದು -ಮುಂತಾದ ಇಂದ್ರಿಯಗಳು ಆಯಾ ವ್ಯಾಪಾರವನ್ನು ನಾವು ಮಾಡುವಂತೆ ತೋರುತ್ತಿರುವಾಗ ಮಿಕ್ಕ ಇಂದ್ರಿಯಗಳ ವ್ಯಾಪಾರದ ಸೋಂಕೂ ನಮಗೆ ಇರುವದಿಲ್ಲ. ಆತ್ಮನು ಆ ಎಲ್ಲಾ ವ್ಯಾಪಾರಗಳಿಗೂ ಸಾಕ್ಷಿಯಾಗಿರುತ್ತಾನೆ ; ಆ ವ್ಯಾಪಾರಗಳಿಂದ ಆತ್ಮನಲ್ಲಿ ಯಾವದೊಂದು ವಿಕಾರವೂ ಆಗಿರುವದಿಲ್ಲ. ಅವನು ಯಾವಾಗಲೂ ತನ್ನ ಅಚ್ಚಳಿಯದ ನಿತ್ಯಚೈತನ್ಯಸ್ವರೂಪದಲ್ಲಿಯೇ ಇರುವನು. ಬದಲಾವಣೆಗಳು ತೋರುವದು ನಿಜ ; ಆದರೆ ಬದಲಾವಣೆಗಳು ನಮ್ಮ ಸ್ವರೂಪದಲ್ಲಿ ನಿಜವಾಗಿ ಆಗುವದಿಲ್ಲ. ಇಂಥ ಸ್ವರೂಪವೇ ನಮ್ಮ ಆತ್ಮ ; ಅದೇ ಜ್ಞೇಯವು.

ಈ ಜ್ಞೇಯವನ್ನು ಅರಿತುಕೊಂಡರೆ ನಮಗೆ ವ್ಯವಹಾರದಲ್ಲಿ ಎಂಥ ಫಲವಾಗುವದು, ನೋಡಿ ! ಯಾವನಾದರೂ ನಮ್ಮನ್ನು ಬಯ್ದನೆಂದು ಇಟ್ಟುಕೊಳ್ಳಿ. ಅದರಿಂದ ನಮ್ಮ ಸ್ವರೂಪದಲ್ಲಿ ಆಗುವ ಹೆಚ್ಚುಕಡಿಮೆಯೇನು ? ಅದು ಒಂದು ಶಬ್ದಮಾತ್ರ. ಶಬ್ದವು ಆಕಾಶಕ್ಕೆ ಸಂಬಂಧಪಟ್ಟದ್ದು. ಕನಸಿನಲ್ಲಿಕೂಡ ಕೆಲವು ಶಬ್ದಗಳು ಕೇಳಿಬರುತ್ತವೆ. ಅದರಿಂದ ನಮಗೆ ಆದದ್ದೇನು ? ಇದರಂತೆ ನಮ್ಮನ್ನು ಯಾರಾದರೂ ಹೊಗಳಿದರೆ ಅದೂ ಒಂದು ಶಬ್ದವಲ್ಲವೆ? ಹೊರಗೆ ಕೇಳುವ ಗುಡುಗು ಮುಂತಾದ ಶಬ್ದಗಳಿಗೂ ಆ ಶಬ್ದಕ್ಕೂ ಇರುವ ಹೆಚ್ಚುಕಡಿಮೆಯೇನು? ಅದರಿಂದ ನಾವೇಕೆ ಹಿಗ್ಗಬೇಕು ಅಥವಾ ಕುಗ್ಗಬೇಕು ? ಆತ್ಮನು ಎಲ್ಲರಿಗೂ, ಆತ್ಮನೇ. ಅವನಿಗೆ ಮಾನವಾಗಲಿ ಅಪಮಾನವಾಗಲಿ ಸೇರಿದ್ದಲ್ಲ ; ಮಾನಾಪಮಾನಗಳು ಮನಸ್ಸಿನಲ್ಲಿ ತೋರುವ ತೋರಿಕೆಗಳು ಮಾತ್ರ. ನಾವೇಕೆ ಅದಕ್ಕೆ ಹಿಗ್ಗುವದು, ಅಥವಾ ಕುಗ್ಗುವದು? ವಿವೇಕಾನಂದರನ್ನು ಬಯ್ದು ಬರೆದ ಅಥವಾ ಹೊಗಳಿ ಬರೆದ ಕೆಲವು ಲೇಖನಗಳನ್ನು ಪತ್ರಿಕೆಗಳಿಂದ ಕತ್ತರಿಸಿ ಅವರ ಮಿತ್ರರು ಅಮೆರಿಕಕ್ಕೆ ಕಳುಹಿಸಿದರಂತೆ. ಅದಕ್ಕೆ ಅವರು `ಇಂಥ ಪತ್ರಿಕೆಗಳ ಭಾಗವನ್ನು ಇನ್ನುಮೇಲೆ ಕಳುಹಿಸಬೇಡಿ; ಇವೆಲ್ಲ ಕಾಸುವೀಸಕ್ಕಾಗಿ ಹುಡುಗರು ಬರೆದವು. ನಮಗೆ ಇವುಗಳಿಂದ ಏನೂ ಆಗಬೇಕಾದದ್ದಿಲ್ಲ' ಎಂದು ಉತ್ತರಕೊಟ್ಟರಂತೆ !

ಇಂದ್ರಿಯಗಳು ಹೆಚ್ಚುಕಡಿಮೆಯಾದರೆ ಆತ್ಮನಲ್ಲಿ ಯಾವ ಮಾರ್ಪಾಡೂ ಆಗುವಹಾಗಿಲ್ಲ. ಯಾರೋ ಬಯ್ದರೆ, ಯಾರೋ ಹೊಗಳಿದರೆ, ನಾವೇಕೆ ಕದಲಬೇಕು, ನಾವೇಕೆ ಮಾನವು ಬಂತೆಂದು ಅಥವಾ ಅಪಮಾನವಾಯಿತೆಂದು ಹಿಗ್ಗಬೇಕು, ಕುಗ್ಗಬೇಕು? ಆತ್ಮನಲ್ಲಿ ಯಾವ ಹೆಚ್ಚುಕಡಿಮೆಯೂ ಆಗುವಂತಿಲ್ಲ. ಇಂದ್ರಿಯಗಳು ಲೋಕದಲ್ಲಿ ಬಹಳ ದೊಡ್ಡವೇ ಸರಿ; ಅವುಗಳಿಂದ ನಾವು ವಸ್ತುಗಳನ್ನು ಅರಿಯುತ್ತೇವೆ, ನಿಜ. ಆದರೆ ಅವುಗಳಿಂದ ಎಷ್ಟೋ ಸಲ ಮೋಸಹೋಗುತ್ತೇವೆ. ವಿಮೆಮಾಡಿದಾಗ ನನ್ನ ವಯಸ್ಸನ್ನು ನಾನೇ ಹೇಳಿದರೂ ಡಾಕ್ಟರನಿಗೆ ನಂಬಿಕೆಯುಂಟಾಗಲಿಲ್ಲ ; ಆದರೆ ನಾನೇ ಮತ್ತೊಬ್ಬರಿಂದ ಹೇಳಿಸಿದಾಗ ಆ ವಯಸ್ಸನ್ನು ನಂಬಿದನು! ಇಂದ್ರಿಯಗಳು ಹೇಳಿದರೆ ನಂಬುತ್ತೇನೆ, ನನ್ನ ನೇರಾದ ಅನುಭವವನ್ನು ನಂಬುವದಿಲ್ಲ ಎಂಬುದು ಹೇಗೆ ನ್ಯಾಯ? ಆತ್ಮನಿಗೆ ಇಂದ್ರಿಯಗಳು ದೃಶ್ಯವಾಗಿವೆ. ಅವನಿಗೆ ಅವುಗಳ ಗುಣಗಳು ಹೇಗೆ ಮುಟ್ಟಬೇಕು ? ಆದರೂ ಇಂದ್ರಿಯಧರ್ಮಗಳನ್ನು ಅಧ್ಯಾರೋಪಮಾಡಿಕೊಂಡು ನಾವೇ ಆ ಧರ್ಮಗಳುಳ್ಳವರು ಎಂದು ಭಾವಿಸಿಕೊಂಡಿರುತ್ತೇವೆ. ಆತ್ಮರು ಅನೇಕರೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಅನೇಕತ್ವವೂ ಇಂದ್ರಿಯಾದಿಧರ್ಮಗಳ ಅಧ್ಯಾಸದಿಂದಲೇ ಬಂದಿರುತ್ತದೆ. ಸರಿಯಾದ ಕಣ್ಣಿನಿಂದ ನೋಡಿದಾಗ ಜೀವರು ಅನೇಕರು, ಜನ್ಮಾಂತರವನ್ನೂ ಸ್ವರ್ಗನರಕಗಳನ್ನೂ ಸಂಸಾರಬಂಧಮೋಕ್ಷಗಳನ್ನೂ ಅನುಭವಿಸುವರೆಂಬುದೂ ಸುಳ್ಳಾಗಿಬಿಡುತ್ತದೆ. ಕಲ್ಪಿತಜೀವರು ಅನುಭವಿಸುವ ಸುಖದುಃಖಗಳು ಪರಮಾತ್ಮನಿಗೆ ಸ್ವಲ್ಪವೂ ಅಂಟುವಂತಿಲ್ಲ. ಗೋಂದಾವಳಿಯಲ್ಲಿ ಒಮ್ಮೆ ಶ್ರೀ ಬ್ರಹ್ಮಚೈತನ್ಯ ಮಹಾರಾಜರು ಪಂಡಿತರ ಗೋಷ್ಠಿಯಲ್ಲಿ ವಿಚಾರಕ್ಕೆಂದು ಅನೇಕ ಪ್ರಶ್ನೆಗಳನ್ನು ಹಾಕಿದ್ದರು. ಅವುಗಳಲ್ಲಿ ಒಂದು ಹೀಗಿತ್ತು : `ಜೀವನು ನರಕದಲ್ಲಿರುವಾಗ ಪರಮಾತ್ಮನು ಏನು ಮಾಡುತ್ತಿರುತ್ತಾನೆ?' ಜೀವನಿಗೆ ಆಗುವ ಸ್ವರ್ಗನರಕಗಳು ಪರಮಾತ್ಮನಿಗೆ ಇಲ್ಲವೇ ಇಲ್ಲ ; ಏಕೆಂದರೆ ಪರಮಾತ್ಮನು ಅದ್ವಿತೀಯನಾಗಿರುತ್ತಾನೆ ಎಂಬ ಅಭಿಪ್ರಾಯವು ಈ ಪ್ರಶ್ನೆಯಲ್ಲಿ ಅಡಕವಾಗಿರುತ್ತದೆ.

ಪರಮಾತ್ಮನು ಅಸಕ್ತನು, ಅವನಿಗೆ ಏತರ ಅಂಟೂ ಇರುವದಿಲ್ಲ. ಸಕ್ತಿ ಎಂಬುದು ಮನಸ್ಸಿನ ಸ್ವಭಾವ, ಜೀವನು ಮನಸ್ಸೆಂಬ ಉಪಾಧಿಯ ಮೂಲಕ ಎಲ್ಲಕ್ಕೂ ಸಕ್ತನಾಗಿರುತ್ತಾನೆ. ಆದರೆ ಶುದ್ಧಸ್ವರೂಪದಲ್ಲಿರುವ ಆತ್ಮನು ಎಲ್ಲೇ ಇರಲಿ, ಏತಕ್ಕೂ ಅಂಟಿಕೊಳ್ಳದೆ ಇರುತ್ತಾನೆ. ಅಸತ್ತಾಗಿ ಹುಸಿಯ ತೋರಿಕೆಯಾಗಿರುವ ಇಂದ್ರಿಯಗಳ ಅಂಟು ಪರಮಾರ್ಥವಾಗಿರುವ ಆತ್ಮನಿಗೆ ಹೇಗೆ ಅಂಟಿಕೊಳ್ಳಬೇಕು.

ಈ ಪರಮಾತ್ಮನು **ಸರ್ವಭೃತ್** ಎಂದರೆ ಎಲ್ಲವನ್ನೂ ಧರಿಸಿರುವವನು. ಇಡಿಯ ಜಗತ್ತೇ ಪರಮಾತ್ಮನ ಆಧಾರದಿಂದ ನಿಂತಿರುತ್ತದೆ. ಪರಮಾತ್ಮನು ಅಸಕ್ತನೂ ಆಗಿ ಜಗತ್ತನ್ನು ಹೊತ್ತಿರುವ ಆಧಾರನಾಗಿರುವನೆಂದರೆ ಹೇಗೆ? ಹಗ್ಗವು ಹಾವನ್ನು ಧರಿಸಿರುವಂತೆ. ಹಗ್ಗಕ್ಕೆ ಹಾವಿನ ಭಾರವು

ಯಾವದೂ ಇಲ್ಲ. ಹಾವು ಅಜ್ಞಾನಕಲ್ಪಿತವಾಗಿರುವದರಿಂದ ಅದರ ಸಕ್ತಿಯೂ ಹಗ್ಗಕ್ಕೆ ಇರುವದಿಲ್ಲ. ಇದರಂತೆ ಆತ್ಮವಸ್ತುವಿನಲ್ಲಿ ಸಕಲಬ್ರಹ್ಮಾಂಡವೂ ತೋರುತ್ತಿದ್ದರೂ ಆತ್ಮನಲ್ಲಿ ಕಲ್ಪಿತವಾಗಿರುವದರಿದ ಅದರ ಸಂಬಂಧವು ಆತ್ಮನಿಗೆ ಯಾವದೂ ಇರುವದಿಲ್ಲ. ಇದರಿಂದಲೇ `ನನ್ನಲ್ಲಿ ಭೂತಗಳು ಇಲ್ಲವೂ ಇಲ್ಲ' ಎಂದು ಭಗವಂತನು ಹೇಳಿರುವದು. ಆದ್ದರಿಂದ ಪರಮಾತ್ಮನು ಜಗತ್ತನ್ನೆಲ್ಲ ಧರಿಸಿರುವನು ಎಂದರೆ ಧರಿಸುವದಕ್ಕೆ ಅವನಿಗೆ ಯಾವದಾದರೂ ಯತ್ನವು ಬೇಕೆಂದು ಕಲ್ಪಿಸುವದಕ್ಕೆ ಬರುವದಿಲ್ಲ. ಅಸಕ್ತವಾದರೂ ಸರ್ವಭೃತ್ತಾಗಿರುವಂತೆ **ನಿರ್ಗುಣವಾದರೂ ಗುಣಭೋಕ್ತೃ** ಎಂದು ವಿರುದ್ಧಧರ್ಮಗಳಿಗೂ ಆತ್ಮವಸ್ತುವು ಆಧಾರವಾಗಿರಬಹುದಾಗಿದೆ. ಹೇಗೆಂದರೆ ಪರಮಾರ್ಥವಾಗಿ ಅಸಕ್ತ, ಸರ್ವಭೃತ್ತೆಂಬುದು ಅವಿದ್ಯಾದೃಷ್ಟಿಯಿಂದ. ಭೂಗೋಳವು ಬ್ರಹ್ಮದ ಶಕ್ತಿಯಿಂದ ನಿಂತಿದೆ ಎಂದು ಒಬ್ಬ ಜ್ಯೋತಿಷ್ಕನು ಹೇಳಿರುತ್ತಾನಂತೆ ; ಇಡಿಯ ಬ್ರಹ್ಮಾಂಡವೇ ಹಾಗೆ. ಆ ಶಕ್ತಿಯೆಂಬುದು ಅದರ ಸ್ವಭಾವವೇ ಆದರೂ ಮಾಯಿಕವಾದ ಜಗತ್ತಿನ ಅಪೇಕ್ಷೆಯಿಂದ ಮಾಯೆ ಮುಂತಾದ ಶಬ್ದಗಳಿಗೆ ವಾಚ್ಯವಾಗಿರುತ್ತದೆ. ಇದರಂತೆ ಸ್ವರೂಪದಿಂದ ನಿರ್ಗುಣವಾಗಿರುತ್ತದೆ ; ಅವಿದ್ಯಾ ದೃಷ್ಟಿಯಿಂದ ಗುಣಭೋಕ್ತೃವಾಗಿರುತ್ತದೆ. ಇಂದ್ರಿಯಗಳ ದ್ವಾರದಿಂದ ಪ್ರಿಯವಾದ ವಿಷಯಾನುಭವವು ಬಂದರೆ ಸುಖ, ಅಪ್ರಿಯವಾದದ್ದು ಬಂದರೆ ದುಃಖ. ಈ ಸುಖದುಃಖಗಳನ್ನು ಅನುಭವಿಸುವದೇ ಭೋಕ್ತೃತ್ವವು. ಆದರೆ ಬ್ರಹ್ಮವು ನಿರ್ಗುಣವೂ ಗುಣಭೋಕ್ತೃವೂ ಆಗಿದೆ. ಯಾವದರಲ್ಲಿ ಸತ್ತ್ವರಜಸ್ತಮೋಗುಣಗಳು ಇರುವವೋ ಅದಕ್ಕೆ ಗುಣಗಳ ಕಾರ್ಯವಾದ ವಿಷಯಗಳಿಂದ ವಿರುಪೇರು ಆಗಬಹುದು. ಆದರೆ ಈ ಬ್ರಹ್ಮದಲ್ಲಿ ತ್ರಿಗುಣವಿಲ್ಲ; ಆದ್ದರಿಂದ ಅದಕ್ಕೆ ವಾಸ್ತವಿಕವಾದ ಭೋಕ್ತೃತ್ವವು, ಗುಣಗಳನ್ನು ಅನುಭವಿಸುವದರಿಂದಾಗುವ ವಿರುಪೇರು, ಉಂಟಾಗಲಾರದು. ಆದ್ದರಿಂದ ಗುಣಭೋಕ್ತೃ ಎಂದರೆ ಗುಣಗಳನ್ನು ಭೋಗಿಸುವಂತೆ ಇದೆ ಎಂದೇ ಅರ್ಥ. ಕನಸಿನಲ್ಲಿ ಭೋಜನಮಾಡುವವನು ಹೇಗೆ ನಿಜವಾಗಿ ಭೋಕ್ತೃವಲ್ಲವೋ ಹಾಗೆ ಅವಿದ್ಯೆಯಿಂದ ಭೋಕ್ತೃವಿನಂತೆ ತೋರುವ ಆತ್ಮನು ನಿಜವಾಗಿ ಭೋಕ್ತೃವೇ ಅಲ್ಲ.

ಇಂಥ ಪರಮಾತ್ಮನೇ ನಮ್ಮೆಲ್ಲರ ಆತ್ಮನು. ಈ ಆತ್ಮನನ್ನು ಬಿಟ್ಟು ಮತ್ತೆ ಯಾವದನ್ನು ನಮ್ಮ ಆತ್ಮನೆಂದುಕೊಂಡರೂ ಹಾನಿಯಾಗುತ್ತದೆ. ಅದು ತತ್ಕಾಲಕ್ಕೆ ಪ್ರಿಯವಾಗಿ ಕಾಣಬಹುದು; ಆದರೆ ವಿವೇಕಿಯಾದವನು ನಚಿಕೇತನಂತೆ ಎಂದೆಂದಿಗೂ ಹಿತವಾಗಿರುವ, ಸರ್ವಪ್ರಿಯತಮನಾದ ಆತ್ಮನ ಜ್ಞಾನವನ್ನೇ ಆರಿಸಿಕೊಳ್ಳುತ್ತಾನೆ. ಯಾವನು ನಿಷ್ಪಕ್ಷಪಾತವಾದ ಬುದ್ಧಿಯಿಂದ ತತ್ತ್ವವನ್ನು ವಿವೇಚಿಸಿ ಅರಿತುಕೊಳ್ಳುವ ಸಾಮರ್ಥ್ಯವುಳ್ಳವನೋ ಅವನೇ ತತ್ತ್ವಜ್ಞಾನಕ್ಕೆ ಅಧಿಕಾರಿಯು. ಪ್ರಿಯವೆಂದು ತೋರುವ ವಸ್ತುಗಳ ಕಡೆಗೆಲ್ಲ ಬಾಗುವ ತೂಗುಮನಸ್ಸಿನವನಿಗೆ ಜ್ಞಾನದಲ್ಲಿ ಅಧಿಕಾರವಿಲ್ಲ, ಅವನಿಗೆ ಅಮೃತತತ್ತ್ವವೂ ದೊರೆಯದು.

ಈ ಹದಿಮೂರನೆಯ ಅಧ್ಯಾಯದಲ್ಲಿ ಹಿಂದೆ ಹೇಳಿರುವ `ನ ಜಾಯತೇ ಮ್ರಿಯತೇ ವಾ' ಎಂಬ ಮೂಲ ಉಪದೇಶವನ್ನೇ ವಿವರಿಸಿರುತ್ತದೆ. ಕೆಲವರು ಗೀತೆಯ ಹದಿನೆಂಟು ಅಧ್ಯಾಯಗಳನ್ನೂ ವಿಂಗಡಿಸಿ ಮೊದಲನೆಯ ಆರು ಅಧ್ಯಾಯಗಳಲ್ಲಿ ತತ್ಪದಾರ್ಥ, ಮುಂದಿನ ಆರು ಅಧ್ಯಾಯಗಳಲ್ಲಿ ತ್ವಂಪದಾರ್ಥ, ಕೊನೆಯ ಆರು ಅಧ್ಯಾಯಗಳಲ್ಲಿ ಅಸಿಪದಾರ್ಥ - ಹೀಗೆ ಅರ್ಥವಿಭಾಗವನ್ನು ತಿಳಿಸಿದೆ ಎನ್ನುವರು. ಮತ್ತೆ ಕೆಲವರು ಕರ್ಮ, ಉಪಾಸನೆ, ಜ್ಞಾನ - ಎಂದು ವಿಷಯಭೇದದಿಂದ ಅಧ್ಯಾಯಷಟ್ಕತ್ರಯವನ್ನು ವಿಂಗಡಿಸುವದುಂಟು. ಇದಕ್ಕೆ ಯಾವ ಆಧಾರವೂ ಇಲ್ಲ. ಗೀತೆಯಲ್ಲಿ ಮೊಟ್ಟಮೊದಲೇ ತತ್ತ್ವಜ್ಞಾನವನ್ನು ಹೇಳಿದೆ; ಆಮೇಲೆ ಅದಕ್ಕೆ ಯೋಗ್ಯತೆಯನ್ನು ಕೊಡುವ ಕರ್ಮಯೋಗವನ್ನು ವಿವರಿಸಿದೆ. ಕರ್ಮಯೋಗದಲ್ಲಿ ಧ್ಯಾನಯೋಗವೂ ಭಕ್ತಿಯೋಗವೂ ಅಡಗಿವೆ. ಗುರಿಯಂತೂ ತತ್ತ್ವಜ್ಞಾನದಲ್ಲಿಯೇ ಇದೆ. ಈ ಅಧ್ಯಾಯದಲ್ಲಿ ತತ್ತ್ವಜ್ಞಾನವನ್ನೇ ಸ್ಪಷ್ಟವಾಗಿ ವಿವರಿಸಿ ಜ್ಞಾನದಿಂದ ಅರಿತುಕೊಳ್ಳಬೇಕಾದ ಆತ್ಮಸ್ವರೂಪವನ್ನೇ ಇಲ್ಲಿ ಜ್ಞೇಯವೆಂಬ ಹೆಸರಿನಿಂದ ತಿಳಿಸಿದೆ. ಅಷ್ಟೆ.

ಯಾರು ಇಂದ್ರಿಯಗಳ ದಾಸರೋ ಅವರು ಅನಾತ್ಮವೇ ತಮಗೆ ಬೇಕಾದದ್ದೆಂದು ತಿಳಿದಿರುವರು ; ಅವರಿಗೆ ತತ್ತ್ವಪ್ರತಿಪಾದನೆಯೆಂಬುದು ವಿಷವಾಗಿರುತ್ತದೆ. ಜನ್ಮಮೃತ್ಯುಜರಾತಪ್ತನಾಗಿ ವೈರಾಗ್ಯದಿಂದ ಯಾವನು ತತ್ತ್ವನವನ್ನು ಹುಡುಕುವನೋ ಅವನಿಗೆ ಮಾತ್ರ ತತ್ತ್ವವು ತಿಳಿಯುವದು. ದೋಷಗಳನ್ನೇ ಗುಣವೆಂದು ಭಾವಿಸುತ್ತಾ ``ವೇದಾಂತ" ಎಂಬ ಮಾತಿಗೇ ಅಂಜುವ ಮೂಢರೂ ಉಂಟು. ಒಬ್ಬರು ತಮ್ಮ ಮನೆಯಲ್ಲಿ ``ತಂ ಸಂಸಾರಧ್ವಾಂತವಿನಾಶಂ ಹರಿಮೀಡೇ" ಎಂಬ ಧ್ರುವಪದವು ಬರುವ ಸ್ತೋತ್ರವನ್ನು ದಿನವೂ ಪಠಿಸುತ್ತಿದ್ದರು. ಆ ಮಗನನ್ನು ಕುರಿತು ಮುದುಕಿತಾಯಿಯು ``ಅಪ್ಪ, ಸಂಸಾರಿಗಳ ಮನೆಗಳಲ್ಲಿ ಇಂಥ ಸ್ತೋತ್ರವನ್ನು ಹೇಳಬಾರದು ; ಇದರಿಂದ ಕೇಡಾಗುತ್ತದೆ" ಎಂದು ಬುದ್ಧಿಹೇಳಿದಳಂತೆ ! ಆಕೆಯೇನೋ ವಿಷಯವು ತಿಳಿಯದೆ ಆಡಿದ ಮಾತದು. ಆದರೆ ವಿವೇಕಿಗಳು, ವಿಚಾರಿಗಳು - ಎನ್ನಿಸಿಕೊಳ್ಳಬೇಕೆಂದು ಹವಣಿಸುವವರಲ್ಲಿಯೂ ಕೆಲವರು ಇಂಥ ಅಭಿಪ್ರಾಯದವರು ಇರುತ್ತಾರೆ. ಇಂಥವರಿಗೆ ಜ್ಞಾನವು ಹೇಗೆ ಆಗಬೇಕು ? ಆದರೆ ಯಾರು `ತತ್ತ್ವವು ಹೇಗೆ ಇದೆಯೋ ಹಾಗೆ ಅದನ್ನು ತಿಳಿದುಕೊಂಡುಬಿಡುತ್ತೇನೆ. ನಿಜವು ಏನಿದ್ದರೂ ಅದೇ ತಾನೆ ಪರಮಾರ್ಥ ? ಆ ಪರಮಾರ್ಥವನ್ನು ಪರಮಾರ್ಥವೆಂದೇ ನಂಬಿದ್ದರಿಂದ ಆಗುವ ಅನರ್ಥವು ಯಾವದೂ ಇರಲಾರದು; ಪರಮಾರ್ಥವನ್ನು ತಿಳಿಯದೆ ಇದ್ದದ್ದರಿಂದ ಆಗುವ ಅನರ್ಥಗಳು ಅವಶ್ಯವಾಗಿ ಅದರಿಂದ ತೊಲಗುವವು';- ಎಂದು ನಿಶ್ಚಯಿಸುವರೋ ಅವರಿಗೇ ಈ ಜ್ಞೇಯದ ನಿಜವು ತನ್ನ ಸ್ವರೂಪವನ್ನು ತೋರಿಸಿಕೊಡುವದು. ಅಂಥವರಿಗೆ ಮಾತ್ರ ನಿತ್ಯಶುದ್ಧಬುದ್ಧಮುಕ್ತ ಸ್ವಭಾವವಾದ ಬ್ರಹ್ಮವೇ ನಮ್ಮೆಲ್ಲರ ಆತ್ಮನೆಂಬ ನಿಜವು ತಿಳಿದುಬರುವದು.



# ೧೧೯. ಜ್ಞೇಯದ ಪರಮಾರ್ಥರೂಪ 13 - (14)

(6-3-49)

**ಪರಮಾರ್ಥತತ್ತ್ವವು** ಇಂಥದ್ದು ಎಂದು ನಿರ್ಣಯಿಸುವದು ಕಷ್ಟ. ಇದನ್ನು ಹೇಗೆ ಹೇಗೆ ನಿರ್ಣಯಿಸಿ ಹೇಳಿದರೂ ಇದರ ನಿಜವು ನಿರ್ಣಯಕ್ಕೆ ಸಿಕ್ಕದೆ ನುಣುಚಿಕೊಳ್ಳುತ್ತಿರುತ್ತದೆ. ಸರ್ವಪ್ರತ್ಯಕ್ಷವಾಗಿರುವ ಮನುಷ್ಯಶರೀರಕ್ಕೆ ಬರುವ ರೋಗಗಳ ನಿಧಾನ, ಚಿಕಿತ್ಸೆ - ಮುಂತಾದವುಗಳನ್ನು ನಿರ್ಧರಿಸುವ ಕ್ರಮಗಳೇ ಹಲವು ಏರ್ಪಟ್ಟಿರುತ್ತವೆ. ಉಷ್ಣವಾದರೆ ಶೀತವನ್ನು ಮಾಡಬೇಕೆನ್ನುವವರು ಕೆಲವರು; ಉಷ್ಣವನ್ನು ಉಷ್ಣದಿಂದಲೇ ನಿವಾರಿಸಬೇಕೆನ್ನುವವರು ಕೆಲವರು; ಔಷಧಗಳಿಂದ, ಅಥವಾ ಉಪ್ಪು ಮುಂತಾದವುಗಳಿಂದ, ವಾಸಿಮಾಡುವುದಕ್ಕೆ ಪ್ರಯತ್ನಿಸುವವರು ಕೆಲವರು ; ಕೇವಲ ಪ್ರಾಕೃತಿಕಕ್ರಮದಿಂದ ಜಲಚಿಕಿತ್ಸೆಯೇ ಮುಂತಾದವುಗಳನ್ನು ಮಾಡಿ ಗುಣಪಡಿಸುವದಕ್ಕೆ ಪ್ರಯತ್ನಿಸುವವರು ಕೆಲವರು; ಶ್ರದ್ಧಾವೈದ್ಯರು ಮತ್ತೆ ಕೆಲವರು - ಹೀಗೆಲ್ಲ ವಿವಿಧಕ್ರಮಗಳನ್ನು ಅನುಸರಿಸುವ ಚಿಕಿತ್ಸಕರು ಇರುತ್ತಾರೆ. ಇವರಲ್ಲಿ ಒಬ್ಬರ ಕ್ರಮವನ್ನು ಒಬ್ಬರು ಜರಿಯುವದೂ ಉಂಟು. ಅತ್ಯಂತಪ್ರತ್ಯಕ್ಷವಾದ ಶರೀರತತ್ತ್ವವೇ ಇಷ್ಟು ವಾದಗ್ರಸ್ತವಾಗಿರುವಲ್ಲಿ ಇನ್ನು ಅತೀಂದ್ರಿಯವಿಚಾರಗಳಲ್ಲಿ ಹೇಳತಕ್ಕದ್ದೇನಿದೆ ? ಮನಸ್ಸು ಎಂದರೇನು ? - ಎಂಬ ವಿಷಯದಲ್ಲಿ ಮನಃಶ್ಶಾಸ್ತ್ರಜ್ಞರು ನಿರ್ದಿಷ್ಟವಾದ ಉತ್ತರವನ್ನೇ ಕೊಟ್ಟಿರುವದಿಲ್ಲ. ಮನಃಶ್ಶಾಸ್ತ್ರದ ವಿಚಾರಕ್ರಮಗಳೂ ಒಂದೇ ಆಗಿಲ್ಲ ; ಅದರಲ್ಲಿಯೂ ಹಲವು ಕ್ರಮಗಳು ಏರ್ಪಟ್ಟಿರುತ್ತವೆ. ಮನಸ್ಸು ಎಂಬ ಒಂದು ತತ್ತ್ವವೇ ಇಲ್ಲ ಎಂಬ ಅಭಿಪ್ರಾಯವೂ ಈಗಿನ ಮನಃಶ್ಶಾಸ್ತ್ರಜ್ಞರಲ್ಲಿದೆ. ಇನ್ನು ಇಡಿಯ ಜಗತ್ತಿನ ಮತ್ತು ನಮ್ಮ ಆತ್ಮನಾದ ಪರಮಾರ್ಥದ ವಿಷಯದಲ್ಲಿ ನಿಜವನ್ನು ನಿರ್ಣಯಿಸುವದು ಕಷ್ಟವಾಗಿದ್ದರೆ ಆಶ್ಚರ್ಯವೇನು?

ಪರಮಾರ್ಥವು ತಿಳಿಯುವದಕ್ಕೆ ಕಷ್ಟವಾಗಿದೆ ಎಂಬುದು ಮಾತ್ರವೇ ಅಲ್ಲ. ಮನುಷ್ಯನು ಅದನ್ನು ಕಂಡುಹಿಡಿಯುವ ಅಧಿಕಾರಸಂಪತ್ತನ್ನೂ ಪಡೆದುಕೊಂಡಿಲ್ಲ ; ಪಡೆದುಕೊಳ್ಳುವದಕ್ಕೆ ಪ್ರಯತ್ನಿಸುವದೂ ಇಲ್ಲ. ಪರಮಾರ್ಥವೆಂಬುದು ಅತ್ಯಂತಸೂಕ್ಷ್ಮವಾಗಿರುವದಲ್ಲದೆ, ವಿಚಾರಕ್ಕೂ ಮನಸ್ಸಿಗೂ ಅವಿಷಯವೂ ಆಗಿದೆ. ವಿಷಯವನ್ನೇ ಪರಿಶೀಲಿಸುವದರಲ್ಲಿ ನಿರತವಾಗಿರುವ ಮಾನವನ ಮನಸ್ಸು ತನ್ನ ಆತ್ಮನೇ ಆಗಿರುವ ತತ್ತ್ವದ ಕಡೆಗೆ ಮನಸ್ಸನ್ನು ತಿರುಗಿಸುವದು ಅಸಂಭಾವಿತವಾಗಿರುತ್ತದೆ. ಕಠೋಪನಿಷತ್ತಿನಲ್ಲಿ ಹೇಳಿರುವಂತೆ ಎಲ್ಲಿಯೋ ಒಬ್ಬೊಬ್ಬ ವಿವೇಕಿಯು ಮಾತ್ರ ಇಂದ್ರಿಯಗಳನ್ನೆಲ್ಲ ಉಪಸಂಹಾರಮಾಡಿಕೊಂಡು ಅಮೃತತ್ವವನ್ನು ಪಡೆಯುವ ಆಶೆಯಿಂದ ಈ ಪ್ರತ್ಯಗಾತ್ಮತತ್ತ್ವವನ್ನು ತಿಳಿಯುವದಕ್ಕೆ ಪ್ರಯತ್ನಿಸುತ್ತಾನೆ.

ಈ ತತ್ತ್ವವನ್ನು ತಿಳಿಯಪಡಿಸುವದಕ್ಕೆ ಶಾಸ್ತ್ರದಲ್ಲಿ ಉಪಯೋಗಿಸಿರುವ ಕ್ರಮವನ್ನು ಗ್ರಹಿಸುವದೂ ಸಾಮಾನ್ಯಜನರಿಗೆ ಬಹಳ ಕಷ್ಟವಾಗಿ ತೋರುತ್ತದೆ. `ಸರ್ವೇಂದ್ರಿಯಗುಣಾಭಾಸಂ ಸರ್ವೇನ್ದ್ರಿಯವಿವರ್ಜಿತಮ್ । ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ॥ 'ಎಂಬ

ಶ್ಲೋಕವನ್ನೂ ಅದರಲ್ಲಿ ತೋರುವ ವಿರೋಧಾಭಾಸಗಳನ್ನೂ ಆಗಲೆ ಒಂದು ಸಲ ವಿವರಿಸಿರುತ್ತೇನೆ. ಇದನ್ನು ತಿಳಿಯುವದು ಕಷ್ಟವಾಗಿರುವದರಿಂದ ಮತ್ತೊಂದು ಸಲ ವಿವರಿಸುವದು ಪುನರುಕ್ತಿಯಾಗಲಾರದು.

ಈ ಪರಮಾರ್ಥವು ಇಂಥದ್ದೇ ಎಂದು ವರ್ಣಿಸುವದಕ್ಕೆ ಬರುವದಿಲ್ಲವೆಂಬುದು ನಿಜ. ಆದರೆ ಇದು ನಮ್ಮ ಆತ್ಮನೇ ಆಗಿರುವದರಿಂದ ಅತ್ಯಂತ ಪ್ರಸಿದ್ಧವಾಗಿರುತ್ತದೆ. ಅದನ್ನು ಹೇಗೆ ಹೇಳಿ ತಿಳಿಸಬೇಕು ಎಂಬ ವಿಷಯದಲ್ಲಿ ಚರ್ಚೆಯಾಗಬಹುದು. ಆದರೆ ಅದು ಇದೆ ಎಂಬ ವಿಷಯವು ನಿಸ್ಸಂದಿಗ್ಧವಾಗಿರುತ್ತದೆ. ಏಕೆಂದರೆ ಅದು ಗುಣಭೋಕ್ತೃವಾಗಿರುತ್ತದೆ. ಸಾಂಖ್ಯಶಾಸ್ತ್ರಜ್ಞರು ಹೇಳಿರುವಂತೆ ಗುಣಗಳು ಯಾವಾಗಲೂ ಮಾರ್ಪಡುತ್ತಲೇ ಇರುತ್ತವೆ ; ಅವುಗಳ ಪರಮಾರ್ಥರೂಪವು ಇಂಥದ್ದೆಂದು ಗೊತ್ತುಪಡಿಸುವದಕ್ಕೆ ಆಗುವದೇ ಇಲ್ಲ. "ಗುಣಾನಾಂ ಪರಮಂ ರೂಪಂ ನ ದೃಷ್ಟಿಪಥಮೃಚ್ಛತಿ। ಯತ್ತು ದೃಷ್ಟಿಪಥಪ್ರಾಪ್ತಂ ತನ್ಮಾಯೈವ ಸುತುಚ್ಛಕಮ್"॥ ಸತ್ತ್ವ, ರಜಸ್ಸು, ತಮಸ್ಸು - ಇವುಗಳ ರೂಪವು ಇಂಥದ್ದೆಂದು ಹೇಳುವದಕ್ಕೆ ಬರುವದೇ ಇಲ್ಲ ; ಯಾವದು ದೃಷ್ಟಿಗೆ ಗೋಚರವಾಗುತ್ತದೆಯೋ ಅದು ಬರಿಯ ಮಾಯೆ, ಹುಸಿ - ಎಂದು ಸಾಂಖ್ಯಾಚಾರ್ಯರೇ ಹೇಳಿರುತ್ತಾರೆ. ಈ ಗುಣಗಳ ಕಾರ್ಯವಾದ ಪ್ರಪಂಚವೆಲ್ಲವೂ ಗೌಣವೇ ಆಗಿರುತ್ತದೆ. ಈ ಪ್ರಪಂಚವನ್ನು ಭೋಗಿಸತಕ್ಕದ್ದೇ ಗುಣಭೋಕ್ತೃ.

ಮನಸ್ಸು ಎಲ್ಲವನ್ನೂ ಭೋಗಿಸುತ್ತದೆ. ಆದರೆ ಅದು ಆಯಾ ವಿಷಯದ ಆಕಾರವಾಗಿ ಪರಿಣಮಿಸಿ ಅದನ್ನು ಭೋಗಿಸಬೇಕಾಗಿದೆ. ಏಕೆಂದರೆ ಅದು ಗುಣಮಯವಾಗಿರುವದರಿಂದ ತಾನೂ ಚಂಚಲವಾಗಿಯೇ ಇರುತ್ತದೆ. ಆತ್ಮನು ಮನಸ್ಸನ್ನೂ ಭೋಗಿಸುತ್ತಾನೆ ; ಆದರೆ ಮನಸ್ಸಿನಂತೆ ವಿಕಾರವನ್ನು ಹೊಂದುವದಿಲ್ಲ. ಆತ್ಮನು ಗುಣಗಳನ್ನು ಭೋಗಿಸುವನು ಎಂದರೆ ಅವನ ಅರಿವಿಗೆ ಅವು ವಿಷಯವಾಗಿರುತ್ತವೆ ಎಂದರ್ಥ. ಜಗತ್ತೆಲ್ಲವೂ ಭೋಗ್ಯವು, ಆತ್ಮನೇ ಭೋಕ್ತೃ. ಆತ್ಮನು ಗುಣಭೋಕ್ತೃ ಎಂದದ್ದರಿಂದ ಆತ್ಮನಂತೆ ಗುಣಗಳೂ ಪರಮಾರ್ಥವಾಗಿವೆ ಎಂದು ತಿಳಿಯಬಾರದು. ಗುಣಗಳು ತಮ್ಮ ಭೋಕ್ತೃವಾದ ಆತ್ಮನಿಗಿಂತ ಬೇರೆಯಾಗಿಲ್ಲ ಎಂಬುದೇ ಇಲ್ಲಿ ತಿಳಿಯತಕ್ಕದ್ದು. ಯಾವದಾದರೊಂದು ಪದಾರ್ಥವಿದೆಯೆಂದರೆ ಆತ್ಮನಿಗೆ ಸಂಬಂಧಪಟ್ಟು ಇದೆ; ಹಾಗಿಲ್ಲದಿದ್ದರೆ ಅದು ಇಲ್ಲವೇ ಇಲ್ಲ. ಕಣ್ಣಿಗೆ ಗೋಚರವಾಗದೆ ಇರುವ ಬಣ್ಣವಿದೆ ಎಂಬ ಮಾತಿಗಾಗಲಿ, ಕಿವಿಗೆ ಕೇಳಿಸದೆ ಇರುವ ಶಬ್ದವಿದೆ ಎಂದರಾಗಲಿ ನಮಗೆ ಯಾರಿಗೂ ಅರ್ಥವಾಗುವದಿಲ್ಲ. ಏಕೆಂದರೆ ಬಣ್ಣವೆಂದರೇ ಕಣ್ಣಿಗೆ ಕಾಣಿಸತಕ್ಕದ್ದು, ಶಬ್ದವೆಂದರೇ ಕಿವಿಗೆ ಕೇಳಿಸತಕ್ಕದ್ದು. ಇಂದ್ರಿಯಗಳಿಗೆ ಗೋಚರವಾಗದೆ ಇರುವ ವಿಷಯವಿದೆ ಎಂಬ ಮಾತಿಗೆ ಅರ್ಥವು ಇಲ್ಲ. ಅಲ್ಲವೆ? ಆದರೆ ಇಂದ್ರಿಯಗಳಿವೆ ಎಂಬುದು ಹೇಗೆ ಗೊತ್ತು? ಮನಸ್ಸಿನ ಪ್ರಮಾಣದಿಂದ. ಮನಸ್ಸಿಗೇ ಇದು ಶಬ್ದವು, ಶ್ರೋತ್ರವೆಂಬ ಇಂದ್ರಿಯಕ್ಕೆ ಗೋಚರವಾಗತಕ್ಕದ್ದು ಎಂದು ಗೊತ್ತಾಗುತ್ತದೆ; ಆದ್ದರಿಂದ ಮನಸ್ಸೇ ಇಂದ್ರಿಯಗಳ ಇರವಿಗೆ ಸಾಕ್ಷಿಯು. ಇಷ್ಟೇ ಅಲ್ಲ. ಒಂದು ದೃಷ್ಟಿಯಿಂದ ಮನಸ್ಸೇ ಬಗೆಬಗೆಯ ವೃತ್ತಿಗಳಿಂದ ಆಯಾ ಇಂದ್ರಿಯಗಳೆಂಬ ಹೆಸರನ್ನು ಪಡೆಯುತ್ತದೆ ಎಂದೂ

ಹೇಳಬಹುದು. ಆದ್ದರಿಂದಲೇ `ಶೃಣ್ವತೀ ಭವತಿ ಶ್ರೋತ್ರಮ್' ಎಂದು ಮುಂತಾಗಿ ಮನಸ್ಸೇ ಆಯಾ ಇಂದ್ರಿಯಗಳೆಂದೂ ಆಯಾ ಕರ್ಮವಿಶೇಷದಿಂದ ವ್ಯವಹೃತವಾಗುತ್ತದೆ ಎಂದೂ ಭಾರತದಲ್ಲಿ ಹೇಳಿರುತ್ತದೆ. ಒಂದೇ ಮನಸ್ಸು ಸ್ವಪ್ನದಲ್ಲಿ ವಿಷಯಗಳಾಗಿಯೂ ಇಂದ್ರಿಯಗಳಾಗಿಯೂ ಮಾರ್ಪಟ್ಟು ನಮಗೆ ವಿಚಿತ್ರದರ್ಶನಗಳನ್ನು ತೋರಿಸುವದು ನಮ್ಮೆಲ್ಲರ ಅನುಭವದಲ್ಲಿರುತ್ತದೆ.

ಈಗ ಈ ಮನಸ್ಸಿನ ಇರವಿಗೆ ಸಾಕ್ಷಿ ಯಾವದು ? ಎಂದು ಕೇಳಿದರೆ ಅದಕ್ಕೆ ಉತ್ತರವನ್ನು ಹೇಳುವದು ಸ್ವಲ್ಪ ಕಷ್ಟ. ಈ ಪ್ರಶ್ನೆಯನ್ನು ಕೇಳಬಾರದು - ಎಂಬುದು ಸರಿಯಾದ ಉತ್ತರವಲ್ಲ. ಸಾಮಾನ್ಯಶಾಸ್ತ್ರಗಳಲ್ಲಿ ಮನಸ್ಸಿನಿಂದ ಆಚೆಗೆ ಹೋಗಿರುವದಿಲ್ಲ. ಅಧ್ಯಾತ್ಮಶಾಸ್ತ್ರದಲ್ಲಿ ಅದನ್ನೂ ದಾಟಿರುವ ಆತ್ಮತತ್ತ್ವವನ್ನು ಲೆಕ್ಕಕ್ಕೆ ತೆಗೆದುಕೊಂಡಿರುತ್ತದೆ. ಮನಸ್ಸು ಹೊಯ್ದಾಡುತ್ತಿರುವದನ್ನು ನೋಡುವವರು ಯಾರು? ಮನಸ್ಸು ಜಾಗ್ರತ್ಸ್ವಪ್ನಗಳಲ್ಲಿ ಕೆಲಸಮಾಡುತ್ತಿರುವದನ್ನೂ ಸುಷುಪ್ತಿಯಲ್ಲಿ ಅದರ ಸ್ವರೂಪವೇ ಇಲ್ಲದಂತಾಗುವದನ್ನೂ ನೋಡುವವರು ಯಾರು? ಇದೇ ಆತ್ಮನು. `ಆತ್ಮನ ಸ್ವರೂಪವು ಹೇಗಿರುವದು? ಆತ್ಮನಿಗಿಂತ ಮಿಕ್ಕದ್ದನ್ನೆಲ್ಲ ಅಂಥದ್ದು, ಇಂಥದ್ದು ಎಂದು ವರ್ಣಿಸಿ ಹೇಳುವದಕ್ಕೆ ಬರುತ್ತದೆ. ಆದರೆ ಆತ್ಮತತ್ತ್ವವು ಇಂಥದ್ದು ಎಂದು ವರ್ಣಿಸುವದಕ್ಕೆ ಬರುವದಿಲ್ಲ. ಅದು ಅಂಥದ್ದು, ಇಂಥದ್ದು - ಎಂದು ವರ್ಣಿಸಿ ಹೇಳುವದಕ್ಕೆ ಬರದಂಥದ್ದು ಎಂದು ಬೇಕಾದರೆ ಹೇಳಬಹುದು. ವಿಚಾರವೆಂದರೆ ನಮ್ಮ ಅನುಭವವನ್ನು ಪ್ರಶ್ನೆಮಾಡುವದು, `ಅದು ಏನು?' ಎಂದು ಕೇಳುವದು - ಎಂದು ಒಬ್ಬ ಪಾಶ್ಚಾತ್ಯ ವಿದ್ವಾಂಸನು ಬರೆದಿರುತ್ತಾನೆ. ಅಜ್ಞಾನಾವಸ್ಥೆಯಲ್ಲಿ ನಾವು ಕಂಡದ್ದನ್ನೆಲ್ಲ ``ಇದು ಏನು?" ಎಂದು ತತ್ತ್ವನಿರ್ಧಾರಣಕ್ಕಾಗಿ ಕೇಳುವದು ಯುಕ್ತವಾಗಿರುತ್ತದೆ. ಆದರೆ `ಇದು ಏನು?' ಎಂಬುದಕ್ಕೆ ವಿಷಯವಾದದ್ದು ಪರಮಜ್ಞೇಯವಲ್ಲ. ಹೊರಗಿನ ವಿಷಯಗಳನ್ನೂ ಇಂದ್ರಿಯಗಳನ್ನೂ ಮನಸ್ಸನ್ನೂ ನೇರಾಗಿ ನೋಡುತ್ತಿರುವ ಸಾಕ್ಷಿಯಾಗಿರುವ ಆತ್ಮನೇ ನಿಜವಾದ ಜ್ಞೇಯವು. ಈ ಆತ್ಮನನ್ನು `ಇದು ಏನು?' ಎಂದು ಕೇಳುವದಕ್ಕೆ ಆಗುವಂತಿಲ್ಲ. ಏಕೆಂದರೆ ಆತ್ಮನು``ಇದು" ಎನ್ನುವದಕ್ಕೆ ಬರುವ ಸ್ವಭಾವದವನಲ್ಲ ; ಅವನು `ಏನು?' ಎಂದು ಕೇಳುವದಕ್ಕೂ ಬರುವಂಥವನಲ್ಲ. ಏಕೆಂದರೆ ಅವನಲ್ಲಿ ಯಾವದೊಂದು ಧರ್ಮವೂ ಇರುವದೇ ಇಲ್ಲ. ಆತ್ಮನ ಸ್ವರೂಪವನ್ನು ಯಾವದೊಂದು ಮಾತಿನಿಂದಲೂ ವರ್ಣಿಸುವದಕ್ಕೆ ಬರುವಂತಿಲ್ಲ. ಆದ್ದರಿಂದಲೇ ಶ್ರುತಿಯು ``ನೇತಿ ನೇತಿ" ಇಂಥದ್ದಲ್ಲ, ಇಂಥದ್ದಲ್ಲ - ಎಂದು ನಮ್ಮ ಮನಸ್ಸಿನಲ್ಲಿ ಕಲ್ಪಿಸಿಕೊಂಡದ್ದನ್ನೆಲ್ಲ ಅಲ್ಲವೆಂದಿದೆ. `ಆತ್ಮ' ಎಂಬ ಮಾತು ಕೂಡ ಈ ತತ್ತ್ವವನ್ನು ಹೇಳುವ ಹೆಸರೆಂದು ಭಾವಿಸುವಹಾಗಿಲ್ಲ ; ಏಕೆಂದರೆ ಇದು ಅನಾತ್ಮವಲ್ಲವೆಂಬುದಿಷ್ಟನ್ನೇ ಆ ಮಾತು ತಿಳಿಸುತ್ತದೆ. ಆದ್ದರಿಂದಲೇ ಹಿಂದೆ ಜ್ಞೇಯವನ್ನು ಹೇಳುತ್ತೇನೆ - ಎಂದು ಪ್ರಾರಂಭಿಸಿದ ಭಗವಂತನು `ಅದು ಸತ್ತಲ್ಲ, ಅಸತ್ತೂ ಅಲ್ಲ' ಎಂದು ಹೇಳಿರುತ್ತಾನೆ. ಆದ್ದರಿಂದಲೇ ಆತ್ಮತತ್ತ್ವವನ್ನು ಇಲ್ಲಿ ``ನಿರ್ಗುಣ " ವೆಂದು ಕರೆದಿರುವದು.

ಈ ಆತ್ಮವಸ್ತುವನ್ನು ಯಾವದೊಂದು ಶಬ್ದದಿಂದಲೂ ತಿಳಿಸುವದಕ್ಕೆ ಬರುವದಿಲ್ಲ; ಏಕೆಂದರೆ ಶಬ್ದಪ್ರವೃತ್ತಿನಿಮಿತ್ತವಾದ ದ್ರವ್ಯ, ಜಾತಿ, ಗುಣ - ಮುಂತಾದವುಗಳಲ್ಲಿ ಯಾವದೊಂದೂ ಆತ್ಮನಲ್ಲಿಲ್ಲ. ಆತ್ಮನು ಮನಸ್ಸನ್ನು ತಾನೇ ನೋಡುತ್ತಾನೆಂದು ಈ ಮೊದಲೇ ಹೇಳಿರುತ್ತೇನೆ. ಆದ್ದರಿಂದ ಆತ್ಮವಸ್ತುವನ್ನು ಮನಸ್ಸಿನಿಂದಲೂ ಹಿಡಿಯುವದಕ್ಕೆ ಆಗುವದಿಲ್ಲ. ಆದ್ದರಿಂದಲೇ ಆತ್ಮವಿಚಾರಕ್ಕೆ ಹೊರಟರೆ ಅನೇಕರಿಗೆ ನಿದ್ರೆ ಬರುತ್ತದೆ. ಆದರೆ ಚೆನ್ನಾಗಿ ಸಂಸ್ಕಾರವನ್ನು ಹೊಂದಿರುವ ಮನಸ್ಸಿಗೆ ಆತ್ಮತತ್ತ್ವದ ಅರಿವು ಆಗುತ್ತದೆ, ಅದರ ಆನಂದವೂ ಸಿಕ್ಕುತ್ತದೆ. ಸಾಮಾನ್ಯಜನರಿಗೆ ಪರಮಾರ್ಥವಿಚಾರಕ್ಕೆ ತಕ್ಕ ಯೋಗ್ಯತೆಯಿಲ್ಲದ್ದರಿಂದ ಇದು ರುಚಿಸುವದಿಲ್ಲ. ಆದ್ದರಿಂದ ಮನಸ್ಸಿಗೆ ತಕ್ಕ ಸಂಸ್ಕಾರವನ್ನು ಮಾಡಿಕೊಳ್ಳಬೇಕು. ಹಾಗಾದರೆ ವಿಷಯವು ತಿಳಿಯುತ್ತದೆ. ವಿಷಯಕ್ಕೂ ತನಗೂ ತಾದಾತ್ಮ್ಯವಾದರೆ ಅದು ಚೆನ್ನಾಗಿ ತಿಳಿಯುತ್ತದೆ. ಮನಸ್ಸಿನ ಆಗುಹೋಗುಗಳನ್ನು ಯಾವದು ನೇರಾಗಿ ತಿಳಿಯುವದೋ ಅದೇ ಆತ್ಮನು ; ಮನಸ್ಸಿನಲ್ಲಿ ಯಾವ ಹೆಚ್ಚುಕಡಿಮೆಯಾದರೂ ಅದನ್ನೆಲ್ಲ ನೋಡುತ್ತಾ ತನ್ನಲ್ಲಿ ಯಾವ ಹೆಚ್ಚುಕಡಿಮೆಯಿಲ್ಲದಿರುವದೇ ಆತ್ಮನು. ಅದೇ ನಮ್ಮ ಸ್ವರೂಪವು. ಹೊರಗೆ ಏನಾದರೊಂದು ವಿಷಯವು ಅನುಭವವಾದರೆ, ಯಾವದಾದರೊಂದು ಘಟನೆಯನ್ನು ಕಂಡರೆ ಅದರಿಂದ ಮನಸ್ಸು ವಿಕಾರವನ್ನು ಹೊಂದುತ್ತದೆ. ಇದೇ ಮನಸ್ಸಿನ ವೃತ್ತಿಯು. ಮನಸ್ಸಿನಲ್ಲಿ ಯಾವದಾದರೊಂದು ವೃತ್ತಿಯು ಆಗುತ್ತಲೇ ಇರುತ್ತದೆ ; ಆದರೆ ಕೊನೆಗೆ ಅದು ಸೋತು ವೃತ್ತಿಗಳಿಲ್ಲದೆ ಸುಮ್ಮನಾಗುವದೂ ಉಂಟು. ಆ ಅವಸ್ಥೆಯೇ ಸುಷುಪ್ತಿಯು. ಈ ಎರಡನ್ನೂ ತನ್ನಲ್ಲಿ ವಿಕಾರವಿಲ್ಲದೆ ನೋಡುತ್ತಿರುವದೇ ಆತ್ಮನು. ಮನಸ್ಸು ಹೊಯ್ದಾಡಿದಂತೆಲ್ಲ ತಾನೂ ಅಲುಗಾಡುತ್ತಿದ್ದರೆ ಆತ್ಮನಿಗೆ ಆ ಮನಸ್ಸಿನ ಅಲುಗಾಟವು ಗೊತ್ತಾಗುತ್ತಿರಲಿಲ್ಲ. ಆದ್ದರಿಂದ ಅದರ ಅಲುಗಾಟವನ್ನೂ ಅದರ ತೂಷ್ಣೀಂಭಾವವನ್ನೂ ನೋಡುತ್ತಿರುವ ಆತ್ಮನು **ಕೂಟಸ್ಥನು, ನಿಷ್ಕ್ರಿಯನು.** ಈ ಆತ್ಮನಲ್ಲಿ ಯಾವ ಗುಣವೂ ಇಲ್ಲ ; ಯಾವ ಗುಣವೂ ಬಂದು ಹೋಗದೆ ಇರುವದರಿಂದಲೇ ಇವನು **ಅವಿಕಾರಿಯು.**

ಈ ಆತ್ಮನು ಮನಸ್ಸಿನ ಮೇಲೆ ಕೂತರೆ ಮನಸ್ಸು ಹೋದ ಕಡೆಗೆಲ್ಲ ಹೋಗುತ್ತಾ **ಗುಣಭೋಕ್ತೃ** ಎನಿಸುತ್ತಾನೆ. ಮನಸ್ಸಿನಿಂದ ಇಳಿದು ಬೇರೆ ನಿಂತರೆ ನಿರ್ಗುಣನೆನಿಸುತ್ತಾನೆ. ಹರಿಕಥೆಯವರು ವರ್ಣಿಸುವ ಗಾರುಡಿಯ ಕುದುರೆಯು ಅರ್ಜುನನನ್ನು ಕಂಡ ಕಡೆಗೆ ಒಯ್ದಂತೆ ಮನಸ್ಸು ನಮ್ಮನ್ನು ಕಂಡ ಕಡೆಗೆ ಒಯ್ಯುತ್ತಿರುವದು. ಆಗ ಮನಸ್ಸಿನ ಕುದುರೆ ಎತ್ತ ಹೋಗುತ್ತಿದೆ ಎಂಬುದು ಕೂಡ ನಮಗೆ ತಿಳಿಯುವದಿಲ್ಲ ; ಆದರೆ ಅದಕ್ಕಿಂತ ಬೇರೆಯಾಗಿ ಅದರ ಮೇಲೆ ಕುಳಿತು ಸವಾರಿಮಾಡಿದಾಗ ನಾನು ಹೇಗಿದ್ದೆ ಎಂದು ವಿಚಾರಿಸುವದಕ್ಕೆ ಹತ್ತಿದರೆ, ಅಥವಾ ಮನಸ್ಸನ್ನೇ ನೇರಾಗಿ ಪರೀಕ್ಷಿಸುವದಕ್ಕೆ ಹೊರಟರೆ ಆಗ ಮನಸ್ಸೇ ಇಲ್ಲವಾಗಿಬಿಡುತ್ತದೆ. ನಾವು ನಿರ್ಗುಣರಾಗಿಬಿಡುತ್ತೇವೆ. ಈ ಎರಡು ಅವಸ್ಥೆಗಳನ್ನೂ ತಿಳಿಸುವದಕ್ಕೆ `ನಿರ್ಗುಣಂ ಗುಣಭೋಕ್ತೃ ಚ' ಎಂದಿದೆ. ಬಂಧಮೋಕ್ಷಗಳಿಗೆ ನಮ್ಮ ನಮ್ಮ ಮನಸ್ಸೇ ಕಾರಣವು; ಮನಸ್ಸಿನ ಹೊಯ್ದಾಟವೇ ಸಂಸಾರವು. ಸುಮ್ಮನಾಗುವದೇ ಮೋಕ್ಷವು. ಆತ್ಮವು ನಿರ್ಗುಣವೂ ಗುಣಭೋಕ್ತೃವೂ

ಎಂಬುದೊಂದು ವಿರೋಧಾಭಾಸವು. ಇವೆರಡೂ ಒಂದೇ ತತ್ತ್ವದ ಸ್ವರೂಪವಾಗಲಾರವು. ಆತ್ಮನು ನಿಜವಾಗಿ ಗುಣಭೋಕ್ತೃವಲ್ಲ, ಗುಣಭೋಕ್ತೃವಾದಂತೆ ಇರುತ್ತಾನೆ. ಈ ಭೋಗದ ಮೂಲಕ ಆತ್ಮತತ್ತ್ವವನ್ನು ನಿರ್ಧರಿಸಿಕೊಳ್ಳಬೇಕು. ಆಗ ಅದರ ಪರಮಾರ್ಥಸ್ವರೂಪವು ನಿರ್ಗುಣವೇ ಎಂಬುದು ಗೊತ್ತಾಗುತ್ತದೆ.

ಪರಮಾರ್ಥತತ್ತ್ವವನ್ನು ಜ್ಞಾನದೃಷ್ಟಿಯಿಂದ ತಿಳಿದುಕೊಂಡರೆ ಪರಮಕಲ್ಯಾಣವಾಗುವದು. ಹೀಗೆ ತಿಳಿದುಕೊಳ್ಳುವದು ಎಲ್ಲರಿಗೂ ಸಾಧ್ಯವಿಲ್ಲ. ಇದು ಯಾರಿಗೆ ಸಾಧ್ಯವಿಲ್ಲವೋ ಅವರು ಪರಮಾರ್ಥದ ಭಾವನೆಯನ್ನಾದರೂ ಮಾಡಬೇಕು. ಅದೂ ಆಗದಿದ್ದರೆ ಭಕ್ತಿಯನ್ನಾದರೂ ಮಾಡಬೇಕು. ``ದೇವ, ನಿನ್ನ ತತ್ತ್ವವನ್ನು ನಾನರಿಯೆನು ; ನೀನು ಹೇಗಿರುವೆಯೋ ತಿಳಿಯದು. ಆದರೆ ನೀನು ಯಾವ ಸ್ವರೂಪದಲ್ಲಿರುವೆಯೋ ಆ ಸ್ವರೂಪದ ನಿನಗೆ ನಮಸ್ಕಾರ !" ಎಂದು ಒಬ್ಬ ಭಕ್ತನು ಆಡಿರುತ್ತಾನೆ. ಪರಮೇಶ್ವರನ ತತ್ತ್ವವನ್ನು ಅರಿತುಕೊಳ್ಳುವದಕ್ಕೆ ಪರಮೇಶ್ವರನನ್ನೇ ಶರಣುಹೋಗಬೇಕು. ಇದು ಮನಸ್ಸಿಗೆ ಹಿಡಿಯುವದು ಕಷ್ಟವೆಂದೇ ಸ್ವಲ್ಪಸ್ವಲ್ಪವಾಗಿ ಅಲ್ಲಲ್ಲಿ ಹೇಳಿ ಈ ಹದಿಮೂರನೆಯ ಅಧ್ಯಾಯದವರೆಗೂ ತಡೆದು ಇಲ್ಲಿ ಭಗವಂತನು ತತ್ತ್ವಜ್ಞಾನವನ್ನು ವಿಸ್ತಾರವಾಗಿ ಹೇಳಿರುತ್ತಾನೆ. ಇದು ಎಷ್ಟೇ ಕಷ್ಟವಾಗಿದ್ದರೂ ಪರಮೇಶ್ವರನ ಅನುಗ್ರಹವಿದ್ದರೆ ಅವಶ್ಯವಾಗಿ ತಿಳಿಯುತ್ತದೆ. ಆದ್ದರಿಂದ ಆತನಲ್ಲಿಯೇ ನಾವು ಮೊರೆ ಇಡಬೇಕು. ನಾವೇ ತಿಳಿಯುವದಕ್ಕೆ ಪ್ರಯತ್ನಿಸುವದೇ ಸುಲಭವೆಂದು ಕಾಣಬಹುದು ; ಆದರೆ ಭರ್ರೆಂದು ವೇಗದಿಂದ ನಡೆಯುತ್ತಿದ್ದ ಮೋಟಾರುಸೈಕಲ್ಲು ದಾರಿಯಲ್ಲಿ ಪಂಕ್ಚರ್ ಆದರೆ ಅದನ್ನು ಊರಿಗೆ ತಲುಪಿಸುವದಕ್ಕೆ ಕಷ್ಟಪಡುವಂತೆ ಈ ಸ್ವಬುದ್ಧಿಪ್ರಯತ್ನವು ಕಷ್ಟಗಳಿಗೆ ಈಡುಮಾಡುತ್ತದೆ. ಆದ್ದರಿಂದ ಭಗವಂತನ ಅನುಗ್ರಹದಿಂದಲೂ ಭಕ್ತರ ಸಹವಾಸದಿಂದಲೂ ಈ ತತ್ತ್ವವನ್ನು ಯಥಾವತ್ತಾಗಿ ತಿಳಿಯುವದಕ್ಕೆ ನಾವು ಹವಣಿಸಬೇಕು.

## ೧೨೦. ಜ್ಞೇಯದ ಸ್ವರೂಪ 13 - (15-16)

**(13-3-49)**

ಭಗವಂತನು ಅರ್ಜುನನಿಗೆ ಜ್ಞೇಯವಾದ ಪರಮಾತ್ಮತತ್ತ್ವದ ನಿಜವನ್ನು ತಿಳಿಸಲು ಹೊರಟಿರುತ್ತಾನೆ. ಅದು ಅನಾದಿಯು, ಸತ್ತಲ್ಲ, ಅಸತ್ತೂ ಅಲ್ಲ ; ಎಲ್ಲೆಲ್ಲಿಯೂ ಪಾಣಿಪಾದಶ್ರೋತ್ರನೇತ್ರಾದಿಗಳುಳ್ಳಂತೆ ಕಂಡರೂ ಅದರಲ್ಲಿ ನಿಜವಾಗಿ ಯಾವ ಇಂದ್ರಿಯವೂ ಇಲ್ಲ. ಅದು ಏತಕ್ಕೂ ಅಂಟಿಕೊಳ್ಳದೆ ಎಲ್ಲಕ್ಕೂ ಆಧಾರವಾಗಿರುತ್ತದೆ ; ನಿರ್ಗುಣವಾಗಿದ್ದರೂ ಗುಣಭೋಕ್ತೃವಾಗಿರುವಂತೆ ಕಾಣುತ್ತದೆ - ಎಂದು ಹೇಳಿದ್ದಾಯಿತು. ಈಗ ಹೇಳುವದೇನೆಂದರೆ:

**ಬಹಿರನ್ತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ ತದವಿಜ್ಞೇಯಂ ದೂರಸ್ಥಂ ಚಾನ್ತಿಕೇ ಚ ತತ್ ॥ 13-15**

`ಅದು ಪ್ರಾಣಿಗಳ ಒಳಗೂ ಹೊರಗೂ ಇರುತ್ತದೆ. ಅಚರವೂ ಚರವೂ ಆಗಿರುತ್ತದೆ. ಸೂಕ್ಷ್ಮವಾಗಿರುವದರಿಂದ ಅದನ್ನು ಅರಿಯುವದಕ್ಕಾಗುವದಿಲ್ಲ. ಅದು ದೂರವಾಗಿಯೂ ಇದೆ, ಹತ್ತಿರವೂ ಇದೆ. ಈ ವಿರೋಧಾಭಾಸವಾಕ್ಯಗಳ ಅಭಿಪ್ರಾಯವನ್ನು ಈಗ ನಾವು ಅರಿತುಕೊಳ್ಳಬೇಕಾಗಿದೆ. ಹೊರಗಿರುವದು ಒಳಗಿರುವದು ಹೇಗೆ ? ಅಚರವಾದದ್ದು ಚರವು ಹೇಗೆ ? ದೂರದಲ್ಲಿರುವದು ಹತ್ತಿರದಲ್ಲಿರುವದು ಹೇಗೆ? - ಇದೆಲ್ಲ ವಿರುದ್ಧವಚನವಾಗಿ ತೋರುತ್ತದೆ.

ನಿಜವೇನೆಂದರೆ ಪರಮಾತ್ಮನೆಂಬ ಆನಂದಸಾಗರವೇ ಎಲ್ಲೆಲ್ಲಿಯೂ ಇರುತ್ತದೆ. ಅದರಲ್ಲಿ ನಾವು ದ್ವೀಪಗಳಂತೆ ಅಲ್ಲಲ್ಲಿದ್ದುಕೊಂಡಿರುತ್ತೇವೆ. ಆದರೂ ಪರಮಾತ್ಮನು ನಮ್ಮ ಹೊರಗೆ ಇದ್ದಾನೆ ಎಂದರೆ ಒಳಗೆ ಇರಲಾರನೆಂಬ ಅಭಿಪ್ರಾಯ ನಮಗೆ ಆಗುತ್ತದೆ ; ಒಳಗೆ ಇದ್ದಾನೆ ಎಂದರೆ ಹೊರಗೆ ಇಲ್ಲವೆಂದು ತೋರುತ್ತದೆ. ಒಳಗೂ ಇದ್ದಾನೆ, ಹೊರಗೂ ಇದ್ದಾನೆ-ಎಂದರೆ ನಡುವೆ ಇದ್ದಾನೆಯೊ-ಇಲ್ಲವೊ !' ಎಂಬ ಸಂಶಯವು ನಮ್ಮನ್ನು ಬಾಧಿಸುತ್ತದೆ. ಲೋಕದಲ್ಲಿ ಯಾವದೊಂದು ವಿಶೇಷಣದಿಂದ ವಸ್ತುವನ್ನು ತಿಳಿಸಿದರೂ ಆ ವಿಶೇಷಣವು ವಸ್ತುವನ್ನು ಪರಿಚ್ಛೇದಗೊಳಿಸುತ್ತದೆ. ಉದಾಹರಣೆಗೆ ನೀಲವಾಗಿ ದೊಡ್ಡದಾಗಿರುವ ಸುವಾಸನೆಯ ಹೂವು, ಈ ನೈದಿಲೆಯು-ಎಂದು ಹೇಳಿದರೆ ನೀಲವಾದದ್ದೆಂಬ ವಿಶೇಷಣವು ಕೆಂಪಲ್ಲವೆಂದು ಹೇಳುವದು; ದೊಡ್ಡದು ಎಂಬುದು ಸಣ್ಣದಲ್ಲವೆಂದು ತಿಳಿಸುವದು ; ಸುಗಂಧಿ ಎಂದರೆ ಅಲ್ಪ ವಾಸನೆಯುಳ್ಳದ್ದಲ್ಲ, ಅಥವಾ ಕೆಟ್ಟ ವಾಸನೆ ಇಲ್ಲದ್ದೆಂದು ಹೇಳುವದು. ಹೀಗೆ ಒಂದೊಂದು ವಿಶೇಷಣವೂ ಒಂದೊಂದು ಧರ್ಮವನ್ನು ಹೆಚ್ಚಾಗಿ ಹೇಳುತ್ತದೆಯಾದರೂ ಅಷ್ಟಷ್ಟು ಮಟ್ಟಿಗೆ ವಸ್ತುವನ್ನು ಕ್ಲಿಪ್ತವಾಗಿ ಮಾಡುತ್ತದೆ. ಹೀಗಿರುವದರಿಂದ ಅಪರಿಚ್ಛಿನ್ನವಾದ ವಸ್ತುವನ್ನು ಮಾತಿನಿಂದ ಯಾವ ವಿಶೇಷಣವನ್ನು ಕೊಟ್ಟರೆ ತಾನೆ, ಮನಸ್ಸಿನಿಂದ ಯಾವ ಪ್ರತ್ಯಯವನ್ನು ಏರ್ಪಡಿಸಿಕೊಂಡರೆ ತಾನೆ, ಪೂರ್ಣವಾಗಿ ತಿಳಿದುಕೊಳ್ಳುವದು ಆದೀತು ? ಆದ್ದರಿಂದ ಅನಂತವಾದದ್ದನ್ನು ತಿಳಿಯುವುದು ಪರಿಚ್ಛಿನ್ನವಾದದ್ದನ್ನು ಮಾತ್ರ ತಿಳಿಯಬಲ್ಲ ಮನಸ್ಸಿಗೆ ಸಾಧ್ಯವೇ ಇಲ್ಲ. ಇಷ್ಟೇ ಅಲ್ಲ. ಸರಿಯಾಗಿ ನೋಡಿದರೆ ಪರಿಚ್ಛಿನ್ನವಸ್ತುಗಳನ್ನು ಕೂಡ ನಾವು ಯಾವ ಇಂದ್ರಿಯದಿಂದಲೂ ಪೂರ್ಣವಾಗಿ ಅರಿಯಲಾರೆವು ; ಅದರ ಏಕದೇಶವನ್ನು ಮಾತ್ರ ಇಂದ್ರಿಯಗಳ ಮೂಲಕ ಅರಿಯುತ್ತೇವೆ. ನಮ್ಮ ಮನಸ್ಸು ಆ ತಿಳಿವಳಿಕೆಯನ್ನು ಕಲ್ಪನೆಯಿಂದ ಭರ್ತಿಮಾಡಿ 'ನಾನು ಇದನ್ನು ಪೂರ್ಣವಾಗಿ ಅರಿತೆನು' ಎಂದು ಭ್ರಾಂತವಾಗುತ್ತಿರುತ್ತದೆ. ಆದ್ದರಿಂದ ಅಪರಿಚ್ಛಿನ್ನವಾದ ಜ್ಞೇಯವನ್ನು ತಿಳಿಸಲು ಈ ಪರಿಚ್ಛೇದಕಬುದ್ಧಿಯ ಹಿಡಿತದಿಂದ ತಪ್ಪಿಸಿಕೊಳ್ಳಬೇಕು. ಅದಕ್ಕಾಗಿಯೇ ಅಧ್ಯಾತ್ಮಶಾಸ್ತ್ರದಲ್ಲಿ ಅಧ್ಯಾರೋಪಾಪವಾದನ್ಯಾಯವನ್ನು ಅನುಸರಿಸಿರುತ್ತದೆ.

ಇಲ್ಲಿ ಹೇಳಿರುವದರ ಸಾರವೇನೆಂದರೆ, ನಿಮ್ಮ ಮನಸ್ಸು ಏನೇನು ಕಲ್ಪಿಸುತ್ತದೆಯೋ ಅದೆಲ್ಲವೂ ಪರಮಾತ್ಮನೇ. ದೇಹವನ್ನೇ ತಾವೆಂದು ಅಜ್ಞರು ಎಣಿಸಿರುವರಷ್ಟೆ; ಆ ದೃಷ್ಟಿಯಿಂದ ನೋಡಿದರೆ ನಮ್ಮ ಹೊರಗೆ ಇರುವದೆಲ್ಲ ಈ ಜ್ಞೇಯವೇ, ನಮ್ಮ ಒಳಗೆ ಇರುವದೂ ಈ ಜ್ಞೇಯವೇ. ಇನ್ನು ಚರಾಚರವಾಗಿ ಕಾಣುತ್ತಿರುವ ಈ ದೇಹವೆಂಬ ತೋರಿಕೆಯಿದೆಯಲ್ಲ, ಇದೂ ಪರಮಾರ್ಥವಾಗಿ ಆ ಜ್ಞೇಯವೇ.

ಎಲ್ಲವೂ ಜ್ಞೇಯವಾಗಿರುವಲ್ಲಿ, ಎಲ್ಲರಿಗೂ ಅದೇಕೆ 'ಇಂಥದ್ದು' ಎಂದು ತಿಳಿಯಬರುವದಿಲ್ಲ ?- ಎಂದರೆ, ಸೂಕ್ಷ್ಮವಾಗಿರುವದರಿಂದ. ಅದು ಎಲ್ಲದರ ರೂಪದಿಂದಲೂ ತೋರಿಕೊಳ್ಳುತ್ತಿರುವದು ನಿಜ. ಆದರೆ ಆಕಾಶದಂತೆ ಅದು ಅತ್ಯಂತಸೂಕ್ಷ್ಮವಾಗಿರುವದರಿಂದ ಈ ಇಂದ್ರಿಯಗಳಿಂದ ಅದನ್ನು ನೋಡುವದಕ್ಕೆ ಆಗುವದಿಲ್ಲ. ಇಂದ್ರಿಯಗಳು ಸ್ಥೂಲವಿಷಯವನ್ನು ಮಾತ್ರ ಕಾಣಬಲ್ಲವು ; ಅವುಗಳಿಗೆ ಸಹಾಯಕವಾಗಿ ಸೂಕ್ಷ್ಮದರ್ಶಕಯಂತ್ರಗಳನ್ನು ಏರ್ಪಡಿಸಿಕೊಂಡರೂ ಎಂಥ ಸೂಕ್ಷ್ಮದರ್ಶಿಗಳೆಂದು ಪ್ರಸಿದ್ಧರಾಗಿರುವ ಅನಾತ್ಮಜ್ಞರಿಗೂ ಅದು ತಿಳಿಯುವದಕ್ಕೆ ಬರುವದೇ ಅಲ್ಲ. ಏಕೆಂದರೆ ಹೇಗೂ ಅದು ಇಂದ್ರಿಯಗಳಿಗೆ ಗೋಚರವೇ ಅಲ್ಲ. ಆದರೆ ಜ್ಞಾನಿಗಳ ದೃಷ್ಟಿಯಿಂದ ನೋಡಿದರೆ ಸಂಸ್ಕೃತವಾದ ಮನಸ್ಸಿಗೆ ಅದು ತಿಳಿದೇ ಬರುತ್ತಿದೆ. ಇಷ್ಟೇ ಅಲ್ಲ. 'ಇವೆಲ್ಲವೂ ಬ್ರಹ್ಮವೇ', 'ಇದೆಲ್ಲವೂ ಆತ್ಮನೇ' 'ಮತ್ತೊಂದಿಲ್ಲ'- ಎಂಬ ಶಾಸ್ತ್ರವಚನವು ಪ್ರಮಾಣವೆಂದೇ ಗೊತ್ತಾಗುತ್ತದೆ. ಆ ಬ್ರಹ್ಮಕ್ಕಿಂತ ಬೇರೆಯಾಗಿ ಮತ್ತೊಂದು ಯಾವಾಗಲೂ ಎಲ್ಲಿಯೂ ಇರುವದೇ ಇಲ್ಲ.

ಅದು ದೂರದಲ್ಲಿಯೂ ಇರುವದು, ಹತ್ತಿರದಲ್ಲಿಯೂ ಇರುವದು, ನಮ್ಮ ಅಜ್ಞಾನದಿಂದ ಅದನ್ನು ದೂರಮಾಡಿಕೊಂಡಿರುತ್ತೇವೆ; ಸಹಸ್ರ ಕೋಟಿವರ್ಷಗಳು ಪಯಣಮಾಡಿದರೂ ಅದನ್ನು ನಾವು ಕಾಣಲಾರದೆ ಇರುತ್ತೇವೆ. ಆದರೆ ಸರಿಯಾಗಿ ಜ್ಞಾನದೃಷ್ಟಿಯಿಂದ ನೋಡಿದರೆ ಅದು ನಮ್ಮ ಆತ್ಮನೇ ಆಗಿರುವದರಿಂದ ಅದಕ್ಕಿಂತ ಹತ್ತಿರವಿರುವದು ಮತ್ತೆ ಯಾವದೂ ಇರುವದಿಲ್ಲ. ಒಬ್ಬ ಪರಭಕ್ತನು ಪರಮೇಶ್ವರನನ್ನು ಕುರಿತು ಹೀಗೆಂದಿರುತ್ತಾನೆ :

ತ್ವದ್ಯಾತ್ರಯಾ ವ್ಯಾಪಕತಾ ಹತಾ ತೇ
ಧ್ಯಾನೇನ ಚೇತಃಪರತಾ ಹತಾ ತೇ ।
ಸ್ತುತ್ಯಾ ಮಯಾ ವಾಕ್ಪರತಾ ಹತಾ ತೇ
ಕ್ಷಮಸ್ವ ನಿತ್ಯಂ ತ್ರಿವಿಧಾಪರಾಧಮ್ ॥

"ದೇವ, ನಿನ್ನ ದರ್ಶನಕ್ಕೆಂದು ತೀರ್ಥಯಾತ್ರೆಯನ್ನು ಮಾಡಿ ನೀನು ವ್ಯಾಪಕನೆಂಬುದನ್ನು ಸುಳ್ಳೆಂದೆನಿಸಿದೆನು ; ನಿನ್ನನ್ನು ಧ್ಯಾನಗೈದು ನೀನು ಮನಸ್ಸಿಗೂ ಅತೀತನಾದವನೆಂಬುದನ್ನು ಸುಳ್ಳಾಗಿಸಿದೆನು ; ನಿನ್ನನ್ನು ಸ್ತುತಿಗೈದು ನೀನು ವಾಕ್ಕಿಗೂ ದೂರನಾಗಿರುವೆ ಎಂಬುದನ್ನು ಸುಳ್ಳುಮಾಡಿದೆನು. ಈ ನನ್ನ ನಿತ್ಯವಾದ ಮೂರು ಬಗೆಯ ಅಪರಾಧವನ್ನು ಕ್ಷಮಿಸು!"

ಪರಮಾತ್ಮನು ಒಂದು ಕಡೆಯಲ್ಲಿದಾನೆಂದು ಬಗೆದರೆ ಪರಮಾತ್ಮನಿಗೆ ಪರಿಚ್ಛೇದವನ್ನು ಕಲ್ಪಿಸಿದಂತಾಗುವದರಿಂದ ತೀರ್ಥಯಾತ್ರೆಯನ್ನು ಮಾಡಬಾರದು ಎಂದು ಇದಕ್ಕೆ ಅಭಿಪ್ರಾಯವನ್ನು ಕಲ್ಪಿಸಬಾರದು. ಪುರಾಣಗಳಲ್ಲಿ ಶೈವವೈಷ್ಣವಾದಿ ಯಾತ್ರಾಸ್ಥಳಗಳನ್ನು ವಿವರಿಸಿರುತ್ತದೆ ಎಂಬುದು ನಿಮಗೆ ತಿಳಿದಿರಬಹುದು. ಭಾರತದ ನಕ್ಷೆಯಮೇಲೆ ಆ ಯಾತ್ರಾಸ್ಥಳಗಳನ್ನೆಲ್ಲ ಒಂದೊಂದು ಚುಕ್ಕಿಯಿಂದ ಗುರುತಿಸಿದರೂ ನಕ್ಷೆಯೆಲ್ಲವೂ ಆ ಚುಕ್ಕಿಗಳಿಂದಲೇ ತುಂಬಿಹೋಗುವ ಸಂಭವವಿದೆ. ಇದನ್ನು ಕಂಡು ಪರಮಾತ್ಮನು ಎಲ್ಲೆಲ್ಲಿಯೂ ವ್ಯಾಪಿಸಿರುತ್ತಾನೆ ಎಂದು ತಿಳಿದುಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಭಕ್ತಿಯಿಂದ ತೀರ್ಥಯಾತ್ರೆ ಮಾಡುವವರು 'ಪರಮಾತ್ಮನ ಕ್ಷೇತ್ರಗಳು ಎಷ್ಟು ಅಗಣಿತವಾಗಿರುವವು! ನಾನು ಅದನ್ನೆಲ್ಲ ನೋಡುವದೆಂಬುದು ಆಗದ ಮಾತು! ನನ್ನ ಅಲ್ಪಜೀವನ ಕಾಲದಲ್ಲಿ ನನ್ನ ಕೈಲಾದಷ್ಟು ಕ್ಷೇತ್ರಗಳನ್ನು ನೋಡಿ ಧನ್ಯನಾಗುವೆನು' ಎಂದು ಪರಮಾತ್ಮನ ವ್ಯಾಪಕತ್ವವನ್ನೇ ಯಾತ್ರೆಯಿಂದಲೂ ತಿಳಿದುಕೊಳ್ಳುವರು. ಪರಮಾತ್ಮನ ಸ್ಮರಣೆಯನ್ನು ಮಾಡುತ್ತಾ ಕಂಡಕಂಡ ಕ್ಷೇತ್ರದಲ್ಲಿ ಆತನ ಸ್ಮರಣೆಗೆಂದು ಸ್ಥಾಪಿತವಾಗಿರುವ ಮೂರ್ತಿಗಳನ್ನು ದರ್ಶನಮಾಡುತ್ತಾ ಅಲ್ಲಲ್ಲಿ ಆತನ ಭಕ್ತರು ಮಿಂದು ಪವಿತ್ರವಾಗಿರುವ ತೀರ್ಥಗಳಲ್ಲಿ ಸ್ನಾನಮಾಡುತ್ತಾ ಪರಮಾತ್ಮನ ವ್ಯಾಪಕತೆಯನ್ನು ಮನಸ್ಸಿಗೆ ತುಂಬಿಕೊಳ್ಳುವ ಯಾತ್ರೆಯೇ ಯಾತ್ರೆಯು ; ಇಲ್ಲದಿದ್ದರೆ ಅದು ಬರಿಯ ಯಾತನೆಯೇ ಸರಿ. ಭಗವಂತನು ತಿಳಿಯದವರಿಗೆ ಎಲ್ಲಿಯೋ ದೂರದಲ್ಲಿರುತ್ತಾನೆ; ಅವನನ್ನು ದರ್ಶನಮಾಡಬಹುದು ಎಂದು ಭಕ್ತರು ಹೇಳಿದರೆ ಅಜ್ಞರು ಆಶ್ಚರ್ಯಪಡುತ್ತಾರೆ. ಆದರೆ ತಿಳಿದವರು 'ಅಯ್ಯೋ ಜನರು ಎಂಥ ಮೂಢರು! ತಾವು ನಿತ್ಯವೂ ಪರಮಾತ್ಮನಲ್ಲಿಯೇ ಇದ್ದುಕೊಂಡಿದ್ದರೂ ಆತನನ್ನು ಹುಡುಕಿ ಆಯಾಸಪಡುತ್ತಿರುವರಲ್ಲ!' ಎನ್ನುತ್ತಿರುವರು. ಪರಮಾತ್ಮನು `ಎಲ್ಲಿ?' ಎಂಬ ಪ್ರಶ್ನೆಯನ್ನು ಪರಮಾತ್ಮನಲ್ಲಿದ್ದುಕೊಂಡೇ ನಾವು ಮಾಡುತ್ತಿರುವೆವು. ಜ್ಞಾನವು ಬಂದಾಗ ಪರಮಾತ್ಮನು ಎಲ್ಲಿ? - ಎಂಬ ಪ್ರಶ್ನೆಯೇ ಹುಟ್ಟಲಾರದು. ಏಕೆಂದರೆ ಅವನು ಅರಿತವನ ಆತ್ಮನೇ ಆಗಿರುತ್ತಾನೆ. `ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ । ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂದರೆ ಈ ಪರಮಾತ್ಮನು ನಾವು ಕಂಡಿರುವ ಕೇಳಿರುವ ಜಗತ್ತೆಲ್ಲವನ್ನೂ ಒಳಗೂ ಹೊರಗೂ ವ್ಯಾಪಿಸಿಕೊಂಡು ಇರುತ್ತಾನೆ. ಭಗವಂತನ ಉತ್ಸವಕ್ಕೆಂದು ದೇವಸ್ಥಾನಾದಿಗಳಿಗೆ ಹೋದರೂ ಕೆಲವರಿಗೆ ಅದು ಉತ್ಸವವಾಗುವದೇ ಇಲ್ಲ; ಏಕೆಂದರೆ ಉತ್ಸವವೆಂದರೇನು? ಹರ್ಷವನ್ನು ಉಕ್ಕಿಸುವದು, ಪರಮಾತ್ಮನ ಸನ್ನಿಧಿಯನ್ನು ಮನಗಂಡು ಯಾವನ ಹರ್ಷವು ಉಕ್ಕೇರುವದೋ ಅವನಿಗೆ ಇದ್ದಲ್ಲಿಯೇ ಉತ್ಸವವಾಗುತ್ತದೆ. ಇದಿರಲಿ. ಇನ್ನು ಮುಂದಿನ ಶ್ಲೋಕದ ಅಭಿಪ್ರಾಯವನ್ನು ವಿಚಾರಿಸೋಣ :

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ 13-16**

`ಅದು ಅವಿಭಕ್ತವಾಗಿರುವದು ; ಭೂತಗಳಲ್ಲಿ ವಿಭಕ್ತವಾಗಿರುವಂತೆಯೂ ಇರುವದು. ಆ ಜ್ಞೇಯವು ಭೂತಭರ್ತೃವು, ನುಂಗತಕ್ಕದ್ದು, ಉಂಟುಮಾಡತಕ್ಕದ್ದು.' ಯಾವ ಪರಿಚ್ಛೇದವೂ ಇಲ್ಲದ ಆತ್ಮನಲ್ಲಿ ನಾವು ಪರಿಚ್ಛೇದವನ್ನು ಕಲ್ಪಿಸಿಕೊಂಡು ವ್ಯವಹರಿಸುತ್ತಿದೇವೆ. ನಾನು, ನೀನು, ಅದು, ಪ್ರಾಣಿ, ಸ್ಥಾವರ, ಅಚೇತನ - ಎಂದು ಮುಂತಾಗಿ ಅಖಂಡಚೈತನ್ಯವಾಗಿರುವ ಪರಮಾತ್ಮವಸ್ತುವನ್ನೇ ವಿಂಗಡಿಸಿ ವಿಂಗಡಿಸಿ ಅರಿಯುತ್ತಿದ್ದೇವೆ. ಆದರೆ ನಿಜವೇನು? `ಭೂತಾನಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯಶ್ಚ ವಿಷ್ಣುಃ' ಭೂತಗಳೂ ಆ ಪರಮಾತ್ಮನೇ, ಭುವನಗಳೂ ಆ ಪರಮಾತ್ಮನೇ, ವನಗಳೂ ಆ ಪರಮಾತ್ಮನೇ, ಗಿರಿಗಳೂ ಆ ಪರಮಾತ್ಮನೇ; ಭರತಖಂಡವೆಲ್ಲ ನಿಜವಾಗಿ ಒಂದೇ ಅದರೂ ನಾವು ಕಂಡಂತೆ ತುಂಡು ತುಂಡಾಗಿ ಹಲವು ದೇಶಗಳೆನಿಸಿತ್ತು; ಈಗ ಮತ್ತೆ ಒಂದೇ ರಾಷ್ಟ್ರವೆನಿಸಿರುತ್ತದೆ. ಕಲ್ಪನೆಯಿಂದಲೇ ಅದು ಬೇರೆಬೇರೆಯಾಗಿತ್ತು; ಆ ಕಲ್ಪನೆಯನ್ನು ಬಾಧಿಸುವ ಮತ್ತೊಂದು ಕಲ್ಪನೆಯಿಂದಲೇ ಅದು ಮತ್ತೆ ಒಂದಾಗಿರುತ್ತದೆ. ಪರಮಾತ್ಮನು ವಿಭಕ್ತನೆಂಬುದನ್ನೂ ಅವಿಭಕ್ತನೆಂಬುದನ್ನೂ ಹೀಗೆಯೇ ತಿಳಿಯಬೇಕು. ಅವನು ನಿಜವಾಗಿ ಎಂದೆಂದಿಗೂ ಅವಿಭಕ್ತನೇ ಆಗಿರುತ್ತಾನೆ; ಆದರೂ ಅಜ್ಞಾನದಿಂದ ಜನರು ಅವನನ್ನು ತುಂಡುತುಂಡುಮಾಡಿಕೊಂಡು ವ್ಯವಹರಿಸುತ್ತಿರುತ್ತಾರೆ. ಜ್ಞಾನದಿಂದ ಅಜ್ಞಾನವು ತೊಲಗಲು ಅವನು ಮತ್ತೆ ಒಂದಾಗಿಯೇ ಕಾಣುತ್ತಾನೆ.

ಜ್ಞೇಯವಸ್ತುವಾದ ಆ ಪರಮಾತ್ಮನು ಭೂತಭರ್ತೃ, ಗ್ರಸಿಷ್ಣು, ಪ್ರಭವಿಷ್ಣು. ಪ್ರತಿಯೊಂದು ವಿಶೇಷಣಕ್ಕೂ ಒಂದೊಂದು ದಿನದವರೆಗೆ ಉಪನ್ಯಾಸವಾಗುತ್ತದೆಯೇನೊ ಎಂದು ನೀವು ಭಾವಿಸಬೇಕಾದದ್ದಿಲ್ಲ; ಪರಮಾತ್ಮವಸ್ತುವನ್ನು ತಿಳಿಯುವದಕ್ಕೆ ಅನುಕೂಲವಾಗುವಂತೆ ಈ ವಿಶೇಷಣಗಳನ್ನು ವಿವರಿಸಿರುತ್ತೇನೆ. ಅಷ್ಟೆ. ಇಲ್ಲಿ ಹೇಳಿರುವ ಮೂರು ವಿಶೇಷಣಗಳನ್ನು ಒಟ್ಟಿಗೆ ತೆಗೆದುಕೊಂಡು ವಿಚಾರಮಾಡಿದರೆ ಪರಮಾತ್ಮವಸ್ತುವಿನ ಸ್ವರೂಪವೂ ನಮಗೂ ಅದಕ್ಕೂ ಇರುವ ಸಂಬಂಧವೂ ಸ್ಪಷ್ಟವಾಗುತ್ತದೆ. ಆದ್ದರಿಂದ ಈ ಮೂರನ್ನೂ ಒಟ್ಟಿಗೆ ವಿಚಾರಮಾಡೋಣ. ನಾವು ಯಾವದರಿಂದ ಬಂದಿರುತ್ತೇವೆಯೋ ಯಾವದರಲ್ಲಿ ಇರುತ್ತೇವೆಯೋ ಮತ್ತೆ ಯಾವದನ್ನೇ ಸೇರುತ್ತೇವೆಯೋ ಅದೇ ಪರಮಾತ್ಮವಸ್ತು. ಇಡಿಯ ಜಗತ್ತೇ ಪರಮಾತ್ಮನಿಂದ ಹುಟ್ಟಿ, ಪರಮಾತ್ಮನಲ್ಲಿದ್ದು, ಪರಮಾತ್ಮನನ್ನು ಸೇರುತ್ತದೆ. ಪರಮಾತ್ಮನು ಭೂತಭರ್ತೃ. ಈ ಭೂತಗಳು ಇರುವಾಗ ಪರಮಾತ್ಮನ ಇರವಿನಿಂದಲೇ ಇರುತ್ತವೆ; ಅವುಗಳಲ್ಲಿರುವ ಜ್ಞಾನ, ಪ್ರವೃತ್ತಿ, ಸುಖದುಃಖಭೋಗಶಕ್ತಿ - ಎಲ್ಲವೂ ಪರಮಾತ್ಮನಿಂದಲೇ ಬಂದವು. ಪರಮಾತ್ಮನೇ ಅವುಗಳ ಗ್ರಸಿಷ್ಣು. ಅವುಗಳು ನಾಶವಾಗುವಾಗ ಅದನ್ನು ಪರಮಾತ್ಮನೇ ನುಂಗಿಬಿಡುತ್ತಾನೆ, ಅವನಲ್ಲಿಯೇ ಅವೆಲ್ಲ ಅಡಕವಾಗಿಬಿಡುತ್ತವೆ. ಪರಮಾತ್ಮನೇ ಭೂತಗಳ ಪ್ರಭವಿಷ್ಣು; ಮತ್ತೆ ಅವು ಹುಟ್ಟುವಾಗ ಅವುಗಳನ್ನುಂಟುಮಾಡುವಾತನು. ಹೀಗೆ ಪರಮಾತ್ಮನಿಂದಲೇ ಹುಟ್ಟು, ಇರವು, ಹೊಂದು -

ಇವುಗಳನ್ನು ಪಡೆಯುತ್ತಿರುವ ನಾವು ಆತನನಿಗಿಂತ ಸ್ವಲ್ಪವೂ ಬೇರೆಯಲ್ಲ. ಚಿನ್ನದಿಂದ ಹುಟ್ಟಿ, ಚಿನ್ನದಲ್ಲಿಯೇ ಇದ್ದು, ಕೊನಗೆ ಚಿನ್ನದಲ್ಲಿಯೇ ಅಡಕವಾಗುವ ಒಡವೆಗಳು ಚಿನ್ನಕ್ಕಿಂತ ಹೇಗೆ ತಾನೆ ಬೇರೆಯಾದಾವು?

ನಾವು ಪರಮಾತ್ಮನಲ್ಲಿರುತ್ತೇವೆ, ನಮ್ಮಲ್ಲಿ ಪರಮಾತ್ಮನೇ ಇರುತ್ತಾನೆ. ನಮ್ಮಲ್ಲಿ ಒಬ್ಬೊಬ್ಬನಲ್ಲಿಯೂ ಆ ಪರಮಾತ್ಮನು ಸಂಪೂರ್ಣವಾಗಿ ಇರುತ್ತಾನೆ. ದೇವತೆಗಳಲ್ಲಿರುವಷ್ಟೇ ಪರಿಪೂರ್ಣನಾಗಿ ಮನುಷ್ಯರಲ್ಲಿಯೂ ಮೃಗಗಳಲ್ಲಿಯೂ ಕ್ರಿಮಿಕೀಟಗಳಲ್ಲಿಯೂ ಇರುತ್ತಾನೆ. ಬೆಂಕಿಯಲ್ಲಿರುವ ವಸ್ತುಗಳು ಬೆಂಕಿಯಿಂದ ಕೆಂಪಗೆ ಕಾದರೆ ಅವುಗಳಲ್ಲಿ ಸಂಪೂರ್ಣವಾಗಿ ಬೆಂಕಿಯು ವ್ಯಾಪಿಸಿಕೊಂಡುಬಿಟ್ಟಿರುತ್ತದೆ. ಅಲ್ಲವೆ? ಇದರಂತೆ ಇರುವೆಯಲ್ಲಿ, ಆನೆಯಲ್ಲಿ, ಗೋವಿನಲ್ಲಿ, ಬ್ರಾಹ್ಮಣನಲ್ಲಿ, ಚಂಡಾಲನಲ್ಲಿ - ಎಲ್ಲರಲ್ಲಿಯೂ ಆತನು ಪರಿಪೂರ್ಣನಾಗಿರುತ್ತಾನೆ. ವ್ಯವಹಾರದೃಷ್ಟಿಯಿಂದ ಜಗತ್ತಿನ ಒಂದಂಶದಲ್ಲಿ ಹುಟ್ಟಿದ್ದರೂ ನಮಗೆ ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡಿರುವ ಪರಮಾತ್ಮನೇ ವಾಸಸ್ಥಾನವು. ಯಾರು ಯಾರಿಗೆ ಪರಮಾತ್ಮನು ಬೇಕೋ ಅವರೆಲ್ಲರಿಗೂ ಪರಮಾತ್ಮನು ಆತ್ಮನಾಗಿರುತ್ತಾನೆ; ಯಾರಿಗೆ ಬೇಡವೋ ಅವರಿಗೆ ಇಲ್ಲ. ಅಷ್ಟೆ.

ಪರಮಾತ್ಮನು ಗ್ರಸಿಷ್ಣು, ಎಲ್ಲವನ್ನೂ ನುಂಗುವವನು ಎಂದರೇನರ್ಥ? ಅವನು ನಮ್ಮನ್ನು ನುಂಗಿ ತನ್ನಲ್ಲಿ ಸೇರಿಸಿಕೊಂಡುಬಿಡುತ್ತಾನೆ, ಹುಲಿಯು ಜಿಂಕೆಯನ್ನು ತಿಂದುತೇಗುವಂತೆ ಎಂದು ತಿಳಿಯಬಾರದು. ಮೂಢರು ಹಾಗೆಂದೂ ತಿಳಿಯಬಹುದು. ಒಬ್ಬ ಕಪಟಭಕ್ತನು ಒಂದು ದೇವಸ್ಥಾನದಲ್ಲಿ ಪ್ರತಿ ದಿನವೂ ಬಂದು ಬಹಳವಾಗಿ ಪರಮೇಶ್ವರನನ್ನು ಸ್ತುತಿಮಾಡಿ, "ದೇವ, ನನ್ನನ್ನು ನಿನ್ನ ಹೊಟ್ಟೆಯಲ್ಲಿ ಹಾಕಿಕೊಳ್ಳುವದಿಲ್ಲವಲ್ಲ! ಎಂದಿಗೆ ನನಗೆ ಸಾಯುಜ್ಯವನ್ನು ಕೊಡುವೆ?" - ಎಂದು ಮುಂತಾಗಿ ಕೂಗಿಕೊಳ್ಳುತ್ತಿದ್ದನಂತೆ. ಎಲ್ಲರೂ ದೇವಸ್ಥಾನವನ್ನು ಬಿಟ್ಟರೂ ಅವನು ಮಾತ್ರ ಹೊರಕ್ಕೆ ಹೋಗದೆ ಪೂಜಾರಿಗೆ ಬಹಳ ತೊಂದರೆಕೊಡುತ್ತಿದ್ದನಂತೆ! ಒಂದು ದಿನ ಪೂಜಾರಿಯು ಇವನಿಗೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ದೇವರ ಪ್ರತಿಮೆಯ ಹಿಂದೆ ಅಡಗಿಕೊಂಡು ಇವನು ಎಂದಿನಂತೆ ಕೂಗಿಕೊಳ್ಳುವದಕ್ಕೆ ಮೊದಲು ಮಾಡಿದನೊ ಇಲ್ಲವೊ, "ಮಗನೆ, ನಿನ್ನ ಭಕ್ತಿಗೆ ಮೆಚ್ಚಿದೆನು; ನಿನ್ನನ್ನು ಹೊಟ್ಟೆಯೊಳಗೆ ಹಾಕಿಕೊಳ್ಳುವೆನು, ಬಾ !" ಎಂದು ಗಟ್ಟಿಯಾಗಿ ಗರ್ಜಿಸಿದನಂತೆ ! ಆಗ ಈ ನಟನೆಯ ಭಕ್ತನು ಅಂಜಿಕೆಯಿಂದ ಹೇಳದೆ ಕೇಳದೆ ಓಟಕಿತ್ತನಂತೆ ! ಹೀಗಲ್ಲ, ಪರಮಾತ್ಮನು ಎಲ್ಲವನ್ನೂ ನುಂಗುವದೆಂದರೆ. ಈಗ ನಾವು ಅಜ್ಞಾನದಿಂದ ಪರಮಾತ್ಮನಿಗಿಂತ ಬೇರೆಯಾಗಿರುತ್ತೇವಷ್ಟೆ: ಆದರೆ ಈಗಲೂ ನಾವು ನಿಜವಾಗಿ ಪರಮಾತ್ಮನಲ್ಲಿಯೇ ಇರುತ್ತೇವೆ. ಆದರೆ ಪ್ರಪಂಚದೃಷ್ಟಿಯು ಪರಮಾತ್ಮನನ್ನು ನುಂಗಿಬಿಟ್ಟಿರುತ್ತದೆ. ನಮಗೆ ಪ್ರಪಂಚವು ಕಾಣಿಸುತ್ತಿದೆಯೇ ಹೊರತು ಪರಮಾತ್ಮನು ಕಾಣಿಸುತ್ತಿಲ್ಲ. ಒಬ್ಬ ಅನುಭವಿಗಳು ಹೇಳಿರುವದನ್ನು ಕೇಳಿರಿ :

**ದನ್ತಿನಿ ದಾರುವಿಕಾರೇ ದಾರು ತಿರೋಭವತಿ ಸೋಽಪಿ ತತ್ರೈವ ।**
**ಜಗತಿ ತಥಾ ಪರಮಾತ್ಮಾ ಪರಮಾತ್ಮನ್ಯಪಿ ಜಗತ್ತಿರೋಧತ್ತೇ ॥**

ಮರದಿಂದ ಮಾಡಿದ ಆನೆಯಲ್ಲಿ ಮರವು ಮರೆಯಾಗಿರುವದು; ಆ ಆನೆಯೂ ಆ ಮರದಲ್ಲಿಯೇ ಮರೆಯಾಗಿರುವದು. ಇದರಂತೆ ಜಗತ್ತಿನಲ್ಲಿ ಪರಮಾತ್ಮನೂ ಪರಮಾತ್ಮನಲ್ಲಿ ಜಗತ್ತೂ ಮರೆಯಾಗಿರುವದು ಎಂದು ಈ ವಚನದ ಅಭಿಪ್ರಾಯ. ಸಕ್ಕರೆಯ ಗಣಪತಿಗೆ ಸಕ್ಕರೆಯ ಹಾವು, ಸಕ್ಕರೆಯ ಇಲಿ, ಸಕ್ಕರೆಯ ಕಡುಬು, ಸಕ್ಕರೆಯ ಪಾಶಾಂಕುಶ ಎಲ್ಲವೂ ಸಕ್ಕರೆಯದೇ ಆಗಿರುತ್ತದೆ ಎಂಬುದನ್ನು ಅರಿತುಕೊಂಡವನಿಗೆ ಸಕ್ಕರೆಯು ಇಲಿ ಮುಂತಾದವುಗಳನ್ನು ನುಂಗಿ ತನ್ನೊಳಗೆ ಇಟ್ಟುಕೊಂಡುಬಿಡುವದು! ಇದರಂತೆ ಪರಮಾತ್ಮನು ಜಗತ್ತನ್ನು ನುಂಗಿದಾಗ ನಾವೆಲ್ಲರೂ ಪರಮಾತ್ಮನೇ ಆಗಿಬಿಡುವೆವು. ಈಗ ಹಾಗೆ ಇಲ್ಲವೆಂದಲ್ಲ. ಅಜ್ಞಾನದಿಂದ ಬೇರೆಯಾಗಿರುತ್ತೇವೆ; ಅಷ್ಟೆ.

ನಾವು ಯಾವ ವ್ಯವಹಾರವನ್ನೇ ಮಾಡಲಿ. ಪರಮಾತ್ಮನಲ್ಲಿಯೇ ದೃಷ್ಟಿಯಿಟ್ಟಿರಬೇಕು. ನಾಟಕದ ಪಾತ್ರವನ್ನು ವಹಿಸಿರುವವನು, ತನ್ನ ಪಾತ್ರವನ್ನು ಚೆನ್ನಾಗಿ ಅಭಿನಯಿಸಿ ಸಭಿಕರನ್ನು ಮೆಚ್ಚಿಸುತ್ತಾನೆ; ತಾನು ಇಂಥವನೆಂಬುದನ್ನು ಒಬ್ಬರಿಗೂ ತಿಳಿಯಗೊಡಿಸುವದಿಲ್ಲ. ಆದರೂ ಅವನ ದೃಷ್ಟಿಯು ನಾಟಕದ ಕಂಪೆನಿಯ ಯಜಮಾನನು ಮೆಚ್ಚಲಿ ಎಂಬುದರ ಮೇಲೆಯೇ ಇರುತ್ತದೆ; ಅಲ್ಲವೆ? ಇದರಂತೆ ನಮ್ಮ ವ್ಯವಹಾರದಲ್ಲೆಲ್ಲ ನಮಗೆ ಪರಮಾತ್ಮನಲ್ಲಿಯೇ ದೃಷ್ಟಿಯಿರಬೇಕು. ಹಾಗಾದರೆ ಪರಮಾತ್ಮನು ನಮ್ಮನ್ನು ತನ್ನಲ್ಲಿಯೇ ಅಡಕಮಾಡಿಕೊಂಡುಬಿಟ್ಟಿರುತ್ತಾನೆ. ಇಲ್ಲದಿದ್ದರೆ ಪ್ರಭವಿಷ್ಣುವಾದ ಆ ಪರಮಾತ್ಮನು ನಮ್ಮನ್ನು ಹೊರಕ್ಕೆ ಹಾಕುವನು. ಅವನು ಹೊರಕ್ಕೆ ಹಾಕಿದರೂ ನಿಜವಾಗಿ ಅವನಲ್ಲಿಯೇ ಇರುವೆವು. ಆದರೆ ಆಗ ನಾವು ಅದನ್ನು ಅರಿಯದೆ ಸಂಕಟಪಡಬೇಕಾಗುವದು.

ಆದ್ದರಿಂದ ನಾವು ಪರಮಾತ್ಮನಿಂದಲೇ ಬಂದವರು, ಅವನಲ್ಲಿಯೇ ಇರತಕ್ಕವರು. ಅವನನ್ನೇ ಸೇರತಕ್ಕವರು; ನಾವು ಎಂದೆಂದಿಗೂ ಪರಮಾರ್ಥದೃಷ್ಟಿಯಿಂದ ಆತನನ್ನು ಬಿಟ್ಟು ಅಗಲಿರುವದೇ ಇಲ್ಲ- ಎಂಬುದನ್ನು ನೆನಪಿನಲ್ಲಿ ಇಟ್ಟಿರಬೇಕು. ಯಾವನು ತನ್ನ ಪರಮಾರ್ಥಸ್ವರೂಪವಾದ ಪರಮಾತ್ಮತತ್ತ್ವವೇ ಜ್ಞೇಯವು ಎಂಬುದನ್ನು ಮರೆಯದಿರುವನೋ ಅವನು ಸತ್ಯಸಂಧನು ಹಾಗಿಲ್ಲದವನು ಆತ್ಮಾಪಹಾರವನ್ನು ಮಾಡಿದ ದೋಷಕ್ಕೆ ಪಾತ್ರನಾಗಿರುವನು. ಆದ್ದರಿಂದ ಈ ಜ್ಞೇಯಸ್ವರೂಪವನ್ನೇ ಯಾವಾಗಲೂ ಚಿಂತಿಸುತ್ತಿರಬೇಕು.



# ೧೨೧. ಎಲ್ಲರ ಹೃದಯದಲ್ಲಿಯೂ ಇರುವ ಆತ್ಮಜ್ಯೋತಿ 13 - (17-18) (20-3-49)

ಜ್ಞೇಯದ ಸ್ವರೂಪವನ್ನು ಬಗೆಬಗೆಯಲ್ಲಿ ನಿರೂಪಿಸಿದ್ದಾಯಿತು. ಈಗ ಅದರ ಸ್ವಭಾವವನ್ನು ತಿಳಿಸುವ ಮತ್ತೊಂದು ಶ್ಲೋಕವನ್ನು ಪರಿಶೀಲಿಸಬೇಕಾಗಿದೆ-

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥ 13-17**

"ಆ ಜ್ಞೇಯವು ಜ್ಯೋತಿಗಳಿಗೆಲ್ಲ ಬೆಳಕು; ತಮಸ್ಸಿಗಿಂತ ಆಚೆ ಇರುವದು. ಪರಮಾತ್ಮತತ್ತ್ವವು ಬೆಳಕು"- ಎಂದು ಅಧ್ಯಾತ್ಮಶಾಸ್ತ್ರದಲ್ಲಿ ಹೇಳಿರುವದನ್ನು ಕೇಳಿ ಮೂಢರಿಗೆ ಪರಮಾತ್ಮನ ಸಾಕ್ಷಾತ್ಕಾರವೆಂದರೆ ಯಾವದೋ ಒಂದು ದೊಡ್ಡ ಬೆಳಕು ಕಾಣಿಸುತ್ತದೆ ಎಂಬ ತಪ್ಪುಭಾವನೆ ಬರುತ್ತದೆ. ಕೆಲವರು `ಸೂರ್ಯ, ಚಂದ್ರ-ಮುಂತಾದವುಗಳಂತೆ ಯಾವದೋ ಒಂದು ಜ್ಯೋತಿಯು ಕಾಣಿಸುವದು, ಅದೇ ಪರಮಾತ್ಮ; ಅದನ್ನು ತೋರಿಸಿಕೊಡುತ್ತೇನೆ' ಎಂದು ಏನೂ ಅರಿಯದ ಮೂಢರನ್ನು ಮರುಳುಗೊಳಿಸುವದುಂಟು. ಪರಮಾತ್ಮನು ಬೆಳಕುಗಳಿಗೆಲ್ಲ ಬೆಳಕು ಎಂದರೆ ಹೇಗೆಂಬುದನ್ನು ಬೃಹದಾರಣ್ಯಕದಲ್ಲಿ ಜನಕಯಾಜ್ಞವಲ್ಕ್ಯರ ಸಂವಾದದಲ್ಲಿ (೪-೩) ತಿಳಿಸಿರುತ್ತದೆ. ಆ ಸಂವಾದದ ಅಭಿಪ್ರಾಯವನ್ನು ಈ ಒಂದು ಶ್ಲೋಕದಲ್ಲಿ ಶಂಕರಾಚಾರ್ಯರು ಅಡಗಿಸಿರುತ್ತಾರೆ.

**ಕಿಂ ಜ್ಯೋತಿಸ್ತವ ಭಾನುಮಾನಹನಿ ಮೇ ರಾತ್ರೌ ಪ್ರದೀಪಾದಿಕಂ**
**ಸ್ಯಾದೇವಂ ರವಿದೀಪದರ್ಶನವಿಧೌ ಕಿಂ ಜ್ಯೋತಿರಾಖ್ಯಾಹಿ ಮೇ ।**
**ಚಕ್ಷುಸ್ತಸ್ಯ ನಿಮೀಲನಾದಿಸಮಯೇ ಕಿಂ ಧೀರ್ಧಿಯೋ ದರ್ಶನೇ**
**ಕಿಂ ತತ್ರಾಹಮತೋ ಭವಾನ್ ಪರಮಕಂ ಜ್ಯೋತಿಸ್ತದಸ್ಮಿ ಪ್ರಭೋ ॥**

`ನಿನಗೆ ಬೆಳಕು ಯಾವದು ? ನನಗೆ ಹಗಲು ಸೂರ್ಯನು, ರಾತ್ರಿಯಲ್ಲಿ ದೀಪವೇ ಮುಂತಾದದ್ದು. ಇದಾಗಬಹುದು. ಸೂರ್ಯನನ್ನೂ ದೀಪವನ್ನೂ ನೋಡುವದಕ್ಕೆ ಯಾವದು ಬೆಳಕು? ಅದನ್ನು ಹೇಳು. ಅದಕ್ಕೆ ಕಣ್ಣೇ ಬೆಳಕು. ಕಣ್ಣು ಮುಚ್ಚಿರುವದೇ ಮುಂತಾದ ಕಾಲದಲ್ಲಿ ಯಾವದು? ಬುದ್ಧಿಯು. ಬುದ್ಧಿಯನ್ನು ನೋಡುವದಕ್ಕೊ? ಅದಕ್ಕೆ ನಾನೇ ಬೆಳಕು. ಆದ್ದರಿಂದ ನೀನು ಪರಮಜ್ಯೋತಿಯೆಂದಾಯಿತು. ಹೌದು, ಪ್ರಭುವೆ, ಅದೇ ನಾನು!"

ಈ ಅಭಿಪ್ರಾಯವನ್ನೇ ಇಲ್ಲಿ ಜ್ಯೋತಿಗಳಿಗೆಲ್ಲ ಜ್ಯೋತಿ - ಎಂಬ ಶ್ಲೋಕಭಾಗದಲ್ಲಿ ತಿಳಿಸಿರುತ್ತದೆ. ಬೆಳಕಿನಲ್ಲಿಯೇ ಎಲ್ಲರೂ ವ್ಯವಹಾರಮಾಡುತ್ತಾರೆಂಬುದು ಸುಪ್ರಸಿದ್ಧ; ಬೆಳಕಿಲ್ಲದೆ ಯಾವ ವ್ಯವಹಾರವೂ ಸಾಗುವದಿಲ್ಲ. ಆದರೆ ಬೆಳಕು ಕುರುಡರ ವ್ಯವಹಾರಕ್ಕೆ ಉಪಯೋಗವಿಲ್ಲ. ಆದ್ದರಿಂದ ಬೆಳಕನ್ನು ತೋರಿಸುವದರಿಂದ ಕಣ್ಣು ಆ ಬೆಳಕಿಗೂ ಬೆಳಕಾಯಿತು. ಯಾವದು ತೋರಿಸುವದೋ ಅದೇ ಬೆಳಕು. ಆದರೆ ಕಣ್ಣು ಮುಂತಾದ ಇಂದ್ರಿಯಗಳ ಬಲಾಬಲಗಳನ್ನೂ

ಆಗುಹೋಗುಗಳನ್ನೂ ತಿಳಿಸುವದು ಯಾವದು? ಅದನ್ನು ತಿಳಿಸಿಕೊಡುವದು ಮನಸ್ಸು. ಆದ್ದರಿಂದ ಮನಸ್ಸೆಂಬುದು ಕಣ್ಣು ಮುಂತಾದ ಇಂದ್ರಿಯಗಳಿಗೂ ಬೆಳಕಾಯಿತು. ಆದರೆ ಮನಸ್ಸು ಸುಷುಪ್ತನಾದವನಿಗೆ ಇರುವದೇ ಇಲ್ಲ; ಆಗ ಇಂದ್ರಿಯಗಳನ್ನಾಗಲಿ ಹೊರಗಿನ ಬೆಳಕನ್ನಾಗಲಿ ಉಪಯೋಗಿಸುವದಕ್ಕೆ ಆಗುವದಿಲ್ಲ. ಈ ಮನಸ್ಸು ಇರುವದನ್ನೂ ಇಲ್ಲದ್ದನ್ನೂ, ಅದು ಹಿಗ್ಗುವದನ್ನೂ ಕುಗ್ಗುವದನ್ನೂ ಅದರ ವ್ಯಾಪಾರಗಳೆಲ್ಲವನ್ನೂ ಅರಿಯುವದು ಯಾವದು? ಅದೇ ನಮ್ಮೆಗಳಲ್ಲಿರುವ ಆತ್ಮನಾಗಿರುವ ಸಾಕ್ಷಿಚೈತನ್ಯವು. ಅದೇ ಆತ್ಮಜ್ಯೋತಿ.

ಆತ್ಮಜ್ಯೋತಿಯು ಸ್ವತಂತ್ರವಾಗಿರತಕ್ಕದ್ದು. ಅದು ಸ್ವಯಂಜ್ಯೋತಿ, ತಾನೇ ಜ್ಯೋತಿಯಾಗಿದೆ, ಮತ್ತೊಂದು ಬೆಳಕಿನಿಂದ ಬೆಳಗತಕ್ಕದ್ದಲ್ಲ. ಚಂದ್ರನ ಬೆಳಕು ಸೂರ್ಯನಿಂದ ಎರವುತೆಗೆದುಕೊಂಡದ್ದು, ಸೂರ್ಯನದು ಸ್ವಂತ ಬೆಳಕು - ಎಂದು ಜ್ಯೋತಿಃಸಿದ್ಧಾಂತಿಗಳು ಹೇಳುತ್ತಾರೆ. ಇದು ಹೇಗೋ ಹಾಗೆಯೇ ಆತ್ಮಜ್ಯೋತಿಯ ಬೆಳಕು ತನ್ನದೇ ಆದ ಬೆಳಕು, ಮಿಕ್ಕ ಮನಸ್ಸು, ಇಂದ್ರಿಯಗಳು, ಹೊರಗಿನ ಸೂರ್ಯ, ಚಂದ್ರ, ನಕ್ಷತ್ರ, ಮಿಂಚು, ಬೆಂಕಿ-ಮುಂತಾದವುಗಳ ಬೆಳಕೆಲ್ಲ ಇದಕ್ಕೆ ಅಧೀನವಾದದ್ದು. ಆ ಬೆಳಕೆಲ್ಲ ನಿಜವಾಗಿ ಆತ್ಮನದೇ. ಬಿಸಿನೀರಿನ ಬಿಸಿಯು ನೀರಿನದಲ್ಲ, ಬೆಂಕಿಯದು. ಅಲ್ಲವೆ? ಇದರಂತೆ ಲೋಕದಲ್ಲಿ ಬೆಳಕುಗಳೆಂದು ನಾವು ವ್ಯವಹರಿಸುವ ಪದಾರ್ಥಗಳ ಬೆಳಕೆಲ್ಲ ಈ ಪರಮಾತ್ಮನದೇ. `ಸಾಹುಕಾರರ ಸಾಹುಕಾರನಿವನು' ಎಂದರೆ ಎಲ್ಲಾ ಸಾಹುಕಾರರುಗಳಿಗೂ ಸಾಲಕೊಡುವವನು ಎಂದರ್ಥ; ಅವರ ಸಾಹುಕಾರಿಕೆಯಲ್ಲ ಇವನದೇ ಎಂದರ್ಥ. ಹಾಗೆಯೇ ಆತ್ಮನು ಜ್ಯೋತಿಗಳಿಗೆಲ್ಲ ಜ್ಯೋತಿ! ಅವನಲ್ಲಿ ಯಾವ ಅಜ್ಞಾನದ ಕತ್ತಲೆಯೂ ಇಲ್ಲ.

`ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ' ಯಾವದನ್ನು ಅರಿತರೆ ಅಮೃತತ್ವವನ್ನು ಹೊಂದುತ್ತಾರೋ ಆ ಜ್ಞೇಯವನ್ನು ಹೇಳುತ್ತೇನೆ ಎಂದು ಭಗವಂತನು ಹೇಳಿದ್ದನಲ್ಲ, ಇಗೋ ಈ ಆತ್ಮಜ್ಯೋತಿಯೇ ಆ ಜ್ಞೇಯವು. ಇದೇ ಜ್ಞೇಯವು; ಇದನ್ನರಿತರೆ ಎಲ್ಲವನ್ನೂ ಅರಿತಂತೆ ಆಗುವದು. ಇದರ ಬೆಳಕಿಲ್ಲದೆ ಯಾವದೊಂದರ ವ್ಯವಹಾರವೂ ಆಗುವದಿಲ್ಲ; ಯಾವದಾದರೊಂದು ಪದಾರ್ಥವು ಇದೆಯೆಂದು ತಿಳಿಯಲು ಇದರ ಸತ್ತೆ ಬೇಕು, ಇದರ ಬೆಳಕು ಬೇಕು. ಯಾವದು ಆತ್ಮನ ಬೆಳಕಿಗೆ ಕಾಣುತ್ತದೆಯೋ ಅದು ಇದೆ, ಯಾವದು ಕಾಣುವದಿಲ್ಲವೋ ಅದು ಇಲ್ಲ, ಇವನು ಸನ್ಮಾತ್ರನು, ಎಂದರೆ ಬರಿಯ ಇರವಿನ ಸ್ವರೂಪದವನು; ಇವನು ಚಿನ್ಮಾತ್ರನು, ಎಂದರೆ ಬರಿಯ ಜ್ಞಾನದ ಸ್ವರೂಪದವನು. `ನಾರಾಯಣಂ ಮಹಾಜ್ಞೇಯಮ್' ಎಂದಂತೆ ಇವನೇ ಮಹಾಜ್ಞೇಯನು; ಇವನಿಂದಾಚೆಗೆ ಜ್ಞೇಯವೆಂಬುದಿಲ್ಲ. ಈ ಜ್ಞೇಯದಲ್ಲಿ ಎಲ್ಲಾ ಪುಡಿಜ್ಞೇಯಗಳೂ ಅಡಕವಾಗಿರುವವು.

ಈ ಜ್ಞೇಯವನ್ನು ಅರಿತರೆ ನಾವು ಅಮೃತರಾಗುವೆವು; ವ್ಯವಹಾರದಲ್ಲಿ ಉಳಿದ ಜ್ಞೇಯಗಳನ್ನು ನಂಬಿ ನಾವು ಮರ್ತ್ಯರಾಗಿರುವೆವು. ಒಂದು ಜಿಂಕೆಯು ತನ್ನ ತೆಳ್ಳನೆಯ ಕಾಲುಗಳನ್ನು

ತಿರಸ್ಕಾರದಿಂದ ಕಾಣುತ್ತಿತ್ತಂತೆ; ತನ್ನ ಕವಲುಕವಲಾಗಿದ್ದ ಕೊಂಬುಗಳನ್ನು ನೀರಿನಲ್ಲಿ ಮಾರುಹೋಳೆದಿರುವದನ್ನು ಕಂಡು ಹಿಗ್ಗುತ್ತಿತ್ತಂತೆ. ಅಷ್ಟರಲ್ಲಿ ಬೇಟೆಯ ನಾಯಿ ಬಗುಳಿದ ಧ್ವನಿಯು ಕೇಳಿಸಿತಂತೆ. ಕೂಡಲೆ ಅದು ಚಂಗನೆ ಹಾರಿ ದೂರಕ್ಕೆ ಓಡಿಹೋಯಿತು. ಆದರೆ ಅದರ ಕೊಂಬುಗಳು ಗಿಡಗಳ ಪೊದರಿಗೆ ಸಿಕ್ಕಿಕೊಂಡವು, ನಾಯಿಗಳಿಗೆ ಅದು ಸಿಕ್ಕಿಬಿತ್ತು! ಕೊಂಬುಗಳನ್ನು ನಂಬಿ ಜಿಂಕೆ ನಾಯಿಗಳಿಗೆ ಸಿಕ್ಕಿ ಕೆಟ್ಟಂತೆ ನಾವು ವ್ಯವಹಾರದಲ್ಲಿ ರಮಣೀಯವಾಗಿ ಶಾಖೋಪಶಾಖೆಗಳಾಗಿ ತೋರುವ ಸಂಸಾರದ ಪುಡಿಜ್ಞೇಯಗಳನ್ನು ನಂಬಿ ಮರ್ತ್ಯರಾಗಿರುತ್ತೇವೆ. ಆದರೆ ನಿಜವಾಗಿ ನಮ್ಮನ್ನು ಕೊನೆಗೂ ಬದುಕಿಸುವದು ಪರಮಾತ್ಮನ ಸ್ಮರಣೆಯೇ. ಆ ಮಹಾಜ್ಞೇಯನಾಗಿರುವ ಪರಮಾತ್ಮನನ್ನು ನಂಬಿದರೆ ಮಾತ್ರ ಅಮೃತರಾಗುತ್ತೇವೆ.

ಪರಮಾತ್ಮನ ನೆನಪು ನಮಗೆ ಒಂದಲ್ಲ ಒಂದು ಕಾಲದಲ್ಲಿ ಬರಬೇಕು. ಆಗಲೇ ನಾವು ಅಮೃತರಾಗುವೆವು. ದೀನದಯಾಳುವಾದ ಪರಮಾತ್ಮನು ನಮ್ಮ ಹೊರಗೆ ಮರ್ತ್ಯತ್ವಕ್ಕೆ ಕಾರಣವಾಗಿರುವ ಪುಡಿಜ್ಞೇಯಗಳನ್ನೂ ತೋರಿಸುತ್ತಿದಾನೆ; ಒಳಗೆ ತಾನೇ ಕೂತುಕೊಂಡು ಅಮೃತತ್ವಕ್ಕೆ ಹಾದಿಯನ್ನೂ ತೋರಿಸುತ್ತಿದಾನೆ; `ಈ ಸಣ್ಣ ಸಣ್ಣ ಜ್ಞೇಯಗಳನ್ನು ತಿಳಿದು ಅಜ್ಞಾನದ ತಮಸ್ಸಿನಲ್ಲಿಯೇ ತಡಕಾಡುತ್ತಾ ಮರ್ತ್ಯರಾಗಿರುವದು ಮೇಲೊ, ಅಥವಾ ನಿಮ್ಮ ನಿಮ್ಮ ಒಳಗೇ ಇದ್ದುಕೊಂಡು ಅರಿತಮಾತ್ರದಿಂದ ಅಜ್ಞಾನದ ಮೂಲವನ್ನೇ ಕತ್ತರಿಸಿ ಅಮೃತತ್ವವನ್ನು ಸೂರೆಗೊಡುವ ನನ್ನ ಸ್ವರೂಪದಲ್ಲಿ ನಿಷ್ಠೆಯನ್ನು ಪಡೆಯುವದು ಮೇಲೊ, ಯೋಚಿಸಿರಿ!" ಎಂದು ಹೇಳುವಂತೆ ಹೀಗೆ ನಮ್ಮೆಲ್ಲರ ಹೃದಯಲ್ಲಿಯೇ ತನ್ನ ಚೈತನ್ಯಜ್ಯೋತಿಯ ಬೆಳಕನ್ನು ಬೀರುತ್ತಾ ಕುಳಿತಿರುತ್ತಾನೆ! ಆತನ ಸ್ವರೂಪವನ್ನೇ ನಾವು ತಿಳಿದುಕೊಳ್ಳುವದಕ್ಕೆ ಪ್ರಯತ್ನವನ್ನು ಮಾಡಬೇಕು; ಆ ಮಹಾಜ್ಞೇಯವನ್ನು ತಿಳಿದುಕೊಳ್ಳದಿದ್ದರೆ ಮಿಕ್ಕ ನಮ್ಮ ತಿಳಿವಳಿಕೆಯೆಲ್ಲವೂ ವ್ಯರ್ಥ.

`ಸಿದ್ಧಮನ್ನಂ ಪರಿತ್ಯಜ್ಯ ಭಿಕ್ಷಾಮಟತಿ ದುರ್ಮತಿಃ' ಎಂಬಂತೆ ಪರಮಾತ್ಮನು ನಮಗೆ ಎಲ್ಲವನ್ನೂ ಅನುಗ್ರಹಿಸಿದ್ದರೂ ಅದನ್ನು ನಾವು ಉಪಯೋಗಿಸಿಕೊಳ್ಳದೆ ಈ ದೀನಾವಸ್ಥೆಗೆ ಇಳಿದಿರುತ್ತೇವೆ. ಒಬ್ಬ ರಾಜನು ಒಬ್ಬ ಸುಂದರಳಾದ ತಿರುಕಸ್ತ್ರೀಯನ್ನು ಕಂಡು ಮೋಹಿಸಿ ಮದುವೆಯಾದನಂತೆ. ಆಕೆಯು ಅವನ ರಾಣಿಯಾದ ಮೇಲೂ ತಾನು ಊಟಮಾಡುವಾಗ ತಾನಿರುವ ಕೋಣೆಯ ಬಾಗಿಲು ಕದವನ್ನು ಮುಚ್ಚಿಕೊಂಡು ಯಾರಿಗೂ ಅರಿಯದಂತೆ ಗುಟ್ಟಿನಲ್ಲಿ ಒಳಗಿದ್ದ ಗೋಡೆಗಳನ್ನೂ ಕಂಬಗಳನ್ನೂ `ಅನ್ನ ಕೊಡಿರಮ್ಮ!' ಎಂದು ತಿರುಪೆ ಬೇಡುತ್ತಿದ್ದಳಂತೆ! ಹೀಗಿದೆ, ನಮ್ಮ ಪಾಡು! "ಜ್ಞಾನವೂ ಜ್ಞೇಯವೂ ಜ್ಞಾನಗಮ್ಯವೂ ಎಲ್ಲರ ಹೃದಯದಲ್ಲಿಯೂ ಇದೆ" ಎಂದು ಭಗವಂತನು ಇಲ್ಲಿ ಘೋಷಣೆಮಾಡಿರುತ್ತಾನೆ. ಜ್ಞಾನವೆಂದರೆ ಅಮಾನಿತ್ವ, ಅದಂಭಿತ್ವ ಮುಂತಾದ ಜ್ಞಾನಸಾಧನವು, ಜ್ಞೇಯವೆಂದರೆ ಈ ಪರಮಾತ್ಮತತ್ತ್ವವೇ: ಜ್ಞಾನಗಮ್ಯವೆಂದರೆ ಜ್ಞಾತವಾಗಿ ಜ್ಞಾನಫಲವಾಗಿ ನಮ್ಮ ಸ್ವರೂಪವೇ ಆಗಿ ಸಿಕ್ಕಿರುವ ಜ್ಞೇಯವು. ಈ ಮೂರು ಎಲ್ಲರ ಹೃದಯದಲ್ಲಿಯೂ ವಿಶೇಷವಾಗಿ ಇದ್ದುಕೊಂಡಿರುತ್ತದೆ. ಯಾರು ಬೇಕಾದರೂ ಇದನ್ನು ತಿಳಿದುಕೊಳ್ಳಬಹುದು. ಸರಿಯಾದ ಪ್ರಯತ್ನವನ್ನು ಮಾಡಿದರೆ

ಪರಮಾತ್ಮನೇ ನಮಗೆ ಸಹಾಯಕನಾಗಿ ನಮಗೆ ತನ್ನ ತತ್ತ್ವವನ್ನು ತಿಳಿಸಿಕೊಡುವದಕ್ಕೆ ಸಿದ್ಧನಾಗಿರುತ್ತಾನೆ. ಈಗಲೇ ಇಲ್ಲಿಯೇ ನಮ್ಮೊಳಗೇ ಇರುತ್ತಾನೆ. ಹೀಗಿದ್ದರೂ ನಾವು ಹೊರಗಣ್ಣಿನಿಂದ ವ್ಯವಹಾರದಲ್ಲಿಯೇ ಮುಳುಗಿ ತಿಳಿದುಕೊಳ್ಳಬೇಕಾದ ಜ್ಞೇಯವನ್ನು ತಿಳಿಯದೆ ಕೆಟ್ಟುಹೋಗುತ್ತಿದ್ದೇವೆ. !

ಇಲ್ಲಿಯವರೆಗೆ ಕ್ಷೇತ್ರ ಕ್ಷೇತ್ರಜ್ಞಯಾಥಾತ್ಮ್ಯವನ್ನು ವಿವರಿಸಿದಂತೆ ಆಯಿತು. ಆದ್ದರಿಂದ ಭಗವಂತನು ಹೇಳುತ್ತಾನೇನೆಂದರೆ :

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ 13-18**

ಹೀಗೆ ಕ್ಷೇತ್ರವನ್ನೂ ಜ್ಞಾನವನ್ನೂ ಜ್ಞೇಯವನ್ನೂ ಸಂಗ್ರಹವಾಗಿ ಹೇಳಿದ್ದಾಯಿತು. ಮನುಷ್ಯನಿಗೆ ಎರಡು ಹಾದಿಗಳು ಸಿದ್ಧವಾಗಿರುವವು. ಒಂದು ಶ್ರೇಯಸ್ಸಿನ ಹಾದಿ, ಮತ್ತೊಂದು ಪ್ರೇಯಸ್ಸಿನ ಹಾದಿ. ಯಾರು ಪರಮಾತ್ಮನನ್ನೇ ವರಿಸುವರೋ ಅವರು ಶ್ರೇಯಸ್ಸಿನ ಹಾದಿಯನ್ನು ತುಳಿದಂತೆ. ಆದರೆ ಮತ್ತೊಂದು ಹಾದಿಯುಂಟು ; ಅದೇ ಪ್ರೇಯಸ್ಸುಗಳ ಹಾದಿ. ಅದರಲ್ಲಿ **"Trespassers will be prosecuted"** (ಇಲ್ಲಿ ಅತಿಕ್ರಮಪ್ರವೇಶಮಾಡಿದವರನ್ನು ದಸ್ತಗಿರಿಮಾಡಲಾಗುವದು) ಎಂದು ಬೋರ್ಡು ಹಾಕಿರುತ್ತದೆ. ಆದರೂ ಜನರು ಸ್ವೇಚ್ಛಾವಿಹಾರಿಗಳಾಗಿ ಸುಖವನ್ನು ಪಡೆದುಕೊಳ್ಳುತ್ತೇವೆಂದು ಹವಣಿಸುತ್ತಾರೆ. ಯೌವನದಲ್ಲಿ ಸ್ವೇಚ್ಛೆಯಿಂದ ವಿಹರಿಸಿ ವಾರ್ಧಕದಲ್ಲಿ ಅನೇಕ ವ್ಯಾಧಿಗಳಿಂದ ಸಂಕಟಪಡುವವರನ್ನು ನಾವು ಎಷ್ಟು ಜನರನ್ನು ನೋಡಿಲ್ಲ ! ಪರಿಣಾಮದಿಂದ ಸೌಖ್ಯವನ್ನು ಅಳೆಯಬೇಕೇ ಹೊರತು ತತ್ಕಾಲದಲ್ಲಿ ಪ್ರಿಯವಾಗುವದನ್ನು ಸುಖವೆಂದು ಭ್ರಾಂತಿಪಡಬಾರದು. ಈ ಸ್ಥೂಲಶರೀರವು ಮಾತ್ರ ಕ್ಷೇತ್ರವಲ್ಲ, ಇಚ್ಛಾದ್ವೇಷಾದಿರೂಪವಾಗಿರುವ ಸೂಕ್ಷ್ಮಶರೀರವೂ ಕ್ಷೇತ್ರವೇ. ಕ್ಷೇತ್ರವು ನಾವಲ್ಲ; ಅದನ್ನು ನಾನೆಂದು ಭ್ರಮಿಸಿ, ಅದರ ಸುಖದುಃಖಗಳಿಂದ ಸುಖದುಃಖಗಳನ್ನು ಪಡೆದೆವೆಂದು ತಿಳಿಯುವದು ಜ್ಞಾನವಲ್ಲ, ಅದೆಲ್ಲ ಅಜ್ಞಾನವೇ.

ಆದ್ದರಿಂದ ಅಜ್ಞಾನದಿಂದ ಕ್ಷೇತ್ರವನ್ನೇ ನಾನೆಂದು ತಿಳಿಯುವ ಪ್ರೇಯಸ್ಸಿನ ಮಾರ್ಗವನ್ನು ಬಿಟ್ಟು ಹಿಂತಿರುಗಬೇಕು. ಅಮಾನಿತ್ವವೇ ಮುಂತಾದ ಜ್ಞಾನಸಾಧನಗಳನ್ನು ಅಭ್ಯಾಸಮಾಡಬೇಕು. ನಮ್ಮ ಹೃದಯದಲ್ಲಿಯೇ ಇದ್ದುಕೊಂಡಿರುವ ಸರ್ವವ್ಯಾಪಿಯಾದ ಮಹಾಜ್ಞೇಯನಾದ ಪರಮಾತ್ಮನೇ ಕ್ಷೇತ್ರಜ್ಞನ ಪರಮಾರ್ಥಸ್ವರೂಪವೆಂಬುದನ್ನು ಅರಿತುಕೊಳ್ಳಬೇಕು.

ಇದನ್ನು ಯಾವನು ಅರಿತುಕೊಳ್ಳುವದಕ್ಕೆ ಅಧಿಕಾರಿಯು ? ಎಂದರೆ ಯಾವನು ಪರಮಾತ್ಮನ ಭಕ್ತನೋ ಅವನು. 'ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ'-ನನ್ನ ಭಕ್ತನು ಇದರ ವಿಜ್ಞಾನವನ್ನು ಹೊಂದಿ ನನ್ನ ಭಾವವನ್ನು ಪಡೆಯಲು ತಕ್ಕವನಾಗುತ್ತಾನೆ - ಎಂದಿದಾನೆ, ಭಗವಂತ ! ಅರ್ಜುನನ ಸ್ಥಾನದಲ್ಲಿ ನಾವು ನಿಲ್ಲಬೇಕು ; ಈ ವಾಕ್ಯವನ್ನು

ಏಕಾಗ್ರಚಿತ್ತದಿಂದ ಆಲೈಸಬೇಕು. ಪರಮಾತ್ಮನು ನಮಗೇ ಈ ಉಪದೇಶವನ್ನು ಮಾಡುತ್ತಿದ್ದಾನೆ ಎಂದು ಭಾವಿಸಬೇಕು. ಈ ಶ್ರವಣದಿಂದ ತಿಳಿವನ್ನು ಮನಸ್ಸಿನಲ್ಲಿಯೇ ಹೊರಳಾಡಿಸಬೇಕು. ಪರಮಾತ್ಮನಲ್ಲಿಯೇ ಅನನ್ಯಭಕ್ತಿಯಿಂದ ಇದನ್ನು ಶ್ರವಣಮಾಡಿ, ಶ್ರವಣಮಾಡಿದ್ದನ್ನು ಮನನಮಾಡಿ ಇದನ್ನು 'ವಿಜ್ಞಾಯ' ಎಂದರೆ ವಿಶೇಷರೀತಿಯಿಂದ ತಿಳಿದುಕೊಂಡರೆ - ಒಬ್ಬರಿಗೆ ಆಗಿರುವ ಸಂತೋಷವನ್ನು ನಾವು ಸಾಮಾನ್ಯರೀತಿಯಿಂದ ಊಹಿಸಿ ತಿಳಿದುಕೊಳ್ಳಬಹುದು ; ಆದರೆ ನಮಗೇ ಆಗಿರುವ ಸಂತೋಷವನ್ನು ನಾವು ನೇರವಾಗಿಯೇ ವಿಶೇಷರೂಪದಿಂದ ಇದೇ ಅದು ಎಂದು ತಿಳಿದುಕೊಳ್ಳುತ್ತೇವಲ್ಲವೆ? ಹಾಗೆ 'ಇದೇ ಕ್ಷೇತ್ರವು, ಇದು ಅಮಾನಿತ್ವಾದಿಜ್ಞಾನದ ಸ್ವರೂಪವು ' ಎಂದು ವಿಶೇಷರೂಪದಿಂದ ಅರಿತುಕೊಂಡರೆ - ಪರಮಾತ್ಮಭಾವಕ್ಕೆ ತಕ್ಕವನಾಗುತ್ತಾನೆ, ಉಳಿದ ತಪ್ಪುಭಾವವನ್ನೆಲ್ಲ ಬಿಟ್ಟು, ಪರಮಾತ್ಮಸ್ವರೂಪದಲ್ಲಿಯೇ ನಿಷ್ಠೆಯನ್ನು ಪಡೆಯುತ್ತಾನೆ, ಎಂದರೆ ಮುಕ್ತಿಯನ್ನೇ ಪಡೆಯುತ್ತಾನೆ.

ಆದ್ದರಿಂದ ವೀರನಾದವನು ಯುದ್ಧಕ್ಕೆ ಕತ್ತಿಯೇ ಮುಂತಾದ ಆಯುಧಗಳನ್ನು ಸಾಣೆಹಿಡಿಸಿ ಸಿದ್ಧವಾಗಿಟ್ಟುಕೊಳ್ಳುವಂತೆ ವಿವೇಕಿಯಾದವನು ಅಮಾನಿತ್ವವೇ ಮುಂತಾದ ಜ್ಞಾನಸಾಧನಗಳಿಂದ ಅಂತಃಕರಣಕ್ಕೆ ಸಂಸ್ಕಾರವನ್ನು ತಂದುಕೊಂಡು ಪರಮಾತ್ಮಸಾಕ್ಷಾತ್ಕಾರಕ್ಕೆ ಸಜ್ಜಾಗಬೇಕು.



## ೧೨೨. ಭಕ್ತಿಯೇ ಪರಮಾತ್ಮಜ್ಞಾನಕ್ಕೆ ಸಾಧನ 13 - (18)

**(27-3-49)**

ಆತ್ಮಜ್ಞಾನಕ್ಕೆ ಸಾಧನವಾದ ಅಮಾನಿತ್ವಾದಿಗಳನ್ನು ಹೇಳಿ ಭಗವಂತನು 'ಜ್ಞಾನವೂ ಜ್ಞೇಯವೂ ಜ್ಞಾನಗಮ್ಯವೂ ಎಲ್ಲರ ಹೃದಯದಲ್ಲಿಯೂ ಇದ್ದುಕೊಂಡಿರುತ್ತದೆ' ಎಂದು ಉಪಸಂಹಾರಮಾಡಿರುತ್ತಾನೆ. ಅಮಾನಿತ್ವಾದಿಗಳಿಗೆ ಜ್ಞಾನವೆಂದು ಹೆಸರು ; ಏಕೆಂದರೆ ಅವುಗಳಿದ್ದರೇ ಜ್ಞಾನವು ಬರುತ್ತದೆ, ಇಲ್ಲದಿದ್ದರೆ ಇಲ್ಲ; ಅಮಾನಿತ್ವಾದಿಗಳಿಗೆ ವ್ಯತಿರಿಕ್ತವಾದದ್ದು, ಇದಕ್ಕಿಂತ ಬೇರೆಯ ಹಾದಿಯಲ್ಲಿ ಹೊರಟಿರುವದು, ಯಾವದಾದರೂ ಅಜ್ಞಾನವೇ ಎಂದು ನಿಶ್ಚಯವಾಗಿ ತಿಳಿಯಬೇಕು. ಈ ಅಮಾನಿತ್ವಾದಿಜ್ಞಾನಸಾಧನಗಳಿಂದ ಕೂಡಿದವನು ಅರಿಯಬೇಕಾಗಿರುವದೇ ಜ್ಞೇಯವು; ಆ ಜ್ಞೇಯವೇ ಜ್ಞಾತವಾದರೆ ಜ್ಞಾನಗಮ್ಯವೆನಿಸುತ್ತದೆ. ಇದು ಎಲ್ಲರ ಹೃದಯದಲ್ಲಿಯೂ ಇದೆ; ಆದ್ದರಿಂದ ನಿನ್ನ ಹೃದಯದಲ್ಲಿಯೂ ಇದೆ; ಆದ್ದರಿಂದ ನೀನೂ ಇದನ್ನು ಅರಿತುಕೊಳ್ಳಬಹುದು- ಎಂದಿರುತ್ತಾನೆ.

ಆ ಬಳಿಕ `ಈ ರೀತಿಯಲ್ಲಿ ಕ್ಷೇತ್ರವನ್ನೂ ಜ್ಞಾನವನ್ನೂ ಜ್ಞೇಯವನ್ನೂ ಸಂಗ್ರಹವಾಗಿ ಹೇಳಿರುತ್ತೇನೆ' ಎಂದಿರುತ್ತಾನೆ. ಕ್ಷೇತ್ರವೆಂದರೆ ಮಹಾಭೂತಗಳಿಂದ ಹಿಡಿದು ಧೃತಿ - ಎಂಬವರೆಗೆ

ವಿವರಿಸಿ ಹೇಳಿದ ಅನಾತ್ಮವು. ಅದು ಆತ್ಮನಲ್ಲ ಎಂಬುದು ತಪ್ಪುತಿಳಿವಳಿಕೆಯನ್ನು ತೊಲಗಿಸುವದಕ್ಕಾಗಿ ಹೇಳಿದ್ದು. ಇನ್ನು ಜ್ಞಾನವೆಂದರೆ ಅಮಾನಿತ್ವದಿಂದ ಹಿಡಿದು ತತ್ತ್ವಜ್ಞಾನಾರ್ಥದರ್ಶನವೆಂಬವರೆಗಿನ ಸಾಧನಗಳು ; ಅವುಗಳಿಂದಲೇ ಜ್ಞಾನವಾಗುವದರಿಂದ ಅವನ್ನು ಜ್ಞಾನವೆಂದಿದೆ. ಅವುಗಳನ್ನು ಮುಮುಕ್ಷುವಾದವನು ಕೈಗೊಳ್ಳಬೇಕಾಗಿರುವದರಿಂದ ಹೇಳಿರುತ್ತದೆ. ಇನ್ನು ಜ್ಞೇಯವೆಂದರೆ ಅರಿಯಬೇಕಾದ ಪರಮಾರ್ಥತತ್ತ್ವವು. ಯಾವದನ್ನು ತಿಳಿಯದೆ ಅರ್ಜುನನು ಶೋಕಿಸುತ್ತಿದ್ದನೋ ಯಾವದನ್ನು ತಿಳಿಯುವದಕ್ಕಾಗಿ ಅಮಾನಿತ್ವಾದಿ ಸಾಧನಗಳು ಅತ್ಯಂತವಾಗಿ ಅವಶ್ಯವಾಗಿರುವವೋ ಅದೇ ಜ್ಞೇಯವು. ಗೀತೆಯಲ್ಲಿ ಹೇಳಿರುವದನ್ನೆಲ್ಲ ಈ ಮೂರರಲ್ಲಿ ಅಡಕಮಾಡಿಬಿಡಬಹುದು.

ಇನ್ನು `ಇದನ್ನು ನನ್ನ ಭಕ್ತನಾದವನು ವಿಶೇಷವಾಗಿ ಅರಿತುಕೊಂಡು ನನ್ನ ಭಾವವನ್ನು ಪಡೆಯುತ್ತಾನೆ' ಎಂದು ಭಗವಂತನು ಹೇಳಿರುವದನ್ನು ಈ ದಿನ ಮತ್ತೆ ಸ್ವಲ್ಪ ವಿವರಿಸಿ ತಿಳಿದುಕೊಳ್ಳುವದಕ್ಕೆ ಪ್ರಯತ್ನಮಾಡೋಣ. `ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ' ಎಂದು ಅಮಾನಿತ್ವಾದಿಗಳಲ್ಲಿಯೇ ಇದನ್ನು ಹೇಳಿದ್ದರೂ ಈ ಸಾಧನವು ಇಲ್ಲದೆಯೂ ಅಮಾನಿತ್ವಾದಿಗಳಿಂದ ಜ್ಞೇಯವನ್ನು ಅರಿತುಕೊಳ್ಳಬಹುದು ಎಂದು ಯಾವನಾದರೂ ಭ್ರಾಂತನಾದಾನೆಂದು ಇಲ್ಲಿ ಮತ್ತೆ ಅದನ್ನೇ ವಿಂಗಡಿಸಿ ಹೇಳಿರುತ್ತದೆ. ಅಮಾನಿತ್ವಾದಿಗಳು ಭಗವದ್ಭಕ್ತಿಯಿಂದಲೇ ಸಂಪೂರ್ಣವಾಗಿ ವಶವಾಗುತ್ತವೆ. ಆದ್ದರಿಂದ ಭಕ್ತಿಪೂರ್ವಕವಾಗಿಯೇ ಅಮಾನಿತ್ವ, ಭಕ್ತಿಪೂರ್ವಕವಾಗಿಯೇ ಅದಂಭಿತ್ವ ಎಂದು ಹಿಂದೆಯೇ ಹೇಳಿರುತ್ತಾನೆ. ಆದ್ದರಿಂದಲೇ ಭಗವಂತನು `ನನ್ನ ಭಕ್ತನು ಅರಿತುಕೊಳ್ಳುವನು 'ಎಂದಿರುತ್ತಾನೆ.

ಅಧ್ಯಾತ್ಮಶಾಸ್ತ್ರಗಳಲ್ಲೆಲ್ಲ ಪರಮಪುರುಷಾರ್ಥವನ್ನು ಪಡೆಯುವದಕ್ಕೆ ಇಂಥಿಂಥ ಸಾಧನವನ್ನು ಮಾಡಬೇಕು - ಎಂದು ಹೇಳಿರುತ್ತದೆಯಷ್ಟೆ. ಆ ಸಾಧನಗಳು ನಾವು ಬಯಸಿದ ಮಾತ್ರದಿಂದ ಅಳವಡುವದಿಲ್ಲ. ಉದಾಹರಣೆಗೆ ಆರ್ಜವವೆಂದರೆ ಮನೋವಾಕ್ಕಾಯಗಳಲ್ಲಿ ಒಂದೇ ಪ್ರಕಾರದಿಂದ ಇರುವಿಕೆ. ಇದು ನಮ್ಮ ಸ್ವಪ್ರಯತ್ನದಿಂದ ಮಾತ್ರ ಮಾಡಿದರೆ ನಮ್ಮೆಲ್ಲರಿಗೂ ಅಳವಡಲಾರದು. ಎಲ್ಲಿಯೋ ಕೆಲವರು ಮಹಾತ್ಮರಲ್ಲಿ ಮಾತ್ರ ಇಂಥ ಸಾಧನಗಳು ಪರಿಪೂರ್ಣವಾಗಿ ಕಂಡುಬರಬಹುದು. ಇದಕ್ಕೆ ಕಾರಣವೇನು? ಎಂದರೆ ಒಂದಾನೊಂದು ಪ್ರಕೃತಿಯ ನಿಯಮವಿದೆ. ಆ ನಿಯಮವನ್ನು ಅರಿಯದೆ ಇದ್ದರೆ ಮಾಡುವ ಪ್ರಯತ್ನಗಳಿಗೆಲ್ಲ ಅಡ್ಡಿಯಾಗುತ್ತದೆ. ಇಡಿಯ ಜಗತ್ತಿನ ಆಗುಹೋಗುಗಳ ನಿಯಮಗಳನ್ನು ಭಗವಂತನೇ ನಿರ್ಮಿಸಿರುತ್ತಾನೆ; ಆ ನಿಯಮಗಳನ್ನು ಅನುಸರಿಸಿ ಹೋಗುವವರಿಗೆ ಯಾವ ಅಡ್ಡಿಯೂ ಇರುವದಿಲ್ಲ. ಸ್ವಪ್ರಯತ್ನದಿಂದ ಕಾರ್ಯಸಾಧನೆಯನ್ನು ಮಾಡಿಕೊಳ್ಳುವೆನೆಂದು ಸಂಕಲ್ಪಿಸುವವರಿಗೆ ಮಾತ್ರ ಬಗೆಬಗೆಯ ಅಡ್ಡಿಗಳು ಹಾದಿಯಲ್ಲಿ ಕಾಣಿಸಿಕೊಳ್ಳುತ್ತವೆ. ಯಾರು ಭಗವಂತನನ್ನೇ ಶರಣುಹೊಂದುವರೋ ಅವರಿಗೆ ಭಗವಂತನ ನಿಯಮಗಳನ್ನೇ ಅನುಸರಿಸುವದಕ್ಕೆ ಆಗುತ್ತದೆ. ಅಂಥವರೇ ಭಗವದ್ಭಕರು. ಆ ಪರಮಾತ್ಮನನ್ನು ಒಂದು ಮುಹೂರ್ತವು ಮರೆತರೂ ಸಾಕು,

ಈ ಮಾಯಾ ಪ್ರಪಂಚವು ಹಲವು ಅಡ್ಡಿ ಆತಂಕಗಳನ್ನು ತಂದೊಡ್ಡುವದು. ಒಂದಿಷ್ಟು ಭಗವಂತನ ಕಡೆಗೆ ತಿರುಗಿದರೂ ಸಾಕು, ಇದೇ ಪ್ರಪಂಚವು ಎಲ್ಲಾ ಬಗೆಯಿಂದಲೂ ಅನುಕೂಲ್ಯಗಳನ್ನು ಕಲ್ಪಿಸಿಕೊಡುತ್ತದೆ. ಆದ್ದರಿಂದಲೇ ಭಗವಂತನು ನನ್ನ ಭಕ್ತನೇ ಇದನ್ನು ಅರಿಯುವನು - ಎಂದಿದ್ದಾನೆ.

ಪರಮೇಶ್ವರನ ಭಕ್ತನಿಗೆ ಜ್ಞೇಯವಾದ ಈ ಪರಮಾರ್ಥವು ತನ್ನ ಹೃದಯದಲ್ಲಿಯೇ ಇದೆ ಎಂಬ ವಿಶೇಷವಾದ ಅರಿವು ಆಗುವದು. ಅವನಿಗೆ ಅಮಾನಿತ್ವಾದಿಗಳು ಸಹಜವಾಗಿ ತೋರುವವು. ಭಗವದ್ಗೀತೆಗೆಲ್ಲ ಭಗವಂತನೇ ಕೇಂದ್ರವು; ಭಗವದ್ಗೀತೆಯಲ್ಲಿ ಹೇಳಿರುವ ಪ್ರತಿಯೊಂದು ಸಾಧನವನ್ನೂ ಭಗವಂತನಿಗೆ ಸಂಬಂಧಿಸಿಯೇ ಮಾಡಬೇಕು. ನಾನೇ ಎಲ್ಲವನ್ನೂ ಅರಿತುಕೊಳ್ಳುತ್ತೇನೆಂಬ ಹೆಮ್ಮೆಯನ್ನು ಬಿಡಬೇಕು. ಭಗವಂತನವರು ನಾವು ಎಂದು ಯಾವಾಗ ಆಗುವೆವೋ ಆಗಲೇ ನಮಗೆ ಅಮಾನಿತ್ವಾದಿಗಳು ವಶವಾಗುವವು, ಮಾನಿತ್ವಾದಿಗಳು ತಂಟೆಮಾಡದೆ ಇರುವವು.

ಭಕ್ತನಿಗೇ ತತ್ತ್ವದ ವಿಜ್ಞಾನವಾಗುವದು; ಅದರಿಂದ ಭಗವದ್ಭಾವವು ಬರುವದು. ಯಾವನ ಅಂತಃಕರಣದ ಭಾವವು ಭಗವಂತನಲ್ಲಿಯೇ ಇರುವದೋ ಅವನು ಭಗವದ್ಭಕ್ತನು. ಅವನಿಗೆ ತತ್ತ್ವದ ನಿಜವು ವಿಶೇಷರೀತಿಯಿಂದ ಜ್ಞಾತವಾಗುತ್ತದೆ. ಆ ವಿಜ್ಞಾನದಿಂದ ಅವನಿಗೆ ಭಗವದ್ಭಾವವು ಎಂದರೆ ಭಗವಂತನ ಸ್ವರೂಪವು ಬಂದುಬಿಡುವದು. ಎಲ್ಲಾ ಪ್ರಾಣಿಗಳೂ ಭಗವಂತನಿಂದಲೇ ಬಂದಿರುತ್ತವೆ; ಆದ್ದರಿಂದ ಈಗಲೂ ಭಗವಂತನಂತೆಯೇ ಇರುತ್ತವೆ. ಗರಿಕೆಯ ಮೇಲೆ ಬಿದ್ದಿರುವ ನೀರಿನ ಹನಿಯೊಳಗೆ ಆಗುವ ಸೂರ್ಯನ ಪ್ರತಿಬಿಂಬಗಳು ಸೂರ್ಯನಂತೆಯೇ ಕಾಣುತ್ತವೆ. ಆದರೆ ಬೇರೆಬೇರೆಯ ದೃಷ್ಟಿ ಕೋಣದಿಂದ ನೋಡಿದರೆ ಬೇರೆ ಬೇರೆಯ ಬಣ್ಣದವಾಗಿ ಕಾಣುತ್ತವೆ. ಹೀಗೆಯೇ ಒಬ್ಬೊಬ್ಬರ ಅಂತಃಕರಣದಲ್ಲಿಯೂ ಭಗವಂತನ ಪ್ರತಿಬಿಂಬವೇ ಮೂಡಿಕೊಂಡಿರುತ್ತದೆ. `ಅದನ್ನು ಸೃಷ್ಟಿಸಿ ಪರಮಾತ್ಮನು ಅದರಲ್ಲಿಯೇ ಹೊಕ್ಕಿರುತ್ತಾನೆ' ಎಂದು ಶ್ರುತಿ ಹೇಳುತ್ತದೆ. ನಮ್ಮ ಅಂತಃಕರಣಗಳ ವೃತ್ತಿಗಳೆಲ್ಲವೂ ಆ ಚಿದಾತ್ಮನಾದ ಪರಮಾತ್ಮನಿಂದ ಉಂಟಾಗಿ ಚಿದಾತ್ಮನಿಂದಲೇ ವ್ಯಾಪ್ತವಾಗಿ ಚಿದಾಭಾಸವಾಗಿಯೇ ತೋರುತ್ತಿರುವವು. ಆದರೆ ಆಯಾ ಅಂತಃಕರಣದ ಗುಣದೋಷಗಳಿಂದ ಒಂದೊಂದು ಅಂತಃಕರಣದಲ್ಲಿರುವ ಜೀವನೂ ಒಂದೊಂದು ಬಗೆಯಾಗಿ ತೋರುತ್ತಿರುತ್ತಾನೆ. ಆದರೆ ಯಾವನು ಅನನ್ಯಭಕ್ತಿಯಿಂದ ಪರಮಾತ್ಮನನ್ನೇ ಸೇವಿಸುತ್ತಾನೋ ಅವನು ತತ್ತ್ವವನ್ನು ಇದ್ದದ್ದು ಇದ್ದಂತೆ ತಿಳಿದುಕೊಳ್ಳುತ್ತಾನೆ. ಆ ಪರಮಾತ್ಮನು ಈ ಭಕ್ತವರನಿಗೆ ತನ್ನ ಸ್ವರೂಪವನ್ನೇ ಧಾರೆಯೆರೆದುಬಿಡುತ್ತಾನೆ. ಪರಮಾತ್ಮನಿಗೆ ಸಮಾನವಾದ ಚಿಚ್ಛಕ್ತಿಯು ಎಲ್ಲರಲ್ಲಿಯೂ ಗುಪ್ತವಾಗಿದ್ದೇ ಇರುತ್ತದೆ. ಆದರೆ ಅದರ ವಿಜ್ಞಾನವು ಭಕ್ತನಿಗೆ ಮಾತ್ರ ಆಗುತ್ತದೆ. ಆದ್ದರಿಂದ ಭಕ್ತಿಯಿಂದಲೇ ಪರಮಾತ್ಮನ ಮಾಯೆಯ ಅಡ್ಡಿಗಳನ್ನು ಗೆಲ್ಲಬೇಕು. ಭಕ್ತಿಯಿಂದಲೇ ಆತನ ತತ್ತ್ವವನ್ನು ಅರಿತುಕೊಂಡು ಆತನಲ್ಲಿ ಒಂದಾಗಬೇಕು.

---

# ೧೨೩. ಪ್ರಕೃತಿಪುರುಷವಿವೇಕ 13 - (19-21)

**(3-4-49)**

ಪರಮಾತ್ಮತತ್ತ್ವವನ್ನು ತಿಳಿಯುವದಕ್ಕೆ ಅಡ್ಡಿ ಯಾವದು? ಪ್ರಕೃತಿಪುರುಷರ ವಿವೇಕಾಭಾವವೇ. ಪ್ರಕೃತಿಪುರುಷರ ಅವಿವೇಕದಿಂದ ಬಂಧವೂ ಅವುಗಳ ವಿವೇಕದಿಂದ ಮೋಕ್ಷವೂ ಆಗುವದೆಂಬುದು ಅಧ್ಯಾತ್ಮಶಾಸ್ತ್ರದ ರಹಸ್ಯವು. ಭಗವಂತನು ಈಗ ಅದನ್ನು ಸ್ಪಷ್ಟಪಡಿಸುತ್ತಿದ್ದಾನೆ.

ಪ್ರಕೃತಿಯು ಪರ, ಅಪರ - ಎಂದು ಎರಡು ಬಗೆಯಾಗಿರುವದೆಂದು ಹಿಂದೆ (೭-೫ ರಲ್ಲಿ) ಹೇಳಿತ್ತು. ಪ್ರಕೃತಿ ಎಂದರೆ ಸ್ವಭಾವವು ; ಬೆಂಕಿಗೆ ಬಿಸಿಯೂ ಬೆಳಕೂ ಹೇಗೆ ಪ್ರಕೃತಿಯೋ ಹಾಗೆ ಪರ, ಅಪರ - ಎಂಬ ಎರಡು ಪ್ರಕೃತಿಗಳು ಪರಮಾತ್ಮನಿಗೆ ಇರುವವು. ಭೂತಭೌತಿಕರೂಪವಾದ ಜಗತ್ತಾಗುವ ಅಚೇತನಪ್ರಕೃತಿಯು ಅಪರಪ್ರಕೃತಿಯು ; ಜೀವನಾಗಿ ತೋರುವ ಚೇತನಪ್ರಕೃತಿಯು ಪರಪ್ರಕೃತಿಯು. ಪರಮಾತ್ಮನೊಬ್ಬನು, ಅವನ ಪ್ರಕೃತಿಗಳು ಎರಡು - ಹೀಗೆ ಮೂರು ತತ್ತ್ವಗಳೆಂದು ಭಾವಿಸಬಾರದು. ಚೇತನಾಚೇತನರೂಪವಾದ ಜಗತ್ತೆಂಬ ಕಾರ್ಯವನ್ನು ನೋಡಿ ಅದಕ್ಕೆ ಕಾರಣವಾಗಿ ಅನುಮಾನದಿಂದ ಗೊತ್ತುಮಾಡುವ ಪರಮಾತ್ಮಸ್ವಭಾವವನ್ನೇ ಇಲ್ಲಿ ನಾವು ಪರ, ಅಪರ - ಎಂಬ ಎರಡು ಪ್ರಕೃತಿಗಳಾಗಿ ವಿಂಗಡಿಸಿಕೊಂಡಿರುವೆವು. ಪ್ರಕೃತ ಈ ಕೆಳಗಿನ ಶ್ಲೋಕದಲ್ಲಿ ಭಗವಂತನು ಈ ಪರಾಪರಪ್ರಕೃತಿಗಳನ್ನೇ ಪ್ರಕೃತಿ ಪುರುಷರೆಂಬ ಪರ್ಯಾಯಶಬ್ದಗಳಿಂದ ಕರೆದಿರುತ್ತಾನೆ. ಅಪರಪ್ರಕೃತಿಯನ್ನೇ ಇಲ್ಲಿ ಪ್ರಕೃತಿಯೆಂದಿದೆ ; ಪರಪ್ರಕೃತಿಯನ್ನೇ ಪುರುಷ ಎಂದಿರುತ್ತದೆ :

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ 13-19**

``ಪ್ರಕೃತಿಯನ್ನೂ ಪುರುಷನನ್ನೂ - ಎರಡನ್ನೂ ಅನಾದಿಯೆಂದು ತಿಳಿ. ವಿಕಾರಗಳೂ ಗುಣಗಳೂ ಪ್ರಕೃತಿಯಿಂದ ಉಂಟಾಗುವವೆಂದು ತಿಳಿ" - ಎಂಬುದು ಶ್ಲೋಕದ ಅರ್ಥ.

ಪ್ರಕೃತಿ, ಪುರುಷ - ಎಂಬೀ ಮಾತುಗಳು ಸಾಂಖ್ಯರ ಪಾರಿಭಾಷಿಕಶಬ್ದಗಳು. ಅವರು ಪರಮಾತ್ಮನೆಂಬ ತತ್ತ್ವವನ್ನು ಒಪ್ಪಿಲ್ಲ. ವೇದಾಂತಿಗಳು ಹೇಳುವ ಚೇತನಪ್ರಕೃತಿಯನ್ನು ಅವರು ಪುರುಷನೆನ್ನುವರು ; ಅಚೇತನಪ್ರಕೃತಿಯನ್ನು ಪ್ರಕೃತಿಯೆಂದೇ ಕರೆಯುತ್ತಾರೆ. ಸಾಂಖ್ಯರ ಪ್ರಕ್ರಿಯೆಯನ್ನು ತಿಳಿಯುವದಕ್ಕೆ ಸಂಘಾತ, ಪರಾರ್ಥ - ಎಂಬ ಮಾತುಗಳ ಅರ್ಥವನ್ನು ತಿಳಿದುಕೊಳ್ಳಬೇಕಾಗುವದು. ಸಂಘಾತ ಎಂದರೆ ಮನೆಯಂತೆ, ಗಡಿಯಾರದಂತೆ, ಗಿರಣಿಗಳ ಯಂತ್ರಗಳಂತೆ, ಒಂದಕ್ಕೊಂದಕ್ಕೆ ಕೂಡಿರುವ ವಸ್ತುಗಳ ಒಟ್ಟು ; ಪರಾರ್ಥ ಎಂದರೆ ಮತ್ತೊಬ್ಬರ ಪ್ರಯೋಜನವು. ಹೀಗೆ ಸಂಹತವಾಗಿರುವ ಎಂದರೆ ಒಂದಕ್ಕೊಂದು ಹೊಂದಿಕೆಯಾಗಿ ಕೂಡಿಕೊಂಡಿರುವ ಒಟ್ಟು ಯಾವಾಗಲೂ ಪರಾರ್ಥವಾಗಿರುತ್ತದೆ. ಮನೆಯು ಸಂಹತ

ವಾಗಿರುವದರಿಂದ ಅದು ಪರಾರ್ಥ; ಯಜಮಾನನು ಚೇತನನಾಗಿರುವ ಸ್ವಾರ್ಥನು. ಮನೆಯು ತನ್ನ ಒಡೆಯನ ಪ್ರಯೋಜನಕ್ಕಾಗಿರುತ್ತದೆ. ತನಗಾಗಿ ತಾನು ಇದ್ದುಕೊಂಡಿರುವದಿಲ್ಲ. ಇದರಂತೆ ಪ್ರಕೃತಿಯಿಂದಾಗಿರುವ ಶರೀರಾದಿಗಳು ಸಂಹತವಾಗಿರುತ್ತವೆ; ಅವು ಪರಾರ್ಥವಾಗಿರುವದರಿಂದ ಒಂದೊಂದು ಶರೀರಾದಿಸಂಘಾತಕ್ಕೆ ಒಬ್ಬೊಬ್ಬನಂತೆ ಅನೇಕಪುರುಷರು ಇರುತ್ತಾರೆ - ಎಂಬುದು ಸಾಂಖ್ಯರ ಮತವು. ಪ್ರಕೃತಿಯಿಂದ ವಿಕಾರಗಳೂ ಗುಣಗಳ ಕಾರ್ಯಗಳೂ ಆಗಿರುತ್ತವೆ ಎಂಬುದೂ ಸಾಂಖ್ಯರ ಪ್ರಕ್ರಿಯೆಗೇ ಸೇರಿದ್ದು. ಭಗವಂತನು ಈ ಪ್ರಕ್ರಿಯೆಯನ್ನು ಉಪಯೋಗಿಸಿಕೊಂಡು ತನಗೆ ಅಭಿಮತವಾದ ಪರಮಾರ್ಥತತ್ತ್ವವನ್ನು ಇಲ್ಲಿ ತಿಳಿಸಿಕೊಟ್ಟಿರುತ್ತಾನೆ.

ಸಾಂಖ್ಯರು, ಯೋಗಿಗಳು - ಮುಂತಾದವರೆಲ್ಲರೂ ವೇದಾರ್ಥವನ್ನೇ ನಿರೂಪಿಸುವದಕ್ಕೆ ಹೊರಟಿರುತ್ತಾರೆ. ಅವರೊಳಗೆ ಒಬ್ಬೊಬ್ಬರು ಒಂದೊಂದು ದೃಷ್ಟಿಕೋಣದಿಂದ ತತ್ತ್ವವಿಚಾರವನ್ನು ಮಾಡಿರುತ್ತಾರೆ. ವೇದಾಂತಿಗಳು ಇವರೆಲ್ಲರ ಪ್ರಕ್ರಿಯೆಯನ್ನೂ ಬಳಸಿಕೊಂಡು ತಮಗೆ ಬೇಕಾದ ತತ್ತ್ವವನ್ನು ನಿರೂಪಣೆಮಾಡಿರುತ್ತಾರೆ. ವೇದಾಂತವೆಂಬುದೊಂದು ದೊಡ್ಡ ಕಚೇರಿಯಿದ್ದಂತೆ; ಮಿಕ್ಕ ದರ್ಶನಗಳು ಅದರಲ್ಲಿ ಒಂದೊಂದು ಇಲಾಖೆ ಇದ್ದಂತೆ. ಆದ್ದರಿಂದ ಇದೊಂದು **ಮಹಾದರ್ಶನವು.**

ಇದರಂತೆ ಶ್ರೀ ಶಂಕರರಾಚಾರ್ಯರು ಸಾಂಖ್ಯಾದಿಗಳ ದರ್ಶನಗಳನ್ನೆಲ್ಲ ನೋಡಿ ಅವರ ಮತವನ್ನು ಸಾರಗ್ರಹಣದೃಷ್ಟಿಯಿಂದ ಅಂಗೀಕರಿಸಿರುತ್ತಾರೆ. "**ಪರಮತಮಪ್ರತಿಷಿದ್ಧಮನುಮತಂ ಭವತಿ**" ಪರವಾದಿಗಳ ಮತವನ್ನು ನಾವು ಖಂಡಿಸದೆ ಇದ್ದರೆ ಒಪ್ಪಿದಂತೆ ಎಂದು ತಿಳಿಯಬೇಕು ಎಂಬ ತಂತ್ರಯುಕ್ತಿಯನ್ನು ಅವರು ಅಂಗೀಕರಿಸಿರುತ್ತಾರೆ. ಬೌದ್ಧಾದಿದರ್ಶನಗಳನ್ನು ಆಚಾರ್ಯರು ಉಪನಯನವಾಗುವ ಮುಂಚೆ ಓದಿದರು - ಎಂದು ಕೆಲವರು ಹೇಳುವದುಂಟು; ಆ ಸಂಕುಚಿತದೃಷ್ಟಿಗೆ ಕಾರಣವಿಲ್ಲ: ಏಕೆಂದರೆ " **ಯುಕ್ತಿಯುಕ್ತಂ ವಚೋ ಗ್ರಾಹ್ಯಂ ಬಾಲಾದಪಿ ಶುಕಾದಪಿ । ಅನ್ಯತ್ತೃಣಮಿವ ತ್ಯಾಜ್ಯಮಪ್ಯುಕ್ತಂ ಪದ್ಮಜನ್ಮನಾ**" - ಹುಡುಗನು ಹೇಳಲಿ, ಗಿಣಿ ಹೇಳಲಿ, ಯುಕ್ತಿಯುಕ್ತವಾದರೆ ಗ್ರಹಿಸತಕ್ಕದ್ದೇ; ಹಾಗಿಲ್ಲದಿದ್ದರೆ ಬ್ರಹ್ಮನು ಹೇಳಿದರೂ ಬಿಡತಕ್ಕದ್ದೇ ಎಂಬುದು ನಮ್ಮ ಅಭಿಯುಕ್ತರ ನೀತಿ. ಈ ವಿಚಾರವು ಪ್ರಾಸಂಗಿಕವಾಗಿದೆ. ಹಿಂದೆ ಎಲ್ಲರೂ ಧರ್ಮವನ್ನೇ ಪ್ರಧಾನವಾಗಿ ಮಾಡಿಕೊಂಡಿದ್ದರು; ಗ್ರಂಥಕರ್ತರು ತಮ್ಮ ಶಾಸ್ತ್ರವು ಪರಂಪರೆಯಿಂದಲಾದರೂ ಮೋಕ್ಷಕ್ಕೆ ಕಾರಣ ಎಂದು ತೋರಿಸದಿದ್ದರೆ ಅವರ ಬರವಣಿಗೆಯು ವಿವೇಕಿಗಳಿಗೆ ಗ್ರಾಹ್ಯವೆನಿಸುತ್ತಿರಲಿಲ್ಲ. ಈಗ ಆ ಕಾಲವು ಹೋಗಿ ರಾಜಕೀಯಕ್ಕೆ ಜನರ ಮನಸ್ಸು ಒಲಿದಿರುತ್ತದೆ; ಆದ್ದರಿಂದ ಯಾವ ತಿಳಿವಳಿಕೆಯಾದರೂ ರಾಜಕೀಯಕ್ಕೆ ಉಪಯೋಗವಾಗುವದೆಂದು ತೋರಿಸಿಕೊಡಬೇಕಾಗಿ ಬಂದಿದೆ. ಒಬ್ಬ ಪ್ರಸಿದ್ಧ ಲೇಖಕರು "ಈಗ ಕಾಣುವ ವಿವಿಧ ಮತಗಳಲ್ಲಿರುವ ಭೇದಭಾವನೆಗಳನ್ನು ತೊಡೆದುಹಾಕಿ ಐಕ್ಯದ ವಿಷಯಗಳನ್ನೇ ಒತ್ತಿ ಹಿಡಿದು ಒಂದು ಸಮರಸವಾದ ಮತವನ್ನು ಏರ್ಪಡಿಸಿದರೆ ಈಗಿನ ಕಾಲಕ್ಕೆ

ಉತ್ತಮವಾಗುವದು" ಎಂದು ಹೇಳಿಕೊಂಡಿರುತ್ತಾರೆ. ಆದರೆ ಹೀಗೆ ಪಂಚಾಯಿತಿಯಿಂದ ಮತಗಳನ್ನು ಸಮರಸಮಾಡಿದರೆ ಮುಂದೆ ಮತ್ತೆ ಅವು ಭಿನ್ನಭಿನ್ನವಾಗಿ ಒಡೆದುಕೊಳ್ಳುವದಿಲ್ಲವೆಂದು ಹೇಳಲಾಗುವದಿಲ್ಲ. ಆದ್ದರಿಂದ ಈ ರಾಜಕೀಯಕಾರಣದಿಂದ ಏನಾದರೂ ಮಾಡಿ ಮತಗಳಿಗೆ ಸಾಮರಸ್ಯವನ್ನು ತೋರಿಸಿದರೆ ಸಾಲದು; ನಿಜವಾಗಿಯೂ ಎಲ್ಲರಿಗೂ ಒಪ್ಪಾಗುವ ಎಲ್ಲರ ಅನುಭವಕ್ಕೂ ಬರುವ ತತ್ತ್ವವೊಂದಿದೆ ಎಂಬುದನ್ನು ನಾವೂ ಮನಗಂಡು ಮಿಕ್ಕವರಿಗೂ ತಿಳಿಯಪಡಿಸಿದರೆ ಅದನ್ನು ಯಾರು ಹೇಳಿದರೂ ಗ್ರಾಹ್ಯವಾಗುವದು. ಇದೇ ವೇದಾಂತದ ನೀತಿ. ಮತಭೇದಗಳ ಚರ್ಚೆಯಿಂದ ಈಗ ಅಶಾಂತಿಯಾಗಿದೆ ಎಂದು ತಿಳಿಯುವದು ತಪ್ಪು; ಜನರಿಗೆ ಹೊಟ್ಟೆಗೆ ಇಲ್ಲದಿರುವದರಿಂದಲೂ ಸ್ವಾರ್ಥಪರರಾದವರು ದುರ್ಬಲರನ್ನು ಹಿಂಸಿಸುತ್ತಿರುವದರಿಂದಲೂ ಅಶಾಂತಿಯಾಗಿರುತ್ತದೆ. ಆದ್ದರಿಂದ ವಿಚಾರಪೂರ್ವಕವಾದ ಪರಮಾರ್ಥವನ್ನು ನಿರ್ಣಯಿಸುವದಕ್ಕೆ ಯಾರೂ ಅಂಜಬಾರದು.

ಪ್ರಕೃತ ಸಾಂಖ್ಯರ ತತ್ತ್ವನಿರೂಪಣಕ್ರಮವನ್ನು ಅನುಸರಿಸಿ ಭಗವಂತನು ಹೇಳುತ್ತಿದ್ದಾನೆ. ಈ ಕ್ರಮವನ್ನು ವೇದಾಂತಿಗಳೂ ಸ್ವಲ್ಪ ದೂರದವರೆಗೆ ಒಪ್ಪಿರುತ್ತಾರೆ. ಪ್ರಕೃತಿ, ಪುರುಷ-ಎಂಬಿವು ಎರಡೂ ಅನಾದಿಯಾಗಿರುತ್ತವೆ. ವಿಕಾರಗಳು ಎಂದರೆ ಕಾರ್ಯಗಳು, ಗುಣಗಳು ಎಂದರೆ ಸತ್ತ್ವರಜಸ್ತಮೋಗುಣಗಳು, ಪ್ರಕೃತಿಯಿಂದಾಗಿರುತ್ತವೆ. ಇಲ್ಲಿ ಗುಣವೆಂಬ ಮಾತು ಸಾಂಖ್ಯರ ಪಾರಿಭಾಷಿಕಶಬ್ದವು; ವ್ಯಾಕರಣದಲ್ಲಿ ಗುಣಸಂಧಿಯೆಂದರೆ ದೋಷಸಂಧಿಯಲ್ಲ ಎಂಬ ಅಭಿಪ್ರಾಯವೇನೂ ಇಲ್ಲದಿರುವಂತೆ ಮೂರು ಗುಣಗಳು ಎಂಬಲ್ಲಿಯೂ ಗುಣಶಬ್ದವು ದೋಷಪ್ರತಿದ್ವಂದ್ವಿಯಾದ ಶಬ್ದವಲ್ಲ. ಸತ್ತ್ವದಿಂದ ಸುಖವುಂಟಾಗುತ್ತದೆ, ಜ್ಞಾನವುಂಟಾಗುತ್ತದೆ; ರಜೋಗುಣದಿಂದ ಚಾಂಚಲ್ಯವುಂಟಾಗುತ್ತದೆ ; ರಾಗದ್ವೇಷಾದಿಗಳೂ ಉಂಟಾಗುತ್ತವೆ; ತಮೋಗುಣದಿಂದ ಆಲಸ್ಯ ನಿದ್ರಾದಿಗಳುಂಟಾಗುತ್ತವೆ. ಹೊರಗಿನ ಒಳಗಿನ ಪ್ರಪಂಚಗಳೆಲ್ಲವೂ ಈ ಸತ್ತ್ವರಜಸ್ತಮೋಗುಣಗಳ ಕಾರ್ಯರೂಪವಾದ ಒಂದು ರಾಶಿಯಾಗಿರುತ್ತವೆ. ಶರೀರ, ಇಂದ್ರಿಯ, ಮನಸ್ಸು-ಎಲ್ಲವೂ ಈ ಗುಣಗಳ ಕಾರ್ಯವೇ. ಆದ್ದರಿಂದ ಎಲ್ಲಾ ವಿಕಾರಗಳೂ ಎಂದರೆ ಕಾರ್ಯಗಳೂ ಗುಣಸ್ವಭಾವಗಳೂ ತ್ರಿಗುಣಾತ್ಮಕವಾದ ಪ್ರಕೃತಿಯೇ ಎಂಬುದು ಸಾಂಖ್ಯರ ಮತವು.

ಈಗ ಈ ಪ್ರಕೃತಿಪುರುಷರ ವಿವೇಕವನ್ನು ತಿಳಿಸುವದಕ್ಕಾಗಿ ಒಂದೊಂದರ ಸ್ವಭಾವವನ್ನೂ ವಿಂಗಡಿಸಿ ತಿಳಿಸುತ್ತಿದಾನೆ :

**ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ॥** **13-20**

ಪ್ರಕೃತಿಯು ಹೊರಗಿನ ವಸ್ತುಗಳಲ್ಲದೆ ನಮ್ಮ ಶರೀರ, ಇಂದ್ರಿಯ, ಮನಸ್ಸು, ಬುದ್ಧಿ - ಎಂಬ ಆಧ್ಯಾತ್ಮಿಕಭಾಗವಾಗಿಯೂ ಪರಿಣಮಿಸಿರುತ್ತದೆ. ಇವೆಲ್ಲ ಹೊರಗಿನ ವಸ್ತುಗಳೇ.

ಶರೀರಾದಿರೂಪವಾದ ಕಾರ್ಯವೂ ಇಂದ್ರಿಯಾದಿರೂಪವಾದ ಕರಣಗಳೂ ಎಲ್ಲವೂ ಪ್ರಕೃತಿಯ ಗುಣಗಳ ಕಾರ್ಯವೇ; ನಮ್ಮ ಸ್ವರೂಪಕ್ಕೆ ಸೇರಿಲ್ಲ ಎಂಬುದನ್ನು ತಿಳಿದುಕೊಳ್ಳಬೇಕು.

ಪುರುಷನು ಸುಖದುಃಖಗಳ ಭೋಕ್ತೃತ್ವಕ್ಕೆ ಕಾರಣನು. ಪ್ರಕೃತಿಯು ಕಣ್ಣಿಲ್ಲದೆ ನಡೆಯುವ ಮನುಷ್ಯನಂತೆ ಇದೆ; ಪುರುಷನು ಕಣ್ಣಿರುವ ಚೇತನನಾದ ಹೆಳವನಂತೆ ಇದಾನೆ. ಕೆಲಸವೆಲ್ಲ ಪ್ರಕೃತಿಯದು; ಭೋಗವು ಪುರುಷನದು. ಹೀಗೆ ಪ್ರಕೃತಿಪುರುಷರ ಸಂಯೋಗದಿಂದ ಸಂಸಾರವೆಲ್ಲ ನಡೆದಿರುತ್ತದೆ. ಆದರೆ ಹೀಗೆ ಪ್ರಕೃತಿಯೂ ಪುರುಷನೂ ಒಂದೊಂದಕ್ಕೆ ಕಾರಣವೆಂದದ್ದರಿಂದ ಸಂಸಾರಕ್ಕೆ ಇವೆರಡೂ ತಮ್ಮ ತಮ್ಮ ಭಾಗದಲ್ಲಿ ಕಾರಣರೇ ಎಂತ ಏರ್ಪಡುತ್ತದೆ. ಇದು ಸಾಂಖ್ಯರಿಗೆ ಒಪ್ಪಾಗಿಯೂ ಇದೆ. ಪ್ರಕೃತಿಯು ಕುರುಡನು, ಅಚೇತನವು; ಪುರುಷನು ಕುಂಟನು, ಅಸಂಗನಾದ್ದರಿಂದ ತಾನೇ ಕೆಲಸವನ್ನು ಮಾಡಲಾರದವನು. ಪ್ರಕೃತಿಗೆ ಬಗೆಬಗೆಯಾಗಿ ಪರಿಣಮಿಸುವ ಕೆಲಸವು ಮಾತ್ರ ಸೇರಿದ್ದು; ಪುರುಷನಿಗೆ ಈ ವಿಕಾರಗಳನ್ನು ಅನುಭವಿಸುವದು ಮಾತ್ರ ಸೇರಿದ್ದು - ಎಂಬುದು ಅವರ ಹೇಳಿಕೆ. ಇಲ್ಲಿ ವೇದಾಂತಿಗಳು ಇವೆರಡನ್ನೂ ವಿಂಗಡಿಸುವ ಬಗೆ ಸ್ವಲ್ಪ ಬೇರೆಯಾಗಿರುತ್ತದೆ. ಅವರು ಹೇಳುವದನ್ನು ಈ ಮುಂದಿನ ಶ್ಲೋಕದಿಂದ ತಿಳಿದುಕೊಳ್ಳಬಹುದು:

**ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು ॥** **13-21**

ಪುರುಷನು ಪ್ರಕೃತಿಯ ಪರಿಣಾಮಗಳಾದ ಗುಣಕಾರ್ಯಗಳನ್ನು ಅನುಭವಿಸುತ್ತಾನೆಂಬುದು ನಿಜ. ಆದರೆ ಅವನು ಅನುಭವಿಸುವದು ಹೇಗೆ? ಪುರುಷನು ಪ್ರಕೃತಿಸ್ಥನಾಗಿರುತ್ತಾನೆ, ಪ್ರಕೃತಿಯಲ್ಲಿ ಅಭಿಮಾನದಿಂದ ನಿಂತಿರುತ್ತಾನೆ. ಪ್ರಕೃತಿಯು ಏನೇನು ಮಾಡಿದರೆ ತಾನೇ ಅದನ್ನು ಮಾಡಿದಂತೆ ತಿಳಿದುಕೊಂಡು ಸುಖದುಃಖಗಳನ್ನು ಅನುಭವಿಸುತ್ತಿದಾನೆ. ಭಾಗವತದಲ್ಲಿ ಪುರಂಜಯನೆಂಬ ರಾಜನೊಬ್ಬನ ಕಥೆಯಿದೆ. ಅವನು ಒಬ್ಬ ಸುಂದರಿಯಾದ ತರುಣಿಯನ್ನು ಕಂಡು ಮೋಹಿಸಿ ಅವಳನ್ನು ತನ್ನ ರಾಣಿಯಾಗಿ ಮಾಡಿಕೊಂಡನು. ಆಕೆಯಲ್ಲಿ ಅವನಿಗೆ ಎಷ್ಟು ಪ್ರೇಮವಿತ್ತೆಂದರೆ ಅವಳು ಎದ್ದರೆ ತಾನೂ ಏಳುವದು, ಅವಳು ಕೂತರೆ ತಾನೂ ಕೂರುವದು, ಅವಳು ಅತ್ತರೆ ತಾನೂ ಅಳುವದು, ಅವಳು ನಕ್ಕರೆ ತಾನೂ ನಗುವದು - ಅವಳೇ ತಾನಾಗಿಬಿಟ್ಟನು! ಈ ಕಥೆಯಲ್ಲಿ ಪುರುಷನು ಈ ಶರೀರದಲ್ಲಿದ್ದುಕೊಂಡು ಕಾರ್ಯಕರಣಸಂಘಾತರೂಪವಾಗಿ ಪರಿಣಮಿಸಿರುವ ಪ್ರಕೃತಿಯ ಗುಣಗಳನ್ನೇ ತಾನು ತನ್ನವು - ಎಂಬ ತಪ್ಪು ಅಭಿಮಾನದಿಂದ ಹೇಗೆ ಸುಖದುಃಖಭೋಕ್ತೃವಾಗಿ ಪರಿಣಮಿಸಿರುವನೆಂಬುದನ್ನು ವರ್ಣಿಸಿರುತ್ತದೆ.

ಪ್ರಕೃತಿಯಲ್ಲಿಯೇ ಹೀಗೆ ನಿಂತುಬಿಟ್ಟಿರುವದರಿಂದ ಪುರುಷನು ತಾನು ತಾನೇ ಆಗಿದ್ದರೂ ಆತ್ಮಸ್ಥನಾಗಿರುವದಿಲ್ಲ. ಬೇರೆಬೇರೆಯ ಜೀವರುಗಳಾಗಿರುತ್ತಾನೆ. ಒಬ್ಬೊಬ್ಬ ಜೀವನು ಒಂದೊಂದರಲ್ಲಿ ಕುಳಿತಿರುತ್ತಾನೆಂಬುದು ನಮಗೆಲ್ಲ ತಿಳಿದಿರುವ ವಿಷಯವು. ಒಬ್ಬನು ದುಡ್ಡಿನ

ಮೇಲೆ ಕೂತಿರುತ್ತಾನೆ. ಒಬ್ಬ ಸಾಹುಕಾರನು ಹನ್ನೆರಡು ಸಾವಿರ ರೂಪಾಯಿಗಳ ರಾಶಿಯಮೇಲೆ ಭಗವದ್ಗೀತೆಯನ್ನಿಟ್ಟು ಪೂಜೆಮಾಡುತ್ತಿದ್ದನಂತೆ. ಗೀತೆಯ ಬೆಲೆ ಅವನಿಗೆ ಹನ್ನೆರಡೇ ಸಾವಿರ ರೂಪಾಯಿ ! ಇನ್ನೊಬ್ಬನು ಬಲದ ಮೇಲೆ, ಮತ್ತೊಬ್ಬನು ರೂಪದ ಮೇಲೆ, ಮಗದೊಬ್ಬನು ಅಧಿಕಾರದ ಮೇಲೆ -ಹೀಗೆ ಒಂದೊಂದು ಪ್ರಕೃತಿಪರಿಣಾಮದ ಮೇಲೆ ಕುಳಿತಿರುತ್ತಾರೆ! ಅವರಿಗೂ ಗುಣಗಳಿಗೂ ಸಂಗವಾಗಿಬಿಟ್ಟಿರುತ್ತದೆ; ಕಾಮದಿಂದಾಗುವ ಅಂಟಿಗೆ **ಸಂಗ**ವೆಂದು ಹೆಸರು. ಈ ಗುಣಸಂಗವೇ ಅವರವರು ಬೇರೆಬೇರೆಯ ಜನ್ಮಗಳಲ್ಲಿ ಜನಿಸುವದಕ್ಕೆ ಕಾರಣವಾಗಿಬಿಟ್ಟಿರುತ್ತದೆ. ಆಯಾವಾಸನೆಯಿಂದಲೇ ಅವರು ಒಂದೊಂದು ಪ್ರಕೃತಿವಿಕಾರದ ಭೋಗದಲ್ಲಿ ನಿರತರಾಗಿರುತ್ತಾರೆ. ಈ ಭೋಗವೇ ಪುರುಷಾರ್ಥವು ಎಂದು ಭಾವಿಸಿಕೊಂಡುಬಿಟ್ಟಿರುತ್ತಾರೆ. ಒಬ್ಬನಿಗೆ ಸಜ್ಜನ್ಮ, ಒಬ್ಬನಿಗೆ ಅಸಜ್ಜನ್ಮ, ಒಬ್ಬನಿಗೆ ಸದಸಜ್ಜನ್ಮ - ಹೀಗೆ ದೇವತೆಗಳ, ಸ್ಥಾವರಾಂತಪ್ರಾಣಿಗಳ ಮತ್ತು ಮನುಷ್ಯರ ಜನ್ಮದಲ್ಲಿ ಬೇರೆಬೇರೆಯ ಜೀವರುಗಳು ಹುಟ್ಟುವದಕ್ಕೆ ಕಾರಣವು ಯಾವದು? ಈ ಗುಣಸಂಗವೇ.

ಮನುಷ್ಯನು ಹುಟ್ಟಿದ್ದಕ್ಕೆ ಸಾರ್ಥಕ್ಯವೇನು? ಪ್ರಕೃತಿಯಲ್ಲಿ ನಿಂತು ಅದರ ಅಭ್ಯಾಸವನ್ನು ಮಾಡಿಕೊಂಡು ಅದರ ಬೆನ್ನಟ್ಟಿಹೋಗುವದಲ್ಲ. ಇದು ಅವಿವೇಕಿಗಳಾದವರ ಸ್ವಭಾವವು. ಪ್ರಕೃತಿಯ ಬೆನ್ನುಹಿಡಿದು ಆಯಾ ಕಾಮಗಳಿಗೆ ಅನುಗುಣವಾದ ಸದಸಜ್ಜನ್ಮಗಳನ್ನು ಪಡೆಯುವದಕ್ಕೆ ಯಾರ ಉಪದೇಶವೂ ಬೇಕಿರುವದಿಲ್ಲ. ಆದರೆ ಯಾವನು ಪ್ರಕೃತಿಯ ಸ್ವಭಾವವನ್ನು ಸಂಪೂರ್ಣವಾಗಿ ಪರಿಶೀಲಿಸಿ ತನಗೂ ಪ್ರಕೃತಿಗೂ ಇರುವ ತಾರತಮ್ಯವನ್ನು ವಿಂಗಡಿಸಿ ತಿಳಿದುಕೊಳ್ಳುವನೋ ಅವನೇ ಪುರುಷಧೌರೇಯನು. ಶಾಸ್ತ್ರಾಚಾರ್ಯರ ಉಪದೇಶಗಳನ್ನು ಪಡೆದು ಧೈರ್ಯದಿಂದ ಪ್ರಕೃತಿಪುರುಷವಿವೇಕವನ್ನು ಮಾಡಿಕೊಂಡು ತನ್ನ ತನ್ನ ನಿಜವಾದ ಸ್ವರೂಪದಲ್ಲಿ ನಿಲ್ಲುವಾತನೇ ಧನ್ಯನು. ಅವನ ಜನ್ಮವೇ ಸಾರ್ಥಕವು.

## ೧೨೪. ಪರಮಪುರುಷನು 13 - (21-22)

**(17-4-49)**

ಹಿಂದಿನ ಉಪನ್ಯಾಸದಲ್ಲಿ ಸಾಂಖ್ಯರ ದೃಷ್ಟಿಯಿಂದ ಪ್ರಕೃತಿಯನ್ನು ವಿಚಾರಮಾಡಲಾಗಿದೆ. ವೇದಾಂತಿಗಳು ಸಾಂಖ್ಯರ ಪ್ರಕ್ರಿಯೆಯನ್ನು ಉಪಯೋಗಿಸಿಕೊಂಡೇ ಆತ್ಮಾನಾತ್ಮವಿವೇಕವನ್ನು ಮಾಡುತ್ತಾರೆ. ಅನಾತ್ಮವನ್ನೆಲ್ಲ ಪ್ರಕೃತಿಯೆಂದೂ ಆತ್ಮನನ್ನು ಪುರುಷನೆಂದೂ ಕರೆಯುವ ವಾಡಿಕೆಯು ಸಾಂಖ್ಯರಂತೆ ವೇದಾಂತಿಗಳಲ್ಲಿಯೂ ಇರುತ್ತದೆ. ಈ ಅರ್ಥದಲ್ಲಿ ಹೊರಗಿರುವ ಭೂತಭೌತಿಕಪದಾರ್ಥಗಳಲ್ಲದೆ ಆಧ್ಯಾತ್ಮಿಕವಾದ ಶರೀರೇಂದ್ರಿಯಗಳೂ ಪ್ರಕೃತಿಯ ಕಾರ್ಯವೇ

ಆಗಿರುತ್ತವೆ. ಪ್ರಕೃತಿಯಲ್ಲಿ ಅವಿವೇಕದಿಂದ ನಾನು ನನ್ನದು ಎಂಬ ಅಭಿಮಾನವನ್ನಿಟ್ಟು ಕೊಂಡಿರುವದೇ ಪುರುಷನ ಸಂಸಾರಬಂಧಕ್ಕೆ ಕಾರಣವಾಗಿರುತ್ತದೆ. ಪ್ರಕೃತಿಪುರುಷವಿವೇಕದಿಂದ ಪುರುಷನು ತನ್ನ ಶುದ್ಧಸ್ವರೂಪದಿಂದ ಹೀಗಿರುವನೆಂಬ ಅರಿವು ಆಗುತ್ತದೆ, ಅದರಿಂದ ಬಂಧವು ತೊಲಗುತ್ತದೆ - ಎಂಬ ಅಭಿಪ್ರಾಯವು ಸಾಂಖ್ಯರಿಗೂ ವೇದಾಂತಿಗಳಿಗೂ ಸಮಾನವಾಗಿರುತ್ತದೆ.

ಆದರೆ ವೇದಾಂತಿಗಳು 'ಪ್ರಕೃತಿ' ಎಂಬ ಮಾತನ್ನು ಇನ್ನೂ ವಿಶಾಲವಾದ ಅರ್ಥದಲ್ಲಿ ಉಪಯೋಗಿಸುತ್ತಾರೆ. ಪ್ರಕೃತಿ ಎಂದರೆ ಕಾರಣವು, ವಿಕೃತಿ ಎಂದರೆ ಕಾರ್ಯವು. ಸಾಂಖ್ಯರ ದೃಷ್ಟಿಯಲ್ಲಿ ಪ್ರಧಾನವೆಂಬ ಒಂದಾನೊಂದು ಅನುಮಾನಗಮ್ಯವಾದ ತತ್ತ್ವವು ಜಗತ್ಕಾರಣವಾಗಿರುವದರಿಂದ ಅದನ್ನು ಅವರು ಮೂಲಪ್ರಕೃತಿ ಎಂದು ಕರೆಯುತ್ತಾರೆ. ಅವರ ಮತದಲ್ಲಿ ಪ್ರಧಾನಕ್ಕಿಂತ ಹೆಚ್ಚಿನ, ಅದಕ್ಕಿಂತಲೂ ಸೂಕ್ಷ್ಮವಾದ ಕಾರಣತತ್ತ್ವವು ಇರುವದಿಲ್ಲ. ಆ ಮೂಲಪ್ರಕೃತಿಯಿಂದಲೇ ಮಹತ್ತು, ಅಹಂಕಾರ, ಭೂತತನ್ಮಾತ್ರೆಗಳು - ಎಂಬ ವಿಕೃತಿಗಳು ಹುಟ್ಟುವವೆಂದೂ ಆ ವಿಕೃತಿರೂಪವಾದ ಪ್ರಕೃತಿಗಳಿಂದ ಮತ್ತೆ ಈ ಜಗತ್ತು ಉಂಟಾಗಿರುವದೆಂದೂ ಸಾಂಖ್ಯರ ನಂಬಿಕೆ. ಸಾಂಖ್ಯರು ಹೇಳುವ ಈ ಪ್ರಕ್ರಿಯೆಯನ್ನು ವೇದಾಂತಿಗಳೂ ತಮ್ಮ ಪ್ರತಿಪಾದನೆಗೆ ಅಲ್ಲಲ್ಲಿ ಉಪಯೋಗಿಸಿಕೊಳ್ಳುವದುಂಟಾದರೂ ಪ್ರಧಾನವು ತಾನೇ ಸ್ವತಂತ್ರವಾಗಿ ಜಗತ್ಕಾರಣವಾಗಿರುವದೆಂಬುದನ್ನಾಗಲಿ, ಅದೇ ಜೀವನಿಗೆ ಬಂಧಮೋಕ್ಷಗಳನ್ನು ಉಂಟುಮಾಡುವದೆಂಬುದನ್ನಾಗಲಿ ಅವರು ಅಂಗೀಕರಿಸಿರುವದಿಲ್ಲ. ಇದನ್ನು ಆಗಲೇ ತಿಳಿಸಿರುತ್ತೇನೆ. ಜಗತ್ಕಾರಣವಾಗಿರುವ ಪ್ರಧಾನವನ್ನು ಅವ್ಯಕ್ತ, ಅವ್ಯಾಕೃತ ಎಂಬ ಹೆಸರಿನಿಂದ ಅಂಗೀಕರಿಸಿ ಅದು ಪರಮೇಶ್ವರನ ಶಕ್ತಿಯೆಂದು ವೇದಾಂತಿಗಳು ಹೇಳುವರು. ಈ ಜಗತ್ತು ಪ್ರಲಯದಲ್ಲಿ ಅವ್ಯಕ್ತರೂಪವಾಗಿದ್ದುಕೊಂಡು ಸೃಷ್ಟಿಕಾಲಕ್ಕೆ ಜಗತ್ತಾಗಿ ತೋರಿಕೊಳ್ಳುತ್ತದೆ ; ಹೀಗೆ ಆಗುವದು ಯಾವದೂ ಸ್ವತಂತ್ರವಾಗಿ ಆಗುವ ಕಾರ್ಯವಲ್ಲ, ಅದೆಲ್ಲ ಪರಮೇಶ್ವರನ ಅಧೀನವಾಗಿ ಆಗುತ್ತಿರುತ್ತದೆ ಎಂಬುದು ವೇದಾಂತಿಗಳ ಮತವು.

ಪರಮೇಶ್ವರನ ಈ ಶಕ್ತಿಯನ್ನು ಪರಮೇಶ್ವರನ ಪ್ರಕೃತಿಯೆಂದೂ ವೇದಾಂತಿಗಳು ಕರೆಯುವದುಂಟು; ಈ ವಿವರಣೆಯಲ್ಲಿ ಪ್ರಕೃತಿ ಎಂದರೆ ಸ್ವಭಾವವಿಶೇಷವು ಎಂದರ್ಥ. ಅವ್ಯಾಕೃತವು ಪರಮೇಶ್ವರನ ಅಪರಪ್ರಕೃತಿಯು. ಅದೇ ಮೇಲೆ ವಿವರಿಸಿರುವ ಎಂಟು ಪ್ರಕಾರಗಳಿಂದ ಪರಿಣಮಿಸಿ ಅಚೇತನವಾದ ಜಗತ್ತಿನ ರೂಪದಲ್ಲಿ ಕಾಣಿಸಿಕೊಂಡಿರುತ್ತದೆ. ಈ ಅಚೇತನಪ್ರಕೃತಿಯಲ್ಲದೆ ಪರಮೇಶ್ವರನಿಗೆ ಚೇತನರೂಪವಾದ ಪ್ರಕೃತಿಯೂ ಒಂದುಂಟು; ಅದೇ ಪರಪ್ರಕೃತಿಯು. ಈ ಪರಪ್ರಕೃತಿಯು ಅಥವಾ ಚೇತನಪ್ರಕೃತಿಯು ಜೀವರಾಗಿ ಜಗತ್ತಿನಲ್ಲಿ ಕಾಣಿಸುತ್ತಿರುವದು. ಪರಮೇಶ್ವರನ ಚೇತನಾಚೇತನಪ್ರಕೃತಿಗಳಿಂದಲೇ ಈ ಜಗತ್ತು ಆಗಿರುತ್ತದೆ ಎಂಬುದು ವೇದಾಂತಿಗಳ ಮತವು. ಪರಾಪರಪ್ರಕೃತಿಗಳ ವಿಂಗಡವನ್ನು ಹಿಂದೆ ಏಳನೆಯ ಅಧ್ಯಾಯದಲ್ಲಿಯೇ ತಿಳಿಸಲಾಗಿದೆ.

ಒಂದೇ ವಸ್ತುವಿಗೆ ಎರಡು ಪ್ರಕೃತಿಗಳು ಇರುವದು ಹೇಗೆ? ಎಂದು ನೀವು ಕೇಳಬಹುದು. ಈ ಎರಡು ಪ್ರಕೃತಿಗಳೂ ಪರಮೇಶ್ವರನ ಸ್ವರೂಪವೇ ಆಗಿರುವದರಿಂದ ಅವನಿಗಿಂತ ಭಿನ್ನವಲ್ಲವೇ ಅಲ್ಲ. ಆದರೂ ಕಾರ್ಯದ ಅಪೇಕ್ಷೆಯಿಂದ ಇವನ್ನು ಎರಡೆಂದು ಭಾವಿಸಬಹುದು. ಬೆಂಕಿಗೆ ಬಿಸಿ, ಬೆಳಕು - ಎರಡೂ ಸ್ವಭಾವವಾಗಿರುತ್ತದೆ ; ಅವು ಬೆಂಕಿಯ ಸ್ವರೂಪವೇ ಹೊರತು ಅದಕ್ಕಿಂತ ಬೇರೆಯಾಗುವದಿಲ್ಲ. ಇದರಂತೆ ಪರಮಾತ್ಮನಿಗೆ ಚೇತನಪ್ರಕೃತಿ ಅಚೇತನಪ್ರಕೃತಿ - ಎಂಬ ಎರಡು ಪ್ರಕೃತಿಗಳಿರುವವು. ವಿಜ್ಞಾನವೂ ಅವಿಜ್ಞಾನವೂ ಒಂದೇ ಬ್ರಹ್ಮದ ರೂಪಗಳು ಎಂದು ಶ್ರುತಿಯಲ್ಲಿ ಹೇಳಿರುವದಕ್ಕೆ ಇದೇ ಅರ್ಥ. ಇದರಲ್ಲಿ ಯಾವ ಅನುಪಪತ್ತಿಯೂ ಇರುವದಿಲ್ಲ. 'ನ ಹಿ ದೃಷ್ಟೇ ಅನುಪಪನ್ನಂ ನಾಮ'(ಅನುಭವದಲ್ಲಿ ಕಂಡುಬಂದಿರುವದರಲ್ಲಿ ಅನುಪಪತ್ತಿ ಎಂಬುದೇ ಇಲ್ಲ) ಬಿಸಿಬೆಳಕು ಎರಡು ಪ್ರಕೃತಿಗಳೂ ಬೆಂಕಿಯಲ್ಲಿ ಕಾಣಬರುವದರಿಂದ ಒಂದು ವಸ್ತುವಿಗೆ ಎರಡು ಪ್ರಕೃತಿ ಹೇಗೆ ?- ಎಂದು ಯುಕ್ತಿಯಿಂದ ಅನುಭವವನ್ನು ಅಲ್ಲಗಳೆಯುವದಕ್ಕೆ ಆಗಲಾರದು.

ಇದಂತಿರಲಿ. ಚೇತನಪ್ರಕೃತಿಯಾದ ಪರಪ್ರಕೃತಿಯನ್ನು ಪುರುಷನೆಂದೂ ಅಚೇತನಪ್ರಕೃತಿಯಾದ ಅಪರಪ್ರಕೃತಿಯನ್ನು ಪ್ರಕೃತಿಯೆಂದೂ ಇಲ್ಲಿ ಕರೆದಿರುವದು ಸಾಂಖ್ಯರ ಪ್ರಕ್ರಿಯಾನುಸಾರ - ಎಂಬುದನ್ನು ನೆನಪಿಟ್ಟುಕೊಂಡು ಮುಂತೆರಳೋಣ. ಕಾರ್ಯಕರಣ ಕರ್ತೃತ್ವಕ್ಕೆ ಪ್ರಕೃತಿಯು ಹೇತು ಎಂದು ಹಿಂದೆ ಹೇಳಿದೆಯಷ್ಟೆ. ಅಚೇತನಪ್ರಕೃತಿಯೇ ನಮ್ಮ ಶರೀರೇಂದ್ರಿಯಾದಿಗಳ ರೂಪವನ್ನು ಧರಿಸಿದೆ ಎಂದು ಅದಕ್ಕೆ ಅರ್ಥ. ಪುರುಷನು ಈ ಪ್ರಕೃತಿಯ ಸಂಗದಿಂದ ಸುಖದುಃಖಗಳ ಭೋಕ್ತೃತ್ವವನ್ನು ಅನುಭವಿಸುತ್ತಿರುತ್ತಾನೆ. ಸ್ವಲ್ಪ ತಿಳಿವಳಿಕೆಯುಳ್ಳ ಮನುಷ್ಯನು ಪ್ರಕೃತಿಯ ಮುಂದೆ ಸುಮ್ಮನೆ ಕೂರಲಾರನು. ಆದರೆ ವಿವೇಕಿಯಾದವನು ಇದೆಲ್ಲ ಪ್ರಕೃತಿಯೇ ಎಂದು ತಿಳಿದುಕೊಂಡು ತಾನು ಅದರಲ್ಲಿ ಬೆರೆಯದೆ ಅಸಕ್ತನಾಗಿರುತ್ತಾನೆ. ಪ್ರಕೃತಿಯು ವಿವೇಕದಿಂದ ತನ್ನ ಬಂಧನಕಾರ್ಯವನ್ನು ಸಮಾಪ್ತಿಗೊಳಿಸುವದೆಂಬುದನ್ನು ಸಾಂಖ್ಯರು ಈ ರೀತಿ ತಿಳಿಸಿದ್ದಾರೆ:

**ಪ್ರಕೃತೇಃ ಸುಕುಮಾರತರಂ ನ ಕಿಂಚಿದಸ್ತೀತಿ ಮೇ ಮತಿರ್ಭವತಿ ।**
**ಯಾ ದೃಷ್ಟಾಸ್ಮೀತಿ ಪುನರ್ನ ದರ್ಶನಮುಪೈತಿ ಪುರುಷಸ್ಯ ॥**

"ಪ್ರಕೃತಿಗಿಂತ ಸುಕುಮಾರವಾಗಿರುವದು ಯಾವದೂ ಇಲ್ಲವೆಂದು ನನಗೆ ತೋರುತ್ತದೆ. ಏಕೆಂದರೆ ಪುರುಷನು ತನ್ನನ್ನು ಕಂಡನೆಂದು ಗೊತ್ತಾದಕೂಡಲೆ ಅದು ಮತ್ತೆ ಕಾಣಿಸಿಕೊಳ್ಳದಂತಾಗುವುದು" (ಸಾಂ. ಕಾ).

ಇದಿಷ್ಟನ್ನೂ ವೇದಾಂತಿಗಳು ತೆಗೆದುಕೊಂಡಿರುತ್ತಾರೆ. ಆದರೆ ಅವರು ಇದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿರುತ್ತಾರೆ. ಅವರು ಹೇಳುವದೇನೆಂದರೆ ಈ ಪ್ರಕೃತಿಯು ಅವಿದ್ಯಾತ್ಮಕ, ಇದು ಬರಿಯ ಹುಸಿತೋರಿಕೆ. ಒಂದೇ ಆತ್ಮವಸ್ತು ಪ್ರಕೃತಿ, ಪುರುಷ - ಎಂದು ಎರಡು

ಬಗೆಯಾಗಿ ಕಾಣಿಸಿಕೊಳ್ಳುತ್ತಿದೆ. ತತ್ತ್ವವನ್ನು ಅರಿತುಕೊಂಡರೆ ಕೂಡಲೆ ಸಂಸಾರಬಂಧವೆಲ್ಲ ಮಾಯವಾಗುತ್ತದೆ. ಪ್ರಕೃತಿಯೂ ಅದರ ಕಾರ್ಯವೂ ಸಹರಾಮರುಭೂಮಿಯಲ್ಲಿ ಕಾಣುವಂಥ ಮರೀಚಿಕೆಯು, ಬಿಸಿಲುಕುದುರೆಯ ನೀರು ಮಾತ್ರ; ಇದೆಲ್ಲ ಇಂದ್ರಜಾಲದಿಂದ ತೋರುವ ದೃಶ್ಯವಿಶೇಷವು - ಎಂದು ಜ್ಞಾನಿಗಳು ಎಷ್ಟು ಹೇಳಿದರೂ ಅಜ್ಞಾನಿಗಳು ಅದನ್ನು ನಂಬದೆ ಇರುತ್ತಾರೆ. ಬಿಸಿಲುಕುದುರೆಯನ್ನು ನೀರೆಂದು ಭ್ರಮಿಸಿ ಬಾಯಾರಿಕೆಯನ್ನು ಇಂಗಿಸಿಕೊಳ್ಳುವದಕ್ಕೆಂದು ಅತ್ತಕಡೆಗೆ ಹರಿಯುವವರನ್ನು ದಾರಿಯ ಸ್ವಭಾವವನ್ನು ಬಲ್ಲ ಪ್ರಯಾಣಿಕರು 'ಅಣ್ಣಾಗಳಿರ, ಇದು ನೀರಲ್ಲ; ಇದೆಲ್ಲ ಮರಳುಕಾಡೇ ! ಮುಂದೆ ಅಲ್ಲಲ್ಲಿ ನಿಜವಾದ ಜಲಾಶಯಗಳಿವೆ, ಅಲ್ಲಿ ನೀರನ್ನು ಕುಡಿದು ಬಾಯಾರಿಕೆಯನ್ನು ಆರಿಸಿಕೊಳ್ಳಿರಿ, ಬಳಲಿಕೆಯನ್ನು ತೀರಿಸಿಕೊಳ್ಳಿರಿ !' - ಎಂದು ಎಷ್ಟು ಹೇಳಿದರೂ ಕೇಳದೆ ಮುನ್ನುಗ್ಗಿ ಬಳಿಕ ದಾರಿಗಾಣದೆ ಕಂಗೆಟ್ಟ ಅವಿವೇಕಿಗಳೂ ಉಂಟು. ಅಲ್ಲವೆ ? ಹೀಗೆ ವೃಥಾಭಿಮಾನದಿಂದ ಪುರುಷನು ಪ್ರಕೃತಿಯ ವಿಲಾಸಕ್ಕೆ ಮರುಳಾಗಿ ಸುಖದುಃಖಗಳ ಭೋಕ್ತೃವಾಗುವದು ತಪ್ಪುತಿಳಿವಳಿಕೆಯಿಂದ. ಆ ಭೋಕ್ತೃತ್ವವು ಕನಸಿನ ಭೋಕ್ತೃತ್ವದಂತೆ ಹುಸಿಯೇ ಆಗಿರುತ್ತದೆ. ಆದರೆ ಯಾರು ಸಾಧುಸಂಗ, ದೈವಭಕ್ತಿ - ಮುಂತಾದ ಉಪಾಯಗಳಿಂದ ಪ್ರಪಂಚವನ್ನು ನೋಡುವರೋ ಅವರ ತಿಳಿವುಗಣ್ಣಿಗೆ 'ಇದು ಮರುಮರೀಚಿಕೆ, ಇದು ನಿಜವಾದ ಜಲಾಶಯ; ಇದು ಕನಸು, ಇದು ಎಚ್ಚರ' - ಎಂಬಂತೆ ಸತ್ಯಾನೃತಗಳ ವಿವೇಕವುಂಟಾಗುತ್ತದೆ. ಆಗ ಅವರು ಎಂದೆಂದಿಗೂ ಹುಸಿತೋರಿಕೆಯ ಪ್ರಕೃತಿಗೆ ಮರುಳಾಗುವದಿಲ್ಲ. ಪುರುಷನ ಪರಮಾರ್ಥರೂಪವಾದ ಪರಮಾತ್ಮನಲ್ಲಿಯೇ ನಿಷ್ಠೆಯನ್ನು ಹೊಂದಿ ಸುಖದಿಂದ ಇರುತ್ತಾರೆ. ಇದೇ ವೇದಾಂತಿಗಳ ದೃಷ್ಟಿ.

ಇದನ್ನೇ ಭಗವಂತನು 'ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್' ಎಂದು ವಿವರಿಸಿ ತಿಳಿಸಿರುತ್ತಾನೆ. ಹೇಗೆ ಗೃಹಸ್ಥರು ಗೃಹದಲ್ಲಿರುತ್ತಾರೋ, ಹೇಗೆ ಉದ್ಯಾನಸ್ಥರು ಉದ್ಯಾನದಲ್ಲಿರುತ್ತಾರೋ, ಹಾಗಲ್ಲ ಪುರುಷನು ಪ್ರಕೃತಿಸ್ಥನಾಗಿರುವನೆಂದಿರುವದು. ಪ್ರಕೃತಿಸ್ಥನೆಂದರೆ ಪ್ರಕೃತಿಯನ್ನೇ 'ನಾನು', 'ನನ್ನದು' ಎಂಬ ಅಭಿಮಾನದಿಂದ ಕಲೆಬೆರಕೆಮಾಡಿಕೊಂಡು ತಿಳಿದಿರುವವನು. ಈ ಲೋಕದಲ್ಲಿ ಕೆಲವರು ಹಣವನ್ನು, ಕೆಲವರು ಹೆಂಡಿರುಮಕ್ಕಳನ್ನು, ಕೆಲವರು ಕೀರ್ತಿಯನ್ನು ಕೆಲವರು ಕಲಾಕೌಶಲವನ್ನು ಹೀಗೆ ಅಭಿಮಾನದಿಂದ ಅವೇ ತಾವು, ತಮ್ಮವು ಎಂದು ತಪ್ಪಾಗಿ ಪಟ್ಟುಹಿಡಿದ ಭಾವನೆಯಿಂದ ವ್ಯವಹರಿಸುತ್ತಿರುತ್ತಾರೆ. ಹೀಗೆ ಅಭಿಮಾನದಿಂದ ವರ್ತಿಸುವದು ವ್ಯವಹಾರದಲ್ಲಿ ಸ್ವಲ್ಪಮಟ್ಟಿಗೆ ಸ್ವಲ್ಪಕಾಲದವರೆಗೂ ಪ್ರಯೋಜನಕಾರಿಯಾಗಬಹುದು ; ಆದರೆ ಅದರಿಂದ ಪರಮಪ್ರಯೋಜನವು ಎಂದಿಗೂ ಆಗಲಾರದು. ದುಃಖಮಿಶ್ರವಿಲ್ಲದ ಸುಖವು ಈ ಅಭಿಮಾನದಿಂದ ಎಂದಿಗೂ ಸಿಕ್ಕಲಾರದು. ಮನುಷ್ಯನೆಂದರೆ ಸುಖದುಃಖವುಳ್ಳವನೇ ; ರೋಗಾರೋಗ್ಯಗಳು, ಲಾಭಾಲಾಭಗಳು, ಜಯಾಜಯಗಳು, ಮಾನಾಪಮಾನಗಳು,

ಏಳುಬೀಳುಗಳು - ಎಂಬೀ ಬಗೆಯ ದ್ವಂದ್ವಕ್ಕೆ ಸಿಕ್ಕಿ ನರಳುವವನೇ ಎಂದು ಬಹುಜನರ ನಂಬಿಕೆ. 'ನೀವೆಲ್ಲರೂ ಶುದ್ಧಾನಂದಸ್ವರೂಪರು', ಎಂದು ತಿಳಿದವರು ಹೇಳಿದರೂ ಅವರಿಗೆ ನಂಬಿಕೆ ಬರುವದಿಲ್ಲ. ಪ್ರಕೃತಿಯ ವಿಕಾರಗಳಾದ ಬಗೆಬಗೆಯ ವಸ್ತುಗಳನ್ನು ಅವರು ಬಯಸಿ ಅವುಗಳ ಪ್ರಾಪ್ತಿಗಾಗಿ ಒದ್ದಾಡುತ್ತಲೇ ಇರುತ್ತಾರೆ. ಆ ವಸ್ತುಗಳು ಸಿಕ್ಕಿದರೆ ಅವುಗಳ ಭೋಗವಾದ ಬಳಿಕವೂ ಅದರ ವಾಸನೆಯು ಮನಸ್ಸಿನಲ್ಲಿ ಉಳಿದುಕೊಂಡೇ ಇರುತ್ತದೆ. ಆಗಾಗ್ಗೆ ಬಂದುಹೋಗುವ ನೆಂಟರು ಅವರ ಕೆಲವು ಪದಾರ್ಥಗಳನ್ನು ನಮ್ಮ ಮನೆಯಲ್ಲಿಟ್ಟಿದ್ದು ಮತ್ತೆ ಮತ್ತೆ ಬರುತ್ತಿರುವಂತೆ ಆ ಭೋಗ್ಯವಸ್ತುಗಳು ತಮ್ಮ ಭೋಗದ ವಾಸನೆಯನ್ನು ನಮ್ಮ ಅಂತಃಕರಣದಲ್ಲಿಟ್ಟೇ ಹೋಗಿರುತ್ತವೆ. ಮತ್ತೆ ಸಮಯವು ಬಂದಾಗ ವಾಸನೆಯು ಮೇಲಕ್ಕೇಳುತ್ತದೆ ; ಕಾಮಗಳೂ ಉಂಟಾಗುತ್ತವೆ. ಆದ್ದರಿಂದಲೇ ಶ್ರೀ ಶಂಕರಾಚಾರ್ಯರು **"ಪ್ರಕೃತಿಸ್ಥತ್ವಾಖ್ಯಾ ಅವಿದ್ಯಾ ಗುಣೇಷು ಚ ಸಙ್ಗಃ ಕಾಮಃ ಸಂಸಾರಸ್ಯ ಕಾರಣಮ್"** ಪ್ರಕೃತಿಸ್ಥನಾಗಿರುವದೆಂಬ ಅವಿದ್ಯೆ, ಮತ್ತು ಮೂರು ಗುಣಗಳ ಸಂಗವೆಂಬ ಕಾಮ - ಇವೆರಡೂ ಸಂಸಾರಕ್ಕೆ ಕಾರಣವು - ಎಂದು ಈ ಶ್ಲೋಕದ ವಾಕ್ಯಾರ್ಥವನ್ನು ಬರೆದಿರುತ್ತಾರೆ. ಸಾಂಖ್ಯರ ದೃಷ್ಟಿಯಂತೆ ಪ್ರಕೃತಿಯು ಸತ್ಯವೇ ಇರಲಿ, ವೇದಾಂತಿಗಳ ದೃಷ್ಟಿಯಂತೆ ಮಾಯಿಕವಾಗಿಯೇ ಇರಲಿ, ಅಂತೂ ಪ್ರಕೃತಿಯು ಪುರುಷನಿಗೆ ಅವಿದ್ಯಾವಸ್ಥೆಯಲ್ಲಿ ನಾನಾಪ್ರಕಾರಗಳಿಂದ ಕಾಣಿಸಿಕೊಂಡು ಅವನನ್ನು ಬಗೆಬಗೆಯಿಂದ ಕಾಡಿಸಿ ಬೇಡಿಸಿ, ಯಾವ ಕೆಲಸಕ್ಕೂ ಬಾರದಂತೆ ಮಾಡಿ ಕೈಬಿಡುತ್ತದೆ - ಎಂಬುದೇ ಭಗವಂತನು ಪ್ರಕೃತದಲ್ಲಿ ಅನುವಾದಮಾಡಿ ಹೇಳಿರುವ ಸಂಸಾರದ ಸ್ವಭಾವವು.

ಈಗ ಮುಂದಿನ ಶ್ಲೋಕಕ್ಕೆ ಅವತರಣಿಕೆ ಹೇಗೆಂದರೆ : ಪ್ರಕೃತಿಯನ್ನು ನಾನು, ನನ್ನದು- ಎಂದು ಅಭಿಮಾನಿಸಿದವನಿಗೆ ಮಾತ್ರ ಅದು ತಂಟೆಮಾಡುತ್ತಿರುತ್ತದೆ. ಆದರೆ ಈ ಪ್ರಕೃತಿಯನ್ನು ಹೊರದೂಡಿ ನೋಡುವವನು ದ್ರಷ್ಟೃವಾಗುತ್ತಾನೆ. ಆಗ ಅವನಿಗೆ ಪ್ರಕೃತಿಯು ದೃಶ್ಯವಾಗುತ್ತದೆ. ಎಲ್ಲಿಯವರೆಗೆ ಆತ್ಮನು ದೃಶ್ಯವಾದ ಪ್ರಕೃತಿಯಲ್ಲಿ ತಾದಾತ್ಮ್ಯವನ್ನು ಹೊಂದಿ ಅದೇ ತಾನೆಂದು ತಿಳಿದುಕೊಂಡಿರುತ್ತಾನೋ ಅಲ್ಲಿಯವರೆಗೂ ಅವನು ಭೋಕ್ತೃವೇ. ಆದರೆ ಈ ಭೋಕ್ತೃವು ಗುಣಭೋಕ್ತೃವು, ಅವನು ಪ್ರಕೃತಿಯ ಮನೆಯ ಬಾಗಿಲಲ್ಲಿ ನಿಂತಿರುವ ಭಿಕ್ಷುಕನು. ಆದರೆ ಯಾವಾಗ ಇವನು ಪ್ರಕೃತಿಯನ್ನೆಲ್ಲ ದೃಶ್ಯವಾಗಿ ಮಾಡಿ, ಅದರಲ್ಲಿ ಕಾಣುವ ದೃಶ್ಯಗಳನ್ನು ನಾಟಕವನ್ನು ನೋಡಿ ಆನಂದಿಸುವ ಸಭಿಕನಂತೆ ಸರ್ವವನ್ನೂ ನೋಡುವ ದ್ರಷ್ಟೃವಾಗುತ್ತಾನೋ ಆಗ ಅವನ ಸ್ವರೂಪವು ಈ ಭೋಕ್ತೃಸ್ವರೂಪಕ್ಕಿಂತ ಅತ್ಯಂತಭಿನ್ನವಾಗಿರುತ್ತದೆ. ಇದನ್ನು ಭಗವಂತನು ವರ್ಣಿಸಿರುವ ಕ್ರಮ ಹೇಗೆಂದರೆ :

**ಉಪದ್ರಷ್ಟಾಽನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ।** 13-22

ನಮ್ಮಲ್ಲಿ ಪ್ರತಿಯೊಬ್ಬನಿಗೂ ಭೋಕ್ತ್ರಂಶ, ದ್ರಷ್ಟ್ರಂಶ - ಎಂದು ಎರಡು ಭಾಗಗಳಿವೆ. ಇವುಗಳಲ್ಲಿ ಪ್ರಕೃತಿಸ್ಥನಾಗಿ ಗುಣಸಕ್ತನಾಗಿ ಇರುವ ಅಂಶವೇ ಭೋಕ್ತೃವು. ಇದನ್ನು ಆಗಲೇ ವರ್ಣಿಸಿದ್ದಾಗಿರುತ್ತದೆ. ಆದರೆ ಪ್ರಕೃತಿಸ್ಥನಾಗದೆ ಆತ್ಮಸ್ಥನಾಗಿರುವ, ಗುಣಸಕ್ತನಾಗದೆ ಅಸಕ್ತನಾಗಿರುವ ಆತ್ಮನೇ ಉಪದ್ರಷ್ಟೃವು. ಯಜ್ಞದಲ್ಲಿ ಯಜಮಾನನೂ ಋತ್ವಿಜರೂ ತೊಡಗಿರಲು ಯಜ್ಞವಿದ್ಯೆಯಲ್ಲಿ ನಿಪುಣನಾಗಿರುವ ಒಬ್ಬನು ಹತ್ತಿರವೇ ಇದ್ದು ಯಜಮಾನನ ಮತ್ತು ಋತ್ವಿಜರ ಕರ್ಮದಲ್ಲಿರುವ ಗುಣದೋಷಗಳನ್ನು ನೋಡುತ್ತಿರುತ್ತಾನೆ, ಅವನಿಗೆ ಉಪದ್ರಷ್ಟೃವೆಂದು ಹೆಸರು. ನಮ್ಮಲ್ಲಿರುವ ದ್ರಷ್ಟೃವಾದ ಆತ್ಮನೂ ಹೀಗೆಯೇ. ಗುಣಭೋಕ್ತೃವಾದ ಯಜಮಾನನೂ ಆ ಯಜಮಾನನಿಗೆ ಸಹಾಯಕರಾಗಿರುವ ಕರಣಗಳೆಂಬ ಋತ್ವಿಜರೂ ತೊಡಗಿರುವ ವ್ಯವಹಾರದಲ್ಲಿರುವ ಗುಣದೋಷಗಳನ್ನು ನೋಡುತ್ತಾ ಆ ಗುಣದೋಷಗಳು ಸ್ವಲ್ಪವೂ ತನಗೆ ಅಂಟದೆ ಇರುವ ಸಾಕ್ಷಿರೂಪವೇ ನಮ್ಮ ನಿಜವಾದ ಆತ್ಮನು, ಆದ್ದರಿಂದ ಇವನನ್ನು ಉಪದ್ರಷ್ಟೃವೆಂದು ಕರೆಯಬಹುದು. ಇಂದ್ರಿಯಗಳೂ ಮನಸ್ಸೂ ದ್ರಷ್ಟೃವೇ ಆಗಿರುತ್ತವೆಯಾದರೂ ಅತ್ಯಂತವಾಗಿ ನಮ್ಮ ಬಳಿಯಲ್ಲಿ ಸ್ವರೂಪವೇ ಆಗಿದ್ದು ಎಲ್ಲರಿಗಿಂತಲೂ ಮಿಗಿಲೆನಿಸಿರುವ ದ್ರಷ್ಟೃವೇ ಇವನು. ಈ ಆತ್ಮನು ಕಾರ್ಯಕರಣಗಳು ತೊಡಗಿರುವ ಯಾವ ಕ್ರಿಯೆಯಲ್ಲಿಯೂ ತಾನು ತೊಡಗದೆ ಇದ್ದರೂ ಅವುಗಳು ಮಾಡುವ ಕ್ರಿಯೆಗಳು ಇವನ ಸಂನಿಧಿಯಲ್ಲಿಯೇ ನಡೆಯುವದರಿಂದ ಅದಕ್ಕೆ ಅನುಗುಣವಾಗಿರುವಂತೆ ತೋರುತ್ತಿರುತ್ತಾನೆ. ಆದ್ದರಿಂದ ಇವನು **ಅನುಮಂತೃ**. ಇದಲ್ಲದೆ ಇವನು ಈ ಕಾರ್ಯಕರಣಸಮೂಹಕ್ಕೆ ಭರ್ತೃವು. ಕಾರ್ಯಕರಣರೂಪವಾಗಿರುವ ಈ ಸಂಘಾತವು ಒಟ್ಟುಗೂಡಿ ಆತ್ಮನಿಗಾಗಿ ಕೆಲಸಮಾಡುತ್ತಿರುವದಷ್ಟೆ, ಅವುಗಳು ಚೈತನ್ಯಾಭಾಸದಿಂದೊಡಗೂಡಿ ತಮ್ಮ ತಮ್ಮ ಸ್ವರೂಪಸ್ಥಿತಿಪ್ರವೃತ್ತಿಗಳನ್ನು ಹೊಂದಿರುವದು ಈ ಆತ್ಮನಿಂದಲೇ ಆಗಿರುವದರಿಂದ ಇವನು ಅವಕ್ಕೆ **ಭರ್ತ**ನೆನಿಸಿರುತ್ತಾನೆ. ಭರ್ತೃವಾದವನು ಹೇಗೆ ತನ್ನನ್ನು ಉಪಜೀವಿಸಿಕೊಂಡಿರುವ ಹೆಂಡಿರುಮಕ್ಕಳು, ಆಳುಕಾಳು - ಮುಂತಾದವುಗಳೆಲ್ಲವನ್ನೂ ಭರಣಮಾಡುತ್ತಿರುವನೋ ಅದರಂತೆ ಆತ್ಮನು ಶರೀರೇಂದ್ರಿಯಮನೋಬುದ್ಧಿಗಳನ್ನು ಭರಣಮಾಡುತ್ತಿರುತ್ತಾನೆ.

ಇವನು **ಭೋಕ್ತೃವು**. ಜೀವನೂ ಭೋಕ್ತೃವೇ ; ಆದರೆ ಅವನು ಅಲ್ಪಭೋಕ್ತೃ, ಈ ಪರಮಾತ್ಮನು ಮಹಾಭೋಕ್ತೃ. ಯಾವಯಾವದು ಬಂದರೂ ಅದನ್ನೆಲ್ಲ ತನ್ನ ಚೈತನ್ಯಸ್ವರೂಪದಿಂದ ಭೋಗಿಸುತ್ತಿರುತ್ತಾನೆ. ಜೀವನು ಪ್ರಕೃತಿಸ್ಥನಾಗಿ ಭೋಗಿಸುತ್ತಾನಷ್ಟೆ; ಅವನಿಗೆ ಆಶೆಗಳು ಅನಂತವಾಗಿರುತ್ತವೆ. ಆ ಆಶೆಗಳಿಂದ ಪ್ರೇರಿತನಾಗಿ ವಿಷಯಗಳನ್ನು ಒಂದೊಂದಾಗಿ ಕರಣಗಳ ಮೂಲಕವೇ ಅವನು ಭೋಗಿಸಬೇಕು. ಅವುಗಳನ್ನು ಭೋಗಿಸುವದೆಂಬುದೂ ಅವನಿಗೊಂದು ಆಯಾಸದ ಕೆಲಸ. ಅವನು ಇಂದ್ರಿಯಗಳನ್ನು ಆಗಾಗ್ಗೆ ವಿಷಯಗಳಿಗೆ ಭಿಕ್ಷೆಬೇಡಬೇಕು ; ಆದರೆ ಅವು, ಇವನು ಕೇಳಿದ್ದನ್ನೆಲ್ಲ

ತಂದುಕೊಡುತ್ತವೆ ಎಂಬ ಭರವಸೆಯೂ ಇಲ್ಲ. ಆದರೆ ಪರಮಾತ್ಮನು ಹಾಗಲ್ಲ, ಅವನು ನಿತ್ಯತೃಪ್ತನಾಗಿರುತ್ತಾನೆ. ಸರ್ವಭೂತಗಳ ಸರ್ವಶರೀರಗಳಲ್ಲಿಯೂ ಆಯಾ ಜೀವರು ವಿಷಯಗಳನ್ನೂ ಭೋಗಿಸುತ್ತಿರುವಂತೆ ಕಂಡರೂ ನಿಜವಾಗಿ ಇಂದ್ರಿಯಗಳೆಲ್ಲವೂ ಎಲ್ಲಾ ಭೋಗಗಳನ್ನೂ ಕಾಣಿಕೆಯಾಗಿ ಈ ಪರಮಾತ್ಮನಿಗೇ ಒಪ್ಪಿಸುತ್ತಿರುತ್ತವೆ. ಆದರೆ ಇಂದ್ರಿಯಗಳು ಕೊಡಲಿ ಬಿಡಲಿ, ಪ್ರಪಂಚದಲ್ಲಿ ಯಾವದೊಂದು ಭೋಗವೂ ಈ ಪರಮಾತ್ಮನಿಗೆ ದೂರವಾಗಿ ಅಥವಾ ಪರೋಕ್ಷವಾಗಿ ಇರುವದಿಲ್ಲ. ಅವನು ಇಂಥದ್ದೊಂದು ಭೋಗವು ಸಿಕ್ಕಲಿಲ್ಲವಲ್ಲ ಎಂದು ಹಂಬಲಿಸುವಹಾಗಿಲ್ಲ. ಅಥವಾ ಇಂಥದ್ದೊಂದು ಭೋಗವು ಸಿಕ್ಕಿತಲ್ಲ ಎಂದು ಹರ್ಷದಿಂದ ಹಿಗ್ಗುವಂತೆಯೂ ಇಲ್ಲ. ಇಷ್ಟೇ ಅಲ್ಲ. ಪರಮಾತ್ಮನ ಭೋಗವು ಜೀವನ ಭೋಗದಂತೆ ಆಯಾಸಕರವಾಗಿಯೂ ಇರುವದಿಲ್ಲ ; ಅವನು ಕಾಮಗಳನ್ನು ಒಂದೊಂದಾಗಿ ಕರಣಗಳ ಮೂಲಕ ಅನುಭವಿಸಬೇಕಾದದ್ದೇನೂ ಇಲ್ಲ. ಎಲ್ಲೆಲ್ಲಿ ಏನೇನಿರುವದೋ, ಎಲ್ಲೆಲ್ಲಿ ಯಾವಯಾವದರ ಭೋಗಗಳು ಜೀವರುಗಳಿಗೆ ಆಗುತ್ತಿರುವವೋ ಅವುಗಳಲ್ಲಿ ಯಾವದೊಂದೂ ಈ ಪರಮಾತ್ಮನ ಚೈತನ್ಯದ ಸಂಬಂಧವಿಲ್ಲದೆ ಒಂದು ಕ್ಷಣವೂ ನಿಲ್ಲಲಾರದು. ಹೀಗೆ ಅನಂತವಾದ ಭೋಗಗಳನ್ನು ಒಮ್ಮೆಗೇ ಯಾವ ವಿಕಾರವೂ ಇಲ್ಲದೆಯೇ ತನ್ನ ಚೈತನ್ಯ ಸ್ವರೂಪದ ಸತ್ತಾಮಾತ್ರದಿಂದ ಭೋಗಿಸುವ ಮಹಾಭೋಕ್ತೃತ್ವವು ಈ ಪರಮಾತ್ಮನದು !

ಇದರಂತೆ ಈತನು ಮಹೇಶ್ವರನು ಜೀವರನ್ನು ತಮ್ಮ ತಮ್ಮ ಶರೀರಾದಿಗಳಿಗೆ ಸ್ವಾಮಿಗಳು, ಈಶ್ವರರು ಎಂದು ಆಗಾಗ್ಗೆ ಶಾಸ್ತ್ರಕಾರರು ಕರೆಯುವದುಂಟು. ಆದರೆ ಅದು ಲೋಕಬುದ್ಧಿಯನ್ನು ಅನುಸರಿಸಿದ ಅನುವಾದಮಾತ್ರವಾಗಿರುತ್ತದೆ. ಸ್ವಲ್ಪಮಟ್ಟಿಗೆ ಕೈ ಕಾಲು ಮುಂತಾದ ಅವಯವಗಳನ್ನು ಇಚ್ಛಾಪೂರ್ವಕವಾಗಿ ಉಪಯೋಗಿಸಬಲ್ಲವರಾದ್ದರಿಂದ ಅವರನ್ನೂ ಅಷ್ಟರಮಟ್ಟಿಗೆ ಈಶ್ವರರೆಂದು ಕರೆಯಬಹುದು. ಆದರೆ ನಿಜವಾಗಿ ಅವರು ತಮ್ಮ ತಮ್ಮ ಇಂದ್ರಿಯಗಳಿಗೆ ದಾಸರಾಗಿರುತ್ತಾರೆ. ಇಂದ್ರಿಯಗಳ ಮೂಲಕವೇ ಅವರು ಭೋಗಗಳನ್ನು ಪಡೆಯಬೇಕು; ಕರಣಗಳನ್ನು ಉಪಯೋಗಿಸಿಕೊಂಡೇ ಆಯಾ ವ್ಯಾಪಾರವನ್ನು ಮಾಡಬೇಕು. ಆದ್ದರಿಂದ ಕರಣಗಳು ಎತ್ತ ಎಳೆದರೆ ಇವರೂ ಅತ್ತ ಸಾಗಬೇಕಾಗಿರುತ್ತದೆ. ಜೀವರುಗಳಲ್ಲಿ ಧರ್ಮ, ಜ್ಞಾನ, ವೈರಾಗ್ಯ -ಮುಂತಾದವುಗಳು ತಾರತಮ್ಯದಿಂದ ಬೇರೆಬೇರೆಯ ಪ್ರಮಾಣದಲ್ಲಿರುವದರಿಂದ ಅವರುಗಳ ಈಶ್ವರತ್ವವೂ ತಾರತಮ್ಯದಿಂದ ಕೂಡಿಕೊಂಡೇ ಇರುತ್ತದೆ. ಸ್ಥಾವರಪ್ರಾಣಿಗಳಲ್ಲಿ ಈಶ್ವರತ್ವವು ಅತ್ಯಂತ ಕಡಿಮೆಯ ಪ್ರಮಾಣದಲ್ಲಿ ಇರುತ್ತದೆ; ಅದು ಅಲ್ಲಿ ಇಲ್ಲವೇ ಇಲ್ಲವೆಂದೂ ಹೇಳಬಹುದಾಗಿರುತ್ತದೆ. ಅವುಗಳಿಗಿಂತ ಜಂಗಮಪ್ರಾಣಿಗಳಲ್ಲಿ, ಅವುಗಳಿಗಿಂತ ಮನುಷ್ಯರಲ್ಲಿ, ಮನುಷ್ಯರಿಗಿಂತ ಪಿತೃಗಳಲ್ಲಿ ಮತ್ತು ದೇವತೆಗಳಲ್ಲಿ ಕ್ರಮಕ್ರಮವಾಗಿ ಹೆಚ್ಚುತ್ತಾ ಹೋಗಿರುತ್ತದೆ. ಹಿರಣ್ಯಗರ್ಭನಲ್ಲಿ ಅದು ಮಿಕ್ಕ ಎಲ್ಲರಿಗಿಂತಲೂ ಹೆಚ್ಚಾಗಿರುತ್ತದೆ. ಆದರೂ ಸಂಸಾರಮಂಡಲದಲ್ಲಿರುವ ಈ ಯಾವ

ಜೀವರಿಗೂ ಪರಮಾತ್ಮನಿಗೆ ಸಮವಾದ ಈಶ್ವರತ್ವವಿರುವದಿಲ್ಲ. ಏಕೆಂದರೆ ಈ ಮೊದಲೇ ಹೇಳಿರುವಂತೆ ಅವನು ಎಲ್ಲರಿಗೂ ಆತ್ಮನಾಗಿರುತ್ತಾನೆ; ಎಲ್ಲರ ಶರೀರೇಂದ್ರಿಯಗಳೂ ಅವನವೇ ಆಗಿರುತ್ತವೆ. ಇದಲ್ಲದೆ ಅವನಿಗೆ ಯಾವ ಶರೀರೇಂದ್ರಿಯಗಳ ಹಂಗೂ ಇರುವದೇ ಇಲ್ಲ. ಕೈ ಕಾಲುಗಳಿಲ್ಲದೆಯೂ ವೇಗದಿಂದ ನಡೆಯಬಲ್ಲನು, ಹಿಡಿಯಬಲ್ಲನು; ಕಣ್ಣಿಲ್ಲದೆಯೂ ನೋಡಬಲ್ಲನು, ಕಿವಿಯಿಲ್ಲದೆಯೂ ಕೇಳಬಲ್ಲನು; ತಿಳಿಯತಕ್ಕದ್ದನ್ನೆಲ್ಲ ಮನಸ್ಸಿನ ವೃತ್ತಿಗಳಿಲ್ಲದೆಯೇ ಒಮ್ಮೆಗೇ ಅರಿತುಕೊಳ್ಳಬಲ್ಲನು; ಇಂಥ ಸ್ವಾತಂತ್ರ್ಯವುಳ್ಳವನು ಆತನು! ಆದ್ದರಿಂದಲೇ ಶ್ರುತಿಯು `ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಮ್ । ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಮ್॥' (ಅವನು ಈಶ್ವರರಿಗೆಲ್ಲ ಹೆಚ್ಚಿನ ಮಹೇಶ್ವರನು, ಅವನು ದೇವತೆಗಳಿಗೆಲ್ಲ ಪರಮದೇವನು, ಪತಿಗಳಿಗೆ ಪತಿಯು, ಎಲ್ಲಕ್ಕೂ ಹೆಚ್ಚಿನ ಪರಮನು, ಭುವನಗಳಿಗೆಲ್ಲ ಸ್ತೋತ್ರಾರ್ಹನಾದ ಈಶ್ವರನು) - ಎಂದು ಕೊಂಡಾಡುತ್ತಿದೆ.

ಇದಲ್ಲದೆ ಇವನು ಪರಮಾತ್ಮನು. ಅವಿವೇಕಿಗಳಿಗೆ ದೇಹಾದಿಗಳೇ ಆತ್ಮನಾಗಿರುವವು; ಸ್ವಲ್ಪ ವಿವೇಕವುಳ್ಳವರಿಗೆ ಜೀವನೇ ಆತ್ಮನು. ಆದರೆ ಜೀವನು ಏಕೋನವಿಂಶತಿಮುಖನು; ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಪಂಚಪ್ರಾಣಗಳು, ಅಂತಃಕರಣಚತುಷ್ಟಯ - ಎಂಬ ಹತ್ತೊಂಬತ್ತು ಮುಖದವನಾಗಿರುವವನು. ಹತ್ತೊಂಬತ್ತು ಘಂಟೆಗಳ ಸರವನ್ನು ಹಾಕಿಕೊಂಡಿರುವ ಎತ್ತಿನಂತೆ, ಈ ಹತ್ತೊಂಬತ್ತು ಕರಣಗಳಿಲ್ಲದೆ ಅವನು ಒಂದಿಷ್ಟೂ ಅಲುಗಾಡಲಾರದವನು. ಜೀವ ಪ್ರಾಣಧಾರಣೇ - ಎಂಬ ಧಾತುವಿನಿಂದ ಹುಟ್ಟಿರುವ ಜೀವ ಎಂಬ ಹೆಸರೇ ಜೀವನ ಸ್ವರೂಪವನ್ನು ತಿಳಿಸುತ್ತದೆ. ಪ್ರಾಣಗಳನ್ನು ಧರಿಸದವನು ಜೀವನಲ್ಲ. ಜೀವನೆಂದರೇ ಇಂದ್ರಿಯಗಳ ಮೂಲಕವಾಗಿ ಬಾಹ್ಯಜಗತ್ತಿನ ವ್ಯವಹಾರವನ್ನು ಮಾಡುವವನು; ಶರೀರವನ್ನು ಧರಿಸಿರುವದರಿಂದ ಇವನಿಗೆ ಶಾರೀರನೆಂದೂ ಹೆಸರು ಬಂದಿರುತ್ತದೆ. ಪರಮಾತ್ಮನು ಈ ಜೀವನಿಗೂ ಆತ್ಮನಾಗಿರುತ್ತಾನೆ. ದೇಹಾದ್ಯಾತ್ಮರು ಆತ್ಮರೆಂದು ಅವಿದ್ಯೆಯಿಂದ ಕಲ್ಪಿತರಾಗಿರುತ್ತಾರೆ; ಅವರು ನಿಜವಾದ ಆತ್ಮರಲ್ಲ. ಅವರಿಗೆ ಹೋಲಿಸಿದರೆ ಪರಮಾರ್ಥವಾಗಿಯೂ ಆತ್ಮನಾಗಿರುವವನು ಈ ಪರಮಾತ್ಮನು.

ಜೀವಾತ್ಮನೂ ಈ ದೇಹದಲ್ಲಿಯೇ ಇರುತ್ತಾನೆ; ಪರಮಾತ್ಮನೂ ಈ ದೇಹದಲ್ಲಿಯೇ ಇರುತ್ತಾನೆ. ಆದರೂ ಜೀವಾತ್ಮನು ದೇಹದಲ್ಲಿ ಅಭಿಮಾನಪೂರ್ವಕವಾಗಿರುತ್ತಾನೆ. ದೇಹವನ್ನು ತಾನೆಂದೂ ಒಂದೊಂದು ಸಲ ತಿಳಿದುಕೊಳ್ಳುತ್ತಾನೆ. ಆದ್ದರಿಂದ ಅವನು ಮನೆಯಲ್ಲಿದೇನೆ, ಊರಿನಲ್ಲಿದೇನೆ - ಎಂದು ಮುಂತಾಗಿಯೂ ವ್ಯವಹರಿಸುತ್ತಿರುತ್ತಾನೆ; ಆದ್ದರಿಂದ ಅವನು ದೇಹಿಯು, ಸಶರೀರನು. ಇನ್ನು ಪರಮಾತ್ಮನೋ ಎಂದರೆ ದೇಹದಲ್ಲಿರುತ್ತಾನೆ, ಆದರೆ ದೇಹಕ್ಕೆ ಅಂಟಿಕೊಂಡಿರುವದಿಲ್ಲ; ಅವನಿಗೆ ದೇಹದ ಅಳತೆಯ ಕಟ್ಟೂ ಇರುವದಿಲ್ಲ. ಆದ್ದರಿಂದ ಅವನು ಅಶರೀರನು. ಶರೀರಕ್ಕೆ ಪುರವೆಂದೂ ಹೆಸರಿದೆ. ಪುರದಲ್ಲಿರುವದರಿಂದ, ಪುರವಾದ ಶರೀರವನ್ನು

ನಾನು ನನ್ನದು ಎಂದು ಅಭಿಮಾನದಿಂದ ಭಾವಿಸಿಕೊಳ್ಳುತ್ತಿರುವದರಿಂದ, ಜೀವನು ಪುರುಷನು. ಪರಮಾತ್ಮನೋ ಎಂದರೆ ದೇಹದಲ್ಲಿ ಮಾತ್ರವೇ ಅಲ್ಲದೆ ಇಡಿಯ ಜಗತ್ತಿನಲ್ಲೆಲ್ಲ ವ್ಯಾಪಿಸಿಕೊಂಡಿರುತ್ತಾನೆ. ಆದ್ದರಿಂದ ಪೂರ್ಣನಾಗಿರುವದರಿಂದ ಅವನಿಗೆ ಪುರುಷನೆಂದು ಹೆಸರು. ಜೀವನು ಅಪರಪುರುಷನು, ಪರಮಾತ್ಮನು ಪರಮಪುರುಷನು.

ಇದುವರೆಗೆ ವರ್ಣಿಸಿರುವ ಅಭಿಪ್ರಾಯವನ್ನೇ 'ದ್ವಾ ಸುಪರ್ಣಾ' ಎಂಬ ಅಥರ್ವಣಶ್ರುತಿಯು ಎರಡು ಹಕ್ಕಿಗಳ ರೂಪಕದಿಂದ ತಿಳಿಸಿರುತ್ತದೆ. 'ಒಂದೇ ಮರವನ್ನು ಆಶ್ರಯಿಸಿಕೊಂಡು ಎರಡು ಹಕ್ಕಿಗಳಿರುವವು; ಅವುಗಳಲ್ಲಿ ಒಂದು ಮರದಲ್ಲಿ ಬಿಡುವ ಹಣ್ಣುಗಳನ್ನು ಸವಿಯುತ್ತಿರುವದು, ಇನ್ನೊಂದು ತಿನ್ನದೆ ಸುಮ್ಮನೆ ನೋಡುತ್ತಿರುವದು - ಎಂದು ಆ ಶ್ರುತಿವಾಕ್ಯಗಳು ಹೇಳುತ್ತಿವೆ. ಈ ಶರೀರವೆಂಬ ಮರದಲ್ಲಿ ತಾನಿದ್ದುಕೊಂಡಿರುವ ಪ್ರಕೃತಿಸ್ಥನಾದ ಪುರುಷನೇ, ಜೀವಾತ್ಮನೇ, ಸುಖದುಃಖಗಳೆಂಬ ಕರ್ಮಫಲರೂಪವಾದ ಹಣ್ಣನ್ನು ಸವಿಯುತ್ತಿರುವವನು. ಆದರೆ ಪರಮಾತ್ಮನು ಈ ಶರೀರದಲ್ಲಿರುವಂತೆ ತೋರಿದರೂ ನಿಜವಾಗಿ ಅವನಿಗೆ ಈ ಶರೀರದ ಹಂಗಿಲ್ಲ. ಎಲ್ಲಾ ಊರುಗಳಿಗೂ ಮೂಡಲು ದಿಕ್ಕಿನಲ್ಲಿ ತೋರುವ ಸೂರ್ಯನಂತೆ ಪರಮಾತ್ಮನು ಪ್ರತಿಯೊಬ್ಬ ಜೀವನ ಶರೀರದಲ್ಲಿಯೂ ಸರ್ವಾಂತರನಾಗಿರುವಂತೆ ಕಾಣಿಸುತ್ತಿರುತ್ತಾನೆ; ಆದರೆ ಅವನಿಗೆ ಶರೀರದ ಕರ್ಮಫಲಗಳ ಅಂಟು ಒಂದಿಷ್ಟೂ ಇರುವದಿಲ್ಲ. ಆ ಪರಮಾತ್ಮನೇ ಜೀವರುಗಳ ಪರಮಾರ್ಥಸ್ವರೂಪವು. ಪ್ರಕೃತಿವಿವೇಕವನ್ನು ಮಾಡಿಕೊಂಡಿರುವ ಪ್ರತಿಯೊಬ್ಬನೂ ತನ್ನ ತನ್ನ ಸ್ವರೂಪವೇ ಈ ಪರಮಾತ್ಮನೆಂಬುದನ್ನು ಕಂಡುಕೊಳ್ಳುವದಕ್ಕೆ ಬರುತ್ತದೆ. ಶರೀರದಲ್ಲಿ ಸಾಭಿಮಾನರಾಗಿ ಇಂದ್ರಿಯಗಳಿಗೆ ಅಡಿಯಾಳಾಗಿರುವ ಜೀವರೂಪರಾದ ಪುರುಷರಾಗಿರುವದೂ ನಮ್ಮ ವಶದಲ್ಲಿದೆ; ಪ್ರಕೃತಿಪುರುಷವಿವೇಕವನ್ನು ಮಾಡಿಕೊಂಡು ನಮ್ಮ ಪರಮಾರ್ಥಸ್ವರೂಪದಲ್ಲಿ ನಿಂತು ಎಲ್ಲವನ್ನೂ ಆಳುವ ಮಹೇಶ್ವರನೆನಿಸಿಕೊಂಡು ಪರಮಾತ್ಮನಿಷ್ಠರಾಗಿರುವದೂ ನಮ್ಮ ವಶದಲ್ಲಿದೆ. ಆದ್ದರಿಂದ ದಾಸನಾಗಿರುವೆಯೊ, ಈಶ್ವರನಾಗಿರುವೆಯೊ, ಯೋಚಿಸಿನೋಡು ಎಂದು ಇಲ್ಲಿ ಭಗವಂತನು ಉಪದೇಶಿಸಿರುತ್ತಾನೆ.



## ೧೨೫. ಪರಮಾತ್ಮಜ್ಞಾನಕ್ಕೆ ಉಪಾಯಗಳು 13 - (23 - 25)

**(24.4.49)**

ಹಿಂದಿನ ಮೂರು ಶ್ಲೋಕಗಳ ಅಭಿಪ್ರಾಯವನ್ನು ಮತ್ತೊಂದು ಸಲ ನೆನಪಿಗೆ ತಂದುಕೊಂಡು ಮುಂದಕ್ಕೆ ತೆರಳುವದರಲ್ಲಿ ಪ್ರಯೋಜನವುಂಟು. ಪುರುಷನು ಪ್ರಕೃತಿಸ್ಥನಾಗಿರುವದರಿಂದ ಪ್ರಕೃತಿಯೇ ತಾನು ತನ್ನದು ಎಂಬ ಅಭಿಮಾನದಲ್ಲಿರುವದರಿಂದ-

ಪ್ರಕೃತಿಯ ಗುಣಗಳ ಕಾರ್ಯಗಳನ್ನು ಅನುಭವಿಸಿ ಸುಖಿಯೂ ದುಃಖಿಯೂ ಆಗುತ್ತಿರುವನು. ಈ ಗುಣಸಂಗವೇ -ಅವಿದ್ಯೆಯಿಂದಾಗಿರುವ ಕಾಮವೇ - ಇವನಿಗೆ ಉತ್ತಮ, ಮಧ್ಯಮ, ಅಧಮ ಎಂಬ ಮೂರು ಬಗೆಯ ಜನ್ಮಗಳನ್ನು ಕೊಡುವದಕ್ಕೆ ಕಾರಣವಾಗಿರುತ್ತದೆ. ವಸ್ತು ತತ್ತ್ವವನ್ನು ತಪ್ಪಾಗಿ ತಿಳಿದುಕೊಂಡಿರುವ ಅವಿದ್ಯೆಯಿಂದ ವಿಷಯಗಳಲ್ಲಿ ಕಾಮವುಂಟಾಗುತ್ತದೆ; ಕಾಮದಿಂದ ಒಳ್ಳೆಯ, ಕೆಟ್ಟ ಕರ್ಮಗಳನ್ನು ಮಾಡುತ್ತಾನೆ; ಆ ಕರ್ಮಗಳ ಭೋಗವನ್ನು ಅನುಭವಿಸುವುದಕ್ಕಾಗಿ ತ್ರಿವಿಧಜನ್ಮಗಳನ್ನು ಪಡೆಯುತ್ತಾನೆ. ಇದೇ ಸಂಸಾರವು.

ದೈವಯೋಗದಿಂದ ಧರ್ಮಾನುಷ್ಠಾನವನ್ನು ಮಾಡಿದ್ದರ ಫಲವಾಗಿ ಚಿತ್ತವು ಶುದ್ಧವಾದರೆ ಜೀವನಿಗೆ ವೈರಾಗ್ಯವುಂಟಾಗುತ್ತದೆ. ವೈರಾಗ್ಯದಿಂದ ವಿಷಯಗಳ ಕಾಮವು ಹೋಗಿಬಿಡುವದರಿಂದ ಅವುಗಳಿಗಾಗಿ ಕರ್ಮಗಳನ್ನು ಮಾಡುವ ಹಂಬಲಿಕೆಯು ಇಲ್ಲವಾಗುತ್ತದೆ. ವೈರಾಗ್ಯವೆಂದರೆ ದುಷ್ಫಲದಿಂದ ಬೇಸತ್ತಿರುವದಲ್ಲ. ಬರಿಯ ಬೇಸರಿಕೆಯಿಂದ ಕರ್ಮವನ್ನು ಬಿಟ್ಟವನು ಮತ್ತೆ ಕಾಲಾಂತರದಲ್ಲಿ ಕರ್ಮಗಳಲ್ಲಿ ತೊಡಗುವದು ಖಂಡಿತ. ಆದರೆ ಬಾಹ್ಯವಸ್ತುಗಳ ನಿಜವಾದ ಸ್ವರೂಪದ ಅರಿವಾಗಿ ಬರುವ ವೈರಸ್ಯವು ವೈರಾಗ್ಯವೆನಿಸುವದು. ಹೀಗೆ ವಿಷಯಗಳ ಅನಿತ್ಯತ್ವ, ಅಶುಚಿತ್ವ, ದುಃಖಕಾರಣತ್ವ ಮುಂತಾದ ದೋಷಗಳನ್ನು ಕಂಡುಕೊಂಡಂತೆಲ್ಲ ವೈರಾಗ್ಯವು ಬಲವಾದರೆ ಮನುಷ್ಯನು ವಿಷಯ ಭೋಗದಿಂದ ಹಿಮ್ಮೆಟ್ಟುತ್ತಾನೆ. ಈಗ ಅವನು ಪ್ರಕೃತಿಸ್ಥನಾಗುವದಿಲ್ಲ, ಉಪದ್ರಷ್ಟೃವಾಗುತ್ತಾನೆ. ಯಜ್ಞದಲ್ಲಿರುವ ಉಪದ್ರಷ್ಟೃವಿನಂತೆ ಎಲ್ಲವನ್ನೂ ಹೊರಬ್ಬಾಗಿದ್ದುಕೊಂಡು ಸಾಕ್ಷಿರೂಪದಿಂದ ನೋಡುವದಕ್ಕೆ ಅನುವಾಗುತ್ತಾನೆ. ಮೊದಲು ಕಾಮದಿಂದ ಕರ್ಮಗಳನ್ನು ಮಾಡುತ್ತಿದ್ದವನು ಈಗ ವಿರಕ್ತಿಯಿಂದ ಒಳಹೊಕ್ಕು ಸಾಕ್ಷಿರೂಪದಲ್ಲಿ ನಿಂತು ನೋಡುತ್ತಿರುತ್ತಾನೆ.

ಈ ಅತ್ಯಂತ ಅಸಕ್ತನಾದ ಸರ್ವಸಾಕ್ಷಿಯಾದ ಜೀವನ ಪರಮಾರ್ಥಸ್ವರೂಪವೇ ಪರಮಾತ್ಮರೂಪವು. ಜೀವಾತ್ಮನಾಗಿದ್ದಾಗ ಇಂದ್ರಿಯಗಳಿಗೆ ಅಡಿಯಾಳಾಗಿದ್ದವನೇ ಈಗ ಪರಮಾತ್ಮರೂಪದಲ್ಲಿ ನೆಲೆನಿಂತು ಮಹೇಶ್ವರನೆನಿಸಿಕೊಂಡಿರುತ್ತಾನೆ. ಹೀಗೆ ವೈರಾಗ್ಯದಿಂದ ಪ್ರಕೃತಿಪುರುಷರನ್ನು ವಿಂಗಡಿಸಿಕೊಂಡು ತನ್ನ ಸ್ವರೂಪದಲ್ಲಿ ನೆಲೆನಿಲ್ಲುವದೇ ಪರಮಪುರುಷಾರ್ಥವು.

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥ 13-23**

ಯಾವನು ಹೀಗೆ ಪ್ರಕೃತಿಯನ್ನೂ ಅದರ ಗುಣಗಳನ್ನೂ ಪರೀಕ್ಷಿಸಿ ಅದರಲ್ಲಿ ಯಾವಹುರುಳೂ ಇಲ್ಲವೆಂದು ತಿಳಿದು, ಅದಕ್ಕಿಂತ ಅತ್ಯಂತವಿಲಕ್ಷಣವಾದ ನಿತ್ಯಶುದ್ಧಬುದ್ಧಮುಕ್ತಸ್ವಭಾವವಾದ ರೂಪವೇ ಪುರುಷನಾದ ನನ್ನದು ಎಂದು

ಅರಿತುಕೊಳ್ಳುವನೋ ಅವನೇ ಜೀವನ್ಮುಕ್ತನು. ಅವನು ಇತರರ ದೃಷ್ಟಿಯಿಂದ ಎಲ್ಲರಂತೆಯೇ ಶರೀರೇಂದ್ರಿಯಗಳಿಂದೊಡಗೂಡಿ ವ್ಯವಹರಿಸುತ್ತಿದ್ದರೂ ಅವನು ನಿಜವಾಗಿ ಯಾವ ಕರ್ಮವನ್ನೂ ಮಾಡುವದಿಲ್ಲ; ಏಕೆಂದರೆ ಅವನಿಗೆ ಯಾವ ಕಾಮಗಳೂ ಇರುವದಿಲ್ಲ. ಅವನಿಗೆ ಕರ್ಮಗಳೇ ಇರುವದಿಲ್ಲವಾದ್ದರಿಂದ ಕರ್ಮಗಳ ಫಲವಾಗಿ ಮತ್ತೆ ಅವನು ಬೇರೊಂದು ಜನ್ಮವನ್ನು ಪಡೆಯುವದೂ ಇಲ್ಲ.

ಈ ಸಂದರ್ಭದಲ್ಲಿ ಭಗವಂತನು ಹೇಳುವ ಈ ಶ್ಲೋಕಾರ್ಥವನ್ನು ವಿಚಾರಕ್ಕೆ ತೆಗೆದುಕೊಳ್ಳುವದು ಅವಶ್ಯ: **`ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ'** ಅವನು ಹೇಗೆಯೇ ವರ್ತಿಸಲಿ, ಅವನು ಮತ್ತೆ ಹುಟ್ಟುವದಿಲ್ಲ ಎಂದು ಭಗವಂತನು ಹೇಳಿರುತ್ತಾನೆ. ಹಾಗಾದರೆ ಜ್ಞಾನಿಯು ಹೇಗೆ ಬೇಕೆಂದರೆ ಹಾಗೆ ಸ್ವೇಚ್ಛಾಪ್ರವೃತ್ತಿಯಿಂದ ನಡೆಯುತ್ತಾನೆಯೆ? ಎಂಬ ಶಂಕೆ ಹುಟ್ಟುವದು ಸಹಜವಾಗಿರುತ್ತದೆ. ಇದಲ್ಲದೆ ಕರ್ಮವನ್ನು ಯಾರೇ ಮಾಡಲಿ, ಫಲವನ್ನು ಕೊಡದೆ ಬಿಡುವದೇ ಇಲ್ಲ. ಹಿಂದೆ ಮಾಡಿರುವ ಅನೇಕ ಕರ್ಮಗಳು ಈಗ ಜ್ಞಾನವುಂಟಾದರೆತಾನೆ ಹೇಗೆ ಬಿಡುವವು? ಈಗಿನ ಜನ್ಮವು ಹೇಗೆ ಹಿಂದಿನ ಕರ್ಮದ ಫಲವಾಗಿದ್ದು ಜ್ಞಾನವು ಬಂದಮೇಲೂ ಈ ಶರೀರದಲ್ಲಿ ಫಲವನ್ನು ಕೊಟ್ಟೇಮುಗಿಯುವದೋ ಅದರಂತೆ ಮಿಕ್ಕ ಕರ್ಮಗಳೂ ಫಲವನ್ನು ಕೊಟ್ಟೇತೀರಬೇಕಲ್ಲವೆ?

ಈ ಶಂಕೆಗೆ ಪರಿಹಾರವನ್ನು ಎರಡು ದೃಷ್ಟಿಯಿಂದ ಕೊಡಬೇಕು. ಕರ್ಮವು ಫಲವನ್ನು ಕೊಡುವದಕ್ಕೆ ಕರ್ಮದಲ್ಲಿ ಸಂಗ ಮತ್ತು ಫಲದಲ್ಲಿ ಇಚ್ಛೆ ಇವೆರಡೇ ಕಾರಣಗಳು. ಯಾವನಿಗೆ ಅಹಂಕಾರರೂಪವಾದ ಸಂಗವಾಗಲಿ ಮಾಡಿದ ಕರ್ಮದ ಫಲದ ಅಭಿಲಾಷೆಯಾಗಲಿ ಇರುವದಿಲ್ಲವೋ ಅವನಿಗೆ ಕರ್ಮದ ಫಲವನ್ನು ಅನುಭವಿಸುವ ಸಂಭವವೇ ಇರುವದಿಲ್ಲ. ಜ್ಞಾನಿಗೆ ಕರ್ಮದಲ್ಲಿ ಕರ್ತೃತ್ವಬುದ್ಧಿಯಾಗಲಿ, ಕರ್ಮದಿಂದ ಆಗಬೇಕಾದ ಫಲವಿಂಥದ್ದೆಂಬ ಇಚ್ಛೆಯಾಗಲಿ ಇರುವದಿಲ್ಲ. ಆದ್ದರಿಂದ ಶ್ರೀಕೃಷ್ಣಭಗವಂತನಂತೆ ಅವನು ಎಷ್ಟೇ ಕರ್ಮಗಳನ್ನು ಮಾಡಿದರೂ ಅವುಗಳ ಉಪಭೋಗಕ್ಕಾಗಿ ಜನ್ಮಾಂತರವನ್ನು ಪಡೆಯುವದಿಲ್ಲ. ಜ್ಞಾನಿಯು ಸ್ವೇಚ್ಛಾಚಾರದಲ್ಲಿ ತೊಡಗುತ್ತಾನೆಂದು ಶಂಕಿಸುವದಕ್ಕೂ ಕಾರಣವಿಲ್ಲ; ಏಕೆಂದರೆ ಅವನಿಗೆ ಫಲೇಚ್ಛೆಯೇ ಇರುವದಿಲ್ಲ. ಹಾಗಾದರೆ ಜ್ಞಾನಿಯು ಹೇಗೇ ವರ್ತಿಸಲಿ, ಅವನಿಗೆ ಜನ್ಮಾಂತರವಾಗುವದಿಲ್ಲವೆಂದು ಹೇಳಿರುವ ಭಗವದುಕ್ತಿಗೆ ಅಭಿಪ್ರಾಯವೇನು ? - ಎಂದರೆ ಜ್ಞಾನಿಗಳು ಯಾವ ಯಾವ ಶರೀರವನ್ನು ತೆಗೆದುಕೊಂಡಿರುವರೋ ಆಯಾ ಯೋನಿಗೆ ಅನುಗುಣವಾಗಿ ಆಯಾ ಕರ್ಮವನ್ನು ಮಾಡುತ್ತಲೇ ಇರುವರು. ಪ್ರಾರಬ್ಧಕರ್ಮದ ಫಲವಾದ ಈ ಶರೀರವು ಬಿದ್ದಬಳಿಕ ಕಾರಣವಿಲ್ಲದ್ದರಿಂದ ಮತ್ತೆ ಅವರು ಶರೀರಗ್ರಹಣವನ್ನು ಮಾಡುವದಿಲ್ಲ. ಶ್ರೀಕೃಷ್ಣಭಗವಂತನು ಕ್ಷತ್ರಿಯನಾಗಿ ಅವತರಿಸಿದ್ದರಿಂದ ಕ್ಷತ್ರಿಯಧರ್ಮವನ್ನೇ ಅನುಕರಿಸುತ್ತಿದ್ದನು ; ಯಾಜ್ಞವಲ್ಕ್ಯನು ಬ್ರಾಹ್ಮಣನಾಗಿ ಜನಿಸಿದ್ದರಿಂದ

ಬ್ರಾಹ್ಮಣಧರ್ಮವನ್ನೇ ಅನುಕರಿಸುತ್ತಿದ್ದನು. ಲೋಕೋಪಕಾರಕ್ಕಾಗಿ ಅವತರಿಸಿದ ಭಗವಂತನು ಯಾವ ಕರ್ಮವನ್ನೇ ಮಾಡಿದರೂ ಆ ಕರ್ಮಗಳ ಲೇಪವು ಅವನಿಗೆ ಆಗಲಿಲ್ಲ ; ಹೀಗೆಯೇ ಜೀವನ್ಮುಕ್ತರಾದ ಜ್ಞಾನಿಗಳು ಹೇಗೇ ವರ್ತಿಸಲಿ, ಆ ಕರ್ಮಗಳ ಲೇಪವು ಅವರಿಗೆ ಆಗುವದಿಲ್ಲ. ಇದೇ `ಸರ್ವಥಾ ವರ್ತಮಾನೋಽಪಿ' - ಎಂಬುದರ ಅಭಿಪ್ರಾಯವು.

ಈಗ ಇನ್ನೊಂದು ದೃಷ್ಟಿಯಿಂದ ವಿಚಾರಮಾಡೋಣ. ವ್ಯಾವಹಾರಿಕದೃಷ್ಟಿಯಿಂದ ನೋಡಿದರೆ ಜ್ಞಾನಿಯು ಮಿಕ್ಕವರಂತೆ ಹಿಂದೆ ಅನೇಕ ಕರ್ಮಗಳನ್ನು ಮಾಡಿ ಅವುಗಳಲ್ಲಿ ಏಕದೇಶವಾದ ಪ್ರಾರಬ್ಧಕರ್ಮದಿಂದ ಈ ಶರೀರವನ್ನು ಪಡೆದಿರುತ್ತಾನೆ. ಅವನಿಗೆ ಜ್ಞಾನದ ಬಲದಿಂದ ಕರ್ಮದ ಫಲವು ಅಂಟುವದಿಲ್ಲ ; ಹಿಂದೆ ಮಾಡಿದ ಕರ್ಮಗಳು ಹುರಿದ ಬೀಜದಂತೆ ಫಲರೂಪದಿಂದ ಅಂಕುರಿಸುವದಕ್ಕೆ ಅಸಮರ್ಥವಾಗುವವಾಗಿ ಅವನಿಗೆ ಮತ್ತೆ ಜನ್ಮವಾಗುವದಿಲ್ಲ - ಎಂದು ತಿಳಿಸಿದ್ದಾಯಿತು. ಆದರೆ ಜ್ಞಾನಿಯ ಪರಮಾರ್ಥದೃಷ್ಟಿಯಿಂದ ನೋಡಿದರೆ ಹೇಗೆ ? ಅವನು ಹಿಂದೆ, ಈಗ, ಮುಂದೆ - ಎಂಬ ತ್ರಿಕಾಲದಲ್ಲಿಯೂ ಕರ್ತೃತ್ವವಿಲ್ಲದವನು. ಅವನಲ್ಲಿ ಯಾವ ಕರ್ಮಗಳೂ ಎಂದಿಗೂ ಅಂಕುರಿಸಲೇ ಇಲ್ಲ ; ಆದ್ದರಿಂದ ಆ ಕರ್ಮಗಳ ಫಲವೂ ಅವನಿಗೆ ಆಗಿರುವದೇ ಇಲ್ಲ, ಮುಂದೆ ಆಗುವಂತೆಯೂ ಇಲ್ಲ. ನಿಜವಾಗಿ ಹುಟ್ಟಿದ್ದು ನಿಜವಾಗಿ ಸಾಯಲೇಬೇಕು ; ಆದರೆ ಜ್ಞಾನಿಯು ಎಂದಿಗೂ ಹುಟ್ಟುವದೇ ಇಲ್ಲ, ಏಕೆಂದರೆ ಶಾಸ್ತ್ರದೃಷ್ಟಿಯಿಂದ ನೋಡಿದರೆ ಅವನು ಆತ್ಮನೇ ಆಗಿರುತ್ತಾನೆ. `ನ ಜಾಯತೇ ಮ್ರಿಯತೇ ವಾ ಕದಾಚಿತ್' ಎಂದು ಎರಡನೆಯ ಅಧ್ಯಾಯದಲ್ಲಿಯೇ ತಿಳಿಸಿರುವಂತೆ ಆತ್ಮನಿಗೆ ಹುಟ್ಟು, ಇರವು, ಬೆಳವಣಿಗೆ, ಮಾರ್ಪಡುವಿಕೆ, ಸೊರಗುವಿಕೆ, ಸಾವು- ಈ ಯಾವ ವಿಕಾರಗಳೂ ಇರುವದೇ ಇಲ್ಲ. ಆದ್ದರಿಂದ ಜ್ಞಾನಿಯ ದೃಷ್ಟಿಯು ಹೇಗಿರುವದು? `ನನ್ನ ಆತ್ಮನು ಸರ್ವರಿಗೂ ಆತ್ಮನಾದ ಪರಮಾತ್ಮನು. ಅವನಿಗೆ ಯಾವ ಕರ್ಮಗಳೂ ಇರುವದಿಲ್ಲ ; ಯಾವ ಕರ್ಮಫಲದ ಭೋಗವೂ ಇರುವದಿಲ್ಲ. ಆದ್ದರಿಂದ ಫಲಭೋಗಕ್ಕಾಗಿ ಯಾವ ಶರೀರವನ್ನೂ ಅವನು ಧರಿಸುವದಿಲ್ಲ. ಇಂಥ ಆತ್ಮನೇ ನನ್ನ ಸ್ವರೂಪವಾಗಿರುವದರಿಂದ ನನಗೆ ಎಂದಿಗೂ ಜನ್ಮವೆಂಬುದೇ ಇಲ್ಲ. ನಾನು ನಿತ್ಯವಾಗಿ ಅಶರೀರನು'. ಈ ದೃಷ್ಟಿಯಿಂದ ನೋಡಿದಾಗ `ಅವನು ಮತ್ತೆ ಹುಟ್ಟುವದಿಲ್ಲ' ಎಂಬ ಮಾತಿಗೆ ನಾನು ಹುಟ್ಟುವವನೆಂದು ತಿಳಿಯುವದಿಲ್ಲ ಎಂದೇ ಅರ್ಥ.

ನಾವುಗಳು ಈಗ ನಮಗೆ ಹುಟ್ಟುಸಾವುಗಳಿವೆ ಎಂದು ಭಾವಿಸಿಕೊಂಡಿರುತ್ತೇವೆ. ಆದ್ದರಿಂದಲೇ ನಮಗೆ ಈ ಸಂಸಾರದ ಬಾಧೆಯು ತಪ್ಪದೆ ಇರುತ್ತದೆ. ಜ್ಞಾನಿಗಳಿಗೆ ಹುಟ್ಟುಸಾವುಗಳಿಲ್ಲದ ಆತ್ಮಸ್ವರೂಪರು ತಾವೆಂಬ ನಿಶ್ಚಯವಾಗಿರುವದರಿಂದ ಅವರಿಗೆ ಸಂಸಾರವಿಲ್ಲ. ಹೊರಗಿನ ವ್ಯವಹಾರವನ್ನು ನೋಡಿದರೆ ಜ್ಞಾನಿಗಳಿಗೂ ನಮಗೂ ಯಾವ ಹೆಚ್ಚುಕಡಿಮೆಯೂ ಕಾಣಿಸುವದಿಲ್ಲವಲ್ಲ! ಹೀಗಿರುವಲ್ಲಿ, ಅವರಿಗೆ ಮುಂದೆ ಜನ್ಮವಿಲ್ಲ,

ನಮಗೆ ಮಾತ್ರ ಇದೆ ಎಂಬುದಕ್ಕೆ ಗುರುತೇನು ? - ಎಂದು ನೀವು ಕೇಳಬಹುದು, ಅದಕ್ಕೆ ಕಾಮ, ಕಾಮಾಭಾವ - ಎಂಬುದೇ ಗುರುತು. ಪ್ರತಿಯೊಬ್ಬನೂ ತನ್ನ ತನ್ನ ಹೃದಯದಲ್ಲಿ ಕಾಮಗಳಿರುವವೋ ಇಲ್ಲವೋ ಎಂಬುದನ್ನು ಪರೀಕ್ಷಿಸಿ ನೋಡಿಕೊಳ್ಳಬೇಕು. ಶ್ರುತಿಯಲ್ಲಿ ಹೀಗೆಂದು ತಿಳಿಸಿದೆ. `**ಕಾಮಾನ್ ಯಃ ಕಾಮಯತೇ ಮನ್ಯಮಾನಃ ಸ ಕಾಮಭಿರ್ಜಾಯತೇ ತತ್ರ ತತ್ರ । ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯನ್ತಿ ಕಾಮಾಃ**' ॥ ಯಾವನು ಈ ಲೋಕದ ಪರಲೋಕದ ಕಾಮಗಳನ್ನೇ ಮನಸ್ಸಿನಲ್ಲಿ ಹೊರಳಾಡಿಸುತ್ತಾ ಅವುಗಳನ್ನೇ ಬಯಸುತ್ತಿರುವನೋ ಅವನು ಪುಣ್ಯಾಪುಣ್ಯಕರ್ಮಗಳಿಗೆ ಕಾರಣವಾಗಿರುವ ಆಯಾ ಕರ್ಮಗಳಿಂದ ಅವುಗಳು ದೂಡಿದಲ್ಲಿಗೆ ಹೋಗಿ ಹೋಗಿ ಆ ಕಾಮಗಳಿಂದ ಕೂಡಿದ ಕಾರ್ಯಕರಣಸಂಘಾತವುಳ್ಳವನಾಗಿ ಹುಟ್ಟುತ್ತಿರುತ್ತಾನೆ. ಆದರೆ ಯಾವನು ಆತ್ಮನನ್ನು ಬಿಟ್ಟು ಮತ್ತೇನನ್ನೂ ಬಯಸುವದಿಲ್ಲವೋ ಅವನಿಗೆ ಸರ್ವವ್ಯಾಪ್ತನಾದ ಆತ್ಮನು ಎಂದೆಂದಿಗೂ ಪ್ರಾಪ್ತನಾಗಿಯೇ ಇರುವದರಿಂದ ಅವನು ತನ್ನ ಕಾಮದ ಪರಿಪೂರ್ತಿಗಾಗಿ ಎಲ್ಲಿಗೂ ಹೋಗಬೇಕಾದದ್ದಿರುವದಿಲ್ಲ. ಯಾವನು ಅವಿದ್ಯೆಯಿಂದ ದೇಹಾದಿಗಳೇ ತನ್ನ ಆತ್ಮನೆಂದು ತಿಳಿದುಕೊಂಡಿರುವನೋ ಅವನಿಗೆ ಪರಿಚ್ಛಿನ್ನಸ್ವರೂಪವಿರುವದರಿಂದ ಕಾಮಾಪ್ತಿಗಾಗಿ ಶರೀರಾಂತರಗ್ರಹಣವಾಗುವವರೆಗೂ ಕಾಮಗಳು ಇದ್ದುಕೊಂಡು ಗೋಳುಗುಟ್ಟಿಸುತ್ತಿರುವವು. ಆದರೆ ಆತ್ಮಸ್ವರೂಪವನ್ನು ಅರಿತುಕೊಂಡು ಅವಿದ್ಯಾಕೃತಾತ್ಮನನ್ನು ನಾಶಗೊಳಿಸಿಕೊಂಡಿರುವ ಕೃತಾತ್ಮನಿಗೆ ಆ ಕಾಮಗಳು ಈ ಶರೀರವಿರುವಾಗಲೇ ಇಲ್ಲಿಯೇ ನಾಶವಾಗಿಬಿಡುವವು. ಆದ್ದರಿಂದ ಅವರಿಗೆ ಮತ್ತೆ ಶರೀರಗ್ರಹಣ ರೂಪವಾದ ಜನ್ಮವಿರುವದಿಲ್ಲ.

ಆದ್ದರಿಂದ ಪರಮಾರ್ಥದೃಷ್ಟಿಯಿಂದ ನೋಡಿದಾಗ ಆತ್ಮಜ್ಞಾನವಾಗಿಬಿಟ್ಟಿರುವದರಿಂದ ಆತ್ಮನಲ್ಲಿಯೇ ನೆಲೆನಿಂತಿರುವಾತನಿಗೆ ಹುಟ್ಟೇ ಇರುವದಿಲ್ಲ. ಜ್ಞಾನದಿಂದ ಜನ್ಮಮರಣಗಳ ಸಾಲು ಆತ್ಯಂತಿಕವಾಗಿ ನಾಶವಾಗಿಬಿಡುವದು. ಹಿಂದೆ ನೂರಾರು ಜನ್ಮಮರಣಗಳು ನಮಗೆ ಆಗಿರುತ್ತವೆ, ಇನ್ನು ಮುಂದೆ ನೂರಾರು ಜನ್ಮಮರಣಗಳು ಕಾದುಕೊಂಡಿವೆ. ಆದರೂ ನಾವು ಅದಕ್ಕೆ ಬೇಸರದೆ ವಾಂತಿಮಾಡಿದ್ದನ್ನೇ ಮತ್ತೆ ಮತ್ತೆ ತಿನ್ನುವ ನಾಯಿಗಳಂತೆ ಅದೇ ಕಾಮಗಳಿಗೇ ಹಾತುವರಿಯುತ್ತಿರುವೆವು ! ಆದರೆ ಯಾವ ಮಹನೀಯನು ಈ ಕಾಮಗಳ ಬೇಟೆಗೆ ಬೇಸತ್ತಿರುವನೋ ಅವನು ಆತ್ಮಜ್ಞಾನಕ್ಕಾಗಿ ಪ್ರಯತ್ನಿಸುತ್ತಾನೆ. ಆತ್ಮಜ್ಞಾನವಾದಮೇಲೆ ಅವನಿಗೆ ಹುಟ್ಟುಗಳ ಹುಟ್ಟಡಗಿಹೋಗುತ್ತದೆ.

ಈ ಜ್ಞಾನದ ಪ್ರಾಪ್ತಿಗೆ ಉಪಾಯವೇನು ?

**ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥** 13-24

**ಅನ್ಯೇ ತ್ವೇವಮಜಾನನ್ತಃ ಶ್ರುತ್ವಾಽನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ 13-25**

ಇಲ್ಲಿ ಧ್ಯಾನ, ಸಾಂಖ್ಯ, ಕರ್ಮಯೋಗ, ಮುಂತಾದ ಉಪಾಯಗಳನ್ನು ಹೇಳಿದೆ ; ಹಿಂದೆ ಅಮಾನಿತ್ವಾದಿಗಳನ್ನು ಹೇಳಿತ್ತಲ್ಲ ! ಧ್ಯಾನಾದಿಗಳು ಸಾಧನವೊ, ಅಮಾನಿತ್ವಾದಿಗಳೊ?- ಎಂದು ಶಂಕಿಸಬಾರದು. ಏಕೆಂದರೆ ಅಮಾನಿತ್ವಾದಿಗಳು ಇದ್ದವರಿಗೇ ಈ ಧ್ಯಾನಾದಿಗಳು ಉಪಯೋಗಕ್ಕೆ ಬರುತ್ತವೆ. ಪಥ್ಯವನ್ನು ಅನುಸರಿಸುವವರಿಗೇ ಔಷಧಿಯು ನಾಟುವದು ; ಅದರಂತೆ ಅಮಾನಿತ್ವಾದಿಗಳನ್ನು ಅಳವಡಿಸಿಕೊಂಡವರಿಗೇ ಧ್ಯಾನಾದಿಗಳು ಫಲಕಾರಿಯಾಗುವವು. ಧ್ಯಾನವೆಂದರೆ ಎಣ್ಣೆಯ ಧಾರೆಯಂತೆ ಸಂತತವಾಗಿ ಅವಿಚ್ಛಿನ್ನವಾಗಿ ಅಂತಃಕರಣಪ್ರತ್ಯಯವನ್ನು ಆತ್ಮನಲ್ಲಿಯೇ ನಡೆಯಿಸುವದು. ಶಬ್ದಾದಿವಿಷಯಗಳಿಂದ ಶ್ರೋತ್ರಾದಿಗಳನ್ನು ಉಪಸಂಹಾರಮಾಡಿಕೊಂಡು ಮನಸ್ಸನ್ನು ಪ್ರತ್ಯಕ್ಚೇತನರೂಪನಾದ ಆತ್ಮನಲ್ಲಿಯೇ ಇಟ್ಟು ಧ್ಯಾನಮಾಡಬೇಕು. ಹಾಗಾದರೆ ಆತ್ಮನ ಜ್ಞಾನವು ದಕ್ಕುತ್ತದೆ. ಇದೇ ಆರನೆಯ ಅಧ್ಯಾಯದಲ್ಲಿ ಹೇಳಿರುವ ಸಾಧನವು. ಇದನ್ನು ನಿದಿಧ್ಯಾಸನವೆಂದೂ ಕರೆಯುತ್ತಾರೆ. ಎಲ್ಲರೂ ಎಲ್ಲವನ್ನೂ ಧ್ಯಾನಮಾಡುತ್ತಿರುವದಿಲ್ಲ ; ಒಬ್ಬೊಬ್ಬರು ಒಂದೊಂದು ವಸ್ತುವಿನ ಧ್ಯಾನದಲ್ಲಿ ಮುಳುಗಿರುತ್ತಾರೆ. ಏಕಾಗ್ರಚಿತ್ತದಿಂದ ನಾವು ಯಾವದನ್ನು ಧ್ಯಾನಮಾಡುವೆವೋ ಅದರ ಜ್ಞಾನವು ನಮಗೆ ದೊರೆಯುತ್ತದೆ. ಧ್ಯಾನಕ್ಕೆ ಮನಸ್ಸನ್ನು ಉಪಯೋಗಿಸಿದರೂ ಕೊನೆಯಲ್ಲಿ ಆತ್ಮನಿಂದಲೇ ಆತ್ಮನನ್ನು - ಕಾಣುತ್ತೇವೆ. ಬಂಡಿಯಮೇಲೆ ಕುಳಿತುಕೊಂಡು ಬರುವವನು ತನ್ನ ಮನೆಯವರೆಗೂ ಬಂಡಿಯನ್ನೇ ಉಪಯೋಗಿಸಿಕೊಂಡು ಬಂದಿದ್ದರೂ ಕೊನೆಗೆ ಮನೆಯನ್ನು ಪ್ರವೇಶಿಸುವಾಗ ಬಂಡಿಯನ್ನಿಳಿಯಬೇಕಾಗುವಂತೆ ಧ್ಯಾನಕ್ಕೆ ಮನಸ್ಸನ್ನೇ ಉಪಯೋಗಿಸಿಕೊಂಡು ಬಂದಿದ್ದರೂ ಕೊನೆಗೆ ಆತ್ಮನನ್ನು ಆತ್ಮನೇ ಅರಿತುಕೊಳ್ಳುತ್ತಾನೆನ್ನಬೇಕೇ ಹೊರತು ಮನಸ್ಸು ಆತ್ಮನನ್ನು ಅರಿತುಕೊಂಡಂತೆ ಅಲ್ಲ. ಏಕೆಂದರೆ ಮನಸ್ಸಿಗೆ ಆತ್ಮನು ವಿಷಯನಲ್ಲ, ಮನಸ್ಸೇ ಆತ್ಮನಿಗೆ ವಿಷಯವಾಗಿರುತ್ತದೆ. ಧ್ಯಾನಸಂಸ್ಕೃತವಾದ ಮನಸ್ಸಿನವರಿಗೆ ಆತ್ಮನ ಜ್ಞಾನವು ತನಗೆ ತಾನೇ ಆಗುತ್ತದೆ. ಇದು ಪರಮಾತ್ಮನ ಅನುಗ್ರಹವೇ ಆಗಿರುತ್ತದೆ.

ಯಾವನು ಆತ್ಮನ ಧ್ಯಾನದಲ್ಲಿ ನಿಷ್ಠನಾಗಿರುವನೋ ಅವನು ಆತ್ಮನ ಚಿಂತನೆಯಲ್ಲಿರುವಾಗ ಅವನಿಗೆ ಮನಸ್ಸು ಧ್ಯಾನಮಾಡುತ್ತಿದೆ ಎಂದುಕೂಡ ಅರಿವಾಗುವದಿಲ್ಲ. ಇಂಥ ಮಹನೀಯನು ನಮ್ಮ ಮನೆಗೆ ಬಂದರೆ ಅವನ ಶರೀರವನ್ನು ಒಂದು ಬ್ರಹ್ಮರಥವೆಂದು ಭಾವಿಸಬೇಕು. ಅಂಥ ಮಹಾತ್ಮನಿಗೆ ಮಾಡಿದ ಉಪಚಾರವು ಪರಮಾತ್ಮನಿಗೆ ಮಾಡಿದಂತೆಯೇ ಆಗುತ್ತದೆ. ಸಾಹುಕಾರನಿಗೆ ನಾವು ಮಾಡುವ ಉಪಚಾರವು ಹೇಗೆ ಅವನಿಗೆ ಸಾಹುಕಾರಿಕೆಯನ್ನು ಕೊಟ್ಟಿರುವ ಲೌಕಿಕಸಂಪತ್ತಿಗೆ ಸಲ್ಲತಕ್ಕದ್ದಾಗಿರುವದೋ ಹಾಗೆಯೇ ಬ್ರಹ್ಮಧ್ಯಾನದಲ್ಲಿ

ಮಗ್ನನಾಗಿರುವ ಮಹಾಯೋಗಿಗೆ ನಾವು ಮಾಡುವ ಸೇವೆಯೆಲ್ಲವೂ ಆತನ ಧ್ಯೇಯವಾಗಿರುವ ಪರಮಾತ್ಮನಿಗೇ ಸಲ್ಲತಕ್ಕದ್ದು. ಇಂಥ ಧ್ಯಾನನಿಷ್ಠನು ಬಾಹ್ಯದೃಷ್ಟಿಯಿಂದ ಯಾವ ವ್ಯವಹಾರಮಾಡುವಂತೆ ಕಾಣಿಸುತ್ತಿರಲಿ, ಅವನಿಗೆ ಪರಮಾತ್ಮನ ಚಿಂತೆ ಯಾವಾಗಲೂ ತಪ್ಪಿರುವದಿಲ್ಲ. ಕಳ್ಳನೊಬ್ಬನು ಸಾಧುವೇಷವನ್ನು ಹಾಕಿಕೊಂಡು ಬಂದಿದ್ದರೆ ಅವನನ್ನು ಕಾಣುವದಕ್ಕೆ ಬಂದವರು ಎಷ್ಟೇ ಗೌರವವನ್ನು ತೋರಿಸಲಿ, ಪೋಲಿಸಿನವರು ಬಂದಾಗಲೆಲ್ಲ ಹೇಗೆ ಅವನು ಅಳುಕುವಮನಸ್ಸಿನಿಂದ ನೋಡುತ್ತಾನೋ, ಅಷ್ಟೇ ಅಲ್ಲ ; ಪೋಲೀಸಿನವರಲ್ಲದಿದ್ದರೂ ಕಂಡಕಂಡವರನ್ನೆಲ್ಲ ವೇಷಮರೆಯಿಸಿಕೊಂಡು ಬಂದಿದ್ದ ಪೋಲೀಸಿನವರೆಂದೇ ಹೇಗೆ ಶಂಕಿಸುತ್ತಿರುವನೋ, ಹಾಗೆಯೇ ಧ್ಯಾನಿಯು ನಿರಂತರವಾಗಿ ಪರಮಾತ್ಮನ ಧ್ಯಾನದಲ್ಲಿಯೇ ನಿರತನಾಗಿರುತ್ತಾನೆ. ಅವನ ಮನಸ್ಸು ಈ ಧ್ಯಾನ ಮಹತ್ತಿನಿಂದ-ಬಿಸಿಗೆ ಕರಗುವ ಬೆಣ್ಣೆಯಂತೆ - ಕರಗಿ ಪರಮಾತ್ಮನಲ್ಲಿಯೇ ಸೇರಿಹೋಗಿಬಿಡುತ್ತದೆ. ಬಾಹ್ಯಚಿಂತೆಯಿಲ್ಲದೆ, ಸುಮ್ಮನೆಯೂ ಇಲ್ಲದೆ, ಧ್ಯಾನದ ಸುಖವನ್ನೂ ಬಯಸದೆ ಇದ್ದರೆ ಪರಮಾತ್ಮನ ಅನುಗ್ರಹದಿಂದ ಕಟ್ಟಕಡೆಗೆ ಮನಸ್ಸು ಅಮನಸ್ಸಾಗಿ ಆತ್ಮನಲ್ಲಿ ನಿಂತುಬಿಡುತ್ತದೆ. ಇದೇ ಧ್ಯಾನವು.

ಇನ್ನು ಕೆಲವರು **ಸಾಂಖ್ಯಯೋಗದಿಂದ** ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೆ. ಧ್ಯಾನಕ್ಕೂ ಸಾಂಖ್ಯಕ್ಕೂ ಇರುವ ತಾರತಮ್ಯವೇನೆಂದರೆ ಧ್ಯಾನದಲ್ಲಿ ವಿಚಾರವು ಎರಡನೆಯದಾಗಿರುವದು. ಸಾಂಖ್ಯದಲ್ಲಿ ಧ್ಯಾನವು ಎರಡನೆಯದಾಗಿರುವದು. ಎರಡಕ್ಕೂ ವಿಷಯವು ಆತ್ಮವೇ. ಧ್ಯಾನಯೋಗದ ಅನುಷ್ಠಾನದಲ್ಲಿ - ನದಿಯು ಎತ್ತಹೋದರೂ ಕಡಲಕಡೆಗೇ ಮುಂದುವರಿಯುತ್ತಿರುವಂತೆ - ಮನಸ್ಸಿನ ಧ್ಯಾನಪ್ರವಾಹವು ಆತ್ಮನ ಕಡೆಗೇ ಹರಿಯುತ್ತಿರುತ್ತದೆ. **ಸಾಂಖ್ಯಯೋಗದಲ್ಲಿ** ಮನಸ್ಸು ವಿಮರ್ಶೆಯನ್ನೇ ಮಾಡುತ್ತಿರುವದು, ಯಾವಯಾವದು ಮನಸ್ಸಿಗೆ ಬಂದರೂ ಇದೆಲ್ಲವೂ ತ್ರಿಗುಣಾತ್ಮಕವಾಗಿದೆ ಎಂಬುದನ್ನು ಕಂಡುಕೊಳ್ಳುತ್ತಿರುವದು. "ಇದು ತಮೋಗುಣದ ಕಾರ್ಯವು, ಇದು ರಜೋಗುಣದ ಕಾರ್ಯವು, ಇದು ಸತ್ತ್ವಗುಣದ ಕಾರ್ಯವು; ಈ ವಿಷಯಗಳನ್ನು ನೋಡುವ ಇಂದ್ರಿಯಗಳೂ ಗುಣಾತ್ಮಕವೇ ಆಗಿರುತ್ತವೆ ; ಮನೋಬುದ್ಧಿಗಳೂ ಗುಣಾತ್ಮಕವೇ. ನಾನು ಈ ಬಾಹ್ಯಾಧ್ಯಾತ್ಮಿಕವಸ್ತುಗಳೆಲ್ಲಕ್ಕಿಂತಲೂ ವಿಲಕ್ಷಣನಾಗಿ ಇವುಗಳೆಲ್ಲವನ್ನೂ ನನ್ನ ಚೈತನ್ಯದಿಂದ ಬೆಳಗುತ್ತಿರುವ ಆತ್ಮಸ್ವರೂಪನಾಗಿರುತ್ತೇನೆ"- ಎಂದು ಮನಸ್ಸಿನಲ್ಲಿ ವಿಚಾರವನ್ನು ಮಾಡಿಕೊಳ್ಳುತ್ತಿರುವದೇ ಸಾಂಖ್ಯಯೋಗವು. ಗುಣಗಳು ಮೂರೇ ಆದರೂ ಅವುಗಳ ರೂಪಾಂತರಗಳು ಲೆಕ್ಕವಿಲ್ಲದಷ್ಟು ಇರುವವು. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವಾಗಿ ಕಾಣುವ ವಸ್ತುಗಳೆಲ್ಲವೂ ಈ ಮೂರು ಗುಣಗಳ ಕಾರ್ಯವೇ. 'ಗುಣಗಳು ಇದ್ದಂತೆ ಇರುವದಿಲ್ಲ. ಒಬ್ಬಾನೊಬ್ಬ ಸಾಂಖ್ಯಾಚಾರ್ಯನು ಹೇಳಿರುವಂತೆ `ಗುಣಾನಾಂ ಪರಮಂ ರೂಪಂ ನ ದೃಷ್ಟಿಪಥಮೃಚ್ಛತಿ । ಯತ್ತು ದೃಷ್ಟಿಪಥ ಪ್ರಾಪ್ತಂ ತನ್ಮಾಯೈವ ಸುತುಚ್ಛಕಮ್॥'

ಗುಣಗಳ ಪರಮರೂಪವು ಕಣ್ಣಿಗೆ ಗೋಚರವಾಗತಕ್ಕದ್ದಲ್ಲ ; ಯಾವದು ದೃಷ್ಟಿಪಥಕ್ಕೆ ಸಿಕ್ಕಿರುವದೋ ಅದು ಮಾಯೆಯೇ, ಸುತುಚ್ಛಕವಾದದ್ದು. ಸಾಂಖ್ಯರ ದೃಷ್ಟಿಯಲ್ಲಿ ಗುಣಗಳ ಕಾರ್ಯವು ಮಾಯಾಮಾತ್ರವಾಗಿದ್ದರೂ ಗುಣಗಳು ಪರಮಾರ್ಥವಾಗಿರುತ್ತವೆ. ಯಾವಯಾವದು ತನ್ನ ಮುಂದೆ ಯಾವಯಾವ ರೂಪದಿಂದ ಕಾಣಿಸಿಕೊಂಡರೂ ವಿಷಯರೂಪವಾಗಿರಲಿ ವಿಷಯಿರೂಪವಾಗಿರಲಿ - ಇದೆಲ್ಲ ಗುಣಗಳ ವಿಲಾಸವು. ಗುಣಗಳು ಗುಣಗಳಲ್ಲಿ ವಿಹರಿಸಿದ ಮಾತ್ರದಿಂದ ನನಗೆ ಆದದ್ದೇನು ? ಸ್ವಪ್ನದಲ್ಲಿ ಕಾಣುವ ವಿಷಯಗಳೂ ಇಂದ್ರಿಯಗಳೂ ಹೇಗೆ ಸಮವಾಗಿಯೇ ಅವಿದ್ಯೆಯ ವಿಲಾಸವಾಗಿರುವವೋ ಹಾಗೆಯೇ ಎಚ್ಚರದಲ್ಲಿ ತೋರುತ್ತಿರುವ ಈ ಇಂದ್ರಿಯಗಳೂ ವಿಷಯಗಳೂ ಅವಿದ್ಯಾಮಾತ್ರವಾಗಿರುತ್ತವೆ. ಸಾಕ್ಷಿಯಾಗಿರುವ ನನ್ನ ಸ್ವರೂಪದಲ್ಲಿ ಈ ಗುಣಗಳ ಸಂಬಂಧವು ಒಂದಿಷ್ಟೂ ಇರುವದಿಲ್ಲ- ಎಂದು ವಿಮರ್ಶಾಪೂರ್ವಕವಾಗಿ ನಿಶ್ಚಯಿಸುವದೇ ಸಾಂಖ್ಯಯೋಗವು. ಈ ಸಾಂಖ್ಯಯೋಗದಿಂದ ಅನಾತ್ಮವಾದದ್ದೆಲ್ಲವೂ ಸೂರ್ಯನ ಪ್ರಕಾಶಕ್ಕೆ ಕರಗುವ ಕಾವಳದಂತೆ ಕರಗಿ ಮೈಗರೆಯುವದು. ಆತ್ಮನೇ ಆತ್ಮನಲ್ಲಿ ನಿಂತುಕೊಳ್ಳುತ್ತಾನೆ. ಇದು ಮೇಲೆ ಹೇಳಿದ ಧ್ಯಾನಯೋಗಕ್ಕಿಂತ ವಿಲಕ್ಷಣಪ್ರಕಾರದ ಮತ್ತೊಂದು ಆತ್ಮಪ್ರಾಪ್ತ್ಯುಪಾಯವು.

ಇನ್ನು ಮತ್ತೆ ಕೆಲವರು ಕರ್ಮಯೋಗದಿಂದ ಆತ್ಮನನ್ನು ಕಂಡುಕೊಳ್ಳುತ್ತಾರೆ. ಧ್ಯಾನಯೋಗವು ಸಾಂಖ್ಯಯೋಗಕ್ಕೆ ಅಧಿಕಾರವಿಲ್ಲದ ಮಧ್ಯಮಾಧಿಕಾರಿಗಳ ವಿಷಯವು. ಕರ್ಮಯೋಗವು ಧ್ಯಾನಯೋಗಕ್ಕೂ ತಕ್ಕ ಅಧಿಕಾರವಿಲ್ಲದ ಬಹಿಶ್ಚಿತ್ತರ ವಿಷಯವು. ಈ ಯೋಗದಲ್ಲಿ ಶಾಸ್ತ್ರೋಕ್ತವಾದ ಕರ್ಮಗಳನ್ನು ದ್ವಂದ್ವಸಹನಪೂರ್ವಕವಾಗಿ ಈಶ್ವರಾರ್ಪಣಬುದ್ಧಿಯಿಂದ ಅನುಷ್ಠಾನಮಾಡುವದೇ ಸಾಧನವು. ವೀರರಾದ ಯೋಧರು ಶತ್ರುಗಳ ಸೇನೆಯು ಎದುರಿಗೆ ಬಂದರೂ ಅವರ ಆಯುಧಗಳ ಪ್ರಹಾರಗಳನ್ನು ಲೆಕ್ಕಿಸದೆ ಹೇಗೆ ಮುನ್ನುಗ್ಗುವರೋ ಕೋಟೆಯ ಬಾಗಿಲನ್ನು ಬಲಾತ್ಕಾರದಿಂದಲಾದರೂ ಒಡೆದುಕೊಂಡು ಊರೊಳಕ್ಕೆ ಪ್ರವೇಶಿಸುವರೋ ಹಾಗೆ ಗಹನವಾದ ಕರ್ಮಗಳನ್ನೇ ಅನುಷ್ಠಾನ ಮಾಡಿ ಅವುಗಳು ಬಂಧಕವಾಗದಂತೆ ಮಾಡಿಕೊಳ್ಳುವ ಉಪಾಯವು ಈ ಕರ್ಮಯೋಗವು. ಕರ್ಮವು ಇವರಿಗೆ ನೆಪ ಮಾತ್ರ ; ಅದರ ಸಂಗವಾಗಲಿ ಫಲೇಚ್ಛೆಯಾಗಲಿ ಇವರಿಗೆ ಬೇಡ : ಕುದುರೆಯ ಸವಾರನು ವೇಗವಾಗಿ ಸವಾರಿ ಮಾಡುತ್ತಿರುವದು ತನ್ನ ಮಜಲನ್ನು ಮುಟ್ಟುವದಕ್ಕೇ ಇರುವಂತೆ ಕರ್ಮಯೋಗಿಯು ಮಾಡುತ್ತಿರುವ ಕರ್ಮವು ಸರ್ವರ ಆತ್ಮನಾದ ಪರಮೇಶ್ವರನ ಪ್ರಾಪ್ತಿಗಾಗಿಯೇ ಇರುವದು. ಪ್ರಾಪ್ತನಾದಮೇಲೆ ಈಶ್ವರನು ಸಾಧಕನ ಆತ್ಮನೇ ಆಗಿರುತ್ತಾನೆ; ಪ್ರಾಪ್ತಿಯಾಗುವ ಮುಂಚೆ ಅವನೇ ಪ್ರಾಪ್ತಿಗೆ ಉಪಾಯಸ್ವರೂಪನೂ ಆಗಿರುತ್ತಾನೆ. ಕರ್ಮಗಳನ್ನು ಈಶ್ವರಾರ್ಪಣಬುದ್ಧಿಯಿಂದ ಅನುಷ್ಠಾನಮಾಡಿದಂತೆಲ್ಲ ಕರ್ಮದ ವಿಷದ ಮುಳ್ಳನ್ನು ಕಿತ್ತುಹಾಕಿದಂತೆ ಆಗುತ್ತದೆ. ಕರ್ಮದಲ್ಲಿ ಯಾವ ವೈಗುಣ್ಯವಿದ್ದರೂ ಈಶ್ವರನೇ ಸರಿಪಡಿಸಿಕೊಳ್ಳುತ್ತಾನೆ. ಆಯಾ ಕರ್ಮದ ಕ್ಷುದ್ರಫಲವನ್ನು ಕರ್ಮಯೋಗಿಯು ಬಯಸದೆ

ಇರುವದರಿಂದ ಮಹಾಫಲವಾಗಿ ಆತ್ಮಜ್ಞಾನಪ್ರಾಪ್ತಿಗೆ ಬೇಕಾದ ಸತ್ತ್ವಶುದ್ಧಿಯನ್ನು ಈಶ್ವರನೇ ಈ ಯೋಗಿಗೆ ಅನುಗ್ರಹಿಸುತ್ತಾನೆ. ಆ ಬಳಿಕ ಇವನು ತನಗೆ ಅನುರೂಪವಾದ ಧ್ಯಾನಯೋಗವನ್ನೋ ಸಾಂಖ್ಯಯೋಗವನ್ನೋ ಅನುಸರಿಸಿ ಕೃತಾರ್ಥನಾಗುತ್ತಾನೆ.

ಇನ್ನೂ ಒಂದು ವರ್ಗದ ಸಾಧಕರು ಉಂಟು. ಅವರಿಗೆ ಕರ್ಮಯೋಗ, ಧ್ಯಾನಯೋಗ, ಸಾಂಖ್ಯಯೋಗ- ಯಾವದನ್ನು ಹೇಗೆ ಮಾಡಬೇಕೆಂಬುದು ತಿಳಿದಿರುವದಿಲ್ಲ. ಹೇಗಾದರೂ ಮಾಡಿ ಪರಮಾತ್ಮನನ್ನು ಮುಟ್ಟಬೇಕೆಂಬ ತೀವ್ರವಾದ ಹಂಬಲಿಕೆಯು ಮಾತ್ರ ಅವರಿಗೆ ಇರುತ್ತದೆ. ಅಂಥವರಿಗೆ ಗುರುಗಳಾದವರು 'ನೀವು ಇಂಥ ಮಾರ್ಗವನ್ನು ಅವಲಂಬಿಸಬೇಕು, ಇಂಥ ಧ್ಯಾನವನ್ನು ಮಾಡಬೇಕು, ಹೀಗಾದರೆ ನೀವು ಕೃತಾರ್ಥರಾಗುವಿರಿ' ಎಂದು ತಿಳಿಸಿ ಕೊಡುತ್ತಾರೆ. ದೊಡ್ಡವರು ಹೇಳಿದ್ದರಲ್ಲಿ ವಿಶ್ವಾಸವಿರುವದರಿಂದ ಶ್ರುತಿಪರಾಯಣರಾದ ಈ ಸಾಧಕರು ಅವರು ಉಪದೇಶಿಸಿದ್ದರಲ್ಲಿಯೇ ನಿಷ್ಠರಾಗಿ ನಡೆದು ಕೊಳ್ಳುತ್ತಾರೆ. ಆ ಉಪಾಸನೆಯಿಂದಲೂ ಅವರು ಜ್ಞಾನಪ್ರಾಪ್ತಿಗೆ ಅಡ್ಡಿಯಾಗಿರುವ ಮೃತ್ಯುರೂಪವಾದ ಅವಿದ್ಯೆಯನ್ನು ಕ್ರಮಕ್ರಮವಾಗಿ ದಾಟುತ್ತಾರೆ. ಅಧ್ಯಾತ್ಮವಿದ್ಯೆಯಲ್ಲಿ ಶ್ರದ್ಧೆಯು ಬಹಳ ಪ್ರಯೋಜನಕಾರಿಯಾಗಿರುತ್ತದೆ. ಶಾಸ್ತ್ರದಲ್ಲಿ ಹೇಳಿರುವ ಸಿದ್ಧಾಂತವನ್ನೂ ಸಾಧನವನ್ನೂ ಯಥಾವತ್ತಾಗಿ ತಿಳಿದುಕೊಳ್ಳುವದು ನಮ್ಮೆಲ್ಲರಿಗೂ ಸಾಧ್ಯವಾಗಿರುವದಿಲ್ಲ. ಆದರೆ ಗುರುದೈವತಭಕ್ತಿಯಿಂದೊಡಗೂಡಿದ ಪ್ರಯತ್ನವನ್ನು ಮಾಡಿದರೆ ನಾವು ಯಾವ ಕೀಳುಮಟ್ಟದಲ್ಲಿದ್ದರೂ ಮುಂದುವರಿಯಬಹುದು. ದೊಡ್ಡವರ ಉಪದೇಶದಲ್ಲಿ ಶ್ರದ್ಧೆಯಿರುವದೆಂಬುದು ಒಂದು ದೊಡ್ಡ ಉಪಾಯವು. ಆದ್ದರಿಂದಲೇ ಶ್ರದ್ಧಾಭಕ್ತಿಧ್ಯಾನ ಯೋಗದಿಂದ ತಿಳಿದುಕೊಳ್ಳಬೇಕು-ಎಂದು ಶ್ರುತಿಯು ಹೇಳುತ್ತಿದೆ.

ಅಂತೂ ಮೇಲೆ ಹೇಳಿದ ಮಾರ್ಗತ್ರಯದ ಅವಲಂಬನೆಯನ್ನು ನಾವೇ ಅರಿತುಕೊಳ್ಳುವದರಿಂದ ಅಥವಾ ಗುರುಗಳು ಹೇಳಿದ ಪ್ರಕಾರ ಉಪಾಸನೆಮಾಡಿ ಕ್ರಮಕ್ರಮವಾಗಿ ಈ ಮಾರ್ಗಗಳಲ್ಲಿ ಒಂದನ್ನು ಅವಲಂಬಿಸುವದರಿಂದ ಪರಮಾತ್ಮಜ್ಞಾನವಾಗುತ್ತದೆ. ಅದರಿಂದ ಮೃತ್ಯುಯುಕ್ತವಾದ ಈ ಸಂಸಾರವನ್ನು ದಾಟಬಹುದು. ಪರಮಾತ್ಮನನ್ನು ಅರಿತುಕೊಂಡವನಿಗೆ ಪುನರ್ಜನ್ಮವಿಲ್ಲ-ಎಂಬುದು ಭಗವಂತನ ಉಪದೇಶದ ಸಾರವು.

## ೧೨೬. ಅಜ್ಞಾನದಿಂದ ಬಂಧ, ಜ್ಞಾನದಿಂದ ಮುಕ್ತಿ 13 - (26-27)

(1-5-49)

ಪ್ರಕೃತಿಗೂ ತನಗೂ ಯಾವ ಸಂಬಂಧವೂ ನಿಜವಾಗಿಲ್ಲದಿದ್ದರೂ ಮನುಷ್ಯನು ಪ್ರಕೃತಿಯನ್ನೇ ನಾನು, ನನ್ನದು - ಎಂದು ವ್ಯವಹರಿಸುತ್ತಿರುತ್ತಾನೆ. ಇದೇ ಅವನ 'ಪ್ರಕೃತಿಸ್ಥತ್ವವು'. ಪರಿಚ್ಛಿನ್ನವಾದ ಯಾವದೋ ಒಂದು ಹುಸಿರೂಪವನ್ನು ನಾನು ಎಂದು

ಕನಸಿನಲ್ಲಿ ವ್ಯವಹರಿಸುತ್ತಿರುವೆವೆಂಬುದು ನಮಗೆಲ್ಲರಿಗೂ ತಿಳಿದೇ ಇದೆ. ಅದರಂತೆಯೇ ನಾವು ಎಚ್ಚರದಲ್ಲಿಯೂ ವ್ಯವಹರಿಸುತ್ತೇವೆಂಬುದು ಮಾತ್ರ ಅನೇಕರಿಗೆ ತಿಳಿಯದು. ಈ ಅಜ್ಞಾನದಿಂದಾದ ಅಭಿಮಾನದ ಫಲವಾಗಿ ಸದಸದ್ಯೋನಿಗಳಲ್ಲಿ ಮನುಷ್ಯನು ಜನ್ಮವನ್ನು ಪಡೆಯುತ್ತಿರುವನು. ಆದರೆ ಯಾವನು ಪುರುಷನೆಂಬ ತನ್ನ ಸ್ವರೂಪದಿಂದ ಪ್ರಕೃತಿಯನ್ನು ಬೇರ್ಪಡಿಸಿಕೊಂಡು ಅರಿಯುವನೋ ಅವನು ಪರಮಪುರುಷನಾದ ಪರಮಾತ್ಮನಲ್ಲಿ ಒಂದಾಗಿಬಿಡುವದರಿಂದ ಅವನಿಗೆ ಭೂಯೋಜನ್ಮವಿರುವದಿಲ್ಲ ಎಂದು ಭಗವಂತನು ಹೇಳಿರುತ್ತಾನೆ.

ಪುರುಷನನ್ನೂ ತ್ರಿಗುಣಾತ್ಮಕವಾದ ಪ್ರಕೃತಿಯನ್ನೂ ವಿಂಗಡಿಸಿಕೊಂಡು ಆತ್ಮಸ್ವರೂಪವನ್ನು ಇದ್ದದ್ದು ಇದ್ದಂತೆ ಕಂಡುಕೊಳ್ಳುವುದು ಕಷ್ಟ. ಅದಕ್ಕಾಗಿ ಧ್ಯಾನಯೋಗ, ಸಾಂಖ್ಯಯೋಗ, ಕರ್ಮಯೋಗ- ಎಂಬ ಮೂರು ಸಾಧನಗಳನ್ನು ಭಗವಂತನು ಹೇಳಿರುತ್ತಾನೆ.

ಅನೇಕರು ಭಗವದ್ಗೀತೆಯನ್ನು ಒಂದು ಸಲ ಓದಿ ಕರ್ಮಯೋಗವೆಂಬುದು ಕಡಿಮೆಯ ದರ್ಜೆಯವರಿಗೆ ಹೇಳಿದ ಸಾಧನವೆಂದು ಅಸಡ್ಡೆಯಿಂದ ಕಾಣುತ್ತಾರೆ. ಆದರೆ ಕರ್ಮಯೋಗವೆಂದರೇನೂ ಬಿಟ್ಟಿಯ ಮಾತಲ್ಲ ; ಕರ್ಮವನ್ನು ಈಶ್ವರಾರ್ಪಣಬುದ್ಧಿಯಿಂದ ಸಂಗತ್ಯಾಗಫಲತ್ಯಾಗಪೂರ್ವಕವಾಗಿ ಮಾಡುವ ಮಹನೀಯರು ಬಹು ವಿರಳ. ಈಗಿನ ಕಾಲದಲ್ಲಿ ಶಾಸ್ತ್ರೋಕ್ತಕರ್ಮಗಳ ಸ್ವರೂಪವನ್ನು ತಿಳಿದುಕೊಂಡಿರುವವರೇ ಕಡಿಮೆ ; ಇನ್ನು ಕರ್ಮಯೋಗಕ್ಕ ಅಧಿಕಾರಿಗಳು ಹೇಗೆ ಸಿಕ್ಕಬೇಕು ? ಜನರು ಕರ್ಮವೆಂದರೆ ಹೊಟ್ಟೆಪಾಡಿಗಾಗಿ ಮಾಡುವ ಕೆಲಸ ಎಂದೇ ಅರ್ಥಮಾಡಿಕೊಂಡಿರುತ್ತಾರೆ. ಯಾವನಾದರೊಬ್ಬನು ಬಹಳ ಚಟುವಟಿಕೆಯಿಂದ ವ್ಯವಹಾರದಲ್ಲಿ ತೊಡಗಿದ್ದರೆ ಅವನನ್ನೇ ಕರ್ಮಯೋಗಿ ಎಂದು ಹೊಗಳುವರು. ಐದಕ್ಷರಗಳು ಬಂದವನನ್ನು ಪಂಚಾಕ್ಷರಿಯ ಉಪದೇಶಕ್ಕೆ ಗುರುವೆನ್ನುವದು ಹೇಗೋ, ನಾಲ್ಕಾರು ರೂಪಾಯಿಗಳಿದ್ದವನನ್ನು ಸಾಹುಕಾರನೆಂದು ಕರೆಯುವದು ಹೇಗೋ, ಲೌಕಿಕಕರ್ಮದಲ್ಲಿ ನಿರತನಾದವನನ್ನು ಕರ್ಮಯೋಗಿ ಎಂದು ಕರೆಯುವದೂ ಹಾಗೆಯೇ ನಗೆಪಾಟಲಿನ ಮಾತು. ಶಾಸ್ತ್ರೀಯಕರ್ಮವು ಯಾವನಿಗೆ ವಿಹಿತವಾಗಿದೆಯೋ ಅವನಿಗೆ ಆ ಕರ್ಮವನ್ನು ಬಿಟ್ಟಿದ್ದರಿಂದ ಪ್ರತ್ಯವಾಯವೇನೋ ಆಗಿಬಿಟ್ಟಿರುತ್ತದೆ ; ಅದನ್ನು ತಪ್ಪಿಸಿಕೊಳ್ಳುವುದಕ್ಕೆ ಆಗುವಂತಿಲ್ಲ. ಆದರೂ ಈಗಲೂ ಕರ್ಮಹೀನರಾದ ಇಂಥ ಜನರಿಗೂ ಉಪಾಯವಿಲ್ಲವೆನ್ನುವಂತೆ ಇಲ್ಲ. 'ವಿಧಿಕ್ರಿಯಾವಿಹೀನಾನಾಂ ಗತಿರ್ಗೋವಿಂದಕೀರ್ತನಮ್' ಶಾಸ್ತ್ರವಿಹಿತಕರ್ಮಗಳನ್ನು ಬಿಟ್ಟವರಿಗೆ ಪರಮಾತ್ಮನ ನಾಮದ ಕೀರ್ತನೆಯೇ ಗತಿಯು. ಹೇಗಾದರೂ ಮಾಡಿ ಪರಮೇಶ್ವರನ ಕಡೆಗೆ ತಿರುಗಬೇಕು. ಆಗ ಕ್ರಮಕ್ರಮವಾಗಿ ಆತನನ್ನು ಪಡೆಯುವ ಸಾಧನವು ವಶವಾಗುವದು.

ತಮಗೆ ನೇರವಾಗಿ ಯಾವ ಸಾಧನಕ್ರಮವೂ ತಿಳಿಯದೆ ಇದ್ದರೂ ದೊಡ್ಡವರ ಮಾತಿನಲ್ಲಿ ವಿಶ್ವಾಸವಿದ್ದು ಅವರ ಉಪದೇಶದಂತೆ ಅನುಷ್ಠಾನಮಾಡುವವರನ್ನೂ ಅವಶ್ಯವಾಗಿ

ಭಗವಂತನು ಅನುಗ್ರಹಿಸುವನು. ಭಕ್ತಿಯು ಹೊರಗಿನ ಆಚಾರಕ್ಕಿಂತಲೂ ಎಷ್ಟು ಹೆಚ್ಚಿನ ಫಲಕಾರಿ ಎಂಬುದು ಭಕ್ತಚಮ್ಮಾರ ರಾಮದಾಸನ ಕಥೆಯಿಂದ ವ್ಯಕ್ತವಾಗುತ್ತದೆ. ಈ ಕಥೆಯನ್ನು 'ಕಲ್ಯಾಣ'ವೆಂಬ ಹಿಂದೀಪತ್ರಿಕೆಯಲ್ಲಿ ಕೆಲವು ವರ್ಷಗಳ ಹಿಂದೆ ನಾನು ಓದಿದ್ದೆನು. ರಾಮದಾಸನು ಜೋಡುಹೊಲೆಯುವ ಕೆಲಸದವನಾದರೂ ಕೀರ್ತನಕಾರರೊಬ್ಬರು ಹೇಳಿದ "ನಾನು ಹರಿ, ನೀನು ಹರಿ, ಜಗವೆಲ್ಲವೂ ಹರಿ" ಎಂಬ ಪದವನ್ನು ಭಾವಪೂರ್ವಕವಾಗಿ ಹಾಡಿಕೊಂಡು ಆನಂದಿಸುತ್ತಿದ್ದನು ; ಯಾವನೋ ಒಬ್ಬನು ಅವನಿಗೆ ಕೊಟ್ಟ ಸಾಲಿಗ್ರಾಮದ ಶಿಲೆಯು ಅಂಥ ಮಹತ್ತ್ವದ್ದೆಂದು ಒಬ್ಬ ಬ್ರಾಹ್ಮಣನಿಂದ ದೈವವಶದಿಂದ ತಿಳಿದುಕೊಂಡು ಅದನ್ನು ಭಕ್ತಿಯಿಂದ ಪೂಜಿಸಹತ್ತಿದನು. ಶಾಸ್ತ್ರನಿಯಮವನ್ನು ಅರಿಯದವನಾದರೂ ವಿಚಾರಶಕ್ತಿಯೂ ಇಲ್ಲದವನಾದರೂ ಭಗವಂತನಲ್ಲಿದ್ದ ಅನನ್ಯಪ್ರೇಮವೇ ಅವನಿಗೆ ಭಗವಂತನ ಸಗುಣಸಾಕಾರಮೂರ್ತಿಯ ಸಾಕ್ಷಾತ್ಕಾರವನ್ನು ತಂದುಕೊಟ್ಟಿತು ! ಈ ಕಥೆಯು ಐತಿಹಾಸಿಕವೆ, ಅಲ್ಲವೆ - ಎಂದು ಮುಂತಾಗಿ ವಿಚಾರಮಾಡುತ್ತಾ ವ್ಯರ್ಥಕಾಲಕ್ಷೇಪವನ್ನು ಮಾಡುವದು ಸರಿಯಲ್ಲ. ನಮಗೆ ಯಾವದೊಂದು ಮಾರ್ಗವು ತಿಳಿಯಲಿ ತಿಳಿಯದಿರಲಿ, ದೊಡ್ಡವರು ಹೇಳಿದ ಮಾರ್ಗದಲ್ಲಿ ಶ್ರದ್ಧೆಯಿಂದ ಭಗವಂತನನ್ನು ಉಪಾಸನೆಮಾಡುವದಕ್ಕೆ ಹೊರಟರೆ ಆ ಭಕ್ತಿಯೇ ನಮ್ಮನ್ನು ಮೃತ್ಯುರೂಪವಾದ ಸಂಸಾರಸಾಗರದಿಂದ ದಾಟಿಸುತ್ತದೆ- ಎಂಬುದೇ ಇಲ್ಲಿ ತಿಳಿಯಬೇಕಾದದ್ದು.

ಈ ಜಗತ್ತಿನಲ್ಲಿ ಕಾಣುವ ಸ್ಥಾವರಜಂಗಮಪ್ರಾಣಿಗಳೆಲ್ಲವೂ ತಾವುತಾವು ಮಾಡಿದ ಧರ್ಮಾಧರ್ಮಗಳ ಫಲವಾಗಿಯೇ ಆಯಾ ಯೋನಿಯನ್ನು ಪಡೆದಿರುತ್ತವೆ. ಬ್ರಹ್ಮನಿಂದ ಸ್ತಂಬಪವರೆಗಿನ ಭೂತಗಳಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಸುಖ - ಮುಂತಾದವುಗಳು ತಾರತಮ್ಯದಿಂದ ಕಡಿಮೆಯಾಗುತ್ತಾ ಬಂದಿರುತ್ತವೆ. ಮನುಷ್ಯಯೋನಿಯಲ್ಲಿಯೇ ಲೆಕ್ಕವಿಲ್ಲದಷ್ಟು ಬೇರೆಬೇರೆಯ ಬಗೆಯ ಶರೀರಾಕೃತಿ, ರೂಪ, ಬಲ, ಆರೋಗ್ಯ, ಬುದ್ಧಿ, ಪ್ರವೃತ್ತಿ - ಮುಂತಾದವುಗಳಿಂದ ಚಿತ್ರವಿಚಿತ್ರವಾಗಿರುವ ತಾರತಮ್ಯವುಳ್ಳ ಜೀವರು ಕಂಡುಬರುತ್ತಾರೆ. ಮನ್ವಾದಿಸ್ಮೃತಿಗಳಲ್ಲಿ ಈ ವೈಚಿತ್ರ್ಯಕ್ಕೆಲ್ಲ ಪ್ರಾಕ್ತನಕರ್ಮವು ಕಾರಣವೆಂದು ವರ್ಣಿತವಾಗಿರುತ್ತದೆ. ಕರ್ಮಕ್ಕೆ ಕಾಮವೂ ಕಾಮಕ್ಕೆ ಅವಿದ್ಯೆಯೂ ಕಾರಣವು. ಎಲ್ಲಕ್ಕೂ ಮೂಲವಾಗಿರುವ ಅವಿದ್ಯೆಯು ಪ್ರಕೃತಿಪುರುಷರ ಅಥವಾ ಕ್ಷೇತ್ರಕ್ಷೇತ್ರಜ್ಞರ ಕಲೆಬೆರಕೆ ಯಿಂದಲೇ ಆಗಿರುತ್ತದೆ. ಆದ್ದರಿಂದಲೇ ಇಲ್ಲಿ ಭಗವಂತನು -

ಯಾವತ್ಸಂಜಾಯತೇ ಕಿಂಚಿತ್ ಸತ್ತ್ವಂ ಸ್ಥಾವರಜಂಗಮಮ್ |
ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್ವಿದ್ಧಿ ಭರತರ್ಷಭ || 13-26

ಎಲ್ಲಾ ಪ್ರಾಣಿಗಳೂ ಕ್ಷೇತ್ರಕ್ಷೇತ್ರಜ್ಞರ ಸಂಯೋಗದಿಂದ ಉಂಟಾಗಿರುತ್ತವೆ ಎಂದು ಹೇಳಿರುತ್ತಾನೆ. ಸಂಯೋಗವೆಂದರೆ ಪುಸ್ತಕಕ್ಕೂ ಕೈಗೂ ಆಗುವಂತೆ ಒಂದರೊಡನೊಂದು ಸೇರಿಕೊಂಡ ಸಂಬಂಧವಲ್ಲ ; ಹೂವಿಗೂ ಬಣ್ಣಕ್ಕೂ ಇರುವಂತೆ ಅಥವಾ ಮಣ್ಣಿಗೂ ಮಡಕೆಗೂ

ಇರುವಂತೆ ಇರುವ ಸಂಬಂಧವೂ ಅಲ್ಲ. ಹಗ್ಗವನ್ನು ಹಾವೆಂದು ತಿಳಿಯುವಂತೆಯೂ ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದು ತಿಳಿಯುವಂತೆಯೂ ಭ್ರಾಂತಿಯಿಂದ ಕ್ಷೇತ್ರಕ್ಷೇತ್ರಜ್ಞರನ್ನು ಒಂದರಲ್ಲೊಂದು ಕಲೆಬೆರಕೆಯಾಗಿ ಒಂದು ಪದಾರ್ಥವೆಂದು ತಪ್ಪಾಗಿ ತಿಳಿದುಕೊಂಡಿರುವದೇ ಈ ಸಂಯೋಗವು. ಕ್ಷೇತ್ರವೆಂಬುದು ಹಿಂದೆ ವರ್ಣಿಸಿದಂತೆ ದೇಹ, ಇಂದ್ರಿಯ, ಮನಸ್ಸು, ಬುದ್ಧಿ - ಮುಂತಾದವುಗಳಾಗಿ ಪರಿಣಮಿಸಿ ಇಚ್ಛಾದ್ವೇಷಾದಿಕಾರ್ಯರೂಪವನ್ನು ಧರಿಸುತ್ತದೆ; ನಿಜವಾಗಿ ನೋಡಿದರೆ ಅದು ಕನಸಿನಲ್ಲಿ ತೋರುವ ದೇಹಾದಿಗಳಂತೆಯೂ ಇಚ್ಛಾದಿಗಳಂತೆಯೂ ಬರಿಯ ತೋರಿಕೆಯೇ ಆಗಿರುತ್ತದೆ. ಕ್ಷೇತ್ರಜ್ಞನಾದ ಪುರುಷನೋ ಎಂದರೆ ಎಲ್ಲವನ್ನೂ ನೋಡುವ ಸಾಕ್ಷಿಯಾಗಿ ಸ್ವರೂಪದಿಂದ ನಿತ್ಯಶುದ್ಧಬುದ್ಧಮುಕ್ತ ಸ್ವಭಾವನಾಗಿ ಯಾವ ಉಪಾಧಿಯ ಹಂಗೂ ಇಲ್ಲದವನಾಗಿರುತ್ತಾನೆ. ಆದರೆ ಹೀಗೆ ಅತ್ಯಂತ ವಿವಿಕ್ತವಾಗಿ ಅತ್ಯಂತವಿಲಕ್ಷಣವಾಗಿರುವ ಸ್ವರೂಪವುಳ್ಳ ಈ ಎರಡನ್ನೂ ವಿಂಗಡಿಸಿ ಅರಿತುಕೊಳ್ಳುವ ಸಾಮರ್ಥ್ಯವಿಲ್ಲದ್ದರಿಂದ ಎರಡನ್ನೂ ಒಂದುಗೂಡಿಸಿ ಇದು ಹಾವು, ಇದು ಬೆಳ್ಳಿ - ಎಂದು ಮುಂತಾಗಿ ಭ್ರಾಂತಿಯಿಂದ ಕಂಡುಕೊಳ್ಳುವಂತೆ ನಾನು ಇಚ್ಛಾದ್ವೇಷಾದಿಗಳುಳ್ಳವನು ಎಂದು ಸ್ವಭಾವದಿಂದಲೇ ಸರ್ವಜೀವರೂ ಭಾವಿಸಿಕೊಂಡು ಬಿಟ್ಟಿರುತ್ತಾರೆ. ಈ ಮಿಥ್ಯಾಭಾವನೆಯ ಫಲವಾಗಿ ಕಾಮಕರ್ಮಗಳುಂಟಾಗಿ ಬಗೆಬಗೆಯ ಜನ್ಮಗಳನ್ನು ಪಡೆದು ಸುಖದುಃಖಗಳನ್ನು ಅನುಭವಿಸುತ್ತಿರುವದೇ ಸಂಸಾರವು.

ಹೀಗೆ ಈ ಮಿಥ್ಯಾಜ್ಞಾನರೂಪವಾದ ಕಲೆಬೆರಕೆಯ ತಿಳಿವಳಿಕೆಯೆಂಬ ಕ್ಷೇತ್ರಕ್ಷೇತ್ರಜ್ಞಸಂಯೋಗವು ಅನಾದಿಕಾಲದಿಂದ ಇರುತ್ತಿರುವದು. ಇದು ತೊಲಗುವವರೆಗೂ ಈ ಜನ್ಮಮರಣಸುಖದುಃಖಭೋಗಾತ್ಮಕವಾದ ಸಂಸಾರದಿಂದ ಬಿಡುಗಡೆಯಾಗಲಾರದು. ಸಂಸಾರಬಂಧವು ನಿಜವಾದ ಒಂದು ಬೇಡಿಯಾಗಿದ್ದರೆ ಯಾವ ರಾಜನು ನಮ್ಮನ್ನು ಬಂಧಿಸಿರುವನೋ ಅವನು ದಯವಿಟ್ಟು ಬಿಡುಗಡೆಮಾಡಿಸಬೇಕಾಗುವದು. ಆದರೆ ಒಂದು ವೇಳೆ ಅವನು ಬಿಡಿಸಿದರೂ ಮತ್ತೆ ನಾವು ಕಾರಣಾಂತರದಿಂದ ಬಂಧಿತರಾಗುವದಿಲ್ಲವೆಂಬ ಭರವಸೆಯೂ ಆಗ ಇರುವದಿಲ್ಲ. ಇನ್ನು ಬಂಧವೆಂಬುದು ನಮ್ಮ ಸ್ವರೂಪಕ್ಕೇ ಸೇರಿದ್ದಾಗಿದ್ದರೆ, ಎಂದರೆ ಇಚ್ಛಾದ್ವೇಷಾದಿಗಳೂ ಧರ್ಮಾಧರ್ಮಗಳನ್ನು ಮಾಡಿ ಸುಖದುಃಖಗಳನ್ನು ಅನುಭವಿಸುವದೂ ನಮ್ಮ ಸ್ವಭಾವಕ್ಕೇ ನಿತ್ಯವಾಗಿ ಗುಣವು ಗುಣಿಯನ್ನು ಸೇರಿರುವಂತೆ ಅಂಟಿಕೊಂಡಿದ್ದರೆ, ಅದು ಎಂದಿಗೂ ಯಾರ ಅನುಗ್ರಹದಿಂದಲೂ ತೊಲಗಲೇ ಆರದು. ಏಕೆಂದರೆ ಸ್ವಭಾವವಾಗಿರುವ ಬೆಂಕಿಯ ಬಿಸಿಯು ಎಂದಿಗೂ ಹೋಗಲಾರದು ; ಅದು ಹೋಗುವದಾದರೆ ಬೆಂಕಿಯ ಸ್ವರೂಪವೇ ನಾಶವಾಗಬೇಕಾಗುವದು. ಆದರೆ ಮೊದಲೇ ಹೇಳಿರುವಂತೆ ನಮಗೆ ಆಗಿರುವ ಬಂಧವು ಕ್ಷೇತ್ರಕ್ಷೇತ್ರಜ್ಞರ, ಪ್ರಕೃತಿಪುರುಷರ, ಅವಿವೇಕನಿಮಿತ್ತದಿಂದಾಗಿರುವ ವಿಪರೀತಜ್ಞಾನವಾಗಿರುತ್ತದೆ. ಆದ್ದರಿಂದ ಇದು ಬೆಳ್ಳಿಯೆಂಬ

ಭ್ರಾಂತಿಯು ಹೇಗೆ, ಕಪ್ಪೆಯ ಚಿಪ್ಪೇ, ಬೆಳ್ಳಿಯೆಂದು ಸುಮ್ಮನೆ ತಿಳಿದುಕೊಂಡೆನು ; ಇಲ್ಲಿ ಬೆಳ್ಳಿಯಿಲ್ಲವೇ ಇಲ್ಲ' ಎಂಬ ನಿಶ್ಚಯಜ್ಞಾನದಿಂದ ಹೋಗುವದೋ ಹಾಗೆಯೇ ಅನಾದಿಯಾದ ಈ ವಿಪರೀತಜ್ಞಾನದಿಂದಾಗಿರುವ ಬಂಧವು ಕ್ಷೇತ್ರಕ್ಷೇತ್ರಜ್ಞರ ಸ್ವರೂಪವನ್ನು ವಿವೇಚನೆಮಾಡಿಕೊಂಡು ಅವೆರಡರ ಸ್ವರೂಪವನ್ನು ನಿರ್ಧಾರಣೆಮಾಡಿಕೊಳ್ಳುವದರಿಂದ ತೊಲಗಬೇಕೆಂಬುದು ಸ್ವಾಭಾವಿಕವೇ ಆಗಿದೆ.

ಕ್ಷೇತ್ರಜ್ಞನ ನಿಜವಾದ ಸ್ವರೂಪವನ್ನು ಆಗಲೇ 'ಉಪದ್ರಷ್ಟಾನುಮಂತಾ ಚ' ಎಂಬ ಶ್ಲೋಕದಲ್ಲಿ ತಿಳಿಸಿಯೇ ಇದೆ; 'ನ ಸತ್ತನ್ನಾಸದುಚ್ಯತೇ' ಎಂಬಲ್ಲಿಯೂ ಇದನ್ನು ಹೇಳಿದ್ದಾಗಿದೆ. ಆದರೂ ಪ್ರಕಾರಾಂತರದಿಂದ ಭಗವಂತನು ಈಗ ಅದೇ ಸಮ್ಯಗ್ಜ್ಞಾನವನ್ನು ವಿವರಿಸುತ್ತಿದ್ದಾನೆ.

**ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯನ್ತಂ ಯಃ ಪಶ್ಯತಿ ಸ ಪಶ್ಯತಿ ॥** 13-27

ಬ್ರಹ್ಮಾದಿಸ್ತಂಬಪರ್ಯಂತವಾದ ಪ್ರಾಣಿಗಳು ಎಷ್ಟೇ ವಿಚಿತ್ರವಾಗಿ ತೋರುತ್ತಿರಲಿ, ಆ ರೂಪವೈಚಿತ್ರ್ಯವೆಲ್ಲ ಶರೀರಾದಿರೂಪವಾದ ಉಪಾಧಿಗಳಿಂದಾದದ್ದು. ಉಪಾಧಿಯು ಅವಿದ್ಯೆಯಿಂದ ಕಾಣಬರುತ್ತಿರುವ ಹುಸಿತೋರಿಕೆಯು ಮಾತ್ರವಾಗಿದೆ. ಆತ್ಮನೋ ಎಂದರೆ ಅವುಗಳಲ್ಲೆಲ್ಲ ಸಮವಾಗಿ ಸಂಪೂರ್ಣವಾಗಿ ತನ್ನ ಸ್ವರೂಪದಿಂದಲೇ ಇದ್ದುಕೊಂಡುಬಿಟ್ಟಿರುತ್ತಾನೆ. ಕಪ್ಪೆಯಚಿಪ್ಪನ್ನು ಬೆಳ್ಳಿ ಎಂದು ತಿಳಿದರೆ ಹೇಗೆ ಬೆಳ್ಳಿಯ ಗುಣವು ಚಿಪ್ಪಿಗೆ ಹತ್ತಿಕೊಳ್ಳದೆ ಇರುವದೋ, ಹಗ್ಗವನ್ನು ಹಾವೆಂದು ಭಾವಿಸಿದ ಮಾತ್ರದಿಂದ ಹೇಗೆ ಹಾವಿನ ವಿಷವೇ ಮುಂತಾದದ್ದು ಸ್ವಲ್ಪವೂ ಹಗ್ಗಕ್ಕೆ ಹತ್ತಿಕೊಳ್ಳದೆ ಇರುವದೋ, ಹಾಗೆಯೇ ಎಲ್ಲಾ ಪ್ರಾಣಿಗಳಲ್ಲಿಯೂ ಸಮವಾಗಿಯೇ ಇರುವ ನಿತ್ಯಶುದ್ಧಬುದ್ಧ ಮುಕ್ತಸ್ವಭಾವನಾದ ಪರಮಾತ್ಮನಿಗೆ ಆಯಾ ಶರೀರಾದ್ಯುಪಾಧಿಗಳ ಗುಣಗಳಾಗಲಿ ದೋಷಗಳಾಗಲಿ ಸ್ವಲ್ಪವೂ ಹತ್ತುವದಿಲ್ಲ. ನಮ್ಮ ದೃಷ್ಟಿಯಿಂದ ಗುಣವೆಂದೂ ದೋಷವೆಂದೂ ಕಾಣುತ್ತಿರುವ ಸಂಸಾರಧರ್ಮಗಳಲ್ಲಿ ಯಾವದೊಂದೂ ನಿಜವಾಗಿ ಪರಮಾತ್ಮನಿಗೆ ಅಂಟಲಾರದು. ಕನಸಿನ ತೋರಿಕೆಗಳ ಗುಣದೋಷಗಳು ನಮ್ಮ ಸ್ವರೂಪಕ್ಕೆ ಹೇಗೆ ಅಂಟುವದಿಲ್ಲವೋ ಹಾಗೆಯೇ ಇದು.

ಆದ್ದರಿಂದ ಜೀವರುಗಳ ಉಪಾಧಿಗಳಾದ ಶರೀರೇಂದ್ರಿಯಮನೋಬುದ್ಧಿಗಳ ವೈಚಿತ್ರ್ಯದಿಂದ ಆತ್ಮನೇ ಬೇರೆಬೇರೆಯಾಗಿರುವನೆಂದು ತಿಳಿಯಬಾರದು ; ಆ ಉಪಾಧಿಗಳಿಂದ ಆತ್ಮನಿಗೇ ಆಯಾ ಗುಣದೋಷಗಳು ಹತ್ತಿವೆ ಎಂದೂ ತಿಳಿಯಬಾರದು. ಗುಣದೋಷಗಳೆರಡೂ ನಿಜವಾಗಿ ದೋಷವೇ ಆಗಿರುತ್ತವೆ ; ಆತ್ಮಸ್ವರೂಪವೇ ನಿಜವಾದ ಗುಣವು. ಆ ಗುಣವು ಅನಾತ್ಮವಾದ ಉಪಾಧಿಗಳಿಗೆ ಸೇರಲಾರದು. ಹೀಗೆ ಎಲ್ಲೆಲ್ಲಿಯೂ ಆತ್ಮನು ಒಬ್ಬನೇ ಇರುತ್ತಾನೆ. ಒಂದೊಂದು ಪ್ರಾಣಿಯಲ್ಲಿಯೂ ಸಂಪೂರ್ಣವಾಗಿಯೇ

ಇರುತ್ತಾನೆ. ಆದ್ದರಿಂದ ಪ್ರಾಣಿಗಳ ಉಪಾಧಿತಾರತಮ್ಯದಿಂದ ಪರಮಾತ್ಮನಲ್ಲಿ ಯಾವ ತಾರತಮ್ಯವೂ ಆಗಿರುವದಿಲ್ಲ. ಅವನು ಎಲ್ಲೆಲ್ಲಿಯೂ ಸಮನಾಗಿಯೇ ಇರುತ್ತಾನೆ ಎಂಬುದನ್ನು ಮನಸ್ಸಿಗೆ ತಂದುಕೊಳ್ಳುತ್ತಿರಬೇಕು.

ಈ ಜ್ಞಾನವು ಉತ್ಪತ್ತಿಯಾಗುವದಕ್ಕೆ ಸಹಾಯವಾಗಿ ಎಲ್ಲೆಲ್ಲಿಯೂ ಗುಣವನ್ನೇ ಮನಸ್ಸಿಗೆ ತಂದುಕೊಳ್ಳುವ ಸದ್ಭಾವನೆಯನ್ನು ಮಾಡುವದನ್ನು ಕಲಿತುಕೊಳ್ಳಬೇಕು. ಚಿತ್ತಶುದ್ಧಿಯಿಲ್ಲದವರಿಗೆ ಎಲ್ಲೆಲ್ಲಿಯೂ ದೋಷಗಳೇ ಎದ್ದುಕಾಣಿಸುವವು ; ಸತ್ಪುರುಷರಿಗೆ ಎಲ್ಲೆಲ್ಲಿಯೂ ಯಾವದಾದರೊಂದು ಗುಣವು ಕಂಡೇಕಾಣುವುದು. ಒಮ್ಮೆ ಒಬ್ಬ ಸಾಧುಗಳು ತಮ್ಮ ಶಿಷ್ಯರೊಂದಿಗೆ ಸಂಚರಿಸುತ್ತಿದ್ದರು. ಆ ದಾರಿಯಲ್ಲಿ ಒಂದು ನಾಯಿಯು ಸತ್ತುಬಿದ್ದಿತ್ತು. ಕೂಡಲೆ ಶಿಷ್ಯರುಗಳು ಅದನ್ನು ಕಂಡು ಹೇಸಿಕೆಯಿಂದ ಅದರಲ್ಲಿರುವ ದೋಷಗಳನ್ನು ಒಂದೊಂದಾಗಿ ಎತ್ತೆಣಿಸುವದಕ್ಕೆ ಮೊದಲು ಮಾಡಿದರು. ಈಗ 'ಇದರ ಕೈಕಾಲುಗಳು ಎಷ್ಟು ಸುರುಟಿಕೊಂಡಿವೆ !' ಎಂದು ಒಬ್ಬನೆಂದನು; 'ಇದರ ಮುಖವು ಎಷ್ಟು ವಿಕಾರಯುಕ್ತವಾಗಿದೆ' ಎಂದು ಮತ್ತೊಬ್ಬನೆಂದನು ; 'ಅಬ್ಬ, ಏನು ನಾತ !' - ಎಂದು ಮೂರನೆಯವನೆಂದನು ಇತ್ಯಾದಿ. ಇಷ್ಟರಲ್ಲಿ ಸಾಧುಗಳು 'ಆಹ ! ಇದರ ಹಲ್ಲುಗಳು ಎಷ್ಟು ಶುಭ್ರವಾಗಿ ಹೊಳೆಯುತ್ತಿವೆ!' ಎಂದರಂತೆ. ಹೀಗೆ ಗುಣಪಕ್ಷಪಾತಿಗಳಾಗಿರುವವರಿಗೆ ಎಲ್ಲಾ ಪ್ರಾಣಿಗಳಲ್ಲಿಯೂ ಒಬ್ಬ ಪರಮೇಶ್ವರನೇ ಸಮವಾಗಿ ಇದ್ದುಕೊಂಡಿರುತ್ತಾನೆಂಬ ಜ್ಞಾನವು ಉಂಟಾಗುವದು.

ಇದಲ್ಲದೆ ಪರಮೇಶ್ವರನು ನಿತ್ಯನು ; ಪ್ರಾಣಶರೀರಗಳು ಅನಿತ್ಯವು. ಯಾವ ಶರೀರವು ಯಾವ ವಿಕಾರವನ್ನು ಹೊಂದಲಿ, ಅದರ ಆತ್ಮನಾಗಿರುವ ಪರಮೇಶ್ವರನಿಗೆ ಒಂದಿಷ್ಟೂ ಆ ವಿಕಾರವು ಹತ್ತುವಹಾಗಿಲ್ಲ. ವಿಕಾರಗಳಲ್ಲೆಲ್ಲ ಕೊನೆಯ ವಿಕಾರವೆಂದರೆ ವಿನಾಶವು. ಪ್ರಾಣಿಗಳು ಅನವರತವಾಗಿ ಒಂದಾಗುತ್ತಲೊಂದು ಸಾಯುತ್ತಲೇ ಇದ್ದರೂ ಅವುಗಳ ಆತ್ಮನು ನಾಶವಾಗುವಂತಿಲ್ಲ - ಎಂಬ ಜ್ಞಾನವೂ ಸರ್ವತ್ರಸಮಭಾವನೆಯಿಂದ ಉಂಟಾಗುವದು.

ಪರಮೇಶ್ವರನೇ ಎಲ್ಲರಿಗೂ ಆತ್ಮನು ; ಆತನು ನಿತ್ಯಶುದ್ಧಬುದ್ಧಮುಕ್ತ ಸ್ವಭಾವದವನು. ಅನಾತ್ಮವಾಗಿರುವ ಶರೀರಾದಿಗಳಲ್ಲಿ ಎಷ್ಟೇ ವೈಚಿತ್ರ್ಯವಿರಲಿ, ಆತ್ಮನಲ್ಲಿ ಆ ವೈಚಿತ್ರ್ಯವು ಇರುವದಿಲ್ಲ. ಆ ಶರೀರಾದಿಗಳಲ್ಲಿ ಯಾವ ವಿಕಾರವಿರಲಿ, ಆತ್ಮನಿಗೆ ಅದು ಸೇರಿರುವದಿಲ್ಲ. ಅನಾತ್ಮವಾಗಿರುವ ಶರೀರಾದಿಗಳು ಅನಿತ್ಯವಾಗಿರುತ್ತವೆ, ಅವು ಗಂಧರ್ವನಗರಾದಿಗಳಂತೆ ಬರಿಯ ಆವಿದ್ಯಕವಾದ ಹುಸಿತೋರಿಕೆಯಾಗಿರುತ್ತವೆ ; ಆತ್ಮನು ಪರಮಾರ್ಥಸದ್ರೂಪನು - ಎಂಬುದೇ ಸಮ್ಯಗ್ಜ್ಞಾನವು. ಕ್ಷೇತ್ರಕ್ಷೇತ್ರಜ್ಞಸಂಯೋಗ ರೂಪವಾಗಿರುವ ಮಿಥ್ಯಾಜ್ಞಾನದಿಂದಾಗಿರುವ ಬಂಧವು ಈ ಸಮ್ಯಗ್ಜ್ಞಾನದಿಂದ ಕಡಿದು ಹೋಗುವದು.

ಈ ಜ್ಞಾನವನ್ನು ಎಲ್ಲರೂ ಸಂಪಾದನೆಮಾಡಿಕೊಳ್ಳಬಹುದು. ಇದು ಯಾವನಿಗೆ ಬಂದರೂ ಅವನು ಮುಕ್ತನು. ಅವನಿಗೆ ಪರಮಪುರುಷಾರ್ಥವು ದೊರೆಯದಂತೆ ಮಾಡುವದಕ್ಕೆ ದೇವಾದಿಗಳೂ ಸಮರ್ಥರಲ್ಲ. ಜ್ಞಾನವು ಯಾವನಿಗೇ ಬರಲಿ, ವ್ಯವಹಾರದೃಷ್ಟಿಯಿಂದ ನಮಗಿಂತ ಕೀಳಾದವನಿಗೆ ಬಂದರೂ, ಅವನನ್ನು ಗೌರವಿಸುತ್ತೇವೆ. ಅದಕ್ಕೆ ಅವನು ಪರಮಾತ್ಮಭಾವವನ್ನು ಹೊಂದಿರುವದೇ ಕಾರಣವು. ಪರಮೇಶ್ವರನ ಅನುಗ್ರಹವು ಎಲ್ಲರಿಗೂ ಸಮವಾಗಿರುವದರಿಂದ ಪರಮೇಶ್ವರನು ಎಲ್ಲರಲ್ಲಿಯೂ ಸಮವಾಗಿಯೇ ಇರುವದರಿಂದ ನಾವುಗಳೆಲ್ಲ ಸಮವಾಗಿಯೇ ಈ ಪದವಿಯನ್ನು ಪಡೆದುಕೊಳ್ಳಬಹುದಾಗಿದೆ.

ಆದರೆ ಇಲ್ಲಿ ಒಂದು ಎಚ್ಚರಿಕೆಯ ಮಾತನ್ನು ಆಡುವದು ಅವಶ್ಯವಾಗಿದೆ. ಸಮತ್ವವೆಂದರೇನು ? ನಾವೆಲ್ಲರೂ ಸಮರೇ, ನಮ್ಮಲ್ಲಿ ಒಬ್ಬನು ಇನ್ನೊಬ್ಬನಿಗಿಂತ ಹೆಚ್ಚಿಲ್ಲ, ಕಡಿಮೆಯೂ ಅಲ್ಲ - ಎಂಬ ಭಾವವು ಸಮತ್ವಭಾವವಲ್ಲ. ಈ ಸಮತಾವಾದದಿಂದ ರಾಗದ್ವೇಷಹಿಂಸಾದಿಗಳು ಬೆಳೆಯುವವು, ಲೋಕಕ್ಕೆ ಅಕಲ್ಯಾಣವಾಗುವದು. ಆದ್ದರಿಂದ ಈ ಹೆಮ್ಮೆಯ ಭಾವಕ್ಕೆ ಎಡೆಗೂಡಬಾರದು. ಇದು ನಿಜವಾದ ಸಮತ್ವವಲ್ಲವೇ ಅಲ್ಲ. ಹೊರಗಿನ ದೃಷ್ಟಿಯಿಂದ ನೋಡಿದರೆ ಯಾವ ವಿಧದಿಂದಲೂ ಜೀವರುಗಳು ಒಬ್ಬರಿಗೊಬ್ಬರು ಸಮವಾಗಿಲ್ಲ ; ಎಲ್ಲೆಲ್ಲಿಯೂ ವೈಷಮ್ಯವೇ ಈ ದೃಷ್ಟಿಯಲ್ಲಿ ಕಾಣುತ್ತಿರುತ್ತದೆ. ಈ ತಾರತಮ್ಯವನ್ನು ಮರೆತರೆ ವ್ಯವಹಾರದಲ್ಲಿ ಅನರ್ಥವೇ ಉಂಟಾಗುತ್ತದೆ. ಜ್ಞಾನಿಗಳು ಹೇಳುವ ಸಮತ್ವವು ಇದಲ್ಲ ; ಉಪಾಧಿಗಳ ವೈಷಮ್ಯವು ತೋರುತ್ತಿರುವದು ನಿಜ ; ಆದರೆ ಎಲ್ಲ ಕಾರ್ಯಕರಣಸಂಘಾತಗಳಲ್ಲಿಯೂ ಇರುವ ಪರಮಾತ್ಮನು ಒಬ್ಬನೇ, ಅವನು ಒಬ್ಬರಲ್ಲಿ ಹೆಚ್ಚಾಗಿ ಒಬ್ಬರಲ್ಲಿ ಕಮ್ಮಿಯಾಗಿ ಇರುವದಿಲ್ಲ. ಈ ಅರ್ಥದಲ್ಲಿ ನಾವೆಲ್ಲರೂ ಪರಮೇಶ್ವರನಲ್ಲಿ ಪರಮೇಶ್ವರನ ದೃಷ್ಟಿಯಿಂದ ಒಂದೇ ಆಗಿರುತ್ತೇವೆ. ಇದೇ ಸಮ್ಯಗ್ಜ್ಞಾನವು. ಈ ಜ್ಞಾನವು ಬಂದವನಿಗೆ ಅಜ್ಞಾನದಿಂದಾಗಿದ್ದ ಬಂಧವು ತೊಲಗುವದು. ಈ ಜ್ಞಾನದ ವ್ಯವಹಾರವು ಲೋಕಕ್ಕೂ ಕಲ್ಯಾಣಕಾರಿಯಾಗಿರುವದು.

## ೧೭೭. ಸಮ್ಯಗ್ಜ್ಞಾನವೂ ಅದರ ಫಲವೂ 13 - (28 - 30)

**(15-5-49)**

ಕಳೆದ ದಿನದ ಉಪನ್ಯಾಸದಲ್ಲಿ ಕ್ಷೇತ್ರಕ್ಷೇತ್ರಜ್ಞರನ್ನು ವಿಂಗಡಿಸಿಕೊಳ್ಳದೆ ಕಲೆಬೆರಕೆಮಾಡಿಕೊಂಡಿರುವ ಭ್ರಾಂತಿರೂಪವಾದ ಅನಾದ್ಯವಿದ್ಯೆಯೇ ಕಾಮಕರ್ಮಗಳ ಮೂಲಕವಾಗಿ ಆಗುವ ಸಂಸಾರಕ್ಕೆ ಕಾರಣವೆಂದು ಹೇಳಿದೆ. ಆ ಸಂಸಾರಬಂಧದಿಂದ ಬಿಡುಗಡೆಯಾಗುವದಕ್ಕೆ ಕ್ಷೇತ್ರಕ್ಷೇತ್ರಜ್ಞರ ವಿವೇಕವು ಅವಶ್ಯವೆಂದೂ ಕ್ಷೇತ್ರಜ್ಞನು ನಿಜವಾಗಿ

ಸರ್ವಭೂತಗಳ ಶರೀರದಲ್ಲಿಯೂ ಸಮವಾಗಿ ಕೂಟಸ್ಥನಾಗಿ ನಿತ್ಯನಾಗಿರುವ ಅದ್ವಿತೀಯನಾದ ಪರಮಾತ್ಮನೇ ಎಂಬುದೇ ಈ ವಿವೇಕದ ಸ್ವರೂಪವೆಂದೂ ಹೇಳಲಾಗಿದೆ. ಆತ್ಮನು ಉಪಾಧಿಗಳ ತಾರತಮ್ಯಕ್ಕನುಗುಣವಾಗಿ ಒಂದೊಂದು ಶರೀರದಲ್ಲಿ ಒಂದೊಂದು ರೀತಿಯಿಂದ ಅಷ್ಟಷ್ಟುಮಟ್ಟಿಗೆ ಮಾತ್ರ ಇರುವದಿಲ್ಲ; ಸರ್ವಭೂತಗಳಲ್ಲಿಯೂ ಸಮನಾಗಿಯೇ ಇರುತ್ತಾನೆ. ಇದನ್ನು ಕಂಡವನೇ ಸರಿಯಾದ ಜ್ಞಾನವುಳ್ಳವನು. ಈ ಜ್ಞಾನದ ಫಲವೇನು ? ಎಂದರೆ ಉಕ್ತಬಂಧದ ಬಿಡುಗಡೆಯೇ ಎಂದು ಈಗ ಭಗವಂತನು ಹೇಳುತ್ತಿದಾನೆ.

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ 13-28**

ಸಮದರ್ಶನವೆಂಬುದು ಬಹಳ ಕಷ್ಟ. ಏಕೆಂದರೆ ಪ್ರಕೃತಿಯಲ್ಲಿ ಯಾವ ಎರಡು ವಸ್ತುಗಳೂ ಸರ್ವವಿಧದಿಂದಲೂ ಸಮವಾಗಿರುವದಿಲ್ಲ. ಪ್ರಕೃತಿಯೆಲ್ಲವೂ ಅವಿದ್ಯಾಕಲ್ಪಿತವಾದರೂ ಅದರ ವಿಕಾರಗಳೆಲ್ಲವೂ ಬೇರೆಬೇರೆಯಾಗಿಯೇ ಕಾಣುತ್ತಿರುವವು. ಕನಸಿನಲ್ಲಿ ಕಾಣುವ ವಸ್ತುಗಳೆಲ್ಲ ಬರಿಯ ವಾಸನಾಮಯವಾದ ತೋರಿಕೆಗಳಾಗಿರುತ್ತವೆ. ಆದಮಾತ್ರಕ್ಕೆ ಅವು ಎಲ್ಲವೂ ಒಂದೇ ರೂಪವಾಗಿರುವದಿಲ್ಲ. ಒಂದೊಂದೂ ಒಂದೊಂದು ಬಗೆಯಾಗಿರುತ್ತವೆ. ಆದರೆ ಉಪಾಧಿಗಳನ್ನಲ್ಲ, ನಾವು ಸಮವಾಗಿ ಕಾಣಬೇಕಾಗಿರುವದು; ಉಪಹಿತನಾದ ಪರಮಾತ್ಮನನ್ನು. ಪರಮಾತ್ಮನು ಸಮಸ್ತಭೂತಗಳಲ್ಲಿಯೂ ಜೀವಕಲೆಯಿಂದ ಪ್ರವೇಶಮಾಡಿರುತ್ತಾನೆ ; ಈ ಭಾವನೆಯಿಂದ ಸಂನ್ಯಾಸಿಯಾದವನು ಸಮಸ್ತಭೂತಗಳನ್ನೂ ನಮಸ್ಕರಿಸಬೇಕು - ಎಂದು ಭಾಗವತದಲ್ಲಿ ಹೇಳಿರುತ್ತದೆ. ಮುಮುಕ್ಷುಗಳಾದವರು ಉಪಾಧಿಗಳ ತಾರತಮ್ಯವನ್ನು ಮನಸ್ಸಿಗೆ ತಂದುಕೊಳ್ಳದೆ ಎಲ್ಲರಲ್ಲಿಯೂ ಸಮವಾಗಿರುವ ಅಂತರಾತ್ಮನನ್ನೇ ಎಲ್ಲೆಲ್ಲಿಯೂ ಕಾಣಬೇಕು. ವ್ಯವಹಾರದಲ್ಲಿ ತಾರತಮ್ಯವನ್ನು ಬಿಡುವದಕ್ಕೆ ಆಗುವದಿಲ್ಲ. ಆದ್ದರಿಂದಲೇ ಗೌತಮಾದಿಧರ್ಮಸೂತ್ರಕಾರರು ಜನರನ್ನು ಐಶ್ವರ್ಯ, ಬಲ, ವೀರ್ಯ, ಖ್ಯಾತಿ, ಜಾತಿ, ವಿದ್ಯೆ, ಧರ್ಮ - ಮುಂತಾದವುಗಳನ್ನು ನೋಡಿ ಆಯಾ ಸ್ಥಾನಕ್ಕೆ ತಕ್ಕಂತೆ ಗೌರವವನ್ನು ಕೊಡಬೇಕು; ಮೇಲಿನ ಅಂತಸ್ತಿನವರನ್ನು ತಿರಸ್ಕರಿಸಿ ಕೆಳಗಿನ ಅಂತಸ್ತಿನವರನ್ನು ಉತ್ತಮರಿಗಿಂತ ಮೇಲೆ ಕೂರಿಸಿದರೆ ಅಧರ್ಮವಾಗುತ್ತದೆ ಎಂತ ಉಪದೇಶಿಸಿರುತ್ತಾರೆ ; ಆದರೂ ಮುಮುಕ್ಷುವಾದವನು ಈ ತಾರತಮ್ಯವನ್ನು ಮನಸ್ಸಿಗೆ ತಂದುಕೊಳ್ಳದೆ ಎಲ್ಲರಲ್ಲಿಯೂ ಇರುವ ಪರಮೇಶ್ವರನ ದೃಷ್ಟಿಯಿಂದ ಸಮಬುದ್ಧಿಯನ್ನು ಇಡಬೇಕೆಂದು ಇಲ್ಲಿ ಉಪದೇಶಿಸಿರುತ್ತದೆ. ದೃಷ್ಟಿಭೇದದಿಂದ ಈ ಎರಡು ಬೇರೆಯ ವರ್ತನೆಗಳೂ ಅವಿರುದ್ಧವಾಗಿರುತ್ತವೆ.

ಈಗಿನ ಕಾಲದವರು ಈ ವಿವೇಕವನ್ನು ಮನಸ್ಸಿಗೆ ತಂದುಕೊಳ್ಳದೆ ದೇಹೇಂದ್ರಿಯಾದ್ಯುಪಾಧಿಗಳನ್ನು ಸಮವಾಗಿ ಕಾಣಬೇಕೆಂದು ಆಗ್ರಹಪೂರ್ವಕವಾಗಿ

ಉಪದೇಶಿಸಿರುತ್ತಾರೆ. ಸಮಾಜಸುಧಾರಕರು ಅನೇಕರು `ಜಾತಿ, ಕುಲ, ಎಲ್ಲವನ್ನೂ ಒಂದುಮಾಡಬೇಕು ; ಮಾನವರಿಗೆಲ್ಲ ಸಮಾನವಾದ ಹಕ್ಕು ಕೊಡಬೇಕು' - ಎಂಬ ಕೂಗನ್ನು ಎಬ್ಬಿಸಿರುತ್ತಾರೆ. ನಮ್ಮ ದೇಶದಲ್ಲಿ ಅಸ್ಪೃಶ್ಯತೆಯ ನಿವಾರಣೆಗಾಗಿ ಮಹಾಜನರೆಲ್ಲರೂ ಪ್ರಯತ್ನಿಸುತ್ತಿದ್ದಾರೆ. ಆದರೆ ಸಮಾಜದಲ್ಲಿರುವ ಜನರೆಲ್ಲರನ್ನೂ ಒಂದೇ ಅಂತಸ್ತಿನಿಂದ ಕಾಣುವದೂ ಒಂದೇ ಅಂತಸ್ತಿನವರನ್ನಾಗಿ ಮಾಡುವದೂ ಸಾಧ್ಯವೆ? ಶರೀರಸ್ಥಿತಿಯಲ್ಲಿ, ಶುಚಿತ್ವದಲ್ಲಿ, ಆಹಾರದಲ್ಲಿ, ವಿದ್ಯೆಯಲ್ಲಿ, ಗ್ರಹಣಶಕ್ತಿಯಲ್ಲಿ, ವಿಷಯಶೋಧನೆಯಲ್ಲಿ, ಸಾತ್ತ್ವಿಕವರ್ತನೆಯಲ್ಲಿ - ಎಲ್ಲರನ್ನೂ `ಒಂದೇ ಮಟ್ಟಕ್ಕೆ ಬನ್ನಿರಿ !' - ಎಂದು ಅಪ್ಪಣೆಮಾಡಿದಮಾತ್ರದಿಂದ ನಮ್ಮ ಅಭೀಷ್ಟವು ನೆರವೇರೀತೆ ? ಇದು ವ್ಯವಹಾರದಲ್ಲಿ ಸಾಧ್ಯವೆ ? ಕಲ್ಯಾಣಕರವೆ ? - ಎಂಬುದನ್ನು ನಾವು ಯೋಚಿಸಬೇಕು. ಮಹಾಭಾರತದಲ್ಲಿ ಒಂದು ಕಡೆಯಲ್ಲಿ ಭೃಗುಭಾರದ್ವಾಜಸಂವಾದವಿದೆ. ಅದರಲ್ಲಿ ಎಲ್ಲರೂ ಬ್ರಾಹ್ಮಣರಾಗಿಯೇ ಮೊದಲು ಸೃಷ್ಟರಾಗಿದ್ದರು ; ಆದರೆ ಕರ್ಮದಿಂದ ಅವರು ಬೇರೆಬೇರೆಯ ವರ್ಣದವರಾದರು- ಎಂದು ಬರೆದಿದೆ. ಇದು ಸ್ವಾಭಾವಿಕವಾಗಿದೆ. ನೀವು ಏನಾದರೂ ಮಾಡಿ ಎಲ್ಲರನ್ನೂ ಬಲಾತ್ಕಾರದಿಂದ ಒಂದುಗೂಡಿಸಿದರೂ ಅವರವರು ಅವರವರ ಮಟ್ಟದಲ್ಲಿಯೇ ಇರುತ್ತಾರೆ. ಕಡಿಮೆಯ ಅಂತಸ್ತಿನಲ್ಲಿರುವವರು ಶರೀರಸಂಸ್ಕಾರವನ್ನೂ ಬುದ್ಧಿಸಂಸ್ಕಾರವನ್ನೂ ಹೊಂದಿ ಕ್ರಮಕ್ರಮವಾಗಿ ಮೇಲಿನವರ ಅಂತಸ್ತಿಗೆ ಏರಬೇಕೆಂದು ಹವಣಿಸುವದು ನ್ಯಾಯವಾಗಿದೆ ; ಅದು ಇಷ್ಟವೂ ಆಗಿದೆ. ಆದರೆ ಇದನ್ನು ಬಿಟ್ಟು ಮೇಲಿನವರನ್ನು ಕೆಳಗಿನವರ ಅಂತಸ್ತಿಗೆ ಇಳಿಸಿ ಸಮತೆಗೆ ಬೆಲೆಕೊಡುತ್ತೇವೆಂಬುದು ಹಾಸ್ಯಾಸ್ಪದವಾಗಿರುತ್ತದೆ.

ಪ್ರಾಸಂಗಿಕವಾದ ಈ ವಿಚಾರವಂತಿರಲಿ. ಪ್ರಕೃತದಲ್ಲಿ ಭಗವಂತನು ಉಪದೇಶಿಸುತ್ತಿರುವ ಸಮತಾದೃಷ್ಟಿಯು ಯಾವದು ? ಎಲ್ಲರಲ್ಲಿಯೂ ಒಬ್ಬ ಪರಮಾತ್ಮನೇ ಇರುತ್ತಾನೆ ಎಂಬ ದೃಷ್ಟಿ. ಹಿಂದೆ ಹಿರಣ್ಯಕಶಿಪುವು ಮಗನಾದ ಪ್ರಹ್ಲಾದನನ್ನು ವಿದ್ಯಾಭ್ಯಾಸದ ಕಾಲದಲ್ಲಿ ಹೀಗೆಂದು ಪ್ರಶ್ನೆಮಾಡಿದನು : ``ಮಗು, ರಾಜನಾದವನು ಶತ್ರುಗಳಲ್ಲಿ ಹೇಗೆ ವರ್ತಿಸಬೇಕು, ಮಿತ್ರರಲ್ಲಿ ಹೇಗೆ ನಡೆಯಬೇಕು, ಉದಾಸೀನರಲ್ಲಿ ಎಂತಿರಬೇಕು ? ಇದನ್ನು ಹೇಳು." ಲೌಕಿಕದೃಷ್ಟಿಯಿಂದ ತಂದೆ ಕೇಳಿದ ಪ್ರಶ್ನೆಯು ಯುಕ್ತವೇ ಆಗಿತ್ತು. ಆದರೆ ಮಗನು ಭಕ್ತವರೇಣ್ಯರಾದ ನಾರದರ ಉಪದೇಶದಿಂದ ಉತ್ತಮವಾದ ಸರ್ವಸಮತ್ವವನ್ನು ಕಂಡುಕೊಂಡಿದ್ದ ಮಹಾತ್ಮನಾಗಿದ್ದನು. ಅವನು ``ತಂದೆಯೆ, ಶತ್ರುಗಳಾಗಲಿ ಮಿತ್ರರಾಗಲಿ ನನ್ನ ಕಣ್ಣಿಗೆ ಕಾಣಿಸುವದೇ ಇಲ್ಲ ; ಎಲ್ಲೆಲ್ಲಿಯೂ ಒಬ್ಬ ವಾಸುದೇವನೇ ಇರುತ್ತಾನೆ" ಎಂದನು. ಇಲ್ಲಿ ಭಗವಂತನು ಉಪದೇಶಿಸುತ್ತಿರುವದು ಈ ಸಮದೃಷ್ಟಿ. ಈ ದೃಷ್ಟಿಯನ್ನು ಅವಲಂಬಿಸಿದವನು ತನ್ನನ್ನು ತಾನು ಕೊಂದುಕೊಳ್ಳುವದಿಲ್ಲ ಎಂದು ಶ್ರೀ ಕೃಷ್ಣಭಗವಂತನು ಹೇಳಿರುತ್ತಾನೆ.

ಲೋಕದಲ್ಲಿ ಯಾವನೂ ತನ್ನನ್ನು ತಾನು ಕೊಂದುಕೊಳ್ಳುವದಿಲ್ಲ. ಹೀಗಿರುವಲ್ಲಿ ಜ್ಞಾನಿಯು ತನ್ನನ್ನು ತಾನು ಕೊಂದುಕೊಳ್ಳುವದಿಲ್ಲ ಎಂದು ಹೇಳಿದ್ದು ಹೇಗೆ ಸರಿ ? ಎಂದು

ಯಾರಾದರೂ ಆಕ್ಷೇಪಿಸಬಹುದು. ಆದರೆ ಇಲ್ಲಿ ತನ್ನನ್ನು ತಾನೇ ಕೊಂದುಕೊಳ್ಳುವದೆಂಬ ಮಾತಿನಲ್ಲಿ ಒಂದು ಅರ್ಥಸ್ವಾರಸ್ಯವಿದೆ. ಅದೇನೆಂದರೆ ಆಗಲೇ ತಿಳಿಸಿರುವಂತೆ ಅಜ್ಞರು ನಾನು ಎಂದು ತಿಳಿದುಕೊಂಡಿರುವ ಆತ್ಮನೇ ಬೇರೆ, ಜ್ಞಾನಿಯು ತಿಳಿದುಕೊಂಡಿರುವ ಆತ್ಮನೇ ಬೇರೆ. ಅಜ್ಞರು ಭ್ರಾಂತಿಯಿಂದಾದ ಅಭಿಮಾನದಿಂದ ಅನಾತ್ಮವನ್ನೇ ತಮ್ಮ ಆತ್ಮನೆಂದು ಮಾಡಿಕೊಂಡು ವ್ಯವಹರಿಸುತ್ತಿರುತ್ತಾರೆ. ಆದರೆ ಜ್ಞಾನಿಯು ಸರ್ವರಲ್ಲಿಯೂ ಸಮನಾಗಿರುವ ನಿತ್ಯಕೂಟಸ್ಥಚೈತನ್ಯರೂಪನಾದ ಅದ್ವಿತೀಯಾತ್ಮನನ್ನೇ ತನ್ನ ಆತ್ಮನೆಂದುಕೊಂಡು ವ್ಯವಹರಿಸುತ್ತಿರುತ್ತಾನೆ. ಜ್ಞಾನಿಗಳು ಆತ್ಮನೆಂದುಕೊಂಡಿರುವವನೇ ಪರಮಾರ್ಥವಾಗಿ ಆತ್ಮನು; ಆದ್ದರಿಂದ ಅವರೇ ಸರಿಯಾಗಿ ಆತ್ಮನನ್ನು ಕಂಡುಕೊಂಡವರು. ಆದ್ದರಿಂದಲೇ ``ಯಃ ಪಶ್ಯತಿ ಸ ಪಶ್ಯತಿ" ಇಂಥ ಆತ್ಮನನ್ನು ಯಾವನು ಕಂಡಿರುವನೋ ಅವನೇ ಸರಿಯಾಗಿ ಕಂಡವನು ಎಂದು ಭಗವಂತನು ಹೇಳಿರುತ್ತಾನೆ, ಮಿಕ್ಕವರು ಅರಿತುಕೊಂಡಿರುವ ಆತ್ಮನು ಅನಾತ್ಮನೇ. ಪರಮಾರ್ಥಾತ್ಮನು ಅತ್ಯಂತಪ್ರಸಿದ್ಧನಾಗಿ ನೇರಾಗಿ ಅಪರೋಕ್ಷವಾಗಿರುವ ಸರ್ವಾತ್ಮನು. ಅವನನ್ನು ಅಜ್ಞರು ಅರಿಯರು ; ಅವರ ಅಜ್ಞಾನವು ಈ ಪರಮಾರ್ಥಾತ್ಮನಿಗೆ ಮರೆಯಾಗಿಬಿಟ್ಟಿರುವದರಿಂದ ಅವರ ಪಾಲಿಗೆ ಆ ಆತ್ಮನು ಇಲ್ಲವೇ ಇಲ್ಲ. ಈ ಅರ್ಥದಲ್ಲಿ ಅವರು ತಮ್ಮ ಆತ್ಮನನ್ನು ಕೊಂದುಹಾಕಿರುತ್ತಾರೆ.

ಇಷ್ಟೇ ಅಲ್ಲ. ಅಜ್ಞಾನದಿಂದ ಅವರು ಅನಾತ್ಮವಾದ ದೇಹಾದಿಗಳಲ್ಲಿಯೇ ಆತ್ಮನೆಂಬ ಅಭಿಮಾನವನ್ನು ಇಟ್ಟುಕೊಂಡು ಆ ಮಿಥ್ಯಾತ್ಮನ ರಕ್ಷಣೆಗಾಗಿ ಬಗೆಬಗೆಯ ಧರ್ಮಾಧರ್ಮಗಳನ್ನು ಮಾಡುತ್ತಿರುವರು ; ಕಣ್ಣುಪರೆಯಿಂದ ಎರಡನೆಯ ಚಂದ್ರನನ್ನು ಕಂಡು ಇಬ್ಬರು ಚಂದ್ರರು ಪರಸ್ಪರಪರಿಚ್ಛಿನ್ನರಾಗಿಯೂ ಬೇರೆಬೇರೆಯಾಗಿಯೂ ಇರುವರೆಂದು ಭಾವಿಸುವಹಾಗೆ ಅಜ್ಞಾನದ ಪರೆಯಿಂದ ಆವೃತವಾಗಿರುವ ಜ್ಞಾನಚಕ್ಷುಸ್ಸು ಕೆಲಸಮಾಡದೆ ಇರುವ ಕಾರಣದಿಂದ ವಿಭಕ್ತರಾಗಿರುವ ಅನೇಕ ಆತ್ಮರುಗಳನ್ನು ಅವರು ಕಾಣುತ್ತಿರುವರು. ಆತ್ಮರುಗಳಲ್ಲಿ ಶತ್ರು, ಮಿತ್ರ, ಉದಾಸೀನ - ಮುಂತಾದ ಭೇದಗಳನ್ನು ಕಲ್ಪಿಸಿಕೊಂಡು ಅವರ ವಿಷಯಕ್ಕೆ ಬಗೆಬಗೆಯ ಧರ್ಮಾಧರ್ಮಗಳಿಂದ ವರ್ತಿಸುತ್ತಾ ಪುಣ್ಯಪಾಪಗಳನ್ನು ಕೂಡಿಹಾಕಿಕೊಳ್ಳುತ್ತಿರುವರು. ಇದರ ಫಲವಾಗಿ ಬೇರೆಬೇರೆಯ ದೇಹಗಳನ್ನು ಧರಿಸುತ್ತಾ ಒಂದೊಂದು ದೇಹದಲ್ಲಿಯೂ ಆತ್ಮತ್ವಬುದ್ಧಿಯನ್ನು ಮಾಡಿಕೊಂಡು ಹಿಂದುಹಿಂದಿನ ದೇಹಾದಿಗಳಲ್ಲಿ ಆತ್ಮತ್ವಬುದ್ಧಿಯನ್ನು ಬಿಟ್ಟು ಆ ಹಿಂದಿನ ಆತ್ಮರುಗಳು ಇರಲೇ ಇಲ್ಲವೆನಿಸುತ್ತಿರುವದರಿಂದ ಹೀಗೂ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿರುವರು. ಅಂತೂ ಪರಮಾತ್ಮನನ್ನು ಕೊಂದ ದೋಷ, ಅನಾತ್ಮಗಳನ್ನು ಆತ್ಮರೆಂದು ಭಾವಿಸಿ ಅವರನ್ನು ಕೊಂದ ದೋಷ, ಬೇರೆಬೇರೆಯ ಅನೇಕ ಆತ್ಮರುಗಳಲ್ಲಿ ಶತ್ರುಮಿತ್ರಾದಿತಾರತಮ್ಯಬುದ್ಧಿಯನ್ನು ಮಾಡಿಕೊಂಡು ಅವರನ್ನು ಹಿಂಸೆಪಡಿಸುವ ದೋಷ - ಇವುಗಳೆಲ್ಲವೂ ಅಜ್ಞರಿಗೆ ಉಂಟಾಗುತ್ತಿರುವದರಿಂದ ಅವರು ಆತ್ಮನನ್ನು ಕೊಂದುಕೊಳ್ಳುತ್ತಿರುವರು. ಆದರೆ ಜ್ಞಾನಿಯು

ದೃಷ್ಟಿಯಲ್ಲಿ ಒಬ್ಬ ಆತ್ಮನೇ ಎಲ್ಲರಿಗೂ ಆತ್ಮನಾಗಿರುವದರಿಂದಲೂ ಅವನು ಕೊಲ್ಲುವವನೂ ಅಲ್ಲದೆ ಕೊಲ್ಲಿಸಿಕೊಳ್ಳುವವನೂ ಅಲ್ಲದೆ ಇರುವದರಿಂದಲೂ, ವ್ಯವಹಾರರೀತಿಯಿಂದ ಭೇದವನ್ನು ನೋಡಿದರೂ ಯಾರೊಬ್ಬರಿಗೆ ಹಿಂಸೆಮಾಡಿದರೂ ತನಗೆ ತಾನೇ ಹಿಂಸೆಮಾಡಿಕೊಂಡಂತಾಗುವದರಿಂದಲೂ ಅವನು ಯಾರೊಬ್ಬರನ್ನೂ ಕೊಲ್ಲುವಂತಿಲ್ಲವಾದ್ದರಿಂದ ಅವನು ತನ್ನನ್ನು ತಾನೇ ಕೊಂದುಕೊಳ್ಳುವದಿಲ್ಲ ಎಂದು ಹೇಳಿದೆ.

ಇಂಥ ಸಮ್ಯಗ್ಜ್ಞಾನದಿಂದ ಪರಗತಿಯಾಗುತ್ತದೆ. ಮಿಕ್ಕ ಗತಿಗಳು ಪಾಪಪುಣ್ಯದ ಫಲವಾಗಿ ಆಯಾ ಸ್ಥಾನವನ್ನು ಪಡೆದು ಮತ್ತೆ ಮತ್ತೆ ಜನ್ಮಕ್ಕೆ ಹಿಂತಿರುಗಿಸುವವಾದ್ದರಿಂದ ಅಪರಗತಿಗಳು ; ಆದರೆ ಜ್ಞಾನಿಯು ಒಮ್ಮೆ ಪರಮಾತ್ಮಸ್ವರೂಪವನ್ನು ಮುಟ್ಟಿದರೆ ಅವನಿಗೆ ಎಂದೆಂದಿಗೂ ಪುನರಾವೃತ್ತಿಯಿರುವದಿಲ್ಲವಾದ್ದರಿಂದ ಅದು ಪರಗತಿಯು. ಅಜ್ಞರು ಮಾಡಿದ ಪಾಪಪುಣ್ಯಗಳಲ್ಲಿ ಎಷ್ಟು ಭಾಗವು ಫಲವನ್ನು ಕೊಡುವದಕ್ಕೆ ಉನ್ಮುಖವಾಗಿತ್ತೋ ಅಷ್ಟರಿಂದ ಒಳ್ಳೆಯ ಅಥವಾ ಕೆಟ್ಟ ಫಲವನ್ನು ಅನುಭವಿಸಿದ ಬಳಿಕ ಮತ್ತೆ ಕರ್ಮಶೇಷದಿಂದ ಆಯಾ ಕರ್ಮಫಲವನ್ನನುಭವಿಸುವದಕ್ಕೆ ತಕ್ಕ ಯೋನಿಗಳಲ್ಲಿ ಜನಿಸುವರು. ಹೀಗೆ ಅವರು ಮತ್ತೆ ಮತ್ತೆ ಹಿಂತಿರುಗುತ್ತಲೇ ಇರುವದರಿಂದ ಅವರಿಗಾಗುವದು ಅಪರಗತಿಯು. ಜ್ಞಾನಿಗೆ ನಿಜವಾಗಿ ಗತಿಯೇ ಇಲ್ಲ ; ಏಕೆಂದರೆ ನಿತ್ಯಪ್ರಾಪ್ತವಾಗಿರುವ ತನ್ನ ಆತ್ಮನೇ ಆಗಿರುವ ಪರಮಾತ್ಮಸ್ವರೂಪವನ್ನೇ ಅವನು ಜ್ಞಾನದಿಂದ ಪಡೆದುಕೊಳ್ಳುತ್ತಾನೆ. ಗತಿಯಿದ್ದಲ್ಲಿ ಆಗತಿಯೂ ಇದ್ದೇ ಇರುವದು. ಆದರೆ ಜ್ಞಾನಿಗೆ ನಿಜವಾಗಿ ಗತಿಯಿಲ್ಲ. ``ಮೀನುಗಳು ನೀರಿನಲ್ಲಿ ಓಡಾಡಿದರೆ, ಅಥವಾ ಹಕ್ಕಿಗಳು ಆಕಾಶದಲ್ಲಿ ಹಾರಾಡಿದರೆ ಹೇಗೆ ಅವುಗಳು ದಾರಿನಡೆದ ಹೆಜ್ಜೆಯ ಗುರುತು ಮತ್ತೊಬ್ಬರಿಗೆ ಕಾಣಿಸಲಾರದೋ ಹಾಗೆ ಜ್ಞಾನಿಗಳು ನಡೆದ ಗತಿಯಲ್ಲಿಯೂ ಅವರು ನಡೆದ ದಾರಿಯ ಗುರುತು ಮತ್ತೊಬ್ಬರಿಗೆ ತಿಳಿಯುವದೇ ಇಲ್ಲ" ಎಂದು ಭಾರತವಚನವಿರುವದು. ಈ ಅರ್ಥದಲ್ಲಿಯೂ ಸಮ್ಯಗ್ಜ್ಞಾನಿಗೆ ಪರಗತಿಯೇ ಆಗುತ್ತದೆ. ಸಮ್ಯಗ್ದರ್ಶನದಿಂದ ಆತ್ಮಹತ್ಯೆಗೆ ಅವಕಾಶವಿಲ್ಲವಾಗುವದರಿಂದಲೇ ಈ ಪರಗತಿಯು ಜ್ಞಾನಿಗೆ ದೊರಕುತ್ತದೆ.

ಆಯಾ ಗುಣಕರ್ಮಗಳಿಂದ ಆತ್ಮರು ಭಿನ್ನರಾಗಿರುವಲ್ಲಿ ಸರ್ವರಲ್ಲಿಯೂ ಆತ್ಮನು ಒಬ್ಬನೇ ಎಂಬ ಸಮದರ್ಶಿತ್ವವು ದೊರಕುವದು ಹೇಗೆ? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಭಗವಂತನು ಹೇಳಿರುವದೇನೆಂದರೆ :

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥** **13-29**

ಪ್ರಕೃತಿಯಿಂದಲೇ ಎಲ್ಲಾ ಬಗೆಯ ಕರ್ಮಗಳೂ ನಡೆಯುತ್ತಿರುವವು; ಮತ್ತು ಆತ್ಮನು ಅಕರ್ತೃ ಎಂದು ಯಾವನು ಕಂಡುಕೊಳ್ಳುತ್ತಾನೋ ಅವನೇ ಸರಿಯಾಗಿ ಕಂಡವನು - ಎಂದು

ಶ್ಲೋಕದ ಅರ್ಥ. ಈ ಅಭಿಪ್ರಾಯವನ್ನು ಆಗಲೇ ಬೇರೆಯ ಮಾತುಗಳಿಂದ ಹೇಳಿದ್ದಾಗಿದೆ. ಆತ್ಮನಲ್ಲಿ ಯಾವ ವಿಕಾರಗಳೂ ಇರುವದಿಲ್ಲ ; ಆಗುವ ವಿಕಾರಗಳೆಲ್ಲವೂ ಪ್ರಕೃತಿಗೇ ಸೇರಿದವುಗಳು. ಕಾರ್ಯಕರಣಸಂಘಾತರೂಪಗಳಲ್ಲಿ ಆಗುವ ವಿಕಾರಗಳು ಯಾವವೂ ಆತ್ಮನಿಗೆ ಸೇರುವದಿಲ್ಲವೆಂದು ಹಿಂದೆಯೇ ಹೇಳಿದೆಯಲ್ಲವೆ? ಅದನ್ನೇ ಇಲ್ಲಿ ಬೇರೆಯ ಮಾತಿನಿಂದ ಹೇಳಿದೆ. ಪ್ರಕೃತಿಯು ಮಹತ್ತು, ಅಹಂಕಾರ - ಮುಂತಾದ ರೂಪಗಳಿಂದ ಪರಿಣಮಿಸಿ ಶರೀರ, ಇಂದ್ರಿಯಗಳು ಮುಂತಾದ ರೂಪಗಳಿಂದ ಪರಿಣತವಾಗಿರುವದು. ಆ ಶರೀರೇಂದ್ರಿಯಾದಿಗಳಲ್ಲಿ ಆಗುವ ಮಾರ್ಪಾಡುಗಳೇ ಕ್ರಿಯೆ ಎನ್ನುವದು; ಆದ್ದರಿಂದ ಕ್ರಿಯೆಗೆ ಆಶ್ರಯವಾಗಿರುವದು ಪ್ರಕೃತಿಯೇ. ದಾಸಿವಾಳದಹೂವೆಂಬ ಉಪಾಧಿಯ ಗುಣವಾದ ಕೆಂಪನ್ನು ಬಳಿಯಲ್ಲಿರುವ ಸ್ಫಟಿಕಮಣಿಗೂ ಸೇರಿರುವದೆಂದು ಭಾವಿಸುವಂತೆ ಮೂಢರು ಶರೀರಾದಿಗಳಲ್ಲಾಗುವ ವಿಕ್ರಿಯೆಗೆ ಆತ್ಮನು ಕರ್ತೃ ಎಂದು ತಪ್ಪಾಗಿ ಭಾವಿಸಿಕೊಳ್ಳುತ್ತಿರುವರು. ಆದರೆ ಉಪಾಧಿನಿರಪೇಕ್ಷನಾದ ಕೇವಲಾತ್ಮನಲ್ಲಿ ಯಾವ ಕರ್ಮವೂ ಇರುವದಿಲ್ಲ. ಆದ್ದರಿಂದ ಅವನು ಕರ್ತೃವಲ್ಲವೇ ಅಲ್ಲ. ಹೀಗಿರುವಲ್ಲಿ ಆಯಾ ಗುಣಕರ್ಮಗಳಿಂದ ಆತ್ಮರು ಬೇರೆಬೇರೆಯಾಗಿರುತ್ತಾರೆ - ಎಂಬುದು ಸುಳ್ಳು ಎಂದಾಗುವದಿಲ್ಲವೆ ? ಆತ್ಮನು ನಿರ್ಗುಣ, ಅಕರ್ತೃ, ಅವನಲ್ಲಿ ಯಾವ ವಿಕಲ್ಪಗಳೂ ಇಲ್ಲ ಎಂದು ತಿಳಿದುಕೊಂಡವನೇ ನಿಜವಾದ ಜ್ಞಾನಿಯು. ಸಾಮಾನ್ಯಜನರು ಇಂಥಿಂಥ ಫಲವು ತಮಗೆ ಆಗಬೇಕು, ಇಂಥಿಂಥದ್ದು ಆಗಬಾರದು - ಎಂದು ಕೆಲಸಗಳಿಗೆ ಹಾತುವರಿಯುತ್ತಿದ್ದರೂ ವೇದಾಂತಿಗಳ ಎಂಜಲುಮಾತನ್ನು ಬಳಸಿಕೊಂಡು ನಾನು ಕರ್ತೃವಲ್ಲ, ಭೋಕ್ತೃವಲ್ಲ - ಎಂದುಕೊಳ್ಳುವದುಂಟು. ಅದು ತಪ್ಪು. ಏಕೆಂದರೆ ಅವರು ತಿಳಿದುಕೊಂಡಿರುವ ಆತ್ಮನು ಕರ್ಮಫಲಗಳಿಂದ ಲಿಪ್ತನಾಗುತ್ತಲೇ ಇರುವನು. ಆದರೆ ಯಾವ ಮಹಾತ್ಮನು ಸರ್ವರಿಗೂ ಸಮವಾಗಿರುವ ಒಬ್ಬ ಆತ್ಮನೇ ತನ್ನ ಆತ್ಮನೆಂಬುದನ್ನು ಕಂಡುಕೊಂಡಿರುವನೋ ಅವನ ಆತ್ಮನು ಆಕಾಶದಂತೆ ನಿರ್ಲಿಪ್ತನಾಗಿರುತ್ತಾನೆ. ಹೇಗೆ ಆಕಾಶದಲ್ಲಿರುವ ವಸ್ತುಗಳ ವಿಕಾರಗಳು ಯಾವವೂ ಆಕಾಶಕ್ಕೆ ತಗಲುವದಿಲ್ಲವೋ ಅದರಂತೆ ಶರೀರಾದಿಗಳಲ್ಲಿ ಆಗುವ ವಿಕಾರಗಳೂ ಆತ್ಮನಿಗೆ ತಗಲುವದಿಲ್ಲ. ಅಂಥ ಜ್ಞಾನಿಗೆ ಯಾವ ಕರ್ಮವೂ ಇರುವದಿಲ್ಲ. ನಮ್ಮಂಥ ಸಾಮಾನ್ಯರಿಗೆ ಈ ಜ್ಞಾನವು ದಕ್ಕದೆ ಇರಬಹುದು. ಆದರೆ ನಾವು ಮಾಡುವ ಕರ್ಮಗಳನ್ನೆಲ್ಲ ಆ ಪರಮೇಶ್ವರನಿಗೆ ಅರ್ಪಣೆಮಾಡುತ್ತಾ ಬಂದರೆ ಕೃತಕೃತ್ಯರಾಗುವೆವು. ಈ ಕಾರಣದಿಂದಲೇ ಭಗವಂತನು ಕರ್ಮಯೋಗವನ್ನು ಭಗವತ್ಪ್ರಾಪ್ತಿಗೆ ಒಂದು ಉಪಾಯವೆಂದು ಹಿಂದೆ ಹೇಳಿರುವದು.

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ 13-30**

ಇಲ್ಲಿ ಹೇಳಿರುವದು ಬಹು ದೊಡ್ಡ ವಿಷಯ. ಜ್ಞಾನವೆಂಬುದರ ಅರ್ಥವು ನಮ್ಮಂಥ ಸಾಮಾನ್ಯರಿಗೆ ಆಗತಕ್ಕದ್ದೇ ಅಲ್ಲ. ನಾವುಗಳು ತೀರ ಕೆಳಗಿನ ಅಂತಸ್ತಿನಲ್ಲಿರುತ್ತೇವೆ. ಆದರೂ ಇಂಥ ಉತ್ಕೃಷ್ಟವಾದ ಜ್ಞಾನವೊಂದಿದೆ ಎಂದು ತಿಳಿದುಕೊಳ್ಳುವದಕ್ಕಾದರೂ ನಾವು

ಪ್ರಯತ್ನಿಸಬೇಕು ; ಅಥವಾ ಜ್ಞಾನಕ್ಕೆ ಸಾಧನವಾಗಿರುವ ಭಕ್ತಿಯನ್ನಾದರೂ ಮಾಡಬೇಕು. ಪರಮಾತ್ಮನು ಎಲ್ಲಾ ಭೂತಗಳಿಗೂ ಸಮವಾಗಿಯೇ ಆತ್ಮನಾಗಿರುವದರಿಂದ ಒಂದಲ್ಲ ಒಂದು ದಿನ ಮಾವಿನಮಿಡಿಯು ಹೀಚಾಗಿ ದೋರೆಕಾಯಾಗಿ ಕ್ರಮಕ್ರಮವಾಗಿ ಹಣ್ಣು ಆಗುವಂತೆ ನಾವೂ ಆ ಪರಮಾತ್ಮನ ಪ್ರೇಮರಸವನ್ನು ಅನುಭವಿಸುವದಕ್ಕೆ ತಕ್ಕವರಾಗುತ್ತೇವೆ. ಈಗ ನಾವು ಪೃಥಗ್ಭಾವವನ್ನು ಪಡೆದು ಕರ್ತೃಗಳಾಗಿರುತ್ತೇವೆ. ಒಂದು ಮರದ ಬುಡ, ಕೊಂಬೆ, ರೆಂಬೆ, ಎಲೆ - ಎಲ್ಲವುಗಳಲ್ಲಿಯೂ ಅದರ ರಸವು ಸಮವಾಗಿಯೇ ಹರಿಯುತ್ತಿರುವಂತೆ ಈಗ ನಮ್ಮಗಳಲ್ಲಿಯೂ ರಸರೂಪನಾದ ಪರಮಾತ್ಮನು ಇದ್ದುಕೊಂಡಿದ್ದಾನೆ. ರಸದಿಂದ ರಹಿತವಾದರೆ ಮರದ ಕೊಂಬೆರೆಂಬೆಗಳು ಒಣಗುವಂತೆ ಪರಮಾತ್ಮರಸದಿಂದ ಹೀನರಾದರೆ ನಾವೂ ಒಣಗಿಹೋಗುತ್ತೇವೆ. ನಮ್ಮ ಹುಟ್ಟು, ಇರವು, ಬೆಳವಣಿಗೆ ಎಲ್ಲವೂ ಆ ಒಬ್ಬ ಪರಮಾತ್ಮನಿಗೆ ಸಂಬಂಧಪಟ್ಟೇ ಇದ್ದುಕೊಂಡಿರುತ್ತದೆ. ಅತ್ಯಂತ ದೂರವಾಗಿ ಹೋಗಿರುವಂತೆ ಕಾಣುವ ಕೊಂಬೆರೆಂಬೆಗಳಿಗೂ ಮರದ ರಸವೇ ಆಧಾರವಾಗಿರುವಂತೆ, ಆ ರಸವನ್ನು ಎಳೆದುಕೊಂಡೇ ಅವು ಜೀವಧಾರಣೆಮಾಡಿರುವಂತೆ, ನಾವೆಲ್ಲರೂ ಆ ಪರಮಾತ್ಮನಿಗೆ ಸಂಬಂಧಪಟ್ಟುಕೊಂಡೇ ಆತನ ಚೈತನ್ಯರಸದಿಂದಲೇ ಜೀವಂತರಾಗಿರುತ್ತೇವೆ. ಆತನೇ ನಮ್ಮಗಳಿಗೆ ಪ್ರೇಮ, ತಿಳಿವಳಿಕೆ - ಮುಂತಾದ ಸಾತ್ತ್ವಿಕಭಾವಗಳನ್ನು ಕೊಟ್ಟು ಕಾಪಾಡುತ್ತಿರುತ್ತಾನೆ. ನಾವುಗಳು ಎಷ್ಟೇ ಭಿನ್ನರಾಗಿ ತೋರಲಿ, ಎಲ್ಲರೂ ಆ ಪರಮಾತ್ಮನಿಂದಲೇ ಬಂದಿರುವೆವು. ಆ ಪರಮಾತ್ಮನಿಗೆ ಸಂಬಧಪಟ್ಟುಕೊಂಡೇ ಹರಡಿಕೊಂಡಿರುವೆವು. ಈ ತತ್ತ್ವವನ್ನು ಯಾವಾಗ ಶಾಸ್ತ್ರಾಚಾರ್ಯರ ಉಪದೇಶವನ್ನು ಅನುಸರಿಸಿ ಕಂಡುಕೊಳ್ಳುವೆವೋ, ಯಾವಾಗ ನಾವು ನಮ್ಮ ಬೇರೆಬೇರೆಯ ವ್ಯಕ್ತಿತ್ವವನ್ನು ಆ ಪ್ರೇಮರಸಮಯನಾದ ಪರಮಾತ್ಮನಲ್ಲಿ ಕರಗಿಸಿಕೊಳ್ಳಲು ಸಮರ್ಥರಾಗುವೆವೋ, ಯಾವಾಗ ಎಲ್ಲವೂ ಆತ್ಮನೇ, ಆತ್ಮನಿಂದಲೇ ಭೂತಭೌತಿಕಗಳೂ ನಮ್ಮ ಶರೀರಾದಿಗಳೂ ಇಂದ್ರಿಯ ಮನೋಬುದ್ಧಿಗಳೂ ಬಂದು ಹರಡಿರುತ್ತವೆ ಎಂಬುದನ್ನು ಕಂಡುಕೊಳ್ಳುವೆವೋ ಆಗಲೇ ನಾವು ಬ್ರಹ್ಮವನ್ನು ಸೇರಿಕೊಳ್ಳುವೆವು, ಎಂದರೆ ಲವಣಸಮುದ್ರದಲ್ಲಿ ಮುಳುಗಿದ ಉಪ್ಪಿನ ಬೊಂಬೆಗಳಂತೆ ಆ ಪರಮಾತ್ಮನಲ್ಲಿಯೇ ಒಂದಾಗಿಬಿಡುವೆವು. ಇದೇ ಜ್ಞಾನದ ಕಟ್ಟಕಡೆಯ ಸ್ಥಿತಿಯು.

## ೧೨೮. ಕ್ಷೇತ್ರಜ್ಞಸ್ವರೂಪವರ್ಣನೆಯ ಉಪಸಂಹಾರ 13 - (31-33)

**(22-5-49)**

ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನು ನಾನೇ ಎಂದು ತಿಳಿ ಎಂದು ಭಗವಂತನು ನುಡಿದಿದ್ದಾನೆ. ಉಪಾಧಿಯಿಂದ ಒಬ್ಬೊಬ್ಬ ಕ್ಷೇತ್ರಜ್ಞನು ಒಂದೊಂದು ಬಗೆಯಾಗಿರುವನೆಂಬ ತಿಳಿವಳಿಕೆ ಬರಬಹುದು ; ಆದರೆ ನಿಜವಾಗಿ ಪರಮಾರ್ಥದಲ್ಲಿ ಯಾವ ಹೆಚ್ಚುಕಡಿಮೆಯೂ ಆಗಿರುವದಿಲ್ಲ ; ನಿಜವಾಗಿ ಯಾವ ಅಶುದ್ಧಿಯೂ ಇರುವದಿಲ್ಲ. ಆದರೂ ಉಪಾಧಿಯ

ಸಂಬಂಧದಿಂದ ಅಶುದ್ಧಿಯುಂಟಾದಂತೆಯೂ ಅದನ್ನು ಪ್ರಯತ್ನಪೂರ್ವಕವಾಗಿ ನಾವು ತೊಳೆದುಕೊಂಡಂತೆಯೂ ಕಾಣುತ್ತದೆ. ನಮಗೆ ಕೋಪವು ಬರುವಂತಾಗುವದು, ಬಂದದ್ದು, ಸ್ವಲ್ಪ ಹೊತ್ತು ಇದ್ದು ತೊಂದರೆಕೊಟ್ಟದ್ದು, ಬಳಿಕ ಬಿಟ್ಟುಹೋದದ್ದು - ಇದೆಲ್ಲವೂ ನಮಗೆ ಅನುಭವದಲ್ಲಿ ತೋರುತ್ತಿರುತ್ತದೆ. ಆದರೆ ತತ್ತ್ವದೃಷ್ಟಿಯಿಂದ ಇರತಕ್ಕದ್ದು ಬದಲಾಯಿಸಲಾರದು; ಇದ್ದದ್ದು ಹೋಗಲಾರದು, ಇಲ್ಲದ್ದು ಬರಲಾರದು. ಜನರು ತಮಗೆ ತೋರಿದ್ದನ್ನೇ ನಿಜವೆಂದು ವ್ಯವಹರಿಸುತ್ತಾರೆ ; ಅಧ್ಯಾತ್ಮಶಾಸ್ತ್ರವು ಯಾವಾಗಲೂ ಇದ್ದುಕೊಂಡಿರುವದನ್ನೇ ನಿಜವೆಂದು ವ್ಯವಹರಿಸುತ್ತದೆ. ಇರುವದು ಬೇರೆ, ತೋರುವದು ಬೇರೆ ಆಗಿರಬಹುದು. ನಮಗೆ ಕಷ್ಟಬಂದಿದೆ ಎಂದು ನಾವು ವ್ಯವಹರಿಸುತ್ತಿದ್ದೇವೆಂದು ಇಟ್ಟುಕೊಳ್ಳಿ. ನಮಗೆ ಕಷ್ಟವು ತೋರುತ್ತಿದೆ ಎಂದೇ ಅರ್ಥ. ಸೂರ್ಯನು ಕಾಣುವದಿಲ್ಲ. ಮೋಡವು ಮುಚ್ಚಿಕೊಂಡಿದೆ ಎಂದು ಜನರು ವ್ಯವಹರಿಸುತ್ತಾರಷ್ಟೆ. ಆದರೆ ಆಗಲೂ ನಿಜವಾಗಿ ಸೂರ್ಯನು ಪ್ರಕಾಶಿಸುತ್ತಲೇ ಇರುತ್ತಾನೆ. ಅವನು ಮೋಡಕ್ಕಿಂತ ಎಷ್ಟೋ ಸಾವಿರ ಯೋಜನಗಳ ದೂರದಲ್ಲಿರುತ್ತಾನೆ; ಮೋಡಕ್ಕಿಂತಲೂ ಸೂರ್ಯಮಂಡಲವು ಎಷ್ಟೋ ಹೆಚ್ಚು ವಿಶಾಲವಾಗಿರುತ್ತದೆ. ಆ ಸೂರ್ಯನ ಪ್ರಕಾಶದಿಂದಲೇ ಮೋಡವು ಕೂಡ ನಮಗೆ ಕಾಣಿಸುತ್ತಿರುತ್ತದೆ. ಹೀಗಿದ್ದರೂ ನಾವು `ಸೂರ್ಯನಿಗೆ ಮೋಡವು ಮರೆಯಾಗಿದೆ' - ಎನ್ನುವೆವು. ನಮಗೆ ದಾಟಲಶಕ್ಯವಾದ ಕಷ್ಟವು ಬಂದಿದೆ ಎಂದುಕೊಂಡಿರುವಾಗಲೂ ಹೀಗೆಯೇ; ಕಷ್ಟವು ನಮಗೆ ಹೊಸದಾಗಿ ಬಂದಿರುತ್ತದೆ, ನಾವು ಮೊದಲಿಂದಲೂ ಇದ್ದಂತೆ ಇದ್ದುಕೊಂಡೇ ಇರುತ್ತೇವೆ ; ಕಷ್ಟವು ಇಷ್ಟರಲ್ಲಿಯೇ ಪರಿಹಾರವಾಗುತ್ತದೆ, ನಾವು ಮೊದಲಿನಂತೆಯೇ ಮುಂದೆಯೂ ಇದ್ದುಕೊಂಡಿರುವೆವು. ಯಾವಾಗಲೂ ಒಂದೇ ರೂಪದಲ್ಲಿರುವ ರೂಪವೇ ನಮ್ಮ ಪರಮಾರ್ಥಸ್ವರೂಪವು. ಇದೇ ನಮ್ಮೆಲ್ಲರಿಗೂ ಆತ್ಮನಾಗಿರುವದು. ಮತ್ತೊಬ್ಬರ ಮಾತನ್ನು ಕೇಳಿ ನಂಬುವದು ನಮ್ಮಗಳಿಗೆ ಅಭ್ಯಾಸವಾಗಿಬಿಟ್ಟಿದೆ. ಸತ್ತಮೇಲೆ ಲೋಕಾಂತರದಲ್ಲಿ ಜನ್ಮಾಂತರದಲ್ಲಿ ಆಗುವದನ್ನು ಕೂಡ ನಂಬುವದಕ್ಕೆ ಸಿದ್ಧರಾಗಿರುತ್ತೇವೆ. ಈಗಲೇ ಇಲ್ಲಿಯೇ ನಮ್ಮೆಲ್ಲರಿಗೂ ಒಬ್ಬ ಆತ್ಮನಿರುವನೆಂಬುದು ಅನುಭವಕ್ಕೆ ಬರುತ್ತದೆ ಎಂಬ ಭಗವಂತನ ವಾಕ್ಯವನ್ನೇಕೆ ವಿಚಾರಿಸಿ ನೋಡಿ ತಿಳಿದುಕೊಳ್ಳುವ ಪ್ರಯತ್ನವನ್ನು ಮಾಡಬಾರದು ? ಸರಿಯೆ, ಇದರ ವಿಷಯದಲ್ಲಿ ನಮಗೆ ಭರವಸೆಯಾಗುವದು ಹೇಗೆ? - ಎಂದು ನೀವು ಕೇಳಬಹುದು. ಭಗವಂತನ ವಚನವನ್ನು ಕೇಳಿರಿ :

**ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಽಯಮವ್ಯಯಃ ।**
**ಶರೀರಸ್ಥೋಽಪಿ ಕೌನ್ತೇಯ ನ ಕರೋತಿ ನ ಲಿಪ್ಯತೇ ॥ 13-31**

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥ 13-32**

ಈ ಶರೀರದಲ್ಲಿದ್ದರೂ ಪರಮಾತ್ಮನು ನಿಜವಾಗಿ ಯಾವ ಶರೀರದ ಕರ್ಮವನ್ನೂ ಮಾಡುವದಿಲ್ಲ. ಯಾವ ಕರ್ಮಫಲದ ಲೇಪವೂ ಅವನಿಗೆ ಇರುವದಿಲ್ಲ. ನಮ್ಮ ನಿಜವಾದ

ಸ್ವರೂಪವೇ ಪರಮಾತ್ಮನು ; ಆ ಪರಮಾತ್ಮನು ಎಲ್ಲರ ಶರೀರಕ್ಕೂ ಒಬ್ಬನೇ ಆತ್ಮನು. ಭಗವಂತನ ಆಪ್ತವಾಕ್ಯವನ್ನು ವಿಶ್ವಾಸದಿಂದ ನಂಬಿದರೂ ಸಾಕು ; ಆ ಆತ್ಮನೇ ನಿಜವಾಗಿಯೂ ನಮ್ಮ ಆತ್ಮನಾಗಿದ್ದರೆ ಸಾಕೆಂಬ ಆಶೆಯುಂಟಾಗುತ್ತದೆ. ನಮ್ಮೆಲ್ಲರ ಆತ್ಮನು ಅನಾದಿಯು, ನಿರ್ಗುಣನು. ಅವನು ಯಾವ ಕರ್ಮವನ್ನೂ ಮಾಡಿ ವಿಕಾರವನ್ನು ಹೊಂದುವದಿಲ್ಲ. ಅವನಿಗೆ ಯಾವ ಫಲದ ಲೇಪವೂ ಆಗುವದಿಲ್ಲ. ಇಂಥ ಸ್ವಭಾವವು ಅವನದು. ನಿರ್ಗುಣನು ಎಂದರೆ ದೋಷಗಳಿರುವವನು ಎಂದು ಅರ್ಥವಲ್ಲ ; ಯಾವದೊಂದು ಬಾಹ್ಯವಸ್ತುವಿನ ಧರ್ಮವೂ ತನ್ನಲ್ಲಿಲ್ಲದವನು ಎಂದರ್ಥ. ಗುಣದೋಷಗಳೆರಡನ್ನೂ ತನ್ನ ಚೈತನ್ಯಪ್ರಕಾಶದಿಂದ ಬೆಳಗುತ್ತಿರುವ ಆತ್ಮನಲ್ಲಿ ಯಾವ ಗುಣವು ಅಥವಾ ಯಾವ ದೋಷವುತಾನೆ ಇದ್ದೀತು ? ಈ ಶರೀರವು ದೃಶ್ಯವು ; ಅದರ ಧರ್ಮಗಳು ಅದನ್ನು ನೋಡುತ್ತಿರುವ ಆತ್ಮನಿಗೆ ಹೇಗೆ ಉಂಟಾದಾವು ? ಶರೀರವನ್ನು ನಮಗೆ ಸಂಬಂಧಿಸಿಕೊಳ್ಳುವದರಿಂದಲೇ ಅದರ ಸುಖ ದುಃಖಗಳು ನಮಗೆ ಆಗುವಂತೆ ತೋರುತ್ತಿರುವವು ನಾವು ಅದನ್ನು ವಿಷಯೀಕರಿಸಿಕೊಂಡಿರುವ ದೃಗ್ರೂಪರೆಂಬುದನ್ನು ಮನದಂದರೆ ನಮಗೆ ಯಾವ ಸುಖದುಃಖಗಳ ಲೇಪವೂ ಇಲ್ಲವೆಂಬುದು ಮನಸ್ಸಿಗೆ ಬರುತ್ತದೆ. ಶರೀರವು ಮಾಡುವ ಪಾಪಗಳು ನಮಗೆ ಅಂಟುವದಿಲ್ಲ, ಅದರಿಂದಾಗುವ ದುಃಖವೂ ನಮಗಿಲ್ಲ - ಎಂದರೇನೋ ನಮ್ಮಗಳಿಗೆ ಸಂತೋಷವಾಗುತ್ತದೆ. ಆದರೆ ಅದರಿಂದಾಗುವ ಪುಣ್ಯವೂ ನಮಗಿಲ್ಲ, ಪುಣ್ಯದ ಫಲವಾದ ಸುಖವೂ ನಮಗಿಲ್ಲ - ಎಂಬುದು ನಮಗೆ ಒಗ್ಗುವದಿಲ್ಲ. ಆದರೆ ನಿಜವೇನು? ಶರೀರವನ್ನು ನಮಗೆ ಸಂಬಂಧಿಸಿಕೊಂಡು ಸುಖದುಃಖಗಳೆರಡನ್ನೂ ನಮ್ಮದೆಂದುಕೊಳ್ಳಬೇಕು ; ಇಲ್ಲವೇ ಶರೀರವನ್ನು ಹೊರಚ್ಚುಮಾಡಿ, ಅದರ ಸುಖದುಃಖಗಳೆರಡೂ ನಮ್ಮದಲ್ಲವೆನ್ನಬೇಕು. ಈ ಎರಡರಲ್ಲಿ ಒಂದನ್ನು ತೆಗೆದುಕೊಂಡು ಮತ್ತೊಂದನ್ನು ಕೈಬಿಡುವದಕ್ಕೆ ಬರುವದಿಲ್ಲ. ವ್ಯವಹಾರದಲ್ಲಿ ಜನರು ಪುಣ್ಯವನ್ನು ಮಾಡದೆ ಪುಣ್ಯದ ಫಲಬೇಕು ಎನ್ನುವದೂ ಪಾಪವನ್ನು ಮಾಡಿ ಅದರ ಫಲವು ಉಂಟಾಗಬಾರದೆನ್ನುವದೂ ಹೇಗೆ ಅವಿವೇಕವೋ ಹಾಗೆಯೇ ಶರೀರದ ಪುಣ್ಯಫಲವು ಇರಲಿ, ಪಾಪಫಲವು ಬೇಡ - ಎನ್ನುವದೂ ಅವಿವೇಕವೇ.

ಆದ್ದರಿಂದ ಶರೀರವು ನನ್ನದು ಎಂದಾದರೂ ಇಟ್ಟುಕೊಳ್ಳಬೇಕು, ನನ್ನದಲ್ಲವೆಂದಾದರೂ ಇಟ್ಟುಕೊಳ್ಳಬೇಕು. ಶರೀರವು ನನ್ನದು ಎಂಬವನು ಕರ್ಮಿಯು. ಅವನು ಶರೀರವನ್ನು ಶುಚಿಯಾಗಿಟ್ಟುಕೊಳ್ಳಬೇಕು; ಅದನ್ನು ಉಪಯೋಗಿಸಿಕೊಂಡು ಶುಭಕರ್ಮಗಳನ್ನೇ ಮಾಡಬೇಕು, ಉತ್ತಮಫಲಗಳನ್ನು ಪಡೆಯಬೇಕು. ಅಥವಾ ಮಾಡಿದ ಕರ್ಮಗಳ ಫಲವನ್ನು ಬಯಸದೆ ಪರಮೇಶ್ವರನಿಗೆ ಅರ್ಪಣೆಮಾಡಿ ಚಿತ್ತಶುದ್ಧಿಯನ್ನು ಸಂಪಾದಿಸಿಕೊಳ್ಳಬೇಕು. ಇದೊಂದು ದಾರಿ. ಇನ್ನು ಚಿತ್ತಶುದ್ಧಿಯು ಆಗಿಯೇ ಇರುವವನೋ ಎಂದರೆ ಶರೀರವು ತನ್ನದಲ್ಲ, ಅದು ದೃಶ್ಯವು; ಅದರ ಧರ್ಮಗಳು ದೃಗ್ರೂಪನಾಗಿರುವ ತನಗೆ ಒಂದಿಷ್ಟೂ ಸೇರಿರುವದಿಲ್ಲ ಎಂಬುದನ್ನು ಮನಗಂಡಿರುತ್ತಾನೆ. ಅವನಿಗೆ ಶರೀರದ ಪುಣ್ಯವೂ

ಅಂಟುವದಿಲ್ಲ. ಪಾಪವೂ ಅಂಟುವದಿಲ್ಲ. ಇದೊಂದು ದಾರಿ. ಈ ದಾರಿಯಲ್ಲಿ ಪ್ರಪಂಚವು ಸತ್ಯವೊ, ಮಿಥ್ಯೆಯೊ ? ಎಂಬ ವಿಚಾರವಿಲ್ಲ. ದೃಶ್ಯವಾದದ್ದರ ಯಾವ ಧರ್ಮವೂ ತನಗೆ ಸೇರಿರುವದಿಲ್ಲ- ಎಂಬುದೇ ಮುಖ್ಯ. ಹೊರಗಿನ ವಿಷಯಗಳನ್ನು ಸಂಪಾದಿಸಿಕೊಳ್ಳಬೇಕೆನ್ನುವವನು ಆಗಲೆ ಶರೀರವನ್ನು ತಾನೆಂದುಕೊಂಡಿರುತ್ತಾನೆ. ಆದರೆ ಯಾವನು ಶರೀರವನ್ನು ದೃಶ್ಯವಾಗಿರುವದೆಂದು ತಿಳಿದುಕೊಂಡಿರುತ್ತಾನೋ ಅವನಿಗೆ ನೆರಳಿನ ದೇಹವು ಎಷ್ಟರಮಟ್ಟಿಗೋ ಈ ದೇಹವೂ ಅಷ್ಟರಮಟ್ಟಿಗೇ ಬೆಲೆಯುಳ್ಳದ್ದು. ವಿಷಯಗಳನ್ನು ಸುಮ್ಮನೆ ಬಿಟ್ಟರೆ ಅವು ನಮ್ಮನ್ನು ಬಿಡುವದಿಲ್ಲ; ಅವು ಅಸಾರವೆಂಬುದನ್ನೂ ಹುಸಿತೋರಿಕೆಮಾತ್ರವೆಂಬುದನ್ನೂ ತಿಳಿದು ಬಿಟ್ಟರೆ ಅವುಗಳು ನಮ್ಮನ್ನು ಕಾಡುವದಿಲ್ಲ. ಅವುಗಳಿಂದಾಗುವ ಸುಖದುಃಖಗಳೂ ನಮಗೆ ಆಗುವದಿಲ್ಲ. ಈ ನಿಜವನ್ನು ತಿಳಿದವರು ಹೇಗಿರುತ್ತಾರೆ? ಅವರೂ ಮಿಕ್ಕವರಂತೆಯೇ ವ್ಯವಹಾರಮಾಡುತ್ತಿರುತ್ತಾರೆ; ಆದರೆ ಶರೀರದಲ್ಲಿ ನಾನು ನನ್ನದು ಎಂಬ ಅಭಿಮಾನದಿಂದ ಅವರು ಕರ್ಮವನ್ನು ಮಾಡುವದಿಲ್ಲ. ಯಾವ ಫಲವನ್ನೂ ಅನುಭವಿಸುವದಿಲ್ಲ. ಅವರಿಗೆ ಶರೀರಾದಿಗಳ ಅಭಿಮಾನವಿರುವದಿಲ್ಲ ವಾದ್ದರಿಂದಲೇ ಅವರಿಗೆ ಕರ್ಮವಿಲ್ಲ, ಫಲಲೇಪವೂ ಇಲ್ಲ ಎನ್ನುವದು.

ಲೋಕದಲ್ಲಿ ಮನುಷ್ಯರಿಗೆ ಇರುವ ವ್ಯಥೆಗೆ ಕಾರಣವೆಲ್ಲ ಪರಮಾತ್ಮಸ್ವರೂಪವನ್ನು ಬಿಟ್ಟು ಅದರಿಂದ ಜಾರಿರುವದರಿಂದಲೇ. ನಮಗೆ ಮಿಕ್ಕದ್ದೆಲ್ಲದರ ವಿಚಾರವನ್ನೂ ಮಾಡುವದಕ್ಕೆ ಕಾಲವಿದೆ; ಆದರೆ ನಮ್ಮ ಪರಮಾರ್ಥಸ್ವರೂಪವನ್ನು ವಿಚಾರಮಾಡಿಕೊಳ್ಳುವದಕ್ಕೆ ಬಿಡುವಿಲ್ಲ. ಇದೆಂಥ ಅನ್ಯಾಯ ! ಈಗಲಾದರೂ ನಾವು ಧೈರ್ಯಮಾಡಬೇಕು ; ಹೊರಗಿನ ವಿಷಯಗಳ ವಾಸನೆಯನ್ನು ಬಿಟ್ಟು ನಮ್ಮಕಡೆಗೆ ನಾವು ತಿರುಗಬೇಕು. ಪರಮಾತ್ಮನ ಕಡೆಗೆ ತಿರುಗುವದೆಂಬುದೇ ಒಂದು ಉದ್ಯೋಗವಾಗಬೇಕು. ಹಾಗೆ ತಿರುಗಿದರೆ ಎಲ್ಲಾ ಕಷ್ಟಗಳೂ ಮಾಯವಾಗುತ್ತವೆ. ಸಂಪಾದನೆಮಾಡುವದಕ್ಕೆ ದುಡಿಯಬೇಕಾದದ್ದು ಸರಿ ; ಆದರೆ ಸಂಪಾದನೆ ನಮಗೆ ನೆಮ್ಮದಿಯನ್ನು ಕೊಡುವದಾಗಬೇಕು. ನಮ್ಮ ಸಂಪಾದನೆ ಏನನ್ನು ಕೊಡುತ್ತದೆ ? - ದುಃಖವನ್ನೊ, ಸುಖವನ್ನೊ ? ಅದನ್ನು ನೋಡಬೇಕಲ್ಲವೆ ? ಹೊರಗಿನ ಸುಖ, ದುಃಖ - ಎಲ್ಲವೂ ದುಃಖವೇ. ಆದರೆ ನಮ್ಮ ಸ್ವರೂಪದಕಡೆಗೆ ನಾವು ತಿರುಗಿದರೆ ಮಾತ್ರ ನಿಜವಾದ ಸುಖ. ಸ್ವಾರ್ಥದ ವಿಷಯದಲ್ಲಿಯೂ ಪ್ರಮಾದಮಾಡುವದು ಎಂಥ ಮೂಢತನ ! ಇದು ಎಂದಿಗೂ ಸಲ್ಲದು. ಆದ್ದರಿಂದ ನಾವು ನಮ್ಮಕಡೆಗೆ ತಿರುಗಿ ನೋಡಿಕೊಳ್ಳಬೇಕು. ಆಗ ನಮ್ಮ ಸ್ವರೂಪವು ಹೇಗೆ ಇದೆ ಎಂಬುದು ತಿಳಿಯಬರುವದು.

ಈ ನಮ್ಮ ಸ್ವರೂಪವು ಅನಾದಿಯಾಗಿರುತ್ತದೆ. ಇದಕ್ಕೆ ಯಾವ ಆದಿಯೂ, ಯಾವ ಕಾರಣವೂ, ಇಲ್ಲ. ಯಾವದಕ್ಕೆ ಆದಿಯಿರುತ್ತದೆಯೋ ಅದು ತನ್ನ ಸ್ವರೂಪದಿಂದ ನಾಶವಾಗುವದು ; ಈ ಆತ್ಮನು ಯಾವ ಅವಯವಗಳೂ ಇಲ್ಲದವನು, ಆದ್ದರಿಂದ ಅನಾದಿ; ಆದ್ದರಿಂದಲೇ ಅವ್ಯಯನು. ಇನ್ನೊಂದು ಮಾತು. ಈ ನಮ್ಮ ಸ್ವರೂಪವು ನಿರ್ಗುಣ, ಯಾವ

ಧರ್ಮಗಳೂ ಇಲ್ಲದ್ದು. ಯಾವದಕ್ಕೆ ಗುಣಗಳಿರುವವೋ ಅದು ಗುಣಗಳ ನಾಶದಿಂದ ತಾನೂ ನಾಶವಾಗುತ್ತದೆ. ಆದರೆ ಆತ್ಮನಿಗೆ ಗುಣಗಳಿಲ್ಲವಾದ್ದರಿಂದ ಅವನು ನಾಶವಾಗಲಾರನು. ಹೀಗಿರುವದರಿಂದ ನಿತ್ಯವಾಗಿ ಕೂಟಸ್ಥವಾಗಿ ಇರುವ ಈ ಆತ್ಮಸ್ವರೂಪದಲ್ಲಿ ಯಾವ ಕ್ರಿಯೆಯಿದ್ದೀತು, ಇವನಿಗೆ ಯಾವ ವಿಕಾರವುಂಟಾದೀತು ? ಯಾವ ಕ್ರಿಯಾಫಲವು ತಾನೆ ಇವನಿಗೆ ಅಂಟೀತು ?

ಈ ಆತ್ಮನು ನಮ್ಮ ನಮ್ಮ ದೇಹದಲ್ಲಿ ಕಾಣಬರುತ್ತಾನೆ ; ಶರೀರವೆಲ್ಲವನ್ನೂ ಅರಿಯುತ್ತಿರುವದರಿಂದಲೇ ಇವನು ನಮ್ಮ ಆತ್ಮನೆಂದು ಅರಿತುಕೊಳ್ಳಬಹುದು. ಆದ್ದರಿಂದ ಶರೀರಸ್ಥನು ಎನಿಸಿಕೊಳ್ಳುತ್ತಾನೆ. ಆದರೆ ನಿಜವಾಗಿ ಇವನು ಶರೀರದಲ್ಲಿಲ್ಲ, ಶರೀರವೇ ಇವನಲ್ಲಿದೆ. ಇದಕ್ಕೊಂದು ಉದಾಹರಣೆ : ಗಡಿಗೆ, ಮಡಕೆ, ಕುಡಿಕೆ - ಮುಂತಾದವುಗಳೊಳಗೆ ಕಾಣಬರುವ ಅವಕಾಶವು ಗಡಿಗೆ ಮುಂತಾದವುಗಳಲ್ಲಿದೆಯೆಂದೂ ಅದರಿಂದ ಅವು ದೊಡ್ಡವಾಗಿ ಅಥವಾ ಸಣ್ಣವಾಗಿ ಕಾಣುತ್ತವೆಯೆಂದೂ ನಾವು ಭಾವಿಸುತ್ತೇವೆ. ಅಲ್ಲವೆ ? ಆದರೆ ನಿಜವೇನು? ಗಡಿಗೆ ಮುಂತಾದವುಗಳಲ್ಲಿ ಕಾಣುವ ಅವಕಾಶವೆಂಬುದೆಲ್ಲ ಒಂದೇ ಒಂದು ವಿಶಾಲವಾದ ಆಕಾಶವು. ಆ ಆಕಾಶದಲ್ಲಿಯೇ ಗಡಿಗೆ, ಮಡಕೆ, ಕುಡಿಕೆ ಮುಂತಾದ ಪದಾರ್ಥಗಳು ಇರುತ್ತವೆ. ಅಲ್ಲವೆ ? ಹೀಗೆಯೇ ಆತ್ಮನೇ ಎಲ್ಲೆಲ್ಲಿಯೂ ಇರುತ್ತಾನೆ ; ಶರೀರಗಳು ಆತ್ಮನಲ್ಲಿರುತ್ತವೆ. ಆತ್ಮನು ಶರೀರದಲ್ಲಿಲ್ಲ. ಆಕಾಶದ ದೃಷ್ಟಾಂತದಲ್ಲಿ ತಿಳಿಯಬೇಕಾದದ್ದು ಇನ್ನೊಂದು ವಿಷಯವಿದೆ. ಒಂದೊಂದು ಗಡಿಗೆಯ ಬಣ್ಣವು ಬೇರೆಬೇರೆಯಾಗಿರಬಹುದು, ಅವರ ಆಕಾರವೂ ಬೇರೆಬೇರೆಯಾಗಿರಬಹುದು ; ಆದರೆ ಈ ಬಣ್ಣವಾಗಲಿ ಆಕಾರವಾಗಲಿ ಆಕಾಶಕ್ಕೆ ಸೇರಿದೆಯೇನು ? ಇಲ್ಲ. ಗಡಿಗೆ ಅಲುಗಾಡಿದರೆ, ಆಕಾಶವು ಅಲುಗಾಡುವದೇನು ? ಇಲ್ಲ. ಗಡಿಗೆಯೊಳಗೆ ಧೂಳು, ಹೊಗೆ ಮುಂತಾದದ್ದಿದ್ದರೆ ಆಕಾಶಕ್ಕೆ ಅಂಟಿಕೊಂಡಿರುತ್ತದೆಯೇನು? ಇಲ್ಲ. ಆಕಾಶವು ಅತ್ಯಂತ ಸೂಕ್ಷ್ಮವಾಗಿರುತ್ತದೆ. ಸ್ಥೂಲವಾಗಿರುವ ಗಡಿಗೆ, ಮಡಕೆ ಮುಂತಾದವುಗಳ ಯಾವ ಸ್ವಭಾವವೂ ಆಕಾಶಕ್ಕೆ ಅಂಟಿಕೊಳ್ಳುವದೇ ಇಲ್ಲ. ಆತ್ಮನು ಆಕಾಶಕ್ಕಿಂತಲೂ ಸೂಕ್ಷ್ಮನು ; ಆಕಾಶವನ್ನು ಕೂಡ ವ್ಯಾಪಿಸಿಕೊಂಡಿರುವದರಿಂದ ಅದಕ್ಕಿಂತಲೂ ಸರ್ವಗತನು. ಅವನಿಗೆ ಆಕಾಶದ ಗುಣವು ಕೂಡ ಹತ್ತುವದಿಲ್ಲ. ಯಾವ ಶರೀರದಲ್ಲಿಯೇ ಇರಲಿ, ಆ ಶರೀರದ, ಆ ಇಂದ್ರಿಯಗಳ, ಆ ಮನಸ್ಸಿನ, ಆ ಬುದ್ಧಿಯ ಯಾವದೊಂದು ಸ್ವಭಾವವೂ ಈ ಆತ್ಮನಿಗೆ ಸೇರಿಕೊಂಡಿರುವದಿಲ್ಲ. ಈ ರೀತಿಯಲ್ಲಿ ಎಲ್ಲಾ ಶರೀರಗಳಲ್ಲಿಯೂ ಆತ್ಮನಿರುತ್ತಾನೆ ; ಅವನಿಗೆ ಯಾವದೊಂದು ಶರೀರದ, ಯಾವದೊಂದು ಶರೀರೇಂದ್ರಿಯಸಂಘಾತದ, ಯಾವ ಗುಣದೋಷಗಳೂ ಹತ್ತಿಕೊಂಡಿರುವದಿಲ್ಲ. ಇಂಥ ನಿತ್ಯಶುದ್ಧಸ್ವಭಾವದವನು, ನಮ್ಮಗಳೆಲ್ಲರ ಆತ್ಮನು.

ಇದೇ ವಿಷಯವನ್ನು ಮತ್ತೊಂದು ದೃಷ್ಟಾಂತದಿಂದ ತಿಳಿಯಪಡಿಸಬಹುದು. ಆತ್ಮನು ಸೂರ್ಯನಂತೆ ಇರುತ್ತಾನೆ. ಸೂರ್ಯನು ಎಲ್ಲವನ್ನೂ ಬೆಳಗುತ್ತಿರುತ್ತಾನೆ ; ಈ ಲೋಕದಲ್ಲಿ ನಮಗೆ ವ್ಯವಹಾರಗೋಚರವಾಗಿರುವ ಸ್ಥೂಲಭೌತಿಕಪದಾರ್ಥಗಳು ಸೂರ್ಯನ ಬೆಳಕಿನಲ್ಲಿ

ಅದ್ದಿ ಮುಳುಗಿರುತ್ತವೆ. ಸೂರ್ಯನು ಆ ಪದಾರ್ಥಗಳನ್ನು ಬೆಳಗುವದಕ್ಕೆ ಮಾಡುವ ಕ್ರಿಯೆ ಯಾವದು ? ಏನೇನೂ ಇಲ್ಲ. ಅಲ್ಲವೆ ? ಇದರಂತೆ ಆತ್ಮನು ಈ ಶರೀರವನ್ನೂ ಶರೀರದಿಂದ ಹೊರಗೆ ಕಾಣುವ ಎಲ್ಲಾ ವಸ್ತುಗಳನ್ನೂ ಆಕಾಶದಲ್ಲಿ ಕಾಣುವ ಸೂರ್ಯ, ಚಂದ್ರ, ನಕ್ಷತ್ರಾದಿಗಳನ್ನೂ ಎಲ್ಲವನ್ನೂ ತನ್ನ ಚೈತನ್ಯಪ್ರಕಾಶದಿಂದಲೇ ಬೆಳಗುತ್ತಿರುತ್ತಾನೆ. ಅವನ್ನು ಬೆಳಗುವದಕ್ಕೆ ಆತ್ಮನು ಯಾವ ಕ್ರಿಯೆಯನ್ನೂ ಮಾಡಬೇಕಾದದ್ದಿರುವದಿಲ್ಲ. ಅವನ ಚೈತನ್ಯಪ್ರಕಾಶದಲ್ಲಿಯೇ ಅದ್ದಿ ಮುಳುಗಿ ಇದ್ದುಕೊಂಡು ಅವೆಲ್ಲ ವ್ಯವಹಾರದಲ್ಲಿ ಕಾಣಬರುತ್ತಿವೆ. ನಮ್ಮ ಶರೀರವನ್ನು ಮಾತ್ರವೇ ಅಲ್ಲ, ಶರೀರದೊಳಗಿರುವ ಇಂದ್ರಿಯ, ಮನಸ್ಸು, ಬುದ್ಧಿ - ಎಲ್ಲವನ್ನೂ ನಮಗೆ ಬೆಳಗಿತೋರಿಸುತ್ತಿರುವದು ಈ ಆತ್ಮನ ಬೆಳಕೇ ಆಗಿರುತ್ತದೆ. ಹೀಗೆ ಅತ್ಯಂತ ಹೊರಗಿರುವ ಪ್ರಪಂಚವೇ ಅಲ್ಲದೆ ನಮ್ಮ ಶರೀರದೊಳಗಿರುವ ಆಧ್ಯಾತ್ಮಿಕಪ್ರಪಂಚವೆಲ್ಲವನ್ನೂ ಈ ಆತ್ಮಸೂರ್ಯನ ಪ್ರಕಾಶವೇ ಬೆಳಗುತ್ತಿರುತ್ತದೆ. ಆದರೆ ಸೂರ್ಯನ ಬೆಳಕು ಪತರ ಮೇಲೆಯೇ ಬೀಳಲಿ, ಆ ವಸ್ತುವಿನ ಗುಣದೋಷವು ಆ ಬೆಳಕಿಗೇನೂ ಹತ್ತುವದಿಲ್ಲ. ಅಲ್ಲವೆ ? ಸೂರ್ಯನ ಬೆಳಕು ಗಂಗಾನದಿಯ ಪವಿತ್ರವಾದ ನೀರಿನ ಮೇಲೆ ಬೀಳಲಿ, ಅಥವಾ ಅಶುಚಿಯಾದ ಮಲಮೂತ್ರಾದಿಗಳ ಮೇಲೆ ಬೀಳಲಿ, ತಾನುಮಾತ್ರ ಅವುಗಳ ಗುಣದೋಷಗಳ ಅಂಟಿಲ್ಲದೆ ಅದಕ್ಕೆ ಹೊರಚ್ಚಾಗಿಯೇ ಇರುತ್ತದೆ. ಇದರಂತೆಯೇ ನಮ್ಮ ಶರೀರದಲ್ಲಿರುವ ಕ್ಷೇತ್ರಜ್ಞನಾಗಿರುವ ಈ ಪರಮಾತ್ಮನು ಇಡಿಯ ಕ್ಷೇತ್ರವನ್ನು - ಶರೀರವನ್ನೂ ಅದರ ಹೊರಗಿರುವ ಆಧಿಭೌತಿಕ ಆಧಿದೈವಿಕಪದಾರ್ಥಗಳನ್ನೂ - ತನ್ನ ಚೈತನ್ಯಪ್ರಕಾಶದಿಂದ ಬೆಳಗುತ್ತಿರುತ್ತಾನೆ. ಆದರೆ ಅವನಿಗೆ ಈ ಯಾವ ವಸ್ತುಗಳ ದೋಷಗಳೂ ಅಂಟುವಹಾಗಿಲ್ಲ. ಅಂಥ ಚಿದ್ಘನನಾಗಿರುತ್ತಾನೆ, ಅವನು ! ಅವನಿಗೆ ಮನಸ್ಸಿನ ಯಾವ ಪಾಪಪುಣ್ಯಗಳೂ ಯಾವ ಸುಖದುಃಖಗಳೂ ಅಂಟುವದಿಲ್ಲ. ಅಂಥ ಆಸಂದಘನನಾಗಿರುತ್ತಾನೆ, ಅವನು ! ಹೀಗೆ ನಮ್ಮಲ್ಲಿ ಪ್ರತಿಯೊಬ್ಬನ ಆತ್ಮನಾಗಿ ನಿತ್ಯಶುದ್ಧಬುದ್ಧಮುಕ್ತಸ್ವಭಾವದವನಾಗಿರುತ್ತಾನೆ ; ಈ ಆತ್ಮನು ಒಬ್ಬನೇ ಒಬ್ಬನು. ಅವನೇ ಪರಮಾತ್ಮನು. ಇದನ್ನು ತಿಳಿದು ಅರಿತುಕೊಂಡವನೇ ಜ್ಞಾನಿ. ಈ ಕ್ಷೇತ್ರಕ್ಷೇತ್ರಜ್ಞವಿವೇಕವೇ ಈ ಅಧ್ಯಾಯದ ಸಾರವು.

## ೧೨೯. ಭೂತಪ್ರಕೃತಿಮೋಕ್ಷ* (13 - 34)

(29-5-49)

ಕ್ಷೇತ್ರಜ್ಞನ ಸ್ವರೂಪವರ್ಣನೆಯನ್ನು ಮಾಡಿದ್ದಾಯಿತು. ಒಬ್ಬನೇ ಕ್ಷೇತ್ರಜ್ಞನಿಂದ ಎಲ್ಲವೂ ಬಂದಿರುತ್ತದೆ, ಆ ಕ್ಷೇತ್ರಜ್ಞನಲ್ಲಿಯೇ ಎಲ್ಲವೂ ಇದ್ದುಕೊಂಡಿದೆ ಎಂಬುದನ್ನು

*. ಈ ಉಪನ್ಯಾಸಕ್ಕೆ ಟಿಪ್ಪಣಿಯಿಲ್ಲ. ಹಿಂದುಮುಂದಿನ ಪ್ರಕರಣಕ್ಕೆ ಹೊಂದುವಂತೆ ವಿಷಯವನ್ನು ಜೋಡಿಸಿ ಸಂಗ್ರಹವಾಗಿ ಬರೆದಿರುತ್ತದೆ. - ಪ್ರ.

ತಿಳಿಸಿದ್ದಾಯಿತು. ಕ್ಷೇತ್ರಜ್ಞನು ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ ಎಂದೂ ಅವನು ಕ್ಷೇತ್ರವನ್ನೆಲ್ಲ ಆಕಾಶದಂತೆ ತುಂಬಿಕೊಂಡಿರುತ್ತಾನೆಂದೂ ಹೇಳಿದ್ದಾಯಿತು. ಆತ್ಮನು ಆಕಾಶದಂತೆ ಸರ್ವಗತನಾಗಿದ್ದರೂ ಆಕಾಶದಂತೆಯೇ ಪರಮಸೂಕ್ಷ್ಮನಾಗಿರುವದರಿಂದ ಅವನಿಗೆ ಶರೀರಾದಿಗಳ ಧರ್ಮವು ಒಂದಿಷ್ಟೂ ಅಂಟಿಕೊಂಡಿರುವದಿಲ್ಲವೆಂದು ಹೇಳಿದ್ದಾಯಿತು. ಸೂರ್ಯನು ಲೋಕವನ್ನೆಲ್ಲ ಬೆಳಗುವಂತೆ ಕ್ಷೇತ್ರವನ್ನೆಲ್ಲ ಆತ್ಮನು ತನ್ನ ಚೈತನ್ಯಪ್ರಕಾಶದಿಂದ ಬೆಳಗುತ್ತಿರುವವನು ; ಆದ್ದರಿಂದ ಅವನಿಗೆ ಯಾವದೊಂದು ಗುಣದೋಷವೂ ಅಂಟುವದಿಲ್ಲ ಎಂದು - ತಿಳಿಸಿದ್ದಾಯಿತು.

ಈಗ ಈ ಜ್ಞಾನದಿಂದ ಆಗುವ ಪ್ರಯೋಜನವೇನು ? - ಎಂಬುದನ್ನು ಭಗವಂತನು ತಿಳಿಸುತ್ತಾನೆ.

**ಕ್ಷೇತ್ರಕ್ಷೇತ್ರಜ್ಞಯೋರೇವಮನ್ತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾನ್ತಿ ತೇ ಪರಮ್ ॥ 13-34**

ಕ್ಷೇತ್ರಕ್ಷೇತ್ರಜ್ಞರಿಗೆ ಇರುವ ಈ ತಾರತಮ್ಯವನ್ನೂ ಭೂತಪ್ರಕೃತಿಮೋಕ್ಷವನ್ನೂ ಯಾರು ಜ್ಞಾನಚಕ್ಷುಸ್ಸಿನಿಂದ ಅರಿತುಕೊಳ್ಳುವರೋ ಅವರು ಪರಮಪದವನ್ನು ಹೊಂದುತ್ತಾರೆ - ಎಂಬುದೇ ಈ ಶ್ಲೋಕದ ಅರ್ಥ.

ಕ್ಷೇತ್ರಕ್ಷೇತ್ರಜ್ಞರಿಗಿರುವ ಹೆಚ್ಚುಕಡಿಮೆಯನ್ನು ಈ ಅಧ್ಯಾಯದಲ್ಲೆಲ್ಲ ವಿಸ್ತಾರವಾಗಿ ವರ್ಣಿಸಿರುತ್ತದೆ. ಕ್ಷೇತ್ರವು ಮಹಾಭೂತಗಳಿಂದ ಹಿಡಿದು ಧೃತಿಯವರೆಗೆ (೧೩ -೫, ೬) ವಿಸ್ತಾರವಾಗಿ ವರ್ಣಿಸಿರುವ ಭೂತಭೌತಿಕರಾಶಿಯು. ಕ್ಷೇತ್ರಜ್ಞನೆಂದರೆ ಈ ಕ್ಷೇತ್ರರೂಪವಾಗಿರುವ ಕಾರ್ಯಕರಣಸಂಘಾತವನ್ನು ಅರಿಯುವ ಸಾಕ್ಷಿರೂಪನಾದ ಆತ್ಮನು. ಈ ಕ್ಷೇತ್ರಜ್ಞನು ನಿಜವಾಗಿ ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ ಇರುತ್ತಾನೆ ; ಅವನೇ ಪರಮಾತ್ಮನು. ಪರಮಾತ್ಮನಲ್ಲಿ ಎಲ್ಲಾ ಇಂದ್ರಿಯಗುಣಗಳೂ ಇರುವಂತೆ ತೋರಿದರೂ ಯಾವ ಇಂದ್ರಿಯವೂ ಇಲ್ಲದ, ಅವನು ನಿರ್ಗುಣನು. ಅವನು ಸರ್ವತ್ರ ವ್ಯಾಪಕನಾಗಿ ಸೂಕ್ಷ್ಮನಾಗಿರುತ್ತಾನೆ - ಎಂದು ಹೇಳಿದ್ದಾಗಿದೆ.

ಕ್ಷೇತ್ರವೇ ಪ್ರಕೃತಿಯು, ಕ್ಷೇತ್ರಜ್ಞನು ಪುರುಷನು. ಇವೆರಡೂ ಅನಾದಿಯಾಗಿದ್ದರೂ ವಿಕಾರಗಳೆಲ್ಲವೂ ಪ್ರಕೃತಿಯಿಂದಲೇ ಆಗಿರುವವು. ಪ್ರಕೃತಿಯು ಕಾರ್ಯಕರಣಗಳ ರೂಪವಾಗಿ ಪರಿಣಮಿಸಿರುತ್ತದೆ ; ಗುಣಸಂಗರೂಪವಾದ ಕಾಮವೂ ಶರೀರಾದಿಗಳೇ ನಾನೆಂದು ತಿಳಿಯುವ ಅವಿದ್ಯೆಯೂ ನಾನಾಜನ್ಮಗಳ ಸಾಲನ್ನು ಪಡೆಯುವದಕ್ಕೆ ಕಾರಣವಾಗಿರುತ್ತವೆ ಎಂದು ತಿಳಿಸಿದ್ದಾಗಿದೆ. ಲೋಕದಲ್ಲಿ ಕಾಣುವದೆಲ್ಲ ಈ ಕ್ಷೇತ್ರಕ್ಷೇತ್ರಜ್ಞರ ಅವಿದ್ಯಕಸಂಗದಿಂದ ಆಗಿರುತ್ತದೆ ಎಂದೂ ತಿಳಿಸಿದ್ದಾಗಿದೆ.

ಕ್ಷೇತ್ರಜ್ಞನು ಪರಮಾರ್ಥವು, ಕ್ಷೇತ್ರವು ಕ್ಷೇತ್ರಜ್ಞನಿಂದ ವ್ಯಾಪ್ತವಾಗಿರುವದರಿಂದ ಮಾತ್ರವೇ ತೋರುತ್ತಿರುವದು. ಕ್ಷೇತ್ರದ ಗುಣದೋಷಗಳು ಕ್ಷೇತ್ರಜ್ಞನಿಗೆ ಸ್ವಲ್ಪವೂ ಅಂಟುವದಿಲ್ಲ ಎಂಬುದನ್ನು ಅಮಾನಿತ್ವಾದಿಗುಣಗಳಿಂದ ಸಂಸ್ಕೃತವಾದ ಅಂತಃಕರಣದಿಂದ ಶಾಸ್ತ್ರಾಚಾರ್ಯರ ಉಪದೇಶದಿಂದ ಅರಿತುಕೊಳ್ಳಬೇಕು. ಈ ಉಪದೇಶದಿಂದ ಅಧಿಕಾರಿಯಾದವನಲ್ಲಿ ಒಂದು ಜ್ಞಾನಚಕ್ಷುಸ್ಸು ತೆರೆದುಕೊಳ್ಳುತ್ತದೆ. ಇದನ್ನೇ ಅನುಭವವೆಂದು ಕರೆಯುತ್ತಾರೆ. ಈ ಜ್ಞಾನಚಕ್ಷುಸ್ಸಿನಿಂದ ಕ್ಷೇತ್ರಕ್ಷೇತ್ರಜ್ಞರನ್ನು ವಿಂಗಡಿಸಿ ಅರಿತುಕೊಂಡರೆ ಕ್ಷೇತ್ರಜ್ಞನು ನಿಜವಾಗಿ ಪರಮಾತ್ಮನೆಂದೂ ಅವನೊಬ್ಬನೇ ಪರಮಾರ್ಥವಾಗಿರುವನೆಂದೂ ತಿಳಿದುಬರುತ್ತದೆ.

ಇಷ್ಟೇ ಅಲ್ಲ. ಭೂತಭೌತಿಕರೂಪವಾಗಿ ಕಾಣುತ್ತಿರುವ ಕ್ಷೇತ್ರಕ್ಕೆ ಮೂಲವಾಗಿರುವ ಪ್ರಕೃತಿಯಿದೆಯಲ್ಲ, ಅದು ಅವಿದ್ಯೆಯಿಂದಾಗಿರುವ ಮಾಯಾಮಾತ್ರವಾಗಿದೆ ಎಂಬುದೂ ಈ ಜ್ಞಾನಚಕ್ಷುಸ್ಸಿನಿಂದ ಕಂಡುಬರುತ್ತದೆ. ಈಗಿನ ಅವಸ್ಥೆಯಲ್ಲಿ ನಮಗೆ ಪ್ರಪಂಚವೇ ಸತ್ಯವು; ಈ ಶರೀರವೂ ಇಂದ್ರಿಯಮನೋಬುದ್ಧಿಗಳೂ ನಮಗೆ ಅತ್ಯಂತಪ್ರಿಯವಾಗಿರುವವು. ಇವಕ್ಕೆ ಬೇಕಾದ ವಸ್ತುಗಳನ್ನು ಸಂಪಾದಿಸಿಕೊಂಡು ಸುಖಪಡಬೇಕು, ದುಃಖವನ್ನು ನೀಗಿಕೊಳ್ಳಬೇಕು-ಎಂಬ ತಿಳಿವಳಿಕೆಯು ಹೇಗೆ ಗಟ್ಟಿಯಾಗಿರುವದೋ ಜ್ಞಾನಚಕ್ಷುಸ್ಸು ತೆರೆದಾಗ ಈ ಪ್ರಪಂಚವಾಗಲಿ ಇದರ ಮೂಲವಾದ ಪ್ರಕೃತಿಯಾಗಲಿ ಇಲ್ಲವೇ ಇಲ್ಲವೆಂಬ ತಿಳಿವಳಿಕೆಯೂ ಪರಮಾತ್ಮನೊಬ್ಬನೇ ಪರಮಾರ್ಥತತ್ತ್ವವಾಗಿರುವ ಸಚ್ಚಿದಾನಂದರೂಪನಾದ ಇರುವದೆಲ್ಲದರ ಆತ್ಮನಾಗಿರುವನೆಂಬ ತಿಳಿವಳಿಕೆಯೂ ಇದಕ್ಕಿಂತಲೂ ಗಟ್ಟಿಯಾಗಿ ಉಂಟಾಗಿರುವವು.

ಆಗ ಜ್ಞಾನಿಯು ಪರಮಪದವಿಯನ್ನು ಹೊಂದುವನು ಎಂದು ಹೇಳುವದೂ ಉಪಚಾರದ ಮಾತೇ ಆಗಿರುತ್ತದೆ ; ಏಕೆಂದರೆ ಎಲ್ಲಿ ಒಬ್ಬ ಸಾಧಕನು ಒಂದಾನೊಂದು ಸಾಧನವನ್ನು ಮಾಡಿ ತನಗಿಂತ ಬೇರೆಯಾಗಿರುವ ಒಂದಾನೊಂದು ಉತ್ತಮಸ್ಥಾನವನ್ನು ಸೇರುವನೋ ಅಲ್ಲಿ ಗತಿ ಎಂಬ ಮಾತಿಗೆ ಅರ್ಥವಿರುತ್ತದೆ. ಆದರೆ ಎಲ್ಲಿ ಸಾಧಕನ ಆತ್ಮನೇ ಪರಮಾತ್ಮನೋ, ಎಲ್ಲಿ ಸಾಧಕ, ಸಾಧನ, ಸಿದ್ಧಿ - ಎಂಬ ಭೇದವೆಲ್ಲವೂ ಅಳಿದು ಪ್ರಕೃತಿಪುರುಷರೆಂಬ ಭೇದವೇ ಇರುವದಿಲ್ಲವೋ, ಅಲ್ಲಿ ಪರಮಗತಿ ಎಂದರೇನು? ಆದ್ದರಿಂದ ಮಹಾಭಾರತದಲ್ಲಿ ಒಂದುಕಡೆ ಹೀಗೆಂದು ಹೇಳಿರುತ್ತದೆ ; `ನ ಹಿ ಗತಿರಧಿಕಾಸ್ತಿ ಕಸ್ಯಚಿತ್ಸತಿ ಹಿ ಗುಣೇ ಪ್ರವದನ್ತ್ಯತುಲ್ಯತಾಮ್' ಯಾವನೊಬ್ಬನಿಗೂ ಅಧಿಕವಾದ ಗತಿಯಾಗುವದೆಂಬುದಿಲ್ಲ ; ಏಕೆಂದರೆ ಸತ್ತ್ವಾದಿಗುಣವು ಇರುವಾಗಲೇ ವೈಷಮ್ಯವಿರುತ್ತದೆ-ಎಂಬುದು ಆ ವಾಕ್ಯದ ಅಭಿಪ್ರಾಯ.



## ೧೩೦. ತ್ರಿಗುಣಾತ್ಮಕಪ್ರಕೃತಿ 14 - (1-8)

**(5-6-49)**

ಭಗವಂತನು ಅರ್ಜುನನಿಗೆ ಕ್ಷೇತ್ರಕ್ಷೇತ್ರಜ್ಞರ ವಿವೇಕರೂಪವಾದ ಜ್ಞಾನವ ಹೀಗೆನ್ನುತ್ತಾನೆ :

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥** 14-1

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ ॥** 14-2

'ಜ್ಞಾನಗಳಲ್ಲೆಲ್ಲ ಉತ್ತಮವಾದ ಜ್ಞಾನವನ್ನು ಮತ್ತೊಮ್ಮೆ ಹೇಳುತ್ತೇನೆ ; ಇದನ್ನು ಅರಿತುಕೊಂಡೇ ಮುನಿಗಳು ಈ ಸಂಸಾರಬಂಧದಿಂದ ಬಿಡುಗಡೆಯಾಗುವದೆಂಬ ಪರಮಸಿದ್ಧಿಯನ್ನು ಪಡೆದಿರುತ್ತಾರೆ. ಈ ಜ್ಞಾನವನ್ನು ಪಡೆದವರು ನನ್ನ ಸಾಧರ್ಮ್ಯವನ್ನು ಹೊಂದುವರು ; ಅವರು ಸೃಷ್ಟಿಯಾದರೂ ಹುಟ್ಟುವದಿಲ್ಲ, ಪ್ರಲಯವಾದರೂ ವ್ಯಥೆಪಡುವದಿಲ್ಲ'.

ಇಲ್ಲಿ ಹಿಂದೆ ಹೇಳಿದ ಜ್ಞಾನವನ್ನೇ ಮತ್ತೊಮ್ಮೆ ಹೇಳುತ್ತೇನೆ ಎಂದು ಪ್ರಾರಂಭಿಸಿರುತ್ತಾನೆ. ಏಕೆಂದರೆ ಇದು ಉತ್ತಮವಾದ ಜ್ಞಾನವು. ಉತ್ತಮ ಜ್ಞಾನವೆಂದರೇನು? ಅಜ್ಞಾನವನ್ನು ಅತ್ಯಂತವಾಗಿ ಕಳೆಯುವ ಕಡೆಯ ಜ್ಞಾನವು. ಸಂಶಯಾದಿಗಳು ಇನ್ನೂ ಉಳಿದಿದ್ದರೆ ಅದು ಸಮ್ಯಗ್ಜ್ಞಾನವಾಗಲಾರದು. ನಿಜವಾಗಿ ನೋಡಿದರೆ ಪರತತ್ತ್ವವನ್ನು ತಿಳಿಯದಿರುವದೊಂದೇ ಅಜ್ಞಾನವು; ಅದನ್ನು ಕಳೆಯುವದೊಂದೇ ಜ್ಞಾನವು. ಮಿಕ್ಕ ಜ್ಞಾನಗಳು ಜ್ಞಾನಗಳಲ್ಲ ; ಏಕೆಂದರೆ ಅವು ಬಂದರೂ ಅರಿಯಬೇಕಾದದ್ದು ಇದ್ದೇ ಇರುತ್ತದೆ. ಮಿಕ್ಕ ಅಜ್ಞಾನಗಳು ಅಜ್ಞಾನಗಳೂ ಅಲ್ಲ ; ಏಕೆಂದರೆ ಅವಕ್ಕೆ ವಿಷಯವಾಗಿರುವ ತತ್ತ್ವವನ್ನು ಅರಿತಮೇಲೆ ಅವು ಹೋದರೂ ಹೋದಂತಾಗಿರುವದಿಲ್ಲ, ಆ ವಿಷಯಗಳನ್ನು ಅರಿತದ್ದರಿಂದ ಪರಮಪುರುಷಾರ್ಥವೂ ಆಗಿರುವದಿಲ್ಲ. ಒಂದು ಕನಸು ಹೋಗಿ ಮತ್ತೊಂದು ಕನಸು ಬಂದರೆ ಎಚ್ಚರವಾದೆನೆಂಬ ಭ್ರಾಂತಿಯಾಗಬಹುದು ; ಆದರೆ ಅದೇನೂ ನಿಜವಾದ ಎಚ್ಚರವೆನಿಸಲಾರದು. ಅಲ್ಲವೆ ?

ಜ್ಞಾನವು ಬಂದದ್ದಕ್ಕೆ ಏನು ಗುರುತು? ಅಜ್ಞಾನವು ಅತ್ಯಂತವಾಗಿ ಹೋಗಿಬಿಡಬೇಕು ; ಅಜ್ಞಾನದಿಂದಾಗಿರುವ ಸಂಸಾರದ ಅನರ್ಥವು ಇಲ್ಲವಾಗಿಬಿಡಬೇಕು. ಅಜ್ಞಾನದ ಮುಖ್ಯಿನಲ್ಲಿ ನಾನು ಅರಿತುಕೊಳ್ಳಬೇಕಾದವನು, ನನಗೆ ಅರಿತುಕೊಳ್ಳಬೇಕಾದ ಪರಮಾರ್ಥವೊಂದಿದೆ, ಅದಕ್ಕ

ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು - ಎಂಬ ಅರಿವು ಇರುತ್ತದೆ. ಜ್ಞಾನವು ಬಂದಾಗ ಹೊಸದಾಗಿ ಮನನಮಾಡಬೇಕಾದದ್ದು ಏನೂ ಇರುವದಿಲ್ಲ. ಆದ್ದರಿಂದಲೇ ಈ ಜ್ಞಾನವನ್ನು ತಿಳಿದು ಮುನಿಗಳು ಪರಮಸಿದ್ಧಿಯನ್ನು ಪಡೆದುಕೊಂಡಿರುತ್ತಾರೆ - ಎಂದಿರುತ್ತದೆ.

ಇಲ್ಲಿ ಯಾವ ಜ್ಞಾನವನ್ನು ಭಗವಂತನು ಪರಾಮರ್ಶಿಸಿರುತ್ತಾನೆಂಬುದನ್ನು ತಿಳಿಯುವದಕ್ಕೆ ಹಿಂದಿನ ಸಂದರ್ಭವನ್ನು ಸ್ವಲ್ಪ ನೆನಪಿಗೆ ತಂದುಕೊಳ್ಳಬೇಕು. ಗುಣಸಂಗವೆಂಬ ಕಾಮದಿಂದಲೂ ಪ್ರಕೃತಿಸ್ಥತ್ವವೆಂಬ ಅವಿದ್ಯೆಯಿಂದಲೂ ಜೀವರು ಮತ್ತೆ ಮತ್ತೆ ಸಂಸಾರದಲ್ಲಿ ಹುಟ್ಟುತ್ತಾರೆಂದು ತಿಳಿಸಿದ್ದಾಗಿದೆ. ಯಾರು ಕ್ಷೇತ್ರಕ್ಷೇತ್ರಜ್ಞರನ್ನು ವಿಂಗಡಿಸಿ ಕ್ಷೇತ್ರಜ್ಞನ ಪರಮಾರ್ಥ ರೂಪವನ್ನು ಅರಿತುಕೊಳ್ಳುವರೋ ಅವರೇ ಪರಗತಿಯನ್ನು ಪಡೆಯುತ್ತಾರೆ ; ಏಕೆಂದರೆ ಅವರು ಭೂತಪ್ರಕೃತಿಯನ್ನು ಇಲ್ಲಿ ವಿಂಗಡಿಸಿಕೊಂಡಿರುತ್ತಾರೆ - ಎಂದು ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಿರುತ್ತದೆ. ಇಲ್ಲಿ ಅದನ್ನೇ ಅನುವಾದಮಾಡಿಕೊಂಡು ಎರಡು ಶ್ಲೋಕಗಳಲ್ಲಿ ಹೇಳಿರುತ್ತದೆ. ಈ ಜ್ಞಾನವನ್ನು ಪಡೆದವರು ಮತ್ತೆ ಹುಟ್ಟುವದಿಲ್ಲ ; ಏಕೆಂದರೆ ಅವರಿಗೆ ಗುಣಸಂಗವಾಗಲಿ ಪ್ರಕೃತಿಸ್ಥತ್ವವೆಂಬ ಅಜ್ಞಾನವಾಗಲಿ ಇನ್ನು ಇರುವದಿಲ್ಲ. ಅವರು ಪ್ರಲಯದಲ್ಲಿ ವ್ಯಥೆಪಡುವದಿಲ್ಲ ; ಏಕೆಂದರೆ ಅವರು ಭೂತಪ್ರಕೃತಿಯನ್ನೇ ಲಯಗೊಳಿಸಿಕೊಂಡಿರುತ್ತಾರೆ, ಇನ್ನು ಪ್ರಕೃತಿಯಲ್ಲಿ ಅವರು ಹೇಗೆ ಪ್ರಲಯವಾದಾರು? ಇದನ್ನು ವಿವರಿಸುವದಕ್ಕೇ ಇಲ್ಲಿ ಶಬ್ದಾಂತರಗಳಿಂದ ಪ್ರಕೃತಿಯ ವ್ಯಾಪಾರವನ್ನು ತಿಳಿಸುವದಕ್ಕೆ ಭಗವಂತನು ಪ್ರಾರಂಭಿಸಿರುತ್ತಾನೆ.

ಜ್ಞಾನವು ಬರುವದು, ಅಜ್ಞಾನವು ಹೋಗುವದು - ಎಂದರೆ ಯಾವದೋ ಒಂದು ಪದಾರ್ಥವು ಆಮದಾಗುವದು, ಯಾವದೋ ಒಂದು ಪದಾರ್ಥವು ನಮ್ಮಲ್ಲಿಂದ ರಫ್ತಾಗುವದು- ಎಂದು ಅರಿಯಬಾರದು. ಬೆಳಕು ಕಾಣಿಸಿಕೊಳ್ಳುವದೇ ಹೇಗೆ ಕತ್ತಲೆಯ ನಾಶವೋ ಹಾಗೆ ಜ್ಞಾನದ ಉದಯವೇ ಅಜ್ಞಾನದ ನಾಶವು. ಇದನ್ನು ನಾವು ಚೆನ್ನಾಗಿ ಮನದಟ್ಟುಮಾಡಿಕೊಳ್ಳಬೇಕು. ಈ ದೃಷ್ಟಿಯಿಂದಲೇ ನಾವು ಈ ಅಧ್ಯಾಯದಲ್ಲಿ ಹೇಳಿರುವ ಜ್ಞಾನವನ್ನು ಅರಿತುಕೊಳ್ಳಬೇಕು. ಜ್ಞಾನ, ಅಜ್ಞಾನ - ಇವೆರಡೂ ಈ ನಮ್ಮ ಜೀವನದ ಬಗ್ಗೆ ಇರುವ ದೃಷ್ಟಿವಿಶೇಷಗಳು. ಅಜ್ಞಾನವಿರುವಾಗ ಕ್ಷೇತ್ರಕ್ಷೇತ್ರಜ್ಞಸಂಯೋಗವಾಗುತ್ತದೆ, ಬಗೆಬಗೆಯ ಸೃಷ್ಟಿಯಾಗುತ್ತದೆ, ಸುಖದುಃಖಗಳ ಭೋಗವಾಗುತ್ತದೆ, ಸಂಸಾರವಾಗುತ್ತದೆ, ಜ್ಞಾನವು ಬಂತೊ ಇಲ್ಲವೊ, ಅಜ್ಞಾನವಾಗಲಿ ಅದರ ಕಾರ್ಯವಾಗಲಿ ಪರಮಾರ್ಥವೇ ಅಲ್ಲ, ಅದು ಇರಲೇ ಇಲ್ಲ ; ಅದನ್ನು ನಾಶಮಾಡುವದೆಂದರೇನು ? ಜ್ಞಾನಾಜ್ಞಾನಗಳ ಭೇದವನ್ನು ಮಾಡಿಕೊಂಡಿದ್ದದ್ದೇ ಅಜ್ಞಾನವು - ಎಂಬ ದೃಷ್ಟಿಯು ಎದ್ದುಕೊಳ್ಳುವದು.

ಹಿಂದೆ ಕ್ಷೇತ್ರಕ್ಷೇತ್ರಜ್ಞಸಂಯೋಗದಿಂದ ಸೃಷ್ಟಿಯಾಗುವದೆಂದು ಹೇಳಿತ್ತಷ್ಟೆ, ಅದನ್ನೇ ಇಲ್ಲಿ ಭಗವಂತನು ವಿವರಿಸುತ್ತಿರುತ್ತಾನೆ :

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ 14-3**

**ಸರ್ವಯೋನಿಷು ಕೌನ್ತೇಯ ಮೂರ್ತಯಃ ಸಂಭವನ್ತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ 14-4**

ಬ್ರಹ್ಮವೇ ಯೋನಿ, ನಾನೇ ಬೀಜಪ್ರದನು ; ನಮ್ಮಿಬ್ಬರ ಸಂಗದಿಂದ ಜಗತ್ತು ಸೃಷ್ಟಿಯಾಗುತ್ತದೆ - ಎಂದಿದ್ದಾನೆ ಭಗವಂತ. ಇಲ್ಲಿ ಬ್ರಹ್ಮವೆಂದರೇನು ? ಪರಮಾತ್ಮನಿಗಿಂತ ಬೇರೆಯಾದದ್ದು ಬ್ರಹ್ಮವು ಹೇಗಾಯಿತು ? - ಎಂದು ನೀವು ಕೇಳಬಹುದು. ಇದಕ್ಕೆ ಉತ್ತರವೇನೆಂದರೆ ಬ್ರಹ್ಮವೆಂದರೆ ದೊಡ್ಡದು ಎಂದರ್ಥ ; ಯಾವದು ಮಿಕ್ಕ ಎಲ್ಲಕ್ಕಿಂತಲೂ ದೊಡ್ಡದೋ ಅದೆಲ್ಲವೂ ಬ್ರಹ್ಮ ಎಂಬ ಶಬ್ದಕ್ಕೆ ತಕ್ಕದ್ದಾಗಿರುವದು. ಸಾಮಾನ್ಯಜನರು ಹಣ, ಮನೆ, ಮಕ್ಕಳು, ಹೊಲ, ಕೀರ್ತಿ, ಆರೋಗ್ಯ, ಆಯಸ್ಸು, ಬಲ, ವಿದ್ಯೆ - ಮುಂತಾದವುಗಳನ್ನು ಬಲುದೊಡ್ಡದೆಂದು ಭಾವಿಸಿಕೊಂಡಿರುತ್ತಾರೆ. ಆದ್ದರಿಂದ ಅವೇ ಅವರ ಪಾಲಿಗೆ ಬ್ರಹ್ಮವಾಗುವದು. ಆದ್ದರಿಂದ ಒಬ್ಬಾತನು ಅವರವರಿಗೆ ಅವರವರು ಅರಿತುದೇ ಬ್ರಹ್ಮ' ಎಂದಿದ್ದಾನೆ. ವೇದವನ್ನು ಬ್ರಹ್ಮ ಎಂದು ಕರೆಯುವದು ಶಾಸ್ತ್ರಕಾರರಲ್ಲಿ ರೂಢಿಯಿದೆ. ಏಕೆಂದರೆ ಮಿಕ್ಕ ಶಬ್ದರೂಪವಾದ ಗ್ರಂಥಗಳೆಲ್ಲಕ್ಕಿಂತಲೂ ಅದು ದೊಡ್ಡದು ; ಎಲ್ಲಕ್ಕೂ ದೊಡ್ಡದಾದ ಪರಮಾತ್ಮತತ್ತ್ವವನ್ನೇ ಅದು ತಿಳಿಸುವದರಿಂದ ಆ ಹೆಸರು ಅದಕ್ಕೆ ತಕ್ಕದ್ದೂ ಆಗಿದೆ. ಪ್ರಕೃತದಲ್ಲಿ ಬ್ರಹ್ಮವೆಂದರೆ ಪ್ರಕೃತಿಯು. ಇಡಿಯ ಜಗತ್ತನ್ನೇ ಹಡೆಯುವ ಮೂಲಕಾರಣವನ್ನು 'ಬ್ರಹ್ಮ', ಅವೆಲ್ಲಕ್ಕಿಂತಲೂ ದೊಡ್ಡದು, ಎಂದು ಎಣಿಸುವದು ಯುಕ್ತವೇ ಅಲ್ಲವೆ ? ಪರಮಾತ್ಮನೇ ಯಾಜಮಾನನು, ಪ್ರಕೃತಿಯೇ ಪತ್ನಿ ; ಅವರಿಬ್ಬರ ಸಂಗದಿಂದ ಜಗತ್ತು ಉಂಟಾಗುತ್ತದೆ ಎಂದು ಹೇಳಿರುವದು ತತ್ತ್ವವನ್ನು ತಿಳಿಸುವದಕ್ಕೆ ಉಪಾಯವು. ಭಾಗವತಚಂಪೂಕಾರನು ಒಂದು ಕಡೆಯಲ್ಲಿ 'ಪರಮಾತ್ಮನೆ, ನೀನು ಪುರಾಣನು, ಅಸಂಗನು; ಪ್ರಕೃತಿಯೆಂಬ ಮುದುಕಿಯಲ್ಲಿ ಹೇಗೆ ಜಗತ್ತನ್ನು ಸೃಷ್ಟಿಸುತ್ತಿರುವೆ ?' ಎಂದು ಈ ಅಭಿಪ್ರಾಯವನ್ನು ವರ್ಣಿಸಿರುತ್ತಾನೆ. ಅದ್ವಿತೀಯವಾದ ತತ್ತ್ವದಲ್ಲಿ ದ್ವೈತವನ್ನು ಕಲ್ಪಿಸಿರುವದು ಎಂಥ ಅಜ್ಞಾನವಿದು !- ಎಂಬುದು ಅವನ ಆಶಯ. ಶ್ರೀಕೃಷ್ಣನು ಹದಿನಾರು ಸಾವಿರ ಹೆಂಡಿರುಳ್ಳವನು, ಅನೇಕ ಮಕ್ಕಳನ್ನು ಪಡೆದವನು ; ಆದರೂ ನಿತ್ಯಬ್ರಹ್ಮಚಾರಿ - ಎಂದು ವರ್ಣಿಸುವ ಪುರಾಣೋಕ್ತಿಗೆ ಇದೇ ಅಭಿಪ್ರಾಯ. ಪರಮಾತ್ಮನು ಈಗಲೂ ತಾನಿರುವಂತೆ ಒಬ್ಬನೇ ಆಗಿರುತ್ತಾನೆ ; ಆದರೂ ಅವನಲ್ಲಿ ಈ ನಾನಾತ್ವದ ಪ್ರಪಂಚವು ಕಾಣಿಸುತ್ತಿರುತ್ತದೆ. ಇದೆಲ್ಲ ಮಾಯಿಕವು, ಅವಿದ್ಯೆಯ ಫಲವು. ಅವಿದ್ಯೆಯಿಂದಾಗಿರುವ ಈ ನಾನಾತ್ವವನ್ನು ಕಳೆದುಕೊಂಡು ಪರಮಾತ್ಮನಲ್ಲಿ ನೆಲೆನಿಲ್ಲಬೇಕು. ಅದೇ ವಿದ್ಯೆಯ ಫಲವು.

ಲೋಕವೆಲ್ಲ ಕ್ಷೇತ್ರಕ್ಷೇತ್ರಜ್ಞರ ಸಂಯೋಗದ ಫಲವೇ, ಇಲ್ಲಿ ಕ್ಷೇತ್ರರೂಪವಾದ ಪ್ರಕೃತಿಯು ಕುಣಿಯುತ್ತಿರುತ್ತದೆ ; ಕ್ಷೇತ್ರಜ್ಞರೂಪನಾದ ಪುರುಷನು ಉದಾಸೀನನಾಗಿ ಕುಳಿತಿರುತ್ತಾನೆ. ಪ್ರಕೃತಿಯ ಕುಣಿತದಲ್ಲಿ ದೃಷ್ಟಿನೆಟ್ಟಿರುವವರಿಗೆ ಪರಮಾರ್ಥತತ್ತ್ವವೇ ಕಾಣುವದಿಲ್ಲ ; ಮನಸ್ಸಿನಲ್ಲಿ ಬಗೆಬಗೆಯ ವಿಕಲ್ಪಗಳು ಉಂಟಾಗುತ್ತಿರುತ್ತವೆ. ಲೋಕದಲ್ಲಿ ಕಾಣುವ ಉತ್ತಮಮಧ್ಯಮನೀಚಯೋನಿಗಳಲ್ಲಿ ದೇವತೆಗಳು, ಗಂಧರ್ವರು, ಯಕ್ಷರು, ಕಿಂನರರು ಮುಂತಾದವರು ಮತ್ತೆ ಮತ್ತೆ ಜನಿಸುತ್ತಿರುವವರು, ಮನುಷ್ಯರಲ್ಲಿ ಬೇರೆಬೇರೆಯ ದೇಶಕಾಲಗಳಲ್ಲಿ ಜನಿಸುತ್ತಿರುವವರು, ಸ್ಥಾವರಾಂತವಾದ ಪ್ರಾಣಿಗಳಲ್ಲಿ ಹುಟ್ಟುತ್ತಿರುವವರು - ಎಲ್ಲರೂ ಈ ಪ್ರಕೃತಿಪುರುಷಸಂಯೋಗದ ಫಲವು . ಲೋಕದ ಸ್ತ್ರೀವ್ಯಕ್ತಿಗಳೆಲ್ಲವನ್ನೂ ಪ್ರಕೃತಿಯೆಂದು ಕರೆಯಬಹುದು ; ಪುರುಷವ್ಯಕ್ತಿಯನ್ನೆಲ್ಲ ಪುರುಷನೆಂದು ಕರೆಯಬಹುದು. ಅಥವಾ ಪ್ರಕೃತಿ, ಪುರುಷ - ಎಂದು ವಿಂಗಡಿಸಿದ ಬಳಿಕವೂ ಆ ಒಂದೊಂದರಲ್ಲಿಯೂ ಪ್ರಕೃತಿಪುರುಷಸಂಯೋಗವೇ ಇರುವದೆಂದು ತಿಳಿಯಬರುವದು. ಪ್ರಕೃತಿಪುರುಷ ಸಂಬಂಧವಿಲ್ಲದೆ ಯಾವ ದೃಶ್ಯವೂ ಸೃಷ್ಟಿಯಾಗುವದಿಲ್ಲ. ಯಾವುದೊಂದು ಘಟನೆಯೂ ಆಗುವದಿಲ್ಲ. ಯಾವದು ಇದ್ದಂತೆ ಇರುವದೋ ಅದು ಪುರುಷ, ಅದರಲ್ಲಿಯೇ ಪರಮಾರ್ಥವನ್ನು ಹುಡುಕಬೇಕು ; ಯಾವದು ಮಾರ್ಪಡುತ್ತಲೇ ಇರುವದೋ ಅದೇ ಪ್ರಕೃತಿ. ಅದೆಲ್ಲ ಮಾಯೆಯ ಆಟವೆಂದು ತಿಳಿಯಬೇಕು.

ಮನುಷ್ಯನಿಗೆ ಇದ್ದಂತೆ ಇರುವದಕ್ಕೆ ಬೇಸರ ; ಅವನಿಗೆ ಏನಾದರೊಂದು ವೈಚಿತ್ರ್ಯವು ಬೇಕು, ಯಾವದಾದರೊಂದು ಹೊಸ ಘಟನೆಯನ್ನು ಅವನು ನಿರೀಕ್ಷಿಸುತ್ತಿರುತ್ತಾನೆ. ಈ ಸೋಪನ ಕಥೆಗಳಲ್ಲಿ ಕಪ್ಪೆಗಳು ಒಬ್ಬ ರಾಜನು ಬೇಕೆಂದು ಬೇಡಿಕೊಂಡ ಕಥೆಯನ್ನು ನೀವು ಓದಿರಬಹುದು. ದೇವತೆಗಳೊಡೆಯನು ಅವಕ್ಕೆ ಒಂದು ಕೊರಡನ್ನು ಕೊಟ್ಟು 'ಇದೇ ನಿಮ್ಮ ರಾಜನು' ಎಂದನಂತೆ; ಆದರೆ ಅದು ಸ್ವಲ್ಪವೂ ಅಲುಗಾಡಲಿಲ್ಲ, ಅದರಮೇಲೆಯೇ ಕಪ್ಪೆಗಳು ಕುಳಿತುಕೊಂಡರೂ ಸುಮ್ಮನೆ ಇರುತ್ತಿತ್ತು. ಆಗ ಕಪ್ಪೆಗಳಿಗೆ ಬಹಳ ಬೇಸರವಾಯಿತು. ಸುಮ್ಮನೆ ಇದ್ದಂತೆ ಇರುವ ಅರಸನನ್ನು ಕಟ್ಟಿಕೊಂಡು ಏನು ಮಾಡುವದು? ಅವು ಮತ್ತೆ ದೇವರಾಜನನ್ನು ಬೇಡಿಕೊಂಡವು, ಒಬ್ಬ ಚಟುವಟಿಕೆಯ ದೊರೆಯನ್ನು ನಮಗೆ ಗೊತ್ತುಮಾಡಿಕೊಡು ಎಂದು. ಸರಿ, ಆಗ ಅವರಿಗೆ ಆ ಪರಮೇಶ್ವರನು ಒಂದು ಕೊಕ್ಕರೆಯನ್ನು ಕಳುಹಿಸಿದನು. ಅದು ಕಪ್ಪೆಗಳನ್ನು ಒಂದೊಂದಾಗಿ ತಿನ್ನುವದಕ್ಕೆ ಪ್ರಾರಂಭಿಸಿತು ! ಇದರಂತೆ ಆಗಿದೆ, ಸಾಮಾನ್ಯಜನರ ಹಾಡು. ಅವರಿಗೆ ಇದ್ದಂತೆ ಇರುವ ಪರಮಾರ್ಥತತ್ತ್ವವು ಬೇಡ. ಇದಕ್ಕೆ ಕಾರಣವೇನೆಂದರೆ ಒಂದಿಷ್ಟೂ ಅಲುಗಾಡದೆ ಬಿದ್ದಬಳಿ ಬಿದ್ದಿರುವ ಜಡವಸ್ತುವನ್ನೂ ಕೂಟಸ್ಥನಿತ್ಯವಾದ ಚೈತನ್ಯವನ್ನೂ ಅವರು ವಿಂಗಡಿಸಿಕೊಳ್ಳದೆ ಇರುವರು. ಆತ್ಮತತ್ತ್ವವನ್ನು ತಿಳಿದುಕೊಂಡರೆ ಮನಸ್ಸಿಗೆ ಪರಮಶಾಂತಿಯು ದೊರಕುತ್ತದೆ, ಕೃತಕೃತ್ಯತಾಬುದ್ಧಿಯು ಬರುತ್ತದೆ. ಶಾಂತವಾದ, ನಿರ್ಗುಣವಾದ, ನಿಶ್ಚಲವಾದ ಕೂಟಸ್ಥತತ್ತ್ವದಿಂದಲೇ ಜಗತ್ತೆಲ್ಲವೂ

ಬಂದಿದೆ; ಅದರ ಆಧಾರದಿಂದಲೇ ಜಗತ್ತೆಲ್ಲವೂ ಇದ್ದುಕೊಂಡು ಪ್ರಾಣಿಗಳು ತಮ್ಮ ತಮ್ಮ ವ್ಯಾಪಾರಮಾಡುತ್ತಿವೆ. ಈ ನಿಜವನ್ನು ಅರಿಯದ್ದರಿಂದ ನಮಗೆ ಪರಮಾರ್ಥವು ಬೇಡವಾಗಿದೆ; ಅದನ್ನು ಹುಡುಕಿದರೂ ನಮಗೆ ಅದು ಸಿಕ್ಕದಾಗಿದೆ.

ಪರಮಾರ್ಥದ ವಿವೇಕವು ನಮಗೆ ದಕ್ಕಬೇಕಾದರೆ ಮೂಲಪ್ರಕೃತಿಯ ಗುಣಗಳನ್ನು ನಾವು ಅರಿತುಕೊಳ್ಳುವುದು ಅವಶ್ಯವು. ಈ ಗುಣಗಳ ವಿಷಯವಾಗಿ ಆಗಾಗ್ಗೆ ಈ ಉಪನ್ಯಾಸಗಳಲ್ಲಿ ಹೇಳಿಯೇ ಇದೆ. ಆದರೆ ಅವನ್ನೇ ಪ್ರಧಾನವಾಗಿ ನಾವು ಈವರೆಗೆ ವಿಚಾರಮಾಡಿಲ್ಲ. ಜಗತ್ತೆಲ್ಲವೂ ಗುಣಗಳ ಕಾರ್ಯವೇ. ಕಾರ್ಯವನ್ನು ನೋಡಿದರೆ ಗುಣಗಳು ಅದ್ಭುತವಾಗಿ ಕಾಣುವವು; ಆದರೆ ಮೂಲದಲ್ಲಿ ಗುಣಗಳು ಹೇಗಿರುವವೆಂದು ಯಾರಿಗೂ ತಿಳಿದುಬರುವದಿಲ್ಲ. ಈ ಗುಣಗಳು ಬಹು ಚಂಚಲ. ಮಲೆತ ನೀರಿನ ಮೇಲುಗಡೆ ಕಾಣಿಸುವ ಕ್ರಿಮಿಗಳಂತೆ ಅವು ನಿಂತಲ್ಲಿ ನಿಲ್ಲದೆ ವ್ಯಾಪಾರಮಾಡುತ್ತಲೇ ಇರುವವು; ಬಗೆಬಗೆಯ ರೀತಿಯಿಂದ ಪರಸ್ಪರವಾಗಿ ಕೂಡಿಕೊಳ್ಳುತ್ತಲೂ ಬಿಟ್ಟುಕೊಳ್ಳುತ್ತಲೂ ಇರುವವು. ನಮ್ಮ ದೇಹದಲ್ಲಿಯೂ ಇಂದ್ರಿಯಗಳಲ್ಲಿಯೂ ಮನಸ್ಸಿನಲ್ಲಿಯೂ ಬುದ್ಧಿಯಲ್ಲಿಯೂ ಎಲ್ಲೆಲ್ಲಿಯೂ ಇವುಗಳ ವ್ಯಾಪಾರವೇ ನಡೆದಿದೆ. ನಾವು ಈ ಗುಣಗಳನ್ನು ಬೇರ್ಪಡಿಸಿಕೊಂಡು ನೋಡದೆ ಇರುವದರಿಂದ ಈ ಗುಣಗಳ ಕಾರ್ಯಗಳನ್ನೇ ನಾನು, ನನ್ನದು - ಎಂದು ತಿಳಿದುಕೊಂಡು ಮೋಸಹೋಗುತ್ತಿರುವೆವು. ಇದೇ ಬಂಧವು.

ಶ್ರೀ ಕೃಷ್ಣಭಗವಂತನು `ಪ್ರಕೃತಿಯಿಂದ ಹುಟ್ಟುತ್ತಿರುವ ಈ ಗುಣಗಳ ಕಾರ್ಯಗಳು ದೇಹಿಯನ್ನು ದೇಹದಲ್ಲಿ ಕಟ್ಟಿಹಾಕುತ್ತಿರುವವಯ್ಯ, ಮಹಾಬಾಹುವೆ' ಎಂದಿರುತ್ತಾನೆ. ಇಲ್ಲಿ ಅರ್ಜುನನಿಗೆ ಉಪಯೋಗಿಸುವ ಮಹಾಬಾಹುವೆಂಬ ವಿಶೇಷಣವು ಸಾಭಿಪ್ರಾಯವಾಗಿರುತ್ತದೆ. ನೀನು ಕ್ಷತ್ರಿಯನು, ಮಹಾಬಾಹು; ಬಾಹುಬಲದಿಂದ ಅನೇಕಶತ್ರುಗಳನ್ನು ದಮನಮಾಡಿರುತ್ತೇನೆಂಬ ಅಭಿಮಾನವಿದೆ, ನಿನಗೆ. ಆದರೆ ನಿಜವಾಗಿ ಮಹಾಬಾಹುವೆಂಬ ಹೆಸರಿಗೆ ತಕ್ಕವನಾಗಬೇಕಾದರೆ ಈ ಗುಣಗಳನ್ನು ಗೆಲ್ಲಬೇಕು, ಅವುಗಳ ಪಟ್ಟಿನಿಂದ ಬಿಡಿಸಿಕೊಳ್ಳಬೇಕು ಎಂಬುದು ವಿಶೇಷಣದಲ್ಲಿ ಅಡಗಿರುವ ಅಭಿಪ್ರಾಯ. ಪೂರ್ವದಲ್ಲಿ ಅಲೆಕ್ಸಾಂಡರ್ ಎಂಬ ವೀರನು ಆಗಿನ ಕಾಲದಲ್ಲಿ ಗೊತ್ತಾಗಿದ್ದ ಭೂಮಂಡಲವನ್ನೆಲ್ಲ ಜಯಿಸಿದ್ದನು. ಅವನು ತನ್ನ ತಾಯಿಯ ಬಳಿಯಲ್ಲಿ ಕುಳಿತು ನನಗೆ ಜಯಿಸುವದಕ್ಕೆ ದೇಶವೇ ಇಲ್ಲವಲ್ಲ! - ಎಂದು ಅತ್ತನೆಂದು ಐತಿಹಾಸಿಕರು ಹೇಳುತ್ತಾರೆ. ಆ ಮಹಾವೀರನು ಭರತಖಂಡದವರೆಗೂ ಧಾಳಿಯನ್ನು ನಡೆಯಿಸಿದ್ದನು. ಈ ನಮ್ಮ ದೇಶದಲ್ಲಿ ಅವನಿಗೆ ಕೆಲವರು ಮಹಾತ್ಮರ ದರ್ಶನವಾಯಿತಂತೆ. ಅವರನ್ನು ಮಾತನಾಡಿಸಲು ಎಷ್ಟು ಪ್ರಯತ್ನಪಟ್ಟರೂ ಅವರು ಮೌನವನ್ನು ಬಿಡಲಿಲ್ಲ. ಅವನ ಮಂತ್ರಿಯು `ಸ್ವಾಮಿ ಇವನು ಜಗಜ್ಜೇತೃವಾದ ಅಲೆಗ್ಸಾಂಡರನು. ನೀವು ನಮ್ಮ ದೇಶಕ್ಕೆ ಬರಬೇಕೆಂದು ಆತನ ಇಚ್ಛೆಯಿದೆ; ಅಲ್ಲಿ ನಿಮಗೆ

ಬೇಕಾದ ಸನ್ಮಾನವನ್ನು ಮಾಡಿಸಿ ಅವಶ್ಯವಾದ ಎಲ್ಲಾ ಸೌಕರ್ಯಗಳನ್ನೂ ಏರ್ಪಡಿಸಲಾಗುತ್ತದೆ' ಎಂದನು. ಆದರೂ ಮಹಾತ್ಮರು ಕದಲಲಿಲ್ಲ. ಕೊನೆಗೆ ಅಲೆಕ್ಸಾಂಡರನು ಕೋಪದಿಂದ ಕಿಡಿಕಿಡಿಯಾದನು. ಈಗ ಮಹಾತ್ಮರು ಗಹಗಹಿಸಿ ನಕ್ಕು `ಎಲಾ, ಇದೇನು? ನಿನ್ನನ್ನೇ ಜಯಿಸಲಾರದೆ ಇರುವೆ; ನೀನು ಜಗತ್ತನ್ನು ಜಯಿಸಿದವನೆ?" ಎಂದರಂತೆ ! ಪ್ರಕೃತದಲ್ಲಿ ನಮ್ಮಗಳ ಹೆಮ್ಮೆಯು ಹೀಗೆಯೇ ಇದೆ. ಪ್ರಕೃತಿಯ ಗುಣಗಳು ದೇಹಕ್ಕೆ ನಮ್ಮನ್ನು ಕಟ್ಟಿಹಾಕಿದ್ದರೂ ನಾವು ಇದನ್ನು ಅರಿತುಕೊಳ್ಳಲಾರದೆ ಇರುತ್ತೇವೆ. ಗುಣಗಳು ಯಾವಯಾವ ರೂಪವನ್ನು ಪಡೆದುಕೊಂಡರೆ ಅದದನ್ನೇ ನಾನು, ನನ್ನದು - ಎಂಬ ಅಭಿಮಾನದಿಂದ ಕಾಣುತ್ತಿರುತ್ತೇವೆ. ಈ ಶರೀರವನ್ನು ಆಶ್ರಯಿಸಿಕೊಂಡು ಯಾವನಲ್ಲಿಯೂ ವೈರವನ್ನು ಮಾಡಬಾರದು, ಪಾಪವನ್ನು ಆಚರಿಸಬಾರದು - ಎಂದು ಧರ್ಮಶಾಸ್ತ್ರಗಳಲ್ಲಿ ಹೇಳಿರುವದಕ್ಕ ಈ ಗುಣಗಳ ತತ್ತ್ವವೇ ಆಧಾರ. ಯಾವನು ವಿಜ್ಞಾನಾತ್ಮರೂಪವಾದ ಬ್ರಹ್ಮವನ್ನು ಉಪಾಸನೆಮಾಡುತ್ತಾನೋ ಅವನು ಶರೀರದ ಪಾಪಗಳನ್ನೆಲ್ಲ ಶರೀರದಲ್ಲಿಯೇ ಬಿಟ್ಟು ಸಕಲಕಾಮಗಳನ್ನೂ ಪಡೆದುಕೊಳ್ಳುತ್ತಾನೆ - ಎಂದು ಶ್ರುತಿಯಲ್ಲಿ ಹೇಳಿರುವದೂ ಇದೇ ಅಭಿಪ್ರಾಯದಿಂದ. ಈ ಶರೀರವು ಗುಣಗಳ ಆಟಕ್ಕೆ ರಂಗಸ್ಥಲವು ; ನಾವು ಶರೀರಕ್ಕೆ ಅಭಿಮಾನದಿಂದ ಕಟ್ಟುಬಿದ್ದಿರುವದಕ್ಕೆ ಈ ಗುಣಗಳೇ ಕಾರಣವು. ಹೇಗೆ ಒಂದೊಂದು ಹಸು, ಕರು, ಎಮ್ಮೆ - ಇವು ತಮ್ಮ ತಮ್ಮ ಗೂಂತಿಗೆ ಕಟ್ಟುಬಿದ್ದಿರುವವೋ, ಹೊರಗಿನಿಂದ ಬಂದಕೂಡಲೆ ಹೇಗೆ ಸ್ವಭಾವದಿಂದಲೇ ಹುಲ್ಲಿನ ಆಸೆಗೆ ತಮ್ಮ ತಮ್ಮ ಗೂಂತಿಗೇ ಹೋಗಿ ಕಟ್ಟಿಸಿಕೊಳ್ಳುವವೋ ಅದರಂತೆ ಜೀವರು ದೇಹದಲ್ಲಿ ಗುಣಗಳಿಂದ ಕಟ್ಟುಬಿದ್ದಿರುತ್ತಾರೆ. ಗುಣಗಳ ಸ್ವರೂಪವಿವೇಕದಿಂದ ಮಾತ್ರವೇ ಈ ದುರ್ಯೋಧನಾಭಿಮಾನವು ಹೋಗಬೇಕಾಗಿದೆ.

ಗುಣಗಳು ಸತ್ತ್ವ, ರಜಸ್ಸು, ತಮಸ್ಸು - ಎಂದು ಮೂರಷ್ಟೆ. ಇವುಗಳಲ್ಲಿ ತೀರ ಕೆಳಗಿನ ಗುಣವು ತಮಸ್ಸು, ಅದನ್ನು ಗೆದ್ದುಕೊಂಡವರಿಗೆ ರಜಸ್ಸು ಬಂಧಕವಾಗಿರುತ್ತದೆ; ಅದನ್ನು ಗೆದ್ದುಕೊಂಡವರಿಗೆ ಸತ್ತ್ವವೇ ಬಂಧಕವಾಗಿರುತ್ತದೆ. ಎಲ್ಲಿಯವರೆಗೆ ರಜಸ್ತಮೋಗುಣಗಳ ಸಂಬಂಧವು ಒಂದಿಷ್ಟಾದರೂ ಮಿಶ್ರವಾಗಿರುತ್ತದೆಯೋ ಅಲ್ಲಿಯವರೆಗೂ ಸತ್ತ್ವಗುಣವೂ ಬಂಧಕವೇ ಆಗಿರುತ್ತದೆ. ಆದ್ದರಿಂದ ಈ ಸತ್ತ್ವವನ್ನು ಗೆದ್ದು ಶುದ್ಧಸತ್ತ್ವದಲ್ಲಿಯೇ ನಿಲ್ಲುವವನ್ನು ಕಲಿಯಬೇಕು. ಹಾಗಾದರೆ ಗುಣಗಳ ಪಟ್ಟಿನಿಂದ ಬಿಡಿಸಿಕೊಳ್ಳುವದಕ್ಕೆ ಮಾರ್ಗವು ಕಾಣುವದು. ಆದ್ದರಿಂದ ಭಗವಂತನು ಸತ್ತ್ವಾದಿಗಳಲ್ಲಿ ಯಾವ ಯಾವದು ಹೇಗೆ ಬಂಧಕವಾಗಿದೆ ಎಂಬುದನ್ನು ತಿಳಿಸುವದಕ್ಕೆ ಪ್ರಾರಂಭಿಸಿ ಮೊದಲು ಸತ್ತ್ವಗುಣದ ಬಂಧಕತ್ವವನ್ನೇ ವರ್ಣಿಸುತ್ತಿದಾನೆ.

ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ 14-6

ಜ್ಞಾನಿಗಳ ದೃಷ್ಟಿಯಿಂದ ಸುಖವೂ ಬಂಧಕವೇ. ಅತ್ಯಂತ ಮೇಲಿನ ಸ್ಥಿತಿಯಲ್ಲಿರಬೇಕೆಂಬ, ಗುಣತ್ರಯಗಳನ್ನು ಮೀರಿದ ಪರಮಾತ್ಮನಲ್ಲಿಯೇ ನೆಲೆನಿಲ್ಲಬೇಕೆಂಬ, ಆಸೆಯುಳ್ಳ ಮಹಾತ್ಮರಿಗೆ ಸತ್ತ್ವವೂ ಬಂಧಕವೆಂಬುದು ಆಶ್ಚರ್ಯವಲ್ಲ. ದೊಡ್ಡದೊಡ್ಡ ಅಧಿಕಾರವನ್ನು ವಹಿಸಿರುವವರಿಗೆ ಹೆಚ್ಚಿಗೆಯ ಸಂಬಳವನ್ನು ಕೊಟ್ಟರೂ ಅಧಿಕಾರದ ಸ್ಥಾನದಿಂದ ತಪ್ಪಿಸಿಬಿಟ್ಟರೆ ಹೇಗೆ ಮನಸ್ಸಿನಲ್ಲಿ ಕೊರತೆಯಾಗುವದೋ ಹಾಗೆಯೇ ಪರಮಾತ್ಮನಿಷ್ಠೆಯಲ್ಲಿಯೇ ಮನಸ್ಸಿರುವವರಿಗೆ ಅದರಿಂದ ಚ್ಯುತರಾಗಿ ಸತ್ತ್ವಗುಣದ ಹಿಡಿತಕ್ಕೆ ಸಿಕ್ಕಿರುವದೂ ಬಂಧವೇ ಆಗಿರುತ್ತದೆ. ಚಿನ್ನದ ಬೇಡಿಯಾದ ಮಾತ್ರಕ್ಕೆ ಬೇಡಿಯೆನಿಸದೆ ಇದ್ದೀತೆ?

ಇರಲಿ. ಸತ್ತ್ವಗುಣವು ಹೇಗೆ ಬಂಧಕವೆಂಬುದನ್ನು ಈಗ ನೋಡೋಣ. ಸತ್ತ್ವವು ನಿರ್ಮಲವಾಗಿರುತ್ತದೆ, ಅದು ಸ್ಫಟಿಕದಂತೆ ಸ್ವಚ್ಛವಾಗಿರುತ್ತದೆ. ಅದರಲ್ಲಿ ವಸ್ತುವನ್ನು ಮರೆಮಾಡುವ ಶಕ್ತಿಯಿಲ್ಲ; ಮರೆಯನ್ನು ತೆಗೆದುಹಾಕಿ ವಸ್ತುವಿನ ತತ್ತ್ವದ ಮೇಲೆ ಬೆಳಕನ್ನು ಬೀರುವ ಶಕ್ತಿಯಿರುತ್ತದೆ. ಅದರಲ್ಲಿ ಚಾಂಚಲ್ಯವೇ ಮುಂತಾದ ದೋಷಗಳಿರುವದಿಲ್ಲ. ಅದು ನಿರ್ದುಷ್ಟವಾಗಿರುತ್ತದೆ. ಆದರೂ ಅದು ಸುಖಸಂಗದಿಂದ ಕಟ್ಟಿಹಾಕುತ್ತದೆ. ಸುಖಕ್ಕೆ ಕಟ್ಟಿ ಹಾಕುವದೆಂದರೇನು? ಅದೂ ಕೆಟ್ಟದ್ದೇ; ತಿಳಿದವರಿಗೆ ಅದೂ ಬಂಧವೇ. ನೆಂಟರ ಮನೆಯಲ್ಲಿ ಬಗೆಬಗೆಯ ಉಪಚಾರಗಳು ಆಗುತ್ತಿದ್ದರೂ ವಿವೇಕಿಗಳಾದವರಿಗೆ ಅದೆಲ್ಲ ಭಾರವಾಗಿ ತೋರುವದಿಲ್ಲವೆ? `ಶ್ರೀರಾಮನು ದಾನಮಾಡುವವನೇ ಹೊರತು ಪ್ರತಿಗ್ರಹಮಾಡುವವನಲ್ಲ' ಎಂದು ಹನುಮಂತನು ವರ್ಣಿಸಿರುತ್ತಾನೆ. ಹೀಗೆ ಆತ್ಮಸ್ವಭಾವವು ಸುಖರೂಪವಾಗಿರುತ್ತದೆ; ಅದರ ಸಂನಿಧಿಯಿಂದ ಅಂತಃಕರಣದಲ್ಲಿ ಸುಖರೂಪವಾದ ವೃತ್ತಿಯುಂಟಾಗುತ್ತದೆ. ಅಂತಃಕರಣದಲ್ಲಾಗುವ ದುಃಖವು ತನ್ನದೆಂದು ತಿಳಿಯುವದು ಹೇಗೆ ತಪ್ಪು ತಿಳಿವಳಿಕೆಯೋ ಹಾಗೆಯೇ ಈ ಸುಖವೃತ್ತಿಯಲ್ಲಿ ತನ್ನದೆಂಬ ಅಭಿಮಾನವನ್ನು ಮಾಡುವದೂ ತಪ್ಪುತಿಳಿವಳಿಕೆಯೇ. ಸುಖವು ನಮಗೆ ವಿಷಯವಾಗಿರುತ್ತದೆ; ಅದು ನಮಗೆ ಆಗುವದೆಂದು ತಿಳಿಯುವದು ಹೇಗೆ ತಾನೆ ಸರಿಯಾದೀತು? ಸತ್ತ್ವ ಗುಣದಿಂದ ನಮಗೆ ಈ ಅಭಿಮಾನದ ಬಂಧವುಂಟಾಗುತ್ತದೆ. ಸುಖದಲ್ಲಿ ಸಂಗವೆಂದರೆ ನಾನೆಂಬ ಅಭಿಮಾನ; ಆತ್ಮನು ಅಸಂಗನು, ಅವನಿಗೆ ಅಂತಃಕರಣದಲ್ಲಾಗುವ ಸುಖವೃತ್ತಿಯ ಅಂಟು ಒಂದಿಷ್ಟೂ ಇಲ್ಲ ಎಂಬ ತಿಳಿವಳಿಕೆಗೆ ಸತ್ತ್ವ ಗುಣವೇ ಅಡ್ಡಿಯಾಗಿರುತ್ತದೆ.

ಇದರಂತೆ ಜ್ಞಾನವನ್ನೂ ಅರಿಯಬೇಕು. ಸುಖವು ಹೇಗೆ ಆತ್ಮನಿಗೆ ಸ್ವರೂಪವೇ ಆಗಿರುತ್ತದೆಯೋ, ಹಾಗೆಯೇ ಜ್ಞಾನವೂ ಆತ್ಮನ ಸ್ವರೂಪವೇ. ಅರಿವಿನ ಗಟ್ಟಿಯೇ ಅವನು, ಅವನಲ್ಲಿ ಅಜ್ಞಾನದ ಸೋಂಕೂ ಇರುವಂತಿಲ್ಲ. ಅವನ ಸಂನಿಧಿಯಿಂದ ಅಂತಃಕರಣದಲ್ಲಿ ಜ್ಞಾನವೆಂಬ ವೃತ್ತಿಯು ಏಳುವದು. ಆ ಜ್ಞಾನವು ನನ್ನದು ಎಂಬ ಸಂಗವನ್ನು ಮಾಡುವದೂ

ಸತ್ತ್ವಗುಣವೇ. ಗಂಜೀಫು, ಇಸಪೇಟು - ಮುಂತಾದ ಆಟಗಳ ಜ್ಞಾನ, ಕಳ್ಳತನದ ಜ್ಞಾನ, ಪೈಲುವಾನನಾಗುವ ಜ್ಞಾನ, ಕುಶಲವಿದ್ಯೆಗಳ ಜ್ಞಾನ, ತರ್ಕಾದಿಶಾಸ್ತ್ರಗಳ ಜ್ಞಾನ - ಇದೆಲ್ಲ ಜ್ಞಾನವೃತ್ತಿಯೇ. ಈ ಜ್ಞಾನದಲ್ಲಿ ನಾವು ಸಂಗವನ್ನು ಮಾಡುವದು, ಅದು ವಿಷಯವಾಗಿದ್ದರೂ ವಿಷಯಿರೂಪನಾಗಿರುವ ತನ್ನ ಸ್ವರೂಪಕ್ಕೇ ಸೇರಿದ್ದೆಂದು ತಿಳಿಯುವದೂ ತಪ್ಪು ತಿಳಿವಳಿಕೆಯೇ. ಈ ಸಂಗವೂ ಸತ್ತ್ವಗುಣದಿಂದ ಆಗುತ್ತದೆ. ಹಿಂದಿನ ಅಧ್ಯಾಯದಲ್ಲಿ ಇಚ್ಛಾದಿಯಾಗಿ ಧೃತಿಯವರೆಗಿನವುಗಳೆಲ್ಲ ಕ್ಷೇತ್ರವೇ ಎಂದು ಹೇಳಿರುವದೇಕೆಂಬುದು ನಮಗೆ ಈಗ ಚೆನ್ನಾಗಿ ಗುಸವರಿಕೆಯಾಗುತ್ತದೆ. ಅವೆಲ್ಲ ಅಂತಃಕರಣದ ಧರ್ಮಗಳು. ಅವುಗಳಲ್ಲಿ ಸುಖ, ದುಃಖ, ಚೇತನಾ ಅಥವಾ ಜ್ಞಾನ - ಇವನ್ನೆಲ್ಲ ಅಡಕಮಾಡಿತ್ತು. ಕ್ಷೇತ್ರದ ಅಥವಾ ಪ್ರಕೃತಿಯ ಧರ್ಮವ ಯಾವದೂ ಕ್ಷೇತ್ರಜ್ಞನಾದ ಪುರುಷನಿಗೆ ಸೇರತಕ್ಕದ್ದಲ್ಲ. ಆತ್ಮನು ಸಚ್ಚಿದಾನಂದನೆಂದು ಶಾಸ್ತ್ರದಲ್ಲಿ ವರ್ಣಿಸಿದೆಯಷ್ಟೆ. ಅವಿವೇಕಿಗಳಾದವರು ಕ್ಷೇತ್ರದಲ್ಲಿ ಕಾಣಬರುತ್ತಿರುವ ಇರವು, ಅರಿವು, ಸುಖ-ಇವನ್ನೇ ಆತ್ಮಸ್ವರೂಪವೆಂದು ತಪ್ಪಾಗಿ ಭ್ರಮಿಸಿರುತ್ತಾರೆ. ಇವೆಲ್ಲ ನಿಜವಾದ ಸತ್ತಿನ, ನಿಜವಾದ ಚಿತ್ತಿನ, ನಿಜವಾದ ಸುಖದ ಆಭಾಸಗಳು; ಅವುಗಳು ಆತ್ಮನ ಸ್ವರೂಪಕ್ಕೆ ಸೇರಿದವಲ್ಲ ಎಂಬುದನ್ನು ನಾವು ತಿಳಿಯಬೇಕು. ಸತ್ತ್ವಗುಣವು ಈ ಸಚ್ಚಿತ್ಸುಖಾಭಾಸಗಳಿಗೇ ನಮ್ಮನ್ನು ಕಟ್ಟಿಹಾಕುತ್ತಿರುವದು. ಆದ್ದರಿಂದ ಅದೂ ಬಂಧಕವೇ. ಯಾವ ಸುಖವು ನಮ್ಮನ್ನು ಗೋಳುಗುಟ್ಟಿಸುವದೋ ಅದರಿಂದೇನಾಗಬೇಕು? ಅದನ್ನು ಬಿಟ್ಟು ಬಿಡಬೇಕು; ನಿಜವಾದ ಆತ್ಮಸುಖಕ್ಕೆ ಹಂಬಲಿಸಬೇಕು ಎಂದು ಶಾಸ್ತ್ರದಲ್ಲಿ ಉಪದೇಶಿಸಿರುತ್ತದೆ. ಇದರಂತೆ ಯಾವ ಜ್ಞಾನವು ನಮ್ಮನ್ನು ಗೋಳುಗುಟ್ಟಿಸುವದೋ ಯಾವದು ನಮಗೆ ನಿತ್ಯಸುಖಶಾಂತಿಗಳನ್ನು ತಂದುಕೊಡಲಾರದೋ ಅಂಥ ಜ್ಞಾನದಿಂದ ತಾನೆ ಏನು ಪ್ರಯೋಜನ? ವ್ಯಾಕರಣದ ಧಾತುಪಾಠವನ್ನು ತಪ್ಪಾಗಿ ಅಭ್ಯಾಸಮಾಡುತ್ತಿದ್ದ ವೈಯಾಕರಣನನ್ನು ನೆಪಮಾಡಿಕೊಂಡು "ಭಜ ಗೋವಿಂದಂ ಭಜ ಗೋವಿಂದಂ ಮೂಢಮತೇ" ಎಂದು ಆಚಾರ್ಯರು ಬೋಧಿಸಿರುವದರ ರಹಸ್ಯವು ಇದರಲ್ಲಿದೆ. ಯಾವ ಲೌಕಿಕಜ್ಞಾನವಾದರೂ ಅದು ನಿಜವಾದ ಜ್ಞಾನವಲ್ಲ; ಅದು ಆತ್ಮಸ್ವರೂಪಕ್ಕೆ ಸೇರಿದ್ದಲ್ಲ ಎಂಬುದನ್ನು ತಿಳಿಯಪಡಿಸುವದೇ ಇಲ್ಲಿ ಭಗವಂತನ ಗುರಿಯಾಗಿರುತ್ತದೆ.

ಸರಿ. ಇನ್ನು ರಜಸ್ಸೂ ತಮಸ್ಸೂ ಹೇಗೆ ಕಟ್ಟುಬೀಳಿಸುತ್ತವೆ?

ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್।
ತನ್ನಿಬಧ್ನಾತಿ ಕೌನ್ತೇಯ ಕರ್ಮಸಂಗೇನ ದೇಹಿನಮ್॥ 14-7

ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್।
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ 14-8

ರಜಸ್ಸು ಎರಡು ಕೊಂಡಿಗಳ ಬೇಡಿಯಾಗಿರುತ್ತದೆ. ತೃಷ್ಣಾ ಎಂದರೆ ಆಸೆ. ಆಸೆಯು ಬಾಯಾರಿಕೆಯಂತೆ ಇರುವದರಿಂದ ಅದನ್ನು ತೃಷ್ಣೆ ಎಂದು ಕರೆಯುವದು ಯುಕ್ತವೇ

ಆಗಿರುತ್ತದೆ. ಬಾಯಾರಿಕೆಯಾದಾಗ ಎಂಥ ನೀರನ್ನಾದರೂ ಕುಡಿದುಬಿಡಬೇಕೆಂದು ತಹತಹಪಡುವಂತೆ ತೃಷ್ಣೆಯುಂಟಾದರೆ ಯಾವ ವಿಷಯವನ್ನಾದರೂ ಹೇಗಾದರೂ ಮಾಡಿ ಪಡೆದುಕೊಂಡುಬಿಡಬೇಕೆಂಬ ಭಾವನೆಯು ಬಂದು ಗೋಳಾಡಿಸುತ್ತದೆ. ಉಪ್ಪುನೀರನ್ನು ಕುಡಿದವರಿಗೆ ಮತ್ತೆ ಹೆಚ್ಚಾಗಿಯೇ ಬಾಯಾರಿಕೆಯಾಗುವಂತೆ ವಿಷಯಗಳ ಪ್ರಾಪ್ತಿಯಾದ ಮೇಲೂ ಅವುಗಳ ಹಂಬಲು ವಿಷಯಿಗಳಿಗೆ ನಿಲ್ಲುವದಿಲ್ಲ, ಇನ್ನೂ ಹೆಚ್ಚಾಗುತ್ತಿರುವದು. ಸಿಕ್ಕಿರುವ ವಿಷಯಗಳನ್ನು ಪ್ರೀತಿಯಿಂದ ಅಪ್ಪಿಕೊಂಡು ಎಂದಿಗೂ ಅವನ್ನು ಬಿಡಬಾರದೆಂದೂ ಅವುಗಳನ್ನು ತಾನು ಎಂದೆಂದಿಗೂ ಭೋಗಿಸುತ್ತಿರಬೇಕೆಂದೂ ಬಯಸುವದು ಆ ಸಂಗವು. ರಜೋಗುಣದಿಂದ ತೃಷ್ಣೆಯೂ ಆ ಸಂಗವೂ ಹೆಚ್ಚುತ್ತಲೇ ಇರುವವು. ಪ್ರಪಂಚದ ಸಮಸ್ತವಿಷಯಗಳ ಪ್ರಾಪ್ತಿಯಿಂದಾಗುವ ಸುಖವು ತೃಷ್ಣಾಕ್ಷಯಸುಖದ ಪೀಸಪಾಲಿಗೂ ಸರಿಗಟ್ಟಲಾರದೆಂದು ಬಲ್ಲವರು ಹೇಳುತ್ತಾರೆ. ಅಂದಮೇಲೆ ರಜೋಗುಣವು ಎಂಥ ಬಂಧಕವೆಂದು ತಿಳಿಯಬೇಕಾಯಿತು! ಒಳ್ಳೆಯ ಕೆಲಸಗಳನ್ನು ಮಾಡಬೇಕು, ಕೀರ್ತಿಯನ್ನು ಪಡೆಯಬೇಕು, ಪರೋಪಕಾರವನ್ನು ಮಾಡಬೇಕು-ಎಂದು ಮುಂತಾಗಿರುವ ಆಸೆಗಳೂ ತೃಷ್ಣೆಯೇ; ಆದರೆ ಆ ಆಸೆಯಲ್ಲಿ ಸತ್ತ್ವಗುಣದ ಮಿಶ್ರವು ಸ್ವಲ್ಪ ಹೆಚ್ಚಾಗಿರುತ್ತದೆ. ಅಷ್ಟೆ. ಅಂತೂ ರಜೋಗುಣವು ಈ ತೃಷ್ಣೆಯೆಂಬ ಕೊಂಡಿಯಿಂದ ನಮ್ಮನ್ನು ಬಂಧಿಸುತ್ತಿರುವದು.

ಕರ್ಮವೆಂಬುದು ಈ ಬೇಡಿಯ ಇನ್ನೊಂದು ಕೊಂಡಿ. ಯಾವನಿಗೆ ಆಸೆಯಿರುತ್ತದೆಯೋ ಅವನು ಸುಮ್ಮನೆ ಕೂತಿರುವದಕ್ಕೆ ಆಗುವದೇ ಇಲ್ಲ. ಗಾಣದ ಎತ್ತಿನಂತೆ ಗಿರ್ರನೆ ಸುತ್ತುತ್ತಿರುವನು. ಕರ್ಮವನ್ನು ಕರ್ತವ್ಯ, (duty) ಎಂಬ ಹೆಸರಿನಿಂದ ಮೇಲಕ್ಕೇರಿಸಿ ಅದಕ್ಕೆ ಆಳಾಗಿ ದುಡಿಯುವವರು ಹಲವು ಮಂದಿ ಇರುತ್ತಾರೆ. ಸ್ವಾರ್ಥಕ್ಕಾಗಿ ದುಡಿಯಲಿ, ಕರ್ತವ್ಯಕ್ಕಾಗಿ ದುಡಿಯಲಿ, ಎರಡೂ ಒಂದೇ. ಅವಿದ್ಯೆಯಿಂದ ತೃಷ್ಣೆ, ತೃಷ್ಣೆಯಿಂದ ಕರ್ಮ, ಕರ್ಮದಿಂದ ಫಲಪ್ರಾಪ್ತಿ, ಅಥವಾ ಅಪ್ರಾಪ್ತಿ; ಅದರಿಂದ ಸುಖದುಃಖಗಳು, ಅದರಿಂದ ವಾಸನೆಗಳು, ವಾಸನೆಗಳು ಎದ್ದುಕೊಂಡಾಗ ತೃಷ್ಣೆ - ಹೀಗೆ ಕರ್ಮಚಕ್ರವು ಜೀವರನ್ನು ತಿರುಗಿಸುತ್ತಲೇ ಇರುವದು. ಈ ದೇಹವು ಬಿದ್ದಮೇಲೂ ನಮ್ಮನ್ನು ಈ ರಜೋಗುಣದ ತೃಷ್ಣಾಕರ್ಮಗಳು ಕಾಡುವದು ತಪ್ಪುವದಿಲ್ಲ; ವಾಸನೆಯು ನಮ್ಮನ್ನು ಹಿಂದಟ್ಟಿಕೊಂಡೇ ಬರುತ್ತವೆ. ಆಸೆಯಿಂದಲೇ ಆಯಾ ಫಲಭೋಗಕ್ಕಾಗಿ ಮತ್ತೆ ಮತ್ತೆ ಜನಿಸಿ ನಾವು ಕರ್ಮವನ್ನು ಮಾಡಿಯೇ ತೀರಬೇಕಾಗಿರುತ್ತದೆ.

ಇನ್ನು ತಮೋಗುಣದ ವಿಲಾಸವೇನೆಂಬುದನ್ನು ನೋಡೋಣ. ಅದು ಮೊದಲು ಎಲ್ಲರಲ್ಲಿಯೂ ಮೋಹವನ್ನುಂಟುಮಾಡುತ್ತದೆ. ಏನೂ ತೋಚದೆ ಭ್ರಾಂತಿಯಿಂದ ಹೊರಟವನು ಎಚ್ಚರತಪ್ಪಿಯೇ ತೀರುತ್ತಾನೆ. ಅವನು ಬೀಳದೆ ಇರುವ ಗುಂಡಿಗಳೇ ಇಲ್ಲ. ಮೋಹ, ಪ್ರಮಾದ, ಆಲಸ್ಯ - ಇವೆಲ್ಲ ತಮೋಗುಣದ ಸಂತಾನವೇ. ತಮೋಗುಣದಿಂದ ಮಾಡುವ ಕೆಲಸವು ರಜೋಮಿಶ್ರಣದಿಂದಾಗುತ್ತದೆ. ಆದರೆ ಆಗ ಪ್ರಮಾದವೇ

ಹೆಚ್ಚಿರುವದರಿಂದ ಅದೆಲ್ಲ ಅನರ್ಥಕ್ಕೆ ಕಾರಣವಾಗುತ್ತದೆ; ತಿಳಿಯದೆ ಮತ್ತೆ ಮತ್ತೆ ಮಾಡಬಾರದ್ದನ್ನು ಮಾಡಿ ಆಗಬಾರದ ಅನರ್ಥಗಳನ್ನು ಅನುಭವಿಸುವವರು ರಜಸ್ತಮೋಗುಣಗಳ ದಾಸರು.

ಹೀಗೆ ಪರಮೇಶ್ವರನ ಮಾಯಾಶಕ್ತಿಯಾದ ಪ್ರಕೃತಿಯು ತನ್ನ ಮೂರು ಗುಣಗಳ ಮೂಲಕವಾಗಿ ಜೀವರುಗಳನ್ನು ಬಗೆಬಗೆಯಾದ ಸಂಗಗಳಿಂದ ಕಟ್ಟಿ ಹಾಕಿ ಮಾಯಾತೀತವಾದ ಪರಮಾರ್ಥವನ್ನು ಅರಿಯದಂತೆ ಮಾಡಿರುತ್ತದೆ. ಇದೇ ಕ್ಷೇತ್ರಕ್ಷೇತ್ರಜ್ಞಸಂಯೋಗವು, ಇದೇ ಸಂಸಾರಬಂಧವು. ಇದರಿಂದ ಬಿಡುಗಡೆಯಾಗಬೇಕೆನ್ನುವವರು ಈ ಗುಣಗಳ ಸ್ವರೂಪವನ್ನೂ ಇವುಗಳು ಯಾವಾಗ ಹೇಗೆ ತಮ್ಮ ಮೇಲೆ ಪರಿಣಾಮವನ್ನುಂಟುಮಾಡುತ್ತವೆ ಎಂಬುದನ್ನೂ ತಿಳಿದುಕೊಂಡು ಅವುಗಳ ವಿಲಾಸಕ್ಕೆ ಸಿಕ್ಕಿಬೀಳದೆ ತಟಸ್ಥರಾಗಿ ತಮ್ಮ ಪರಮಾರ್ಥಸ್ವರೂಪದಲ್ಲಿ ನಿಷ್ಠೆಯನ್ನು ಪಡೆಯಬೇಕು. ಇದರ ವಿವರವನ್ನು ಇನ್ನು ಮುಂದೆ ನಾವು ತಿಳಿಯಬೇಕಾಗಿರುತ್ತದೆ.



## ೧೩೧. ಗುಣಗಳ ವ್ಯಾಪಾರವೂ ಅದರ ಫಲವೂ 14 - (9-15)

**(12.6.49)**

ಪ್ರಕೃತಿಯ ಗುಣಗಳ ವ್ಯಾಪಾರವನ್ನು ಕುರಿತು ಮಾತನಾಡುತ್ತಿದ್ದ ಭಗವಂತನು ಈವರೆಗೆ ಹೇಳಿದ್ದರ ಅವಾಂತರೋಪಸಂಹಾರವನ್ನು ಮಾಡುತ್ತಿದ್ದಾನೆ. `ಸತ್ತ್ವವು ಸುಖದಲ್ಲಿ ಸಂಗವನ್ನುಂಟುಮಾಡುತ್ತದೆ; ರಜಸ್ಸು ರಾಗದಲ್ಲಿ ಸಂಗವನ್ನುಂಟುಮಾಡುತ್ತದೆ; ತಮಸ್ಸು ಜ್ಞಾನವನ್ನು ಮುಸುಕಿಕೊಂಡು ಪ್ರಮಾದದಲ್ಲಿ ಸಂಗವನ್ನುಂಟುಮಾಡುತ್ತದೆ.' ಇಲ್ಲಿ ಹೇಳಿರುವದು ಉಪಲಕ್ಷಣಕ್ಕಾಗಿ ಎಂಬುದು ಸ್ಪಷ್ಟವಾಗಿದೆ. ಏಕೆಂದರೆ ಸತ್ತ್ವವು ಸುಖದಲ್ಲಿಯೂ ಜ್ಞಾನದಲ್ಲಿಯೂ ಸಂಗವನ್ನುಂಟುಮಾಡುತ್ತದೆ' ಎಂದು ಹಿಂದೆ ಸ್ಪಷ್ಟವಾಗಿ ಹೇಳಿದ್ದರೂ ಇಲ್ಲಿ ಸುಖವನ್ನು ಮಾತ್ರ ಹೇಳಿರುತ್ತದೆ. ಜ್ಞಾನ, ಸುಖ, ಶಾಂತಿ, ದಾಂತಿ, ಸಮಾಧಾನ ಮುಂತಾದ ಕಾರ್ಯಗಳನ್ನೆಲ್ಲ ಇಲ್ಲಿ ಸತ್ತ್ವದ ಕಾರ್ಯಗಳೆಂದು ತಿಳಿಯಬೇಕು. ಇದರಂತೆ ರಾಗ, ದ್ವೇಷ, ಲೋಭ, ಮೋಹ, ಚಾಂಚಲ್ಯ, ಕಪಟ, ಧರ್ಮಾಧರ್ಮಗಳಲ್ಲಿ ತೊಡಗುವದು ಮುಂತಾದವುಗಳೆಲ್ಲವೂ ರಜಸ್ಸಿನ ಕಾರ್ಯಗಳೇ. ಇದರಂತೆ ಪ್ರಮಾದ, ಮರೆಯುವದು, ಮಂಕು, ಸೋಮಾರಿತನ, ದೀರ್ಘಸೂತ್ರನಾಗಿ ಕಾರ್ಯವನ್ನು ಮುಂದು ಮುಂದಕ್ಕೆ ಹಾಕುವದು - ಇವೆಲ್ಲವೂ ತಮಸ್ಸಿನ ಕಾರ್ಯಗಳೇ.

ಇಲ್ಲಿ ಗುಣಗಳ ಕಾರ್ಯವನ್ನು ಮಾತ್ರ ಹೇಳಿರುವದೇಕೆಂದರೆ ಸತ್ತ್ವಾದಿಗಳ ಮೂಲ ರೂಪವು ಇಂಥದ್ದೆಂಬುದು ಯಾರಿಗೂ ತಿಳಿಯುವದಕ್ಕೆ ಬರುವದಿಲ್ಲ. ಅವುಗಳ

ಕಾರ್ಯದಿಂದಲೇ ಈಗ ಸತ್ತ್ವಗುಣವು ಹೆಚ್ಚಾಗಿದೆ, ಈಗ ರಜಸ್ಸು ಬೆಳೆದಿದೆ, ಈಗ ತಮಸ್ಸು ಆವರಿಸಿಕೊಂಡಿದೆ - ಎಂದು ತಿಳಿಯಬೇಕಾಗಿರುತ್ತದೆ. ಸುಖಾದಿಗಳಲ್ಲಿ ಸತ್ತ್ವವು ಸಂಗವನ್ನುಂಟುಮಾಡುತ್ತದೆ, ಎಂದರೆ ಆತ್ಮನು ಅಸಂಗನಾದರೂ ಸತ್ತ್ವಧರ್ಮದ ಅಧ್ಯಾರೋಪದಿಂದ ಇದು ನಾನು, ಇದು ನನ್ನದು ಎಂಬ ಅನುಭವವಾದಂತೆ ಭ್ರಾಂತಿಯಾಗುತ್ತದೆ. ನಾನು ಸುಖಿಯು, ನಾನು ಶಾಂತನು, ನಾನು ಜ್ಞಾನಿಯು - ಎಂದು ಮುಂತಾಗಿ ತಿಳಿಯುವದೇ ಆತ್ಮನಿಗೆ ಸತ್ತ್ವದ ಸಂಗವು, ನಾನು ಸುಖಿ ಎಂಬಲ್ಲಿ ಆತ್ಮನನ್ನೂ ಪ್ರಕೃತಿಯನ್ನೂ ಬಿಡಿಸಿಕೊಳ್ಳದೆ ಇರುವದೇ ಸಂಗಕ್ಕೆ ಕಾರಣವು. ಆಗ ಸುಖವು ಇದು, ನಾನು ಬೇರೆ - ಎಂಬ ಅರಿವೇ ಇರುವದಿಲ್ಲ. ಸುಖವು ಹಾಲಿನಲ್ಲಿ ನೀರು ಬೆರೆತಿರುವಂತೆ ನಮ್ಮಲ್ಲಿಯೇ ಸೇರಿಕೊಂಡು ಒಂದಾಗಿಬಿಟ್ಟಿರುತ್ತದೆ. ಪುರುಷನನ್ನೂ ಈ ಗುಣಗಳ ಕಾರ್ಯವನ್ನೂ ಬಿಡಿಸಿ ತಿಳಿದುಕೊಳ್ಳುವದಕ್ಕೆ ಬಹುಕಾಲಸಾಧ್ಯವಾದ ವಿವೇಕಾಭ್ಯಾಸವು ಅವಶ್ಯವಾಗಿರುತ್ತದೆ. ಹೀಗೆಯೇ ರಜೋಗುಣದ ಕಾರ್ಯಗಳಾದ ಚಟುವಟಿಕೆ, ರಾಗಾದಿಗಳು ಎಲ್ಲವನ್ನೂ ತನ್ನಲ್ಲಿಯೇ ಬೆರಕೆಮಾಡಿಕೊಂಡಿರುವದೇ ಅವುಗಳ ಸಂಗವು; ತಮಸ್ಸಿನ ಕಾರ್ಯಗಳಾದ ನಿದ್ರಾಲಸ್ಯಪ್ರಮಾದಾದಿಗಳನ್ನೂ ಹೀಗೆಯೇ ತಿಳಿಯಬೇಕು.

ಈ ಗುಣಗಳು ಹೆಚ್ಚಿಕೊಂಡಾಗಲೇ ಇವುಗಳ ಕಾರ್ಯವು ನಮಗೆ ತೋರತಕ್ಕದ್ದು, ಹೇಗೆಂದರೆ:

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ 14-10**

ಈ ಮೂರು ಗುಣಗಳಲ್ಲಿ ಯಾವದು ಎದ್ದುಕೊಳ್ಳುವದೋ ಅದು ಆಗ ಮಿಕ್ಕೆರಡನ್ನು ತುಳಿದೇ ಇರುತ್ತದೆ. ಆಗಲೆಲ್ಲ ನಾವು ಇದು ಸತ್ತ್ವದ ಕಾರ್ಯವು. ಇದು ರಜಸ್ಸಿನ ಕಾರ್ಯವು, ಇದು ತಮಸ್ಸಿನ ಕಾರ್ಯವು, ಇವೆಲ್ಲ ಹೊರಗಿನವು, ನನಗೂ ಇದಕ್ಕೂ ಯಾವ ಸಂಬಂಧವೂ ಇಲ್ಲ - ಎಂದು ವಿಮರ್ಶೆಮಾಡಿ ತಿಳಿದುಕೊಂಡುಬಿಟ್ಟರೆ ಅವು ತಮ್ಮ ತಮ್ಮ ಕೆಲಸವನ್ನು ಮುಗಿಸಿಕೊಂಡು ಹೋಗಿಬಿಡುತ್ತವೆ. ಅವುಗಳಿಂದ ನಮ್ಮ ಮೇಲೆ ಯಾವ ಪರಿಣಾಮವೂ ಆಗುವದಿಲ್ಲ. ಹೊಸದಾಗಿ ಅವು ಬರುವಾಗಲೇ ಎಚ್ಚರಿಕೆಯಿಂದಿರುವದು ಒಳ್ಳೆಯದು, ಇಲ್ಲದಿದ್ದರೆ ಅವು ಬಂದಾಗ ಅವೇ ನಮ್ಮ ಸ್ವರೂಪವೆಂಬ ಮಿಥ್ಯಾಭಾವನೆಯೇ ಬಂದುಬಿಡುತ್ತದೆ. ಸಮುದ್ರದ ಅಲೆಯು ಬರುವ ಮುಂಚೆಯೇ ತಲೆಬಾಗಿದವನ ಮೇಲುಗಡೆ ಹಾದು ಅದು ಹೋಗಿಬಿಡುತ್ತದೆ; ಆದರೆ ಸೆಟೆದುಕೊಂಡು ನಿಂತಿರುವವನಿಗೆ ಮಾತ್ರ ಅದೇ ಅಲೆಗಳು ಹಿಂದಕ್ಕೆ ತಳ್ಳಿಹಾಕಿ ಭಯಂಕರಪರಿಣಾಮವನ್ನು ಮಾಡುತ್ತವೆ, ಗುಣಗಳು ಬಂದಾಗ ಅವುಗಳ ಕೈಗೆ ಸಿಕ್ಕಿ ನರಳುವವರೂ ಹೀಗೆಯೇ ಅವುಗಳನ್ನು ವಿಮರ್ಶೆಯಿಂದ ಅತ್ತ ಸಾಗಿಸಲರಿಯದೆ ಇರುತ್ತಾರೆ.

ಗುಣಗಳಲ್ಲಿ ಒಂದೊಂದೂ ಮಿಕ್ಕೆರಡನ್ನು ತಳ್ಳಿಯೇ ಮೇಲಕ್ಕೆದ್ದುಕೊಳ್ಳುತ್ತದೆ ಎಂಬುದರಿಂದ ನಮಗೆ ಒಂದು ಸಾಧನಕ್ರಮವು ತಿಳಿದುಬರುತ್ತದೆ. ಅದೇನೆಂದರೆ ಆತ್ಮನು ನಿಜವಾಗಿ ಮೂರು ಗುಣಗಳ ಸಂಬಂಧವೂ ಇಲ್ಲದ ಅಸಂಗನೇ ಆಗಿರುತ್ತಿದ್ದರೂ ಸಾಧಕಾವಸ್ಥೆಯಲ್ಲಿ ಆ ಗುಣಗಳನ್ನು ದಾಟುವದಕ್ಕೆ ಒಂದಾನೊಂದು ಕ್ರಮವನ್ನು ಅನುಸರಿಸಬೇಕಾಗುತ್ತದೆ. ತಮಸ್ಸನ್ನು ಗೆಲ್ಲುವದಕ್ಕೆ ರಜಸ್ಸನ್ನು ಎಬ್ಬಿಸಿಕೊಳ್ಳಬೇಕು; ರಜಸ್ಸನ್ನು ಗೆಲ್ಲುವದಕ್ಕೆ ಸತ್ತ್ವವನ್ನು ಎಬ್ಬಿಸಿಕೊಳ್ಳಬೇಕು. ಒಮ್ಮೆ ವಿವೇಕಾನಂದರ ಬಳಿಗೆ ಒಬ್ಬನು ಬಂದು `ಸ್ವಾಮಿ, ನನಗೆ ಯಾವದಾದರೊಂದು ಸಾಧನವನ್ನು ಉಪದೇಶಿಸಬೇಕು' ಎಂದು ಮತ್ತೆ ಮತ್ತೆ, ಪೀಡಿಸಿ ಕೇಳಿದನಂತೆ. ಆಗ ಸ್ವಾಮಿಗಳು `ನಿನಗೆ ಕಳ್ಳತನ ಬರುತ್ತದೆಯೆ?' ಎಂದು ಕೇಳಿದರಂತೆ. ಆತನು ಪೂರ ಸೋಮಾರಿಯಾಗಿದ್ದನು; ಯಾವ ಕೆಲಸಕ್ಕೂ ಕೈ ಹಾಕಲು ಅವನ ಮನಸ್ಸು ಒಲಿಯುತ್ತಿರಲಿಲ್ಲ. ರಜಸ್ಸುಕೂಡ ಎದ್ದುಕೊಳ್ಳದೆ ಇರುವ ಚಿತ್ತದಲ್ಲಿ ಸತ್ತ್ವವು ಹೇಗೆ ತಾನೆ ಕಾಣಿಸಿಕೊಂಡೀತು? ಅದಿಲ್ಲದಿದ್ದರೆ ಉತ್ತಮಸಾಧನಗಳು ಹೇಗೆ ತಾನೆ ಅಳವಟ್ಟಾವು? ಈ ಅಭಿಪ್ರಾಯದಿಂದಲೇ ಸ್ವಾಮಿಗಳು ಅವನಿಗೆ ಆ ವಿಲಕ್ಷಣವಾದ ಪ್ರಶ್ನೆಯನ್ನು ಹಾಕಿದ್ದು. ಪಾಠಶಾಲೆಗಳಲ್ಲಿ ಹುಡುಗರಿಗೆ ಕವಾಯಿತು, ವ್ಯಾಯಾಮ, ಕ್ರಿಕೆಟ್ ಮುಂತಾದ ಆಟಗಳು - ಇವನ್ನು ಏರ್ಪಡಿಸಿರುವದು ಈ ಉದ್ದೇಶದಿಂದಲೇ. ತಮೋಗುಣವನ್ನು ಗೆದ್ದಮೇಲೆಯೇ ಜ್ಞಾನಸಂಪಾದನೆಗೆ ಪ್ರಯತ್ನವನ್ನು ಮಾಡಬೇಕು. ಕೆಲವರಿಗೆ ರಜೋಗುಣವೇ ಹೆಚ್ಚಾಗಿರುತ್ತದೆ; ಅಂಥವರು ಪರೋಪಕಾರ, ಫಲಾಪೇಕ್ಷೆಯಿಲ್ಲದೆ ಈಶ್ವರಾರಾಧನರೂಪವಾಗಿ ಶಾಸ್ತ್ರೋಕ್ತಕರ್ಮಗಳನ್ನು ಮಾಡುವದು -ಇಂಥ ರಜೋಗುಣವನ್ನು ಗೆಲ್ಲುವ ಉಪಾಯಗಳನ್ನು ಕೈಕೊಳ್ಳಬೇಕು. ಭಗವಂತನು ಮುಮುಕ್ಷುಗಳಿಗೆ ಕರ್ಮಯೋಗವನ್ನು ಉಪದೇಶಿಸಿರುವದರ ರಹಸ್ಯವೇ ಇದು. ಕರ್ಮಯೋಗವು ರಜೋಗುಣದಿಂದ ಕೂಡಿದ್ದರೂ ಅದರ ಕೊನೆಯಲ್ಲಿ ಸತ್ತ್ವಗುಣವೂ ಇರುತ್ತದೆ; ಕರ್ಮವು ರಜಸ್ಸಿನ ಕಾರ್ಯವು, ಫಲಾಪೇಕ್ಷೆಯಿಲ್ಲದಿರುವದೂ ಈಶ್ವರಾರ್ಪಣಬುದ್ಧಿಯೂ ಸತ್ತ್ವದ ಕಾರ್ಯಗಳು. ಆದ್ದರಿಂದ ಕರ್ಮಯೋಗವು ಕ್ರಮ ಕ್ರಮವಾಗಿ ರಜಸ್ಸನ್ನು ಗೆಲ್ಲುವದಕ್ಕೆ ಸಹಾಯಕವಾಗಿರುತ್ತದೆ; ಆ ಯೋಗದಲ್ಲಿ ಜಯಶೀಲನಾದವನಿಗೇ ಧ್ಯಾನಯೋಗವೆಂಬ ಸಾತ್ತ್ವಿಕಸಾಧನವನ್ನು ಉಪದೇಶಿಸಿರುತ್ತದೆ. ಆಮೇಲೆ ಸತ್ತ್ವವನ್ನು ಸತ್ತ್ವದಿಂದಲೇ ಗೆಲ್ಲಬೇಕು. ಈ ಕ್ರಮದಿಂದಲೇ ಗುಣಗಳನ್ನು ಒಂದೊಂದಾಗಿ ಗೆದ್ದುಕೊಳ್ಳಬೇಕು ಎಂಬುದನ್ನು ತಿಳಿಸುವದಕ್ಕೆ ಭಗವಂತನು ಗುಣಗಳು ಒಂದನ್ನೊಂದು ಅಭಿಭವಮಾಡುವವೆಂದು ಇಲ್ಲಿ ವರ್ಣಿಸಿರುತ್ತಾನೆ.

ಯಾವಾಗ ಯಾವ ಗುಣವು ಎದ್ದುಕೊಂಡಿದೆ ಎಂದು ಗೊತ್ತುಮಾಡಿಕೊಳ್ಳುವದಕ್ಕೆ ಆಯಾ ಗುಣದ ಕಾರ್ಯವೇ ಗುರುತು. ಅದಕ್ಕಾಗಿಯೇ ಭಗವಂತನು ಹೀಗೆನ್ನುತ್ತಾನೆ:

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ।**
**ಜ್ಞಾನಂ ಯದಾ ತದಾ ವಿದ್ಯಾ-ದ್ವಿವೃದ್ಧಂ ಸತ್ತ್ವಮಿತ್ಯುತ ॥ 14-11**

`ಈ ದೇಹದಲ್ಲಿರುವ ಇಂದ್ರಿಯದ್ವಾರಗಳಲ್ಲೆಲ್ಲ ಜ್ಞಾನಪ್ರಕಾಶವು ಯಾವಾಗ ಉಂಟಾಗುವದೋ ಆಗ ಸತ್ತ್ವವು ಬೆಳೆದುಕೊಂಡಿದೆ ಎಂದು ತಿಳಿಯಬೇಕು. ಎಲ್ಲಾ ದ್ವಾರಗಳಲ್ಲಿ ಆಗುವ ಅಂತಃಕರಣವೃತ್ತಿರೂಪವಾದ ಜ್ಞಾನವೂ ಒಂದೇ ಪ್ರಕಾರವಾಗಿರುತ್ತದೆ. ಆಯಾಇಂದ್ರಿಯೋಪಾಧಿಗಳಿಂದ ಅದು ಕೇಳುವದು, ನೋಡುವದು - ಮುಂತಾದ ವಿಶೇಷಜ್ಞಾನವಾಗಿ ತೋರುತ್ತದೆ. ವಿಷಯಪ್ರಕಾಶರೂಪವಾದ ಈ ಜ್ಞಾನವು ಉಂಟಾಗುತ್ತಿರುವದು ಸತ್ತ್ವಗುಣವು ಎದ್ದುಕೊಂಡದ್ದಕ್ಕೆ ಗುರುತು. ಹೊರಗಿನ ವಿಷಯಜ್ಞಾನವು ಸ್ಥೂಲವಾದರೂ ಸತ್ತ್ವಗುಣದ ಕಾರ್ಯವೇ, ಅದಕ್ಕಿಂತ ಒಳಗಿನ ಸೂಕ್ಷ್ಮವಾದ ಭಾವನೆಗಳು ಉಂಟಾಗುವಾಗಲೂ ಸತ್ತ್ವಗುಣವೇ ಹೆಚ್ಚಬೇಕು. ಆಕಾಶ, ವಾಯು, ತೇಜಸ್ಸು - ಮುಂತಾದ ಸ್ಥೂಲಭೂತಗಳ ಮತ್ತು ಭೌತಿಕಪದಾರ್ಥಗಳ ಜ್ಞಾನದಂತೆಯೇ ಕರುಣೆ, ಮೈತ್ರಿ, ಪ್ರೀತಿ, ಸೂಕ್ಷ್ಮಭಾವಗಳ ಪರಿಚ್ಛೇದ - ಇವೆಲ್ಲವೂ ಸತ್ತ್ವದ ಅಭಿವೃದ್ಧಿಯಿಂದಲೇ ಆಗತಕ್ಕವು. ಸತ್ತ್ವದಲ್ಲಿ ರಜಸ್ತಮೋಗುಣಗಳ ಬೆರಕೆಯು ಕಡಿಮೆಯಾದಂತೆಲ್ಲ ಅದು ಹೆಚ್ಚು ಹೆಚ್ಚು ಸೂಕ್ಷ್ಮವಸ್ತುಗಳ ಜ್ಞಾನವನ್ನುಂಟುಮಾಡುತ್ತದೆ. ಆಧ್ಯಾತ್ಮಿಕವಾದ ಜ್ಞಾನಗಳಲ್ಲೆಲ್ಲ ಆತ್ಮತತ್ತ್ವಜ್ಞಾನವು ಹೆಚ್ಚಿನದು. ಆತ್ಮಜ್ಞಾನವುಂಟಾಗುವಾಗ ಸತ್ತ್ವವು ಅತ್ಯಂತ ಪರಿಶುದ್ಧವಾಗಿರುತ್ತದೆ. ಮಲಿನಸತ್ತ್ವ, ಶುದ್ಧಸತ್ತ್ವ, ಅತ್ಯಂತವಿಶುದ್ಧಸತ್ತ್ವ - ಇವುಗಳಲ್ಲಿ ಶುದ್ಧಿತಾರತಮ್ಯವೇ ಹೊರತು ಗುಣಸ್ವರೂಪದ ತಾರತಮ್ಯವೇನೂ ಇರುವದಿಲ್ಲ.

ಇನ್ನು ರಜಸ್ಸು ಎದ್ದು ಕಾಣಿಸಿಕೊಂಡಿತೆನ್ನುವದಕ್ಕೆ ಗುರುತೇನು? - ಎಂದರೆ,

**ಲೋಭಃ ಪ್ರವೃತ್ತಿರಾರಮ್ಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯನ್ತೇ ವಿವೃದ್ಧೇ ಭರತರ್ಷಭ ॥** **14-12**

ಲೋಭವು ಎಂದರೆ ಹಿಡಿಯದಾಸೆ, ಮತ್ತು ಜಿಪುಣತನ. ಮತ್ತೊಬ್ಬರ ದ್ರವ್ಯವನ್ನು ಮುಟ್ಟಬಾರದೆಂದು ನಾವು ಕೇಳಿದ್ದರೂ ರಜಸ್ಸು ಹೆಚ್ಚಿದಾಗ ಈ ಗುಣವು ಬಲವಾಗಿ ನಮ್ಮನ್ನು ಕಾಡುತ್ತದೆ. ತನ್ನದೆನಿಸಿರುವ ಯಾವ ವಸ್ತುವನ್ನೂ ಎಷ್ಟುಮಾತ್ರಕ್ಕೂ ಮತ್ತೊಬ್ಬರಿಗೆ ಕೊಡಬಾರದು, ಮತ್ತೊಬ್ಬರದು ತನಗೆ ಬಂದರೆ ಆಗಬಹುದು - ಎನ್ನಿಸುವದು ಮನುಷ್ಯನಿಗೆ ಸ್ವಭಾವವಾಗಿಬಿಟ್ಟಿರುತ್ತದೆ. ಮನುಷ್ಯನು ಈ ಸ್ವಭಾವವನ್ನು ಮಾರ್ಪಡಿಸಿಕೊಳ್ಳುವದಕ್ಕೆ ಪ್ರಯತ್ನಪಡುವದಕ್ಕಾಗಿ ದಾನವನ್ನು ಶಾಸ್ತ್ರದಲ್ಲಿ ಬಹಳವಾಗಿ ಪ್ರಶಂಸಿಸಿರುತ್ತದೆ. ಈ ಲೋಭವು ರಜಸ್ಸಿನ ಕಾರ್ಯವು.

ಪ್ರವೃತ್ತಿ ಎಂದರೆ ಸಾಮಾನ್ಯವಾದ ಶರೀರಾದಿವ್ಯಾಪಾರವು; ಆರಂಭ ಎಂದರೆ ಕರ್ಮಗಳಲ್ಲಿ ತೊಡಗುವದು. ಸಾಮಾನ್ಯವಾಗಿ ಅಥವಾ ವಿಶೇಷವಾಗಿ ಕ್ರಿಯೆಗಳಲ್ಲಿ ತೊಡಗುವದು ರಜಸ್ಸಿನ ಗುಣವು. ಯಾವನಲ್ಲಿ ರಜಸ್ಸು ಎದ್ದುಕೊಂಡಿಲ್ಲವೋ ಅವನು

ಲೌಕಿಕಾರ್ಯಗಳಲ್ಲಿ ಕೂಡ ತೊಡಗುವದಿಲ್ಲ; ಇನ್ನು ಕೂಡಲೆ ಫಲವನ್ನು ತೋರಿಸದೆ ಕಾಲಾಂತರದಲ್ಲಿ ದೇಶಾಂತರದಲ್ಲಿ ದೇಹಪಾತವಾದ ಬಳಿಕವೇ ಫಲಿಸುವ ಕರ್ಮಗಳಲ್ಲಿ ತೊಡಗುವದಿಲ್ಲವೆಂದು ಹೇಳಬೇಕಾದದ್ದೇನು? ತತ್ತ್ವಜ್ಞಾನಕ್ಕಾಗಿ ಮಾಡುವ ಸಾಧನಾನುಷ್ಠಾನಕ್ಕೂ ಈ ಗುಣದ ಸಹಾಯವು ಬೇಕು. ಸತ್ತ್ವರಜಸ್ಸುಗಳ ಮಿಶ್ರಣವು ಇರುವವರು ಮಾತ್ರವೇ ಪರಲೋಕದಲ್ಲಿ ಫಲವುಳ್ಳ ಕರ್ಮಗಳಲ್ಲಿ ಅಥವಾ ಉಪಾಸನೆಗಳಲ್ಲಿ ತೊಡಗುವರು. ಕಾಯಕ್ಲೇಶಾದಿಗಳನ್ನು ಲೆಕ್ಕಿಸದೆ ನಿಯಮಬದ್ಧವಾಗಿ ಕರ್ಮವನ್ನು ಮಾಡುವದಾಗಲಿ ಉಪಾಸನೆಯನ್ನು ಮಾಡುವದಾಗಲಿ ಸತ್ತ್ವರಜಸ್ಸುಗಳ ಸಹಾಯದಿಂದಲೇ ಆಗುತ್ತದೆ. ಆತ್ಮತತ್ತ್ವಜ್ಞಾನವು ದೃಷ್ಟಫಲವುಳ್ಳದ್ದೇ ಆದರೂ ಅದನ್ನು ಪಡೆಯುವದಕ್ಕಾಗಿ ಮಾಡುವ ಗುರೂಪಸತ್ತಿಯೇ ಮುಂತಾದ ಪ್ರಯತ್ನವೂ ರಜಸ್ಸಿನಿಂದಲೇ ಸಾಗಬೇಕಾಗಿರುತ್ತದೆ.

**ಅಶಮ**ವೆಂದರೆ ಸ್ವಲ್ಪವೂ ಉಪಶಾಂತಿಯಿಲ್ಲದೆ ಹರ್ಷರಾಗಾದಿಗಳನ್ನು ಎಬ್ಬಿಸುವ ಕಾರ್ಯಗಳಲ್ಲಿ ತೊಡಗುತ್ತಲೇ ಇರುವದು; ಅದೂ ರಜಸ್ಸಿನ ಕಾರ್ಯವೇ. ಸತ್ತ್ವಗುಣವು ಹಿಂದಕ್ಕೆ ಬಿದ್ದು ರಜಸ್ಸು ಎದ್ದುಕೊಂಡಾಗ ಅಶಮವುಂಟಾಗುತ್ತದೆ.

**ಸ್ಪೃಹೆ** ಎಂದರೆ ವಸ್ತುಗಳು ತನಗೆ ಬೇಕೆಂಬ ಆಶೆಯು. ಲೋಭದಲ್ಲಿ ತನ್ನಲ್ಲಿರುವ ವಸ್ತುಗಳನ್ನು ಬಿಡಬಾರದೆಂಬ ಪಟ್ಟು ಮತ್ತೊಬ್ಬರದ್ದೂ ತನಗೇ ಬೇಕೆಂಬ ಆಸೆ - ಇವೆರಡೂ ಇರುತ್ತವೆ. ಇದು ವಿಶೇಷರೂಪವಾಗಿರುತ್ತದೆ. ಆದರೆ ಸ್ಪೃಹೆ ಎಂದರೆ ಸಾಮಾನ್ಯವಾಗಿ ಆಸೆಯಿರುವದು; ವಿಶೇಷವಾಗಿ ಇಂಥವರದ್ದೇ ಆಗಬೇಕೆಂಬುದೇನೂ ಇಲ್ಲ. ಇದೂ ರಜಸ್ಸು ಎದ್ದುಕೊಂಡರೆ ಮಾತ್ರ ಕಾಣಿಸಿಕೊಳ್ಳುವದು. ಶ್ಲಾಘನೀಯವಾದ ಗುಣ, ಕೀರ್ತಿ, ತಿಳಿವಳಿಕೆ ಮುಂತಾದವುಗಳಲ್ಲಿರುವ ಆಶೆಯೂ ಸ್ಪೃಹೆಯೇ. ಆದರೆ ಅದು ಒಂದಿಷ್ಟು ಸತ್ತ್ವಗುಣದ ಕಾರ್ಯವೂ ಆಗಿರಬಹುದು.

ಈಗ ತಮಸ್ಸು ಎದ್ದುಕೊಂಡಾಗ ಆಗುವ ಕಾರ್ಯಗಳು ಯಾವವು? ಎಂದರೆ -

**ಅಪ್ರಕಾಶೋऽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯನ್ತೇ ವಿವೃದ್ಧೇ ಕುರುನನ್ದನ ॥ 14-13**

ಯಾವ ಪ್ರಕಾಶವೂ ಆಗದೆ, ಯಾವದೊಂದು ವಸ್ತುವಿನ ಅರಿವೂ ಉಂಟಾಗದೆ ಇರುವ ಅವಿವೇಕಸ್ಥಿತಿಯು ತಮಸ್ಸಿನ ಕಾರ್ಯವು. ಯಾವದೊಂದು ಕಾರ್ಯದಲ್ಲಿಯೂ ತೊಡಗದೆ ಇರುವ ಜಡತನವೂ ತಮಸ್ಸಿನ ಕಾರ್ಯವೇ. ಅಪ್ರಕಾಶ, ಅಪ್ರವೃತ್ತಿ - ಎಂಬಿವು ಬರಿಯ ಅಭಾವಗಳಲ್ಲ; ನಮ್ಮ ಅಂತಃಕರಣಕ್ಕೆ ಯಾವದೋ ಮಂಕು ಕವಿದುಕೊಂಡಂತೆ ಆಗಿ ವಿಷಯ ವಿವೇಕವಾಗುವದಕ್ಕೆ ಅಡ್ಡಿಯಾಗುವದನ್ನೂ ನಾವು ಯಾವ ಕರ್ಮದಲ್ಲಿ ತೊಡಗಬೇಕೆಂದರೂ ನಮ್ಮನ್ನು ಹಿಮ್ಮೆಟ್ಟಿಸುವ ಆಲಸ್ಯವನ್ನೂ ಈ ಶಬ್ದಗಳಿಂದ ಗ್ರಹಿಸಬೇಕು. ಏಕೆಂದರೆ ಅವುಗಳು

ನಮ್ಮನ್ನು ಆವರಿಸಿಕೊಂಡಾಗ ಪ್ರಮಾದವು ಎಂದರೆ ಅನವಧಾನವು, ಎಚ್ಚರಿಕೆ ತಪ್ಪುವದು, ಮತ್ತು ಮೋಹವು ಎಂದರೆ ತಪ್ಪುತಿಳಿವಳಿಕೆ - ಇವು ಉಂಟಾಗಿ ಅನರ್ಥವುಂಟಾಗುತ್ತದೆ. ಎಲ್ಲಕ್ಕಿಂತಲೂ ಮೊದಲು ತಮೋಗುಣದ ಕಾರ್ಯಗಳನ್ನು ಹಿಮ್ಮೆಟ್ಟಿಸಿಕೊಂಡರೆ ಆ ಬಳಿಕವೇ ಯಾವದಾದರೊಂದು ಸಾಧನೆಯಲ್ಲಿ ತೊಡಗುವದು ಸಾಧ್ಯವಾಗುತ್ತದೆ.

ಇಲ್ಲಿ ಹೇಳಿರುವ ಸತ್ತ್ವರಜಸ್ತಮೋಗುಣಗಳೆಂಬಿವು ಮುಖ್ಯವಾಗಿ ಅಂತಃಕರಣದ ವೃತ್ತಿಗಳೆಂಬುದನ್ನು ಲಕ್ಷಿಸಬೇಕು. ಸಾಂಖ್ಯಶಾಸ್ತ್ರದಲ್ಲಿ ಸತ್ತ್ವರಜಸ್ತಮೋಗುಣಗಳು ಸೇರಿ ಪ್ರಧಾನವಾಗಿರುವದೆಂದೂ ಜಗತ್ತೆಲ್ಲವೂ ಪ್ರಧಾನದ ಕಾರ್ಯವೇ ಆಗಿರುವದರಿಂದ ಯಾವದೊಂದು ವಸ್ತುವನ್ನು ತೆಗೆದುಕೊಂಡರೂ ಈ ಮೂರು ಗುಣಗಳಲ್ಲಿ ಒಂದೊಂದು ಅದರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಣಬರುವದೆಂದೂ ಹೇಳುತ್ತಾರೆ. ವೇದಾಂತಿಗಳು ಇವನ್ನು ವಿಶೇಷವಾಗಿ ಅಂತಃಕರಣಕ್ಕೇ ಅನ್ವಯಿಸಿಕೊಂಡಿರುತ್ತಾರೆ.

ಮನುಷ್ಯನ ಅಂತಃಕರಣದಲ್ಲಿ ಸತ್ತ್ವವಾಗಲಿ ರಜಸ್ಸಾಗಲಿ ತಮಸ್ಸಾಗಲಿ ಯಾವದಾದರೊಂದು ಗುಣವು ಒಂದೊಂದು ಕಾಲದಲ್ಲಿ ಹೆಚ್ಚಿಕೊಂಡಿರುತ್ತದೆ. ಇವುಗಳು ಎದ್ದುಕೊಂಡಿವೆ ಎಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ಇವುಗಳ ಹೆಗ್ಗುರುತುಗಳನ್ನು ಹೇಳಿದ್ದಾಗಿದೆ. ಈ ತಿಳಿವಳಿಕೆಯ ಪ್ರಯೋಜನವೇನೆಂದರೆ, ನಮ್ಮ ಅಂತಃಕರಣದ ವೃತ್ತಿಯು ನಮ್ಮ ವರ್ತನೆಗೆ ಕಾರಣವಾಗಿರುತ್ತದೆ; ನಮ್ಮ ವರ್ತನೆಯು ನಮ್ಮ ಮುಂದಿನ ಸಂನಿವೇಶದ ರೂಪಕ್ಕೆ ಹೊಣೆಯಾಗಿರುತ್ತದೆ. "ಮನಸ್ಸೇ ಬಂಧಮೋಕ್ಷಗಳಿಗೆ ಕಾರಣವು" ಎಂದು ಅಭಿಯುಕ್ತರ ವಚನವಿದೆ. ಈ ಜನ್ಮದಲ್ಲಿ ನಮ್ಮ ಮನಸ್ಸು ಮಾರ್ಪಟ್ಟಂತೆ ನಮ್ಮ ಸುತ್ತುವಳಯವೂ ಮಾರ್ಪಡುತ್ತಿರುತ್ತದೆ ಎಂಬುದಿಷ್ಟೇ ಅಲ್ಲ ; ಈ ಜನ್ಮದ ಅಂತವೇಳೆಯಲ್ಲಿ ನಮ್ಮ ಮನಸ್ಸಿನ ಸ್ಥಿತಿ ಹೇಗಿರುವದೋ ನಮಗೆ ಆಗುವ ಪರಗತಿಯೂ ಅದನ್ನು ಅವಲಂಬಿಸಿರುತ್ತದೆ. ಆದ್ದರಿಂದ ನಾವು ಈ ಜನ್ಮದ ಶರೀರವನ್ನು ಬಿಡುವ ವೇಳೆಯಲ್ಲಿ ನಮ್ಮ ಮನಸ್ಸಿನಲ್ಲಿ ಯಾವ ಗುಣದ ವೃತ್ತಿಯು ಎದ್ದುಕೊಂಡಿರುವದೆಂಬುದು ಬಹಳ ಮಹತ್ತ್ವದ ಸಂಗತಿಯೆಂದಾಯಿತು. ಆದ್ದರಿಂದಲೇ ಭಗವಂತನು ಹೀಗೆನ್ನುತ್ತಿದ್ದಾನೆ :

**ಯದಾ ಸತ್ತ್ವೇ ಪ್ರವೃದ್ಧೇತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥ 14-14**

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ 14-15**

ಸತ್ತ್ವವು ಹೆಚ್ಚಿಕೊಂಡಾಗ ಸತ್ತವನು ಉತ್ತಮವಾದ ಲೋಕಗಳನ್ನು ಪಡೆಯುತ್ತಾನೆ; ರಜಸ್ಸು ಹೆಚ್ಚಿಕೊಂಡಾಗ ಸತ್ತವನು ಮಧ್ಯಮತರವಾದ ಲೋಕವನ್ನು ಪಡೆಯುತ್ತಾನೆ; ತಮಸ್ಸು ಹೆಚ್ಚಿದಾಗ ಸತ್ತವನಿಗೆ ತಮಃಪ್ರಧಾನವಾದ ಲೋಕಗಳೇ ಗತಿಯಾಗುತ್ತವೆ. ಸತ್ತಬಳಿಕ

ಪರಲೋಕದಲ್ಲಿ ಆಗುವ ಸುಖದುಃಖಮೋಹಗಳು ಮಾತ್ರವೇ ಈ ಗುಣಗಳಿಂದಾಗುವ ಕಾರ್ಯವಲ್ಲ ; ಮುಂದಿನ ಜನ್ಮಪ್ರಾಪ್ತಿಯೂ ಈ ಗುಣಗಳ ಪ್ರಾದುರ್ಭಾವವನ್ನೇ ಅವಲಂಬಿಸಿಕೊಂಡಿರುತ್ತದೆ. ಕೆಲವರು ಬಾಲ್ಯದಿಂದಲೂ ಸಾತ್ತ್ವಿಕಸ್ವಭಾವದವರಾಗಿಯೂ ಮತ್ತೆ ಕೆಲವರು ಅತಿಚಾಪಲ್ಯಸ್ವಭಾವದವರಾಗಿಯೂ ಇನ್ನೂ ಕೆಲವರು ಅಲಸರಾಗಿಯೂ ಕಾಣಿಸಿಕೊಳ್ಳುವದನ್ನು ನಾವು ನೋಡಿದ್ದೇವೆ. ಇದಕ್ಕೆ ಅವರು ಹಿಂದಿನ ಜನ್ಮದಲ್ಲಿ ಆಯಾ ಗುಣದ ಉತ್ಕರ್ಷವನ್ನು ಪಡೆದಿದ್ದರೆಂಬುದೊಂದು ಮುಖ್ಯಕಾರಣವಾಗಿರುತ್ತದೆ. ಪ್ರಾಣಿಗಳಲ್ಲಿ ಕೆಲವು ಸತ್ತ್ವಪ್ರಧಾನವಾಗಿ, ಇನ್ನು ಕೆಲವು ರಜಃಪ್ರಧಾನವಾಗಿ, ಮತ್ತೆ ಕೆಲವು ತಮಃ ಪ್ರಧಾನವಾಗಿರುವವೆಂಬುದು ನಮಗೆ ಸ್ಫುಟವಾಗಿ ಕಾಣುತ್ತಿರುವದಷ್ಟೆ ; ಇದಕ್ಕೂ ಹಿಂದಿನ ಜನ್ಮದ ಕರ್ಮದ ವಿಪಾಕವು ಕಾರಣವೆಂದೇ ವೈದಿಕಧರ್ಮದ ಅವಲಂಬಿಗಳು ನಂಬಿರುತ್ತಾರೆ. ಕರ್ಮವು ಮನಸ್ಸಿನ ಸ್ಥಿತಿಯನ್ನು ಅವಲಂಬಿಸಿರುವದರಿಂದಲೂ ಮನಸ್ಸಿನ ಸ್ಥಿತಿಯು ಸತ್ತ್ವರಜಸ್ತಮೋಗುಣಗಳ ಉದ್ರೇಕವನ್ನವಲಂಬಿಸಿರುವದರಿಂದಲೂ ಗುಣತ್ರಯದ ಪರಿಣಾಮವು ನಮ್ಮ ಜೀವನದಮೇಲೆ ಎಲ್ಲಿಯವರೆಗೆ ಆಗುವದೆಂಬುದು ನಮ್ಮ ಮನಸ್ಸಿಗೆ ನಾಟಬಹುದಾಗಿದೆ. ಸತ್ತ್ವರಜಸ್ತಮೋಗುಣಗಳಲ್ಲಿ ಮೆಲ್ಲಮೆಲ್ಲನೆ ಮಿಕ್ಕೆರಡು ಗುಣಗಳನ್ನು ಗೆದ್ದುಕೊಂಡು ಸತ್ತ್ವಗುಣವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಮಾಡುವದೂ ಎಷ್ಟು ಅವಶ್ಯವೆಂಬುದೂ ಇದರಿಂದ ಮನದಟ್ಟಾಗುತ್ತದೆ.



## ೧೩೨. ಗುಣತ್ರಯವನ್ನು ಮೀರಬಹುದೆ? 14-(16-19)

(19-6-49)

ಅಧ್ಯಾತ್ಮಶಾಸ್ತ್ರದ ಗ್ರಂಥಗಳಲ್ಲಿ ಮೊದಲು ಸಂಗ್ರಹವಾಗಿ ಉಪದೇಶವನ್ನು ಮಾಡಿ ಅದನ್ನು ವಿಸ್ತರಿಸಿ ತಿಳಿಸಿದ ಬಳಿಕ ಮತ್ತೆ ಸಂಕ್ಷೇಪದಿಂದ ಉಪಸಂಹಾರಮಾಡುವ ಒಂದು ವಿಶೇಷಪದ್ಧತಿಯುಂಟು. ಆ ಪದ್ಧತಿಯನ್ನು ಇಲ್ಲಿ ಅವಲಂಬಿಸಿರುತ್ತದೆ. ಈವರೆಗೆ ಹೇಳಿದ್ದರ ಸಂಗ್ರಹವೇನೆಂದರೆ ಸತ್ತ್ವದಿಂದ ಜ್ಞಾನವೂ ರಜಸ್ಸಿನಿಂದ ಲೋಭವೂ ತಮಸ್ಸಿನಿಂದ ಪ್ರಮಾದಮೋಹಗಳೂ ಉಂಟಾಗುತ್ತವೆ. ಸತ್ತ್ವದಿಂದ ಊರ್ಧ್ವಗತಿಯೂ ರಜಸ್ಸಿನಿಂದ ನಡುವಿನ ಗತಿಯೂ ತಮಸ್ಸಿನಿಂದ ಅಧೋಗತಿಯೂ ಫಲಿಸುವವು. ಆದ್ದರಿಂದ ವಿವೇಕಿಯಾದವನು ಸತ್ತ್ವಗುಣವನ್ನು ಹೆಚ್ಚಿಸಿಕೊಳ್ಳಬೇಕು ಎಂದು ಹೇಳಿದ್ದಾಯಿತು.

ಈ ಗುಣಗಳ ವರ್ಣನೆಯು ಬಹಳ ಸ್ಥೂಲವಾಗಿ ಹೇಳಿದ್ದೆಂಬುದನ್ನು ಮರೆಯಬಾರದು. ಇದು ಸತ್ತ್ವವು, ಇದು ರಜಸ್ಸು, ಇದು ತಮಸ್ಸು ಎಂದು ಬೆಟ್ಟಿಟ್ಟುತೋರಿಸುವದಕ್ಕೆ

ಆಗುವದಿಲ್ಲ, ಏಕೆಂದರೆ ಯಾವ ಗುಣವು ಎಷ್ಟೇ ಪ್ರಬಲವಾಗಿದ್ದರೂ ಒಂದೊಂದರಲ್ಲಿಯೂ ಮಿಕ್ಕೆರಡೂ ಬೇರೆಬೇರೆಯ ಪ್ರಮಾಣಗಳಲ್ಲಿ ಬೆರಕೆಯಾಗಿರುತ್ತವೆ. ಇಂಥ ಮಿಶ್ರಣಗಳಿಂದ ಒಂದೊಂದು ಕ್ಷಣದಲ್ಲಿಯೂ ನಮ್ಮ ಅಂತಃಕರಣದಲ್ಲಿ ಬೇರೆ ಬೇರೆಯ ಪರಿಣಾಮವಾಗುತ್ತಿರುವದು. ಆ ಪರಿಣಾಮದಿಂದ ನಮ್ಮ ಪ್ರವೃತ್ತಿಯೂ ರೂಪಾಂತರವನ್ನು ಪಡೆಯುತ್ತಲೇ ಇರುತ್ತದೆ. ನಮ್ಮ ಸುತ್ತಲೂ ಇರುವ ಜನರನ್ನು ನೋಡಿದರೆ ಯಾರೊಬ್ಬರೂ ಮತ್ತೊಬ್ಬರಂತೆ ಇರುವದಿಲ್ಲ. ಇದಕ್ಕೆ ಕಾರಣವೇನು? - ಎಂದರೆ ಒಬ್ಬೊಬ್ಬರ ಸ್ವಭಾವದಲ್ಲಿರುವ ಗುಣಮಿಶ್ರಣವು ಒಂದೊಂದು ಬಗೆಯಾಗಿರುವದೇ ಕಾರಣವು. ಮೂರು ಬಣ್ಣಗಳನ್ನು ಬೇರಬೇರೆಯ ಪ್ರಮಾಣದಿಂದ ಮಿಶ್ರಣಮಾಡಿದರೆ ಆಗುವ ಬಣ್ಣಗಳ ಒಳಭೇದಗಳು ಇಂತಿಷ್ಟೆಂದು ಹೇಳಲು ಬರುವದಿಲ್ಲ; ಹಾಗೆಯೇ ಗುಣಗಳ ಕಲೆಬೆರಕೆಯಿಂದಾದ ಸ್ವಭಾವವಿಶೇಷಗಳನ್ನು ಸಂಖ್ಯೆಯಿಂದಲಾಗಲಿ ಸ್ವರೂಪದಿಂದಲಾಗಲಿ ನಿರ್ಧರಿಸಲಾಗುವದಿಲ್ಲ. ನಾವು ಉತ್ತಮ, ಮಧ್ಯಮ, ಅಧಮ - ಎಂದು ಪದಾರ್ಥಗಳನ್ನು ವಿಂಗಡಿಸುತ್ತಿರುವದೂ ಸಾಪೇಕ್ಷವೇ. ಯಾವದೊಂದು ವಸ್ತುವೂ ಇಂಥ ರೂಪದ್ದೆಂದು ಹೇಳಲಾಗುವದಿಲ್ಲ; ಏಕೆಂದರೆ ಒಂದು ದೃಷ್ಟಿಯಿಂದ ಉತ್ತಮವೆನಿಸಿರುವದು ಮತ್ತೊಂದು ದೃಷ್ಟಿಯಿಂದ ಕೆಟ್ಟದ್ದಾಗಿರಬಹುದು. ಈ ಗುಣಗಳ ಪ್ರಭಾವದಿಂದ ನಮ್ಮ ಮೇಲೆ ಆಗುವ ಒಂದೊಂದು ಪರಿಣಾಮವನ್ನೂ ನಾವು ಕಾಗದದ ಮೇಲೆ ಒಂದೊಂದು ಚುಕ್ಕೆಯಿಂದ ಗುರುತಿಸುತ್ತಾ ಹೋದರೆ ಆ ಕಾಗದವೆಲ್ಲ ಬಲುಬೇಗನೆ ಚುಕ್ಕೆಗಳ ರಾಶೆಯಾಗಿಬಿಡುತ್ತದೆ. ಒಬ್ಬ ಚಿತ್ರಗಾರನು ಒಂದು ಚಿತ್ರವನ್ನು ಬರೆದು `ಇದರಲ್ಲಿರುವ ದೋಷವನ್ನು ಕೆಳಗೆ ಗುರುತುಮಾಡಿರಿ' ಎಂದು ಜನರನ್ನು ಲೇಖನಮೂಲಕವಾಗಿ ಬಿನ್ನವಿಸಿಕೊಂಡನಂತೆ. ಅವನು ಬೆಳಗ್ಗೆ ಚಿತ್ರವನ್ನು ಒಂದು ಕಡೆಯಿಟ್ಟು ಸಾಯಂಕಾಲಕ್ಕೆ ಬಂದು ಅದನ್ನು ತೆಗೆದುಕೊಂಡು ಹೋಗುವದರೊಳಗೆ ಜನರಲ್ಲಿ ಒಬ್ಬೊಬ್ಬರೂ ಒಂದೊಂದು ದೋಷವನ್ನು ತಿದ್ದುವ ಸೂಚನೆಯನ್ನು ಗುರುತಿಸಿ ಚಿತ್ರವನ್ನೆಲ್ಲ ಹೊಲಸುಮಾಡಿಬಿಟ್ಟಿದ್ದರಂತೆ. ಅವನೇ ಅದರ ಮತ್ತೊಂದು ಪ್ರತಿಯನ್ನು ಇನ್ನೊಂದು ಕಡೆ ಇಟ್ಟು "ಇದರಲ್ಲಿರುವ ಗುಣಗಳನ್ನು ಗುರುತುಮಾಡಿ" ಎಂದು ಬರಹದ ಮೂಲಕ ಕೇಳಿಕೊಂಡನಂತೆ; ಆ ಚಿತ್ರವೂ ಗುಣಗಳನ್ನು ಶ್ಲಾಘಿಸುವ ಗೀಟುಗಳಿಂದ ತುಂಬಿಹೋಗಿತ್ತಂತೆ! ಹೀಗಿದೆ ಗುಣಗಳ ಸೂಕ್ಷ್ಮ ಪರಿಣಾಮ!

ಆದ್ದರಿಂದ ಇಲ್ಲಿ ಕೊಟ್ಟಿರುವ ಸ್ಥೂಲವರ್ಣನೆಯಿಂದ ನಾವು ಸತ್ತ್ವಗುಣದವರೆಂದುಕೊಂಡು ಅಷ್ಟರಿಂದ ತೃಪ್ತರಾಗಬಾರದು. ನಾನು ಪಡೆಯುವದನ್ನೆಲ್ಲ ಪಡೆದುಕೊಂಡಿದ್ದೇನೆ, ಮುಂದಕ್ಕೆ ನನಗೆ ಆಗಬೇಕಾದದ್ದೇನೂ ಇಲ್ಲ - ಎಂಬ ಹೆಮ್ಮೆಯು ರಾಜಸವಾದೀತೇ ಹೊರತು ಸಾತ್ತ್ವಿಕವಾಗಲಾರದು. ಇದಂತಿರಲಿ. ಗುಣಗಳಲ್ಲಿ ತಮಸ್ಸು, ರಜಸ್ಸು, ಸತ್ತ್ವ - ಹೀಗೆ ಮೆಟ್ಟಿಲುಮೆಟ್ಟಿಲಾಗಿ ಮೇಲುಮೇಲಕ್ಕೆ ಏರಿದರೂ ನಾವು ಕೊನೆಯ ಮಜಲನ್ನು ಮುಟ್ಟಿದಂತೆ ಆಗುವದಿಲ್ಲ. ಏಕೆಂದರೆ ಗುಣಗಳ ವರ್ಣನೆಯನ್ನು

ಭಗವದ್ಗೀತೆಯಲ್ಲಿ ವರ್ಣಿಸಿರುವದು ಅವುಗಳು ನಮ್ಮ ಸ್ವರೂಪಕ್ಕೆ ಸೇರಿಕೊಂಡೇ ಇರುತ್ತವೆ ಎಂಬುದನ್ನು ತಿಳಿಸುವದಕ್ಕಲ್ಲ. ಮತ್ತೇತಕ್ಕೆಂದರೆ ಪ್ರಕೃತಿಸ್ಥತ್ವನಾಗಿರುವದೆಂಬ ಮಿಥ್ಯಾಜ್ಞಾನದಿಂದ ಗುಣಗಳಲ್ಲಿ ನಮಗೆ ಕಾಮವೆಂಬ ಸಂಗವುಂಟಾಗಿರುತ್ತದೆ; ಆ ಗುಣಸಂಗವೇ ನಮಗೆ ಬಗೆಬಗೆಯ ಜನ್ಮಗಳುಂಟಾಗುವದಕ್ಕೆ ಕಾರಣವಾಗಿದೆ. ಆದ್ದರಿಂದ ನಾವು ಹೇಗಾದರೂ ಮಾಡಿ ಗುಣಗಳ ಸಂಗವನ್ನು ದಾಟಬೇಕು ಎಂದು ತಿಳಿಸುವದಕ್ಕಾಗಿ ಮಿಥ್ಯಾಜ್ಞಾನದಿಂದ ಆಗಿರುವ ಬಂಧವನ್ನು ಸ್ಪಷ್ಟಪಡಿಸುವದಕ್ಕೆ ಹೊರಟಿದೆ. ಇಲ್ಲಿಯವರೆಗೆ ಗುಣಗಳ ಸ್ವರೂಪವೇನು, ಗುಣಗಳ ಸ್ವಭಾವವೇನು? ಗುಣಗಳು ಹೇಗೆ ಪುರುಷನಿಗೆ ಬಂಧಕವಾಗಿರುತ್ತವೆ? ಹಾಗೆ ಗುಣಗಳಿಂದ ಬದ್ಧನಾದವನಿಗೆ ಯಾವ ಗತಿಯಾಗುತ್ತದೆ? - ಎಂಬೀ ಮಿಥ್ಯಾಜ್ಞಾನದ ಕಾರ್ಯವನ್ನೆಲ್ಲ ವಿಸ್ತಾರವಾಗಿ ವರ್ಣಿಸಿದ್ದಾಯಿತು. ಈಗ ಸಮ್ಯಗ್ಜ್ಞಾನವನ್ನು ತಿಳಿಸಬೇಕು; ಆ ಜ್ಞಾನದಿಂದ ಆಗುವ ಮುಕ್ತಿಯನ್ನು ತಿಳಿಸಬೇಕು. ಆದ್ದರಿಂದ ಈ ಗುಣಗಳಿಂದ ಕೊಡವಿಕೊಳ್ಳುವದಕ್ಕೆ ಉಪಾಯವನ್ನು ಹೇಳುವೆನೆಂದು ಭಗವಂತನು ಹೊರಟಿರುತ್ತಾನೆ.

ಗುಣಗಳಿಂದ ಬದ್ಧನಾಗಿರುವವನಿಗೆ ಈ ಗುಣಗಳು ಹೇಗೆ ತೋರುತ್ತಿರುತ್ತವೆ ? - ಎಂಬಿದನ್ನು ತಿಳಿದುಕೊಳ್ಳುವದು ಗುಣಗಳನ್ನು ಮೀರಬೇಕೆನ್ನುವ ಸಾಧಕನಿಗೆ ಬೇಕಾದ ಉಪಾಯವನ್ನು ತೋರಿಸಿಕೊಡುತ್ತದೆ. ಗುಣಗಳು ತಮ್ಮ ರೂಪದಲ್ಲಂತೂ ನಮಗೆ ತಿಳಿಯಬರುವದಿಲ್ಲ. ಹೊರಗಿನ ವಿಷಯಗಳೂ ಒಳಗಿನ ಅಂತಃಕರಣವೃತ್ತಿಗಳೂ ಗುಣಗಳ ಕಾರ್ಯವೇ ಎಂಬುದು ಸಾಂಖ್ಯರ ದೃಷ್ಟಿ ಎಂದು ಆಗಲೇ ತಿಳಿಸಿದೆಯಷ್ಟೆ. ಆ ದೃಷ್ಟಿಯಿಂದ ನೋಡಿದಾಗ ಹೊರಗಿನ ಗುಣಗಳು ನಮಗಿಂತ ಬೇರೆ ಎಂದು ತಿಳಿಯುವದು ಬಹಳ ಸುಲಭವಾಗಿರಬೇಕು ; ಆದರೆ ಪ್ರಾಕೃತರು ಅವನ್ನುಕೂಡ ತಾವೇ ಎಂಬಂತೆ ಅವುಗಳಲ್ಲಿ ತಾದಾತ್ಮ್ಯವನ್ನು ಹೊಂದಿಬಿಟ್ಟಿರುತ್ತಾರೆ. ಹೆಂಡತಿ, ಮಗ, ಹೊಲ, ಹಣ ಮುಂತಾದವುಗಳಲ್ಲಿ ನಾನು, ನನ್ನದು - ಎಂಬ ಬುದ್ಧಿಯನ್ನು ಇಡುವದೇ ಅವರಿಗೆ ಸ್ವಾಭಾವಿಕವಾಗಿರುತ್ತದೆ. ವಿವೇಚನೆಮಾಡಿಕೊಂಡು ತಿಳಿದುಕೊಂಡ ಮೇಲೂ ಮತ್ತೆ ಮತ್ತೆ ಆ ವಿಷಯಗಳು ತಮ್ಮ ಪ್ರಭಾವವನ್ನು ಈ ಅಜ್ಞರ ಮೇಲೆ ಬೀರುತ್ತಲೇ ಇರುವವು. ಕಲ್ಲುಸಕ್ಕರೆಯಂಥ ಬಿಳಿಯ ಪದಾರ್ಥವು ಮತ್ತೊಂದಾಗಿರುವಾಗಲೂ ಅದು ಕಲ್ಲುಸಕ್ಕರೆಯೆಂಬ ಭ್ರಾಂತಿಯಿಂದ ಬಾಯಿನೀರು ಕರೆಯಿಸುವ ಮಕ್ಕಳಂತೆ ಸಾಮಾನ್ಯಜನರು ವಿಷಯಗಳ ಮೋಹಕ್ಕೆ ಒಳಗಾಗುತ್ತಲೇ ಇರುತ್ತಾರೆ. ಇದಕ್ಕೆ ಕಾರಣವೇನೆಂದರೆ ಹೊರಗಿನ ಗುಣಗಳಿಗಿಂತಲೂ ಒಳಗಿರುವ ಇಂದ್ರಿಯಗಳೂ ಮನಸ್ಸೂ ಅವುಗಳ ವೃತ್ತಿಗಳೂ ಗುಣಗಳ ವಿಕಾರಗಳೇ ಆಗಿರುವದರಿಂದ ಗುಣಗಳೇ ಹೊರತು ಬೇರೆಯಲ್ಲ ಎಂಬ ವಿವೇಕವು ಎಲ್ಲಿಯೋ ಕೆಲವು ಜನರಿಗೆ ಮಾತ್ರ ಉಂಟಾಗಿರುತ್ತದೆ. ಒಳಗಿನ ಗುಣಗಳನ್ನೆಲ್ಲ ನಾನು ಎಂದು ತಿಳಿಯುವದೇ ಸಾಮಾನ್ಯರಿಗೆ ನೈಸರ್ಗಿಕವಾಗಿರುತ್ತದೆ. ಸಿಟ್ಟು ಬಂದಾಗ ತಾವೇ ಆ ಸಿಟ್ಟಾಗಿಬಿಟ್ಟಂತೆ ಅವರು ತಿಳಿದುಕೊಳ್ಳುತ್ತಾರೆ; ಕಾಮಪ್ರಾಪ್ತಿಯಾದಾಗ ತಾವೇ ಆ ಕಾಮವಾಗಿರುವಂತೆ

ತಿಳಿದುಕೊಳ್ಳುತ್ತಾರೆ. ಅಂತಃಕರಣಧರ್ಮಗಳೆಂದು ಅವರು ಸಾಮಾನ್ಯವಾಗಿ ವ್ಯವಹರಿಸುವ ಭಾವಗಳು ಯಾವವೂ ಅವರಿಗೆ ತಮ್ಮ ಸ್ವಭಾವಕ್ಕಿಂತ ಬೇರ್ಪಟ್ಟಿರುವದಿಲ್ಲ. ಇದೇ ಪ್ರಕೃತಿಸ್ಥತ್ವವು, ಇದೇ ಗುಣಸಂಗವು.

ಆದರೆ ನಿಜವಾಗಿ ವಿವೇಕಿಯಾಗಿರುವವನ ದೃಷ್ಟಿ ಹೇಗಿರುವದು? ಅವನು ಗುಣಗಳಿಗಿಂತ ಯಾವಾಗಲೂ ಹೊರಚ್ಚಾಗಿರುತ್ತಾನೆ. ಹೊರಗಿರಲಿ ಒಳಗಿರಲಿ, ಗುಣಗಳು ಗುಣಗಳೇ; ಅವು ನಮ್ಮ ಸ್ವರೂಪವಲ್ಲ, ನಮ್ಮ ಸ್ವರೂಪಕ್ಕೆ ಸಂಬಂಧಪಟ್ಟವೂ ಅಲ್ಲ. ಹೀಗಿರುವಲ್ಲಿ ನಾನು, ನನ್ನದು - ಎಂದು ಯಾವದನ್ನು ವ್ಯವಹರಿಸುವದು? ಆಧ್ಯಾತ್ಮಿಕಗುಣವು ಆಧಿಭೌತಿಕಗುಣವನ್ನು ಮಾತನಾಡಿಸುವದೇ ವ್ಯವಹಾರವು; ಶ್ರೋತ್ರವು ಶಬ್ದದಲ್ಲಿ, ನೇತ್ರವು ರೂಪದಲ್ಲಿ, ತ್ವಕ್ಕು ಸ್ಪರ್ಶದಲ್ಲಿ, ಜಿಹ್ವೆಯು ರಸದಲ್ಲಿ, ಘ್ರಾಣವು ಗಂಧದಲ್ಲಿ ವರ್ತಿಸುತ್ತಿರುವದು ; ವಾಕ್ಪಾಣಿಪಾದಾದಿಗಳು ತಮ್ಮ ತಮ್ಮ ಕೆಲಸವನ್ನು ತಮ್ಮ ತಮ್ಮ ಕ್ಷೇತ್ರದಲ್ಲಿ ಮಾಡುತ್ತಿರುವದನ್ನು ಜ್ಞಾನಿಯಾದವನು `ಗುಣಗಳು ಗುಣಗಳಲ್ಲಿ ವರ್ತಿಸಿದರೆ ನನಗೇನಾಯಿತು?' ಎಂದು ಅವುಗಳಲ್ಲಿ ಸಕ್ತನಾಗದೆ ಇರುತ್ತಾನೆ. ವಿಷಯರೂಪವಾದ ಗುಣವು ಇಂದ್ರಿಯರೂಪವಾದ ಗುಣದಲ್ಲಿ ವಿಕಾರವನ್ನುಂಟುಮಾಡಿದರೆ, ಇಂದ್ರಿಯರೂಪವಾದ ಗುಣವು ವಿಷಯರೂಪವಾದ ಗುಣದ ಮೇಲೆ ಎರಗಿದರೆ, ಅಥವಾ ಅದರಿಂದ ಅತ್ತಸರಿದರೆ, ನನಗೇನು ? ಇಂದ್ರಿಯಗಳಿಗೆ ಇಂದ್ರಿಯಾರ್ಥಗಳಲ್ಲಿ ರಾಗದ್ವೇಷಗಳು ವ್ಯವಸ್ಥಿತವಾಗಿರುವವು; ವಿವೇಕಿಯಾದವನು ಅವೆರಡಕ್ಕೂ ವಶನಾಗಬಾರದು.

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ 14-19**

ಸರಿಯಾಗಿ ನೋಡಿದರೆ ಗುಣಗಳಿಗಿಂತ ಬೇರೆ ಕರ್ತೃವೇ ಇಲ್ಲ. ಏಕೆಂದರೆ ಒಂದು ಪದಾರ್ಥದಲ್ಲಿ ಆಗುವ ವಿಕಾರವೇ ಕ್ರಿಯೆ ; ಅದಕ್ಕೆ ಆಶ್ರಯವಾಗಿರುವದೇ ಅದಕ್ಕೆ ಕರ್ತೃ, ಅದರ ಫಲವನ್ನು ಅನುಭವಿಸುವದೇ ಭೋಕ್ತೃ. ಯಾವನು ಕರ್ತೃವೋ ಅವನೇ ಭೋಕ್ತೃವಾಗುತ್ತಾನೆ. ಆದ್ದರಿಂದ ಭೋಕ್ತೃತ್ವವೂ ಕರ್ತೃತ್ವದಂತೆ ಜ್ಞೇಯವೇ ; ಆದ್ದರಿಂದ ಅದು ನಮ್ಮ ಸ್ವರೂಪವಲ್ಲ. ಹಿಂದೆ ಕ್ಷೇತ್ರ ಎಂದು ಕರೆದಿದ್ದನ್ನೇ ಇಲ್ಲಿ ಗುಣ ಎಂದಿದೆ. ಒಳಗಿನ ಗುಣಗಳು ಹೋಗಿ ಹೊರಗಿನ ಗುಣಗಳನ್ನು ಮುಟ್ಟಲು ಒಂದು ವಿಕ್ರಿಯೆಯಾಗುತ್ತದೆ: ಹಾಗೆ ಆಯಾ ವಿಷಯವನ್ನು ಮುಟ್ಟುವದೇ ಕ್ರಿಯೆ, ಅದರಿಂದಾದ ವಿಕಾರವೇ ಭೋಕ್ತೃತ್ವ. ಹೀಗೆ ವಿಷಯದ ಮೇಲೆ ಒಳಗಿನ ಇಂದ್ರಿಯರೂಪವಾದ ಗುಣವು ಬೀಳುವಾಗ ಅದರಿಂದಾದ ಫಲವನ್ನು ಅನುಭವಿಸುವಾಗ, ಮತ್ತು ಅದು ಕಾಣದಂತೆ ಆದಾಗ - ಇದೆಲ್ಲವನ್ನೂ ಯಾವ ವಿಕಾರವೂ ಇಲ್ಲದೆ ನೋಡುತ್ತಿರುವವನೇ ಕ್ಷೇತ್ರಜ್ಞನು. ಒಂದು ನಗರದ ಫೋಟೋ ತೆಗೆಯುವವನು ಪಟ್ಟಣಕ್ಕಿಂತ ಬಹಳ ಮೇಲಿರುವ ಸ್ಥಳದಲ್ಲಿ ನಿಂತು ಆ ನಗರದ

ಭಾವಚಿತ್ರವನ್ನು ತೆಗೆದುಕೊಳ್ಳುವಹಾಗೆ ಗುಣಗಳ ಸ್ವಭಾವವನ್ನೂ ವಿಕ್ರಿಯೆಯನ್ನೂ ನೋಡಬೇಕೆನ್ನುವವನು ಅವುಗಳಿಗಿಂತ ಮೇಲೆ ನಿಂತು, ಈ ಗುಣಗಳ ಸಂತೆಯಲ್ಲಿ ತಾನು ಸೇರಿಕೊಳ್ಳದೆ ಅವಕ್ಕೆಲ್ಲ ಹೊರಚ್ಚಾಗಿ ನೋಡಬೇಕು. `ಪ್ರಜ್ಞಾಪ್ರಾಸಾದಮಾರುಹ್ಯ ಅಶೋಚ್ಯಃ ಶೋಚತೇ ಜನಾನ್ । ಜಗತೀಸ್ಥಾನಿವಾದ್ರಿಸ್ಥಃ ಪ್ರಜ್ಞಯಾ ಪ್ರತಿಪತ್ಸ್ಯತೇ' ಎಂಬ ಭಾರತವಚನದಂತೆ ಗುಣಗಳೆಲ್ಲವನ್ನೂ ಮೇಲಿದ್ದುಕೊಂಡು ಸಾಕ್ಷಿಯಾಗಿ ನೋಡಬೇಕು ; ಆಗ ಗುಣಗಳು ಗುಣಗಳಾಗಿ ಕಾಣಬರುವವು ; ಗುಣಗಳಲ್ಲಿಯೇ ಅವಿದ್ಯೆಯಿಂದ ತಾದಾತ್ಮ್ಯಭಾವವನ್ನು ಹೊಂದಿ ಕುಳಿತಿರುವವನಿಗೆ ಹೇಗೆತಾನೆ ಪ್ರಕೃತಿಯೇ ನಿಜವಾಗಿ ಕರ್ತೃವೆಂದು ತಿಳಿದೀತು ?

ಗುಣಗಳೇ ಕರ್ತೃವೆಂದು ಯಾವನು ತಿಳಿದುಕೊಳ್ಳುತ್ತಾನೋ ಅವನು ಅಸಂಗನಾದ ಆತ್ಮನಸ್ವರೂಪದಲ್ಲಿ ನಿಂತಿರುತ್ತಾನೆ. ಆದ್ದರಿಂದ ಆಗ ಅವನು ಗುಣಗಳಿಗಿಂತ ಆಚೆಯಿರುವ ಪರಮಾತ್ಮಸ್ವರೂಪವನ್ನು ಅರಿತುಕೊಂಡು ಆ ಸ್ವರೂಪವನ್ನೇ ಪಡೆದುಕೊಂಡುಬಿಡುತ್ತಾನೆ. ಯಾವನು ಹೀಗೆ ಮೂರು ಗುಣಗಳನ್ನೂ ಮೀರುತ್ತಾನೋ, ಅವನು ದೇಹಕ್ಕೆ ಸಂಬಂಧಪಟ್ಟವನಾಗಿರುವದಿಲ್ಲ. ಆಗ ಅವನು ಪರಮಾತ್ಮನೇ ಆಗಿರುತ್ತಾನೆ. ಈ ದೃಷ್ಟಿಯಿಂದಲೇ ಕ್ಷೇತ್ರಗಳಲ್ಲಿರುವ ಕ್ಷೇತ್ರಜ್ಞರೆಲ್ಲರೂ ಪರಮಾತ್ಮನೇ ಎಂದು ಹಿಂದೆ ಹದಿಮೂರನೆಯ ಅಧ್ಯಾಯದಲ್ಲಿ ಹೇಳಿರುವದು. ಈ ಅಭಿಪ್ರಾಯದಿಂದಲೇ ಭಾರತದಲ್ಲಿ ಒಂದು ಕಡೆ ಹೀಗೆಂದು ಹೇಳಿದೆ. "ಆತ್ಮಾ ಕ್ಷೇತ್ರಜ್ಞ ಇತ್ಯುಕ್ತಃ ಸಂಯುಕ್ತಃ ಪ್ರಾಕೃತೈರ್ಗುಣೈಃ ತೈರೇವ ತು ವಿನಿರ್ಮುಕ್ತಃ ಪರಮಾತ್ಮೇತ್ಯುದಾಹೃತಃ॥' ಉಪಾಧಿಗಳೆಂಬ ತಂಬಿಗೆಯಲ್ಲಿ ತುಂಬಿ ಅರಗಿನ ಮೊಹರುಮಾಡಿದಾಗ ಪರಮಾತ್ಮಗಂಗೆಯು ಜೀವರೆಂಬ ಬೇರೆಬೇರೆಯ ಭಾಗಗಳಾಗುವದು. ನಿಜವಾಗಿ ನೋಡಿದರೆ ಆಗಲೂ ಗಂಗೆಯು ಗಂಗೆಯೇ ಆದರೂ ಉಪಾಧಿಗಳ ಸಂಬಂಧದಿಂದ ಅದು ಬೇರೆಬೇರೆಯಾಗಿರುವದೆಂಬ ವ್ಯವಹಾರವುಂಟಾಗುತ್ತದೆ. ಉಪಾಧಿಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಇದ್ದರೆ ಅದೆಲ್ಲ ಗಂಗೆಯೇ; ಹೀಗೆಯೇ ನಿರುಪಾಧಿಕನಾದ ಪರಮಾತ್ಮನು ಒಬ್ಬನೇ, ಆತನೇ ನಾವೆಲ್ಲರೂ ಆಗಿರುವೆವು. ಉಪಾಧಿ ವಿಶಿಷ್ಟರಾದವರನ್ನು ಒಂದೆಂದು ಎಣಿಸುವದಕ್ಕೆ ಬರುವದಿಲ್ಲ. ಈ ಗುಟ್ಟನ್ನು ಅರಿತುಕೊಳ್ಳದೆ ಶಾಸ್ತ್ರದಲ್ಲಿ `ನಾವೆಲ್ಲರೂ ಒಂದೇ' ಎಂದು ಬರೆದಿದೆ - ಎಂದು ಜನರು ಆಗಾಗ್ಗೆ ಘೋಷಿಸುವರು; ಆಗ ಉಪಾಧಿಯ ಸಂಬಂಧವಿಲ್ಲದ ಪರಮಾರ್ಥದ ದೃಷ್ಟಿಯಿಂದ ಹಾಗೆಂದು ಹೇಳಿದೆ ಎಂಬುದನ್ನು ಅವರು ಮನಸ್ಸಿಗೆ ತಂದುಕೊಳ್ಳದೆ ಇರುತ್ತಾರೆ. ಉಪಾಧಿಗಳಿರುವಾಗ ಜೀವರುಗಳಲ್ಲಿ ತಾರತಮ್ಯವನ್ನು ಅಳಿಸುವದಕ್ಕೆ ಆಗುವದಿಲ್ಲ. ಉಪಾಧಿಗಳನ್ನು ಕಳೆದಾಗ ತಾರತಮ್ಯವನ್ನು ಕಲ್ಪಿಸುವದೂ ಆಗುವದಿಲ್ಲ. ಈ ದೃಷ್ಟಿಯಿಂದಲೇ ಇಲ್ಲಿ ಗುಣಗಳಿಗಿಂತಲೂ ಆಚೆಯಿರುವ ಸ್ವರೂಪವನ್ನು ಕಂಡುಕೊಂಡವನು ನನ್ನ ಭಾವವನ್ನೇ ಪಡೆದುಕೊಳ್ಳುತ್ತಾನೆ ಎಂದು ಭಗವಂತನು ಅಂದಿರುತ್ತಾನೆ.

ಗುಣಗಳಿಂದ ಕೂಡಿರುವಾಗ ಜೀವನು, ಗುಣಗಳನ್ನು ಮೀರಿದಾಗ ಪರಮಾತ್ಮನು - ಎಂಬ ಮಾತನ್ನು ತತ್ತ್ವದೃಷ್ಟಿಯಿಂದ ಸರಿಯಾಗಿ ತಿಳಿದುಕೊಳ್ಳುವದು ಅವಶ್ಯವಾಗಿದೆ. ಏಕೆಂದರೆ ಈಗ ನಮಗೆ ಗುಣಗಳ ತಾದಾತ್ಮ್ಯವಿರುವದು ಖಂಡಿತ ; ಆ ಗುಣಗಳಿಂದಾದ ತಾರತಮ್ಯವಿರುವದೂ ಖಂಡಿತ. ಈ ದೃಷ್ಟಿಯಲ್ಲಿ ನಾವು ಯಾರೊಬ್ಬರೂ ಮಿಕ್ಕವರಂತೆ ಇರುವದಿಲ್ಲ. ಇದೆಲ್ಲ ಅಧ್ಯಾಸದ ದೃಷ್ಟಿಯಿಂದಲೇ. ಗುಣಗಳ ಧರ್ಮವನ್ನು ನಮ್ಮ ಮೇಲೆ ಹಾಕಿಕೊಂಡಿದ್ದೇವೆಂಬುದನ್ನು ಅರಿಯದೆ ಇದೇ ಪರಮಾರ್ಥವೆಂದು ನಂಬಿ ವ್ಯವಹರಿಸುವದರಿಂದಲೇ ಈಗ ನಾವು ಕರ್ತೃಭೋಕ್ತೃಗಳಾಗಿರುವೆವು. ಆದರೆ ನಾವು ದ್ರಷ್ಟೃಗಳು, ಗುಣಗಳನ್ನೂ ಅವುಗಳ ವ್ಯಾಪಾರಗಳನ್ನೂ ನೋಡುವವರು. ಗುಣಗಳು ದೃಶ್ಯಗಳು, ನಮಗೆ ವಿಷಯವಾಗಿ ಕಾಣುವಂಥವು. ಇದನ್ನು ನಾವು ಮರೆಯದೆ ಇದ್ದು ದೃಶ್ಯವಾದದ್ದು ಯಾವದೂ ನಮ್ಮ ಸ್ವರೂಪಕ್ಕೆ ಸೇರಿಲ್ಲ ಎಂಬುದನ್ನು ಬಾರಿಬಾರಿಗೂ ಚಿಂತಿಸುತ್ತಾ ಅದರಿಂದ ನಮ್ಮ ಸ್ವರೂಪವನ್ನು ಪಿಂಗಡಿಸಿಕೊಳ್ಳುವದಕ್ಕೆ ಅಭ್ಯಾಸಮಾಡಬೇಕು. ನಾವು ಈ ಅಭ್ಯಾಸದಲ್ಲಿ ಎಷ್ಟೆಷ್ಟು ಜಯಶೀಲರಾಗುವೆವೋ ಅಷ್ಟಷ್ಟು ಪರಮಾತ್ಮನಿಗೆ ಹತ್ತಿರವಾಗುವೆವು. ನಾವು ಗುಣಸಂಗದಿಂದ ಎಷ್ಟೇ ಪ್ರಕೃತಿಯಲ್ಲಿ ಮುಳುಗಿಕೊಳ್ಳಲಿ, ಯಾವಾಗಲೂ ಪರಮಾತ್ಮನು ನಮ್ಮೊಡನೆ ಇದ್ದೇ ಇರುತ್ತಾನೆಂಬುದನ್ನು ಲಕ್ಷ್ಯದಲ್ಲಿಡಬೇಕು. ಪರಮಾತ್ಮನು ಸರ್ವವ್ಯಾಪಿಯು ; ಆತನು ಸರ್ವೇಶ್ವರನಾದರೂ ತನ್ನ ಹೊಟ್ಟೆಯಿಂದ ನಮ್ಮನ್ನು ಹೊರಗೆ ಹಾಕಲು ಸಮರ್ಥನಲ್ಲ. ಆದ್ದರಿಂದ ನಾವು ಎಷ್ಟೇ ಈ ಸಂಸಾರದಲ್ಲಿ ಮುಳುಗಿದ್ದರೂ ಎಂಥೆಂಥ ಅನರ್ಥಗಳು ನಮಗೆ ಬಂದೊದಗಿದ್ದರೂ ನಾವು ಎದೆಗುಂದಬೇಕಾದದ್ದಿಲ್ಲ. ``ಈಗಲೂ ಪರಮಾತ್ಮನು ನನ್ನ ಜೊತೆಯಲ್ಲಿಯೇ ಇರುತ್ತಾನೆ" ಎಂಬುದನ್ನು ಕಷ್ಟಕಾಲಗಳಲ್ಲಿ ಮನಸ್ಸಿಗೆ ತಂದುಕೊಳ್ಳುತ್ತಿರಬೇಕು. ಹೊರಗಡೆಗೆ ನೋಡಿ ನೋಡಿ ಗುಣಗಳ ಧರ್ಮವನ್ನು ಮೈಮೇಲೆ ಹಾಕಿಕೊಂಡು ದುಃಖಪಡುವದು ನಮಗೆ ನೈಸರ್ಗಿಕವಾಗಿರುತ್ತದೆ. ಆದರೆ ಸತ್ಸಹವಾಸದಿಂದಲೂ ಶಾಸ್ತ್ರಪರಿಚಯದಿಂದಲೂ ನಮ್ಮೊಳಗಿರುವ ಪರಮಾತ್ಮನನ್ನು ನೆನಪಿಗೆ ತಂದುಕೊಂಡು ಒಳಗಡೆಗೆ ತಿರುಗಿ ನೋಡಬೇಕು. ಸಾಧಕಾವಸ್ಥೆಯಲ್ಲಿ ನಮ್ಮ ಅಂತಃಕರಣವು ಹಿಂದಕ್ಕೂ ಮುಂದಕ್ಕೂ ಉಯ್ಯಾಲೆಯಂತೆ ತೂಗಾಡುತ್ತಿರುತ್ತದೆ. ಅದು ಮುಂದಕ್ಕೆ ಹೋದಂತೆಲ್ಲ ನಮ್ಮ ಜೀವಭಾವವು ಗಟ್ಟಿಯಾಗುತ್ತಿರುತ್ತದೆ. ಹಿಂದಕ್ಕೆ ಸರಿಸರಿದಂತೆಲ್ಲ ಪರಮಾತ್ಮನ ತಂಗಾಳಿಯು ನಮ್ಮ ಮೇಲೆ ಬೀಸುತ್ತದೆ. ಈ ಉಯ್ಯಾಲೆಯಿಂದ ತಪ್ಪಿಸಿಕೊಳ್ಳುವ ಯತ್ನವನ್ನು ಮಾಡಬೇಕು. ತ್ರಿಗುಣಾತ್ಮಕವಾದ ಈ ಅಂತಃಕರಣವೇ ನನಗೆ ಕರ್ತೃತ್ವ ಭೋಕ್ತೃವನ್ನೂ ತಂದುಕೊಟ್ಟಿದೆ ಎಂಬುದನ್ನು ನೆನಪಿಗೆ ತಂದುಕೊಳ್ಳುತ್ತಿರಬೇಕು. ಕಾರ್ಕೋಟಕದ ನಿಮಿತ್ತದಿಂದ ಕುರೂಪಿಯಾದ ನಳನು ತನಗೆ ನೈಮಿತ್ತಿಕವಾಗಿ ಈ ರೂಪವು ಬಂದಿದ್ದರೂ ತನ್ನ ಸ್ವರೂಪವು ಒಂದು ದಿನ ಬಂದೇತೀರುವದು ಎಂದು ಹೇಗೆ ನಂಬಿದ್ದನೋ ಹಾಗೆ ನಾವೂ ನಂಬಿದರೆ ಪರಮಾತ್ಮನ ಅನುಗ್ರಹದಿಂದ ಆತನ ಸ್ವರೂಪವೇ ನಮಗೆ ಒಂದು ದಿನ ಬಂದುಬಿಡುತ್ತದೆ ; ಈಗಲೂ

ಅದು ಅಚ್ಚಳಿಯದೆ ಇದ್ದರೂ ಗುಣಗಳಿಂದಾಗಿರುವ ಉಪಾಧಿಯಿಂದಲೇ ಅದು ಮರೆಯಾಗಿದೆ ಎಂಬ ಭಾವನೆಯನ್ನು ಗಟ್ಟಿಮಾಡಿಕೊಳ್ಳಬೇಕು. ಈಗ ಗುಣಗಳಿಗೆ ನಾವು ನಿಜವಾಗಿ ಸಿಕ್ಕಿಬಿದ್ದಿದ್ದೇವೆಂದೂ ಅಭ್ಯಾಸಬಲದಿಂದ ಅವುಗಳಿಂದ ತಪ್ಪಿಸಿಕೊಂಡು ಸ್ವರೂಪವನ್ನು ಪಡೆದುಕೊಳ್ಳುವೆವೆಂದೂ ಭಾವಿಸಬಾರದು. ಅಜ್ಞಾನದಿಂದ ಗುಣಗಳಲ್ಲಿ ಬೆರೆತಂತೆ ಆಗಿರುತ್ತೇವೆ; ಜ್ಞಾನದಿಂದ ಅದನ್ನು ಪಡೆದುಕೊಳ್ಳುತ್ತೇವೆ. ಈ ಭಾವನೆಯಾದರೂ ನಮಗೆ ಈಗ ಬರುವದು ಸುಲಭವಲ್ಲ. ಆದರೆ ನಮ್ಮೆಲ್ಲರ ಆತ್ಮನೂ ಆದ ಶ್ರೀಕೃಷ್ಣಪರಮಾತ್ಮನ ಅನುಗ್ರಹದಿಂದ ಅದು ಒಂದಲ್ಲ ಒಂದು ದಿನ ನಮಗೂ ಬಂದೇ ತೀರುವದು. ಆದ್ದರಿಂದ ಆತನ ಸ್ಮರಣೆಯನ್ನು ಬಿಡದಿರೋಣ ; ಆತನ ನಾಮಸ್ಮರಣೆಯಿಂದ ಪವಿತ್ರರಾಗಿ ಈ ತ್ರಿಗುಣಗಳ ಬಲೆಯಿಂದ ಪಾರಾಗುವದಕ್ಕೆ ಯತ್ನಿಸೋಣ.

## ೧೩೩. ಗುಣಗಳನ್ನು ಮೀರಿದರೆ ಆಗುವ ಫಲ 14 - (20-21)

**(26-6-49)**

ಗುಣತ್ರಯದ ವಿಚಾರವು ನಡೆದಿದೆ. ಸತ್ತ್ವರಜಸ್ತಮೋಗುಣಗಳು ಕಣ್ಣಿಗೆ ಕಾಣಿಸುವದಿಲ್ಲ. ಅವುಗಳ ಕಾರ್ಯದಿಂದಲೇ ಅವನ್ನು ಅನುಮಾನಿಸಬೇಕು. ವಿದ್ಯುಚ್ಛಕ್ತಿ (Electricity) ಎಂದರೇನು ? ಎಂಬುದನ್ನು ಲಕ್ಷಣವಾಕ್ಯದಿಂದ ತಿಳಿಸಿಹೇಳುವದು ಕಷ್ಟ. ಆದರೆ ಅದನ್ನು ಯಾರೊಬ್ಬರೂ ಇಲ್ಲವೆನ್ನುವಹಾಗಿಲ್ಲ. ಅದರಿಂದ ನಾವು ಯಂತ್ರಗಳನ್ನು ನಡೆಯಿಸಿಕೊಳ್ಳುತ್ತಿದೇವೆ, ಮನೆಗೆ ಬೆಳಕನ್ನು ಸಂಪಾದಿಸಿಕೊಳ್ಳುತ್ತಿದೇವೆ, ಇನ್ನೂ ಕೆಲವು ಉಪಯುಕ್ತವಾದ ಉಪಕರಣಗಳನ್ನು ಕಲ್ಪಿಸಿಕೊಂಡಿರುತ್ತೇವೆ. ಇದರಂತೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ - ಎಂದು ವಿಂಗಡವಾಗಿರುವ ಇಡಿಯ ಪ್ರಪಂಚವೇ ಈ ಗುಣಗಳ ಕಾರ್ಯವಾಗಿದೆ. ಹೀಗಿರುವಲ್ಲಿ ಗುಣಗಳಿಲ್ಲ - ಎಂದು ಹೇಳುವದು ಹೇಗೆ ?

ಈಗ ಸಾಂಖ್ಯರ ಸಿದ್ಧಾಂತದಂತೆ ಗುಣಗಳನ್ನು ಇಟ್ಟುಕೊಂಡು ಆತ್ಮಜ್ಞಾನಕ್ಕೆ ಉಪಾಯವನ್ನು ಹೇಳುತ್ತಿದೆ. ಆದ್ದರಿಂದ ಆ ಸಿದ್ಧಾಂತವನ್ನೆಲ್ಲ ಸಂಪೂರ್ಣವಾಗಿ ಒಪ್ಪಿದೆಯೆಂತ ಭಾವಿಸಬಾರದು ; ಅಥವಾ ತಿರಸ್ಕರಿಸಿದೆಯೆಂತಲೂ ಭಾವಿಸಬಾರದು. ಗುಣಗಳ ಕಾರ್ಯವು ವ್ಯವಹಾರದಲ್ಲಿ ಕಾಣುತ್ತಿದೆ. ಅದರಿಂದ ನಾವು ಏನೆಂದು ಕಲ್ಪಿಸಬಹುದು ? ಇದೇ ಪ್ರಶ್ನೆ. ಸಾಂಖ್ಯರು ಕಲ್ಪಿಸುವಂತೆ ಇಡಿಯ ಜಗತ್ತೇ ಪ್ರಧಾನದ ಕಾರ್ಯವು ಎಂದೇ ಸಿದ್ಧವಾಗಬೇಕೆಂಬುದೇನೂ ಇಲ್ಲ. ಒಂದು ದೃಷ್ಟವಿಷಯದಿಂದ ಬೇರೆಬೇರೆಯ ತೀರ್ಮಾನಗಳು ಆಗಬಹುದು ; ಅವುಗಳಲ್ಲಿ ಯಾವದು ಸರಿ ? - ಎಂಬುದನ್ನು ಮಾತ್ರ ವಿಚಾರದಿಂದ

ನಿರ್ಣಯಿಸಬೇಕು. ಉದಾಹರಣೆಗೆ ಕೆಲವು ಭಾಷೆಗಳು ಒಂದೇ ಬಗೆಯ ಧಾತುಗಳಿಂದ ವ್ಯುತ್ಪನ್ನವಾಗಿರುವ ಶಬ್ದಗಳಿಂದ ತುಂಬಿರುವದರಿಂದ ಆರ್ಯಭಾಷೆಗಳು ಎಂದು ಭಾಷಾಶಾಸ್ತ್ರಜ್ಞರು ಕಲ್ಪಿಸಿರುತ್ತಾರೆ. ಲ್ಯಾಟಿನ್, ಗ್ರೀಕ್, ಫಾರ್ಸಿ, ಸಂಸ್ಕೃತ - ಇವುಗಳೆಲ್ಲ ಈ ಗುಂಪಿಗೆ ಸೇರಿರುತ್ತವೆ; ಈ ಭಾಷೆಗಳನ್ನಾಡುವ ಜನರನ್ನೂ ಇರುವ ದೇಶಗಳನ್ನೂ ನೋಡಿದರೆ ಆ ದೇಶದಿಂದ ಈ ದೇಶಕ್ಕೋ, ಅಥವಾ ಈ ದೇಶದಿಂದ ಆ ದೇಶಕ್ಕೋ ಪೂರ್ವಕಾಲದ ಆರ್ಯರು ಕಾರಣವಿಶೇಷದಿಂದ ಪ್ರಯಾಣಮಾಡಿಬಂದು ನಿಂತಿರಬೇಕು ಎಂದು ಕಲ್ಪಿಸಬಹುದಾಗುತ್ತದೆ. ಪಾಶ್ಚಾತ್ಯವಿದ್ವಾಂಸರು ಆಕ್ಸಿಸ್‌ನದಿಯ ದಡದಲ್ಲಿ ಎಲ್ಲಿಯೋ ಪೂರ್ವಕಾಲದ ಆರ್ಯರು ವಾಸವಾಗಿದ್ದರೆಂದೂ ಆದರೆ ಹವೆಯ ಬದಲಾವಣೆಯೇ ಮುಂತಾದ ನಿಮಿತ್ತಗಳಿಂದ ಅವರು ಆ ದೇಶದಿಂದ ಪಶ್ಚಿಮಕ್ಕೂ ಪೂರ್ವಕ್ಕೂ ಹೊರಟು ಕ್ರಮಕ್ರಮವಾಗಿ ಬೇರೆಬೇರೆಯ ದೇಶಗಳಲ್ಲಿ ಹರಡಿಕೊಂಡರೆಂದೂ ಕಲ್ಪಿಸಿರುತ್ತಾರೆ. ಆದರೆ ನಮ್ಮ ದೇಶದಲ್ಲಿ ಒಬ್ಬ ಪಂಡಿತರು `ಆರ್ಯವಿದ್ಯಾಸುಧಾಕರ' ಎಂಬ ಗ್ರಂಥವೊಂದನ್ನು ಬರೆದು ಅದರಲ್ಲಿ ಆರ್ಯರು ಭರತಖಂಡದಲ್ಲಿಯೇ ಹಿಂದೆ ನೆಲಸಿದ್ದರೆಂತಲೂ ಅವರು ಕ್ರಮಕ್ರಮವಾಗಿ ಈ ದೇಶದಿಂದ ಬೇರೆ ದೇಶಗಳಿಗೆ ಹೋದರೆಂದೂ ಅವರವರ ವೃತ್ತಿಗಳು, ದೇಶದ ಆಚಾರವೇ ಮುಂತಾದವುಗಳಿಂದ ಬದಲಾವಣೆಗಳನ್ನು ಹೊಂದಿ ಹೀಗೆ ಮಾರ್ಪಟ್ಟಿದ್ದಾರೆಂದೂ ಕಲ್ಪಿಸಿರುತ್ತಾರೆ. ಅವರು ಇದಕ್ಕೆ ಭಾರತಾದಿಗಳ ಆಧಾರವನ್ನು ಬರೆದಿರುತ್ತಾರೆ. ಈ ಎರಡು ತೀರ್ಮಾನಗಳಲ್ಲಿ ಯಾವದು ಸರಿ ? ಎಂಬುದು ಪ್ರಕೃತವಲ್ಲ. ಒಂದು ವಿಷಯವು ದೃಷ್ಟವಾಗಿದ್ದರೆ ಅದರಿಂದ ಹೀಗೆಯೇ ಕಲ್ಪಿಸಿ ನಿರ್ಧರಿಸಬೇಕು - ಎಂಬುದಕ್ಕೆ ಸಾಕಾದಷ್ಟು ಆಧಾರಪ್ರಮಾಣವನ್ನು ಕೊಟ್ಟಹೊರತು ಆ ಕಲ್ಪನೆಯು ಸಾಧುವೆಂದಾಗುವದಿಲ್ಲ ಎಂಬುದಕ್ಕೆ ಈ ಉದಾಹರಣೆಯು ಸಾಕಾಗಿದೆ. ತತ್ತ್ವವು ಇದ್ದಂತೆಯೇ ಇರುತ್ತದೆ ; ಅದನ್ನು ನಾವು ಕಾರ್ಯದಿಂದ ಕಲ್ಪಿಸುವದಕ್ಕೆ ಹೊರಟರೆ ಕಲ್ಪನೆಯು ತತ್ತ್ವಾನುಸಾರಿಯಾದರೂ ಆಗಬಹುದು, ಆಗದೆ ಹೋದರೂ ಹೋಗಬಹುದು. ವೇದಾಂತಿಗಳು ಶಾಸ್ತ್ರಾಂತರದವರ ಪ್ರಕ್ರಿಯೆಯನ್ನು ಉಪಯೋಗಿಸಿರುತ್ತಾರಾದರೂ ಮೊಟ್ಟ ಮೊದಲು ಆ ಪ್ರಕ್ರಿಯೆಯನ್ನುಪಯೋಗಿಸಿದವರ ಸಿದ್ಧಾಂತದಲ್ಲೇನೂ ಅವರಿಗೆ ಅಭಿನಿವೇಶವಿರುವದಿಲ್ಲ. ಮಿಕ್ಕ ದರ್ಶನದವರು ಒಪ್ಪುವ ಪದಾರ್ಥಗಳು ಅನುಮಾನಾದಿಪ್ರಮಾಣಾಂತರಗಳಿಂದ ಕಲ್ಪಿತವಾಗಿರುತ್ತವೆ ; ಅವು ಪ್ರಮಾಣಗಳಿಂದ, ಸಿದ್ಧವಾಗುವವೊ - ಇಲ್ಲವೊ ಎಂಬುದನ್ನು ಗೊತ್ತುಪಡಿಸುವ ಮೊದಲೇ ವೇದಾಂತಿಗಳು ಹೇಳುವ ಆತ್ಮತತ್ತ್ವವು ಸಿದ್ಧವಾಗಿರುವದು. ಆದರೆ ಆತ್ಮತತ್ತ್ವವನ್ನು ಸಾಧಿಸಲು ಯಾವ ಶಾಸ್ತ್ರದ ಯಾವ ಪದಾರ್ಥದ ಬಯಕೆಯೂ ಅದಕ್ಕಿರುವದಿಲ್ಲ ; ಏಕೆಂದರೆ ಆತ್ಮತತ್ತ್ವವು ಸ್ವತಃಸಿದ್ಧವಾಗಿರುತ್ತದೆ.

ಇರಲಿ, ಪ್ರಕೃತವನ್ನು ಅನುಸರಿಸೋಣ. ಗುಣಗಳೇ ಕರ್ತೃಗಳು, ಬೇರೆ ಕರ್ತೃವಿಲ್ಲ ಎಂಬುದನ್ನು ಯಾವನು ಅರಿತುಕೊಳ್ಳುತ್ತಾನೋ, ಗುಣಗಳನ್ನು ಮೀರಿರುವ ಆತ್ಮನನ್ನು

ಯಾವನು ಅರಿತುಕೊಳ್ಳುತ್ತಾನೋ, ಅವನೇ ನನ್ನ ಸ್ವರೂಪವನ್ನು ಪಡೆಯುತ್ತಾನೆ ಎಂದು ಭಗವಂತನು ಹೇಳಿದ್ದಾನಷ್ಟೆ. ಹೀಗೆ ಗುಣಗಳನ್ನು ಮೀರಿ ಪರಮಾತ್ಮಭಾವವನ್ನು ಪಡೆದುಕೊಂಡರೆ ಆಗುವ ಫಲವು ಯಾವದೆಂಬುದನ್ನು ಈಗ ಹೇಳುತ್ತಾನೆ :

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ 14-20**

`ದೇಹದ ಜನ್ಮಕ್ಕೆ ಕಾರಣವಾಗಿರುವ ಈ ಗುಣಗಳು ಮೂರನ್ನೂ ಯಾವನು ದಾಟಿರುವನೋ ಅವನು ಜನನ, ಮರಣ, ಜರಾ, ದುಃಖ - ಇವುಗಳಿಂದ ಬಿಡುಗಡೆಯಾಗಿ ಅಮೃತವನ್ನು ಪಡೆಯುತ್ತಾನೆ'. ಮನುಷ್ಯನಿಗೆ ದೇಹಗ್ರಹಣವು ಆಯಿತೆಂದರೆ ದೇಹದ ವಿಕಾರಗಳೆಲ್ಲವೂ ಗಂಟುಬೀಳುತ್ತವೆ. ಶರೀರದಲ್ಲಿ ವಯೋನಿಮಿತ್ತವಾದ ವಿಕಾರಗಳು ಕೆಲವು ಆಗುತ್ತವೆ. ಬಾಲ್ಯದಲ್ಲಿ, ಯೌವನದಲ್ಲಿ, ವಾರ್ಧಕದಲ್ಲಿ ಬಗೆಬಗೆಯ ದುಃಖಗಳು ಕಾಡುತ್ತಿರುತ್ತವೆ. ಆ ದುಃಖಗಳಿಗೆಲ್ಲ ಜನ್ಮವೇ, ಎಂದರೆ ದೇಹಗ್ರಹಣವೇ ಕಾರಣವು. ಶರೀರದಲ್ಲಿ ವಯಸ್ಸಿನ ಆಯಾ ಸ್ಥಿತಿಯಿಂದ ಆಗುವ ವಿಕ್ರಿಯೆಗಳಲ್ಲದೆ, ಸ್ವೇಚ್ಛಾಚಾರದಿಂದ ಬಗೆಬಗೆಯ ರೋಗಗಳೂ ಉಂಟಾಗುತ್ತಿರುವವು ; ಅವುಗಳಂತೂ ದುಃಖಕ್ಕೆ ತವರುಮನೆಯಾಗಿರುವವು. ದೇಹಗ್ರಹಣಕ್ಕೆ ಧರ್ಮಾಧರ್ಮಗಳೂ ಗುಣಸಂಗದಿಂದಾದ ಕಾಮವೂ ಕಾರಣವಾಗಿರುತ್ತವೆ. ಆದ್ದರಿಂದ ಯಾವನು ಈ ಮೂರುಗುಣಗಳನ್ನೂ ದಾಟಿರುವನೋ ಅವನಿಗೆ ಜನ್ಮನಿಮಿತ್ತವಾದ ದುಃಖಗಳು ತೊಲಗುವವು.

ಈ ಶ್ಲೋಕದಲ್ಲಿ `ದೇಹಿಯು ದುಃಖವನ್ನು ದಾಟಿ ಅಮೃತವನ್ನು ಪಡೆಯುತ್ತಾನೆ' ಎಂದಿದೆಯಷ್ಟೆ. ಇಲ್ಲಿ `ದೇಹಿ' ಎಂದರೆ ಹಿಂದೆ ದೇಹಿಯಾಗಿದ್ದವನು ಎಂದರ್ಥ. ಏಕೆಂದರೆ ಎಲ್ಲಿಯವರೆಗೆ ದೇಹವಿರುವದೋ ಅಲ್ಲಿಯವರೆಗೆ ಪ್ರಿಯಾಪ್ರಿಯಗಳ ಹೊಡೆತವು ತಪ್ಪಿದ್ದಲ್ಲವೆಂದು ಶ್ರುತಿ ಹೇಳುತ್ತಿದೆ ; ಪ್ರಿಯಾಪ್ರಿಯಗಳ ಹೊಡೆತವಿರುವವರೆಗೆ ದುಃಖವು ಹೇಗೆತಾನೆ ತಪ್ಪೀತು ? ಆದ್ದರಿಂದ ದುಃಖಗಳನ್ನು ದಾಟಿ ಅಮೃತನಾಗುವವೇಳೆಗೆ ಅವನು ದೇಹಿಯಾಗಿರುವದಿಲ್ಲ. ಹೀಗಿರುವದರಿಂದ ದೇಹವನ್ನು ಬಿಟ್ಟಬಳಿಕವೇ ಮನುಷ್ಯನಿಗೆ ತ್ರಿಗುಣಾತೀತತ್ವವೂ ಅಮೃತತ್ವವೂ ಬರುವವೆಂದು ತಪ್ಪಾಗಿ ಭಾವಿಸುವ ಸಂಭವವಿದೆ. ಇದನ್ನು ಪರಿಹರಿಸುವದಕ್ಕಾಗಿ ಈಗ ಶ್ಲೋಕದಲ್ಲಿರುವ ಒಂದೊಂದು ಮಾತಿನ ಸ್ವಾರಸ್ಯವನ್ನೂ ಸ್ವಲ್ಪ ಬಿಚ್ಚಿ ತಿಳಿಸುವದು ಅವಶ್ಯವಾಗಿರುತ್ತದೆ.

ಮೊದಲನೆಯದಾಗಿ ಮೂರು ಗುಣಗಳನ್ನೂ ಮೀರುವದೆಂದರೇನು ? ಎಂಬುದನ್ನು ವಿಮರ್ಶಿಸಬೇಕು. ಇಡಿಯ ಜಗತ್ತೇ ಗುಣಗಳ ಕಾರ್ಯವು ; ಹೀಗಿರುವಲ್ಲಿ ಗುಣಗಳನ್ನು ದಾಟುವದು ಹೇಗೆ ? ಎಂಬ ಶಂಕೆಯು ಎದ್ದುಕೊಳ್ಳಬಹುದು. ಇದಕ್ಕೆ ಪರಿಹಾರವೇನೆಂದರೆ, ಬೆಂಕಿಯು ಧಗಧಗನೆ ಉರಿಯುತ್ತಿದ್ದರೂ ಅಗ್ನಿಸ್ತಂಭನವಿದ್ಯೆಯನ್ನು ಕಲಿತವನಿಗೆ ಅದು

ಸುಡುವದಿಲ್ಲ ; ಇದರಂತೆ ಸಾಧಕನಾದವನು ಗುಣಗಳ ಕಾರ್ಯವು ತನ್ನ ಮೇಲೆ ಆಗದಂತೆ ನೋಡಿಕೊಂಡರೆ ಗುಣಗಳನ್ನು ಮೀರಿದಂತೆಯೇ ಆಯಿತು, ಇದು ಒಂದು ದೃಷ್ಟಿಯಿಂದ ಶಂಕಾಪರಿಹಾರವನ್ನು ಮಾಡಿದ್ದು. ಇನ್ನೊಂದು ದೃಷ್ಟಿಯಿಂದ ನೋಡಿದರೆ ಮೂರುಗುಣಗಳೂ ಮಾಯಿಕವಾಗಿರುತ್ತವೆ ; ಮಾಯೆಯು ಗುಣಮಯವೆಂದು ಆಗಲೆ ಹೇಳಿರುವದರಲ್ಲಿ ಈ ಅಭಿಪ್ರಾಯವು ಅಡಗಿರುತ್ತದೆ. ಆದ್ದರಿಂದ ಆತ್ಮಜ್ಞಾನದಿಂದ ಗುಣಗಳೂ ಗುಣಗಳ ಕಾರ್ಯವಾದ ದೇಹಾದಿಗಳೂ ಅಪರಮಾರ್ಥವೆಂದು ಮನಗಂಡು ಯಾವನು ಆತ್ಮನಿಷ್ಠನಾಗಿರುತ್ತಾನೋ ಅವನಿಗೆ ಎಂದೆಂದಿಗೂ ಗುಣಗಳ ಸಂಬಂಧವೇ ಇರುವದಿಲ್ಲ. ಗುಣಗಳು ಹಿಂದಾಗಲಿ ಈಗಲಾಗಲಿ ಮುಂದೆಯಾಗಲಿ ನನ್ನನ್ನು ಬಂಧಿಸಲೇ ಆರವು. ಅಸತ್ತಿಗೆ ಭಾವವಿಲ್ಲ, ಸತ್ತಿಗೆ ಅಭಾವವಿಲ್ಲ ; ಸದ್ರೂಪನಾದ ಪರಮಾತ್ಮನೇ ನನ್ನ ಆತ್ಮನಾಗಿರುವಲ್ಲಿ ನನಗೆ ಈ ಗುಣಗಳ ಸೋಂಕು ಹೇಗೆ ಇದ್ದೀತು ? - ಎಂಬ ತಿಳಿವಳಿಕೆಯಿಂದ ನಿತ್ಯಮುಕ್ತನಾಗಿರುವವನು ಎಂದೆಂದಿಗೂ ಗುಣಾತೀತನೇ ಆಗಿರುತ್ತಾನೆ.

ಈ ಎರಡನೆಯ ದೃಷ್ಟಿಯೇ ವೇದಾಂತಿಗಳ ದೃಷ್ಟಿ. ಗುಣಗಳನ್ನು ದಾಟಿದವನು ಜನ್ಮಮೃತ್ಯುಜರಾದುಃಖಗಳನ್ನು ಪರಿಹರಿಸಿಕೊಂಡು ಅಮೃತನಾಗುತ್ತಾನೆ ಎಂಬುದಕ್ಕೆ ಈ ದೃಷ್ಟಿಯಿಂದ ಸುಲಭವಾಗಿ ಅರ್ಥವನ್ನು ಮಾಡಿಕೊಳ್ಳಬಹುದು. ಈ ಮರ್ಮವನ್ನು ಅರಿಯದವರು ಗುಣಗಳನ್ನು ಮೊದಲು ದಾಟುವದು, ಆ ಬಳಿಕ ದುಃಖವನ್ನು ಕಳೆದುಕೊಳ್ಳುವದು, ಅದಾದಮೇಲೆ ಅಮೃತತ್ವವನ್ನು ಹೊಂದುವದು - ಎಂದು ಮೂರು ಅವಸ್ಥೆಗಳನ್ನು ಕಲ್ಪಿಸಿಕೊಂಡು ಪೇಚಾಡುತ್ತಾರೆ. ವ್ಯಾಸಾದಿಗಳು ಜರಾಮೃತ್ಯುವನ್ನು ದಾಟಿದವರೆಂಬುದನ್ನು ಹೇಗೆ ನಂಬುವದು ? ಅವರಿಗೆ ಜರಾಮರಣಗಳು ಬರಲಿಲ್ಲವೆ ? ಅವರು ದುಃಖವನ್ನು ಅನುಭವಿಸಲಿಲ್ಲವೆ ? ಅವರಿಗೆ ದೇಹವು ಇದ್ದೇ ಇತ್ತಷ್ಟೆ ; ದೇಹವನ್ನು ಧರಿಸಿಯೇ ಅಲ್ಲವೆ, ವ್ಯಾಸರು ಗೀತಾವಾಕ್ಯದ ಈ ಶ್ಲೋಕಗಳನ್ನು ಬರೆದರು ? ದೇಹವಿದ್ದ ಬಳಿಕ ಅದರಿಂದಾಗುವ ಜರಾದಿಗಳೂ ರೋಗಾದಿಗಳೂ ದುಃಖಾದಿಗಳೂ ಅವರಿಗೂ ಆಗಿಯೇತೀರಬೇಕಷ್ಟೆ ? ಅವರು ಈಗಲಂತೂ ಇಲ್ಲ ; ಇದರಿಂದ ಅವರು ಈಗ ಮೃತರಾಗಿರುತ್ತಾರೆಂದು ಒಪ್ಪಬೇಕಾಗುವದು. ಹೀಗಿರುವಲ್ಲಿ ಗುಣಗಳನ್ನು ದಾಟಿದರೆ ಅಮೃತವನ್ನು ಪಡೆಯಬಹುದು ! - ಎಂಬುದು ಮೃಷಾವಾಗ್ವಾನವಲ್ಲವೆ ? - ಎಂದು ಈ ತಪ್ಪುತಿಳಿವಳಿಕೆಯಿಂದ ಜನರು ಶಂಕಿಸುತ್ತಾರೆ. ಆದರೆ ವೇದಾಂತಿಗಳ ದೃಷ್ಟಿಯಿಂದ ಈ ಶಂಕೆ ಏಳುವಂತೆಯೇ ಇಲ್ಲವೆಂಬುದು ಸ್ಫುಟವಾಗಿರುತ್ತದೆ. ವೇದಾಂತಿಗಳ ದೃಷ್ಟಿಯಂತೆ ವಸ್ತುತತ್ತ್ವದಲ್ಲಿ ಎಂದಿಗೂ ವಿಕಲ್ಪವಿರಲಾರದು ; ನಾವು ಅಮೃತರೂ ಆಗಿರುತ್ತೇವೆ, ಜರಾಮರಣವುಳ್ಳವರೂ ಆಗಿರುತ್ತೇವೆ ಎಂಬುದು ಹೊಂದುವ ಮಾತೇ ಅಲ್ಲ. ಇವುಗಳಲ್ಲಿ ಒಂದು ನಿಜ, ಮತ್ತೊಂದು ಸುಳ್ಳು. ಜನರು ನಾವು ಮರ್ತ್ಯರು, ದುಃಖಿಗಳು ಎಂದು

ನಂಬಿಕೊಂಡಿದ್ದರೂ `ನಿಮ್ಮ ಪರಮಾರ್ಥ ರೂಪದಲ್ಲಿ ನೀವೆಲ್ಲರೂ ಅಮೃತರೇ' ಎಂದು ಶ್ರುತಿ ಸಾರುತ್ತಿದೆ. ಇದು ತತ್ತ್ವ ವಿಚಾರದಿಂದ ಅನುಭವಕ್ಕೆ ಬರುವ ವಿಷಯವು ಎಂದೇ ವೇದಾಂತಿಗಳು ಸಾರುತ್ತಿದಾರೆ. ಆದ್ದರಿಂದ ಅವರು ಹೇಳುವ ಕ್ರಮದಿಂದ ವಿಚಾರವನ್ನು ಮಾಡಿ ಈ ಮಾತು ಎಷ್ಟರಮಟ್ಟಿಗೆ ಸರಿ ಎಂಬುದನ್ನು ತಿಳಿಯಬೇಕು. ವೇದಾಂತದಂತೆ ಈ ಇಡಿಯ ಲೋಕವೇ ಅಜರಾಮರಲೋಕವು. ನಾವು ಎಂದೆಂದಿಗೂ ತ್ರಿಗುಣಾತೀತರೇ ; ಆದರೂ ಇಲ್ಲದ ತ್ರಿಗುಣವನ್ನೂ ಅದರ ಕಾರ್ಯವನ್ನೂ ಕಲ್ಪಿಸಿಕೊಂಡು ನಾವು ದೇಹಿಗಳು, ಜನ್ಮಾದಿಗಳುಳ್ಳವರು ಎಂಬ ಅನಾದ್ಯನಂತವಾದ ಅವಿದ್ಯೆಯಿಂದ ನಾವು ಆವಿಷ್ಟರಾಗಿರುತ್ತೇವೆ. ಪರಮಾರ್ಥವಿದ್ಯೆಯಿಂದ ಈ ಅವಿದ್ಯೆಯನ್ನು ತೊಲಗಿಸಿಕೊಂಡರೆ ಅದೇ ಅಮೃತಪ್ರಾಪ್ತಿಯು ಎಂಬುದು ವೇದಾಂತಿಗಳ ಅಭಿಪ್ರಾಯವು.

ಜ್ಞಾನಿಗಳು ವೀತಶೋಕರಾಗುವರು ಎಂದು ಶ್ರುತಿಸ್ಮೃತಿಗಳಲ್ಲಿದೆ. ಭಗವಂತನೂ `ಪ್ರಜ್ಞಾವಂತರು ಜನ್ಮಮರಣಗಳ ನಿಮಿತ್ತದಿಂದ ಶೋಕಿಸುವದಿಲ್ಲ' ಎಂದೇ ತನ್ನ ಉಪದೇಶವನ್ನು ಪ್ರಾರಂಭಿಸಿರುತ್ತಾನೆ. `ನ ಜಾಯತೇ ಮ್ರಿಯತೇ ವಾ' ಎಂಬುದು ಶ್ರುತಿಯ ಬೋಧೆಯು ; ಅವನ್ನೇ ಭಗವಂತನು ಇಲ್ಲಿ ಸರಳವಾದ ಭಾಷೆಯಿಂದ ಬೋಧಿಸಿರುತ್ತಾನೆ. ಗುಣಗಳು ಗುಣಗಳಲ್ಲಿ ವೃತ್ತಿಯುಳ್ಳವಾಗಿವೆ, ಅವಕ್ಕೆಲ್ಲ ಸಾಕ್ಷಿಯಾಗಿರುವ ನನಗೆ ಗುಣಗಳ ಸ್ಪರ್ಶವೇ ಇಲ್ಲ - ಎಂಬ ತಿಳಿವಳಿಕೆಯೇ ಗುಣಾತ್ಯಯವು. ಲೋಕದಲ್ಲಿ ಕೂಡ ನಾವು ಒಬ್ಬರೊಡನೊಬ್ಬರು ವ್ಯವಹಾರಮಾಡುವಾಗ ಶರೀರಕ್ಕೆ ಪ್ರಾಧಾನ್ಯವನ್ನು ಕೊಡುವದಿಲ್ಲ. ಒಬ್ಬನು ಬಾಲ್ಯದಿಂದಲೂ ಈವರೆಗೆ ಮಾಡಿರುವ ಉತ್ತಮ ಕಾರ್ಯಗಳನ್ನು ಹೇಳಿ ಅವನನ್ನು ಹೊಗಳಿದರೆ ಬಾಲ್ಯಾದಿಗಳಿಗಿಂತ ಅವನು ಬೇರೆಯಾಗಿದ್ದಾನೆಂದೇ ನಮ್ಮ ಅಭಿಪ್ರಾಯವಾಗಿದೆಯೆಂದಾಗುತ್ತದೆ. ಹೀಗೆಯೇ ಯಾವಯಾವದು ವಿಷಯವಾಗಿರುತ್ತದೆಯೋ ಅದೆಲ್ಲವೂ ಗುಣಕಾರ್ಯವಾಗಿರುತ್ತದೆ ; ಅದು ನಿತ್ಯವಿಷಯಿಯಾದ ಚೈತನ್ಯಕ್ಕೆ ಎಂದಿಗೂ ಸಂಬಂಧಪಡುವದಿಲ್ಲ. ದೇಹದ ಧರ್ಮವಾದ ಜನ್ಮಾದಿಗಳು ಆ ಚೈತನ್ಯಕ್ಕೆ ಯಾವಾಗಲೂ ಸೇರಿರುವದೇ ಇಲ್ಲ. ದೇಹಬುದ್ಧಿಯುಕೂಡ ನಮಗೆ ಯಾವಾಗಲೂ ಇರುವದಿಲ್ಲ ; ಸ್ವಪ್ನದಲ್ಲಿ ಬೇರೆಬೇರೆಯ ದೇಹಾಭಾಸಗಳು ನಮಗೆ ಸಂಬಂಧಪಟ್ಟಂತೆ ಕಾಣುತ್ತಿರುತ್ತವೆ, ತನಿನಿದ್ರೆಯಲ್ಲಿ ಯಾವ ದೇಹದ ಸಂಬಂಧವೂ ಇಲ್ಲ. ಎಲ್ಲಾ ಅವಸ್ಥೆಗಳಲ್ಲಿಯೂ ನಾವು ಇದ್ದಂತೆಯೇ ಇರುವದರಿಂದ, ಎಚ್ಚರದಲ್ಲಿ ಮಾತ್ರ ಇರುವಂತೆ ಕಾಣುತ್ತಿರುವ, ಕ್ಷಣಕ್ಷಣಕ್ಕೂ ಬದಲಾಯಿಸುತ್ತಿರುವ, ಈ ದೇಹವು ಅದಕ್ಕೆ ಹೊರಚ್ಚಾಗಿ ಅದನ್ನು ಬೆಳಗುತ್ತಿರುವ ಆ ನಮ್ಮ ಪರಮಾರ್ಥವಾದ ಚೈತನ್ಯಸ್ವರೂಪಕ್ಕೆ ಸೇರಿದ್ದೆಂದಾಗಲಿ ಅದರ ಅವಸ್ಥೆಗಳಾದ ಬಾಲ್ಯಾದಿಗಳು ನಮಗೇ ಆಗುವದೆಂದಾಗಲಿ ಬಗೆಯುವದಕ್ಕೆ ಕಾರಣವೆಲ್ಲಿದೆ ? ಇಲ್ಲ. ಶಂಕೆಯು ದೇಹಬುದ್ಧಿಯಿಂದ ಉಂಟಾಗುತ್ತದೆ, ಪರಿಹಾರವನ್ನು ನಿಜವಾದ ನಮ್ಮ ಚೈತನ್ಯಸ್ವರೂಪದ ದೃಷ್ಟಿಯಿಂದ ಹೇಳಿರುತ್ತದೆ. ಆದ್ದರಿಂದ ಎಲ್ಲವೂ ಸರಿಯಾಗಿದೆ.

ಯಾವನಿಗೆ ಯಾವದೊಂದು ಕಾಮವೂ ಇಲ್ಲವೋ ಅವನನ್ನು ಯಾವ ಕಾನೂನೂ ಏನೂ ಮಾಡಲಾರದು. ಅಜ್ಞರಾದವರು ಸ್ವಾರ್ಥಬುದ್ಧಿಗೆ ವಶರಾಗಿ ಮಾಡಬಾರದ ಕೆಲಸಗಳನ್ನು ಮಾಡಿ ಸರಕಾರದ ಬಂಧನಕ್ಕೆ ಒಳಗಾಗುತ್ತಾರೆ. ಆದರೆ ನಿಷ್ಕಾಮರಾದವರು ನಿರಪರಾಧಿಗಳಾದರೂ ಪೋಲೀಸಿನವರು ತಪ್ಪುತಿಳಿವಳಿಕೆಯಿಂದ ಅವರನ್ನು ಬಂಧಿಸಿದರೆ, ಅಥವಾ ಅಶೋತ್ತರಗಳಿಂದ ಅವರನ್ನು ತಮ್ಮ ಕಾರ್ಯದಿಂದ ವಿಮುಖರಾಗಿ ಮಾಡಲು ಯತ್ನಿಸಿದರೆ, ಅವರು ಆ ಕಟ್ಟಿಗೆ ಒಳಗಾದಾರೇನು ? `ನನ್ನನ್ನು ಯಾವ ಶಸ್ತ್ರಾಸ್ತ್ರಗಳೂ ವ್ಯಥೆಗೊಳಿಸಲಾರವು, ಯಾವ ಬಂಧನಸಾಧನವೂ ಕಟ್ಟಿಹಾಕಲಾರದು; ನನಗೆ ಜನ್ಮಮರಣಾದಿದುಃಖಗಳೇ ಇಲ್ಲ' ಎಂಬ ದೃಢವಾದ ಪ್ರಜ್ಞೆಯು ಯಾವ ಮಹನೀಯನಿಗೆ ಉಂಟಾಗಿಬಿಟ್ಟಿರುವದೋ ಅವನನ್ನು ಯಾವ ಕಾನೂನು ತಾನೆ ಏನು ಮಾಡೀತು ? ಯಾವನು ಜ್ಞಾನದಿಂದ ಮೂರು ಗುಣಗಳನ್ನೂ ಮೀರಿರುವನೋ ಅವನನ್ನು ಗುಣಗಳು `ಇವನು ನಮ್ಮ ಕ್ಷೇತ್ರಕ್ಕೆ ಸೇರಿಲ್ಲ' ಎಂದು ಕೈಬಿಟ್ಟುಬಿಡುತ್ತವೆ; ಅಥವಾ ಅವು ಬಿಡುತ್ತವೆ ಎಂಬುದೇಕೆ, ಅವಕ್ಕೆ ಅವನ ದೃಷ್ಟಿಯಲ್ಲಿ ಇರವೇ ಇರುವದಿಲ್ಲ. ಇದೇ ನಿಜವಾದ ಅಮೃತತತ್ವ, ಇದೇ ನಿಜವಾದ ಗುಣಾತೀತತತ್ವ. ಗುಣಗಳನ್ನು ಮೀರಿ ಅಮೃತರಾಗಿರುವದು ಬದುಕಿರುವಾಗಲೇ ಸಾಧ್ಯವಾಗುತ್ತದೆ. ಜ್ಞಾನದಿಂದಲೇ ಗುಣಾತೀತರಾಗಬಹುದು ಎಂದು ಹೇಳಿದ್ದಾಯಿತಷ್ಟೆ. ನಾನು ಗುಣಾತೀತನು ಎಂದು ಗೊತ್ತುಮಾಡಿಕೊಳ್ಳುವದು ಹೇಗೆ ? ಅಥವಾ ಗುಣಾತೀತನಲ್ಲವೆಂದು ತಿಳಿದರೆ, ಹೇಗೆ ನಡೆದುಕೊಂಡರೆ ನಾನು ಗುಣಾತೀತನಾದೇನು ? ಎಂಬ ಪ್ರಶ್ನೆಗೆ ಈಗ ಉತ್ತರವನ್ನು ಹೇಳುವದಕ್ಕೆ ಭಗವಂತನು ಪ್ರಾರಂಭಿಸುತ್ತಾನೆ. ಇದಕ್ಕೆ ಬೀಜವಾಗಿ ಅರ್ಜುನನು ಒಂದು ಪ್ರಶ್ನೆಯನ್ನು ಮಾಡಿರುತ್ತಾನೆ. `ಈ ಗುಣಗಳನ್ನು ದಾಟಿರುವನೆಂಬುದಕ್ಕೆ ಚಿಹ್ನೆಗಳು ಯಾವವು ? ಅವನ ಆಚಾರವು ಹೇಗಿರುತ್ತದೆ ? ಈ ಗುಣಗಳನ್ನು ದಾಟುವದು ಹೇಗೆ ?' ಈ ಪ್ರಶ್ನೆಯು ನಮಗೆಲ್ಲ ಮುಖ್ಯವಾದದ್ದು. ಗೀತಾಶಾಸ್ತ್ರವು ಅಧ್ಯಾತ್ಮಶಾಸ್ತ್ರವಾದದ್ದರಿಂದ ಅದು ಹೇಳುವದನ್ನು ಅನುಭವದಿಂದ ಕಂಡುಕೊಂಡಹೊರತು ಅದರ ಜ್ಞಾನವು ನಮಗೆ ಆಯಿತೆಂದು ಹೇಳುವದಕ್ಕೆ ಬರುವದಿಲ್ಲ.

ಸ್ಥಿತಪ್ರಜ್ಞ, ಯುಕ್ತ, ಭಕ್ತ, ಗುಣಾತೀತ -ಎಂಬ ಬಗೆಬಗೆಯ ಹೆಸರುಗಳಿಂದ ಇಲ್ಲಿ ಕೃತಕೃತ್ಯರಾದವರ ಲಕ್ಷಣಗಳನ್ನು ಹೇಳಿರುತ್ತದೆ. ಇದರ ಪ್ರಯೋಜನವೆಲ್ಲ ಒಂದೇ; ನಾವು ಕೃತಕೃತ್ಯರಾಗುವದಕ್ಕೆ ಯಾವ ಸಾಧನವನ್ನು ಮಾಡಬಹುದು ಎಂದು ತಿಳಿಸುವದೇ ಈ ಲಕ್ಷಣವಾಕ್ಯಗಳ ಪ್ರಯೋಜನವು. ಒಂದೇ ವಿಷಯವನ್ನು ಜಿಜ್ಞಾಸುಗಳಿಗೆ ಸರಿಯಾಗಿ ಮನಸ್ಸಿಗೆ ಹಿಡಿಯುವವರೆಗೂ ಮತ್ತೆ ಮತ್ತೆ ಹೇಳುವದೇನೂ ದೋಷವಲ್ಲ. ಇಷ್ಟು ಹೇಳಿದಮೇಲೂ ತತ್ತ್ವವನ್ನು ತಪ್ಪಾಗಿ ತಿಳಿದುಕೊಳ್ಳುವವರೇ ಬಹಳ. ಪ್ರಕೃತವಾಗಿರುವ ಗುಣಾತೀತರಾದವರನ್ನು ವರ್ಣಿಸುವ ಒಂದಾನೊಂದು ಸಣ್ಣ ಪ್ರಕರಣವಿದೆ. ಅದರ ಶ್ಲೋಕಗಳ ಕೊನೆಯ ಚರಣವು `ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ' (ಮೂರು ಗುಣಗಳೂ ಇಲ್ಲದ

ಹಾದಿಯಲ್ಲಿ ಸಂಚರಿಸುತ್ತಿರುವವರಿಗೆ ಯಾವ ವಿಧಿಯು, ಯಾವ ನಿಷೇಧವು?) ಎಂದಿದೆ. ಈ ಶ್ಲೋಕವನ್ನು ಅಜ್ಞರು ತಪ್ಪಾಗಿ ತಿಳಿದುಕೊಳ್ಳುತ್ತಾರೆ. ಕೆಲವರು ಧೂರ್ತರು ನಾವು ತ್ರಿಗುಣಾತೀತರಾದ ಅವಧೂತರು ಎಂದುಕೊಳ್ಳುತ್ತಾ ಲೋಕವಿಲಕ್ಷಣವಾದ ವೇಷವನ್ನು ಧರಿಸಿ ಜನರನ್ನು ಮೋಹಗೊಳಿಸುತ್ತಿರುವರು. ಆದ್ದರಿಂದ ಈ ವಿಷಯವನ್ನು ಸ್ವಲ್ಪ ವಿಸ್ತಾರವಾಗಿ ತಿಳಿದುಕೊಳ್ಳುವದು ಹೆಚ್ಚಾಗಲಾರದು. ತಮ್ಮಗಳ ತಿಳಿವಳಿಕೆಗಾಗಿ ಆ ಶ್ಲೋಕಗಳನ್ನೆಲ್ಲ ಇಲ್ಲಿ ಓದುತ್ತೇನೆ. ಸಾವಧಾನವಾಗಿ ಕೇಳಿರಿ. ನಿಸ್ತ್ರೈಗುಣ್ಯರೆಂದರೆ ಸ್ವೇಚ್ಛಾಚಾರಿಗಳೆಂದೇನೂ ಅಭಿಪ್ರಾಯವಲ್ಲ. ಹೇಗೆ ನಡೆಯಬೇಕೆಂದು ತಿಳಿಯದ ಅಜ್ಞರು ಶಾಸ್ತ್ರವನ್ನು ನೋಡಿದ ಬಳಿಕ ಇದು ವಿಹಿತ, ಇದು ನಿಷಿದ್ಧ ಎಂದು ತಿಳಿದುಕೊಂಡು ವಿಹಿತವಾದದ್ದನ್ನು ಮಾಡುತ್ತಾರೆ, ನಿಷಿದ್ಧವಾದದ್ದನ್ನು ಬಿಡುತ್ತಾರೆ. ಶಾಸ್ತ್ರಜ್ಞರು ಅಭ್ಯಾಸಬಲದಿಂದ ವಿಹಿತಕರ್ಮಗಳನ್ನೇ ಮಾಡುತ್ತಾರೆ. ಜ್ಞಾನಿಗಳಾದವರು ವಿಧಿನಿಷೇಧಗಳಿಂದ ತಮಗೆ ಆಗಬೇಕಾದ ಸತ್ಫಲವಾಗಲಿ ತಪ್ಪಬೇಕಾದ ದುಷ್ಫಲವಾಗಲಿ ಇಲ್ಲದಿದ್ದರೂ ಹಿಂದಿನ ವಾಸನಾಬಲದಿಂದ ಉತ್ತಮ ರೀತಿಯಿಂದಲೇ ನಡೆದುಕೊಳ್ಳುತ್ತಾ ಮಿಕ್ಕವರಿಗೆಲ್ಲ ಆದರ್ಶರಾಗಿರುತ್ತಾರೆ. ಆದ್ದರಿಂದ ಗುಣಗಳನ್ನೆಲ್ಲ ಮೀರಿರುವ ಈ ಮಹಾಶಯರ ಸ್ವಭಾವವು ಹೇಗಿರುವದೆಂಬುದನ್ನು ಮಿಕ್ಕವರೂ ತಿಳಿದಿರಲೆಂದು ಈ ಶ್ಲೋಕಗಳು ಸಂಗೃಹೀತವಾಗಿವೆ - ಎಂದು ನನ್ನ ತಿಳಿವಳಿಕೆ. ಈಗ ಶ್ಲೋಕಗಳನ್ನು ಕೇಳಿರಿ:

ಭೇದಾಭೇದೌ ಸಪದಿ ಗಲಿತೌ ಪುಣ್ಯಪಾಪೇ ವಿಶೀರ್ಣೇ
ಮಾಯಾಮೋಹೌ ಕ್ಷಯಮಧಿಗತೌ ನಷ್ಟಸಂದೇಹವೃತ್ತೀ ।
ಶಬ್ದಾತೀತಂ ತ್ರಿಗುಣರಹಿತಂ ಪ್ರಾಪ್ಯ ತತ್ತ್ವಾವಬೋಧಮ್
ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ॥೧॥

೧. ಭೇದ, ಅಭೇದ - ಎರಡೂ ಕೂಡಲೆ ಹೋಗಿಬಿಟ್ಟವೆ ; ಪುಣ್ಯಪಾಪಗಳು ನಾಶವಾಗಿಬಿಟ್ಟಿವೆ ; ಸಂದೇಹದ ವ್ಯಾಪಾರವೇ ಇಲ್ಲದಂತೆ ಮಾಯಾಮೋಹಗಳು ಕಡೆಗಂಡಿರುತ್ತವೆ. ಹೀಗೆ ವಾಗತೀತವಾದ, ಮೂರು ಗುಣಗಳೂ ಇಲ್ಲದ ತತ್ತ್ವಜ್ಞಾನವನ್ನು ಹೊಂದಿ ನಿಸ್ತ್ರೈಗುಣ್ಯಮಾರ್ಗದಲ್ಲಿ ನಡೆಯುತ್ತಿರುವವರಿಗೆ ವಿಧಿ ಯಾವದು, ನಿಷೇಧವು ಯಾವದು ?

ತಂ ಸ್ವಾತ್ಮಾನಂ ಸಕಲವಪುಷಾಮೇಕಮನ್ತರ್ಬಹಿಷ್ಠಮ್
ದೃಷ್ಟ್ವಾ ಪೂರ್ಣಂ ಖಮಿವ ಸತತಂ ಸರ್ವಭಾಣ್ಡಸ್ಥಮೇಕಮ್ ।

ನಾನ್ಯತ್ಕಾರ್ಯಂ ಕಿಮಪಿ ಚ ತಥಾ ಕಾರಣಾದ್ಭಿನ್ನರೂಪಮ್
ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ॥೨॥

೨. ಎಲ್ಲಾ ಪಾತ್ರೆಗಳಲ್ಲಿಯೂ ತುಂಬಿರುವ ಆಕಾಶದಂತೆ ಸಕಲಶರೀರಗಳ ಒಳಗೂ ಹೊರಗೂ ತುಂಬಿರುವ ಅಖಂಡಾತ್ಮಸ್ವರೂಪವನ್ನು ನೋಡಿ ಕಾರಣವಾದ ಚೈತನ್ಯಕ್ಕಿಂತ ಬೇರೆಯಾಗಿರುವ ಕಾರ್ಯವೆಂಬುದು ಯಾವದೊಂದೂ ಇಲ್ಲವೆಂಬುದನ್ನು ಕಂಡುಕೊಂಡು ನಿಸ್ತ್ರೈಗುಣ್ಯಮಾರ್ಗದಲ್ಲಿ ಸಂಚರಿಸುತ್ತಿರುವವರಿಗೆ ವಿಧಿ ಯಾವದು, ನಿಷೇಧವು ಯಾವದು?

**ಯದ್ವನ್ನದ್ಯೋಽಮ್ಬುಧಿಮಧಿಗತಾಃ ಸಾಗರತ್ವಂ ಪ್ರಪನ್ನಾ -**
**ಸ್ತದ್ವಜ್ಜೀವಾಃ ಸಮರಸಗತಾಶ್ಚಿತ್ಸ್ವರೂಪಂ ಪ್ರಪನ್ನಾಃ ।**

**ವಾಚಾತೀತೇ ಸಮರಸಘನೇ ಸಚ್ಚಿದಾನನ್ದರೂಪೇ**
**ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ॥೩॥**

೩. ಹೇಗೆ ನದಿಗಳು ಸಮುದ್ರವನ್ನು ಸೇರಿ ತಾವೂ ಸಮುದ್ರವೇ ಆಗಿಬಿಡುವವೋ ಅದರಂತೆ ಜೀವರೂ ಅಖಂಡೈಕರಸವಾದ ಪರಮಾತ್ಮನನ್ನು ಹೊಂದಿ ತಾವೂ ಚಿತ್ಸ್ವರೂಪರೇ ಆಗಿಬಿಟ್ಟಿರುವರು. ಹೀಗೆ ವಾಗತೀತವಾಗಿ ಅಖಂಡೈಕರಸದ ಗಟ್ಟಿಯಾಗಿರುವ ಸಚ್ಚಿದಾನಂದಸ್ವರೂಪವೆಂಬ ನಿಸ್ತ್ರೈಗುಣ್ಯಮಾರ್ಗದಲ್ಲಿ ಸಂಚರಿಸುತ್ತಿರುವವರಿಗೆ ವಿಧಿ ಯಾವದು, ನಿಷೇಧವು ಯಾವದು ?

**ಹೇಮ್ನಃ ಕಾರ್ಯಂ ಹುತವಹಗತಂ ಹೇಮತಾಮೇತಿ ಯದ್ವತ್**
**ಕ್ಷೀರಂ ಕ್ಷೀರೇ ಸಮರಸಗತಂ ತೋಯಮೇವಾಮ್ಬುಮಧ್ಯೇ ।**

**ಏವಂ ಸರ್ವಂ ಸಮರಸಗತಂ ತ್ವಂಪದಂ ತತ್ಪದಾರ್ಥೇ**
**ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ॥೪॥**

೪. ಚಿನ್ನದಿಂದಾಗಿರುವ ಒಡವೆಯು ಬೆಂಕಿಯಲ್ಲಿ ಹಾಕಿದಾಗ ಹೇಗೆ ಚಿನ್ನವೇ ಆಗುವದೋ, ಹಾಲು ಹಾಲಿನಲ್ಲಿ ಸೇರಿ ಹೇಗೆ ಒಂದೇ ಬಗೆಯ ಹಾಲಾಗುವದೋ, ನೀರಿನಲ್ಲಿ ನೀರು ಬೆರೆತುಕೊಂಡರೆ ಹೇಗೆ ಒಂದೇ ಬಗೆಯ ನೀರಾಗುವದೋ ಅದೇ ಪ್ರಕಾರವಾಗಿ ತ್ವಂಪದಾರ್ಥವಾದ ಜೀವನೂ ತತ್ಪದಾರ್ಥವಾದ ಪರಮೇಶ್ವರನೂ ಎಲ್ಲವೂ ಅಖಂಡೈಕರಸವಾದ ಬ್ರಹ್ಮವನ್ನು ಸೇರಿ ಬ್ರಹ್ಮವೇ ಆಗಿರುವ ಇಂಥ ನಿಸ್ತ್ರೈಗುಣ್ಯಮಾರ್ಗದಲ್ಲಿ ಸಂಚರಿಸುತ್ತಿರುವವರಿಗೆ ವಿಧಿ ಯಾವದು, ನಿಷೇಧವ ಯಾವದು ?

**ಕಶ್ಚಾತ್ರಾಹಂ ಕಿಮಪಿ ಚ ಭವಾನ್ ಕೋಽಯಮತ್ರ ಪ್ರಪಞ್ಚಃ**
**ಸ್ವಾನ್ತರ್ವೇದ್ಯೇ ಗಗನಸದೃಶೇ ಪೂರ್ಣತತ್ತ್ವಪ್ರಕಾಶೇ ।**

**ಆನನ್ದಾಖ್ಯೇ ಸಮರಸಘನೇ ಬಾಹ್ಯಮನ್ತರ್ವಿಲೀನೇ**
**ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ॥೫॥**

೫. ತನ್ನೊಳಗೇ ತಿಳಿದುಬರುವ ಆಕಾಶತುಲ್ಯವಾಗಿರುವ ಪೂರ್ಣವಾದ ತತ್ತ್ವದ ಬೆಳಕಿನಲ್ಲಿ ನೋಡಿದರೆ ಅಲ್ಲಿ ನಾನು ಎಂಬುದು ಯಾವದು? ನೀನು ಎಂದರೆ ಏನು ? ಇಲ್ಲಿ ಪ್ರಪಂಚವೆಂಬುದು ಯಾವದು ? ಒಳಗೂ ಹೊರಗೂ ಇದ್ದುಕೊಂಡಿರುವ ಆನಂದವೆಂಬ ಅಖಂಡೈಕರಸದ ಗಟ್ಟಿಯಾದ ನಿಸ್ತ್ರೈಗುಣ್ಯಮಾರ್ಗದಲ್ಲಿ ಸಂಚರಿಸುತ್ತಿರುವವರಿಗೆ ವಿಧಿ ಯಾವದು, ನಿಷೇಧವು ಯಾವದು ?

**ದೃಷ್ಟ್ವಾ ಸರ್ವಂ ಪರಮಮಮೃತಂ ಸ್ವಪ್ರಕಾಶಸ್ವರೂಪಂ**
**ಬುದ್ಧ್ವಾ ತ್ಮಾನಂ ವಿಮಲಮಚಲಂ ಸಚ್ಚಿದಾನನ್ದರೂಪಮ್ ।**

**ಬ್ರಹ್ಮಾಧಾರಂ ಸಕಲಜಗತಾಂ ಸಾಕ್ಷಿಣಂ ನಿರ್ವಿಶೇಷಂ**
**ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ॥೬॥**

೬. ಎಲ್ಲವೂ ಶೇಷ್ಠವಾದ ನಾಶರಹಿತವಾದ ಸ್ವಪ್ರಕಾಶರೂಪವಾದ ಪರವಸ್ತುವೆಂಬುದನ್ನು ಕಂಡುಕೊಂಡು ತಮ್ಮ ಸ್ವರೂಪವು ನಿರ್ಮಲವಾದ ಚಲನರಹಿತವಾದ ಸಚ್ಚಿದಾನಂದರೂಪವಾದ ಸಕಲಜಗದಾಧಾರವಾದ ಬ್ರಹ್ಮವೇ, ಸರ್ವಕ್ಕೂ ಸಾಕ್ಷಿಯಾದ ನಿರ್ವಿಶೇಷಚೈತನ್ಯವೇ - ಎಂಬುದನ್ನು ಅರಿತುಕೊಂಡು ನಿಸ್ತ್ರೈಗುಣ್ಯಮಾರ್ಗದಲ್ಲಿ ಸಂಚರಿಸುತ್ತಿರುವವರಿಗೆ ವಿಧಿ ಯಾವದು, ನಿಷೇಧವು ಯಾವದು ?

**ಕಾರ್ಯಾಕಾರ್ಯಂ ಕಿಮಪಿ ಚರಿತಂ ನೈವ ಕರ್ತೃತ್ವಮಸ್ತಿ**
**ಜೀವನ್ಮುಕ್ತಿಸ್ಥಿತಿರತಿಗತಾ ದಗ್ಧವಸ್ತ್ರಾವಭಾಸಾ ।**

**ಏವಂ ದೇಹೇ ಪ್ರಚಲಿತತಯಾ ದೃಶ್ಯಮಾನೇಽಪಿ ಮುಕ್ತೌ**
**ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ॥೭॥**

೭. ಮಾಡತಕ್ಕದ್ದು, ಮಾಡಬಾರದ್ದು - ಯಾವದೊಂದು ಕೃತ್ಯವೂ ಇರುವದಿಲ್ಲ ; ಕರ್ತೃತ್ವವು ಇಲ್ಲವೇ ಇಲ್ಲ ; ಸುಟ್ಟ ಬಟ್ಟೆಯ ಸ್ಥಿತಿಯಂತೆ ಬರಿಯ ತೋರಿಕೆಯ ಆಕಾರವುಳ್ಳ ಜೀವನ್ಮುಕ್ತಸ್ಥಿತಿಯು ದೊರಕಿತು. ಹೀಗೆ ದೇಹವು ಅತ್ತಿತ್ತ ಅಡ್ಡಾಡುತ್ತಿರುವಂತೆ ತೋರಿದರೂ ಮುಕ್ತಿಯೆಂಬ ನಿಸ್ತ್ರೈಗುಣ್ಯಮಾರ್ಗದಲ್ಲಿ ಸಂಚರಿಸುತ್ತಿರುವವರಿಗೆ ವಿಧಿ ಯಾವದು, ನಿಷೇಧವು ಯಾವದು ?

**ಯಸ್ಮಿನ್ ವಿಶ್ವಂ ಸಕಲಭುವನಂ ಸೈನ್ಧವಂ ಸಿನ್ಧುಮಧ್ಯೇ**
**ಪೃಥ್ವ್ಯಪ್ಸ್ವಗ್ನಿಶ್ವಸನಗಗನಂ ಜೀವಭಾವಃ ಕ್ರಮೇಣ ।**

**ಯದ್ವಲ್ಲೀನಂ ತದಿದಮಖಿಲಂ ಸಚ್ಚಿದಾನನ್ದರೂಪಂ**
**ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ॥೮॥**

೮. ಕಡಲಿನಲ್ಲಿ ಬಿದ್ದ ಉಪ್ಪಿನ ಹರಳು ನೀರೇ ಆಗುವಂತೆ ಯಾವದರಲ್ಲಿ ಬಿದ್ದು ಸಕಲಭುವನಗಳಿಂದೊಡಗೂಡಿದ ವಿಶ್ವವೆಲ್ಲವೂ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಜೀವತ್ವ - ಈ ಕ್ರಮದಿಂದ ಯಾವಯಾವದು ಲಯವಾಗುವದೋ ಅದೆಲ್ಲವೂ ಸಚ್ಚಿದಾನಂದರೂಪವೇ ಆಗುವದೋ ಅಂಥ ನಿಸ್ತ್ರೈಗುಣ್ಯಮಾರ್ಗದಲ್ಲಿ ಸಂಚರಿಸುತ್ತಿರುವವರಿಗೆ ವಿಧಿ ಯಾವದು, ನಿಷೇಧವು ಯಾವದು ?

**ಸತ್ಯಂ ಸತ್ಯಂ ಪರಮಮಮೃತಂ ಶಾನ್ತಿಕಲ್ಯಾಣಹೇತುಂ**
**ಮಾಯಾರಣ್ಯೇ ದಹನಮಮಲಂ ಧ್ವಾನ್ತನಿರ್ವಾಣಮಾರ್ಗಮ್ ।**
**ತೇಜೋರಾಶಿಂ ನಿಗಮಸದನಂ ವ್ಯಾಸಪುತ್ರಾಷ್ಟಕಂ ಯಃ**
**ಪ್ರಾತಃಕಾಲೇ ಪಠತಿ ವಚಸಾ (?) ಯಾತಿ ನಿರ್ವಾಣಮಾರ್ಗಮ್ ।।೯।।**

೯. ಸತ್ಯವಾಗಿಯೂ ಪರಮಸತ್ಯವಾಗಿ, ಅಮೃತಸ್ವರೂಪವಾಗಿ, ಶಾಂತಿ ಕಲ್ಯಾಣಗಳಿಗೆ ಕಾರಣವಾಗಿ, ಮಾಯಾರಣ್ಯಕ್ಕೆ ನಿರ್ಮಲವಾದ ಅಗ್ನಿಯಾಗಿ, ಅಜ್ಞಾನವೆಂಬ ಕತ್ತಲೆಯನ್ನು ತೊಲಗಿಸುವ ತೇಜಸ್ಸಿನ ದೀಪದ ರಾಶಿಯಾಗಿ ವೇದಾಂತದ ನಿಲಯವಾಗಿರುವ ಈ ಶುಕಾಷ್ಟಕವನ್ನು ಯಾರು ಪ್ರಾತಃಕಾಲದಲ್ಲಿ ಪಠಿಸುತ್ತಾರೋ ಅವರು ಮೋಕ್ಷಮಾರ್ಗವನ್ನು ಹೊಂದುತ್ತಾರೆ.

ಈ ಶ್ಲೋಕಗಳನ್ನು **"ಶುಕಾಷ್ಟಕ"** ಎಂದು ಕರೆದಿದೆ. ಇದನ್ನು ಯಾರು ಬರೆದರೋ, ಮೂಲಗ್ರಂಥವು ಇದೇ ರೂಪದಲ್ಲಿತ್ತೋ ಇಲ್ಲವೋ, ಅದು ಈಗ ವಿಚಾರಕ್ಕೆ ವಿಷಯವಲ್ಲ. ಗ್ರಂಥದ ಶೈಲಿ, ಭಾಷೆ - ಮುಂತಾದವುಗಳೂ ನಮಗೆ ಮುಖ್ಯವಲ್ಲ ; ಆದರೆ ನಿಸ್ತ್ರೈಗುಣ್ಯರೆಂದರೆ ಯಾರು ? - ಎಂಬ ಬಗ್ಗೆ ಇಲ್ಲಿ ಉತ್ತಮವಾದ ಸೂಚನೆಗಳಿವೆ. ಯಾವದೋ ಒಂದು ವೇಷ. ಯಾವದೋ ಒಂದು ಭಾಷೆ - ಇವನ್ನು ನೋಡಿ ಜನರನ್ನು ಸಾಧುಗಳೆಂದು ಭಾವಿಸುವ ವಾಡಿಕೆಯು ನಮ್ಮಲ್ಲಿದೆ. ಆದರೆ ಯಾವ ಮಹನೀಯರನ್ನು ನೋಡಿದಮಾತ್ರದಿಂದ ನಮ್ಮ ಮನಸ್ಸಿಗೆ ಶಾಂತಿಯು ದೊರಕುವದೋ, ಯಾರ ನುಡಿಯಿಂದ ನಮಗೆ ಸಾತ್ತ್ವಿಕಭಾವನೆಗಳಿಗೆ ಮಾರ್ಗವು ದೊರೆಯುವದೋ, ಅವರು ನಿಜವಾಗಿಯೂ ಸಾಧುಗಳೆನ್ನುವದಕ್ಕೆ ಸಂಶಯವಿಲ್ಲ. ವಯಸ್ಸು ಹೆಚ್ಚಾಗಿದ್ದರೂ ಪ್ರಾಯದವರಂತೆ ಕಾಣುವದು, ಗಡ್ಡಮೀಸೆಗಳನ್ನು ಬೆಳೆಸಿಕೊಂಡಿರುವದು ಅಥವಾ ಬೋಳಿಸಿಕೊಂಡಿರುವದು, ಯೋಗಸಾಧನೆಯಿಂದ ಇಂತಿಷ್ಟು ಅಡಿಗಳು ಎತ್ತರಕ್ಕೆ ಏಳುತ್ತಾರೆಂಬ ಪ್ರಸಿದ್ಧಿಯಿರುವದು, ಹಲವು ದಿನಗಳು ಉಪವಾಸದಿಂದ ಏಕಾಸನದಲ್ಲಿ ಕುಳಿತಿರುವದು, ಆಕಾಶಯಾನ, ಅಗ್ನಿಸ್ತಂಭನ, ಜಲಸ್ತಂಭನೆಯೇ ಮುಂತಾದ ಅದ್ಭುತಕೃತಿಗಳು - ಇವುಗಳ ಮೇಲಿಂದ ತ್ರಿಗುಣಾತೀತರೆಂದು ತಿಳಿಯುವದಕ್ಕಾಗುವದಿಲ್ಲವೆಂಬುದನ್ನು ನಾವು ನೆನಪಿನಲ್ಲಿಡಬೇಕು. ಯಾರಿಂದ ನಮಗೆ ಶಾಂತಿಸುಖಗಳಿಗೆ ಮಾರ್ಗವು ದೊರಕುವದೋ ಭಗವಂತನು ಈ ಮುಂದೆ ಹೇಳಿರುವ ಲಕ್ಷಣಗಳಿರುವವೆಂದು ಯಾರು ನಮಗೆ ತೋರುವರೋ ಅವರೇ ತ್ರಿಗುಣಾತೀತರು. ಅಂಥವರ ಸೇವೆಯೇ ನಮಗೆ ಕಲ್ಯಾಣವನ್ನುಂಟುಮಾಡುವದು.

# ೧೩೪. ತ್ರಿಗುಣಾತೀತನ ಲಕ್ಷಣ 14 - (22-23)

**(3-7-49)**

ಗುಣಗಳನ್ನು ದಾಟುವದೆಂದರೇನೆಂಬುದನ್ನು ಹಿಂದೆ ತಿಳಿಸಿದ್ದಾಗಿದೆ. ನಾವು ಇದ್ದಲ್ಲಿಯೇ ಇದ್ದುಕೊಂಡು ಗುಣಗಳನ್ನು ದಾಟಬೇಕಾಗಿದೆ. ಗುಣಗಳೆಂದರೂ ಮಾಯೆಯೆಂದರೂ ಒಂದೇ. ಮಾಯೆಯು ಅಥವಾ ಗುಣಗಳು ಬರಿಯ ತೋರಿಕೆಯಾಗಿರುವದರಿಂದ ಪರಮಾರ್ಥ ಜ್ಞಾನದಿಂದಲೇ ಗುಣಗಳನ್ನು ದಾಟಬಹುದು. ಇಲ್ಲದಿದ್ದರೆ ಸರ್ವಕಾರ್ಯ ವ್ಯಾಪಿಗಳಾದ ಗುಣಗಳನ್ನು ದಾಟುವದು ಯಾವನಿಂದಲೂ ಆಗಲಾರದು.

ಮಾಯೆ ಎಂಬ ಶಬ್ದವನ್ನು ಶಾಸ್ತ್ರಜ್ಞರು ಪ್ರಯೋಗಿಸಿರುತ್ತಾರೆ. ಮಾಯೆಯು ಎಲ್ಲರಿಗೂ ಮಾಯೆಯೆಂದು ತೋರುವದಿಲ್ಲ. ಅದು ಪರಮಾರ್ಥವೆಂದೇ ಬಹುಜನರು ತಿಳಿದಿರುತ್ತಾರೆ. ಸಮರ್ಥ ರಾಮದಾಸರ ಬಳಿಯಲ್ಲಿ ಒಬ್ಬ ಪಂಡಿತನಿದ್ದನು. ಅವನು ಆಗಾಗ್ಗೆ ಜಗತ್ತು ರಜ್ಜುಸರ್ಪದಂತೆ ಎಂಬ ವೇದಾಂತಿಗಳ ದೃಷ್ಟಾಂತವನ್ನು ಬಳಸಿಕೊಂಡು ಸಮರ್ಥರ ಶಿಷ್ಯರುಗಳಿಗೆ ವ್ಯಾಮೋಹವನ್ನುಂಟುಮಾಡುತ್ತಿದ್ದನು. ಸಾಧಕರಾದವರು ಸಾಧನೆಯಿಂದ ತಾನೆ ಕೃತಾರ್ಥರಾಗಬೇಕು ? ಆದರೆ ಸಾಧನ, ಸಾಧ್ಯ - ಎಲ್ಲವೂ ಮಾಯೆ ಎಂದು ಕೃತಕೃತ್ಯರ ಮಾತುಗಳನ್ನು ಆಡುತ್ತಾ ಈ ಪಂಡಿತನು ಜೊತೆಯಲ್ಲಿದ್ದವರಿಗೆಲ್ಲ ಸಾಧನೆಗೆ ಅಡಚಣೆಯನ್ನು ತಂದು ಒಡ್ಡುತ್ತಿದ್ದನು. ಒಮ್ಮೆ ಒಬ್ಬ ಗಾರುಡಿಯು ಸಮರ್ಥರ ಮುಂದೆ ತನ್ನ ಇಂದ್ರಜಾಲಕೌಶಲವನ್ನು ತೋರಿಸುವದಕ್ಕೆಂದು ಬಂದನು. ಒಂದು ಹಗ್ಗವನ್ನು ಎಲ್ಲರಿಗೂ ತೋರಿಸಿ ಅದನ್ನು ಹಾವೆಂದು ದೂರಕ್ಕೆ ಎಸೆದನು. ಅದು ಹಾವಿನ ಹಾಗೆಯೇ ಹೆಡೆಯನ್ನು ಬಿಟ್ಟುಕೊಂಡು ಆಡುವದಕ್ಕೆ ಪ್ರಾರಂಭಿಸಿತು. ಸಮರ್ಥರು ಪಂಡಿತನನ್ನು ಕರೆದು 'ಏನಯ್ಯ, ಇದು ಹಾವೊ, ಹಗ್ಗವೊ ?' ಎಂದು ಕೇಳಿದರು. ಪಂಡಿತನು 'ಅದು ಹಗ್ಗವೇ, ನಮಗೆಲ್ಲ ಈಗತಾನೆ ತೋರಿಸಿದಾನಷ್ಟೆ, ?' ಎಂದನು. 'ಹಾಗಾದರೆ ಆ ಹಗ್ಗವನ್ನು ಇಲ್ಲಿಗೆ ತೆಗೆದುಕೊಂಡುಬಾ' ಎಂದು ಸಮರ್ಥರೆನ್ನಲು ಪಂಡಿತನು ಅದರ ಬಳಿಗೆ ಹೋದನು. ಆದರೆ, ಹಾವು ಅವನ ಕಡೆಗೇ ಹರಿದುಬರುವಂತೆ ಅವನಿಗೆ ಕಾಣಿಸಿತು ; ಪಂಡಿತನು ಅಂಜಿಕೆಯಿಂದ ಹಿಂಜರಿದನು. ಎಲ್ಲರೂ ಅವನ ಆಟಕ್ಕೆ ನಕ್ಕರು. ಅಷ್ಟರಲ್ಲಿ ಸಮರ್ಥರು ಆ ಹಗ್ಗವನ್ನು ತಾವೇ ಕೈಯಲ್ಲಿ ಹಿಡಿದುಕೊಂಡು ಬಂದರು ; ಅದು ಹಗ್ಗವೇ ಎಂಬುದು ಎಲ್ಲರಿಗೂ ಮನದಟ್ಟಾಯಿತು. ಸಮರ್ಥರು ಪಂಡಿತನನ್ನು ಕುರಿತು 'ಅಪ್ಪ, ಇದು ನಿಜವಾಗಿಯೂ ಹಗ್ಗವೇ; ಆದರೂ ಹಾವಿನಂತೆ ಅಂಜಿಕೆಯನ್ನು ಮಾಡಿತಷ್ಟೆ ; ಇದರಂತೆ ಜಗತ್ತು ನಿಜವಾಗಿ ಜಗತ್ತಿನ ಆಕಾರದಲ್ಲಿರುವದಿಲ್ಲವಾದರೂ ಪರಮಾತ್ಮನನ್ನು ಅರಿಯದವರಿಗೆ ಅದು ಸತ್ಯವಾಗಿಯೇ ಇರುತ್ತದೆ. ಪರಮೇಶ್ವರನ ಭಕ್ತಿಯಿಂದ ಆತನ ಸ್ವರೂಪವನ್ನು ಸಾಕ್ಷಾತ್ಕಾರಪಡಿಸಿಕೊಂಡ ಹೊರತು ಮತ್ತೆ ಯಾರೂ ಈ ಜಗತ್ತು ರಜ್ಜುಸರ್ಪದಂತೆ ಎಂದು ಹೇಳುವದಕ್ಕೆ ಅಧಿಕಾರಿಗಳಲ್ಲ' ಎಂದು ಬುದ್ಧಿಹೇಳಿದರಂತೆ.

ಹೀಗಿರುವದರಿಂದ ಸಾಧಕಾವಸ್ಥೆಯಲ್ಲಿರುವವರೆಗೂ ನಮಗೆ ಈ ಪ್ರಪಂಚವು ಸತ್ಯವೇ ಆಗಿರುತ್ತದೆ. ಪ್ರಪಂಚವು ಮಿಥ್ಯೆ, ಕರ್ಮಾಚರಣೆ. ಉಪಾಸನೆ, ಗುರೂಪಸತ್ತಿ, ಭಕ್ತಿ - ಇವೆಲ್ಲ ಮಿಥ್ಯೆಯೆಂದುಕೊಂಡು ಮೋಸಹೋಗಬಾರದು. ಸುಖದುಃಖಗಳು ನಮಗೆ ಅನುಭವ ದಲ್ಲಿರುತ್ತವೆ. ಅವನ್ನು ಸುಳ್ಳು ಎಂದದ್ದರಿಂದ ನಮಗೆ ಯಾವ ಲಾಭವೂ ಇಲ್ಲ. ಅವನ್ನು ಕಳೆದುಕೊಳ್ಳುವದಕ್ಕೆ ಸಾಧನವನ್ನು ಮಾಡುವದರಿಂದ ಬಹಳ ಪ್ರಯೋಜನವಿದೆ. ದೊಡ್ಡವರು ಆಡುವ ಮಾತುಗಳನ್ನು ನಾವು ಎರವುತೆಗೆದುಕೊಂಡಮಾತ್ರದಿಂದ ಅವು ನಮ್ಮ ಅನುಭವದ ಮಾತುಗಳಾಗಲಾರವು. ವಿಷಯಗಳೂ ಇಂದ್ರಿಯಗಳೂ ನಮ್ಮ ಮೇಲೆ ತಮ್ಮ ಕೈಚಳಕವನ್ನು ತೋರಿಸುವದು ಎಂದಿಗೂ ತಪ್ಪುವದಿಲ್ಲ. ಆದ್ದರಿಂದ ಈಗಾಗಲೆ ನಾವು ಗುಣಾತೀತ ರಾಗಿರುವೆವೆಂಬ ಭ್ರಾಂತಿಯನ್ನು ಬಿಟ್ಟು, ಗುಣಾತೀತರಾಗುವದಕ್ಕೆ ಬೇಕಾದ ಸಾಧನವನ್ನು ಕೈಗೊಳ್ಳಬೇಕು. ಆದ್ದರಿಂದ ಈ ಮುಂದೆ ಹೇಳುವ ಗುಣಾತೀತನ ಲಕ್ಷಣಗಳನ್ನು ಈ ದೃಷ್ಟಿಯಿಂದಲೇ ನಾವು ವಿಮರ್ಶಿಸಬೇಕು.

ಮೊಟ್ಟಮೊದಲು ಗುಣಾತೀತನ ಗುರುತುಗಳು ಯಾವವು ?- ಎಂಬ ಪ್ರಶ್ನೆಗೆ ಭಗವಂತನು ಉತ್ತರವನ್ನು ಕೊಟ್ಟಿರುತ್ತಾನೆ.

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಣ್ಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಙ್ಕ್ಷತಿ ॥ 14-22**

'ಪ್ರಕಾಶ, ಪ್ರವೃತ್ತಿ, ಮೋಹ - ಇವು ಬಂದರೆ ದ್ವೇಷಮಾಡದೆ ಇರುತ್ತಾನೆ, ತೊಲಗಿದರೆ ಅವು ಬೇಕೆನ್ನುವದಿಲ್ಲ.' ಇದು ಗುಣಾತೀತನ ಗುರುತು ; ಪ್ರಕಾಶವೆಂಬುದು ಸತ್ತ್ವದ ಕಾರ್ಯವಾದ ಜ್ಞಾನಾದಿಗಳು ; ಪ್ರವೃತ್ತಿಯು ರಜೋಗುಣದಿಂದಾಗುವ ವ್ಯಾಪಾರವು ; ಮೋಹವು ತಮೋಗುಣದ ಕಾರ್ಯವು. ಇಲ್ಲಿ ಗುಣಗಳಿಗೆ ಒಂದೊಂದೇ ಫಲವನ್ನು ಹೇಳಿದ್ದರೂ ಇವನ್ನು ಉಪಲಕ್ಷಣವಾಗಿ ಗ್ರಹಿಸಬೇಕು. ಸಾಮಾನ್ಯರಿಗೆ ಈ ಗುಣಗಳಲ್ಲಿ ಒಂದೊಂದು ಕಾಲದಲ್ಲಿ ಒಂದೊಂದು ಬರುತ್ತಿರುವವು. ಸತ್ತ್ವದಿಂದ ಉಂಟಾಗಿರುವ ಜ್ಞಾನವಾಗಲಿ ಸುಖವಾಗಲಿ ಉಂಟಾದರೆ ಜನರಿಗೆ ಸಂತೋಷ ; ಅವು ಹೋದರೆ ದುಃಖ. ರಜಸ್ಸಿನ ಕಾರ್ಯವಾದ ಕಾಮ, ಕ್ರೋಧ - ಮುಂತಾದವುಗಳನ್ನು ತಾದಾತ್ಮ್ಯಭಾವದಿಂದ ತಮ್ಮ ಮೇಲೆ ಹಾಕಿಕೊಂಡು ನಾನು ಇಂಥ ಭೋಗವನ್ನು ಅನುಭವಿಸಿದೆನು, ನಾನು ಕೋಪ ಬಂದಾಗ ಇಂಥವನನ್ನು ದಮನಮಾಡಿದೆನು ಎಂದು ಹಿಗ್ಗುವವರೂ ಆ ಭೋಗದರ್ಪಾದಿಗಳು ಹೋದಾಗ ಶೋಕಿಸುವವರೂ ಹಲವು ಮಂದಿ. ಅಲ್ಪರಾಗಿದ್ದುಕೊಂಡು ತಮಃಕಾರ್ಯವಾದ ನಿದ್ರಾದಿಗಳನ್ನು ಕೂಡ ಆಹ್ವಾನಮಾಡಿ ಸಂತೋಷಪಡುವವರಿಗೇನೂ ಲೋಕದಲ್ಲಿ ಕಡಿಮೆಯಿಲ್ಲ. ಈ ಪ್ರಕಾರದ ಕೀಳ್ತರದ ಮನಸ್ಸಿನವರಿಗಿಂತ ಮೇಲಿನ ಹಂತದ ಮನಸ್ಸುಳ್ಳವರು ಸಾಧಕರು. ಅವರಿಗೆ ಸತ್ತ್ವಗುಣವು ಬೇಕು, ಆದರೆ ರಜಸ್ತಮಸ್ಸುಗಳು ಬೇಡ. 'ಅಯ್ಯೋ ! ತಾಮಸಪ್ರತ್ಯಯವುಂಟಾಗಿ ನನಗೆ ಏನೊಂದೂ ತೋಚದಂತಾಯಿತು' 'ರಜೋಗುಣದಿಂದ ಕಾಮವು ಅಥವಾ ಸಿಟ್ಟು ಬಂದು

ಮಾಡಬಾರದ್ದನ್ನೆಲ್ಲ ಮಾಡಿಬಿಟ್ಟೆನು' 'ಸತ್ತ್ವಗುಣದಿಂದ ನನಗೆ ಆಗಾಗ್ಗೆ ಸುಖಾಭಿಮಾನವುಂಟಾಗುತ್ತದೆ' - ಎಂದು ಸಾಧಕರು ಕೆಲವರು ಗೋಣಗುಟ್ಟುತ್ತಿರುವರು. ಸಾತ್ತ್ವಿಕಸಾಧನಗಳೆಂದು ತಮಗೆ ತೋರಿದವುಗಳನ್ನು ಮತ್ತೆ ಬರಲಿ ! - ಎಂದು ಹಂಬಲಿಸುತ್ತಿರುವರು. ಆದರೆ ಹರ್ಷವಿಷಾದಗಳಿಂದಲೂ ಹಂಬಲಿಕೆಯಿಂದಲೂ ಮನಸ್ಸನ್ನು ಕ್ಲೇಶಪಡಿಸುತ್ತಿರುವದೇ ಗುಣತ್ರಯಕ್ಕೆ ಒಳಗಾದದ್ದರ ಗುರುತು ಎಂಬುದು ಅವರಿಗೆ ತಿಳಿಯದೆ ಇರುತ್ತದೆ. ಗುಣಾತೀತರೋ ಎಂದರೆ ಯಾವ ಗುಣದ ಕಾರ್ಯವು ಯಾವಾಗ ತೋರಿಕೊಂಡರೂ ಸ್ವಲ್ಪವೂ ಏರುಪೇರಾಗುವದಿಲ್ಲ. ಇದು ನನಗೆ ಬೇಕಾದದ್ದೆಂದಾಗಲಿ, ಇದು, ಬೇಡದ್ದೆಂದಾಗಲಿ ಅವರು ಎಂದಿಗೂ ಬಗೆಯುವದಿಲ್ಲ. ಹೀಗೆ ದ್ವೇಷವಾಗಲಿ ಆಕಾಂಕ್ಷೆಯಾಗಲಿ ಉಂಟಾದದ್ದು ತನತನಗೇ ತಿಳಿಯಬೇಕಾಗಿರುತ್ತದೆ; ಮತ್ತೊಬ್ಬನಿಗೆ ಗುಣಗಳಲ್ಲಿ ರಾಗವಾಗಲಿ ದ್ವೇಷವಾಗಲಿ ಇದೆ ಎಂಬುದನ್ನು ನಾವು ತಿಳಿದುಕೊಳ್ಳಲಾರೆವು. ಆದರೂ ನಮ್ಮ ನಮ್ಮ ಮನಸ್ಸಿನ ತಿಳಿವನ್ನು ಅರಿತುಕೊಳ್ಳುವದಕ್ಕೆ ಈ ಹೆಗ್ಗುರುತು ಸಹಾಯಕವಾಗಿರುತ್ತದೆ.

ಗುಣಾತೀತನ ಆಚಾರವು ಹೇಗಿರುತ್ತದೆ ?- ಎಂದರೆ :

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ |**
**ಗುಣಾ ವರ್ತನ್ತ ಇತ್ಯೇವ ಯೋಽವತಿಷ್ಠತಿ ನೇಙ್ಗತೇ ||** **14-23**

ಅವನು ಉದಾಸೀನನಂತೆ ಇರುತ್ತಾನೆ ; ಗುಣಗಳಿಂದ ಒಂದಿಷ್ಟೂ ಕದಲುವದಿಲ್ಲ. ಗುಣಗಳು ತಮ್ಮ ವೃತ್ತಿಗಳನ್ನು ಪ್ರಕಟಮಾಡುತ್ತಿವೆ ಎಂದೇ ಅವನು ಸುಮ್ಮನಿರುತ್ತಾನೆ, ಅಲುಗಾಡದೆ ಇರುತ್ತಾನೆ. ನಿಮ್ಮಲ್ಲಿ ಕೆಲವರಿಗೆ ಕೆಲಕೆಲವು ಸಂದರ್ಭದಲ್ಲಿ ಯಾವ ವ್ಯವಹಾರವೂ ಬೇಕಾಗುವದಿಲ್ಲ ; ಆಗ ನಾವು ತೆಪ್ಪನೆ ಇದ್ದುಬಿಡುತ್ತೇವೆ. ಈ ಸ್ಥಿತಿಯನ್ನೇ ಔದಾಸೀನ್ಯವೆಂದು ಸಾಮಾನ್ಯವಾಗಿ ಜನರು ವ್ಯವಹರಿಸುವರು. ಆದರೆ ತ್ರಿಗುಣಾತೀತನು ಹಾಗಿರುವದಿಲ್ಲ. ಅವನು ಕನ್ನಡಿಯಂತೆ ಸ್ವಚ್ಛನಾಗಿರುತ್ತಾನೆಂಬುದನ್ನು 'ಉದಾಸೀನನಂತೆ' ಎಂಬ ಉಪಮಾನವು ತಿಳಿಸುತ್ತದೆ. ಕನ್ನಡಿಯನ್ನು ನೋಡಿರಿ. ಅದು ತನ್ನ ಮುಂದೆ ಯಾವ ಪದಾರ್ಥವು ಬಂದರೂ ಅದರ ಪ್ರತಿಬಂಬವನ್ನು ಧರಿಸುತ್ತದೆ. ಆದರೆ ಆ ವಸ್ತುವು ಅತ್ತ ಸರಿದರೆ ಪ್ರತಿಬಿಂಬವೂ ಹೋಗಿಬಿಡುತ್ತದೆ. ಆ ಬಳಿಕ ಪ್ರತಿಬಿಂಬದಿಂದಾದ ಯಾವ ಕಲಂಕವೂ ಕನ್ನಡಿಗೆ ಹತ್ತಿಕೊಂಡಿರುವದಿಲ್ಲ. ಅಲ್ಲವೆ ? ಇದರಂತೆ ಗುಣಾತೀತನ ಮನಸ್ಸಿಗೆ ಸತ್ತ್ವಾದಿಗುಣಗಳ ಯಾವ ಕಾರ್ಯವು ಹೊಳೆದರೂ ಅದು ಬರುವಾಗ, ಇರುವಾಗ, ಅಥವಾ ಹೋಗುವಾಗ ಅವನ ಮನಸ್ಸಿನಲ್ಲಿ ಯಾವ ಮಾರ್ಪಾಡೂ ಆಗಿರುವದಿಲ್ಲ.

ಗುಣಾತೀತರು ಸ್ವಭಾವದಿಂದಲೇ ಹೀಗಿರುತ್ತಾರಾದರೂ ನಮ್ಮಂಥವರಿಗೆಲ್ಲ ಇದು ಸುಮ್ಮನೆ ದಕ್ಕುವ ಸ್ಥಿತಿಯಲ್ಲ. ಗುಣಾತೀತರಿಗೇನೋ ಗುಣಗಳು ಸಾಕ್ಷ್ಯವಾಗಿರುತ್ತವೆ. ಅವರು ಅವಕ್ಕೆ ಸಾಕ್ಷಿಯಾಗಿರುತ್ತಾರೆ ; ಆದ್ದರಿಂದ ಗುಣಗಳಿಗೂ ತಮಗೂ ಯಾವ ಸಂಬಂಧವೂ

ಇಲ್ಲವೆಂಬುದನ್ನು ಅವರು ನಿತ್ಯವೂ ಅನುಭವಿಸುತ್ತಲೇ ಇರುತ್ತಾರೆ. ಆದ್ದರಿಂದ ಅವರ ವಿಚಾರವೇನೋ ಸರಿಯಾಯಿತು. ಆದರೆ ನಾವುಗಳು ಪ್ರಯತ್ನದಿಂದ ಅವುಗಳನ್ನು ಮೀರುವದಕ್ಕೆ ಸಜ್ಜಾಗಬೇಕಲ್ಲ, ಅದಕ್ಕೇನು ಮಾಡಬೇಕು ? ಗುಣಗಳು ಬರುತ್ತವೆ, ಹೋಗುತ್ತವೆ - ಎಂದು ಉದಾಸೀನರಾಗಿ ಸುಮ್ಮನೆ ಕೂತುಕೊಳ್ಳುವದಕ್ಕೆ ಆಗುವದಿಲ್ಲ ; ಏಕೆಂದರೆ ನಮ್ಮಗಳಿಗೆ ಗುಣಗಳು ವಿಷಯರೂಪದಿಂದ ಬಂದಾಗ ಅವುಗಳಲ್ಲಿಯೇ ನಮ್ಮ ಮನಸ್ಸು ನೆಟ್ಟುಕೊಂಡುಬಿಡುತ್ತದೆ. ವೃತ್ತಿರೂಪವಾದ ಕಾಮಕ್ರೋಧ ಸುಖದುಃಖಾದಿಗಳಲ್ಲಂತೂ ತಾದಾತ್ಮ್ಯವನ್ನೇ ಹೊಂದಿಬಿಟ್ಟಿರುತ್ತವೆ. ಕಾಮವುಂಟಾದಾಗ ನಾವೇ ಕಾಮವಾಗಿರುವಂತೆ, ಕ್ರೋಧವುಂಟಾದಾಗ ನಾವೇ ಕ್ರೋಧವಾಗಿದ್ದಂತೆ ನಮ್ಮ ಸ್ಥಿತಿಯು ಆಗಿಬಿಟ್ಟಿರುತ್ತದೆ. ಹೊರಗಿನ ಗುಣಗಳನ್ನು ಕೊಡವಿಕೊಂಡರೂ ಒಳಗಿನ ಇಂದ್ರಿಯ, ಮನಸ್ಸು - ಮುಂತಾದವುಗಳ ರೂಪದಲ್ಲಿರುವ ಗುಣಗಳ ಉಪಟಳದಿಂದ ಪಾರಾಗುವದು ಬರಿಯ ಸ್ವಪ್ರಯತ್ನದಿಂದ ಆಗುವಹಾಗಿರುವದಿಲ್ಲ. ನಾವು ಯಾವ ಗುಣದಿಂದ ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನಿಸುವೆವೋ ಅದರ ಹಾವಳಿಯು ಇನ್ನಷ್ಟು ಬಲವಾಗುವ ಸಂಭವವೇ ಹೆಚ್ಚಾಗಿರುತ್ತದೆ. ಅದನ್ನು ಮೀರುವದಕ್ಕೆ ಒಂದೇ ಒಂದು ಸುಲಭವಾದ ಉಪಾಯವಿದೆ. ಅದೇನೆಂದರೆ ಗುಣಗಳು ನಮ್ಮ ಮೇಲೆ ಕೈಮಾಡುವಂತೆ ಕಂಡಾಗಲೆಲ್ಲ ಭಗವಂತನಿಗೆ ಮೊರೆಯಿಡಬೇಕು. "ದೇವ, ನಿನ್ನನ್ನು ಮೊರೆ ಹೊಕ್ಕಿರುವೆನು. ಈ ಗುಣಗಳು ನನ್ನನ್ನು ತೊಂದರೆಪಡಿಸದಂತೆ ಮಾಡು !" ಎಂದು ಬೇಡಿಕೊಳ್ಳಬೇಕು. ಆಗ ಗುಣಗಳ ಕಾಟವು ನಮಗೆ ತಪ್ಪುತ್ತದೆ.

ಸಾಧನಸ್ಥಿತಿಯಲ್ಲಿರುವವರಿಗೆ ಇರುವ ಒಂದು ಅಸೌಕರ್ಯವೇನೆಂದರೆ ಅವರು ಕೆಲವು ಗುಣಗಳ ವ್ಯಾಪಾರವನ್ನು ಸ್ವಭಾವದಿಂದಲೇ ತಮಗೆ ಬೇಕೆನ್ನುತ್ತಾರೆ ; ಸಾತ್ತ್ವಿಕವ್ಯಾಪಾರಗಳನ್ನು ಅವರು ಬಯಸುವದು ಸ್ವಾಭಾವಿಕವೂ ಆಗಿದೆ, ಅದು ಯುಕ್ತವೂ ಆಗಿದೆ. ಆದರೆ ಗುಣಾತೀತರಾಗಬೇಕೆನ್ನುವವರಿಗೆ ಈ ಸತ್ತ್ವಗುಣವೂ ಗುಣವೇ ; ಆದ್ದರಿಂದ ಕಡೆಯಲ್ಲಿ ಇದೂ ನನಗೆ ಸೇರಿದ್ದಲ್ಲ ಎಂಬ ಭಾವನೆಯು ಇರತಕ್ಕದ್ದು ಅತ್ಯವಶ್ಯವಾಗಿರುತ್ತದೆ. ಆದ್ದರಿಂದ ಆಹಾರದಿಂದಾದ ಅಜೀರ್ಣವನ್ನು ಶುಂಠಿಯನ್ನು ತಿಂದು ಪರಿಹರಿಸಿಕೊಳ್ಳುವಂತೆ ಶುದ್ಧ ಸಾತ್ತ್ವಿಕಗುಣಗಳನ್ನು ಅವಲಂಬಿಸಿ ಈ ಗುಣಗಳನ್ನು ದಾಟಲು ಹವಣಿಸಬೇಕು. ಈ ಶುದ್ಧ ಸತ್ತ್ವದ ಪ್ರಾಪ್ತಿಗೆ ಭಗವಂತನನ್ನು ಶರಣುಹೊಗುವದೇ ಪರಮೋಪಾಯವು.



# ೧೩೫. ತ್ರಿಗುಣಾತೀತನ ಲಕ್ಷಣ - 14 - (24-25)

(17-7-49)

ಗುಣಗಳ ಕಾರ್ಯಗಳು ಹೇಗೆ ಹೇಗೆ ಕಾಣಿಸಿಕೊಂಡರೆ ಹಾಗೆ ಹಾಗೆ ಅನುಭವಿಸಿಕೊಂಡು ಅವುಗಳಿಂದ ಸ್ವಲ್ಪವೂ ಏರುಪೇರಾಗದೆ ತಾನು ಗುಣಗಳಿಗೆ ಹೊರಚ್ಚಾಗಿಯೇ ಇರುವವನು ಗುಣಾತೀತನಾಗುತ್ತಾನೆ. ಲೋಕದಲ್ಲಿ ತಾನು ಹೇಗಿರುತ್ತಾನೋ ಅಂಥ ಸಂನಿವೇಶವೇ ಹೊರಗೆ ಏರ್ಪಡುತ್ತದೆ. ನಮ್ಮ ಯೋಗ್ಯತೆ ಎಂಥದ್ದೋ ಅದಕ್ಕೆ ತಕ್ಕ ಜನರೇ ನಮ್ಮ ಸುತ್ತಲೂ ಬಂದುಸೇರುತ್ತಾರೆ; ನಮ್ಮ ಮನಸ್ಸಿನ ಸ್ಥಿತಿ ಎಂಥದ್ದೋ ಅದಕ್ಕೆ ತಕ್ಕಂಥ ವಸ್ತುಗಳೇ ನಮ್ಮಲ್ಲಿಗೆ ಬಂದು ಕಾಣಿಸಿಕೊಳ್ಳುತ್ತವೆ. ಗುಣಗಳ ನಡುವೆ ಇರುವವರು ಗುಣಗಳನ್ನೇ ಸಾಕುತ್ತಾರೆ. ಗುಣಗಳ ಸ್ವಭಾವದವರು ಗುಣಗಳನ್ನೇ ತಮ್ಮ ಕಡೆಗೆ ಆಕರ್ಷಿಸಿಕೊಳ್ಳುತ್ತಾರೆ; ಗುಣಾತೀತರಾಗಿರುವವರು ಅವನ್ನು ಹೊರದೂಡಿ ಅವುಗಳ ಸೆಕೆಗೆ ದೂರವಾಗಿರುತ್ತಾರೆ. ಸಾಮಾನ್ಯರಾದ ನಮ್ಮಂಥವರು ಗುಣಗಳನ್ನು ತಪ್ಪಿಸಿಕೊಳ್ಳುವದಕ್ಕೆ ಪ್ರಯತ್ನಮಾಡುತ್ತಿದ್ದರೂ ಅಪರಾಧಗಳನ್ನು ಮಾಡುವ ಸ್ವಭಾವವನ್ನು - ಒಂದು ತಪ್ಪಿನ ಆರೋಪದ ಮೇಲೆ ಅರೆಸ್ಟಾಗಿದ್ದವನು ಬಿಡುಗಡೆಯಾದ ಕೂಡಲೆ ಮತ್ತೊಂದು ತಪ್ಪಿನ ಆರೋಪದ ಮೇಲೆ ಪೋಲೀಸೀನವರ ವಶವಾಗುವಂತೆ - ಒಂದು ಗುಣದ ಹಿಡಿತದಿಂದ ಕೊಸರಿಕೊಳ್ಳುವದರೊಳಗೆ ಮತ್ತೊಂದು ಗುಣದ ಹಿಡಿತಕ್ಕೆ ಸಿಕ್ಕಿಕೊಳ್ಳುತ್ತಾರೆ. ಹೀಗೆ ಗುಣಗಳಿಂದ ತಪ್ಪಿಸಿಕೊಳ್ಳುವದರಲ್ಲಿಯೇ ಕಾಲವನ್ನು ಹಾಕುತ್ತಿದ್ದರೆ ಇಡಿಯ ಜನ್ಮವೇ ವ್ಯರ್ಥವಾಗುವದು. ಗುಣಾತೀತರಾದವರು ಬೆಟ್ಟದಂತೆ ಇರುತ್ತಾರೆ. ಅವರು ಗುಣಗಳು ಯಾವಯಾವ ರೂಪದ ಕಾರ್ಯಗಳನ್ನುಂಟುಮಾಡಿದರೂ ಯಾವದಕ್ಕೂ ಅಲುಗಾಡುವದಿಲ್ಲ. ಇಷ್ಟೇ ಅಲ್ಲ. ಅವರು ಗುಣಗಳ ಈ ಪ್ರಪಂಚದಲ್ಲಿಯೇ ಆನಂದವನ್ನು ಸೂರೆಗೊಳ್ಳುತ್ತಿರುವರು. ಕನ್ನಡಿಗಳು ಹೇರಳವಾಗಿದ್ದ ಮನೆಯೊಳಕ್ಕೆ ನುಗ್ಗಿದ ನಾಯಿಯು ಅದರೊಳಗೆ ಲೆಕ್ಕವಿಲ್ಲದಷ್ಟು ನಾಯಿಗಳು ಇರುವವೆಂದು ಭ್ರಮಿಸಿ ಕೋಪಕ್ಕೆ ವಶವಾಗಿ ಬೊಗುಳಲು ಪ್ರಾರಂಭಿಸಿತಂತೆ; ಆ ಕಲ್ಪನೆಯ ನಾಯಿಗಳನ್ನು ಕಚ್ಚುವದಕ್ಕೆಂದು ಹಾರಿ ಹಾರಿ ನೆಗೆದು ಕೆಳಕ್ಕೆ ಬೀಳುತ್ತಿತ್ತಂತೆ! ಆದರೆ ಅದೇ ಮನೆಯೊಳಕ್ಕೆ ಬಂದ ಒಬ್ಬ ಹುಡುಗನು ತನ್ನ ಪ್ರತಿಬಿಂಬಗಳನ್ನೇ ಎಲ್ಲೆಲ್ಲಿಯೂ ಕಂಡು ಆನಂದದಿಂದ ಹಿಗ್ಗಿದನಂತೆ. ಗುಣಗಳು ನಮ್ಮ ಮೇಲೆ ತಮ್ಮ ಅಧಿಕಾರವನ್ನು ತೋರಿಸುತ್ತಿರುವವೆಂಬ ಭಾವನೆಯಿರುವವರೆಗೂ ನಮಗೆ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಭೀತಿಗೂ ದುಃಖಕ್ಕೂ ಕಾರಣವು ಕಾಣುತ್ತಿರುವದು. ಆದರೆ ಗುಣಗಳು ನಮ್ಮ ವಶದಲ್ಲಿವೆ, ಅವುಗಳ ವಿಲಾಸವೆಲ್ಲ ನಮ್ಮ ಸತ್ತೆಗೆ ಅಧೀನ - ಎಂಬುದನ್ನು ಮನಗಂಡರೆ ಕೂಡಲೆ ನಮಗೆ ಅದೇ ಪ್ರಪಂಚವು ಮನಸ್ಸಿನ ಉಲ್ಲಾಸಕ್ಕೆ ಕಾರಣವಾಗುತ್ತದೆ. ಇದೇ ಗುಣಾತೀತರ ಆನಂದದ ಗುಟ್ಟು. ಗುಣಾತೀತನಾದವನು ಈ ಪ್ರಪಂಚದಲ್ಲಿ ಹೇಗಿರುತ್ತಾನೆ? ಎಂದರೆ -

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಞ್ಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿನ್ದಾತ್ಮಸಂಸ್ತುತಿಃ ॥** **14-24**

ಸುಖದುಃಖಗಳಲ್ಲಿ ಸಮನಾಗಿರುವನು ; ಮಣ್ಣುಹೆಂಟೆ, ಕಲ್ಲು, ಚಿನ್ನ ಎಲ್ಲದರ ವಿಷಯಕ್ಕೂ ಸಮವಾದ ಅಂತಃಕರಣವುಳ್ಳವನಾಗಿರುವನು ; ಪ್ರಿಯವಾಗಲಿ ಅಪ್ರಿಯವಾಗಲಿ ಎರಡರಲ್ಲಿಯೂ ಅವನು ಸಮನಾಗಿರುವನು ; ತನ್ನನ್ನು ಜನರು ನಿಂದಿಸಲಿ ಹೊಗಳಲಿ, ಎರಡಕ್ಕೂ ಅವನು ಸಮವಾಗಿಯೇ ಇರುವನು. ಹೀಗಿದ್ದರೆ ಆಗುವ ಪ್ರಯೋಜನವಾದರೂ ಏನು ? ಕಂಬಕ್ಕೂ ಅವನಿಗೂ ಯಾವ ಹೆಚ್ಚುಕಡಿಮೆಯಿರುವದು ? ಎಂದು ಕೆಲವರು ಕೇಳುತ್ತಾರೆ. ಹಾಗಲ್ಲ. ಸಾಮಾನ್ಯವಾಗಿ ದುಃಖವು ಬಂದಕೂಡಲೆ ನಾವು ಕುಸಿದುಬಿಡುತ್ತೇವೆ; ಒಂದಿಷ್ಟು ಸುಖವು ತೋರಿಕೊಂಡರೆ ಕೂಡಲೆ ಉಬ್ಬುತ್ತೇವೆ. ನಮ್ಮೆದುರಿಗೆ ಥಳಥಳಿಸುವ ಒಂದು ಪದಾರ್ಥವು ಬಿದ್ದಿದ್ದರೆ ಅಷ್ಟುಮಾತ್ರದಿಂದ ನಮ್ಮ ಮನಸ್ಸು ಕುಣಿಯುವದಕ್ಕೆ ಮೊದಲುಮಾಡುತ್ತದೆ ; ಅಸಹ್ಯವಾದ ಮತ್ತು ಅಂಜಿಸುವ ಯಾವದಾದರೊಂದು ಪದಾರ್ಥವು ಕಂಡರೆ ಅಷ್ಟುಮಾತ್ರದಿಂದ ಅದರಿಂದ ಹಿಮ್ಮೆಟ್ಟುತ್ತದೆ. ಮನಸ್ಸಿನಲ್ಲಿ ಒಂದಿಷ್ಟು ಕಾಮವುಂಟಾದರೆ ನಮಗೂ ಅರಿವಿಲ್ಲದೆಯೇ ವಸ್ತುಗಳ ಕಡೆಗೆ ನುಗ್ಗುವೆವು ; ಮುಂದಿನ ಫಲಿತಾಂಶವೇನೆಂಬುದನ್ನೂ ಲೆಕ್ಕಿಸದೆ ಅವನ್ನು ಭೋಗಿಸುವದಕ್ಕೆ ಹಾತುವರಿಯುವೆವು. ಕೋಪವುಂಟಾದರೂ ಹೀಗೆಯೇ ; ಹುಚ್ಚರಂತೆ ಅಥವಾ ಅಮಲೇರಿದವರಂತೆ ಮಾಡಬಾರದ್ದನ್ನು ಮಾಡಿಬಿಡುವೆವು. ನಮ್ಮಲ್ಲಿ ಕೆಲವರು ತಮ್ಮ ತಮ್ಮ ಯೋಗ್ಯತೆಗೆ ತಕ್ಕಷ್ಟು ಮನಸ್ಸಿನ ವೇಗವನ್ನು ತಡೆದುಕೊಳ್ಳಬಹುದು ; ಆದರೆ ಹೊರಗೆ ವಿಷಯಗಳಾಗಲಿ ಒಳಗೆ ಕಾಮಕ್ರೋಧಾದಿಗಳಾಗಲಿ ಉಂಟಾದರೆ ಅಂತಃಕರಣದಲ್ಲಿ ಯಾವ ಪ್ರತಿಕ್ರಿಯೆಯೂ ಇಲ್ಲದೆ ಇರುತ್ತೇವೆಂಬುದು ನಮಗೆ ಅಳವಲ್ಲ. ಹೊರಗಿನ ಬಗೆಬಗೆಯ ವಸ್ತುಗಳು ಬೇರೆಬೇರೆಯ ಕಾಲದೇಶಸ್ಥಿತಿಗಳಲ್ಲಿ ಬೇರೆಬೇರೆಯ ಪ್ರತಿಕ್ರಿಯೆಗಳನ್ನು ತಪ್ಪದೆ ಮಾಡಿಯೇ ತೀರುವವು. ಇಷ್ಟಾನಿಷ್ಟವಸ್ತುಗಳೂ ಸನ್ನಿವೇಶಗಳೂ ಅವಶ್ಯವಾಗಿ ನಮಗೆ ರಾಗದ್ವೇಷಗಳನ್ನುಂಟುಮಾಡಿ ಗೋಳುಗುಟ್ಟಿಸುವವು. ಅಷ್ಟೇ ಅಲ್ಲ. ನಮ್ಮನ್ನು ಯಾರಾದರೂ ಒಂದಿಷ್ಟು ಮೃಷಾಸ್ತುತಿಮಾಡಿದರೂ ಸಾಕು, ಅಷ್ಟರಿಂದಲೇ ಹಿಗ್ಗಿಸುರಿಯುವೆವು. ನಮ್ಮ ನಿಜಸ್ಥಿತಿಯನ್ನು ಅರಿಯದೆ ಯಾರಾದರೂ ಒಂದಿಷ್ಟು ದೋಷವನ್ನು ನಮ್ಮಲ್ಲಿ ಆರೋಪಿಸಿ ನುಡಿದರೂ ಅಷ್ಟರಿಂದ ತಳಮಳಗೊಳ್ಳುವೆವು. ಆದರೆ ಗುಣಾತೀತನು ಹೊರಗಿನ ಜನರು, ಪ್ರಾಣಿಗಳು, ವಸ್ತುಗಳು ಮತ್ತು ಒಳಗಿನ ಶೀತೋಷ್ಣಾದಿವೇದನೆಗಳು, ನಿಂದಾಸ್ತುತಿಮಾನಾಪಮಾನ ಭಾವನೆಗಳು - ಮುಂತಾದ ಯಾವದೊಂದಕ್ಕೂ ಸಗ್ಗದೆ ತಾನು ಎಲ್ಲಕ್ಕೂ ಹೊರಚ್ಚಾದ ಆತ್ಮಸ್ವರೂಪದಲ್ಲಿ ನಿಂತಿರುವೆನೆಂಬ ಎಚ್ಚರದಲ್ಲಿ ಸುಖಿಯಾಗಿರುವನು. ಗುಣಗಳಿಗೆ ವಶರಾಗಿರುವವರೆಲ್ಲರೂ ಅಸ್ವಸ್ಥರು, ತಮ್ಮ ಸ್ವರೂಪದಲ್ಲಿ ತಾವಿಲ್ಲದೆ ಗಾಳಿಯಿಂದ ಅತ್ತಿತ್ತ ತೂರಿಕೊಂಡು ಹೋಗುತ್ತಿರುವ ತರಗೆಲೆಯಂತೆ ಇರುವವರು ; ಆದರೆ ಗುಣಾತೀತರು ಸ್ವಸ್ಥರು,

ತಮ್ಮ ಸ್ವರೂಪದಲ್ಲಿ ತಾವಿದ್ದು ಎಂಥ ಬಿರುಗಾಳಿಗೂ ಒಂದಿಷ್ಟೂ ಅಲುಗಾಡದ ಪರ್ವತದಂತೆ ಇರತಕ್ಕವರು. ನಾನು ಗುಣಾತೀತನು, ಗುಣಗಳಿಗೆ ಒಂದಿಷ್ಟೂ ಸಿಕ್ಕಿಲ್ಲ ಎಂಬ ಅಭಿಮಾನವುಕೂಡ ಅವರ ಅಂತಃಕರಣದಲ್ಲಿ ಎಂದಿಗೂ ಮೂಡುವದಿಲ್ಲ.

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ |**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ || ||೨೫|| 14-25**

ಹೊರಗಿನ ಆಗುಹೋಗುಗಳು ಯಾವಾಗಲೂ ನಮ್ಮ ವಶದಲ್ಲಿರುವದಿಲ್ಲ ; ಅವು ಯಾವದೋ ನಿಯಮಕ್ಕೊಳಪಟ್ಟು ಆಯಾ ದೇಶಕಾಲಗಳಲ್ಲಿ ಆಗುತ್ತಿರುವವು. ಆದರೆ ಅವುಗಳಿಂದಾಗುವ ಪರಿಣಾಮದಿಂದ ನಮ್ಮ ಅಂತಃಕರಣದಲ್ಲಿ ಯಾವ ಪ್ರತಿಕ್ರಿಯೆಯೂ ಇಲ್ಲದಂತೆ ನೋಡಿಕೊಳ್ಳುವದು ನಮ್ಮ ವಶದಲ್ಲಿರುತ್ತದೆ. ಈ ದೃಷ್ಟಿಯಲ್ಲಿ ನಮ್ಮ ಸ್ವರೂಪಕ್ಕಿಂತ ಬೇರೆಯಾದದ್ದೆಲ್ಲ ಹೊರಗಿನ ಘಟನೆಯೆಂದೇ ಭಾವಿಸಬೇಕು. ನಮ್ಮ ಮನಸ್ಸನ್ನು ನಾವು ಸ್ವಾಧೀನದಲ್ಲಿ ಇಟ್ಟುಕೊಂಡಿದ್ದರೆ ಹೊರಗಿನ ದೃಶ್ಯಗಳು ನಮಗೆ ಏನೂ ಮಾಡಲಾರವು. ಈ ಮನಸ್ಸುಕೂಡ ತ್ರಿಗುಣಗಳ ಕಾರ್ಯವೇ ಆಗಿರುತ್ತದೆ. ಗುಣಗಳೂ ಗುಣಗಳಿಂದಾಗಿರುವ ಜಗತ್ತೂ ಎಲ್ಲ ಮಾರ್ಪಡುತ್ತಲೇ ಇರುತ್ತದೆ. ಆದರೆ ಜಗತ್ತಿನ ತತ್ತ್ವವು ಮಾರ್ಪಡುವದಿಲ್ಲ. ಈ ನಿರ್ವಿಕಾರವಾದ ತತ್ತ್ವವನ್ನು ಗುಣಾತೀತನು ಹಿಡಿದುಕೊಂಡಿರುತ್ತಾನೆ. ಆದ್ದರಿಂದ ಅವನು ಸ್ವಸ್ಥನಾಗಿರುತ್ತಾನೆ.

ಗುಣಾತೀತನು ಸರ್ವಾರಂಭಪರಿತ್ಯಾಗಿಯು, ಎಂದರೆ ಎಲ್ಲಾ ಕರ್ಮಗಳನ್ನೂ ಬಿಟ್ಟಿರುತ್ತಾನೆ. ಯಾವದಾದರೊಂದು ಕರ್ಮವನ್ನು ಎಲ್ಲರೂ ಮಾಡಬೇಕಾಗಿರುವದರಿಂದ ಗುಣಾತೀತನು ತಾನೆ ಹೇಗೆ ಕರ್ಮಗಳನ್ನು ಬಿಟ್ಟಿರುತ್ತಾನೆಂದು ಕೆಲವರು ಆಶ್ಚರ್ಯದಿಂದ ಕೇಳುತ್ತಾರೆ. ಆದರೆ ಇಲ್ಲಿ ಆರಂಭ, ಕರ್ಮ - ಎಂದರೆ `ಈ ಕರ್ಮವು ನನ್ನದು, ಈ ಕರ್ಮಫಲವು ನನಗೆ ಆಗುವದು' ಎಂಬ ಗಟ್ಟಿಯಾದ ಭಾವನೆಯೇ. ಪ್ರಾಕೃತಜನರು ಏನೂ ಮಾಡದೆ ಸುಮ್ಮನೆ ಕುಳಿತಿದ್ದರೂ ಅವರು ಸರ್ವಾರಂಭಪರಿತ್ಯಾಗಿಗಳಲ್ಲ. ಏಕೆಂದರೆ ಏನೂ ಮಾಡದೆ ಸುಮ್ಮನೆ ಕುಳಿತಿರುವದೆಂಬ ಕ್ರಿಯೆಯು ತಮ್ಮದೆಂದು ಅವರು ಆರೋಪಿಸಿಕೊಂಡಿರುತ್ತಾರೆ. ಸ್ಥಾವರಗಳಂತೆ ಏನೂ ಕೆಲಸಮಾಡದೆ ಇರುವದನ್ನಲ್ಲ, ಇಲ್ಲಿ ಆರಂಭಪರಿತ್ಯಾಗವೆಂದು ಕರೆದಿರುವದು. ಸೋಮಾರಿತನದಿಂದ ಕೆಲಸವನ್ನು ಮಾಡದೆ ಕುಳಿತಿರುವದು ಯಾರಲ್ಲಾದರೂ ಅಪರಾಧವೇ. ಬ್ರಾಹ್ಮಣನಾದವನು ತನ್ನ ಸ್ವವರ್ಣಾಶ್ರಮಕರ್ಮವನ್ನು ಮಾಡದೆ ಸುಮ್ಮನೆ ಕುಳಿತಿದ್ದರೆ ಅವನನ್ನೂ ಬಿಟ್ಟಿಕೆಲಸಕ್ಕೆ ಹಿಡಿಯಬಹುದು ಎಂದು ಭಾರತದ ರಾಜಧರ್ಮದಲ್ಲಿದೆ. ಕರ್ಮದ ಕಟ್ಟಿಗೊಳಪಟ್ಟು ಕರ್ಮವನ್ನು ಮಾಡದೆ ಇರುವವರನ್ನೂ ಕರ್ಮವನ್ನೆಲ್ಲ ಮೀರಿರುವವರನ್ನೂ ವಿವೇಚಿಸಿ ತಿಳಿದುಕೊಳ್ಳಲಾರದೆ ನಾವು ಮೋಸಹೋಗುವ ಸಂಭವವಿದೆ. ಕೆಲಸವನ್ನು ಮಾಡುವ ಶಕ್ತಿಯಿದ್ದರೂ ಆಲಸ್ಯದಿಂದ ಕೆಲಸಮಾಡದೆ ಇರುವವರು ಎಂದಿಗೂ

ಕರ್ಮತ್ಯಾಗಿಗಳಲ್ಲ. ರಜೋಗುಣವು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೆ ಕರ್ಮವನ್ನು ತ್ಯಜಿಸುವದು ಸಾಧ್ಯವೂ ಇಲ್ಲ. ಗುಣಾತೀತನಾದವನು ಪರಮಾರ್ಥದೃಷ್ಟಿಯಲ್ಲಿ ಕರ್ಮತ್ಯಾಗಿಯಾಗಿದ್ದರೂ ಸೋಮಾರಿಯಾಗಿರುವದಿಲ್ಲ ; ಲೋಕಕ್ಕೆ ಕಲ್ಯಾಣಕರವಾದ ಕರ್ಮಗಳಲ್ಲಿ ಅವನು ಯಾವಾಗಲೂ ನಿರತನಾಗಿರುತ್ತಾನೆ. ಅಜ್ಞಜನರು ಹೊರಗೆ ಯಾವ ಕೆಲಸವನ್ನೂ ಮಾಡದೆ ಸುಮ್ಮನೆ ಕುಳಿತಿದ್ದರೂ ಅಂತಃಕರಣದಲ್ಲಿ ಬೇರೆಬೇರೆಯ ಭಾವನೆಗಳಿಗೆ ಒಳಗಾಗಿರುತ್ತಾರೆ. ಅಶುಭವಾಸನೆಯಿಂದ ಅವರ ಮೇಲೂ ಅವರ ಸುತ್ತಿನವರ ಮೇಲೂ ಕೆಟ್ಟ ಪರಿಣಾಮವನ್ನೇ ಮಾಡುತ್ತಾ ಕಷ್ಟಪರಂಪರೆಯನ್ನು ತಂದೊಡ್ಡುವ ವ್ಯವಹಾರದಲ್ಲಿ ಗುಣಗಳು ಅವರನ್ನು ಕೆಡಹುತ್ತಿರುತ್ತವೆ. ಆದರೆ ಗುಣಾತೀತರು ಗುಣಗಳಲ್ಲಿ ಸಕ್ತರಾಗದೆ ಇರುವದರಿಂದ ಅವರ ಅಂತಃಕರಣದಲ್ಲಿ ಜಗತ್ಕಲ್ಯಾಣವನ್ನುಂಟುಮಾಡುವ ಭಾವನೆಗಳು ಎದ್ದು ಎಲ್ಲರನ್ನೂ ಉತ್ತಮವಾದ ಹಾದಿಯಲ್ಲಿ ನಡೆಯುವಂತೆ ಮಾಡುತ್ತವೆ. ಅವರು ಮಾತ್ರ ಯಾವ ಕರ್ತೃತ್ವಭೋಕ್ತೃತ್ವಭಾವನೆಯನ್ನೂ ಇಟ್ಟುಕೊಂಡಿರುವದಿಲ್ಲವಾದ್ದರಿಂದ ಸರ್ವಾರಂಭಪರಿತ್ಯಾಗಿಗಳು ಎನ್ನಿಸುತ್ತಾರೆ.

## ೧೩೬. ತ್ರಿಗುಣಾತೀತನಾಗುವದಕ್ಕೆ ಮುಖ್ಯವಾದ ಸಾಧನ 14-(26-27)

**(24.7.49)**

ಹಿಂದಿನ ಎರಡೂ ಶ್ಲೋಕಗಳಲ್ಲಿ ಸಮದುಃಖಸುಖನಾಗಿರುವದು, ಲೋಷ್ಟಾಶ್ಮಕಾಂಚನಗಳಲ್ಲಿ ಸಮನಾಗಿರುವದು, ಪ್ರಿಯಾಪ್ರಿಯಗಳಲ್ಲಿ ಸಮನಾಗಿರುವದು, ನಿಂದಾಸ್ತುತಿಗಳಲ್ಲಿ ಸಮನಾಗಿರುವದು, ಮಾನಾಪಮಾನಗಳಲ್ಲಿ ಸಮನಾಗಿರುವದು - ಇಂಥ ಸಮತೆಯೇ ಗುಣಾತೀತನ ಲಕ್ಷಣವೆಂದು ಹೇಳಿದೆಯಷ್ಟೆ. ಗುಣಗಳ ಬೇರೆ ಬೇರೆಯ ಕಾರ್ಯಗಳಿಂದ ಅಂತಃಕರಣದಲ್ಲಿ ಏರುಪೇರುಗಳಾಗದೆ ಇರುವವನು ಗುಣಾತೀತನು ಎಂಬುದೇ ಈ ಲಕ್ಷಣವರ್ಣನೆಗೆ ತಾತ್ಪರ್ಯವು. ಇಷ್ಟೇ ಹೊರತು ಸುಖವನ್ನೂ ದುಃಖವನ್ನೂ ಸಮನಾಗಿ ತಿಳಿದುಕೊಳ್ಳುವದು, ಪ್ರಿಯವನ್ನೂ ಅಪ್ರಿಯವನ್ನೂ ಸಮವೆಂದೆಣಿಸುವದು - ಇವೇ ಮುಂತಾದದ್ದೇ ಗುಣಾತೀತನ ಲಕ್ಷಣವು ಎಂದು ಭಾವಿಸಬಾರದು. ಗುಣಾತೀತನೆಂದರೆ ವಿವೇಕಶೂನ್ಯನು ಎಂದೇನೂ ಅಭಿಪ್ರಾಯವಲ್ಲ.

ಇಂಥ ಕಲ್ಪನೆಗಳು ಸುಮ್ಮನೆ ಮನಸ್ಸಿನಲ್ಲಿ ಹಾದುಹೋದರೂ ಮನಸ್ಸಿಗೆ ಒಂದು ಹೊಸ ಅನುಭವವುಂಟಾದಂತೆ ಭಾವಿಸಬೇಕು. ಮಹಾತ್ಮಗಾಂಧಿಯವರು `ನಾನು ಸತ್ಯಶೋಧನೆಮಾಡುತ್ತಿದೇನೆ' ಎಂದು ಹೇಳುತ್ತಿದ್ದರು; ಸತ್ಯವನ್ನು ಅರಿತು ಸತ್ಯನಿಷ್ಠನಾಗಿಯೇ

ಇರುವ ಮಹಾತ್ಮನಂತಿರಲಿ, ಸತ್ಯಶೋಧನೆಯಲ್ಲಿ ನಿರತನಾಗಿರುವವನು ಕೂಡ ಮಿಕ್ಕವರಿಗಿಂತಲೂ ಹೆಚ್ಚಿನ ಮಟ್ಟದ ಅಂತಃಕರಣವುಳ್ಳವನಾಗಿರುತ್ತಾನೆ. ಸತ್ಯಶೋಧನೆಗಾಗಿ ತಮ್ಮ ಜೀವಿತವನ್ನು ಒಪ್ಪಿಸುವ ಮಹಾತ್ಮರೂ ಇರುತ್ತಾರೆ. ಅಮೇರಿಕದೇಶದಲ್ಲಿ ಒಬ್ಬ ಶರೀರಶಾಸ್ತ್ರಜ್ಞನು ಒಂದಾನೊಂದು ಶರೀರದ ತತ್ತ್ವವನ್ನು ವಿಚಾರದಿಂದ ಕಲ್ಪನೆಮಾಡಿ ಅದು ಸರಿಯೊ ಅಲ್ಲವೊ ಎಂದು ಸಂವಾದೀಕರಣಮಾಡುವದಕ್ಕಾಗಿ ಪರೀಕ್ಷೆಯನ್ನು ಮಾಡಬೇಕೆಂದು ಹವಣಿಸುತ್ತಿದ್ದನಂತೆ. ಆದರೆ ಶರೀರದ ಮೇಲೆ ತಾನು ಮಾಡುವ ಪರೀಕ್ಷೆಯಿಂದ ಜನರಿಗೆ ಪ್ರಾಣಾಪಾಯವಾಗುವದೆಂದು ಅವನಿಗೆ ಗೊತ್ತಿದ್ದರಿಂದ ಅವನ ಪರೀಕ್ಷೆಗೆ ಯಾವನೂ ಶರೀರವನ್ನು ಕೊಡುವದಕ್ಕೆ ಮುಂದಕ್ಕೆ ಬರಲಾರನೆಂದು ಅವನಿಗೆ ಅನ್ನಿಸಿತು. ಆದ್ದರಿಂದ ಅವನು ಒಬ್ಬ ತತ್ತ್ವಶೋಧಕನ ಬಳಿಗೆ ಹೋಗಿ 'ನನ್ನ ಶರೀರವನ್ನು ಉಪಯೋಗಿಸಿ ಈ ವಿಚಾರದ ನಿಜವನ್ನು ನಿರ್ಧರಿಸಿರಿ' ಎಂದುಕೊಂಡನಂತೆ; ಹೀಗೆ ಅತ್ಯಂತ ಪ್ರಾಣಾಪಾಯಕರವಾದ ಶೋಧನೆಗಳಿಗೆ ತಮ್ಮ ಶರೀರವನ್ನು ಬಲಿಯಾಗಿ ಅರ್ಪಿಸಿ ಜನೋಪಕಾರಕ್ಕೆ ಸಿದ್ಧರಾಗುವ ಭೌತಿಕಶಾಸ್ತ್ರಜ್ಞರೂ ಅಪೂರ್ವವಾಗಿ ಸಿಕ್ಕುವದುಂಟು. ಇದರಂತೆ ನಮ್ಮ ದೇಶದಲ್ಲಿ ಸರ್ವಸಂಗಪರಿತ್ಯಾಗವೇ ಮುಂತಾದವುಗಳನ್ನು ಮಾಡುವದಕ್ಕೆ ಮತ್ತೆ ಯಾರೊಬ್ಬರ ಪ್ರೇರಣೆಯೂ ಇಲ್ಲದೆ ಮುಂದೆ ಬರುವ ಮಹನೀಯರು ಅಲ್ಲಲ್ಲಿ ಈಗಲೂ ಇರುತ್ತಾರೆ. ಮಣ್ಣುಹೆಂಟೆ, ಕಲ್ಲು, ಚಿನ್ನ - ಇವುಗಳ ನೋಟದಿಂದ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗದೆ ಇರುವವನು ಗುಣಾತೀತನೆಂದು ಇಲ್ಲಿ ಹೇಳಿದೆಯಷ್ಟೆ. ತಮ್ಮ ಮನಸ್ಸನ್ನು ಹೊನ್ನುಹೆಣ್ಣುಮಣ್ಣುಗಳ ಸಂನಿಧಿಯಲ್ಲಿ ಒಂದಿಷ್ಟೂ ಏರುಪೇರುಮಾಡಿಕೊಳ್ಳದೆ ಇರುವದಕ್ಕೆ ಪ್ರಯತ್ನಿಸುವ ಸಾಧಕರು ಈಗಲೂ ಈ ದೇಶದಲ್ಲಿರುತ್ತಾರೆ. ಶ್ರೀರಾಮಕೃಷ್ಣಪರಮಹಂಸರು ಒಂದು ಕೈಯಲ್ಲಿ ಮಣ್ಣನ್ನೂ ಇನ್ನೊಂದರಲ್ಲಿ ಚಿನ್ನವನ್ನೂ ಇಟ್ಟುಕೊಂಡು ಒಂದರಲ್ಲಿ ಇನ್ನೊಂದರ ಬುದ್ಧಿಯನ್ನು ಮಾಡುತ್ತಿದ್ದು, ಎರಡನ್ನೂ ಬೆರೆಯಿಸಿ, "ಮಣ್ಣೇ ಚಿನ್ನ, ಚಿನ್ನವೇ ಮಣ್ಣು!" ಎಂಬ ಭಾವನೆಯನ್ನು ಬಲಿಸಿಕೊಂಡು ಎರಡನ್ನೂ ಅನಾದರದಿಂದ ಅತ್ತ ಎಸೆದರು ಎಂದು ಅವರ ಜೀವನಚರಿತ್ರೆಯಲ್ಲಿ ವರ್ಣಿಸಿರುವ ಒಂದು ಘಟನೆಯನ್ನು ನೀವು ಓದಿರಬಹುದು. ಒಮ್ಮೆ ಒಬ್ಬ ಮಹಾತ್ಮರ ಬಳಿಯಲ್ಲಿ ಯಾರೋ ಸ್ವಲ್ಪ ಹಣವನ್ನು ತಂದಿಟ್ಟರು. ಆಗ ಅವರ ಮನಸ್ಸಿನನಲ್ಲಿ `ಈ ಹಣವನ್ನು ಹೇಗೆ ಸದ್ವಿನಿಯೋಗಮಾಡಲಿ!' ಎಂಬ ಯೋಜನೆಗಳ ಅಲೆಗಳು ಒಂದಾಗುತ್ತಲೊಂದು ಎದ್ದುಕೊಳ್ಳುವದಕ್ಕೆ ಮೊದಲಾದವು. ಆಗ ಅವರು "ಎಲಾ ! ಇದೇನು ? ಎಲ್ಲವನ್ನೂ ಬಿಟ್ಟು ವಿರಕ್ತನಾಗಿ ಏಕಾಂತವಾಸದಲ್ಲಿರುವ ನನ್ನ ಅಂತಃಕರಣದ ಮೇಲೂ ಇಂಥ ಪರಿಣಾಮವಾಯಿತಲ್ಲ !' ಎಂದುಕೊಂಡು ಇದರ ರಹಸ್ಯವೇನೆಂದು ಜೊತೆಯಲ್ಲಿದ್ದ ಮತ್ತೊಬ್ಬ ಮಹಾತ್ಮರನ್ನು ಪ್ರಶ್ನಿಸಲು ಅವರು `ನೀವು ಇದನ್ನು ಹಣ ಎಂದು ಭಾವಿಸಿದ್ದೇ ಇಷ್ಟು ಅನರ್ಥಕ್ಕೆ ಕಾರಣವಾಯಿತು; ಇದಕ್ಕೂ ಸಗಣಿಗೂ ಏನು ಹೆಚ್ಚು ಕಡಿಮೆಯಿದೆ ! ನೀವು ಕೂಡಲೆ ಹೋಗಿ ಇದನ್ನು ಸಗಣಿಯಲ್ಲಿ ಸೇರಿಸಿ ಒಂದು

ಕಡೆ ಹಾಕಿಬಿಡಿ !' ಎಂದರಂತೆ ! ವ್ಯವಹಾರದಲ್ಲಿ ಮುಳುಗಿರುವ ಜನರಿಗೆ ಈ ವರ್ತನೆಯು ಹುಚ್ಚರ ನಡತೆಯೆಂದೇ ಕಾಣಬಹುದು. ಆದರೆ ಅಂತಃಕರಣದಲ್ಲಿ ಆಗಾಗ್ಗೆ ಏಳುತ್ತಿರುವ ಬಗೆಬಗೆಯ ಭಾವನೆಗಳ ಕೋಟಲೆಯಿಂದ ಬಿಡಿಸಿಕೊಳ್ಳುವದಕ್ಕೆ ಯತ್ನಿಸಿರುವ ಮುಮುಕ್ಷುಗಳಿಗೆ ಇಂಥ ಕೃತಿಗಳು ಮನಸ್ಸನ್ನು ಗೆದ್ದುಕೊಂಡಿರುವ ಅದ್ಭುತವ್ಯಕ್ತಿಗಳ ಅದ್ಭುತಕೃತ್ಯಗಳು ಎಂದು ತೋರುವವು. ಸಾಮಾನ್ಯರಾದ ನಮ್ಮಂತಹವರಿಗೆ ಇಷ್ಟು ಮೇಲಿನ ಮಟ್ಟಕ್ಕೆ ಏರುವ ಯೋಗ್ಯತೆಯಿಲ್ಲದಿರುವದರಿಂದ ಅವನ್ನು ಧ್ಯೇಯವಾಗಿ ಆಗಾಗ್ಗೆ ಮನಸ್ಸಿಗೆ ತಂದುಕೊಳ್ಳುತ್ತಿರುವದಾದರೂ ಸಹಾಯಕವಾಗುವದು. ಚಿನ್ನಮಣ್ಣುಗಳನ್ನು ಒಂದೆಂದು ಭಾವಿಸುವ ಎತ್ತರಕ್ಕೆ ನಮ್ಮ ಮನಸ್ಸು ಏರದಿದ್ದರೂ ಮತ್ತೊಬ್ಬರ ಚಿನ್ನವನ್ನು ಕದಿಯದೆ ಇರುವ ಸ್ಥಿತಿಗಾದರೂ ನಾವು ಬರಬಹುದು. ನೇರಾಗಿ ಗುಣಾತೀತರ ಸ್ಥಿತಿಗೆ ಏರುವುದಕ್ಕೆ ಇಂದು ನಮಗೆ ಸಾಧ್ಯವಾಗದೆ ಇರಬಹುದು ; ಆ ಸ್ಥಿತಿಯು ಎಷ್ಟು ಮೇಲುಮಟ್ಟದ್ದು ಎಂಬ ಕಲ್ಪನೆಯಾದರೂ ನಮ್ಮ ಮನಸ್ಸಿಗೆ ಆಗಾಗ್ಗೆ ಹೊಳೆಯುವದು ಒಳ್ಳೆಯದು. ಸತ್ತ್ವರಜಸ್ತಮಗಳನ್ನೆಲ್ಲ ಮೀರುವದು ಆಗದಿದ್ದರೂ ರಜಸ್ತಮೋಗುಣಗಳಿಂದಾಗುವ ಅನರ್ಥಗಳಿಂದ ಪಾರಾಗುವದಕ್ಕಾದರೂ ನಾವು ಯತ್ನಿಸಬೇಕೆಂದು ಆಗ ಅವಶ್ಯವಾಗಿ ಅನ್ನಿಸುವದು. ಸುಖದುಃಖಗಳೂ ಪ್ರಿಯಾಪ್ರಿಯಗಳೂ ಎಷ್ಟೋ ಸಲ ನಮಗೆ ತೋರಿಹಾರಿರುತ್ತವೆ. ಈಗ ಬಂದಿರುವ ಸುಖದುಃಖಗಳೂ ಹಾಗೆಯೇ ಎಂದಾದರೂ ಚಿಂತಿಸಿಕೊಳ್ಳಬೇಕು. ಮಣ್ಣು, ಚಿನ್ನ, ಮುಂತಾದವುಗಳಲ್ಲಿ ಮಮತೆಯನ್ನು ಇಟ್ಟು ತಮ್ಮ ಜೀವನವನ್ನೇ ಹಾಳುಮಾಡಿಕೊಂಡವರ ಚರಿತ್ರೆಯಿಂದಲಾದರೂ ನಾವು ಅಂಥ ಅನರ್ಥಕ್ಕೆ ಗುರಿಯಾಗದಂತೆ ನೋಡಿಕೊಳ್ಳಬೇಕು. ಇದೇ ಗುಣಾತೀತಲಕ್ಷಣಶ್ರವಣದಿಂದ ನಮ್ಮಂಥ ಸಾಮಾನ್ಯರಿಗೆ ಆಗುವ ಪ್ರಯೋಜನ.

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ |**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ || 14-27**

ಇದುವರೆಗೆ ಗುಣಾತೀತರ ಲಕ್ಷಣವನ್ನು ಬಗೆಬಗೆಯಾಗಿ ವಿವರಿಸಿ ಈಗ ಭಗವಂತನು ಗುಣಾತೀತನಾಗಬೇಕೆನ್ನುವಾತನು ಅವಶ್ಯವಾಗಿ ಅನುಸರಿಸಬೇಕಾಗುವ ಒಂದು ಮುಖ್ಯಸಾಧವನ್ನು ಇಲ್ಲಿ ಉಪದೇಶಿಸಿರುತ್ತಾನೆ. ಗುಣಾತೀತನಾಗಬೇಕೆಂದು ಗುಣಗಳೊಡನೆ ಹೋರಾಡುವದರಿಂದ ಉಪಯೋಗವಿಲ್ಲ. ಅದರಿಂದ ಗುಣಗಳು ನಮ್ಮ ವಶವಾಗುವದರ ಬದಲು ನಾವೇ ಗುಣಗಳ ಹಿಡಿತಕ್ಕೆ ಸಿಕ್ಕಿಕೊಂಡುಬಿಡುವೆವು. ಆದರೆ ಗುಣಗಳನ್ನು ಮೀರುವದಕ್ಕೆ ಒಂದು ಸುಲಭವಾದ ಉಪಾಯವಿದೆ. ಭಗವಂತನನ್ನು ಅವ್ಯಭಿಚರಿತವಾದ ಭಕ್ತಿಯೋಗದಿಂದ ಸೇವಿಸುತ್ತಿದ್ದರೆ ಗುಣಗಳ ಕೋಟಲೆಯು ಹೇಳಹೆಸರಿಲ್ಲದಂತಾಗುತ್ತದೆ. ಗುಣಾತೀತರ ಮುಖ್ಯಲಕ್ಷಣವು ಯಾವದು ? ಏತರ ಬಲದಿಂದ ಅವರು ಎಂದೆಂದಿಗೂ ಗುಣಗಳ

ಹಾವಳಿಯಿಂದ ಪಾರಾಗುತ್ತಾರೆ ? - ಎಂದರೆ ಅವರು ನಿತ್ಯವೂ ಭಗವನ್ನಿಷ್ಠರಾಗಿರುತ್ತಾರೆ. ಅವರ ಮನಸ್ಸಿನಲ್ಲಿ ಯಾವಾಗಲೂ ಭಗವಂತನು ನೆಲೆಸಿರುತ್ತಾನೆ ; ಗುಣಗಳು ಅಲ್ಲಿ ಮನೆಮಾಡಿಕೊಳ್ಳುವದಕ್ಕೆ ಎಡೆಯೇ ಇರುವದಿಲ್ಲ. ಅವರಿಗೆ ಭಗವಂತನಲ್ಲಿ ಅವ್ಯಭಿಚರಿತವಾದ ಪ್ರೇಮವು ಉಂಟಾಗಿಬಿಟ್ಟಿರುತ್ತದೆ. ಭಗವಚ್ಚಿಂತನೆಯು ಅವರಿಗೆ ಬೆಂಕಿಗೆ ಬಿಸಿಯಂತೆ ಸ್ವಾಭಾವಿಕಧರ್ಮವಾಗಿಬಿಟ್ಟಿರುತ್ತದೆ. ಹೀಗಿರುವದರಿಂದ ಅವರು ಒಳ್ಳೆಯದರಿಂದ ಕೆಟ್ಟದ್ದನ್ನು ಗೆಲ್ಲುವದಕ್ಕೆ ಪ್ರಯತ್ನಿಸುತ್ತಿರುವದಿಲ್ಲ. ಅವರಿಗೆ ಒಳ್ಳೆಯದು ಕೆಟ್ಟದ್ದು ಎರಡೂ ಕೆಟ್ಟವೇ, ಎರಡೂ ಗುಣಗಳ ಪರಿಣಾಮವೇ. ಆದ್ದರಿಂದ ಅವರು ಯಾವ ಗುಣಗಳ ವ್ಯಾಪಾರವನ್ನೂ ತಮ್ಮದೆಂದು ಅಭಿನಿವೇಶಮಾಡದೆ ಭಗವಂತನಲ್ಲಿಯೇ ನಿರಂತರವಾದ ಭಕ್ತಿಯನ್ನು ಇಟ್ಟುಕೊಂಡಿರುತ್ತಾರೆ. ನಾವೂ ಆ ಭಗವದ್ಭಕ್ತರನ್ನು ಅನುಸರಿಸುವದಕ್ಕೆ ಪ್ರಯತ್ನಮಾಡಬೇಕು. ಗುಣಾತೀತನಾದ ಭಗವಂತನ ಚಿಂತನೆಯಲ್ಲಿರುವವರಿಗೆ ಅವಶ್ಯವಾಗಿ ಗುಣಗಳ ಕಾಟವು ತಪ್ಪುತ್ತದೆ. ನಾವು ಎಷ್ಟೆಷ್ಟುಮಟ್ಟಿಗೆ ಭಗವಚ್ಚಿಂತನೆಯಲ್ಲಿ ಮಗ್ನರಾಗುವೆವೋ ಅಷ್ಟಷ್ಟುಮಟ್ಟಿಗೆ ಗುಣಗಳು ನಮ್ಮಿಂದ ದೂರವಾಗುವವು.

ಪರಮಾತ್ಮನೇ ಇಲ್ಲವೆಂದು ಕೆಲವು ಜನರು ವ್ಯವಹಾರಮಾಡಿಕೊಂಡಿರುತ್ತಾರೆ. ಅವರಿಗೆ ವ್ಯವಹಾರವೇ ಪರಮಾರ್ಥವಾಗಿರುತ್ತದೆ. ಆದ್ದರಿಂದ ಅವರಿಗೆ ತ್ರಿಗುಣಗಳಿಂದಾಗುವ ಅನರ್ಥದ ಅರಿವೇ ಆಗುವದಿಲ್ಲ. ಸುಖದುಃಖಮೋಹಾತ್ಮರಾಗಿರುವದೇ ಸ್ವಭಾವವು, ಇದನ್ನು ಬಿಟ್ಟರೆ ಬೇರೊಂದು ಬಗೆಯ ಜೀವನವೇ ಇಲ್ಲ - ಎಂಬುದು ಅವರ ನಂಬಿಕೆ. ಆದ್ದರಿಂದ ವಿಷಕ್ರಿಮಿನ್ಯಾಯದಿಂದ ಅವರು ಹೇಗೋ ತಮ್ಮ ಜೀವನವನ್ನು ಒಗ್ಗಿಸಿಕೊಂಡು ಇರುತ್ತಾರೆ. ಯಾರು ಮೂರು ಗುಣಗಳ ಸ್ವಭಾವವನ್ನೂ ಕಾರ್ಯವನ್ನೂ ವಿವೇಚನೆಯಿಂದ ಅರಿತುಕೊಂಡು ಪ್ರಯತ್ನಪೂರ್ವಕವಾಗಿ ಅವುಗಳನ್ನು ದಾಟಿ ಪರಮೇಶ್ವರನಲ್ಲಿ ನಿಂತುಬಿಟ್ಟಿರುವರೋ ಅಂಥವರು ಭಗವತ್ಸ್ವರೂಪರೇ ಆಗಿಬಿಟ್ಟಿರುತ್ತಾರಾದ್ದರಿಂದ ಅವರಿಗಂತೂ ಯಾವ ಮನಃ ಕ್ಲೇಶಗಳೂ ಇರುವದಿಲ್ಲ. ಅವರ ಜೀವನವು ಸತತವಾದ ಆನಂದದ ಬುಗ್ಗೆಯಂತಿರುತ್ತದೆ.

ಆದರೆ ಯಾರಿಗೆ ಪರಮಾರ್ಥವೊಂದಿದೆ ಎಂದು ತಿಳಿದಿರುವದೋ, ಮೂರು ಗುಣಗಳಿಂದಾಗುವ ಅನರ್ಥವೂ ಮನವರಿಕೆಯಾಗಿರುವದೋ, ಆದರೂ ಯಾರು ಸರಿಯಾದ ಸಾಧನವನ್ನು ಮಾತ್ರ ಮಾಡದೆ ಗುಣಗಳಿಂದಾಗುವ ದುಷ್ಪರಿಣಾಮಕ್ಕೆ ಹಗಲಿರುಳೂ ಪಕ್ಕಾಗಿರುವರೋ, ಅವರ ಸ್ಥಿತಿಯು ಮಾತ್ರ ಬಹಳ ಕಷ್ಟವಾಗಿರುತ್ತದೆ. 'ಕ್ಲಿಶ್ಯತ್ಯನ್ತರಿತೋ ಜನಃ' ಎಂಬಂತೆ ಅಡ್ಡಂಬಡಕರಾಗಿರುವ ಇಂಥ ಜನರ ಪಾಡು ಬಹುಕಷ್ಟಮಯವಾಗಿರುತ್ತದೆ. ಈಶ್ವರನೇನೋ ಇದ್ದಾನೆ; ಆದರೆ ವ್ಯವಹಾರದಲ್ಲೆಲ್ಲ ಈಶ್ವರನನ್ನೇ ನಂಬಿದರೆ ಆದೀತೆ ? - ಎಂದು ಅವರು ಒಂದು ಸಲ ಪರಮೇಶ್ವರನ ಚಿಂತೆ, ಇನ್ನೊಂದು ಸಲ ಸ್ವಪ್ರಯತ್ನದಿಂದ ಗುಣಗಳನ್ನು ಗೆಲ್ಲುವ ಪ್ರಯತ್ನ - ಹೀಗೆ ಆತ್ತಿತ್ತ ತೂಗಾಡುತ್ತಿರುವರು. 'ಎರಡು ದೇವರ

ನಂಬಿ ಕುರುಡು ದಾಸ ಕೆಟ್ಟ' ಎಂಬಂತೆ ಇತ್ತಲೂ ಅತ್ತಲೂ ಹೊಯ್ದಾಡುತ್ತಿರುವ ಅವರಿಗೆ ಪರಮಾರ್ಥವೂ ದಕ್ಕುವದಿಲ್ಲ, ವ್ಯವಹಾರವೂ ಸಾಗುವದಿಲ್ಲ. 'ಅವ್ಯಭಿಚರಿತಭಕ್ತಿ ಎಂಬುದು ಸರ್ವಥಾ ಸಾಧ್ಯವಿಲ್ಲ. ಈ ಮಾತನ್ನು ಆಡುವವರು ಇರುತ್ತಾರೆ, ನಿಜ ; ಆದರೆ ಅನುಷ್ಠಾನದಲ್ಲಿ ಮಾತ್ರ ಯಾರೊಬ್ಬರೂ ತಂದಿರುವದಿಲ್ಲ ' ಎಂಬುದು ಅವರ ನಂಬಿಕೆ. ಇಂಥ ನಿರುತ್ಸಾಹಿಗಳೂ ಶ್ರದ್ಧಾರಹಿತರೂ ಆದವರಿಗೆ ಯಾವ ಪುರುಷಾರ್ಥವು ತಾನೆ ದಕ್ಕೀತು ? ನಮ್ಮಲ್ಲಿ ಕೆಲವರು ಸಾಧನಕ್ಕೇನೋ ಕೈಹಾಕುತ್ತಾರೆ ; ಆದರೆ ಅವರಿಗೆ ಒಂದಿಷ್ಟು ಸಾಧನಮಾಡಿದ್ದಕ್ಕೆ ಕೂಡಲೆ ಫಲವಾಗಿಬಿಡಬೇಕು. ದೇವರನ್ನು ನಂಬಿದೇವೆನ್ನುವದು, ಒಂದಿಷ್ಟು ತೋರಿಕೆಯ ಸಾಧನವನ್ನು ಮಾಡುವದು, ಅದರಿಂದ ತಮ್ಮ ಇಷ್ಟದಂತೆ ಫಲವಾಗದಿದ್ದರೆ ಈಶ್ವರನನ್ನೇ ಬೈಯ್ಯುವದು-ಇದು ಅವರ ಸ್ವಭಾವವು. ಇಂಥವರಿಗೂ ಯಾವ ಸಾಧನವೂ ದಕ್ಕುವದಿಲ್ಲ. ನಿಜವಾಗಿ ನೋಡಿದರೆ ಈಶ್ವರನ ಅನುಗ್ರಹಕ್ಕೇನೂ ಕಡಿಮೆಯಿಲ್ಲ. ಆತನು ಆಗಲೇ ತನ್ನ ಅನುಗ್ರಹವನ್ನು ಮಾಡಿಬಿಟ್ಟಿರುತ್ತಾನೆ; ನಾವು ಮಾತ್ರ ಅದನ್ನು ಸರಿಯಾಗಿ ಉಪಯೋಗಿಸಿಕೊಂಡಿಲ್ಲ. ಅನ್ನವು ಬೇಕಾದಾಗ ಅಕ್ಕಿಯನ್ನು ನೆನಪಿಗೆ ತಂದುಕೊಳ್ಳುವ ಸೋಮಾರಿಗಳಿಗೆ ಆಹಾರಪೂರ್ತಿಯು ಹೇಗಾದೀತು? ಸಂಕಟ ಬಂದಾಗ ವೆಂಕಟರಮಣ ಎಂದು ನನಗೆ ಬೇಕಾದಾಗ ಈಶ್ವರನನ್ನು ಮನಸ್ಸಿಗೆ ತಂದುಕೊಂಡರೆ ಹೇಗಾದೀತು? ಒಂದು ವೇಳೆ ಸಂಕಟ ಬಂದಾಗಲಾದರೂ ನಿಜವಾಗಿ ವೆಂಕಟರಮಣನ ಸ್ಮರಣೆ ಬರಬೇಕಲ್ಲವೆ! ಎಂದಿಗೂ ಆತನನ್ನು ಮನಸ್ಸಿಗೆ ತಂದುಕೊಳ್ಳದೆ ಇರುವವರಿಗೆ ಆಗಲಾದರೂ ಆತನ ಸ್ಮರಣೆಯುಂಟಾಗುವದು ಹೇಗೆ ? ನಮ್ಮ ಮನಸ್ಸಿನಲ್ಲಿ ಪರಮೇಶ್ವರನ ಭಕ್ತಿ ಬಲು ಹಗುರವಾಗಿ ಕೂತಿರುತ್ತದೆ. ಅದನ್ನು ಬೆಳೆಯಿಸಿಕೊಂಡರೆ ಮಾತ್ರ ಅದು ನಮಗೆ ಉಪಕಾರವಾಗಬಹುದು, ಇಲ್ಲದಿದ್ದರೆ ಹಾಗೆಯೇ ಆರಿಹೋಗುತ್ತದೆ.

ಆದ್ದರಿಂದ ನಮಗೆ ಅಧ್ಯಾತ್ಮಸಾಧನಗಳು ನಿಜವಾಗಿ ಪ್ರಯೋಜನಕಾರಿಗಳಾಗಬೇಕೆಂಬ ಅಭಿಲಾಷೆಯಿದ್ದರೆ ಪರಮೇಶ್ವರಚಿಂತನೆಯು ನಮಗೆ ನಿತ್ಯನಿಯಮವಾಗಬೇಕು. ನಮ್ಮ ಲೆಕ್ಕ ಪರಮೇಶ್ವರನ ಬ್ಯಾಂಕಿನಲ್ಲಿರಬೇಕು. ವ್ಯವಹಾರದಲ್ಲಿ ನಮಗೆ ಎಷ್ಟರಮಟ್ಟಿಗೆ ಸತ್ಯತ್ವಬುದ್ಧಿಯಿದೆಯೋ ಪರಮೇಶ್ವರನ ಅಸ್ತಿತ್ವದಲ್ಲಿಯೂ, ಅವನ ಸರ್ವವ್ಯಾಪಿತ್ವ, ಸರ್ವಶಕ್ತಿತ್ವ, ದಯಾಘನತ್ವ, ಭಕ್ತವಾತ್ಸಲ್ಯ - ಮುಂತಾದವುಗಳಲ್ಲಿಯೂ ಅಷ್ಟರಮಟ್ಟಿಗಾದರೂ ಸತ್ಯತ್ವಬುದ್ಧಿಯಿರಬೇಕು. ಹಾಗಾದರೆ ಅವಶ್ಯವಾಗಿ ಫಲವಾಗುತ್ತದೆ. ಆಗಲೇ ಸಾಧನಗಳ ಅನುಷ್ಠಾನದಲ್ಲಿರುವ ಕಷ್ಟಸುಖಗಳು ನಮ್ಮ ಮನಸ್ಸಿಗೆ ತಟ್ಟುವದು. ಶ್ರದ್ಧೆ, ಭಕ್ತಿ ಮುಂತಾದ ಸಾಧನಗಳನ್ನು ಮಾಡುವದಕ್ಕೆ ಹೋದಾಗ ಕೆಲವು ತೊಂದರೆಗಳು ಕಾಣಬರುವದು ನಿಜ, ಆದರೆ ಆ ತೊಂದರೆಗಳೂ ಆ ಪರಮೇಶ್ವರನ ಅನುಗ್ರಹವೇ. ಆ ತೊಂದರೆಗಳನ್ನು ಪರಿಹರಿಸಿಕೊಳ್ಳುವದೇ ಸಾಧನದಲ್ಲಿ ಜಯಶೀಲನಾದದ್ದರ ಗುರುತು. ವ್ಯವಹಾರದ ಕಷ್ಟಗಳನ್ನು ಪರಿಹರಿಸಿಕೊಳ್ಳುವದಕ್ಕೆ ನಾವು ಕೈಯಲ್ಲಾದ ಪ್ರಯತ್ನವನ್ನೆಲ್ಲ ಮಾಡುತ್ತೇವೆ, ಕಂಡಕಂಡವರನ್ನು ಅನುಸರಿಸುತ್ತೇವೆ, ಮಾಡಬಾರದ ಕೃತ್ಯಗಳನ್ನು ಕೂಡ

ಮಾಡುತ್ತೇವೆ. ಆದರೆ ಆಗಲೂ ಆ ಕಷ್ಟಗಳು ಪರಿಹಾರವಾಗುವವೆಂಬ ಭರವಸೆಯೇನೂ ಇಲ್ಲ. ಪರಮಾರ್ಥಸಾಧನೆಯಲ್ಲಿ ಹೀಗಿಲ್ಲ. ಅವುಗಳ ಅನುಷ್ಠಾನದಲ್ಲಿ ನಾವು ತೊಡಗುವಾಗ ಮೊದಮೊದಲು ಕೆಲವು ಅಡಚಣೆಗಳು ತೋರಿಕೊಳ್ಳುವದು ನಿಜ; ಆಗ ಅವು ಅತ್ಯಂತ ಅಪರಿಹಾರ್ಯವೆಂದೂ ಕಾಣಬಹುದು. ಆದರೆ ನಾವು ಎದೆಗುಂದದೆ ದೇವರ ಮೇಲೆ ಭಾರವನ್ನು ಹಾಕಿ ಮುಂದುವರಿದರೆ ಸೂರ್ಯೋದಯಕ್ಕೆ ಮಾಯವಾಗುವ ಕಾವಳದಂತೆ ನಮ್ಮ ಎಲ್ಲಾ ಕಷ್ಟಪರಂಪರೆಗಳೂ ತೊಲಗುವವು. ಅಥವಾ ಕಷ್ಟಗಳು ತೊಲಗುವವೆನ್ನುವದಕ್ಕಿಂತ ಅವುಗಳು ನಮಗೆ ಕಷ್ಟವಾಗಿ ಕಾಣದೆಹೋಗುವವು ಎಂದು ಹೇಳುವುದು ಹೆಚ್ಚು ಒಪ್ಪುತ್ತದೆ. ಏಕೆಂದರೆ ಇತರ ಜನರ ದೃಷ್ಟಿಯಿಂದ ಕಷ್ಟವಾಗಿ ತೋರುವ ಎಷ್ಟೋ ಪರಿಸ್ಥಿತಿಗಳು ಸಾಧಕರಿಗೆ ಸುಖಸಮಾಧಾನಗಳ ದ್ವಾರವಾಗಿ ಕಾಣುತ್ತಿರುವವು.

ವ್ಯವಹಾರದಲ್ಲಿ ಹಣಕಾಸು, ಹೊಲಮನೆ - ಮುಂತಾದವುಗಳನ್ನು ಸಂಪಾದಿಸಿಕೊಳ್ಳುವದಕ್ಕೆ ನಾವು ಎಷ್ಟೊಂದು ಪ್ರಯತ್ನಮಾಡುವೆವು! ಅವುಗಳು ಜೀವನದಲ್ಲಿ ಬೆಲೆಯುಳ್ಳ ಪದಾರ್ಥಗಳೆಂಬ ಭಾವನೆಯು ನಮ್ಮಲ್ಲಿ ಗಟ್ಟಿಯಾಗಿ ನಿಂತಿರುವದರಿಂದಲ್ಲವೆ, ನಾವು ಹಾಗೆ ಸ್ಥಿರಪ್ರಯತ್ನನ್ನು ಮಾಡುವದು ? ಸುಖ, ಸಂತೋಷ, ಸಮಾಧಾನ, ಶಾಂತಿ, ಮುಂತಾದವೂ ನಮಗೆ ನಿಜವಾಗಿ ಆ ಪದಾರ್ಥಗಳಿಗಿಂತಲೂ ಹೆಚ್ಚು ಅವಶ್ಯವಾಗಿರುತ್ತವೆ. ಅವುಗಳ ಬೆಲೆಯು ಇಂತಿಷ್ಟೆಂದು ನಾವು ಗೊತ್ತುಮಾಡುವದಕ್ಕೆ ಆಗುವದಿಲ್ಲ. ಐಶ್ವರ್ಯಾದಿಗಳು ಸಿಕ್ಕಲಿ ಸಿಕ್ಕದಿರಲಿ, ನಮಗೆ ಸುಖಶಾಂತ್ಯಾದಿಗಳು ಬೇಕೇಬೇಕು ; ಅವು ಸಿಕ್ಕುವವರೆಗೂ ನಮ್ಮ ಜೀವನದಲ್ಲಿ ಎಷ್ಟು ಭೋಗರಾಶಿಗಳಿದ್ದರೂ ಅವಕ್ಕೆ ಬೆಲೆಯೂ ನಮ್ಮ ದೃಷ್ಟಿಯಲ್ಲಿರುವದಿಲ್ಲ. ಸುಖಶಾಂತ್ಯಾದಿಗಳಿಗೆ ಬೆಲೆಯನ್ನು ತಗ್ಗಿಸಿ ಬರಿಯ ಭೋಗರಾಶಿಗಳಿಗೆ ಹೆಚ್ಚಿನ ಬೆಲೆಯನ್ನು ಕಟ್ಟುವವರು ಆತ್ಮವಂಚಕರಾಗಿರುತ್ತಾರೆ. ಏಕೆಂದರೆ ಇಷ್ಟು ವಿಷಯರಾಶಿಯಿದ್ದರೆ ಇಷ್ಟು ಸುಖವಿರುತ್ತದೆ ಎಂಬ ನಿಯಮವೇನೂ ಇರುವದಿಲ್ಲ. ಇಷ್ಟು ಹಣವನ್ನು ಗಳಿಸಿರುತ್ತಾನಾದ್ದರಿಂದ ಅವನಿಗೆ ಇಷ್ಟು ಸುಖವಿರಬೇಕು - ಎಂದು ಅನುಮಾನಪ್ರಮಾಣದಿಂದ ನಿರ್ಣಯಿಸುವದಕ್ಕೆ ಆಗುವದಿಲ್ಲ. ಎಲ್ಲಾ ವಿಷಯಗಳನ್ನೂ ತನಗೆ ಬೇಕಾದ ರೀತಿಯಲ್ಲಿ ಸಂಪಾದಿಸಿಕೊಂಡು ಅವುಗಳಿಂದ ನಿಯತವಾಗಿ ಸುಖವನ್ನೇ ಸಂಪಾದಿಸಿಕೊಳ್ಳುವ ಮಹನೀಯರು ಬಹುವಿರಳರಾಗಿರುವರು. ಮನಸ್ಸಿಗೆ ಒಂದಾನೊಂದು ಸ್ಥಿತಿ ಬರಬೇಕು ; ಆಗಲೇ ಸುಖಶಾಂತಿಗಳು ದಕ್ಕುವವು. ಈ ಗುಟ್ಟನ್ನು ಬಲ್ಲವರು ಹೊರಗಿನ ಕುಲರೂಪಧನಕನಕವಸ್ತುವಾಹನಾದಿಗಳು ಇರಲಿ ಬಿಡಲಿ, ಅವುಗಳಲ್ಲಿ ಹೆಚ್ಚಿನ ಆದರವನ್ನೂ ತೋರಿಸದೆ ತಮ್ಮ ಮನಸ್ಸಿನಲ್ಲಿ ಸುಖಶಾಂತಿಗಳುಂಟಾಗುವ ಮಾರ್ಗವು ಯಾವದು ಎಂಬುದನ್ನೇ ಹುಡುಕುತ್ತಿರುವರು. ಅಂಥ ವಿವೇಕಿಗಳಿಗೇ ಅಧ್ಯಾತ್ಮಸಾಧನದ ಬೆಲೆಯು ಗೊತ್ತಾಗುವದು ; ಅಂಥ ವಿವೇಕಿಗಳಿಗೇ ಪರಮೇಶ್ವರನ ಭಕ್ತಿಯ ಬೆಲೆಯು ಗೊತ್ತಾಗುವದು. ಯಾರಿಗೆ ಪರಮೇಶ್ವರನಲ್ಲಿ ಅನನ್ಯವಾದ ಭಕ್ತಿಯು ತಪ್ಪದೆ ಸ್ಥಿರವಾಗಿದ್ದು

ಕೊಂಡುಬಿಟ್ಟಿರುವದೋ ಅಂಥ ಮಹನೀಯರು ಎಂದಿಗೂ ಸುಖಶಾಂತಿಗಳಲ್ಲಿಯೇ ನೆಲೆಸಿರುವರು. ಅವರೇ ತ್ರಿಗುಣಾತೀತರು. ಅವರು ಶಾಂತಿಸಮೃದ್ಧವಾದ, ಅಮೃತವಾದ, ಅಭಯವಾದ, ಬ್ರಹ್ಮಭಾವವನ್ನೇ ಪಡೆದಿರುತ್ತಾರೆ. ನಮ್ಮಂಥವರು ಸದ್ಯಕ್ಕೆ ಮೂರು ಗುಣಗಳನ್ನು ಮೀರುವದಕ್ಕಾಗದಿದ್ದರೂ ರಜಸ್ತಮೋಗುಣಗಳ ಹಾವಳಿಯಿಂದಾದರೂ ಪಾರಾಗುವದಕ್ಕೆ ಪ್ರಯತ್ನಿಸಬೇಕು ; ಅದಕ್ಕಾಗಿ ಭಗವಂತನಲ್ಲಿ ಶ್ರದ್ಧಾಭಕ್ತಿಗಳನ್ನು ಸಂಪಾದಿಸಿಕೊಳ್ಳಬೇಕು.

ಭಗವಂತನಲ್ಲಿ ಶ್ರದ್ಧಾಭಕ್ತಿಗಳನ್ನಿಟ್ಟವರಿಗೇ ಸುಖಶಾಂತಿಗಳು ದೊರೆಯುವವೆಂಬುದಕ್ಕೆ ಕಾರಣವೇನು ? ಎಂದರೆ -

**ಬ್ರಹ್ಮಣೋ ಹಿ ಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾನ್ತಿಕಸ್ಯ ಚ ॥** **14-27**

ಬ್ರಹ್ಮಭಾವವಿಲ್ಲದೆ ಯಾರೊಬ್ಬರಿಗೂ ಸುಖವಿಲ್ಲ. ಬ್ರಹ್ಮವೆಂದರೆ ಅನಂತವಾದ ಆನಂದವಾಗಿರುವ ಪರಮಾರ್ಥವು; ಅದೇ ನಮ್ಮಗಳೆಲ್ಲರ ಆತ್ಮನು. ಆದ್ದರಿಂದ ನಾವೆಲ್ಲರೂ ನಮ್ಮ ಸ್ವರೂಪದಿಂದ ಬ್ರಹ್ಮವೇ ಆಗಿರುತ್ತೇವೆ; ಅನಂತವಾದ ಸಮತಾನಂದವಾಗಿರುತ್ತೇವೆ. ನಮ್ಮ ಸ್ವರೂಪವಾಗಿರುವ ಈ ಸುಖಕ್ಕೆ ಯಾವದೊಂದು ಪರಿಚ್ಛೇದವೂ ಇರುವದಿಲ್ಲ. ಎಲ್ಲಾ ದೇಶಗಳನ್ನೂ ಎಲ್ಲಾ ಕಾಲಗಳನ್ನೂ ವ್ಯಾಪಿಸಿಕೊಂಡಿರುವದೇ ಭೂಮಬ್ರಹ್ಮವು. ಅದೇ ಸುಖವು ಎಂದು ಶ್ರುತಿಯು ಸಾರುತ್ತಿದೆ. ಆದ್ದರಿಂದ ನಿಜವಾದ ಸುಖವು ಬೇಕೆನ್ನುವವರು ಈ ಅನಂತವಾಗಿರುವ ಸುಖದ ಸ್ವರೂಪನೇ ಆಗಿರುವ ಭಗವಂತನಲ್ಲಿ ಭಕ್ತಿಯನ್ನು ಇಡಬೇಕು. ಏಕೆಂದರೆ ಭಗವಂತನೇ ಅನಂತಾನಂದಕ್ಕೆ ಪ್ರತಿಷ್ಠೆಯಾಗಿರುತ್ತಾನೆ. ವ್ಯವಹಾರದ ವಸ್ತುಗಳಲ್ಲಿಯೇ ಸಾಮಾನ್ಯರಿಗೆ ಭಕ್ತಿಯಿರುತ್ತದೆ ; ಅವುಗಳು ಅಲ್ಪವಾಗಿರುವದರಿಂದ, ಪರಿಚ್ಛಿನ್ನವಾಗಿರುವದರಿಂದ, ಅವುಗಳಲ್ಲಿರುವ ಪ್ರೇಮವು ನಮ್ಮನ್ನು ಮರ್ತ್ಯತ್ವಕ್ಕೆ ಒಯ್ಯುವದು. ಅಲ್ಪವಾದ ಪರಿಚ್ಛಿನ್ನವಾದ ಮರ್ತ್ಯವಾದ ವಸ್ತುಗಳ ಭೋಗವನ್ನು ಬಯಸಿ ಇಂದ್ರಿಯಗಳ ವಶರಾಗುವದರಿಂದಲೇ ನಾವು ಮರ್ತ್ಯರಾಗಿರುವೆವು. ಆದರೆ ಅನಂತವಾದ ಆನಂದಸ್ವರೂಪನಾದ ಪರಮಾತ್ಮನು ನಿತ್ಯನಾಗಿರುವದರಿಂದ ಆತನು ಅಮೃತತ್ವಕ್ಕೆ, ಎಂದಿಗೂ ನಾಶವಾಗದ, ಎಂದಿಗೂ ಸವೆಯದ, ಸುಖಕ್ಕೆ ಪ್ರತಿಷ್ಠೆಯಾಗಿರುತ್ತಾನೆ. ಆದ್ದರಿಂದ ಆತನಲ್ಲಿಯೇ ಶ್ರದ್ಧಾಭಕ್ತಿಗಳನ್ನು ಸಂಪಾದಿಸಿಕೊಳ್ಳಬೇಕು.

ಇದೂ ಅಲ್ಲದೆ ಯಾರಲ್ಲಿ ಅಧರ್ಮವು ಹೆಚ್ಚಾಗಿರುವದೋ ಅವರು ಆ ಪಾಪದ ಫಲವಾಗಿ ಅಲ್ಪವಸ್ತುಗಳ ಭೋಗವನ್ನೇ ಬಯಸಿ ಅದರಿಂದ ಮರ್ತ್ಯರಾಗುತ್ತಾರೆ. ಅಧರ್ಮಿಷ್ಠರೇ ರಜಸ್ತಮೋಗುಣಗಳ ಆವರಣಕ್ಕೆ ವಿಷಯರಾಗಿರುವರು. ಅವರಿಗೆ ಪರಮಾರ್ಥವಾದ ಆನಂದವು ಎಂದಿಗೂ ದೃಷ್ಟಿಗೆ ಗೋಚರವಾಗದೆ ಇರುತ್ತದೆ. ಯಾರಿಗೆ

ಧರ್ಮವು ಅಭಿವೃದ್ಧಿಯನ್ನು ಹೊಂದಿರುವದೋ ಅವರಿಗೆ ಆ ಧರ್ಮದ ಭೂಮಿಕೆಗೆ ತಕ್ಕಂತೆ ಸುಖವೂ ತೋರಿಕೊಳ್ಳುತ್ತದೆ. ಧರ್ಮವೈರಾಗ್ಯಾದಿಗಳು ಹೆಚ್ಚಿದಂತೆಲ್ಲ ಸುಖದ ಅಭಿವ್ಯಕ್ತಿಯೂ ಹೆಚ್ಚುತ್ತದೆ. ಆದ್ದರಿಂದಲೇ ಶ್ರುತಿಯು ಮನುಷ್ಯರ ಆನಂದಕ್ಕಿಂತ ಮನುಷ್ಯಗಂಧರ್ವರ ಆನಂದವು ಹೆಚ್ಚು, ಅವರ ಆನಂದಕ್ಕಿಂತ ದೇವಗಂಧರ್ವರ ಆನಂದವು ಹೆಚ್ಚು, ಅವರ ಆನಂದಕ್ಕಿಂತಲೂ ಪಿತೃಗಳ ಆನಂದವು ಹೆಚ್ಚು - ಎಂದು ಒಬ್ಬರ ಆನಂದಕ್ಕಿಂತ ಒಬ್ಬರ ಆನಂದವು ಧರ್ಮಾಭಿವೃದ್ಧಿಯ ತಾರತಮ್ಯದಿಂದ ನೂರುಪಟ್ಟು ಹೆಚ್ಚಾಗಿರುವದೆಂದು ಹೇಳಿರುತ್ತದೆ; ಧರ್ಮಜ್ಞಾನವೈರಾಗ್ಯಗಳು ಎಲ್ಲರಿಗಿಂತಲೂ ಹೆಚ್ಚಾಗಿರುವ ಹಿರಣ್ಯಗರ್ಭನಲ್ಲಿ ಎಲ್ಲರಿಗಿಂತಲೂ ಹೆಚ್ಚಿನ ಆನಂದವಿರುವದೆಂದೂ ಹೇಳಿರುತ್ತದೆ. ಆದರೆ ಯಾರಲ್ಲಿ ಎಷ್ಟೇ ಆನಂದವಿರಲಿ, ಅವರು ಮಾಡಿದ ಧರ್ಮವು ಸವೆದ ಕೂಡಲೆ ಆ ಆನಂದವೂ ಮರೆಯಾಗುತ್ತದೆ. ಯಾವ ಮಹನೀಯನಲ್ಲಿ ವೈರಾಗ್ಯದ ಪರಾಕಾಷ್ಠೆಯಿಂದ ನಿರತಿಶಯವಾದ ತತ್ತ್ವದ ಜ್ಞಾನವೇ ಇದ್ದುಕೊಂಡಿರುವದೋ ಅವರಿಗೆ ಮಾತ್ರ ಆತ್ಮಸ್ವರೂಪವೇ ಆಗಿರುವ ಪರಮಾರ್ಥಾನಂದವು ಇದ್ದದ್ದು ಇದ್ದಂತೆಯೇ ತೋರುತ್ತದೆ. ಭಗವಂತನಲ್ಲಿ ಅಚಲವಾದ ಶ್ರದ್ಧಾಭಕ್ತಿಗಳಿರುವವರಿಗೆ ಆತನ ಅನುಗ್ರಹದಿಂದಲೇ ಅಂಥ ಜ್ಞಾನನಿಷ್ಠಾರೂಪವಾದ ಶ್ವಾಶ್ವತಧರ್ಮವು ಲಭಿಸುವದರಿಂದ ಅವರಿಗೆ ಸಿಕ್ಕುವ ಸ್ವರೂಪಾನಂದಕ್ಕೆ ಎಂದಿಗೂ ಚ್ಯುತಿಯಿಲ್ಲದೆ ಇರುತ್ತದೆ. ಆದ್ದರಿಂದ ಅವ್ಯಭಿಚರಿತವಾದ ಭಗವದ್ಭಕ್ತಿಯು ಆತ್ಯಂತಿಕವಾದ ಪರಮಾನಂದಕ್ಕೆ ಕಾರಣವಾಗಿರುತ್ತದೆ ಎಂಬುದು ಸ್ವಾಭಾವಿಕವಾಗಿರುತ್ತದೆ. ಆದ್ದರಿಂದ ಧರ್ಮಾಧರ್ಮಗಳ ಕ್ಷೇತ್ರವನ್ನು ಕೂಡ ಮೀರುವ ಈ ಭಾಗವತಧರ್ಮವಾದ ಅವ್ಯಭಿಚರಿತಭಕ್ತಿಯೇ ಗುಣತ್ರಯವನ್ನು ಮೀರಿದ ಈ ಶಾಶ್ವತಾನಂದಪ್ರಾಪ್ತಿಗೆ ಕಾರಣವೆಂದು ಭಗವಂತನು ಅಪ್ಪಣೆಕೊಡಿಸಿರುತ್ತಾನೆ. ಇದನ್ನು ತಿಳಿದು ವಿವೇಕಿಗಳಾದವರೆಲ್ಲರೂ ಭಗವದ್ಭಕ್ತಿಯಿಂದಲೇ ಆತ್ಯಂತಿಕಶ್ರೇಯಸ್ಸನ್ನು ಪಡೆಯುವದಕ್ಕೆ ಹವಣಿಸಬೇಕು.

## ೧೩೭. ನಮ್ಮ ವ್ಯವಹಾರಕ್ಕೆಲ್ಲ ಪರಮಾತ್ಮನೇ ಮೂಲ 15 - (1)

(31-7-49)

ಹಿಂದಿನ ಅಧ್ಯಾಯದಲ್ಲಿ ಪ್ರಕೃತಿಯ ಮೂರು ಗುಣಗಳನ್ನು ವರ್ಣಿಸಿ ಆ ಗುಣಗಳನ್ನು ಮೀರುವದಕ್ಕೆ ಉಪಾಯವೇನೆಂಬುದನ್ನು ತಿಳಿಸಿದ್ದಾಯಿತು. ಸತ್ತ್ವಾದಿಗುಣಗಳು ಇಡಿಯ ಪ್ರಪಂಚವನ್ನೇ ವ್ಯಾಪಿಸಿಕೊಂಡಿರುವದಾದರೂ ನಮ್ಮ ನಮ್ಮ ಮನಸ್ಸಿನಲ್ಲಿ ತೋರಿಕೊಳ್ಳುತ್ತಿರುವ ಗುಣಗಳ ಕಾರ್ಯವನ್ನೇ ನಾವು ಮುಖ್ಯವೆಂದೆಣಿಸಬೇಕೆಂದು ಆಗಲೆ ತಿಳಿಸಿರುತ್ತೇನೆ. ನಮ್ಮ ಮನಸ್ಸು ಸಾತ್ತ್ವಿಕವೊ, ರಾಜಸವೊ, ತಾಮಸವೊ ಎಂಬುದನ್ನು

ವಿವೇಚನೆಮಾಡಿ ತಿಳಿದುಕೊಂಡು ಕ್ರಮಕ್ರಮವಾಗಿ ಗುಣಗಳನ್ನು ಗೆಲ್ಲುವದಕ್ಕೆ ಪ್ರಯತ್ನಿಸಬೇಕು. ಹೊರಗಿನ ಪದಾರ್ಥಗಳಲ್ಲಿ ಒಳ್ಳೆಯದು, ಕೆಟ್ಟದ್ದು, ನಡುತರದ್ದು ಎಂಬ ಕಲ್ಪನೆಗಳು ಆಗುವದೂ ನಮ್ಮ ಮನಸ್ಸಿನ ಸ್ವಭಾವದಿಂದ. ಉದಾಹರಣೆಗೆ ದಾರಿಯಲ್ಲಿ ಒಂದು ಶವವು ಬಿದ್ದಿದೆ ಎಂದು ಇಟ್ಟುಕೊಳ್ಳಿರಿ ; "ಇದು ಮೈಲಿಗೆ, ಮುಟ್ಟತಕ್ಕದ್ದಲ್ಲ" ಎಂದು ಒಬ್ಬನು ಅತ್ತ ಸರಿಯುತ್ತಾನೆ. ಇನೊಬ್ಬನು 'ಆಹ ! ಎಂಥ ಕಮನೀಯರೂಪವು ! ಈಕೆಯ ಸೌಂದರ್ಯವು ಎಷ್ಟು ಚಿತ್ತಾಕರ್ಷಕವು ಎನ್ನುತ್ತಾನೆ. ಒಂದು ನಾಯಿಯು ಅತ್ತಹೋಗುತ್ತಿದ್ದರೆ 'ಒಳ್ಳೆಯ ರುಚಿಯಾದ ಆಹಾರವು' ಸಿಕ್ಕಿತು !' ಎನ್ನುತ್ತದೆ. ಇಲ್ಲಿ ವಸ್ತುವೊಂದೇ ಆಗಿದ್ದರೂ ನೋಡುವವರ ಮನಸ್ಸಿನ ಅಂತಸ್ಥಿನಿಂದಲ್ಲವೆ, ವಸ್ತುವಿನಲ್ಲಿಯೂ ಬೇರೆಬೇರೆಯ ಗುಣಗಳು ಆರೋಪಿತವಾಗಿರುತ್ತವೆ ? ಆದ್ದರಿಂದ ಗುಣಗಳನ್ನು ಗೆಲ್ಲುವೆವೆನ್ನುವರು ಪ್ರಧಾನವಾಗಿ ತನ್ನ ಮನಸ್ಸಿನಲ್ಲಾಗುವ ಪರಿಣಾಮವನ್ನೇ ಲೆಕ್ಕಕ್ಕೆ ತೆಗೆದುಕೊಳ್ಳಬೇಕು.

ಈ ಗುಣಗಳನ್ನು ಮೀರುವದಕ್ಕೆ ಭಗವದ್ಭಕ್ತಿಯೇ ಮುಖ್ಯವಾದ ಉಪಾಯವೆಂದು ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಲಾಗಿದೆ. ನಮ್ಮ ಸ್ವಪ್ರಯತ್ನದಿಂದ ಗುಣಾತೀತರಾಗುವದಕ್ಕೆ ಪ್ರಯತ್ನಮಾಡುವದು ನಿಷ್ಫಲ. ಏಕೆಂದರೆ ನಮಗೆ ತಿಳಿದಿರುವ ಉಪಾಯಗಳು ಎಷ್ಟೋವೇಳೆ ನಮಗೆ ಸಮಯಕ್ಕೆ ಸಿಕ್ಕದೆ ಇರುತ್ತವೆ. ಯಾವಾಗಲೂ ನಮ್ಮ ಸ್ವಾಧೀನದಲ್ಲಿಲ್ಲದ ಉಪಾಯಗಳು ಎಷ್ಟಿದ್ದರೇನು ? ಇದಲ್ಲದೆ ಒಂದೆರಡು ಉಪಾಯಗಳು ನಮಗೆ ತೋರಿದರೂ ಅವಕ್ಕೆ ಗುಣಗಳು ವಶವಾಗದೆ ಇರಬಹುದು. ಗುಣಗಳು ಯಾವಾಗ ಯಾವ ರೂಪವನ್ನು ವಹಿಸುತ್ತವೆ, ಅವುಗಳ ದುಷ್ಪರಿಣಾಮವನ್ನು ಪರಿಹರಿಸಿಕೊಳ್ಳುವದಕ್ಕೆ ಎಷ್ಟು ಪರಿಮಾಣದ ಸಾಧನವು ಸಾಕಾದೀತು ? - ಎಂಬುದನ್ನು ನಿಶ್ಚಯಿಸುವದು ಮನುಷ್ಯಮಾತ್ರದಿಂದ ಆಗತಕ್ಕದ್ದಲ್ಲ. ಆದ್ದರಿಂದ ನಾವುನಾವೇ ಗುಣಗಳನ್ನು ಗೆಲ್ಲುವೆವೆಂಬುದು ಬರಿಯ ಕೈಯಿಂದ ಈಜಿಕೊಂಡು ಅಪಾರವಾಗಿರುವ ಸಮುದ್ರವನ್ನು ದಾಟುವೆನೆಂಬ ಯತ್ನವಾಗಿರುತ್ತದೆ. ಈ ಗುಣಗಳು ಯಾವಾಗಲು ಯಾವ ಪರಮಾತ್ಮನ ವಶದಲ್ಲಿಯೇ ಇದ್ದುಕೊಂಡಿರುವವೋ ಆತನಿಗೆ ಶರಣುಹೋದರೆ ಇವುಗಳನ್ನು ಸುಲಭವಾಗಿ ಹಣ್ಣುಮಾಡಬಹುದು. ಏಕೆಂದರೆ ಪರಮಾತ್ಮನು ಸರ್ವವ್ಯಾಪಿಯು ; ಆತನನ್ನು ಯಾವಾಗಲೆಂದರೆ ಆಗ, ಎಲ್ಲೆಂದರೆ ಅಲ್ಲಿ, ನೆನೆಸಿಕೊಳ್ಳಬಹುದು. ಆಗ ಅಲ್ಲಿಯೇ ಆತನು ಸಿದ್ಧವಾಗಿರುತ್ತಾನೆ. ಆತನು ಆರ್ತತ್ರಾಣಪರಾಯಣನು, ಕಾಮಿತೇಷ್ಟಪ್ರದನು ; ಸರ್ವಜ್ಞನೂ ಸರ್ವಶಕ್ತನೂ ದಯಾಘನನೂ ಸರ್ವರ ಆತ್ಮನೂ ಆಗಿರುವ ಆತನಲ್ಲದೆ ಮತ್ತೆ ಯಾರಿಂದತಾನೆ ನಮಗೆ ಈ ಗುಣಗಳ ಉಪಟಳವನ್ನು ತಪ್ಪಿಸುವದಕ್ಕೆ ಆದೀತು ? ಆ ಭಗವಂತನ ಭಕ್ತಿಯೊಂದು ಇದ್ದುಬಿಟ್ಟರೆ ಗುಣಗಳು ನಮ್ಮನ್ನು ಏನೂ ಮಾಡಲಾರವು. ಈಗ ನಾವು ಗುಣಗಳ ದಾಸರಾಗಿರುತ್ತೇವೆ ; ಭಗವದ್ಭಕ್ತಿಯೊಂದನ್ನು ಸಂಪಾದಿಸಿಕೊಂಡುಬಿಟ್ಟರೆ ಗುಣಗಳೇ ನಮ್ಮ ದಾಸರಾಗಿಬಿಡುತ್ತವೆ.

ಆದ್ದರಿಂದ ಗುಣಾಮಯವಾಗಿರುವ ಈ ಸಂಸಾರದಿಂದ ಬಿಡುಗಡೆಯನ್ನು ಹೊಂದುವದಕ್ಕೆ ಭಗವಂತನಿಗೆ ಶರಣುಹೋಗುವದೇ ಪರಮೋಪಾಯವೆಂಬುದನ್ನು ಹೇಳಿದ ಬಳಿಕ ಪರಮಾತ್ಮತತ್ತ್ವವನ್ನೇ ತಿಳಿದವರಿಗೆ ಗುಣಾತೀತತತ್ವವು ಅತ್ಯಂತ ಸುಖಕರ ವಾಗಿರುವದೆಂಬುದನ್ನು ತಿಳಿಸುವದಕ್ಕೆಂದು ಪ್ರಾರಂಭಿಸಿರುತ್ತದೆ.

ಶ್ರೀ ಭಗವಂತನು ಹೇಳುತ್ತಿದಾನೆ - ಭಗವಂತನು ಹೇಳುತ್ತಿದಾನೆ ಎಂಬುದನ್ನು ನಮ್ಮ ಲಕ್ಷ್ಯಕ್ಕೆ ತರುವದಕ್ಕಾಗಿ ಆಗಾಗ್ಗೆ ವ್ಯಾಸರು 'ಶ್ರೀಭಗವಾನುವಾಚ' ಎಂದು ಹೇಳುತ್ತಿದ್ದಾರೆ. ಭಗವಂತನೇ ಸಾಕ್ಷಾತ್ತಾಗಿ ಹೇಳಿದ ತತ್ತ್ವಜ್ಞಾನವಿದು. ಇದನ್ನು ಸಂಪಾದಿಸಿಕೊಂಡರೆ ಭಗವಂತನಲ್ಲಿಯೇ ನೆಲೆನಿಂತು ಸಂಸಾರಬಂಧದಿಂದ ಮುಕ್ತರಾಗಿಬಿಡಬಹುದು ಎಂಬುದು ಅವರ ಅಭಿಪ್ರಾಯ. ಮೊಟ್ಟಮೊದಲು ಈ ಸಂಸಾರವನ್ನು ವರ್ಣಿಸಿ ತಿಳಿಸಿರುತ್ತಾರೆ :

**ಊರ್ಧ್ವಮೂಲಮಧಃ ಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ 15-1**

'ಇದೊಂದು ಅವ್ಯಯವಾದ ಅಶ್ವತ್ಥವು. ಇದಕ್ಕೆ ಮೇಲೆ ಬೇರು ; ಕೆಳಗೆ ಕೊಂಬೆಗಳು. ಇದಕ್ಕೆ ಛಂದಸ್ಸುಗಳೇ ಎಲೆಗಳು. ಇದನ್ನು ತಿಳಿದವನು ವೇದವಿದನು' ಎಂದಿದಾನೆ, ಭಗವಂತನು. ಸಂಸಾರವನ್ನು ಅಶ್ವತ್ಥವೆಂದು ಶ್ರುತಿಯಲ್ಲಿಯೇ ಕರೆದಿದೆ. ಅದನ್ನೇ ಇಲ್ಲಿ ಅನುವಾದಮಾಡಿಕೊಂಡಿದೆ. ಅಶ್ವತ್ಥವೃಕ್ಷವು ನಮ್ಮಲ್ಲಿ ಬಹಳ ಪೂಜ್ಯವಾಗಿರುತ್ತದೆ. ಪುರಾತನಕಾಲದಿಂದಲೂ ಈ ವೃಕ್ಷವನ್ನು ನಮ್ಮವರು ಭಗವಂತನ ವಿಭೂತಿಯೆಂದು ಪೂಜಿಸುತ್ತಿದಾರೆ; ಅದರ ತತ್ತ್ವವನ್ನು ತಿಳಿದರೆ ತತ್ತ್ವವನ್ನೆಲ್ಲ ತಿಳಿದಂತೆ ಎಂದು ವೇದಕಾಲದ ಋಷಿಗಳು ಭಾವಿಸಿದಂತೆ ಇದೆ. ಈ ಅಶ್ವತ್ಥವೇ ಸಂಸಾರಕ್ಕೆ ಸಂಕೇತವು. ಈ ಸಂಸಾರಪ್ರಪಂಚವು ನೋಡುವದಕ್ಕೆ ಹೇಗಿದೆ ? ಇದು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡು ನಮ್ಮನ್ನು ಹೇಗೆ ಗೋಳುಗುಟ್ಟಿಸುತ್ತಿದೆ ? ಇದರಲ್ಲಿ ವಿರಕ್ತರಾದವರು ಇದನ್ನು ದಾಟಿ ಹೇಗೆ ಪರಮಪುರುಷಾರ್ಥವನ್ನು ಪಡೆಯಬಹುದು ? ಇದನ್ನೆಲ್ಲ ಈ ಅಧ್ಯಾಯದಲ್ಲಿ ವಿಚಾರಮಾಡಲಾಗುವದು.

ಈ ಪ್ರಪಂಚರೂಪವಾದ ಅಶ್ವತ್ಥಕ್ಕೆ ಬೇರು ಮೇಲೆ ಇದೆ, ಶಾಖೆಗಳು ಕೆಳಗೆ ಇವೆ. ಇದರ ತತ್ತ್ವವನ್ನು ತಿಳಿದವನೇ ವೇದವಿದನು, ಎಂದರೆ ವೇದಾರ್ಥವನ್ನು ಬಲ್ಲವನು. ಈ ಪ್ರಪಂಚದ ತತ್ತ್ವವೇನು ? ಎಂಬುದನ್ನು ತಿಳಿಸುವದೇ ವೇದಕ್ಕೆ ಗುರಿ. ಈ ಪ್ರಪಂಚವನ್ನು ನಾವು ಹೇಗೆ ತಿಳಿಯುವೆವೋ ಹಾಗೆ ನಮಗೆ ಅದು ಪ್ರತಿಫಲವನ್ನು ಕೊಡುವದು. ಇದನ್ನು ಒಳ್ಳೆಯದೆಂದು ತಿಳಿದರೆ ಇದು ಒಳ್ಳೆಯದಾಗಿರುತ್ತದೆ, ಕೆಟ್ಟದೆಂದು ಭಾವಿಸಿದರೆ ಕೆಟ್ಟದಾಗಿರುತ್ತದೆ. ಇದನ್ನು ಸುಮ್ಮನೆ ತಿಳಿದುಕೊಂಡಮಾತ್ರಕ್ಕೆ, "ಇದು ಪ್ರಪಂಚವು ; ಇದು ನಮ್ಮ ಸಂಸಾರದ ರಂಗಸ್ಥಲವು" ಎಂದಿಷ್ಟೇ ತಿಳಿದುಕೊಂಡರೆ ನಾವು ವೇದವಿದರಾಗುವದಿಲ್ಲ.

ಇದನ್ನು ಹೇಗೆ ತಿಳಿಯಬೇಕು ? - ಇದರ ಪರಮಾರ್ಥಸ್ವರೂಪವೇನು ? - ಎಂಬುದನ್ನು ತಿಳಿದುಕೊಂಡರೆ ವೇದಾರ್ಥವನ್ನು ಅರಿತುಕೊಂಡಂತಾಗುವದು. ಈ ಪ್ರಪಂಚವನ್ನು ನಾವು ಕುಸ್ತಿಯ ಅಖಾಡವಾಗಿ ಮಾಡಿಕೊಂಡುಬಿಟ್ಟಿರುತ್ತೇವೆ. ಒಬ್ಬರಲ್ಲೊಬ್ಬರಿಗೆ ಸಂಶಯಬುದ್ಧಿಯಿದೆ, ಒಬ್ಬರಿಂದೊಬ್ಬರಿಗೆ ಅಂಜಿಕೆಯುಂಟಾಗುತ್ತಿದೆ. ಆದ್ದರಿಂದ ಎಲ್ಲರೂ ಆತ್ಮರಕ್ಷಣೆಗೆ ಮತ್ತು ಶತ್ರುದಮನಕ್ಕೆ ಸಿದ್ಧರಾಗುತ್ತಿದ್ದೇವೆ. ಆದರೆ ನಿಜವಾಗಿ ಇಂಥ ಅನರ್ಥಕ್ಕೇನೂ ಕಾರಣವಿಲ್ಲ. ಈ ಪ್ರಪಂಚವನ್ನು ಒಂದಾನೊಂದು ದೃಷ್ಟಿಯಿಂದ ನೋಡಿದರೆ ಇದರಿಂದ ಯಾವಾಗಲೂ ನಾವು ಶಾಂತಿಸುಖಗಳನ್ನು ಸಂಪಾದಿಸಿಕೊಳ್ಳಬಹುದು - ಎಂದು ವೇದವು ತಿಳಿಸುತ್ತದೆ. ಅದನ್ನು ನಾವು ಅರಿತುಕೊಂಡರೆ ವೇದವಿದರಾದಂತೆ.

ಇದನ್ನು ಸರಿಯಾಗಿ ತಿಳಿದುಕೊಳ್ಳುವ ಬಗೆ ಹೇಗೆ ? ಎಂದರೆ ಭಗವಂತನು ಅದನ್ನು ಹೇಳುತ್ತಿದ್ದಾನೆ : ಈ ಸಂಸಾರವೃಕ್ಷವು ಊರ್ಧ್ವಮೂಲವು, ಉತ್ಕೃಷ್ಟವಾದ ಪರಮಾತ್ಮನೆಂಬ ಬೇರುಳ್ಳದ್ದು. ಕಾಲಕ್ಕಿಂತಲೂ ಸೂಕ್ಷ್ಮವಾಗಿರುವದರಿಂದಲೂ ಎಲ್ಲಕ್ಕೂ ಕಾರಣವಾಗಿ ಎಲ್ಲಕ್ಕಿಂತಲೂ ಹೆಚ್ಚಿನದೆನಿಸಿರುವ ನಿತ್ಯವಸ್ತುವಾಗಿರುವದರಿಂದಲೂ ಈ ಪರಮಾತ್ಮವಸ್ತು ಮೇಲು. ಈ ಮೇಲೆನಿಸಿದ ಪರಮಾತ್ಮನೆಂಬ ಬೇರಿನಿಂದ ಹುಟ್ಟಿರುವದರಿಂದ ನಿಜವಾಗಿ ಇದೂ ಪರಮಾತ್ಮಸ್ವರೂಪವೇ ಆಗಿರುತ್ತದೆ ; ಮಣ್ಣಿನಿಂದ ಹುಟ್ಟಿದ ಮಡಕೆಯು ಮಣ್ಣಲ್ಲದೆ ಮತ್ತೆ ಏನಾಗಿದ್ದೀತು ? ವೇದವಿದರಾದ ಜ್ಞಾನಿಗಳ ದೃಷ್ಟಿಯಿಂದ ನೋಡಿದರೆ ನಾವೆಲ್ಲರೂ ಪರಮಾತ್ಮನ ಪುತ್ರರೇ. ನಾವೆಲ್ಲರೂ ಆತನ ಅನುಗ್ರಹಕ್ಕೆ ಪಾತ್ರರೇ ; ಆತನು ನಮಗೆ ಕೊಟ್ಟಿರುವ ಶರೀರೇಂದ್ರಿಯಗಳನ್ನೂ ಮನೋಬುದ್ಧಿಗಳನ್ನೂ ಸರಿಯಾಗಿ ಉಪಯೋಗಿಸಿಕೊಂಡರೆ ಈಗಲೇ ಇಲ್ಲಿಯೇ ನಾವೆಲ್ಲರೂ ಆ ಪರಮಾತ್ಮನ ಅಂಶರೇ ಆಗಿರುವೆವೆಂಬುದನ್ನು ಮನಗಂಡುಕೊಳ್ಳಬಹುದಾಗಿದೆ. ನಾವುಗಳು ಎಲ್ಲರೂ ಪರಮೇಶ್ವರನಿಂದಲೇ ಬಂದಿರುತ್ತೇವೆ ಎಂಬುದನ್ನು ನೆನಪಿನಲ್ಲಿಟ್ಟುಕೊಂಡಿರುವವರೆಗೆ ಈ ಸಂಸಾರದಲ್ಲಿ ಯಾವ ದುಃಖವೂ ಇರುವದಿಲ್ಲ. ಬೇರು ಬಲವಾಗಿರುವಷ್ಟೇ ಗಿಡವು ಬಲವಾಗಿರುತ್ತದೆ : ಆ ಪರಮಾತ್ಮನ ಅವಲಂಬನೆಯಿಂದಲೇ ನಮಗೆ ಜ್ಞಾನವೂ ಬಲವೂ ಬರುತ್ತದೆ. ಈ ಪ್ರಪಂಚದಲ್ಲಿರುವ ಜೀವರೆಲ್ಲರೂ ಪರಮಾತ್ಮನಿಂದಲೇ ಬಂದವರು ಎಂಬುದನ್ನು ಸ್ಮರಣೆಗೆ ತಂದುಕೊಂಡರೆ ಎಲ್ಲರಲ್ಲಿಯೂ ಪೂಜ್ಯಬುದ್ಧಿ ಬರುತ್ತದೆ ; ಯಾರೊಬ್ಬರಲ್ಲಿಯೂ ದ್ವೇಷಾಸೂಯೆಗಳುಂಟಾಗುವದಕ್ಕೆ ಅವಕಾಶವಿರುವದಿಲ್ಲ. ಆದರೆ ನಾವು ನಮ್ಮ ಧನಸಂಪತ್ತು, ಕುಲ, ರೂಪ, ವಿದ್ಯೆ - ಮುಂತಾದವುಗಳನ್ನು ನೆನಪಿಗೆ ತಂದುಕೊಂಡು ಹೆಮ್ಮೆಪಡುತ್ತಿದ್ದೇವೆ, ಉಳಿದವರನ್ನು ಲೆಕ್ಕಿಸದೆ ಅನಾದರಮಾಡುತ್ತಿದ್ದೇವೆ. ರಾವಣನ ಸಿರಿಯು ಯಾರದಕ್ಕೂ ಕಡಿಮೆಯಾಗಿರಲಿಲ್ಲ. 'ಅಧರ್ಮವೊಂದಿಲ್ಲದಿದ್ದರೆ ಈ ರಾವಣನಿಗೆ ಏನು ಕಡಿಮೆ' ? ಎಂದು ಹನುಮಂತನು ತನ್ನ ಮೆಚ್ಚಿಕೆಯನ್ನು ತೋರಿಸಿರುತ್ತಾನೆ.

ರಾವಣನು ತಾನು ಪುಲಸ್ತ್ಯಬ್ರಹ್ಮನ ವಂಶದವನೆಂಬುದನ್ನೇ ಮರೆತುಬಿಟ್ಟಿದ್ದನು ; ತನ್ನ ಶೌರ್ಯದಿಂದ ದಿಕ್ಪಾಲಕರನ್ನೆಲ್ಲ ಗೆದ್ದು ಋಷಿಗಳನ್ನೆಲ್ಲ ಹಿಂಸಿಸುತ್ತಾ ಅಧರ್ಮಕ್ಕೆ ಮನಸೋತಿದ್ದನು. ಹೀಗೆಯೇ ಈಗಿನ ಭೂಲೋಕದಲ್ಲಿ ಅಮಿತವಾದ ಧನಕನಕಾದಿಗಳನ್ನು ರಾಶಿಹಾಕಿಕೊಂಡಿರುವ ಪಾಶ್ಚಾತ್ಯರು ಈಶ್ವರನನ್ನು ತಮ್ಮ ಮನಸ್ಸಿನ ಕ್ಷೇತ್ರದಿಂದ ಆಚೆಗೆ ತಳ್ಳಿರುತ್ತಾರೆ, ಆಸುರೀಸಂಪತ್ತಿಗೆ ಮನಸೋತಿರುತ್ತಾರೆ. ಭರತಖಂಡದವರಾದ ನಾವುಗಳೂ ದೌರ್ಭಾಗ್ಯದಿಂದ ನಮ್ಮ ದೇಶದ ಸಂಸ್ಕೃತಿಯಾದ ಅಧ್ಯಾತ್ಮಚಿತ್ತತೆಯನ್ನು ಬಿಟ್ಟು ಆ ಜನರ ಕಡೆಗೇ ಮನಸ್ಸನ್ನು ತಿರುಗಿಸಿರುತ್ತೇವೆ. ನಮ್ಮೆಲ್ಲರ ಊರ್ಧ್ವಮೂಲವಾದ ಪರಮಾತ್ಮನ ಸ್ಮರಣೆಯಲ್ಲಿರುವದನ್ನು ಬಿಟ್ಟು ಪಶ್ಚಿಮದ ಕಡೆಗೇ ದೃಷ್ಟಿಯ ಪ್ರಸಾರವನ್ನು ಮಾಡುತ್ತಿದ್ದೇವೆ. ಇದರಿಂದಲೇ ನಾವೆಲ್ಲರೂ ಈ ಸಂಸಾರವೃಕ್ಷದ ಕೆಳಕ್ಕಿಳಿದಿರುವ ಕೊಂಬೆಗಳ ಕಡೆಗೇ ನೋಡುತ್ತಾ ಅಧೋಗತಿಯನ್ನು ಪಡೆದಿರುತ್ತೇವೆ. ಪಶ್ಚಿಮದೇಶದವರಿಗೇನೂ ಅಧ್ಯಾತ್ಮವಿದ್ಯೆಯ ಕಿರಣಗಳು ತಲುಪದೆ ಇಲ್ಲ. ಮಹಾತ್ಮನಾದ ಏಸುಕ್ರಿಸ್ತನು ಮಾಡಿದ ವಿಶ್ವಪ್ರೇಮದ ಭಾವನೆಯನ್ನು ಅವರು ಕಡೆಗಣಿಸಿರುತ್ತಾರೆ ; ಈಶ್ವರಭಕ್ತಿಯೇ ಎಲ್ಲರನ್ನೂ ಉತ್ಕೃಷ್ಟಗತಿಗೇರಿಸುವದೆಂದು ಆತನು ಸಾರಿಸಾರಿ ಹೇಳಿದ ಉಪದೇಶವನ್ನು ಲೆಕ್ಕಿಸದೆ ಇರುತ್ತಾರೆ. ಬೈಬಲ್‌ಗ್ರಂಥಕ್ಕೆ ಆ ದೇಶದಲ್ಲಿ ಒಂದಿಷ್ಟೂ ಗೌರವವಿಲ್ಲದೆ ಹೋಗಿರುತ್ತದೆ.

ಈ ಸಂಸಾರವೃಕ್ಷಕ್ಕೆ ಬಗೆಬಗೆಯ ಕರ್ಮಗಳಿಂದಾಗಿರುವ ಬಗೆಬಗೆಯ ಯೋನಿಗಳೇ ಕೆಳಕ್ಕಿಳಿದಿರುವ ಕೊಂಬೆಗಳು. ಧರ್ಮಾಧರ್ಮಗಳ ವಿವೇಚನೆಯನ್ನು ಮಾಡಿ ಅವುಗಳ ಫಲವನ್ನು ತಿಳಿಸಿ ಈ ಸಂಸಾರವೃಕ್ಷವನ್ನು ಕಾಪಾಡಿಕೊಂಡುಬಂದಿರುವದರಿಂದ ಛಂದಸ್ಸುಗಳೇ, ವೇದಗಳೇ, ಇದಕ್ಕೆ ಎಲೆಗಳು. ಎಲೆಗಳು ಮರವನ್ನು ಕಾಪಾಡುವಂತೆ ಕರ್ಮಬೋಧಕವಾದ ವೇದಗಳು ಈ ಸಂಸಾರವೃಕ್ಷಕ್ಕೆ ರಕ್ಷಕವಾಗಿರುತ್ತವೆ. ವೇದವನ್ನು ತಿರಸ್ಕರಿಸಿದವರಿಗೆ ಎಲೆ ಉದುರಿದ ಮೋಟುಮರದಂತೆ ತೀರಕೆಳಗಿನ ಗತಿಯೇ ಫಲವಾಗುವದು. ಇಂಥ ಅಶ್ವತ್ಥವಿದು. ಅಶ್ವತ್ಥವೆಂದರೆ `ನ ಶ್ವೋಽಪಿ ಸ್ಥಾತಾ' ನಾಳೆಕೂಡ ನಿಲ್ಲತಕ್ಕದ್ದಲ್ಲ ಎಂದರ್ಥ; ಈ ಸಂಸಾರದಲ್ಲಿ ಯಾವದೊಂದೂ ನಿತ್ಯವಲ್ಲ ಎಂಬ ಭಾವನೆಯು ನಮಗೆಲ್ಲರಿಗೂ ಬೆನ್ನಂಟಿರುತ್ತದೆ. ಈ ಸಂಸಾರವು ಈಗ ಕಾಣುತ್ತಿರುವಂತೆ ಅನಿತ್ಯವಾದರೂ ಪ್ರವಾಹರೂಪದಿಂದ ಮತ್ತೆ ಮತ್ತೆ ಹುಟ್ಟಿತೋರಿಕೊಂಡು ಅಡಗುತ್ತಿರುವದರಿಂದ ಇದು ಅವ್ಯಯವಾಗಿರುವದು. ತನ್ನ ರೂಪದಿಂದ ದುಃಖವೂ ಅನಿತ್ಯವೂ ಆಗಿರುವ ಇದರ ಸ್ವರೂಪವನ್ನು ಹೀಗೆಯೇ ತಿಳಿದುಕೊಂಡದ್ದರಿಂದ ಯಾವ ಪ್ರಯೋಜನವೂ ಇಲ್ಲ. ಇದನ್ನು ನಿಜವಾಗಿರುವ ರೂಪದಿಂದ ಇದು ಊರ್ಧ್ವಮೂಲವು, ಸರ್ವೋತ್ಕೃಷ್ಟನಾದ ಪರಮಾತ್ಮನಿಂದ ಬಂದಿರತಕ್ಕದ್ದು ಎಂದು ಪರಮೇಶ್ವರನಿಗೆ ಸಂಬಂಧಿಸಿಕೊಂಡು ತಿಳಿದರೆ ಇದು ಸಂಕಟವನ್ನೂ ಅಂಜಿಕೆಯನ್ನು ಊಂಟುಮಾಡುವ ಬದಲು ಸಂತೋಷಕ್ಕೆ ಕಾರಣವಾಗುತ್ತದೆ.

ಈ ಪ್ರಪಂಚಕ್ಕೆ ಪರಮೇಶ್ವರನೇ ತಾಯಿಬೇರು. ಅನಂತೈಶ್ವರ್ಯವುಳ್ಳ ಆತನು ನಮಗೆ ಬೇಕಾದದ್ದನ್ನು ಕೊಡಬಲ್ಲನು. ನಮ್ಮ ಅಲ್ಪತ್ವವನ್ನೂ ಕೀಳುಸ್ಥಿತಿಯನ್ನೂ ನೆನೆನೆನೆದು ದುಃಖಪಡುವದರ ಬದಲಾಗಿ ನಾವು ಸರ್ವಜ್ಞನೂ ಸರ್ವಶಕ್ತನೂ ಆಗಿರುವ ಆ ಪರಮೇಶ್ವರನಿಂದ ಬಂದಿರುತ್ತೇವೆ; ನಮಗೂ ಆತನಿಗೂ ಈಗಲೂ ಸಂಬಂಧವು ಕಡಿದುಹೋಗಿಲ್ಲ ಎಂಬ ಉತ್ತಮಭಾವನೆಯನ್ನು ಮನಸ್ಸಿನಲ್ಲಿ ಹೊರಳಾಡಿಸಿಕೊಳ್ಳಬೇಕು. ಈ ವೇದಾರ್ಥವನ್ನು ನಾವು ಮನಸ್ಸಿಗೆ ತಂದುಕೊಂಡಂತೆಲ್ಲ ನಮ್ಮ ನಿರಾಶೆಯ ಭಾವವು ಉಡುಗಿಹೋಗುವದು, ಉತ್ಸಾಹವುಂಟಾಗುವದು; `ನಾನ್ಯಾಕೆ ಪರದೇಶಿ, ನಾನ್ಯಾಕೆ ಬಡವನ್ನೆ, ನೀನಿರುವ ತನಕ ಹರಿಯೆ' ಎಂಬ ಆಶಾದಾಯಕವಾದ ಗಾನವನ್ನು ಹಾಡುವ ಹುರುಪು ನಮಗೆ ಬಂದು ಸೇರುವದು.

ಈ ಶ್ಲೋಕದಲ್ಲಿ ವೇದಾರ್ಥದ ರಹಸ್ಯವೆಲ್ಲ ಸಂಗ್ರಹವಾಗಿ ಉಕ್ತವಾಗಿರುತ್ತದೆ. ಕನ್ನಡ ಪದ್ಯಗ್ರಂಥಗಳಲ್ಲಿ `ಸಂಧಿಸೂಚನೆ' ಇರುವಂತೆ ಇದು ಈ ಅಧ್ಯಾಯಕ್ಕೆ ಸೂತ್ರಪ್ರಾಯವಾಗಿರುತ್ತದೆ. ಮುಂದೆ ಇದರ ವೃತ್ತಿಸ್ಥಾನೀಯವಾದ ಶ್ಲೋಕಗಳು ಬರುವವು. ಭಗದ್ಗೀತೆಯು ವೃತ್ತಾಂತಪ್ರತಿಕೆಗಳಂತೆ ಒಮ್ಮೆ ಓದಿ ಬಿಸಾಡುವ ಲೇಖನವಲ್ಲ. ಇದನ್ನು ಮತ್ತೆ ಮತ್ತೆ ಮನನಮಾಡುತ್ತಿರಬೇಕು. ಭೀತಿಶಂಕೆಯಾಗಲಿ ಜ್ವರಾದಿರೋಗಗಳಾಗಲಿ ಇರುವವರು ಯಂತ್ರವನ್ನು ಕಟ್ಟಿಕೊಂಡು ಅದರ ಬಲದಿಂದ ಅಭಯವನ್ನೂ ಆರೋಗ್ಯವನ್ನೂ ತಂದುಕೊಳ್ಳುವಂತೆ ನಾವು ಈ ಶ್ಲೋಕವನ್ನು ಯಂತ್ರದಲ್ಲಿ ಬರೆದು ನಮ್ಮ ಮನಸ್ಸಿಗೆ ಕಟ್ಟಿಕೊಳ್ಳಬೇಕು. ಇದರ ಅರ್ಥವನ್ನೂ ನಮ್ಮ ಜೀವನದ ಸೂತ್ರವಾಗಿ ಮಾಡಿಕೊಳ್ಳಬೇಕು. ನಾವೆಲ್ಲರೂ ಪರಮಾತ್ಮನಿಂದ ಬಂದಿದೇವೆ; ನಮ್ಮ ವ್ಯವಹಾರವೃಕ್ಷದ ಬೇರು ಪರಮಾತ್ಮನೇ, ನಾವು ಮುಟ್ಟಬೇಕಾದದ್ದೂ ಪರಮಾತ್ಮನನ್ನೇ - ಎಂಬೀ ಅರ್ಥವನ್ನು ಮನಸ್ಸಿನಲ್ಲಿ ಹೊರಳಾಡಿಸುತ್ತಿರಬೇಕು.

ಭಗದ್ಗೀತೆಯ ಏಳುನೂರು ಶ್ಲೋಕಗಳ ಸಾರವೇ ಇದು ಎಂದು ಭಾವಿಸಿರಿ. ಅಷ್ಟೇಕೆ, ನಮ್ಮ ಅಧ್ಯಾತ್ಮವಾಙ್ಮಯಕ್ಕೆಲ್ಲ ಸಾರವಿದು ಎಂದರೂ ಸಲ್ಲುತ್ತದೆ. ಇದನ್ನು ನೀವು ಎಷ್ಟೆಷ್ಟು ಮನನಮಾಡಿದರೆ ನಿಮಗೆ ಅಷ್ಟಷ್ಟು ಆಧ್ಯಾತ್ಮಿಕ ಶಕ್ತಿಯು ಕೂಡಿಕೊಳ್ಳುತ್ತದೆ, ಜೀವನವ್ಯವಹಾರವು ಸುಪಥವಾಗುತ್ತದೆ, ಆಶಾದಾಯಕವಾಗುತ್ತದೆ, ಆನಂದದಾಯಕವಾಗುತ್ತದೆ. ಇದು ಹೇಗೆಂಬುದನ್ನು ಮುಂದಿನ ವಾರದ ವಿಚಾರಕ್ಕೆ ಇಟ್ಟುಕೊಳ್ಳೋಣ.



# ೧೩೮. ಸಂಸಾರವೃಕ್ಷ 15 - (2-4)

**(7.8.49)**

ಹದಿನೈದನೆಯ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿ ಸಂಸಾರವೃಕ್ಷವು ಪರಮಾತ್ಮನೆಂಬ ಮೂಲದಿಂದ ಬೆಳೆದುಕೊಂಡು ಬಂದಿರುತ್ತದೆ, ಇದಕ್ಕೆ ವೇದಗಳು ಪರ್ಣಗಳಂತಿವೆ ಎಂದಿತ್ತು. ಅದಕ್ಕೆ ಸಂಸಾರವೃಕ್ಷವು ಪರಮಾತ್ಮನಿಂದ ಬಂದಿದೆ ಎಂಬುದರಲ್ಲಿ ಮಹಾತಾತ್ಪರ್ಯವಿದೆಯೇ ಹೊರತು ಸಂಸಾರವಿದೆ ಎಂಬುದನ್ನು ತಿಳಿಸುವದರಲ್ಲಿಲ್ಲ. ಒಳ್ಳೆಯ ಭಾವನೆಯಾಗಲಿ ಕೆಟ್ಟಭಾವನೆಯಾಗಲಿ ಕರ್ಮಾನುಗುಣವಾಗಿ ನಮ್ಮ ಅಂತಃಕರಣದಲ್ಲಿ ಸಹಜವಾಗಿ ತೋರಿಕೊಳ್ಳುತ್ತಿರುತ್ತವೆ. ಭಾವನೆಯನ್ನು ತಡೆಗಟ್ಟುವದು ನಮ್ಮ ಕೆಲಸವಲ್ಲ. ಆದರೆ ಬಂದ ಕೆಟ್ಟ ಭಾವನೆಯನ್ನು ಅನಾದರಮಾಡಿ ಒಳ್ಳೆಯ ಭಾವನೆಯನ್ನು ಬಲಪಡಿಸಿಕೊಳ್ಳುವದು ನಮ್ಮ ಕರ್ತವ್ಯವು; ಕೆಟ್ಟ ಭಾವನೆಗಳನ್ನು ಕೂಡ ಕಾಲಕ್ರಮದಿಂದ ಒಳ್ಳೆಯವನ್ನಾಗಿ ಮಾರ್ಪಡಿಸಿಕೊಳ್ಳಬಹುದು, ಈಸೋಪನ ಕಥೆಗಳಲ್ಲಿ ಎರಡು ಬಿಂದಿಗೆಗಳ ಕಥೆಯೊಂದಿದೆ. ಅವುಗಳಲ್ಲಿ ಒಂದು ಬಿಂದಿಗೆಯು "ಅಣ್ಣ, ನೋಡಿದೆಯ, ನಾವು ತುಂಬಿಕೊಂಡು ಬಂದಂತೆಲ್ಲ ಮತ್ತೆ ಮತ್ತೆ ಬರಿದಾಗುತ್ತಿರುವೆವಲ್ಲ!" ಎಂದು ಕೊರಗಿತು. ಆದರೆ ಇನ್ನೊಂದು `ಹಾಗಲ್ಲ, ತಮ್ಮ ನೋಡು! ನಾವು ಬರಿದಾದಂತೆಲ್ಲ ಮತ್ತೆ ಮತ್ತೆ ಬಾವಿಗೆ ಇಳಿದು ತುಂಬಿಕೊಂಡೇ ಬರುತ್ತಿದೇವಲ್ಲ!' ಎಂದು ಹರ್ಷದ ಭಾವವನ್ನು ಸೂಚಿಸಿತು. ಈ ಕಥೆಯಿಂದ ನಾವೆಲ್ಲರೂ ಕಲಿಯತಕ್ಕ ಪಾಠವಿದೆ. ನಾವು ಪರಮಾತ್ಮನಿಂದ ಈ ಹೇಸಿಕೆಯ ಸಂಸಾರಕ್ಕೆ ಇಳಿದಿದೇವಲ್ಲ!- ಎಂದು ವ್ಯಸನದಿಂದ ಕುಗ್ಗುವದರಲ್ಲಿ ಲಾಭವಿಲ್ಲ; ನಾವು ಎಷ್ಟೇ ಕೆಳಕ್ಕೆ ಬಂದಿರಲಿ, `ಎಲ್ಲರೂ ಆನಂದರೂಪನಾದ ಪರಮಾತ್ಮನಿಂದಲೇ ಬಂದಿದ್ದೇವಷ್ಟೆ' ಎಂದು ಹರ್ಷಗೊಳ್ಳಬೇಕು. ವಿಷಾದದ ಭಾವನೆಗಿಂತ ಹರ್ಷಭಾವನೆಯೇ ನಮ್ಮನ್ನು ಉತ್ತಮಗತಿಗೆ ಒಯ್ಯುವದು. ಈ ಸಂಸಾರದ ವೃಕ್ಷವನ್ನು ನೋಡಿದರೆ :-

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ।**

**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬನ್ಧೀನಿ ಮನುಷ್ಯಲೋಕೇ॥** **15-2**

`ಈ ವೃಕ್ಷದ ಕೊಂಬೆಗಳು ಮೇಲಕ್ಕೂ ಕೆಳಕ್ಕೂ ಹರಡಿಕೊಂಡಿವೆ. ಇವು ತ್ರಿಗುಣಗಳಿಂದ ಬೆಳೆದಿವೆ, ವಿಷಯಗಳೆಂಬ ಚಿಗುರುಗಳು ಅಲ್ಲಲ್ಲಿ ಕಾಣಿಸುತ್ತಿವೆ. ಈ ಬೇರುಗಳು ಮನುಷ್ಯಲೋಕದಲ್ಲಿ ಕರ್ಮದಿಂದ ಆಳವಾಗಿ ಬಿಟ್ಟುಕೊಂಡಿರುತ್ತವೆ'. ಈ ವರ್ಣನೆಯಿಂದ ನಾವು ತಿಳಿದುಕೊಳ್ಳತಕ್ಕದ್ದೇನು? ಮನುಷ್ಯನು ಬಗೆಬಗೆಯ ಜೀವಲೋಕಗಳಲ್ಲಿ ನಡುವಿನ

ಲೋಕವನ್ನು ಸೇರಿಕೊಂಡಿರುತ್ತಾನೆ. ಇವನಿಗಿಂತ ಕಡಿಮೆಯಾಗಿ ಎಷ್ಟೋ ಲೋಕಗಳಿವೆ. ಆದರೆ ಸ್ಥಾವರಜಂಗಮಾತ್ಮಕವಾದ ಆ ಯೋನಿಗಳಲ್ಲಿ ಇಂಥ ಕರ್ಮದಿಂದ ಇಂಥ ಫಲವೆಂಬ ನಿಯಮವಿಲ್ಲ. ಪಶ್ವಾದಿಗಳಿಗೆ ಆಹಾರ, ನಿದ್ರೆ, ಭಯ - ಮುಂತಾದವುಗಳು ಮನುಷ್ಯನಂತೆಯೇ ಇರುತ್ತವೆ; ಮನುಷ್ಯನಂತೆಯೇ ಅವು ದೇಹಯಾತ್ರೆಯನ್ನು ಮಾಡುತ್ತಿರುವವು. ಆದರೆ ಅವಕ್ಕೆ ಪೂರ್ವಾಪರಜ್ಞಾನವಿರುವದಿಲ್ಲ; ಶಾಸ್ತ್ರೀಯವಾದ ಕರ್ಮಗಳನ್ನು ಆಚರಿಸಿ ಉತ್ತಮವಾದ ಅಥವಾ ಅಧಮವಾದ ಫಲವನ್ನು ಪಡೆದುಕೊಳ್ಳಲಾರವು. ಮೇವು ಕಂಡಲ್ಲಿ ಬಾಯಿಹಾಕುವದು, ಯಾರಾದರೂ ಕಲ್ಲೆಸೆದರೆ ಅತ್ತ ಓಡುವದು-ಹೀಗೆ ಸಹಜವಾದ ಪ್ರವೃತ್ತಿನಿವೃತ್ತಿಗಳಲ್ಲದೆ ಮನುಷ್ಯನಂತೆ ವಿವೇಕಪುರಃಸ್ಸರವಾದ ಕರ್ಮಗಳು ಅವಕ್ಕೆ ಎಂದಿಗೂ ಲಭಿಸುವದಿಲ್ಲ. ಇನ್ನು ಸ್ಥಾವರಪ್ರಾಣಿಗಳಂತೂ ಪಡಬಾರದ ಕಷ್ಟವನ್ನು ಪಡುತ್ತಿರುವವು. ಜನರು ಅವನ್ನು ಹೊಡೆಯುವದು, ಬಡಿಯುವದು, ಕತ್ತರಿಸುವದು, ಸುಡುವದು-ಮುಂತಾದ ಬಗೆಗಳಿಂದ ಹಿಂಸಿಸಿದರೂ ಅವು ಯಾವ ಪ್ರತಿಕ್ರಿಯೆಯೂ ಇಲ್ಲದೆ ನಿಂತಲ್ಲಿ ನಿಂತಿರುವವು. ಹೇಗೆ ಮನುಷ್ಯನಿಗಿಂತ ಕೆಳಗಿನ ಲೋಕದಲ್ಲಿ ದುಃಖಭೋಗವು ಪ್ರಚುರವಾಗಿರುವದೋ ಹಾಗೆ ಮನುಷ್ಯನಿಗಿಂತ ಮೇಲಿನ ಲೋಕಗಳಲ್ಲಿ ಸುಖಭೋಗವು ಪ್ರಚುರವಾಗಿರುತ್ತದೆ. ಮನುಷ್ಯರು ವಿಹಿತಪ್ರತಿಷಿದ್ಧಕರ್ಮಗಳನ್ನು ಮಾಡುವದರಿಂದ ಈ ಮೇಲುಕೀಳಂತಸ್ತಿನ ಲೋಕಗಳನ್ನು ಪಡೆಯುತ್ತಾರೆ. ಹೀಗೆ ಮನುಷ್ಯರು ಮಾತ್ರ ಕರ್ಮಶಾಸ್ತ್ರಕ್ಕೆ ಅಧಿಕಾರಿಗಳಾಗಿರುವದರಿಂದ `ಕರ್ಮಾನುಬಂಧೀನಿ ಮನುಷ್ಯಲೋಕೇ' ಎಂದಿದೆ. ಸಂಸಾರವೃಕ್ಷವು ತಾನು ತೋರುವ ವ್ಯಾಕೃತರೂಪದಿಂದ ಕರ್ತೃತ್ವ ಭೋಕ್ತೃತ್ವದ ವೈಚಿತ್ರ್ಯವುಳ್ಳದ್ದೇ ಹೊರತು ಇದರಲ್ಲಿ ಪರಮಪುರುಷಾರ್ಥವೇನೂ ಇರುವದಿಲ್ಲ - ಎಂಬ ವೈರಾಗ್ಯವುಂಟಾಗುವದಕ್ಕಾಗಿ ಈ ವರ್ಣನೆಯು ಬಂದಿರುತ್ತದೆ.

ಕೀಳು ಪ್ರಾಣಿಗಳ ಲೋಕವನ್ನು ವಿವರಿಸಿರುವದು ಎಚ್ಚರಿಕೆಗಾಗಿ; ಪಾಪಕರ್ಮದ ಫಲವು ಹೀಗೆ ಸ್ಥಾವರಾಂತವಾದ ದುಃಖಪ್ರಧಾನವಾದ ಜನ್ಮವನ್ನು ಕೊಡುತ್ತದೆ. ಎಂದು ತಿಳಿಸಿದಂತಾಯಿತು. ಇದರಂತೆ ದೇವಲೋಕವೇ ಮುಂತಾದ ಮೇಲಿನ ಲೋಕಗಳು ಸುಖಪ್ರದವಾಗಿದ್ದರೂ ಅವು ಯಾವವೂ ನಿತ್ಯವಲ್ಲ. ಆದರೆ ಮನುಷ್ಯನೊಬ್ಬನಿಗೆ ಮಾತ್ರ ಕರ್ಮಜ್ಞಾನಗಳಲ್ಲಿ ಮುಖ್ಯವಾದ ಅಧಿಕಾರವಿರುತ್ತದೆ. ಕೆಟ್ಟ ಕರ್ಮದಿಂದ ಹಾಳಾಗಬಹುದು, ಒಳ್ಳೆಯ ಕರ್ಮದಿಂದ ಬದುಕಬಹುದು. ಇದು ಮನುಷ್ಯನಿಗೆ ಮಾತ್ರ ಇದೆ ಎಂಬುದನ್ನು `ಮನುಷ್ಯಲೋಕೇ' ಎಂಬ ವಿಶೇಷಣವು ತಿಳಿಸುತ್ತದೆ.

ಈ ವೃಕ್ಷವನ್ನು ಇನ್ನಷ್ಟು ಲಕ್ಷ್ಯವಿಟ್ಟು ನೋಡಿರಿ:

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾನ್ತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**

ಈ ಪ್ರಪಂಚಕ್ಕೆ ವ್ಯವಸ್ಥಿತವಾದ ಯಾವ ಒಂದು ರೂಪವೂ ಇರುವದಿಲ್ಲ. ವಿದ್ಯುದ್ದೀಪದ ಸಹಾಯದಿಂದ ಅಕ್ಷರಗಳನ್ನು ರೂಪಿಸಿ Sandal Soap (ಗಂಧದ ಸಾಬೂನು) ಎಂದು ತೋರಿಸುವ ಪ್ರಕಟನೆಯನ್ನು ಬೆಂಗಳೂರಿನಲ್ಲಿ ನೀವು ನೋಡಿರಬಹುದು. ಅದರಲ್ಲಿ ವಸ್ತುವಿನ ಹೆಸರಿನ ಅಕ್ಷರಗಳು ಒಂದೊಂದಾಗಿ ಮೂಡುತ್ತಾ ಹೋಗುವವು; ಮತ್ತೆ ಒಂದೊಂದಾಗಿ ಅಳಿಸುತ್ತಾ ಹೋಗುವವು! ಒಂದು ವರ್ಣವಿದ್ದಾಗ ಮತ್ತೊಂದಿರುವದೇ ಇಲ್ಲ! ಬಲರಾಮನ ಹೆಂಡತಿಯಾದ ರೇವತೀದೇವಿಯ ಕಥೆಯನ್ನು ನೀವು ಕೇಳಿರಬಹುದು. ಆಕೆಯ ತಂದೆಯು ಮಗಳಿಗೆ ಗಂಡನು ಯಾರೆಂಬುದನ್ನು ಬ್ರಹ್ಮನಿಂದ ತಿಳಿದುಕೊಂಡು ಬರುವದಕ್ಕೆ ಹೋಗಿಬರುವದರೊಳಗಾಗಿ ಒಂದು ಯುಗವೇ ಕಳೆದುಹೋಗಿತ್ತಂತೆ! ಹೀಗೆ ಪ್ರಪಂಚವು ಯಾವಾಗಲೂ ಬದಲಾಯಿಸುತ್ತಲೇ ಇರುತ್ತದೆ. ಈಗ ಇದ್ದದ್ದು ಇನ್ನೊಂದು ಘಳಿಗೆಗೆ ಇರುವದಿಲ್ಲ.

ಇದಕ್ಕೆ ಅಂತವಿಲ್ಲ, ಆದಿಯಲ್ಲ. ಕೊನೆಗೆ ಇದಕ್ಕೆ ಯಾವ ರೂಪವು ಬರಬಹುದೆಂದು ಊಹಿಸುವದಕ್ಕೂ ಆಗುವಂತಿರುವದಿಲ್ಲ: ಏಕೆಂದರೆ ಇದು ಹೊಸಹೊಸ ರೂಪಗಳನ್ನು ತಳೆಯುತ್ತಲೇ ಇರುತ್ತದೆ. ಮೊಟ್ಟಮೊದಲು ಇದು ಹೇಗಿತ್ತು ಎಂಬುದನ್ನು ಊಹಿಸುವದಕ್ಕಾಗುವದಿಲ್ಲ; ಏಕೆಂದರೆ ಅದಕ್ಕಿಂತ ಹಿಂದೆಯೂ ಈ ಸಂಸಾರವು ಇದ್ದೇ ಇತ್ತೆಂದು ನಮಗೆ ತೋರುತ್ತಿರುತ್ತದೆ. ಇಂಥದ್ದು, ಈ ಸಂಸಾರ! ಸಾಮಾನ್ಯದೃಷ್ಟಿಯಿಂದ ನೋಡಿದರೆ ಇದರಿಂದ ಬಿಡಿಸಿಕೊಳ್ಳುವದು ನಮಗೆ ಸಾಧ್ಯವೇ ಇಲ್ಲವೆಂದು ಹೇಳಬೇಕಾಗಿರುತ್ತದೆ. ಹೀಗಿದ್ದರೂ ಇಷ್ಟು ಬಲವಾಗಿ ಬೇರುಬಿಟ್ಟುಕೊಂಡಿದ್ದರೂ ನಮ್ಮ ಅಭಿವೃದ್ಧಿಗೆ ಇದು ಅಡ್ಡಲಾಗಿ ನಿಂತಿರುವಂತೆ ತೋರುತ್ತಿದ್ದರೂ ಇಂಥ ಮಹಾವೃಕ್ಷವನ್ನು ಕೂಡ ಕಡಿದುಹಾಕಬಹುದು.

**ಅಶ್ವತ್ಥಮೇನಂ ಸುವಿರೂಢಮೂಲ-**
**ಮಸಙ್ಗಶಸ್ತ್ರೇಣ ದೃಢೇನ ಛಿತ್ತ್ವಾ ॥ 15-3**

**ತತಃ ಪದಂ ತತ್ಪರಿಮಾರ್ಗಿತವ್ಯಂ**
**ಯಸ್ಮಿನ್ ಗತಾ ನ ನಿವರ್ತನ್ತಿ ಭೂಯಃ ।**

**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ 15-4**

ಸಂಸಾರವು ದುಃಖಮಯವಾಗಿ ತೋರುತ್ತಿದೆ. ನಿಜ. ಆದರೂ ಇದರಲ್ಲಿಯೇ ಸುಖವನ್ನು ಕಂಡುಕೊಳ್ಳಬಹುದು. ದೊಡ್ಡದೊಡ್ಡ ದೇವಸ್ಥಾನಗಳ ಮಾಳಿಗೆಗೆ ತೂಕವಾಗಿರುವ ಚಪ್ಪಡಿಕಲ್ಲುಗಳನ್ನು ಹೇಗೆ ಏರಿಸಿದರೆಂದು ನಮಗೆ ತಿಳಿಯದೇ ಆಶ್ಚರ್ಯಪಡುತ್ತಿರುವೆವಷ್ಟೇ;

ಆದರೂ ಉಪಾಯದಿಂದ ಶಿಲ್ಪಿಗಳು ಅವುಗಳನ್ನು ಅಷ್ಟು ಮೇಲಕ್ಕೆ ಏರಿಸಿದ್ದಾರೆ. ಹೀಗೆಯೇ ನಮಗೆ ಈ ಸಂಸಾರವೃಕ್ಷವನ್ನು ಕಡಿಯುವದು ಕಡುಕಷ್ಟವಾಗಿ ತೋರುತ್ತಿದ್ದರೂ ಶಾಸ್ತ್ರದಲ್ಲಿ ಅದಕ್ಕೂ ಒಂದು ಉತ್ತಮ ಉಪಾಯವನ್ನು ತಿಳಿಸಿಕೊಟ್ಟಿರುತ್ತದೆ.

ಈ ಪ್ರಪಂಚದಲ್ಲಿ ಒಂದು ವಿಚಿತ್ರಸ್ವಭಾವವಿದೆ. ಇದರಲ್ಲಿ ಯಾರು ಯಾರು ಆಸಕ್ತಿಯನ್ನು ತೋರಿಸುವರೋ ಅವರಿಗೆ ಇದು ಕಷ್ಟವನ್ನು ಕೊಡುವದಕ್ಕೆ ಪ್ರಾರಂಭಿಸುತ್ತದೆ. ಪಂಚತಂತ್ರದಲ್ಲಿ ಒಂದು ಕಥೆಯಿದೆ- ಅಲ್ಲಿ ಸಿದ್ಧವರ್ತಿಯನ್ನು ಹುಡುಕಿಕೊಂಡು ಒಬ್ಬನು ಬಲುದೂರ ಹೋಗಿ ಕೊನೆಗೆ ಒಂದು ಪರ್ವತದ ಗುಹೆಯನ್ನು ಹೊಗುತ್ತಾನೆ. ಅಲ್ಲಿ ಒಬ್ಬ ಪುರುಷನ ತಲೆಯಮೇಲೆ ಒಂದು ಚಕ್ರವು ಗಿರ್ರೆಂದು ತಿರುಗುತ್ತಾ ಇರುವದು ಕಾಣಿಸುತ್ತದೆ. ಸಿದ್ಧವರ್ತಿಯ ಅನ್ವೇಷಕನು ಆ ಪುರುಷನನ್ನು ಕಂಡು ಅನುಕಂಪೆಯಿಂದ `ಅಪ್ಪ, ಇದೇನು'? ಈ ಚಕ್ರವು ನಿನ್ನ ತಲೆಯಮೇಲಕ್ಕೆ ಹೇಗೆ ಬಂದಿತು?' ಎಂದು ಕೇಳಿದ್ದೇ ತಡ, ಅದು ಈ ಪ್ರಶ್ನೆಯನ್ನು ಹಾಕಿದವನ ತಲೆಯ ಮೇಲೆ ಹಾರಿ ಬಂದು ಕುಳಿತುಕೊಂಡು ಅಲ್ಲಿ ಗಿರ್ರನೆ ತಿರುಗುವದಕ್ಕೆ ಮೊದಲಾಗುತ್ತದೆ! ಆಗ ಆ ಚಕ್ರವು ಹೀಗೆಯೇ ಒಬ್ಬರ ತಲೆಯ ಮೇಲಿಂದ ಒಬ್ಬರ ತಲೆಯ ಮೇಲಕ್ಕೆ ಹಾರಿಬಂದು ಕುಳಿತುಕೊಳ್ಳುವ ಸ್ವಭಾವದ್ದೆಂದೂ ಯಾರುಯಾರು ಕುತೂಹಲದಿಂದ ಇದೇನೆಂದು ಕೇಳುವರೋ ಅವರ ತಲೆಯ ಮೇಲಕ್ಕೇ ಹಾರುವ ಸ್ವಭಾವವು ಅದರಲ್ಲಿತ್ತೆಂದೂ ತಿಳಿಯಬಂದಿತು. ಇದರಂತೆ ಈ ಪ್ರಪಂಚದಲ್ಲಿ ಯಾರು ಯಾರು ಆಸಕ್ತಿಯನ್ನು ತೋರಿಸುವರೋ ಅವರವರಿಗೆ ಇದು ದಾಟಲಶಕ್ಯವಾದ ಅಡಚಣೆಯಾಗಿಬಿಡುತ್ತದೆ. ಆದರೆ ಇದರ ವಿಷಯದಲ್ಲಿ ಅನಾಸ್ಥೆಯಿಂದ ಯಾರು ಇದರ ಮೂಲವನ್ನು ಹುಡುಕುವದಕ್ಕೆ ಹೊರಡುವರೋ ಅವರ ಮೇಲೆ ಇದರ ಆಟವು ಏನೂ ನಡೆಯುವದಿಲ್ಲ. ಅಸಂಗಶಸ್ತ್ರದಿಂದಲೇ ಈ ಸಂಸಾರವೃಕ್ಷವನ್ನು ಕಡಿದುಹಾಕಿ ಪರಮಪದವಿಯಾದ ಮೋಕ್ಷಸ್ಥಾನವನ್ನು ಹುಡುಕಬೇಕು.

ಈ ಸಂಸಾರದಲ್ಲಿ ಮನುಷ್ಯನು ಬಯಸುವದು ವಿಶ್ರಾಂತಿ. ಆದರೆ ಆಶೆಯಿಂದ ತೋಟಮಾಡುವದಕ್ಕೆ ಹೊರಟರೆ ವಿಶ್ರಾಂತಿಗೆ ಬದಲು ಕ್ಲೇಶಗಳೇ ಧುಮುಕುವಂತೆ ಮನುಷ್ಯನು ವಿಶ್ರಾಂತಿಗೆಂದು ಪ್ರಯತ್ನಿಸಿದರೆ ಅನಿರೀಕ್ಷಿತವಾದ ಕಷ್ಟಪರಂಪರೆಗಳು ಅವನನ್ನು ಎದುರಿಸುತ್ತವೆ. ಕಷ್ಟಗಳೇ ಇಲ್ಲದಂತೆ ಮಾಡಿಕೊಳ್ಳುವದು ಸಾಧ್ಯವಿಲ್ಲ; ಆದರೆ ಅಸಂಗಶಸ್ತ್ರವನ್ನು ಧರಿಸಿ ಪರಮಾತ್ಮನ ಕಡೆಗೆ ತಿರುಗಿದರಾಯಿತು. ಆ ಕಷ್ಟಗಳನ್ನು ಸುಲಭವಾಗಿ ದಾಟಿಬಿಡಬಹುದು. ಆ ಪರಮಾತ್ಮನನ್ನು ಹುಡುಕುವದಾದರೂ ಕಷ್ಟವಲ್ಲವೆ? - ಎಂದು ಕೇಳುವ ಹಾಗಿಲ್ಲ; ಏಕೆಂದರೆ ಪರಮಾತ್ಮನು ನಮ್ಮಗಳ ಆತ್ಮನೇ ಆಗಿರುವದರಿಂದ ಅವನು ನಮಗೆ ಅತ್ಯಂತ ಸಮೀಪದಲ್ಲಿರುತ್ತಾನೆ.

ಒಬ್ಬನಿಗೆ ಒಂದು ಕನಸಾಯಿತು. ಅದರಲ್ಲಿ ಎಲ್ಲರೂ ಏನೋ ಹಾಡುವದಕ್ಕೆ ಪ್ರಯತ್ನಮಾಡುತ್ತಿದ್ದರು. ಆದರೆ ಯಾರ ರಾಗವೂ ಇಂಪಾಗಲಿಲ್ಲ. ಅನೇಕರು ವಾದ್ಯಗಳನ್ನು ಬಾರಿಸುತ್ತಿದ್ದರೂ ಅವು ಯಾವವೂ ಕಿವಿಗೆ ಸುಖಪ್ರದವಾಗಿರಲಿಲ್ಲ. ಆದರೆ ಇಷ್ಟರಲ್ಲಿ ಒಬ್ಬನು ಒಂದು ಶ್ರುತಿಯನ್ನಿಟ್ಟುಕೊಂಡು ಹಾಡಿದನು ; ಎಲ್ಲರೂ ಅವನನ್ನು ಅನುಸರಿಸಿದರು. ರಾಗತಾಳಗಳು ಮೇಳೈಸಿದವು ; ಅತ್ಯಂತವಾಗಿ ಕರ್ಣಾನಂದವಾದ ಹೊಂದಿಕೆಯ ಸಂಗೀತವು ಏರ್ಪಟ್ಟಿತು. ಹೀಗೆಯೇ `ಈ ಪ್ರಪಂಚದಲ್ಲಿ ಜನರಿಗೆ ಸುಖವಾಗಲಿ, ನಮಗೂ ಸುಖವಾಗಲಿ' ಎಂದೇ ಅನೇಕರು ಪ್ರಯತ್ನಿಸುತ್ತಿರುವರು ; ಆದರೆ ಒಬ್ಬೊಬ್ಬರ ಪ್ರಯತ್ನವು ಒಂದೊಂದು ಕಡೆಗೆ ಎಳೆಯುತ್ತಿರುವದು. ಒಬ್ಬೊಬ್ಬರೂ ಒಂದೊಂದು ರಾಗದಲ್ಲಿ, ಒಂದೊಂದು ಬೇರೆಬೇರೆಯ ಎತ್ತರದಲ್ಲಿ ಹಾಡುತ್ತಿರುವಂತೆ, ಕಾಣುತ್ತಿರುವದರಿಂದ ಅವರ ಪ್ರಯತ್ನಗಳಲ್ಲಿ ಹೊಂದಿಕೆಯಿಲ್ಲದೆ ಇದೆ. ಸಮಾಜದ ಸುಧಾರಣೆಗೆ, ರಾಷ್ಟ್ರಗಳ ಆಳ್ವಿಕೆಗೆ, ಜನರ ಜೀವನವನ್ನು ಸುಖಮಯವಾಗಿ ಮಾಡುವದಕ್ಕೆ, ವಿದ್ಯಾಭ್ಯಾಸಕ್ರಮವನ್ನು ಮಾರ್ಪಡಿಸುವದಕ್ಕೆ - ಮುಂತಾಗಿ ಮಾಡುವ ಪ್ರಯತ್ನಗಳೆಲ್ಲ ಶ್ಲಾಘ್ಯವೇ ಸರಿ ; ಆದರೆ ಈ ಪ್ರಯತ್ನಗಳಿಗೆ ಹೊಂದಿಕೆ ಯಾವದೂ ಇರುವಂತೆ ಕಾಣುವದಿಲ್ಲ. ಎಲ್ಲರಿಗೂ ಒಂದೇ ಶ್ರುತಿಯ ಹಾಡುಗಾರಿಕೆ ಬೇಕು ; ರಾಗಕ್ಕೆ ತಕ್ಕ ತಾಳವು ಬೇಕು. ಆಗ ಇಡಿಯ ಭೂಲೋಕವೇ ಆನಂದದ ಸಂಗೀತಶಾಲೆಯಾಗುವದು. ಈ ಪ್ರಪಂಚನಾಟಕಕ್ಕೆಲ್ಲ ಒಬ್ಬ ಸೂತ್ರಧಾರನಿರುತ್ತಾನೆ. ಆತನು ನಮಗೆ ಎತ್ತಿಕೊಡುವ ಶ್ರುತಿಯನ್ನು ನಾವು ಅನುಸರಿಸಬೇಕು. ಅಸಂಗಶಸ್ತ್ರವನ್ನು ಹಿಡಿಯಬೇಕು ; ಆ ಶ್ರುತಿಯನ್ನು ಎತ್ತಿಕೊಡುವವನ ಕಡೆಗೇ ನಮ್ಮ ಲಕ್ಷ್ಯವೆಲ್ಲ ಹೋಗಬೇಕು. ಹಾಗಾದರೆ ನಮ್ಮ ಪ್ರಯತ್ನವು ಸುಖವಾಗಿ ಸಾಗುವದು.

ಪರಮಾತ್ಮನನ್ನೇ ಹುಡುಕುತ್ತಾ ಹೊರಟಾಗ ನಮ್ಮನ್ನು ಹೊರಗಿನ ವಿಷಯಗಳು ತಮ್ಮ ಕಡೆಗೆ ಸೆಳೆಯುತ್ತವೆ. ಇದೊಂದು ಸ್ವಾಭಾವಿಕನಿಯಮ. ಆದರೆ ನಾವು ಅಷ್ಟುಮಾತ್ರದಿಂದ ಎದೆಗೆಡಬಾರದು. ಒಬ್ಬನು ಭಾವಿ ತೋಡುತ್ತಿದ್ದನು ; ಕೆಲವು ದಿನಗಳು ತೋಡುತ್ತಿರುವಲ್ಲಿ ಉಪ್ಪುನೀರು ಕಾಣಿಸಿಕೊಂಡಿತು. ``ಅಯ್ಯೋ, ನಾನು ಇಷ್ಟುದಿನ ಕಷ್ಟಪಟ್ಟಿದ್ದಕ್ಕೆ ಉಪ್ಪುನೀರಿನ ಜಲವು ಬಿದ್ದಿತಲ್ಲ!" ಎಂದು ಅವನು ಪೇಚಾಡುತ್ತಿರಲು ಒಬ್ಬ ಭೂತತ್ತ್ವಜ್ಞನು ಅವನನ್ನು ಕಂಡು ``ಅಪ್ಪ, ಇದು ಧ್ರುವಜಲವಲ್ಲ, ಇದು ಇಷ್ಟರಲ್ಲಿಯೇ ಬತ್ತಿಹೋಗುತ್ತದೆ. ಆಳವಾಗಿ ತೋಡು !" ಎಂದನು. ಅವನು ಅದರಂತೆಯೇ ಆ ಉಪ್ಪುನೀರನ್ನು ಎತ್ತಿಹಾಕಿ ಮುಂದುಮುಂದಕ್ಕೆ ತೋಡುತ್ತಾಹೋಗಲು ಕೊನೆಗೆ ಆಳವಾದ ಒಂದು ಮಟ್ಟದಲ್ಲಿ ಸಿಹಿನೀರನ್ನು ಕಂಡು ಸಂತೋಷಪಟ್ಟನು. ಇದರಂತೆ ನಾವು ಪರಮಾತ್ಮನ ಅನ್ವೇಷಣೆಗೆ ಹೊರಟಿರುವಾಗ ನಡುವೆ ದಾರಿಯಲ್ಲಿ ನಮಗೆ ವಿಷಯಾನಂದದ ಉಪ್ಪುನೀರು ಕಾಣಿಸಿಕೊಳ್ಳಬಹುದು. ಆದರೆ ನಾವು ಸಾಧುಸಂತರ ಉಪದೇಶವನ್ನು ಅನುಸರಿಸಿ

ಮುಂದುಮುಂದಕ್ಕೆ ಪರಮಾತ್ಮಾನ್ವೇಷಣೆಯನ್ನು ಸಾಗಿಸಬೇಕು. ಸ್ವಲ್ಪಕಾಲದಲ್ಲಿ ವಿಷಯಗಳ ಆಶೆಯು ನಮಗೆ ತಪ್ಪಿಹೋಗುವದು, ಪರಮಾತ್ಮರಸದ ಸವಿಯು ದೊರೆತು ಆನಂದವನ್ನೂ ತೃಪ್ತಿಯನ್ನೂ ಉಂಟುಮಾಡುವದು.

ಈ ಸಂಸಾರದಲ್ಲಿ ಸ್ವಲ್ಪ ಸುಖವೂ ಇದೆ. ಆದರೆ ಅನಿತ್ಯವಾಗಿದೆ, ದುಃಖಮಿಶ್ರಿತವಾಗಿದೆ. ಅಗ್ಗದ ಆಶೆಗೆ ಸೀಮೆಎಣ್ಣೆಯ ವಾಸನೆಯ ಸಕ್ಕರೆಯನ್ನು ಕೊಂಡು ಅದರಿಂದಲೇ ತೃಪ್ತರಾಗುವ ಮೂಢರಂತೆ ನಾವು ವಿಷಯಾನಂದವೇ ನಿಜವಾದ ಆನಂದವೆಂದು ಭ್ರಮಿಸಿ ಮೋಸಹೋಗುತ್ತಿರುವೆವು. ಆದರೆ ಅದರಲ್ಲಿ ಯಾವ ಆಸಕ್ತಿಯನ್ನೂ ತೋರಿಸದೆ ನಿಜವಾದ ಶುದ್ಧಾನಂದಕ್ಕಾಗಿ ಹಾತುವರಿಯುವವರು ವಿಷಯಸುಖಕ್ಕೆ ಎಂದಿಗೂ ಮರುಳಾಗುವದಿಲ್ಲ. ಅವರು ಪರಮಾತ್ಮನೇ ವಿಷಯಾನಂದಕ್ಕೂ ಮೂಲವು, ಮೂಲದಲ್ಲಿ ಆನಂದವು ಶುದ್ಧವಾಗಿದ್ದರೂ ಉಪಾಧಿಗಳ ದೆಸೆಯಿಂದ ಅದಕ್ಕೆ ಅನಿತ್ಯತ್ವವೂ ದುಃಖಮಿಶ್ರಿತತ್ವವೂ ಬಂದಿದೆ - ಎಂಬ ದೊಡ್ಡವರ ಉಪದೇಶವನ್ನು ಮನದಂದು ವಿಶುದ್ಧವಾದ ನಿತ್ಯಾನಂದವು ದೊರಕುವತನಕ ಪ್ರಯತ್ನವನ್ನು ಮುಂದುವರಿಸುತ್ತಲೇ ಇರುವರು. ಆದಿಪುರುಷನಾದ ಆ ಪರಮಾತ್ಮನನ್ನೇ ನಾನು ಶರಣುಹೊಕ್ಕಿರುವೆನು ; ಆತನೇ ನನಗೆ ಹಿತವನ್ನುಂಟುಮಾಡುವನು ಎಂಬ ದೃಢವಾದ ವಿಶ್ವಾಸದಿಂದ ಸಾಧನೆಮಾಡುತ್ತಿರುವವರಿಗೆ ಆತನು ತನ್ನ ನಿತ್ಯಾನಂದದ ಸ್ಥಾನವನ್ನು ಅನುಗ್ರಹಿಸುವನು.



## ೧೪೯. ಭಗವತ್ಪ್ರಾಪ್ತಿಯು ಯಾರಿಗೆ ಆಗುವದು ? 15 - (4-5)

**(14-8-49)**

ಸಂಸಾರವೆಂಬ ವೃಕ್ಷವು ಪರಮಾತ್ಮನೆಂಬ ತಾಯಿಬೇರಿನಿಂದ ಹೊರಟುಬಂದಿರುತ್ತದೆ. ಇದು ಕೆಳಕ್ಕೂ ಮೇಲಕ್ಕೂ ಕರ್ಮಫಲರೂಪವಾದ ಬೇರನ್ನು ಬಿಟ್ಟುಕೊಂಡು ಬಲವಾಗಿ ನಿಂತಿರುವಂತೆ ತೋರಿದರೂ ಇದು ಆದ್ಯಂತರಹಿತವಾಗಿಯೂ ವ್ಯವಸ್ಥಿತರೂಪವಿಲ್ಲದ್ದೂ ಆಗಿ ತೋರುತ್ತಿದ್ದರೂ ಅಸಂಗವೆಂಬ ಶಸ್ತ್ರದಿಂದ ಇದನ್ನು ಕತ್ತರಿಸಿಹಾಕಬಹುದು. ಹಾಗೆ ಕತ್ತರಿಸಿಹಾಕಿದಾಗಲೇ ಪುನರಾವೃತ್ತಿರಹಿತವಾದ ಸ್ಥಾನವನ್ನು ಕಂಡುಕೊಳ್ಳುವದಕ್ಕೆ ಆಗುವದು. ಇದಿಷ್ಟೂ ಹಿಂದಿನ ಉಪನ್ಯಾಸದ ವಿಷಯವು.

ಕರ್ಮದ ಫಲವು ಮಿಕ್ಕ ಮೇಲಿನ ಕೆಳಗಿನ ಲೋಕಗಳಲ್ಲಾಗುತ್ತದೆ. ಮನುಷ್ಯಲೋಕದಲ್ಲಿ ಕರ್ಮವೇ ಪ್ರಧಾನವಾಗಿರುತ್ತದೆ. ಕರ್ಮವೆಂಬುದು ಬಹಳ ಆಳವಾಗಿ ಬೇರುಬಿಟ್ಟುಕೊಂಡಿರುತ್ತದೆ ; ಅದರ ಪಟ್ಟು ಬಹಳ ಬಲವಾಗಿರುತ್ತದೆ. ಕರ್ಮವೆಂದರೆ

ಮಾಡುವದೆಂದಿಷ್ಟೇ ಅರ್ಥವನ್ನು ಮಾಡಬಾರದು ; ಯಾವ ಕರ್ಮವನ್ನೂ ಮಾಡದೆ ಸುಮ್ಮನೆ ಕುಳಿತಿರುವೆನೆಂಬ ಅಕರ್ಮವೂ ಕರ್ಮದೊಳಗೆ ಸೇರುತ್ತದೆ. ಸರಿಯಾಗಿ ಅಭಿವ್ಯಕ್ತವಾಗದೆಯೇ ಇರುವ ಎಷ್ಟೋ ಕರ್ಮಗಳು ನಮ್ಮ ಅಂತಃಕರಣದಲ್ಲಿ ವಾಸನಾರೂಪವಾಗಿದ್ದುಕೊಂಡಿರುತ್ತವೆ. ಅಂತಃಕರಣದಲ್ಲಿ ಒಳಗಿನ ಕೋಣೆಯೊಂದು ಇದೆಯೆಂದೂ ಅಲ್ಲಿರುವ ಭಾವಗಳು ಹೊರಕ್ಕೆ ಬರುವದಕ್ಕೆ ಸಮಯವನ್ನು ಕಾದುಕೊಂಡಿರುವವೆಂದೂ ಕೆಲವಂತೂ ಸ್ವಲ್ಪ ಅವಕಾಶವು ದೊರತೊಡನೆಯೇ ಹೊರಕ್ಕೆ ಬಂದುಬಿಡುವವೆಂದೂ ಕೆಲವರು ಮನಃಶಾಸ್ತ್ರಜ್ಞರು ಹೇಳುತ್ತಾರೆ. ಇದನ್ನು ನಾವು `ಸಂಚಿತಕರ್ಮ'ವೆಂದು ಕರೆಯಬಹುದು. ನಮ್ಮ ಕರ್ಮಗಳ ಲೆಕ್ಕಕ್ಕೆ ಇದನ್ನೂ ಸೇರಿಸಿಕೊಳ್ಳಬೇಕು. ಕರ್ಮವು ಕೆಲವು ವೇಳೆ ಕೂಟಸ್ಥವಾಗಿ ಹಾಗೆಯೇ ಇದ್ದು ಕಾಲಾಂತರದಲ್ಲಿ ಹೊರತೋರಿಕೊಳ್ಳುವದೆಂದು ಸ್ಮೃತಿವಾಕ್ಯವಿದೆ. ಅಲ್ಲಿ ಹೇಳಿರುವದು ಈ ಸಂಚಿತಕರ್ಮವೇ. ಸಂಸ್ಕಾರಗಳು ಉದ್ಬೋಧವಾಗುವದಕ್ಕೆ ಅವಕಾಶವು ದೊರೆತರೆ ಸಂಚಿತಕರ್ಮದ ಒಂದು ಭಾಗವು ಮೇಲಕ್ಕೆದ್ದುಕೊಳ್ಳುತ್ತದೆ ; ಇದೇ ಜನ್ಮಾಂತರಕ್ಕೆ ಕಾರಣವಾಗಿದೆ ಎಂದು ಕರ್ಮತತ್ತ್ವವನ್ನು ಬಲ್ಲವರು ಹೇಳುತ್ತಾರೆ. ಕರ್ಮವೆಂಬ ಬಲೆಯಲ್ಲಿಯೇ ನಾವೆಲ್ಲರೂ ಸಿಕ್ಕಿ ನರಳುತ್ತಿದ್ದೇವೆ. ಕರ್ಮವು ಮನುಷ್ಯನ ನೆರಳಿನಂತೆ ಅವನ ಹಿಂದುಗಡೆಯಲ್ಲಿಯೇ ಇದ್ದುಕೊಂಡಿರುತ್ತದೆ ; ಅವನು ಎದ್ದರೆ ಅದೂ ಏಳುತ್ತದೆ, ಕುಳಿತರೆ ಕುಳಿತುಕೊಳ್ಳುತ್ತದೆ, ಮಲಗಿದರೆ ಮಲಗುತ್ತದೆ, ಎದ್ದೋಡಿದರೆ ತಾನೂ ಅವನನ್ನು ಅಟ್ಟಿಸಿಕೊಂಡೇ ಹಿಂದೋಡುತ್ತದೆ. ಕರ್ಮವನ್ನು ತಪ್ಪಿಸಿಕೊಳ್ಳುವದು ಆಗುವಂತೆಯೇ ಇಲ್ಲ. ಯಾರಾದರೂ ಬಲಾತ್ಕಾರದಿಂದ ಕರ್ಮವನ್ನು ತೀರಿಸಿಕೊಳ್ಳುವೆನೆಂದು ಪ್ರಯತ್ನಪಟ್ಟರೆ ಆ ಪ್ರಯತ್ನದ ಫಲವೂ ಕರ್ಮವೇ ಆಗಿರುತ್ತದೆ. ಕರ್ಮವನ್ನು ಫಲಾನುಭವದಿಂದ ಒಂದಿಷ್ಟು ಮುಗಿಸಬಹುದು ; ಆದರೆ ಅಷ್ಟರೊಳಗೆ ಮತ್ತೆ ಬರುವ ಆಗಾಮಿಕರ್ಮವು ಈ ಲೆಕ್ಕಕ್ಕೆ ಜಮ ಆಗಿಬಿಟ್ಟಿರುತ್ತದೆ! ಆದ್ದರಿಂದ ಕರ್ಮವನ್ನೆಲ್ಲ ಮುಗಿಸಿ ಪರಮಪುರುಷಾರ್ಥವನ್ನು ಕಂಡುಕೊಳ್ಳುವೆನೆಂಬುದು ಸಮುದ್ರದ ಅಲೆಗಳೆಲ್ಲ ಶಾಂತವಾದ ಬಳಿಕ ಸ್ನಾನಮಾಡುವೆನೆಂಬುವನ ಅವಿವೇಕದ ಸಂಕಲ್ಪವಾಗುವದು.

ಆದ್ದರಿಂದ ಕರ್ಮವನ್ನು ಪ್ರಾಯಶ್ಚಿತ್ತಾದಿಗಳಿಂದ ಮುಗಿಸುತ್ತೇನೆಂಬುದು ಸಾಗದ ಕೆಲಸವು. ಈ ಸಂಕಲ್ಪವನ್ನು ಮೊದಲು ಬಿಡಬೇಕು. ನಾವು ಮಾಡತಕ್ಕದ್ದೆಲ್ಲ ಇಷ್ಟೇ ; ಅದರ ವಿಷಯದಲ್ಲಿ ಉದಾಸೀನರಾಗಬೇಕು. ನಮ್ಮ ನೆರಳು ದೊಡ್ಡದಾಗಿ ಬೆಳೆಯಲಿ, ಸಣ್ಣದಾಗಿ ಕುಗ್ಗಲಿ, ನಮ್ಮ ಜೊತೆಯಲ್ಲಿಯೇ ಬರುವಂತೆ ತೋರುತ್ತಿರಲಿ, ಅಥವಾ ಪೂರ್ಣವಾಗಿ ಕಾಣದಂತೆ ಮರೆಯಾಗಲಿ, ನಾವುಗಳು ಅದನ್ನು ಲೆಕ್ಕಿಸುವದೇ ಇಲ್ಲ. ಮಕ್ಕಳು ಮಾತ್ರ ಅದಕ್ಕೆ ಬೆಲೆಕೊಟ್ಟು, ಅಂಜಿ ಕಿರಿಚುತ್ತವೆ, ಅದನ್ನು ಹಿಡಿದುಕೊಳ್ಳುವದಕ್ಕೆ ಹೋಗುತ್ತವೆ, ಅಥವಾ ಅದನ್ನು ಬಿಟ್ಟು ಓಡುತ್ತವೆ. ಅಲ್ಲವೆ ? ಹೀಗೆಯೇ ಅವಿವೇಕಿಗಳಾದವರು ಕ್ರಿಯಾಕಾರಕಫಲರೂಪವಾಗಿರುವ ಈ ಸಂಸಾರದಲ್ಲಿ ಸತ್ಯತ್ವಬುದ್ಧಿಯನ್ನು

ಬೆಳೆಯಿಸಿಕೊಳ್ಳುತ್ತಾ ಅದರಲ್ಲಿ ತಮಗಾಗುವ ಒಳ್ಳೆಯ ಫಲಗಳಿಗೆ ಹಿಗ್ಗುತ್ತಲೂ ಕೆಟ್ಟ ಫಲಗಳಿಗೆ ಅಂಜುತ್ತಲೂ, ಬೇಕುಬೇಡಗಳೆಂಬ ಭಾವನೆಗಳಿಗೆ ಬಲಿಯಾಗಿ ಕರ್ಮಜಾಲದಲ್ಲಿ ಒದ್ದಾಡುತ್ತಿರುವರು. ಕರ್ಮವನ್ನು ತಪ್ಪಿಸಿಕೊಳ್ಳಬೇಕೆಂದು ಕೆಲವರು ಹೊಡೆದಾಡಿ ಸೋತು ಸುಣ್ಣವಾಗುವರು. ಆದರೆ ವಿವೇಕಿಯಾದವನು ಅದನ್ನು ಛಾಯಾಮಾತ್ರವೆಂದು ತಿಳಿದು ಅದರಲ್ಲಿ ಉದಾಸೀನನಾಗಬೇಕು. ಯಾವದೊಂದು ಕರ್ಮವನ್ನೂ ತನ್ನದೆಂದು ಭಾವಿಸಬಾರದು, ಅಭಿಮಾನಪಡಬಾರದು ; ಯಾವದೊಂದು ಫಲವನ್ನೂ ಬಯಸಿ ಅಥವಾ ದ್ವೇಷಿಸಿ ಅದರ ಸಂಪಾದನೆಗೆ ಅಥವಾ ದೂರೀಕರಣಕ್ಕೆ ಪ್ರಯತ್ನಿಸಬಾರದು, ಸುಮ್ಮನೆ ಇರುವದೂ ಒಂದು ಕರ್ಮವೆಂದು ಆಗಲೆ ಹೇಳಿರುತ್ತೇನಷ್ಟೆ. ಆದ್ದರಿಂದ ಸುಮ್ಮನಿರುವದೂ ಕರ್ಮಕ್ಷಯಕ್ಕೆ, ಈ ಸಂಸಾರವೃಕ್ಷದ ಅಭಾವಕ್ಕೆ ಉಪಾಯವಲ್ಲ. ಪರಮಾತ್ಮನ ಕಡೆಗೆ ತಿರುಗಿಬಿಟ್ಟು ಆತನನ್ನೇ ಚಿಂತಿಸುತ್ತಾ ಇದ್ದುಬಿಡಬೇಕು. ಪರಮಾತ್ಮನೆಂಬ ತಾಯಿಬೇರಿನಿಂದ ಈ ವೃಕ್ಷವು ಬಂದಿರುತ್ತದೆ ; ಇದು ಪರಮಾತ್ಮನೆಂಬ ಸತ್ಯಪದಾರ್ಥದ ಹುಸಿನೆರಳು ಮಾತ್ರವಾಗಿರುತ್ತದೆ. ಆದ್ದರಿಂದ ಪರಮಾತ್ಮನ ಅನ್ವೇಷಣೆಗೆ ಸಿದ್ಧರಾದರೆ ಆಯಿತು. ಈಗಲೇ ಇಲ್ಲಿಯೇ ಆ ಪರಮಾತ್ಮನು ಇರುತ್ತಾನೆ- ಎಂಬ ದೃಢಭಾವನೆಯನ್ನು ಮಾಡಿಕೊಂಡರಾಯಿತು; ಈ ಸಂಸಾರವೃಕ್ಷವು ಅಷ್ಟರಿಂದಲೇ ಸಡಿಲವಾಗಿ ಹೊಯ್ದಾಡುವದಕ್ಕೆ ಪ್ರಾರಂಭಿಸುವದು. ಈ ಪ್ರಯತ್ನದಿಂದಲೇ ಪರಮಾತ್ಮನ ಪ್ರಾಪ್ತಿ, ಕರ್ಮಫಲದ ನಿವೃತ್ತಿ - ಎರಡೂ ಕೈಗೂಡುವವು. ಇದನ್ನೇ ದೃಢವಾದ ಅಸಂಗ ಶಸ್ತ್ರದಿಂದ ಕತ್ತರಿಸಿ ಆ ಪರಮಪದವನ್ನು ಹುಡುಕಬೇಕು ಎಂದು ಹಿಂದೆ ಹೇಳಿರುವದು. ``ಛಿತ್ವಾ ಪರಿಮಾರ್ಗಿತವ್ಯಮ್" ಕತ್ತರಿಸಿ ಪರಮಾತ್ಮನನ್ನು ಹುಡುಕಬೇಕು ಎಂದು ಹೇಳಿದ್ದರೂ ಊಟಮಾಡಿ ಹೋಗಬೇಕು ಎಂಬಲ್ಲಿರುವಂತೆ ನಿಜವಾಗಿ ಇಲ್ಲಿ ಕಾಲಕೃತಭೇದವಿಲ್ಲ. `ಮುಖವನ್ನು ತೆರೆದುಕೊಂಡು ನಿದ್ರಿಸುತ್ತಾನೆ' ಎಂಬ ಪ್ರಯೋಗದಲ್ಲಿ ಹೇಗೆ ಬಾಯಿತೆರೆಯುವದು, ನಿದ್ರಿಸುವದು - ಈ ಎರಡೂ ಒಟ್ಟಿಗೇ ಆಗುತ್ತಿರುವವೋ ಹಾಗೆ ದೃಢವಾಗಿ ಅಸಂಗಶಸ್ತ್ರದಿಂದ ಸಂಸಾರವೃಕ್ಷವನ್ನು ಕಡಿದು ಹಾಕುವದು, ಪರಮಾತ್ಮನನ್ನು ಹುಡುಕುವದು ಎರಡೂ ಒಟ್ಟಿಗೇ ಆಗಬೇಕು. ಅಥವಾ ಇವು ಎರಡು ಕಾರ್ಯಗಳು ಎನ್ನುವದಕ್ಕಿಂತ ಒಂದೇ ಕಾರ್ಯದ ಎರಡು ನೋಟಗಳು ಎನ್ನಬಹುದು. ಸಂಸಾರವೃಕ್ಷವು ಮಾಯಾಮಯವಾಗಿರುವದರಿಂದ ಹಗ್ಗವನ್ನು ಕಂಡುಕೊಂಡ ಒಡನೆಯೇ ಹಾವಿನ ಅಂಜಿಕೆಯು ತಪ್ಪುವಂತೆ ಪರಮಾತ್ಮನ ಪ್ರಾಪ್ತಿಯಿಂದಲೇ ಈ ವೃಕ್ಷವನ್ನು ಅಸಂಗಶಸ್ತ್ರದಿಂದ ಕಡಿದುಹಾಕಿದಂತಾಗುವದು. ಈ ಕಾರಣದಿಂದಲೇ ಇದಕ್ಕೆ ಆದಿಯಿಲ್ಲ, ಅಂತವಿಲ್ಲ, ಮಧ್ಯೆ ಗೊತ್ತಾದ ರೂಪವೂ ಇಲ್ಲ- ಎಂದು ಹಿಂದಿನ ಶ್ಲೋಕದಲ್ಲಿ ಹೇಳಿರುವದು. ಕನಸು ಎಷ್ಟೇ ಭಯಂಕರವಾಗಿ ತೋರಲಿ, ಎಷ್ಟೇ ಅನಾದ್ಯನಂತವಾಗಿ ಕಾಣುತ್ತಿರಲಿ, ಅದು ಹಿಂದೆಯೂ ಇರಲಿಲ್ಲ, ಮುಂದೆಯೂ ಇರುವದಿಲ್ಲ ; ತೋರುವಾಗಲೂ ಬರಿಯ ಹುಸಿತೋರಿಕೆಯೇ ಆಗಿರುತ್ತದೆ. ಅಲ್ಲವೆ? ಅದರಂತೆಯೇ ಈ ಸಂಸಾರವೃಕ್ಷವನ್ನು

ಅರಿಯಬೇಕು. ಇದಕ್ಕೆ ಆದ್ಯಂತಗಳೇ ಇಲ್ಲದಂತೆ ತೋರುತ್ತಿದ್ದರೂ ಇದು ಮಾಯಾಮಯವೇ. ಪರಮಾತ್ಮನನ್ನು ಕಂಡುಕೊಂಡಾಗಲೇ ಅಸಂಗತ್ವವು ಪರಿಪೂರ್ಣವಾಗುತ್ತದೆಯಾದರೂ ಮೊದಲು ಇದರಲ್ಲಿ ಅನಾಸಕ್ತಿಯನ್ನು ತೋರಿಸುವದರಿಂದಲೇ ಇದರ ಮಾಯಾಮಯತ್ವವು ಮನಸ್ಸಿಗೆ ತೋರುವದಕ್ಕೆ ಮೊದಲಾಗುತ್ತದೆಯಾದ್ದರಿಂದ ಅಸಂಗಶಸ್ತ್ರದಿಂದ ಛೇದಿಸುವದರಿಂದಲೇ ಪರಮಾತ್ಮನನ್ನು ಹುಡುಕಬೇಕು - ಎಂದು ಗೀತೆಯು ಉಪದೇಶಿಸುತ್ತಿದೆ.

ಪರಮಾತ್ಮನನ್ನು ಅನ್ವೇಷಣೆಮಾಡುವದು ಹೇಗೆ ? ಆ ಪರಮಾತ್ಮನನ್ನು `ಹುಡುಕಬೇಕು, ಅರಿತುಕೊಳ್ಳಬೇಕು' - ಎಂದು ಶ್ರುತಿಯು ಸಾರುತ್ತಿರುತ್ತದೆ. ಆದರೆ ಹುಡುಕುವದಕ್ಕೆ ಯಾವ ಕಡೆಗೆ ಹೋಗಬೇಕು ? - ಎಂಬ ಪ್ರಶ್ನೆ ಏಳಬಹುದಷ್ಟೆ. ಇದಕ್ಕೆ ಗೀತೆಯ ಉತ್ತರವೇನೆಂದರೆ `ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ' ಯಾವ ಆದಿಪುರುಷನಿಂದ ಅನಾದಿಕಾಲದಿಂದಲೂ ಈ ಮಾಯೆಯ ಪ್ರವೃತ್ತಿಯುಂಟಾಗಿರುವದೋ ಆ ಪರಮಾತ್ಮನನ್ನೇ ಶರಣುಹೊಕ್ಕಿರುವೆನು' ಎಂಬ ನಿಶ್ಚಯವನ್ನು ಮೊದಲು ಮಾಡಬೇಕು. ನಮ್ಮ ಪ್ರವೃತ್ತಿಗಳೆಲ್ಲವೂ ಯಾವನ ಸಂನಿಧಿಯಲ್ಲಿ ಆಗುತ್ತಿರುವವೋ ಆತನ ಕಡೆಗೆ ತಿರುಗಿದ ಮಾತ್ರದಿಂದಲೇ ನಮಗೆ ಈ ಕರ್ಮಗಳ ಬಂಧವು ತಪ್ಪುವದು. ಕರ್ಮಗಳಲ್ಲಿ ಸಂಗವನ್ನಿಟ್ಟಷ್ಟೂ ಅವು ನಮಗೆ ಭಾರವಾಗಿರುವವು ; ಪರಮೇಶ್ವರನನ್ನು ನಂಬಿದಂತೆಲ್ಲ ಅವು ಹಗುರವಾಗುವವು. ವ್ಯವಹಾರವನ್ನು ಮಾಡುವಾಗ `ನಾನು' ಎಂಬ ಅಭಿಮಾನವಿರುವದೇ ಎಲ್ಲಾ ತೊಡಕಿಗೂ ಕಾರಣವಾಗಿರುತ್ತದೆ ; ವ್ಯವಹಾರವನ್ನು ಪರಮೇಶ್ವರನಿಗೆ ಸಂಬಂಧಿಸಿಕೊಂಡರೆ ಯಾವ ತೊಡಕೂ ಇರುವದಿಲ್ಲ. ರಥವನ್ನು ಎಳೆಯುವಾಗ `ಗೋವಿಂದ !ಗೋವಿಂದ !' ಎಂದು ಜನರು ಘೋಷಿಸುವ ಪದ್ಧತಿಯಿದೆಯಷ್ಟೆ; ಎಳೆಯುವದಕ್ಕೆ ಭಾರವಾಗಿರುವ ರಥವು ಪರಮೇಶ್ವರನ ಸ್ಮರಣೆಯಿಂದ ಹಗುರವಾಗುವದು ಎಂಬ ಅಭಿಪ್ರಾಯವು ಆ ಆಚರಣೆಯಲ್ಲಿ ಅಡಗಿರುತ್ತದೆ. ರಥವನ್ನು ಎಳೆಯುವವರೆಲ್ಲರೂ ತಮ್ಮ ಸ್ವಾರ್ಥದ ಅಭಿಮಾನವನ್ನು ಬಿಟ್ಟು ಪರಮೇಶ್ವರನ ಚಿಂತನೆಯಿಂದಲೇ ಕೂಡಿ ಎಳೆಯುವಾಗ ಅವರ ಉತ್ಸಾಹವು ಉಕ್ಕುತ್ತದೆ. ಎಲ್ಲರ ಉತ್ಸಾಹವೂ ಸೇರಿದರೆ ರಥವು ಸಲೀಸಾಗಿ ಮುಂದಕ್ಕೆ ಸಾಗುತ್ತದೆ, ಎಲ್ಲರಲ್ಲಿಯೂ ಇರುವ ಪರಮೇಶ್ವರನೇ ಈ ಸಮಷ್ಟಿಯ ಉತ್ಸಾಹಕ್ಕೆ ಮೂಲವಾಗಿರುತ್ತಾನೆ.

ಈ ಜಗತ್ತು ನಮ್ಮ ಕರ್ಮದ ಫಲವಾಗಿ ವ್ಯಾಪಾರಮಾಡುತ್ತಿದೆ ಎಂಬ ದುರಭಿಮಾನದಿಂದ ಕಷ್ಟಪಟ್ಟವರು ಹಲವರು ಇರುತ್ತಾರೆ; ಇದೆಲ್ಲವನ್ನೂ ಪರಮೇಶ್ವರನ ಶಕ್ತಿಯು ನಿರ್ವಹಿಸುತ್ತಿದೆ ಎಂದು ನಂಬಿ ಜೀವನವ್ಯಾಪಾರವನ್ನು ಹಗುರಮಾಡಿಕೊಂಡ ಮಹಾತ್ಮರೂ ಕೆಲವರು ಇರುತ್ತಾರೆ. ಸ್ವಪ್ರಯತ್ನದಿಂದ ಏಳುಬೀಳುಗಳನ್ನು ಅನುಭವಿಸುತ್ತಿರುವವರಿಗೇನೂ ಕಡಿಮೆಯಿಲ್ಲ ; ಕರ್ಮಗಳನ್ನು ಮಾಡಿ ಫಲವನ್ನು ಅನುಭವಿಸಿ

ಮೊದಲಿನ ಸ್ಥಿತಿಗೇ ಇಳಿಯುವದು ಮನುಷ್ಯಸ್ವಭಾವಕ್ಕೆ ಸೇರಿದ್ದು. ಆದರೆ ಪರಮೇಶ್ವರನನ್ನು ತಮ್ಮ ಕರ್ಮಕ್ಕೆ ಸಂಬಂಧಿಸಿದವರು, ಪರಮೇಶ್ವರನಲ್ಲಿಯೇ ಭಕ್ತಿಯನ್ನು ಇಟ್ಟುಕೊಂಡಿರುವವರು, ಆತನಲ್ಲಿಯೇ ನಿಂತುಬಿಡುತ್ತಾರೆ, ಪುನರಾವೃತ್ತಿರಹಿತವಾದ ಶಾಶ್ವತಪದವಿಯನ್ನು ಹೊಂದಿಬಿಡುತ್ತಾರೆ ; ತಮ್ಮ ತಮ್ಮ ಕರ್ಮಗಳಿಂದ ಆಯಾ ಫಲಗಳನ್ನು ಹೊಂದುವವರು ನಾಟಕದ ಪಾತ್ರಗಳನ್ನು ಹಾಕಿಕೊಂಡು ಆಯಾ ದೃಶ್ಯಗಳಲ್ಲಿ ಮಾತ್ರವೇ ಕಾಣಿಸಿಕೊಳ್ಳುವವರಂತೆ ಇರುತ್ತಾರೆ ; ಪರಮೇಶ್ವರನ ಆರಾಧಕರಾಗಿ ಅವನನ್ನೇ ನಂಬಿರುವವರು ಆ ನಾಟಕವನ್ನು ನೋಡುವ ಸಾಮಾಜಿಕರಂತೆ ಇರುತ್ತಾರೆ. ಪರಮೇಶ್ವರನ ಲೀಲೆಗೆ ಉಪಕರಣವಾಗಿಬಿಟ್ಟರೆ ನಮ್ಮ ವ್ಯವಹಾರವು ಎಷ್ಟು ಹಗುರವಾಗಿ ಆನಂದಮಯವಾಗುವದೆಂಬುದು ನಮಗೆ ಆಶ್ಚರ್ಯವನ್ನುಂಟುಮಾಡುವದು. ``ತಮೇವ ಚಾದ್ಯಂ ಪುರುಷಂ ಪ್ರಪದ್ಯೇ". ಆ ಆದಿಪುರುಷನನ್ನೇ ಶರಣುಹೊಂದಿರುತ್ತೇನೆ ಎಂದು ಅವಧಾರಣೆಮಾಡಿ ಹೇಳಿರುವದರಲ್ಲಿರುವ ಅರ್ಥಸ್ವಾರಸ್ಯವೇನೆಂದರೆ ವ್ಯವಹಾರದಲ್ಲಿ ನಾವು ಯಾವದಾದರೊಂದು ವಸ್ತುವಿನಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟು ಅದಕ್ಕಾಗಿ ನಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸಿಕೊಂಡು ದುಡಿಯುವಂತೆಯೇ ಪರಮಾತ್ಮನಲ್ಲಿಯೇ ಅಂಥ ಪ್ರೇಮವನ್ನಿಟ್ಟುಕೊಂಡು ನಡೆಯಬೇಕು. ಆಗಲೇ ಅಸಂಗಶಸ್ತ್ರದಿಂದ ಈ ಸಂಸಾರವೃಕ್ಷವನ್ನು ಕಡಿದುಹಾಕುವದು ಸಾಧ್ಯವಾಗುವದು ; ಆಗಲೇ ನಮಗೆ ಸರ್ವದಿಕ್ಕುಗಳೂ ಸುಖಮಯವಾಗಿ ತೋರುವವು.

ಹೀಗೆ ಪರಮಾತ್ಮನ ಕಡೆಗೆ ತಿರುಗುವ ಯೋಗ್ಯತೆ ಯಾರಲ್ಲಿರುವದು? ಎಂಥ ಮನಃಸ್ವಭಾವದವರು ಹೀಗೆ ಪರಮೇಶ್ವರನನ್ನೇ ಅನನ್ಯಶರಣರಾಗಿ ನಂಬುವರು ? ಎಂದರೆ-

**ನಿರ್ಮಾನಮೋಹಾ ಜಿತಸಙ್ಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**

**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ**
**ರ್ಗಚ್ಛನ್ತ್ಯಮೂಢಾಃ ಪದಮವ್ಯಯಂ ತತ್ ॥ 15-5**

ಅಭಿಮಾನವನ್ನೂ ಮೋಹವನ್ನೂ ಬಿಟ್ಟವರು ಈ ಪರಮಾತ್ಮಪ್ರಾಪ್ತಿಗೆ ತಕ್ಕವರು. ಯಾರನ್ನು ನಾನೆಂಬ ಅಭಿಮಾನವು ಬಾಧಿಸುತ್ತಿರುವದೋ, ಯಾರನ್ನು ಅಜ್ಞಾನವು ಈ ಸಂಸಾರವೇ ಸತ್ಯವೆಂಬ ಬುದ್ಧಿಯಲ್ಲಿ ಕೆಡಹುತ್ತಿರುವದೋ, ಅವರಿಗೆ ಈ ಮಾರ್ಗದಲ್ಲಿ ಅವಕಾಶವಿರುವದಿಲ್ಲ. ಯಾರಿಗೆ ವಿಷಯಸಂಗವೆಂಬ ದೋಷವು ಅಂಟಿಕೊಂಡಿರುವದಿಲ್ಲವೋ ವಿಷಯಗಳಿಗೆ ಅಂಟಿಕೊಂಡಿರುವ ಬುದ್ಧಿಯನ್ನು ಯಾರು ಗೆದ್ದುಕೊಂಡಿರುವರೋ ಅವರು ಮಾತ್ರ ಈ ದಾರಿಯಲ್ಲಿ ನಡೆಯಬಲ್ಲರು. ವಿಷಯಗಳ ಸಂಗವು ವಿಷಯಗಳಲ್ಲಿಯೇ ನಿತ್ಯವೂ ಮನಸ್ಸನ್ನು ನಿಲ್ಲಿಸಿರುತ್ತದೆ ; ಆದರೆ ಈ ಮಾರ್ಗದಲ್ಲಿ ಯಾವಾಗಲೂ ಆತ್ಮಸ್ವರೂಪವನ್ನು

ಕುರಿತ ಆಲೋಚನೆಯನ್ನೇ ಮಾಡುತ್ತಾ ಇರಬೇಕಾಗುತ್ತದೆ. ಆದ್ದರಿಂದ ಇಲ್ಲಿ ವಿಷಯಸಂಗಕ್ಕಾಗಲಿ ಕರ್ಮಸಂಗಕ್ಕಾಗಲಿ ಒಂದಿಷ್ಟೂ ಎಡೆಯಿರುವದಿಲ್ಲ. ಸಂಗವೇ ಎಲ್ಲಾ ಕಾಮಗಳಿಗೂ ಮೂಲವು ; ಸಂಗವನ್ನು ಜಯಿಸಿದವರಿಗೆ ಕಾಮವೆಲ್ಲಿಯದು ? ಕಾಮವಿಲ್ಲದವರಿಗೆ ಹೊರಗಿನ ಫಲಗಳಿಗಾಗಿ ಕರ್ಮಗಳಲ್ಲಿ ಪ್ರವೃತ್ತಿ ಹೇಗಾದೀತು ? ಆದ್ದರಿಂದ ಪರಮಾತ್ಮಾನ್ವೇಷಣೆಯಲ್ಲಿ ತೊಡಗಿರುವವರಿಗೆ ಕಾಮಗಳೆಲ್ಲ ನಿವೃತ್ತವಾಗಿರುವವು. ಕಾಮಗಳು ಯಾವಾಗ ಸಂಪೂರ್ಣವಾಗಿ ತೊಲಗುವವೋ ಆಗಲೇ ಭಗವತ್ಪ್ರಾಪ್ತಿಯಾಗುವದೆಂಬುದು ವೇದಾಂತಸಿದ್ಧಾಂತವು. ಪರಮಾತ್ಮನೇ ಸರ್ವಕಾಮಗಳ ಸ್ಥಾನದಲ್ಲಿರಬೇಕು ; ಪರಮಾತ್ಮಪ್ರಾಪ್ತಿಯಾದರೆ ಸರ್ವಕಾಮಗಳನ್ನೂ ಒಟ್ಟಿಗೆ ಪಡೆದಂತೆ ಎಂಬ ತಿಳಿವಳಿಕೆಯು ಗಟ್ಟಿಯಾಗಬೇಕು. ವ್ಯವಹಾರದಲ್ಲಿ ಪರಮೇಶ್ವರನ ಮಾತು, ಪರಮೇಶ್ವರನ ಚಿಂತನೆ, ಪರಮೇಶ್ವರಾರಾಧನರೂಪವಾದ ಕರ್ಮ - ಹೀಗಿರಬೇಕು. ರಾಮನಿದ್ದಲ್ಲಿ ಕಾಮವಿಲ್ಲ, ಕಾಮವಿದ್ದಲ್ಲಿ ರಾಮನಿಲ್ಲ ಎಂಬ ತುಳಸಿದಾಸರ ಉಕ್ತಿಯ ಅಭಿಪ್ರಾಯವೇ ಇದು. ವಿಷಯಗಳಿಂದ ವಿಧವಿಧವಾದ ವೇದನೆಗಳೂ ಅದರಿಂದ ಸುಖದುಃಖಗಳೂ ಅವುಗಳಿಂದ ಹರ್ಷವಿಷಾದಗಳೂ ಆಗುತ್ತಿರುವದೇ ಸಂಸಾರಿಗಳ ಸ್ವಭಾವವು; ಯಾರು ಈ ಸುಖದುಃಖಕಾರಣವಾಗಿರುವ ದ್ವಂದ್ವಗಳ ಕೋಟಲೆಯಿಂದ ತಪ್ಪಿಸಿಕೊಂಡಿರುವರೋ ಅಂಥವರು ಮಾತ್ರ ಆತ್ಮಾನ್ವೇಷಣೆಯಲ್ಲಿ ಜಯಶೀಲರಾಗುತ್ತಾರೆ. ಇಂಥವರಿಗೆ ಪರಮಾತ್ಮಪಥದಲ್ಲಿ ದಾರಿತಪ್ಪುವ ಸಂಭವವಿರುವದಿಲ್ಲ; ಇಂಥವರು ನೇರಾಗಿ ಅವ್ಯಯವಾದ ಆ ವೈಷ್ಣವಪರಮಪದವನ್ನು ಪಡೆಯುತ್ತಾರೆ.

ಜಗತ್ತಿನ ವ್ಯವಹಾರವು ಹೊಂದಿಕೆಯಾಗಬೇಕಾದರೆ ಅದನ್ನು ಮೊದಲು ಪರಮೇಶ್ವರನಿಗೆ ಸಂಬಂಧಿಸಿಕೊಳ್ಳಬೇಕು. ಪ್ರಪಂಚದ ವ್ಯವಹಾರವು ಒಂದು ಮದುವೆಯಿದ್ದಂತೆ. ಮದುವೆಯಲ್ಲಿ ಬೀಗರು ಆಗಾಗ ಮುನಿಸಿಕೊಳ್ಳುವದುಂಟು ; ನಾಗೋಲಿಯ ದಿನ ಹೇಗಾದರೂ ಜಗಳವಾಗಿರುತ್ತದೆ ಎಂದು ಕೆಲವರ ನಂಬಿಕೆಯಿದೆ. ಎಲ್ಲರ ಮನೆಯ ಮದುವೆಯಲ್ಲಿಯೂ ಹೀಗೆ ಆಗುತ್ತದೆಯೋ ಇಲ್ಲವೋ ಹೇಳುವದಕ್ಕಾಗುವದಿಲ್ಲ. ಆದರೆ ಯಾರು ಮದುವೆಯನ್ನು ಒಂದು ವ್ಯಾಪಾರವಾಗಿ ಮಾಡಿಕೊಳ್ಳುತ್ತಾರೋ ಅವರು ಏರ್ಪಡಿಸಿರುವ ಮದುವೆಗಳಲ್ಲಿ, ಹುಡುಗಿಗೆ ಇಂತಿಷ್ಟು ಚಿನ್ನದ ಒಡವೆಗಳನ್ನು ಹಾಕಬೇಕು, ವರನಿಗೆ ಇಂಥಿಂಥ ಉಪಚಾರಗಳನ್ನು ಕೊಡಬೇಕು, ಇಂತಿಷ್ಟು ದಕ್ಷಿಣೆಯನ್ನು ಸಲ್ಲಿಸಬೇಕು - ಎಂಬ ಷರತ್ತುಗಳ ಮೇಲೆ ಆಗಿರುವ ಮದುವೆಗಳಲ್ಲಿ, ಒಂದಲ್ಲ ಒಂದು ವಿಷಯದಲ್ಲಿ ತೊಂದರೆಯುಂಟಾಗಿ ಬೀಗರುಗಳಿಗೆ ವೈಮನಸ್ಯವು ಬಂದೇಬರುತ್ತದೆ. ಸರಸವಾಗಿ ಮೊದಲಾದದ್ದು ವಿರಸವಾಗಿಬಿಡುತ್ತದೆ. ಹೀಗೆಯೇ ವ್ಯವಹಾರದಲ್ಲಿ ನಾವು ನಗುತ್ತಾ ವಿಷಯಗಳನ್ನು ಹುಡುಕುತ್ತೇವೆ, ಅಳುತ್ತಾ ಅವುಗಳ ವಿಯೋಗವನ್ನೋ ಅವುಗಳಿಂದಾದ ದುಃಖವನ್ನೋ ಅನುಭವಿಸಬೇಕಾಗುತ್ತದೆ. ಬೀಗರು ಮುನಿಸಿಕೊಳ್ಳದಂತೆ ಅವರ ಕಡೆಯ ಏಜಂಟನೊಬ್ಬನನ್ನು ಒಲಿಸಿಕೊಳ್ಳುವದಕ್ಕೆ ಕೆಲವರು

ಪ್ರಯತ್ನಿಸುತ್ತಾರೆ ; ಆದರೆ ಆ ಏಜಂಟನು ಎಂಥ ಸ್ವಭಾವದವನು ಎಂಬುದನ್ನು ಅವಲಂಬಿಸುತ್ತದೆ, ಅವನ ಪ್ರಯತ್ನದ ಯೋಗ್ಯತೆ. ಈ ಪ್ರಪಂಚವ್ಯವಹಾರದ ಮದುವೆಯಲ್ಲಿ ಯಾವ ಬೀಗರೂ ಮುನಿಸಿಕೊಳ್ಳದೆ ಇರಬೇಕಾದರೆ ಪರಮೇಶ್ವರನನ್ನು ಏಜಂಟನನ್ನಾಗಿ ಮಾಡಿಕೊಳ್ಳಿರಿ. ಪರಮೇಶ್ವರನನ್ನು ಹೃದಯದಲ್ಲಿಟ್ಟವರಿಗೆ ಲಾಭವಾಗುತ್ತದೆ, ಜಯವಾಗುತ್ತದೆ; ಎಂದಿಗೂ ಪರಾಭವವಾಗುವದಿಲ್ಲ.

ಸಾಮಾನ್ಯಜನರು ಹಣವನ್ನು ಗಳಿಸುವದಕ್ಕಾಗಿ ಮಿಕ್ಕದ್ದೆಲ್ಲವನ್ನೂ ಬಿಡುತ್ತಾರೆ; ಅವರು ಇಹಲೋಕದ ಪರಲೋಕದ ಸುಖವು ಕೂಡ ಹೋದರೂ ಹಣವೊಂದಿದ್ದರೆ ಸಾಕು ಎನ್ನುತ್ತಾರೆ. ಪರಮೇಶ್ವರನ ಭಕ್ತರಿಗೆ ಪರಮೇಶ್ವರನೇ ಹಣ. ಅವನೊಬ್ಬನಿದ್ದರೆ ಯಾವದು ಏನಾದರೂ ಆಗಲಿ ಎನ್ನುತ್ತಾರೆ, ಅವರು ; ಅವರು ನಂಬಿರುವ ಪರಮೇಶ್ವರನೊಬ್ಬನು ಸಿಕ್ಕಿದರೆ ಅವರಿಗೆ ಎಲ್ಲವೂ ದೊರೆತಂತೆಯೇ, ಪರಮೇಶ್ವರನಿಗೆ ಅಧೀನವಾಗದ್ದು ಯಾವದೊಂದೂ ಇರುವದಿಲ್ಲ, ಅಥವಾ ಪರಮೇಶ್ವರನೇ ಎಲ್ಲವೂ ಆಗಿರುತ್ತಾನೆ. ಈ ಗುಟ್ಟನ್ನು ಭಕ್ತರೊಬ್ಬರು ಬಲ್ಲರು. ಅವರು ಮಿಕ್ಕ ಯಾವದನ್ನಾದರೂ ಬಿಟ್ಟಾರು, ಪರಮೇಶ್ವರನೊಬ್ಬನನ್ನು ಎಂದಿಗೂ ಬಿಡಲಾರರು. ಇದೇ ಈ ಜೀವನದಲ್ಲಿ ಸಾರ. ಈ ಸಂಸಾರಕ್ಕೆಲ್ಲ ಮೂಲವಾಗಿರುವ, ಇದಕ್ಕೆಲ್ಲ ತಿರುಳಾಗಿರುವ, ಪರಮಾತ್ಮನನ್ನು ಕಂಡುಕೊಂಡವರ ಬಾಳು ಸಾರ್ಥಕವಾಯಿತು ; ಇದೊಂದಿಲ್ಲದಿದ್ದರೆ ಮತ್ತೇನನ್ನು ಪಡೆದುಕೊಂಡರೂ ಜನ್ಮವು ವ್ಯರ್ಥವಾಯಿತು. ಇದನ್ನು ಮುಮುಕ್ಷುಗಳು ಯಾವಾಗಲೂ ನೆನಪಿನಲ್ಲಿಟ್ಟುಕೊಂಡಿರಬೇಕು. ಕಷ್ಟ ಬರಲಿ, ಸುಖ ಬರಲಿ, `ತಮೇವ ಚಾದ್ಯಂ ಪುರುಷಂ ಪ್ರಪದ್ಯೇ' ಆ ಆದ್ಯಪುರುಷನನ್ನೇ ಶರಣುಹೊಂದಿದ್ದೇನೆ - ಎಂದುಕೊಳ್ಳುತ್ತಿರಬೇಕು. ಆಗ ಸಕಲ ಇಷ್ಟಾರ್ಥಗಳೂ ಪ್ರಾಪ್ತವಾಗುವವು, ಸಕಲ ಅನಿಷ್ಟಗಳೂ ನಿವೃತ್ತವಾಗುವವು.

## ೧೪೦. ಪರಮಾತ್ಮನ ಅಂಶನಾಗಿರುವ ಜೀವ 15 - (6-10)

**(21-8-49)**

ಹಿಂದಿನ ಎರಡು ಮೂರು ಉಪನ್ಯಾಸಗಳಲ್ಲಿ ಈ ಸಂಸಾರವೆಂಬುದು ಪರಮಾತ್ಮನಿಂದ ಬಂದಿದೆ, ಆ ಪರಮಾತ್ಮನನ್ನೇ ನಾವು ಸೇರತಕ್ಕವರು - ಎಂಬುದನ್ನು ತಿಳಿಸಿದ್ದಾಗಿದೆ. ನಾವು ಪರಮಾತ್ಮನಿಂದಲೇ ಬಂದಿದ್ದರೂ ಪರಮಾತ್ಮಪ್ರಾಪ್ತಿಯು ನಮಗೆ ಆಗದಂತೆ ಅಡ್ಡಿಮಾಡಿರುವವು ನಮ್ಮ ಕರ್ಮಗಳು. ಉಚ್ಚನೀಚಕರ್ಮಗಳಿಂದ ನಾವು ಮೇಲಿನ ಕೆಳಗಿನ ಲೋಕಗಳನ್ನು ಪಡೆಯುತ್ತಾ ಕರ್ಮಫಲಗಳ ಭೋಗವನ್ನೇ ಮಾಡುತ್ತಾ ಕರ್ಮಪ್ರಪಂಚದಲ್ಲಿಯೇ ನೆಲಸಿಬಿಟ್ಟಿರುತ್ತೇವೆ.

ಇದರಿಂದ ಕರ್ಮಿಗಳಾದ ನಮ್ಮನಮ್ಮಲ್ಲಿಯೇ ತಾರತಮ್ಯವುಂಟಾಗಿಬಿಟ್ಟಿರುತ್ತದೆ. ಕ್ರಿಯಾಕಾರಕಫಲರೂಪವಾಗಿರುವ ಈ ಪ್ರಪಂಚದಲ್ಲಿ ಅವರವರ ಕರ್ಮಕ್ಕೆ ಅನುಗುಣವಾಗಿ ಅವರವರು ಫಲವನ್ನು ಅನುಭವಿಸುತ್ತಿರುವರು. ಕರ್ಮತಾರತಮ್ಯದಿಂದ ಫಲತಾರತಮ್ಯವಾಗುವದು ಸ್ವಾಭಾವಿಕ ; ಆದರೆ ಈ ವೈಷಮ್ಯವು ನಮಗೆ ಒಗ್ಗುವದಿಲ್ಲ. ನಮಗಿಂತ ಯಾರಾದರೂ ಮೇಲಕ್ಕೆ ಹೋಗಿದ್ದರೆ ನಮಗೆ ಸಹಿಸುವದಿಲ್ಲ. ಅವರನ್ನು ಹೇಗಾದರೂ ಮಾಡಿ ಕೆಳಕ್ಕೆ ಎಳೆಯಲು ಪ್ರಯತ್ನಿಸುತ್ತಿರುವೆವು. ಎಲ್ಲರೂ ಸಮವಾಗಿರಬೇಕೆಂದು ನಮ್ಮ ಇಷ್ಟ. ಈ ಸಮತಾವಾದವು ಸರಿಯಲ್ಲ ; ಎಲ್ಲರೂ ಮೇಲಕ್ಕೆ ಹೋಗಬೇಕು ಎಂದು ಇಟ್ಟುಕೊಂಡರೆ ಸರಿಯಾದ ಸಮತಾವಾದವಾಗುತ್ತದೆ. ಯಾರೊಬ್ಬರಿಗೂ ಯಾರೊಬ್ಬರನ್ನೂ ಕೆಳಗೆ ತುಳಿದಿಡುವ ಹಕ್ಕು ಇರುವದಿಲ್ಲ. ನಿಜವಾಗಿ ನಾವೆಲ್ಲರೂ ಪರಮಾತ್ಮನಿಂದಲೇ ಬಂದಿರುತ್ತೇವೆ; ನಾವೆಲ್ಲರೂ ಆತನಲ್ಲಿಗೇ ಹೋಗುತ್ತಿದೇವೆ. ಎಲ್ಲರೂ ಈ ಪ್ರಯತ್ನದಲ್ಲಿ ಸಫಲರಾಗುವದಕ್ಕೆ ತಕ್ಕ ಪ್ರಯತ್ನವನ್ನು ಮಾಡೋಣ. ಮುಂದಿರುವವರು ಮುಂದುಮುಂದಕ್ಕೆ ಹೋಗೋಣ ; ಹಿಂದಿರುವವರನ್ನು ನಮ್ಮ ಜೊತೆಗೆ ಕರೆದುಕೊಳ್ಳೋಣ. ಯಾರು ನಿರ್ಮಾನಮೋಹರಾಗಿರುವರೋ ಯಾರು ಸಂಗದೋಷವನ್ನು ಗೆದ್ದುಕೊಂಡಿರುವರೋ ಯಾರು ಯಾವಾಗಲೂ ಪರಮಾತ್ಮಚಿಂತನೆಯಲ್ಲಿಯೇ ನಿರತರಾಗಿರುವರೋ, ಯಾರು ನಿಷ್ಕಾಮರಾಗಿರುವರೋ ಅವರಿಗೆ ಈ ದಾರಿಯಲ್ಲಿ ಯಾವ ಎಡರುಗಳೂ ಕಾಣಿಸಿಕೊಳ್ಳುವದಿಲ್ಲ. ಇದನ್ನು ನಾವೂ ಅರಿತುಕೊಂಡು ನಮ್ಮ ಜೊತೆಯವರಿಗೂ ತಿಳಿಯಪಡಿಸಬೇಕು. ಪರಮಾತ್ಮನಲ್ಲಿ ನಾವೆಲ್ಲರೂ ಸಮವಾಗಿರುತ್ತೇವೆ ; ನಮ್ಮಲ್ಲಿ ಆ ದೃಷ್ಟಿಯಿಂದ ಯಾವ ತಾರತಮ್ಯವೂ ಇರುವದಿಲ್ಲ. ಮುಂದುಮುಂದಕ್ಕೆ ಹೋಗಿರುವ ಸಾಧುಗಳನ್ನು ಮೇಲುಪಙ್ಕ್ತಿಯಾಗಿ ಮಾಡಿಕೊಂಡು ನಾವೆಲ್ಲರೂ ಅವರನ್ನೇ ಅನುಸರಿಸಿ ಪರಮಾತ್ಮನನ್ನೇ ಮುಟ್ಟಬೇಕು; ಎಲ್ಲರನ್ನೂ ಆ ದಾರಿಗೇ ಬರಮಾಡಿಕೊಳ್ಳ ಬೇಕು ; ಕೊನೆಗೆ ಎಲ್ಲರೂ ಆ ಪರಮಾತ್ಮನಲ್ಲಿ ಒಂದಾಗಬೇಕು. ಇದೇ ನಿಜವಾದ ಸಮತಾವಾದವು.

ಪರಮಾತ್ಮಪ್ರಾಪ್ತಿಗೆ ಎಲ್ಲರಿಗೂ ಹಕ್ಕುಂಟು. ಎಲ್ಲರೂ ಪ್ರಯತ್ನವನ್ನು ಮಾಡಬಹುದು. ಆದರೆ ತಕ್ಕ ಅಧಿಕಾರಸಂಪತ್ತಿರುವವರು ಮಾತ್ರ ಆ ಸ್ಥಾನವನ್ನು ಪಡೆದುಕೊಳ್ಳುವರು. ಅದ್ದರಿಂದ ಮೊದಲು ನಾವೆಲ್ಲರೂ ಕಷ್ಟಪಟ್ಟು ತಕ್ಕ ಅಧಿಕಾರಸಂಪತ್ತನ್ನು ಸಂಪಾದಿಸಿಕೊಳ್ಳಬೇಕು.

ಆ ಸ್ಥಾನದ ಸ್ವರೂಪವು ಹೇಗಿರುವದು ? ಅದನ್ನು ಯಾರು ನಮಗೆ ತೋರಿಸುವವರು? ಮುಂದಕ್ಕೆ ನಡೆಯುವಾಗ ದಾರಿಯನ್ನು ತೋರಿಸುವ ಬೆಳಕು ಯಾವದು ? ಪರಮಾತ್ಮನನ್ನು ಏತರ ಬೆಳಕಿನಿಂದ ನೋಡಬೇಕು?

**ನ ತದ್ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥ 15-6**

ಪರಮಾತ್ಮನನ್ನು ಯಾವದಾದರೊಂದು ಅಂಧಕಾರದ ಆವರಣವು ಮುಚ್ಚಿಕೊಂಡಿರುವದೆಂದಾಗಲಿ ಅದನ್ನು ತೊಲಗಿಸುವದಕ್ಕೆ ನಮಗೆ ಯಾವದಾದರೊಂದು ಬೆಳಕು ಬೇಕೆಂದಾಗಲಿ ತಿಳಿಯುವದು ಮೂಢತನವು. ವ್ಯವಹಾರದಲ್ಲಿ ಸೂರ್ಯನಿಗಿಂತ ಹೆಚ್ಚಿನ ಬೆಳಕಿನ ಪಧಾರ್ಥವಿಲ್ಲ. ನಮಗೆ ಯಾವ ವಸ್ತು ತೋರಬೇಕಾದರೂ ಸೂರ್ಯನ ಬೆಳಕಿನ ಸಹಾಯವನ್ನು ನಾವು ಕೋರುತ್ತೇನೆ. ಆದರೆ ಆ ಪುನರಾವೃತ್ತಿರಹಿತವಾದ ವೈಷ್ಣವಪದವನ್ನು ಈ ಸೂರ್ಯನೂ ಬೆಳಗಲಾರನು. ಇಷ್ಟೇ ಅಲ್ಲ. ಸೂರ್ಯನುಕೂಡ ಬೆಳಗುವನೆಂದು ನಮಗೆ ತಿಳಿಯಬರುವದು ಆ ಪರಮಾರ್ಥತತ್ತ್ವದ ಬೆಳಕಿನಿಂದಲೇ. ಹೀಗಿರುವಲ್ಲಿ ಚಂದ್ರನು ಅದನ್ನು ಬೆಳಗಿತೋರಿಸುವನೆಂದು ಭಾವಿಸುವದು ಹೇಗೆ ಸರಿಯಾದೀತು ? ಚಂದ್ರನ ಬೆಳಕು ಸೂರ್ಯನಿಂದಲೇ ಬಂದಿರುವ ಮಾರುಹೊಳಪು-ಎಂದು ಈಗಿನ ಭೌತಿಕಶಾಸ್ತ್ರಜ್ಞರು ಭಾವಿಸುತ್ತಾರೆ. ಸೂರ್ಯಚಂದ್ರರ ಬೆಳಕಿಲ್ಲದಾಗ ಕತ್ತಲೆಯಲ್ಲಿ ನಮಗೆ ವ್ಯವಹಾರದಲ್ಲಿ ಸಹಾಯಮಾಡುವ ಬೆಂಕಿಯ ಬೆಳಕು ಇಲ್ಲಿ ಏತಕ್ಕೆ ಬಂದೀತು ? ಈ ಪ್ರಕಾಶವಸ್ತುಗಳು ಅಪ್ರಕಾಶವಾಗಿರುವ ಕತ್ತಲೆಯಿಂದ ಆವೃತವಾಗಿರುವ ಅಚೇತನವಸ್ತುಗಳನ್ನು ಮಾತ್ರ ಬೆಳಗಬಲ್ಲವು. ಪರಮಾತ್ಮನನ್ನು ಸೂರ್ಯಾದಿಗಳು ಬೆಳಗದಿದ್ದರೂ ಅವಕ್ಕಿಂತ ಹೆಚ್ಚಿನದೊಂದು ಯಾವದೋ ಬೆಳಕು ತೋರಿಸಿಕೊಟ್ಟೀತೆಂದು ಕಲ್ಪಿಸುವಹಾಗಿಲ್ಲ; ಏಕೆಂದರೆ ಚೇತನಾಚೇತನಪದಾರ್ಥಗಳೆಲ್ಲವೂ ಆ ಆತ್ಮನ ನಿತ್ಯಚೈತನ್ಯ ಪ್ರಕಾಶದಿಂದಲೇ ಬೆಳಗುತ್ತಿರುವವು. ಆದ್ದರಿಂದ ಯಾವದೊಂದು ಬೆಳಕೂ ಪರಮಾತ್ಮನನ್ನು ಬೆಳಗಿತೋರಿಸುವಂತಿಲ್ಲ. ಆದರೆ ಪರಮಾತ್ಮನನ್ನು ತೋರಿಸುವದಕ್ಕೆ ಸಾಧನವಾಗಿ ಯಾವದೊಂದು ಬೆಳಕೂ ಬೇಡ, ಏಕೆಂದರೆ ನಮ್ಮ ಆತ್ಮನೇ ಆಗಿದ್ದುಕೊಂಡು ಎಲ್ಲವನ್ನೂ ನಾವು ಅರಿಯುವದಕ್ಕೆ ಕಾರಣವಾಗಿರುವ ಆ ಸ್ವಯಂಜ್ಯೋತಿಗೆ ಯಾವ ಸಾಧನವಾದರೂ ಏತಕ್ಕೆ ಬೇಕು ? ಪರಮಾತ್ಮಜ್ಞಾನಕ್ಕೆ ಸಾಧನವು ಬೇಡವೆಂಬುದಿಷ್ಟೇ ಅಲ್ಲ. ಅದು ನಿತ್ಯಪ್ರಾಪ್ತವಾಗಿರುವದೆಂದು ತಿಳಿದುಕೊಂಡಮಾತ್ರದಿಂದ ಆ ತತ್ತ್ವಕ್ಕೂ ನಮಗೂ ಇರುವ ಅಂತರವೂ ಮಾಯವಾಗಿಬಿಡುವದು. ಆದ್ದರಿಂದ ಆ ವೈಷ್ಣವಪದವನ್ನು ಪಡೆದ ಬಳಿಕವೂ ಮತ್ತೆ ಏನಾದರೊಂದು ನಿಮಿತ್ತದಿಂದ ಅದನ್ನು ಬಿಟ್ಟು ಹಿಂತಿರುಗಿಯೇವೆಂಬ ಅಂಜಿಕೆಯೂ ಇರುವದಿಲ್ಲ.

ಇದನ್ನೇ ಮುಂದಿನ ಶ್ಲೋಕಗಳಲ್ಲಿ ವಿವರಿಸಿದೆ. ನಾವು ಯಾವಾಗಲೂ ಪರಮಾತ್ಮನಲ್ಲಿಯೇ ಇರುವೆವು. ಆದ್ದರಿಂದ ನಮಗೆ ಅವನಿಂದ ನಿವೃತ್ತಿಯು ಆಗುವಂತೆಯೇ ಇಲ್ಲ. ಹೀಗಲ್ಲದೆ ಪರಮಾತ್ಮನಿಗೆ ನಾವು ಈಗ ದೂರವಾಗಿದ್ದು ಮೋಕ್ಷದಲ್ಲಿ ಅವನನ್ನು ಪಡೆಯುವೆವೆನ್ನುವದಾದರೆ ಅವನನ್ನು ಪಡೆದ ಬಳಿಕ ಮತ್ತೇಕೆ ಹಿಂತಿರುಗಬಾರದು ? `ಯದ್ಗತ್ವಾ

ನ ನಿವರ್ತನ್ತೇ'(ಆ ಪರಂಧಾಮವನ್ನು ಸೇರಿದ ಬಳಿಕ ಮತ್ತೆ ಹಿಂತಿರುಗುವದಿಲ್ಲ) ಎಂದು ಭಗವಂತನು ಹೇಳಿದ್ದು ಹೇಗೆತಾನೆ ಯುಕ್ತವಾದೀತು ? `ಸಂಯೋಗಾ ವಿಪ್ರಯೋಗಾನ್ತಾಃ' ಎಂಬಂತೆ ಒಂದರೊಡನೆ ಸೇರಿದ್ದು ಆದರಿಂದ ಅಗಲಲೂಬಹುದಲ್ಲವೆ ? ವಸ್ತುತತ್ತ್ವವು ಹೀಗಿಲ್ಲ. ಪರಮಾತ್ಮನ ಸಂಯೋಗವು ನಮಗೆ ನಿತ್ಯಸಂಯೋಗವು. ಇದನ್ನು ನಾವು ಅರಿತುಕೊಳ್ಳಲಾರದೆ ಒದ್ದಾಡುತ್ತಿರುವೆವು. ಅಶುಚಿರೂಪರಾಗಿ ಅಜ್ಞರಾಗಿ ಸಂಸಾರಬಂಧದಿಂದ ಕಟ್ಟುವಡೆದಿರುವ ನಾವು ನಿತ್ಯಶುದ್ಧಬುದ್ಧಮುಕ್ತನಾದ ಪರಮಾತ್ಮನಲ್ಲಿರುವೆವೆಂಬುದನ್ನು ಹೇಗೆ ನಂಬೋಣ ?- ಎಂದು ನಮಗೆ ಶಂಕೆಯು ಉಂಟಾಗುತ್ತಿರುವದು. ಪೋಲಿಬಿದ್ದ ಹುಡುಗನು ಮನೆಯನ್ನು ಬಿಟ್ಟು ಎಲ್ಲಿಗೋ ಓಡಿಹೋಗಿರುವ ಸ್ಥಿತಿಯಲ್ಲಿ ತನ್ನ ಮನೆಗೇ ಹಿಂದಿರುಗಲು ಅಂಜುವಂತೆ ನಾವು ಪರಮಾತ್ಮನ ಹತ್ತಿರಕ್ಕೆ ಹೋಗಲು ಅಂಜುತ್ತಿರುವೆವು. ಆದರೆ ಆ ಪರಮಾತ್ಮನ ದಯೆಯು ನಮಗೆ ಯಾವಾಗತಾನೆ ತಪ್ಪಿದ್ದೀತು ?

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀನ್ದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ 15-7**

ಪರಮಾತ್ಮನಿಗೆ ದೂರವಾಗಿರುವ ಸಂಸಾರಿಜೀವರು ನಾವೆಂದು ತಿಳಿಯುವದು ತಪ್ಪೆಂಬುದನ್ನು ಈ ಶ್ಲೋಕದಲ್ಲಿ ಹೇಳಿರುತ್ತದೆ. ಭಗವಂತನು ಎನ್ನುತ್ತಾನೆ, 'ಜೀವನು ನನ್ನದೇ ಅಂಶನಾಗಿರುತ್ತಾನೆ.' ನಾವು ಪರಮಾತ್ಮನ ಅಂಶರಾದ್ದರಿಂದ ಅವನಿಂದ ಕಿತ್ತುಕೊಂಡು ಈಚೆಗೆ ಹೊರಟಿರುವ ಅಂಶಭೂತರಾದ ಬೆಂಕಿಯ ಕಿಡಿಗಳಂತಿರುವೆವು ಎಂದು ಭಾವಿಸಬಾರದು ; ಏಕೆಂದರೆ ನಾವು ಪರಮಾತ್ಮನಿಗೇ ಅಂಶರಾಗಿರುವದರಿಂದ ಅವನಂತೆಯೇ ನಿತ್ಯಚೈತನ್ಯಸ್ವರೂಪರು ಎಂದು ಇಲ್ಲಿ ಹೇಳಿರುತ್ತದೆ. ಇಲ್ಲಿ ನಾವು ಅಂಶರೇ ಎಂದಿಲ್ಲ. ಪರಮಾತ್ಮನಿಗೇ ಅಂಶರು ಎಂದಿದೆ - ಎಂಬುದನ್ನು ಲಕ್ಷಿಸಬೇಕು. ಪರಮಾತ್ಮನು ಪೂರ್ಣನಾಗಿರುವಂತೆ ನಾವೂ ಪೂರ್ಣರೇ ಆಗಿರುತ್ತೇವೆ - ಎಂದು ಭಗವಂತನು ತಿಳಿಯಹೇಳಿರುತ್ತಾನೆ. ಇಲ್ಲಿ ಹೇಳಿರುವದು ಎಂಥ ಮಹತ್ತಿನ ಉಪದೇಶವೆಂಬುದನ್ನು ನಾವು ಮನದಂದುಕೊಳ್ಳಬೇಕು. ಇಲ್ಲಿ ತೋರುತ್ತಿರುವ ಜೀವರುಗಳಲ್ಲಿ ಎಷ್ಟೇ ತಾರತಮ್ಯವು ಕಾಣುತ್ತಿರಲಿ, ಪರಮಾರ್ಥವಾಗಿ ಅವರೆಲ್ಲರೂ ಪರಮಾತ್ಮನ ಅಂಶವೇ ಆಗಿರುತ್ತಾರೆ ; ಆ ದೃಷ್ಟಿಯಿಂದ ಎಲ್ಲರೂ ಸಮನಾಗಿರುತ್ತಾರೆ ಎಂಬುದು ಈ ಉಪದೇಶವು. ಗೋಂದಾವಳಿಯಲ್ಲಿ ಬ್ರಹ್ಮಚೈತನ್ಯಸದ್ಗುರುಮಹಾರಾಜರು ಇದ್ದರಷ್ಟೆ ; ಅವರು ರಾಮಮಂದಿರಕ್ಕೆ ಬಂದ ಹೊಸಬರಿಗೆ ಮಾಡುತ್ತಿದ್ದ ಉಪಚಾರವು 'ಗಣು' ಎಂಬ ಒಬ್ಬ ಶಿಷ್ಯನಿಗೆ ಸಹಿಸದಾಗಿತ್ತು. ನಾವು ನಿತ್ಯವೂ ಮಹಾರಾಜರಿಗೆ ಶಿಷ್ಯವೃತ್ತಿಯಿಂದ ಸೇವೆಮಾಡುತ್ತಿರುವೆವು ; ಆದರೆ ಜಂಭದಿಂದ ಬಂದು ಒಂದೆರಡು ದಿನವಿದ್ದು ಹೊರಟುಹೋಗುವ ಪರಸ್ಥಳದವರಿಗೇಕೆ ಇಷ್ಟೊಂದು ಉಪಚಾರ? - ಎಂಬುದು ಅವನ ಭಾವ. ಒಂದು ದಿನ ಅವನು ಈ ಭಾವನೆಯಿಂದ ಅವಿಷ್ಟನಾಗಿ ಸಿಟ್ಟಿನಿಂದ ಭೋಜನಕಾಲದಲ್ಲಿ ಎಲ್ಲಿಯೋ ಹೋಗಿ ಅವಿತುಕೊಂಡುಬಿಟ್ಟನು.

ಪರೋಕ್ಷಜ್ಞಾನಿಗಳಾಗಿದ್ದ ಮಹಾರಾಜರು ಇದನ್ನು ಅರಿತುಕೊಂಡು ಅವನಿದ್ದ ಕೋಣೆಯ ಬಾಗಿಲನ್ನು ತಟ್ಟಿ ಅವನನ್ನು ಕರೆದು ಹತ್ತಿರ ಕುಳ್ಳಿರಿಸಿಕೊಂಡು " ಅಪ್ಪ, ಒಂದೆರಡು ದಿನ ಬಂದಿರುವ ಬೀಗರಿಗೆ ಹೆಚ್ಚಿನ ಉಪಚಾರಗಳಾದಮಾತ್ರಕ್ಕೆ ತಂದೆಯ ಆಸ್ತಿಯೆಲ್ಲ ಅವರಿಗೆ ಹೋಗುವದೆಂದು ಅಂಜಬಹುದೆ ? ನನ್ನ ತಪಸ್ಸಿನ ಫಲವೆಲ್ಲ ಯಾರಿಗಾಗಿದೆ, ನಿನಗೆ ತಿಳಿಯದೆ?" ಎಂದು ಸಮಾಧಾನಮಾಡಿದರಂತೆ. ನಾವು ಪರಮಾತ್ಮನಿಗೇ ಮಕ್ಕಳು; ಇನ್ನು ನಮಗೆ ಪರಮಾತ್ಮನು ದೂರನಾಗಿರುತ್ತಾನೆಂಬಿದು ಹೇಗೆ ಸಂಗತವಾದೀತು ? ಈಗಲೇನೋ ಈ ಸಂಸಾರಮಂಡಲದಲ್ಲಿ ಜೀವರಾಗಿಬಿಟ್ಟಿರುತ್ತೇವೆ, ಆದರೆ ಬಿಳಿ ಚಿನ್ನವುಕೂಡ ಪುಟಕ್ಕೆ ಇಟ್ಟರೆ ಚೊಕ್ಕಚಿನ್ನವಾಗುವಂತೆ ನಾವು ಅವಿದ್ಯಾಕೃತವಾದ ಉಪಾಧಿಗಳ ಸಂಗವನ್ನು ತಪ್ಪಿಸಿಕೊಂಡಮಾತ್ರದಿಂದ ಪರಮಾತ್ಮನೆ ಆಗಿಬಿಡುವೆವು.

ಜೀವನು ಪರಮಾತ್ಮನಂತೆಯೇ ಸನಾತನನಾಗಿರುತ್ತಾನೆ, ಅವನಂತೆಯೇ ನಿತ್ಯಶುದ್ಧಬುದ್ಧ ಮುಕ್ತಸ್ವಭಾವನಾಗಿರುತ್ತಾನೆ. ಆದರೂ ಅವಿದ್ಯೆಯಿಂದ ಈಗ ಪ್ರಕೃತಿಸ್ಥವಾಗಿರುವ ಅಂತರ್ಬಹಿಃಕರಣಗಳನ್ನು ಎಳೆದುಕೊಂಡು ಓಡಾಡುತ್ತಿರುತ್ತಾನೆ. ಆಸೆಯಿಂದ ಒಬ್ಬ ಹೆಣ್ಣುಮಗಳು ತನಗೆ ಆಭರಣವೆಂದು ಗಂಡನು ಮಾಡಿಸಿಕೊಟ್ಟಚಿನ್ನದ ತಗಡುಹೊದಿಸಿದ ಗುಂಡುಕಲ್ಲನ್ನು ಕೊರಳಿಗೆ ಕಟ್ಟಿಕೊಂಡು ಓಡಾಡುತ್ತಿದ್ದಳಂತೆ ! ನಾಲ್ಕು ಜನರು ಹೊರುವಷ್ಟು ತೂಕವಾಗಿರುವ ಈ ಶರೀರವನ್ನು ನಮ್ಮದೆಂಬ ಅಭಿಮಾನದಿಂದ ಹೇಗೆ ಹಗುರವಾಗಿ ಹೊತ್ತುಕೊಂಡು ಓಡಾಡುತ್ತೇವೆ! ಜೀವನು ಸಾಯುವಾಗ ತನಗೆ ಬೇಕಾಗುವ ವಾಸನಾಸಂಭಾರವನ್ನೆಲ್ಲ ತೆಗೆದುಕೊಂಡು ಲಿಂಗಶರೀರದೊಡನೆ-ಉಪಸ್ಕಾರವನ್ನು ಭರ್ತಿಮಾಡಿರುವ ಗಾಡಿಯು ಗಡಗಡನೆ ಶಬ್ದಮಾಡಿಕೊಂಡು ಹೋಗುವಂತೆ-ಘುರುಘುರುಶಬ್ದವನ್ನು ಮಾಡುತ್ತಾ ಹೋಗಿ ಮತ್ತೊಂದು ಶರೀರವನ್ನು ಸೇರಿಕೊಳ್ಳುತ್ತಾನೆ ಎಂದು ಶ್ರುತಿ ಹೇಳುತ್ತದೆ. ಬಾಡಿಗೆಯ ಮನೆಯಲ್ಲಿ ವಾಸಮಾಡುವವರು ಒಂದಾಗುತ್ತಲೊಂದು ಮನೆಯನ್ನು ಸೇರಿಕೊಳ್ಳುವಂತೆ ಈ ಜೀವನು ಶರೀರದಿಂದ ಶರೀರಕ್ಕೆ ಹೋಗುವದೇ ತನ್ನ ಸ್ವಭಾವವೆಂದುಕೊಂಡುಬಿಟ್ಟಿರುತ್ತಾನೆ. ಕರ್ಮವೆಂಬುದು ಜೀವನಿಗೆ ಬಹುಭಾರ. ಈ ಭಾರವನ್ನು ಭಗವಂತನ ಅನುಗ್ರಹದಿಂದ ತತ್ತ್ವಜ್ಞಾನದಿಂದಲೇ ಇಳಿಸಿಕೊಳ್ಳಬೇಕಾಗಿದೆ. ಜೀವನು ತನ್ನ ಶರೀರಕ್ಕೆ ಒಡೆಯನಾಗಿರುವೆನೆಂದು ಹೆಮ್ಮೆಪಡುತ್ತಿದ್ದಾನೆ ; ಹೀಗೆ ಈಶ್ವರನಾಗಿದ್ದರೂ ವಾಯುವು ಹೂವು, ತಿಪ್ಪೆ - ಮುಂತಾದವುಗಳ ಗಂಧವನ್ನು ಹೊತ್ತುಕೊಂಡೇ ಓಡಾಡುವಂತೆ ಕರ್ಮವಶದಿಂದ ಈ ಇಂದ್ರಿಯಗಳನ್ನು ಎಳೆದುಕೊಂಡೇ ಶರೀರದಿಂದ ಶರೀರಕ್ಕೆ ಓಡಾಡಬೇಕಾಗಿರುತ್ತದೆ. ಅಯ್ಯೋ, ಈ ಜೀವರು ನನ್ನ ಅಂಶವೇ ಆಗಿದ್ದರೂ ಕರ್ಮಫಲದ ಮೂಟೆಯನ್ನು ಹೊತ್ತು ಹೊತ್ತು ಬಳಲುವರಲ್ಲ, ಶರೀರದಿಂದ ಶರೀರಕ್ಕೆ ಅಲೆಯುತ್ತಿರುವರಲ್ಲ !- ಎಂದು ಭಗವಂತನು ಆಕ್ರೋಶದಿಂದ ಈ ಜೀವವರ್ಣನೆಯನ್ನು ಮಾಡುತ್ತಿದ್ದಾನೆ.

ಈ ಜೀವನ ದುರವಸ್ಥೆಯನ್ನು ಏನೆಂದು ಹೇಳುವದು ! ಇವನು ಪರಮಾತ್ಮನ ಅಂಶವೇ ಆಗಿರುತ್ತಾನಾದ್ದರಿಂದ ನಿತ್ಯಚೈತನ್ಯಸ್ವರೂಪನೆ ಆದರೂ ವಾಸನೆಯ ಜ್ಞಾನಕ್ಕೆಂದು ಒಂದು ಮೂಗನ್ನು ಗಂಟುಹಾಕಿಕೊಂಡಿರುತ್ತಾನೆ, ಶಬ್ದವನ್ನು ಕೇಳುವದಕ್ಕೆ ಒಂದು ಕಿವಿ, ರೂಪವನ್ನು ನೋಡುವದಕ್ಕೆ ಕಣ್ಣು, ಮುಟ್ಟುವದಕ್ಕೆ ತ್ವಗಿಂದ್ರಿಯ, ಸವಿಯುವದಕ್ಕೆ ನಾಲಿಗೆ - ಹೀಗೆಲ್ಲ ಇಟ್ಟುಕೊಂಡೇ ಮನಸ್ಸಿನ ಮೂಲಕವಾಗಿಯೇ ಇವನು ವಿಷಯಗಳನ್ನು ಉಪಸೇವನೆ ಮಾಡಬೇಕಾಗಿದೆ. ಕಣ್ಣಿಗೆ ಕನ್ನಡಕವು ಬೇಕು, ಬಾಯಿಗೆ ಕೃತಕವಾದ ಹಲ್ಲುಗಳು ಬೇಕು - ಹೀಗೆ ಆಯಾ ಇಂದ್ರಿಯಗೋಳಕಗಳಿಗೆ ಸಹಾಯವಾಗಿರುವ ಕೃತಕಸಾಧನಗಳನ್ನು ಕೋರುತ್ತಿದ್ದಾನೆ, ಈ ಕಾರ್ಯಕರಣಗಳಿಂದ ಇವನು ಪರಿಚ್ಛಿನ್ನನಾಗಿ, ಧರ್ಮಾಧರ್ಮಗಳ ಮುಸುಕಿನಿಂದ ಮಂಕಾಗಿರುವ ಅರಿವಿನವನಾಗಿ ಕಾಣುತ್ತಿದ್ದರೂ ಇಂಥ ಶರೀರೇಂದ್ರಿಯಗಳೇ ಇವನಿಗೆ ಇರಬೇಕೆಂಬ ನಿಯಮವೇನೂ ಇಲ್ಲದ್ದರಿಂದ ಇವನು ಆ ಶರೀರೇಂದ್ರಿಯಗಳಿಗಿಂದ ವಿಲಕ್ಷಣವಾದ ಸ್ವರೂಪದವನೇ ಎಂದು ಸಿದ್ಧವಾಗುತ್ತದೆ. ಇಂದ್ರಿಯಗಳ ತಾದಾತ್ಮ್ಯವನ್ನು ಹೊಂದಿ 'ಅದನ್ನು ನೋಡುತ್ತೇನೆ, ಇದನ್ನು ಕೇಳುತ್ತೇನೆ, ಅದನ್ನು ಮೂಸುತ್ತೇನೆ, ಇದನ್ನು ಮುಟ್ಟುತ್ತೇನೆ' ಎಂದು ವಿವಿಧವಾದ ವಿಷಯಗಳ ಗ್ರಹಣದಿಂದ ಮೂಢರಾಗಿರುವವರು ವಿಷಯಗಳಲ್ಲಿಯೇ ವ್ಯಾಪೃತವಾದ ಚಿತ್ತವುಳ್ಳವರಾಗಿರುತ್ತಾರೆ. ವಿಷಯಗಳನ್ನು ನೋಡಿ ಬೆರಗಾಗುವ ಈ ಸಂಭ್ರಮದಲ್ಲಿ 'ನಾನು ದ್ರಷ್ಟೃವಿಗಿಂತಲೂ ಶ್ರೋತೃವಿಗಿಂತಲೂ ಮಂತೃವಿಗಿಂತಲೂ, ವಿಜ್ಞಾತೃವಿಗಿಂತಲೂ ಅತ್ಯಂತ ವಿಲಕ್ಷಣವಾದ ಆತ್ಮಸ್ವರೂಪನಾಗಿರುತ್ತೇನೆ. ಈ ರೂಪಗಳೆಲ್ಲ ಗುಣಗಳ ವಿಕಾರವಾಗಿರುವ ಇಂದ್ರಿಯಗಳಿಂದ ನನಗೆ ತೋರುತ್ತಿರುವವಾಗಿವೆ ; ನನ್ನ ಸ್ವರೂಪದಿಂದ ನಾನು ಈ ಪರಿಚ್ಛಿನ್ನವಾದ ಸ್ವರೂಪದವನಲ್ಲ' ಎಂಬ ತಿಳಿವಳಿಕೆಯು ಹೇಗೆತಾನೆ ಹೊಳೆಯಬೇಕು ? ಆದ್ದರಿಂದಲೇ ಭಗವಂತನು ಹೀಗೆಂದಿರುತ್ತಾನೆ ;

**ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಞ್ಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥ 15-10**

ದೇಹವನ್ನು ಬಿಟ್ಟು ಉತ್ಕ್ರಮಣಮಾಡುವಾಗ, ದೇಹದಲ್ಲಿ ನಿಂತಿರುವಾಗ, ಗುಣಗಳಿಗೆ ಸಂಬದ್ಧನಾಗಿ ವಿಷಯಗಳನ್ನು ಭೋಗಿಸುವಾಗ - ಎಂದೆಂದಿಗೂ ಪರಮಾತ್ಮಸ್ವರೂಪನೇ ಆಗಿರುವ ಈ ಜೀವನನ್ನು ವಿಮೂಢರು ಅರಿತು ಕೊಳ್ಳಲಾರದೆ ಇರುತ್ತಾರೆ. ಜ್ಞಾನಚಕ್ಷುಸ್ಸಿನಿಂದ ನೋಡುವವರು ಇವನು ಉಪಾಧಿಗಳಿಂದ ಎಷ್ಟೇ ಅಪೂರ್ಣನಾಗಿ ಕಂಡರೂ ಇವನ ಪರಿಪೂರ್ಣರೂಪದಿಂದಲೇ ಕಾಣುತ್ತಾರೆ. ಇದನ್ನೇ ಅಧ್ಯಾಯದ ಪ್ರಾರಂಭದಲ್ಲಿ "ಈ ಸಂಸಾರವೃಕ್ಷವನ್ನು ಸರಿಯಾಗಿ ಕಂಡವನೇ ವೇದಾರ್ಥವನ್ನು ಬಲ್ಲವನು" ಎಂದು ಹೇಳಿರುತ್ತದೆ. ಕರ್ಮಾನುಬಂಧಿಗಳಾದ ಬೇರುಗಳನ್ನು ವರ್ಣಿಸಿದ್ದರ ಉದ್ದೇಶವೇ ಇದು. ನಮ್ಮ ಮೂಲವು ಉತ್ಕೃಷ್ಟವಾದ ಪರಮಾತ್ಮನಲ್ಲಿದೆಯೇ ಹೊರತು ಕರ್ಮದಿಂದ ನಾವು ತೊಟ್ಟುಕೊಳ್ಳುತ್ತಿರುವ

ಕಾರ್ಯಕರಣಪಂಜರಗಳಲ್ಲಿಲ್ಲ ; ನಾವು ಎಂಥ ಉತ್ತಮವಾದ ದೇವಾದಿಶರೀರಗಳನ್ನು ತೊಟ್ಟರೂ ನಮ್ಮ ಸ್ವರೂಪವು ಅವಕ್ಕಿಂತಲೂ ವಿಲಕ್ಷಣವಾಗಿರುತ್ತದೆ, ಎಷ್ಟು ಅಧಮವಾದ ಸ್ಥಾವರಾಂತವಾದ ಶರೀರಗಳನ್ನು ತೊಟ್ಟರೂ ಅವಕ್ಕಿಂತಲೂ ವಿಲಕ್ಷಣವಾಗಿರುತ್ತದೆ. ಈಗ ಕರ್ಮಬದ್ಧವಾಗಿ ಕಾಣುವ ಈ ಮನುಷ್ಯಶರೀರವೂ ನಮ್ಮದಲ್ಲ, ನಾವು ನಿಜವಾಗಿ ಅಶರೀರರು, ಅಕರಣರು, ಸೂರ್ಯಾದಿಗಳನ್ನು ಕೂಡ ಬೆಳಗುವ ಸ್ವಯಂಪ್ರಕಾಶರೂಪರು. ಇದನ್ನು ತಿಳಿದರೇ ನಾವು ಜ್ಞಾನಚಕ್ಷುಸ್ಸುಳ್ಳವರೆನಿಸುತ್ತೇವೆ, ಇಲ್ಲದಿದ್ದರೆ ಅವಿವೇಕಿಗಳೆನಿಸುತ್ತೇವೆ.

## ೧೪೧. ಪರಮಾತ್ಮಸ್ವರೂಪ 15 - (10-14)
### (28-8-49)

"ಜೀವನು ನನ್ನದೇ ಅಂಶವು" ಎಂದು ಪರಮಾತ್ಮನು ಹೇಳಿರುವದನ್ನು ಮನಸ್ಸಿಗೆ ಚೆನ್ನಾಗಿ ಹಿಡಿಯಿಸಿಕೊಳ್ಳಬೇಕು. ಇಲ್ಲಿ 'ನನ್ನ' ಅಂಶವು ಎಂಬುದೇ ಮುಖ್ಯ, ನನ್ನ 'ಅಂಶವು' ಎಂಬುದು ಮುಖ್ಯವಲ್ಲ. ನಿಜವಾಗಿಯೂ ಜೀವನು ಪರಮಾತ್ಮನ ಅಂಶವೇ ಆಗಿದ್ದನೆಂದರೆ ಪರಮಾತ್ಮನು ಸಾವಯವಿ, ವಿನಾಶಿ ಎಂದಾಗುವದು. ಒಂದು ಹಿಡಿ ಬತ್ತವನ್ನು ತೋರಿಸಿ 'ಇದು ನಮ್ಮ ಗದ್ದೆಯ ಬತ್ತವು' ಎನ್ನುತ್ತಾರಷ್ಟೆ. ಆಗ ಗದ್ದೆಯ ಬತ್ತವು ಈ ಜಾತಿಯದು ಎಂಬುದು ವಿವಕ್ಷಿತವೇ ಹೊರತು ಗದ್ದೆ ಬತ್ತವು ಹಿಡಿಯ ಪ್ರಮಾಣವುಳ್ಳದ್ದೆಂದೇನೂ ಅರ್ಥವಲ್ಲ. ಹೀಗೆಯೇ ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುತ್ತಿರುವ, ಶರೀರವನ್ನು ಬಿಟ್ಟು ತೆರಳುವ, ಮತ್ತೊಂದು ಶರೀರವನ್ನು ಧರಿಸುವಂತಿರುವ ಈ ಜೀವನು ನಿಜವಾಗಿ ಪರಮಾತ್ಮನಿಗೇ ಅಂಶನಾಗಿರುತ್ತಾನೆ ಎಂದು ಇಲ್ಲಿ ಹೇಳಿರುತ್ತದೆ. ಹೀಗಿರುವದರಿಂದ ಎಲ್ಲಾ ಜೀವರಿಗೂ ಪರಮಾತ್ಮಭಾವವು ಸ್ವಾಭಾವಿಕವಾದದ್ದು, ಜನ್ಮಸಿದ್ಧವಾದ ಹಕ್ಕು - ಎಂದಾಯಿತು.

"ಜೀವನು ಎಲ್ಲೆಲ್ಲಿ ಓಡಾಡುತ್ತಿರುವನೋ ಅಲ್ಲೆಲ್ಲ ಈ ಕರಣಗಳನ್ನು ಎಳೆದುಕೊಂಡೇ ಹೋಗುತ್ತಿರುತ್ತಾನೆ. ಈ ಕಾರ್ಯಕರಣಗಳು ಇವನಿಗೆ ಗುರುತುಗಳೆಂದು ಭಾವಿಸಿ ಅವುಗಳ ಮೂಲಕವಾಗಿ ಯಾವನು ಇಂದ್ರಿಯಗಳಿಂದ ವಿವಿಧವಿಷಯಗಳನ್ನು ಅರಿಯುತ್ತಿರುವನೋ ಆ ಜ್ಞಾನಪ್ರಕಾಶವುಳ್ಳವನೇ ಆತ್ಮನು ಎಂದು ವಿವೇಕದಿಂದ ಜೀವನ ಪರಮಾರ್ಥಸ್ವರೂಪವನ್ನು ಅರಿತುಕೊಳ್ಳಬೇಕು. ದೇವಾಲಯಕ್ಕೆ ಹೋದದ್ದಕ್ಕೆ ಮನುಷ್ಯನಿಗೆ ಸಹಜವಾಗಿರುವ ಪ್ರಪಂಚ ವ್ಯವಹಾರದ ಭಾವನೆ ಹೋಗಿ ದೇವಭಕ್ತಿಭಾವವು ಬರಬೇಕು ; ಅದೇ ದೇವಾಲಯಕ್ಕೆ ಗುರುತು. ಅಲ್ಲಿಯೂ ದುಷ್ಟಭಾವನೆಗಳೇ ಬರುತ್ತಿದ್ದರೆ 'ದೇವಾಲಯ' ಎಂಬ ಹೆಸರು ಅದಕ್ಕೆ ಹೇಗೆ ಸಲ್ಲಬೇಕು ? ದೇವಾಲಯದಲ್ಲಿ ದೇವರಿಗೆ ಒಪ್ಪಿಸಿದ ತೆಂಗಿನಕಾಯಿ, ತಾವು ಡಬ್ಬಿಯಗಡಿಗೆಯಲ್ಲಿ ಹಾಕಿದ ದಕ್ಷಿಣೆ, ಅಥವಾ ದೇವರಿಗೆ ಮಾಡಿಸಿದ ಅಭಿಷೇಕ - ಇಂಥ

ಆಲೋಚನೆಗಳೇ ಬಲವಾಗಿರುವವರು ಅನೇಕರು ಇರುತ್ತಾರೆ. ಪೂಜಕನೂ ತನ್ನ ಸಂಪಾದನೆಯ ಕಡೆಗೇ ಲಕ್ಷ್ಯವಿಟ್ಟಿರುತ್ತಾನೆ. ಇವರಿಬ್ಬರ ನಡುವೆ ದೇವರ ಭಾವನೆ ಎಲ್ಲಿಯೋ ತಪ್ಪಿಸಿಕೊಂಡು ಹೋಗಿರುತ್ತದೆ. ಪೂಜಾರಿಯೂ ತನಗೆ ಬರಬೇಕಾದ ಕಾಯಿಹೋಳು, ದಕ್ಷಿಣೆ - ಮುಂತಾದವುಗಳ ಕಡೆಗೇ ಲಕ್ಷ್ಯವನ್ನು ಕೊಡುವದಾದರೆ ಅವನು ನಿತ್ಯವೂ ದೇವಾಲಯದಲ್ಲಿ ಈಶ್ವರನನ್ನು ಪೂಜಿಸುತ್ತಾನೆನ್ನುವದಕ್ಕಿಂತ ಆ ದ್ರವ್ಯಗಳನ್ನೇ ಪೂಜಿಸುತ್ತಿರುತ್ತಾನೆಂಬುದು ಯುಕ್ತವು ; ಆ ಪೂಜೆಗೆ ಸುಳ್ಳು ಮೋಸ ಮುಂತಾದವುಗಳೇ ಮಂತ್ರತಂತ್ರಗಳಾಗಿರುತ್ತವೆಯಲ್ಲವೆ? ಶರೀರದಲ್ಲಿರುವ ಜೀವರೂ ಹೀಗೆಯೇ. ದೇಹವೇ ದೇವಾಲಯವು, ಜೀವನು ನಿಜವಾಗಿ ಸನಾತನನಾದ ದೇವನು ; ಅಜ್ಞಾನದ ನಿರ್ಮಾಲ್ಯವನ್ನು ತ್ಯಜಿಸಿ ಸೋಽಹಂ ಭಾವದಿಂದ ಪೂಜಿಸಬೇಕು - ಎಂದು ಸ್ಮೃತಿವಾಕ್ಯವಿದೆ. ಆದರೂ ನಾವು ಜೀವರು, ಶರೀರೇಂದ್ರಿಯಗಳಿಗೆ ಕಟ್ಟುಬಿದ್ದವರು, ಧರ್ಮಾಧರ್ಮಗಳನ್ನು ಮಾಡಿ ಸ್ವರ್ಗನರಕಗಳನ್ನು ಪಡೆಯುತ್ತಿರುವವರು - ಎಂಬ ಹೀನಭಾವನೆಯು ಅನೇಕರನ್ನು ಬಿಡುವದೇ ಇಲ್ಲ.

ಆದರೆ ಜ್ಞಾನಚಕ್ಷುಗಳಾದವರಿಗೆ ಈ ವ್ಯವಹಾರದ ಪ್ರಪಂಚವು ಕಾಣಿಸುವದೇ ಇಲ್ಲ. ಅವರ ಕಣ್ಣಿಗೆ ಎಲ್ಲೆಲ್ಲಿಯೂ ಪರಮಾತ್ಮನೇ ಕಾಣಿಸುತ್ತಿರುತ್ತಾನೆ. ಅವರ ಮುಂದೆ ಯಾವ ಲೌಕಿಕದೃಶ್ಯಗಳು ಕುಣಿದಾಡುತ್ತಿದ್ದರೂ ಅವರಿಗೆ ಆತ್ಮದೃಷ್ಟಿಯು ತಪ್ಪುವದೇ ಇಲ್ಲ, ಒಮ್ಮೆ ವ್ಯಾಸರ ಮಕ್ಕಳಾದ ಶುಕರು ತಂದೆಯ ಅಪ್ಪಣೆಯ ಪ್ರಕಾರ ಜನಕನ ಬಳಿಗೆ ತತ್ತ್ವೋಪದೇಶಕ್ಕಾಗಿ ಬಂದರು. ಆಗ ಜನಕನು ಅವರಿಗೆ ಎಷ್ಟೋ ದಿನಗಳವರೆಗೆ ದರ್ಶನವನ್ನೇ ಕೊಡಲಿಲ್ಲ. ಆದರೂ ಆಜನ್ಮವಿರಕ್ತರಾದ ಶುಕರು ತಮಗೆ ಅಪಮಾನವಾಯಿತೆಂದಾಗಲಿ ದ್ವಾರಪಾಲಕರು ತಮ್ಮನ್ನು ಅರಮನೆಯ ಒಳಕ್ಕೆ ಬಿಡಲಿಲ್ಲವೆಂದಾಗಲಿ ಭಾವಿಸಿಕೊಳ್ಳಲೇ ಇಲ್ಲ. ತಾವು ನಿರೀಕ್ಷಿಸುತ್ತಿದ್ದ ತತ್ತ್ವೋಪದೇಶದ ಚಿಂತನೆಯಲ್ಲಿಯೇ ಮುಳುಗಿಬಿಟ್ಟಿದ್ದರು! ಕೊನೆಗೆ ರಾಜನ ಭೇಟಿಯು ಅವರಿಗೆ ದೊರೆಯಿತು. ಜನಕನು ಅವರಿಗೆ ಒಂದು ನಿದರ್ಶನದಿಂದ ತತ್ತ್ವವನ್ನು ಉಪದೇಶಿಸುವದಕ್ಕೆ ಪ್ರಯತ್ನಿಸಿದನು. ಶುಕರ ತಲೆಯ ಮೇಲೆ ಒಂದು ನೀರುತುಂಬಿದ ಕುಂಭವನ್ನಿರಿಸಿ ತನ್ನ ರಾಜಧಾನಿಯಲ್ಲಿ ಮೆರವಣಿಗೆಮಾಡಿಸಿಕೊಂಡು ಬರುವಂತೆ ಏರ್ಪಾಡುಮಾಡಿದನು. ಶುಕರು ಊರಲ್ಲೆಲ್ಲ ತಿರುಗಾಡಿಬಂದರು. ಅವರ ಮುಂದೆ ವಿವಿಧವಾದ ವಾದ್ಯಗಳನ್ನು ಬಾರಿಸುತ್ತಿದ್ದರೂ ವಿವಿಧನರ್ತನಾದಿಗಳನ್ನು ಮಾಡುತ್ತಿದ್ದರೂ ಅವರ ಮನಸ್ಸಿಗೆ ಅದು ಹತ್ತಲೇ ಇಲ್ಲ ; ರಾಜಧಾನಿಯಲ್ಲಿದ್ದ ದೊಡ್ಡದೊಡ್ಡ ಭವನಗಳಾಗಲಿ ಜನರು ದಾರಿಯಲ್ಲಿ ಅವರಿಗೆ ಮಾಡಿದ ಮನ್ನಣೆಯಾಗಲಿ ಅವರ ಚಿತ್ತದಲ್ಲಿ ಯಾವ ಪ್ರತಿಕ್ರಿಯೆಯನ್ನೂ ಮಾಡಲಿಲ್ಲ. ಅರಮನೆಗೆ ಬಂದಾಗ 'ರಾಜಧಾನಿಯಲ್ಲಿ ಏನೇನು ನೋಡಿಬಂದಿರಿ ?' ಎಂದು ಜನಕನು ಕೇಳಿದನು. 'ನೀನು ಹೇಳಿದಂತೆ ನಾನು ಕುಂಭವನ್ನೊಂದನ್ನೇ ಲಕ್ಷ್ಯವಾಗಿಟ್ಟುಕೊಂಡಿದ್ದೆನು ; ಉತ್ಸವವನ್ನು ಮುಗಿಸಿಕೊಂಡು ಬೇಗನೆ ಅರಮನೆಗೆ ಬಂದು ನಿನ್ನ ಉಪದೇಶವಾಕ್ಕನ್ನು ಕೇಳಬೇಕೆಂಬುದೇ ನನ್ನ ಮನಸ್ಸಿನಲ್ಲಿ ನಿಂತಿತ್ತು' ಎಂದರು, ಶುಕರು!

ಜ್ಞಾನಚಕ್ಷುಗಳಾದವರಿಗೆ ಜೀವನ ವಿವಿಧವಾದ ಕಾರ್ಯಕರಣಗಳ ಪಂಜರಗಳಾಗಲಿ ಅವುಗಳ ಮೂಲಕ ಅವನು ಅನುಭವಿಸುತ್ತಿರುವ ವಿಷಯೋಪಸೇವನೆ, ಜನನಮರಣ, ಗತ್ಯಾಗತಿಗಳು-ಇವುಗಳಾಗಲಿ ಮನಸ್ಸಿಗೆ ಹತ್ತುವದಿಲ್ಲ ; ಇವೆಲ್ಲವನ್ನೂ ಬೆಳಗುತ್ತಿರುವ ಅತ್ಯಂತ ಸ್ವಚ್ಛವಾದ ಚೈತನ್ಯಪ್ರಕಾಶರೂಪನಾದ ಪರಮಾತ್ಮನ ಸ್ವರೂಪವೊಂದೇ ಅವರ ಲಕ್ಷ್ಯದಲ್ಲಿರುತ್ತದೆ.

ಉತ್ಕ್ರಮಣಹೊಂದುವ, ಮತ್ತು ವಿಷಯಭೋಗಗಳನ್ನು ಮಾಡುವ ಜೀವನನ್ನು ಎಲ್ಲರೂ ಕಾಣುತ್ತಿರುತ್ತಾರೆ. ಆದರೆ ಯೋಗಿಗಳಾದವರು, ಪರಮಾತ್ಮಸ್ವರೂಪದಲ್ಲಿಯೇ ತಮ್ಮ ಜ್ಞಾನದ ಸಂಬಂಧವನ್ನು ಇಟ್ಟುಕೊಂಡಿರುವವರು - ಆ ಪರಮಾತ್ಮಸ್ವರೂಪವನ್ನೇ ಕಾಣುತ್ತಿರುತ್ತಾರೆ. ಹಣಮನೆ, ಹೊಲಗದ್ದೆ, ಆಳುಕಾಳು - ಇವುಗಳಲ್ಲಿ ನಮ್ಮ ಲಕ್ಷ್ಯವು ಇರುವಂತೆ ಪರಮಾತ್ಮನಲ್ಲಿಯೇ ಲಕ್ಷ್ಯವಿಟ್ಟಿರುವವರೇ ಯೋಗಿಗಳು. ಯೋಗಿಗಳು ಮಾತ್ರ ಪ್ರಯತ್ನದಿಂದ ಆ ಪರಮಾತ್ಮನನ್ನು ತಮ್ಮ ಸ್ವರೂಪದಲ್ಲಿಯೇ ಕಂಡುಕೊಳ್ಳುತ್ತಾರೆ. ಇಂದ್ರಿಯಗಳನ್ನು ವಿಷಯಗಳಿಂದ ಹಿಮ್ಮೆಟ್ಟಿಸಿ ಮನೋಬುದ್ಧಿಗಳಲ್ಲಿ ಲಯಮಾಡಿಕೊಂಡು ಆ ಮನೋಬುದ್ಧಿಗಳನ್ನು ಆತ್ಮಸ್ವರೂಪದಲ್ಲಿ ಲಯಮಾಡಿಕೊಳ್ಳುವದೇ ಯೋಗವು. ಈ ಅಧ್ಯಾತ್ಮಯೋಗದಿಂದಲೇ ಆತ್ಮನನ್ನು ಕಂಡುಕೊಳ್ಳುವವರು ಹರ್ಷ ಶೋಕಗಳನ್ನು ಮೀರುವರೆಂದು ಶ್ರುತಿ ಹೇಳುತ್ತಿದೆ. ನಿದ್ರೆಯಲ್ಲಿ ಸ್ವಾಭಾವಿಕವಾಗಿಯೇ ನಮ್ಮಗಳಿಗೆಲ್ಲ ಇಂದ್ರಿಯವ್ಯಾಪಾರಗಳು ನಿಂತು ಪರಮಾತ್ಮನಲ್ಲಿ ಸೇರುವೆಯಾಗುತ್ತದೆ ; ಆದರೆ ಅಷ್ಟುಮಾತ್ರದಿಂದ ನಾವು ಯಾರೂ ಯೋಗಿಗಳೆನಿಸುವದಿಲ್ಲ. ವಿಷಯಗಳಲ್ಲಿ ಜಿಹಾಸೆಗಳಿಂದ ಇಂದ್ರಿಯಗಳ ವ್ಯಾಪಾರವನ್ನು ಪ್ರಯತ್ನಪೂರ್ವಕವಾಗಿ ನಿಲ್ಲಿಸಿ ಹಿಂದುಹಿಂದಕ್ಕೆ ಸರಿದು ನಮ್ಮಲ್ಲಿ ನಾವು ಪರಮಾತ್ಮನನ್ನು ಕಂಡುಕೊಳ್ಳುವದೇ ಅಧ್ಯಾತ್ಮಯೋಗವು. ಆದರೆ ಅನೇಕರಿಗೆ ಪ್ರಯತ್ನಮಾಡಿದರೂ ಯೋಗವು ದಕ್ಕುವದಿಲ್ಲ. ಏಕೆಂದರೆ ಅವರು ಅಕೃತಾತ್ಮರಾಗಿರುತ್ತಾರೆ. ತಪಸ್ಸು, ಇಂದ್ರಿಯಜಯ ಮುಂತಾದುವುಗಳಿಂದ ಅವರ ಮನಸ್ಸಿಗೆ ಸಂಸ್ಕಾರವಾಗಿರುವದಿಲ್ಲ. ಅವರು ದುರಾಚಾರಗಳನ್ನು ಬಿಟ್ಟಿರುವದಿಲ್ಲ. ಅವರ ದರ್ಪವು ಶಾಂತವಾಗಿರುವದಿಲ್ಲ. ಇಂಥವರು ಮಾಡುವ ಪ್ರಯತ್ನವಾದರೂ ಎಷ್ಟು ಬಲವಾಗಿದ್ದೀತು? ಇಂಥವರಿಗೆ ಪರಮಾತ್ಮದರ್ಶನವಾದರೂ ಹೇಗಾದೀತು? ಸಂಸ್ಕಾರವಿಲ್ಲದವರ ಮನಸ್ಸು ನಿರ್ಮಲವಾಗಿರುವದಿಲ್ಲ, ಸ್ಥಿರವಾಗಿ ನಿಲ್ಲುವದೂ ಇಲ್ಲ. ಅಂಥ ಅಚೇತಸರೂ ಅಕೃತಾತ್ಮರೂ ಆಗಿರುವವರು ಪ್ರಯತ್ನಮಾಡಿದರೂ ಅವರಿಗೆ ಆತ್ಮದರ್ಶನವು ದೊರಕಲಾರದು. ಊರಿನಲ್ಲಿ ತಾನೇ ಕಟ್ಟಿಸಿರುವ ದೇವಸ್ಥಾನಕ್ಕೂ ವಾರಕ್ಕೆ ಒಂದುಸಲವಾದರೂ ಹೋಗುವದಕ್ಕೆ ಬಿಡುವಿಲ್ಲವೆಂದು ಗೊಣಗುಟ್ಟುವ ವ್ಯವಹಾರನಿರತನಂತೆ ನಮ್ಮಲ್ಲಿ ಅನೇಕರು ನಮ್ಮ ನಮ್ಮ ಶರೀರದಲ್ಲಿಯೇ ಇರುವ ದೇವರನ್ನು ನೋಡುವದಕ್ಕೆ ವಿರಾಮವಿಲ್ಲದೆ ಹೊರಗಿನ ವ್ಯವಹಾರದಲ್ಲಿಯೇ ಮುಳುಗಿರುತ್ತಾರೆ.

ಇದುವರೆಗೆ ಜೀವನು ಪರಮಾತ್ಮನ ಅಂಶವೇ ಆಗಿರುವದರಿಂದ ತನ್ನ ಸ್ವರೂಪದಲ್ಲಿಯೇ ಆ ಪರಮಾತ್ಮನನ್ನು ಕಂಡುಕೊಳ್ಳಬೇಕೆಂದು ಹೇಳಿದ್ದಾಯಿತು. ಯಾವನು ತನ್ನಲ್ಲಿ ಪರಮಾತ್ಮನನ್ನು ಕಂಡುಕೊಳ್ಳುವನೋ ಅವನಿಗೆ ಎಲ್ಲೆಲ್ಲಿಯೂ ಪರಮಾತ್ಮನೇ ಕಾಣುತ್ತಾನೆ. ಆದ್ದರಿಂದ ಪರಮಾತ್ಮನನ್ನು ಆಧ್ಯಾತ್ಮಿಕರೂಪದಿಂದ ಉಪದೇಶಿಸಿದ ಬಳಿಕ ಈಗ ಅಧಿಭೌತಿಕ, ಆಧಿದೈವಿಕಾದಿ ರೂಪಗಳಿಂದ ಆ ಪರಮೇಶ್ವರನೇ ಪ್ರಕಟವಾಗಿರುತ್ತಾನೆಂಬುದನ್ನು ತಿಳಿಸುವದಕ್ಕೆ ಹೊರಟಿದೆ. ಎಲ್ಲೆಲ್ಲಿಯೂ ಪರಮಾತ್ಮನನ್ನೇ ಕಂಡುಕೊಂಡರೆ "ಊರ್ಧ್ವ ಮೂಲಮ್" ಎಂಬ ಸೂತ್ರವಾಕ್ಯದ ಅಭಿಪ್ರಾಯವನ್ನು ತಿಳಿದುಕೊಂಡಂತೆ ಆಗುವದು. ಇದಕ್ಕೆ ಯೋಗ್ಯತೆಯಿಲ್ಲದವರು ಜೀವಮಾತ್ರಕ್ಕೆ ಸಹಜವಾಗಿ ಬಾಹ್ಯದೃಷ್ಟಿಯಿಂದ ನೋಡುವ ವಸ್ತುಗಳಲ್ಲೆಲ್ಲ ಪರಮಾತ್ಮನ ವಿಭೂತಿಯನ್ನು ಚಿಂತಿಸಿಯಾದರೂ ಕೃತಾರ್ಥರಾಗಬಹುದು ಎಂಬುದು ಗೀತೆಯ ಆಶಯ.

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್॥ 15-12**

"ಸೂರ್ಯನಲ್ಲಿರುವ ತೇಜಸ್ಸು ಎಲ್ಲಾ ಜಗತ್ತನ್ನೂ ಬೆಳಗುತ್ತಿರುವದಷ್ಟೆ. ಹೀಗೆಯೇ ಚಂದ್ರನಲ್ಲಿಯೂ ಅಗ್ನಿಯಲ್ಲಿಯೂ ವಸ್ತುಗಳನ್ನು ಬೆಳಗುವ ತೇಜಸ್ಸಿದೆಯಷ್ಟೆ, ಅದನ್ನು ತನ್ನ ತೇಜಸ್ಸೇ ಎಂದು ತಿಳಿ" ಎಂದು ಭಗವಂತನು ಉಪದೇಶಿಸಿರುತ್ತಾನೆ. ಸೂರ್ಯಾದಿಗಳಲ್ಲಿ ಪರಮಾತ್ಮನ ತೇಜಸ್ಸನ್ನು ಕಾಣುವದಕ್ಕೂ ಯೋಗ್ಯತೆ ಬೇಕು. ದೊಡ್ಡದೊಡ್ಡಪಟ್ಟಣಗಳಲ್ಲಿ ಹಗಲೆಲ್ಲ ವ್ಯವಹಾರವನ್ನು ಮಾಡಿ ಆಯಾಸಪರಿಹಾರಕ್ಕೆಂದು ಏಕಾಂತಸ್ಥಲವನ್ನು ಹುಡುಕಿಕೊಂಡು ಉದ್ಯಾನವನವೇ ಮುಂತಾದ ಸ್ಥಳಕ್ಕೆ ಜನರು ಬರುವದನ್ನು ನಿಮ್ಮಲ್ಲಿ ಕೆಲವರಾದರೂ ಕಂಡಿರಬಹುದು. ಆದರೆ ಅಲ್ಲಿಗೆ ಹೀಗೆ ಏಕಾಂತಕ್ಕೆಂದು ಬಂದವರೇ ಹಲವರು ಸೇರಿರುವದರಿಂದ ಅದು ಏಕಾಂತಕ್ಕೆ ಬದಲು ಅನೇಕಾಂತವಾಗಿಬಿಡುತ್ತದೆ. ಹೊರಗೆ ಪರಮಾತ್ಮನನ್ನು ಹುಡುಕುವದಕ್ಕೆ ಬರುವವರೂ ಹೀಗೆಯೇ; ಅಲ್ಲಿ ಪರಮಾತ್ಮನನ್ನು ಕಾಣುವದಕ್ಕೆ ಅವಕಾಶವಿದ್ದರೂ ಅವರು ಅವುಗಳನ್ನೆಲ್ಲ ವ್ಯವಹಾರಕ್ಕೆ ಸೇರಿಸಿಕೊಂಡುಬಿಟ್ಟಿರುತ್ತಾರೆ. ಹೊರನೋಟವು ಮನುಷ್ಯನಿಗೆ ಸ್ವಭಾವವಾಗಿದೆ, ಅಲ್ಲಿ ಪರಮಾತ್ಮನ ವಿಭೂತಿಗಳೂ ಇವೆ; ಆದರೆ ಅವನ್ನೂ ವಿಷಯವಾಸನೆಯ ದೃಷ್ಟಿಯಿಂದ ನೋಡುತ್ತಿರುವದರಿಂದ ಅಲ್ಲಿಯೂ ಅವರಿಗೆ ಪರಮಾತ್ಮನು ಕಾಣದಂತೆ ಆಗಿಬಿಟ್ಟಿದೆ. ಮೈಗೆಲ್ಲ ಕೆಸರುಬಳಿದುಕೊಂಡವನು ಶುದ್ಧಸ್ಥಳವನ್ನೂ ತಾನು ಮುಟ್ಟಿದ ಶುದ್ಧವಸ್ತುಗಳನ್ನೂ ಕೊಳಕುಮಾಡುವಂತೆ ವಿಷಯವಾಸನಾವಾಸಿತನಾದ ಜೀವನು ಏನನ್ನು ನೋಡಿದರೂ ಅಲ್ಲಿರುವ ಆತ್ಮನನ್ನು ಆ ವಾಸನೆಯಿಂದ ಮುಚ್ಚಿಯೇ ನೋಡುತ್ತಾನೆ. ಸೂರ್ಯ ಚಂದ್ರಾದಿಗಳ ಬೆಳಕಿನಲ್ಲಿ ಪರಮಾತ್ಮನ ತೇಜಸ್ಸನ್ನು ನೋಡುವದೆಂದರೇನು? - ಎಂದು ಜನರಿಗೆ ಶಂಕೆಯುಂಟಾಗುತ್ತದೆ. ವ್ಯಾವಹಾರಿಕರಾದ ನಾವು ನಮಗೆ ಕಾಣುವ ಎಲ್ಲಾ ವಸ್ತುಗಳನ್ನೂ ನಮಗೆ ಸಂಬಂಧಿಸಿಕೊಂಡೇ ನೋಡುತ್ತೇವೆ. ಒಂದು ಕೋಳಿ ತಿಪ್ಪೆಯಲ್ಲಿದ್ದ ಕಸವನ್ನು ಕೆದರಿಕೆದರಿ ನೋಡುತ್ತಿರಲು ಅದಕ್ಕೆ

ಒಂದು ರತ್ನವು ಸಿಕ್ಕಿತಂತೆ. "ಅಯ್ಯೋ, ಇದೊಂದು ಜೋಳದ ಕಾಳಾದರೂ ಆಗಬಾರದಾಗಿತ್ತೆ!" ಎಂದು ಅದು ವ್ಯಥೆಪಟ್ಟಿತಂತೆ. ಹೀಗೆಯೇ ಪ್ರಾಕೃತಜನರು ಎಲ್ಲಾ ವಸ್ತುಗಳನ್ನೂ ತಮ್ಮ ತಮ್ಮ ಆಶೆಯ ಕಣ್ಣಿನಿಂದಲೇ ಕಾಣುತ್ತಿರುವರು. ಆದ್ದರಿಂದ ಯಾವದನ್ನೂ ಇದ್ದದ್ದು ಇದ್ದಂತೆ ಕಾಣುವದಕ್ಕೆ ಅವರಿಗೆ ಅವಕಾಶವಿರುವದಿಲ್ಲ. ಇದರಿಂದಲೇ ಅವರಿಗೆ ಅಲ್ಲಿ ಪರಮಾತ್ಮನನ್ನು ಕಾಣಲು ಕಷ್ಟವಾಗಿರುತ್ತದೆ.

ಸೂರ್ಯನು ಎಲ್ಲರಿಗೂ ಸಮಾನವಾಗಿಯೇ ಉದಯಿಸುತ್ತಾನೆ, ಎಲ್ಲರಿಗೂ ಸಮಾನವಾಗಿಯೇ ತನ್ನ ಬೆಳಕನ್ನು ಬೀರುತ್ತಾನೆ, ಶಾಖವನ್ನು ಕೊಡುತ್ತಾನೆ. ಆದರೂ ಸೂರ್ಯನನ್ನು ಕಂಡರೆ ಎಲ್ಲರಿಗೂ ಆನಂದವಾಗುವದಿಲ್ಲ; ಆನಂದವಾಗುವವರಲ್ಲಿಯೂ ಎಲ್ಲರಿಗೂ ಸಮಾನವಾದ ಆನಂದವಾಗುವದಿಲ್ಲ. ಕಳ್ಳರು 'ಅಯ್ಯೊ' ಸೂರ್ಯೋದಯ ಸಮಯವಾಯಿತಲ್ಲ!' ಎಂದು ಕೊರಗುವರು ; ಸೋಮಾರಿಗಳಿಗೆ `ಮಲಗುವದಕ್ಕೆ ಇನ್ನಷ್ಟು ರಾತ್ರಿಯಿಲ್ಲವಲ್ಲ!' ಎನ್ನಿಸಬಹುದು; ಸೂರ್ಯೋದಯದ ವ್ಯವಹಾರವನ್ನು ಮಾಡುವವರು ಅವರವರ ಕೆಲಸಕ್ಕೆ ತಕ್ಕಂತೆ ಸೂರ್ಯನ ಬೆಳಕನ್ನು ಉಪಯೋಗಿಸಬಹುದು. ಅವರವರ ಕೆಲಸಕ್ಕೆ ಪ್ರತಿಕೂಲವಾದರೆ ಸೂರ್ಯನನ್ನು ಬಯ್ಯಲೂಬಹುದು. ಉಪನಿಷತ್ತಿನಲ್ಲಿ ಎಲ್ಲಾ ಪ್ರಾಣಿಗಳ ಕರ್ಮದ ಫಲವೇ ಸೂರ್ಯನೆಂದಿದೆ. ಇದರ ಅಭಿಪ್ರಾಯವೇನೆಂದರೆ ನಾವು ನಮ್ಮ ನಮ್ಮ ಕರ್ಮಗಳಲ್ಲಿ ನಿರತರಾಗಿದ್ದರೆ ಸೂರ್ಯನು ಆಯಾ ಕರ್ಮಗಳ ಫಲವನ್ನು ಕೊಡುತ್ತಾನೆ. ಸಕಾಲದಲ್ಲಿ ಮಳೆ ಬೆಳೆ ಆಗಿ ಶರೀರವು ಆರೋಗ್ಯವಾಗಿ ಹೃಷ್ಟಪುಷ್ಟವಾಗಿರುವದಕ್ಕೆ ಸೂರ್ಯನೇ ಕಾರಣವು ; ಮನಸ್ಸಿನ ಸ್ಥಿತಿಯು ಶಾಂತಿಸಮಾಧಾನಗಳಿಂದ ಇರುವದಕ್ಕೆ ಸೂರ್ಯನು ಕಾರಣನು. ರೇಡಿಯೋ ಕೇಳುವದಕ್ಕೆಂದು ಜನರು ನೆರೆದಿರುವ ಕಡೆಯಲ್ಲಿಯೂ ಕೆಲವರು ಕಳ್ಳತನ, ಹಣದ ವಸೂಲಿ, ವರ್ತಮಾನಸಂಗ್ರಹ ಮುಂತಾದವುಗಳಲ್ಲಿ ವ್ಯಾಪೃತರಾಗಿರುವರಲ್ಲವೆ? ಹೀಗೆಯೇ ಸೂರ್ಯಚಂದ್ರಾದಿಗಳ ಬೆಳಕಿನಿಂದ ಎಲ್ಲರೂ ಶುದ್ಧಾನಂದವನ್ನೇ ಪಡೆದುಕೊಳ್ಳುವದಿಲ್ಲ; ತಮ್ಮ ತಮ್ಮ ವ್ಯವಹಾರದಲ್ಲಿ ತಾವು ತಾವು ನಿರತರಾಗಿರುತ್ತಾರೆ. ಅಂಥವರಿಗೆ ಅಲ್ಲಿ ಸೂರ್ಯಾದಿಗಳ ತೇಜಸ್ಸು ಪರಮಾತ್ಮನದೇ ಎಂಬ ಭಾವನೆಯು ಎಂದಿಗೂ ಬರಲಾರದು. ಪರಮಾತ್ಮನ ಚೈತನ್ಯದ ಸತ್ತೆಯೇ ಸೂರ್ಯಾದಿಗಳ ಸತ್ತೆ; ಪರಮಾತ್ಮನ ಸ್ಫುರಣವೇ ಸೂರ್ಯಾದಿಗಳಲ್ಲಿ ಕಾಣುವ ಸ್ಫುರಣವು. ಎಲ್ಲೆಲ್ಲಿ ಯಾವ ಯಾವ ತೇಜಸ್ಸು ಕಂಡರೂ ಅದಕ್ಕೆ ಪರಮೇಶ್ವರನೇ ಆತ್ಮನಾಗಿರುತ್ತಾನೆಂಬ ಭಾವನೆಯನ್ನು ಸಾಧಕನಾದವನು ಅಭ್ಯಾಸಮಾಡಬೇಕು.

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥ 15-13**

"ಭೂಮಿಯನ್ನೆಲ್ಲ ನಾನೇ ಹೊತ್ತು, ಅದರ ಮೇಲಿರುವ ಪ್ರಾಣಿಗಳನ್ನೆಲ್ಲ ನಾನೇ ಎತ್ತಿ ಹಿಡಿದುಕೊಂಡಿರುತ್ತೇನೆ" ಎಂದು ಭಗವಂತನು ಹೇಳಿರುವದರ ಅಭಿಪ್ರಾಯವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಭೂಮಿಗೆ ಆಕರ್ಷಣಶಕ್ತಿಯಿರುವದರಿಂದ ವಸ್ತುಗಳು ಭೂಮಿಯ ಕಡೆಗೇ ಬರುವವು, ಅವು ನಿಂತಿರುವದಕ್ಕೆ ಭೂಮಿಯು ಆಧಾರವಾಗಿದೆ - ಎಂದು ಭೌತಿಕಶಾಸ್ತ್ರದೃಷ್ಟಿಯವರು ಹೇಳುತ್ತಿರುವರಷ್ಟೆ. ಅದಕ್ಕೇನೂ ಈ ವಚನವು ವಿರುದ್ಧವಲ್ಲ. ಆಕರ್ಷಣಶಕ್ತಿಯೆಂಬುದು ಪರಮಾತ್ಮನದೇ. ಎಲ್ಲೆಲ್ಲಿ ಯಾವ ಶಕ್ತಿಯಿದ್ದರೂ ಸರ್ವಮೂಲವಾಗಿರುವ ಪರಮಾತ್ಮನ ಶಕ್ತಿಗಿಂತ ಅದು ಬೇರೆಯಾಗಿರಲಾರದು. "ಮೊಹೆಂಜೊದಾರೊ" ಮುಂತಾದ ಪಟ್ಟಣಗಳನ್ನು ನಮ್ಮ ಭೂಸಂಶೋಧಕರು ಕಂಡುಹಿಡಿದಿದ್ದಾರಷ್ಟೆ. ಈಗ ಆ ಪಟ್ಟಣಗಳು ನಮ್ಮ ಭೂಮಿಯ ಮಟ್ಟದಲ್ಲಿಲ್ಲ, ಅವುಗಳ ಮೇಲೂ ನದಿಯು ಹರಿದುಹೋಗಿದೆ! ಅಷ್ಟು ನಾಗರಿಕತೆಗೇರಿದ ಪಟ್ಟಣವು ಕೆಳಕ್ಕೆ ಕುಸಿಯುವದಕ್ಕೂ ಪರಮಾತ್ಮನ ಶಕ್ತಿಯೇ ಕಾರಣವು. ಪರಮಾತ್ಮನಿಂದ ವಿಮುಖರಾದವರು, ಪರಮಾತ್ಮನ ಶಕ್ತಿಯಿಂದ ಎದ್ದು ಈಗ ನಿಂತಿರುವವರುಕೂಡ, ಆತನ ಒತ್ತಾಸೆಯಿಲ್ಲದೆ ಕೆಳಕ್ಕೆ ಕುಸಿಯಬಹುದೆಂಬುದಕ್ಕೆ ಅವು ಉದಾಹರಣೆ.

ಚಂದ್ರನು ರಸಾತ್ಮಕನು. ಚಂದ್ರನೇ ಎಲ್ಲಾ ಸಸ್ಯಗಳನ್ನೂ ಪೋಷಿಸಿ ರಸವನ್ನು ತನ್ನ ಅಮೃತಕಿರಣಗಳಿಂದ ಒದಗಿಸಿಕೊಡುತ್ತಾನೆಂದು ವೈದಿಕರ ನಂಬಿಕೆ. ಸೂರ್ಯಚಂದ್ರರ ಬಿಸಿತಂಪುಗಳು ತಕ್ಕ ಪರಿಮಾಣದಲ್ಲಿ ಒದಗದಿದ್ದರೆ ಈ ಭೂಮಿಯಲ್ಲಿರುವ ಸ್ಥಾವರಜಂಗಮಪ್ರಾಣಿಗಳು ಹೇಗಿರುತ್ತಿದ್ದವೋ, ಸಸ್ಯಗಳ ಪಾಕಕ್ರಮವು ಹೇಗಿರುತ್ತಿತ್ತೋ ಹೇಳುವದು ಅಸಾಧ್ಯ. ಭೂಮಿ, ಚಂದ್ರ ಇವುಗಳಲ್ಲಿ ನಮ್ಮಗಳಿಗೆ ಈಗ ಪೂಜ್ಯಬುದ್ಧಿಯಿಲ್ಲ. ಹಾಲು ಮಾರುವವರು ದುರಾಶೆಯಿಂದ ಹಸುವಿನ ಕೆಚ್ಚಲಿನಿಂದ ಹಾಲನ್ನೆಲ್ಲ ಯಂತ್ರಸಹಾಯದಿಂದ ಹಿಂಡಿಕೊಳ್ಳುತ್ತಾರೆಂದು ಕೇಳುತ್ತೇವೆ; ಹಾಗೆಯೇ ಈಗಿನ ಹೊಸ ಕೃಷಿಕರ್ಮದಿಂದ ಜನರು ಭೂಮಿಯಿಂದ ಎರಡು ಮೂರು ಪೈರನ್ನು ತೆಗೆಯುವದಿಲ್ಲ, ಅದರ ಸಾರವನ್ನೆಲ್ಲ ತೆಗೆದುಕೊಳ್ಳುತ್ತಿದ್ದಾರೆ; ಭೂಗರ್ಭಶಾಸ್ತ್ರದ ಪರಿಚಯವನ್ನು ಮಾಡಿಕೊಂಡು ವೇಗವೇಗವಾಗಿ ಭೂಮಿಯೊಳಗಿನಿಂದ ಖನಿಜಗಳನ್ನು ತೆಗೆಯುತ್ತಲೇ ಇರುತ್ತಾರೆ. ಹೀಗಾದರೆ ಭೂಮಿಯು ನಿಸ್ಸಾರವಾಗದೆ ಇದ್ದೀತೆ? ಅದರಲ್ಲಿ ಬೆಳೆಯುವ ಪೈರುಪಚ್ಚೆಗಳಲ್ಲಿ ರುಚಿಯು ಕಡಿಮೆಯಾಗದೆ ಇದ್ದೀತೆ?

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ 15-14**

"ನಾನೇ ವೈಶ್ವಾನರನಾಗಿ ಪ್ರಾಣಿಗಳ ದೇಹವನ್ನು ಆಶ್ರಯಿಸಿಕೊಂಡಿರುತ್ತೇನೆ; ಪ್ರಾಣಾಪಾನವ್ಯಾಪಾರಗಳಿಂದ ಸಂಯುಕ್ತನಾಗಿ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ-ಎಂಬ

ಚತುರ್ವಿಧವಾದ ಅನ್ನವನ್ನು ಪಚನಮಾಡುತ್ತಿದ್ದೇನೆ" ಎಂದು ಭಗವಂತನು ಹೇಳುತ್ತಾನೆ. ಮನುಷ್ಯರ ಮತ್ತು ಪ್ರಾಣಿಗಳ ದೇಹದಲ್ಲಿರುವ ಅಗ್ನಿಗೆ ವೈಶ್ವಾನರನೆಂದು ಹೆಸರು; ಏಕೆಂದರೆ ಎಲ್ಲಾ ಜೀವರಲ್ಲೂ ಆ ಅಗ್ನಿಯು ಅನ್ನವು ಜೀರ್ಣವಾಗುವದಕ್ಕೂ ಶರೀರವು ಕೆಲಸಮಾಡಿಕೊಂಡು ಆರೋಗ್ಯದಿಂದಿರುವದಕ್ಕೂ ಸಹಾಯಕವಾಗಿರುತ್ತದೆ. ಶರೀರಶಾಸ್ತ್ರ ರೀತಿಯಿಂದ ಶರೀರದಲ್ಲಿ ಬಿಸಿ ಹೇಗೆ ಉಂಟಾಗಿರುವದೆಂಬುದನ್ನು ತಿಳಿದುಕೊಂಡುಬಿಟ್ಟರೆ ಸಾಲದು. ಈ ಶಾಖವು ನಿಜವಾಗಿ ಪರಮಾತ್ಮನ ಒಂದು ವಿಭೂತಿ ಎಂಬುದನ್ನು ನಾವು ಮನದಂದುಕೊಳ್ಳಬೇಕು. ಪರಮಾತ್ಮನೇ ನಿಜವಾಗಿ ವೈಶ್ವಾನರನು. ಆತನು ಎಲ್ಲರಿಗೂ ಆತ್ಮನಾಗಿರುವ ಬ್ರಹ್ಮವಾಗಿರುತ್ತಾನೆ. ಪ್ರಾಣಾಪಾನವ್ಯಾನೋದಾನಸಮಾನಗಳು ಆತನ ಸಂನಿಧಿಯಲ್ಲಿ ದೇಹದಲ್ಲಾಗುವ ವ್ಯಾಪಾರಗಳು. ಆದ್ದರಿಂದ ವೈಶ್ವಾನರವಿದ್ಯೆಯನ್ನು ಉಪದೇಶಪಡೆದಿರುವವರು ಊಟ ಮಾಡುವಾಗ "ಪ್ರಾಣಾಯ ಸ್ವಾಹಾ!" ಎಂದು ಮುಂತಾಗಿ ಐದು ಆಹುತಿಗಳನ್ನು ಪರಮೇಶ್ವರನಿಗೆ ಹೋಮಮಾಡಬೇಕು, ಉಳಿದ ಅನ್ನವು ಆ ಪರಮಾತ್ಮನ ಪ್ರಸಾದವೆಂದು ಸ್ವೀಕರಿಸಬೇಕು. ಪರಮಾತ್ಮನೇ ಅಗ್ನಿ, ಸೋಮ-ಎಂಬ ಭೋಕ್ತೃಭೋಜ್ಯರೂಪದಿಂದ ಸರ್ವಾತ್ಮಕನಾಗಿರುತ್ತಾನೆ ಎಂಬ ಭಾವನೆಯಿಂದ ಊಟಮಾಡಿದರೆ ಅನ್ನದೋಷವು ಲೇಪವಾಗುವದಿಲ್ಲ ಎಂದು ಶಾಸ್ತ್ರದಲ್ಲಿ ಹೇಳಿದೆ. ಊಟಮಾಡುವಾಗ ಹೀಗೆ ಭಗವದ್ಭಾವನೆಯಿಂದ ಸಮಾಧಾನಚಿತ್ತರಾಗಿದ್ದರೆ ಆ ಅನ್ನವು ನಿಜವಾಗಿ ಹಸಿವನ್ನಡಗಿಸುವದಲ್ಲದೆ ತುಷ್ಟಿಪುಷ್ಟಿಗಳನ್ನೂ ಕೊಟ್ಟು ಸಾತ್ತ್ವಿಕಭಾವನೆಯನ್ನೂ ಬೆಳೆಯಿಸುತ್ತದೆ. ಗೋಂದಾವಳಿಯಲ್ಲಿದ್ದ ಶ್ರೀ ಬ್ರಹ್ಮಚೈತನ್ಯಮಹಾರಾಜರು ಊಟಕ್ಕೆ ಸಿದ್ಧಗೊಳಿಸುವ ರೊಟ್ಟಿಗೆ ತರುವ ಆಹಾರ, ಅದಕ್ಕಾಗಿ ತರುವ ನೀರು, ರೊಟ್ಟಿಯನ್ನು ತಟ್ಟಿ ಬೇಯಿಸುವ ಪದ್ಧತಿ - ಇವುಗಳಲ್ಲೆಲ್ಲ ರಾಮನಾಮವನ್ನು ಬೆರೆಯಿಸುವ ಪದ್ಧತಿಯನ್ನು ಆಚರಣೆಗೆ ತಂದಿದ್ದರು. ಅಲ್ಲಿದ್ದ ಜನರು ಯಾವಾಗಲೂ ರಾಮನಾಮವನ್ನು ಗಾನಮಾಡುತ್ತಲೇ ಇರುತ್ತಿದ್ದರು. ಊಟಮಾಡುವಾಗಲಂತೂ ನಡುನಡುವೆ "ಜಯ ಜಯ ಶ್ರೀರಾಮ ! ಜಯ ಹರಿ ಶ್ರೀರಾಮ!" ಎಂಬ ಭಜನೆಯ ಘೋಷವು ಕೇಳಿಬರುತ್ತಿತ್ತು. ಅಂಥ ಆಹಾರವು ಉಂಡವರ ಚಿತ್ತದ ಮೇಲೂ ದೇಹದ ಮೇಲೂ ಎಂಥ ಪರಿಣಾಮವನ್ನು ಮಾಡಿರಬೇಕು.!

ಅನ್ನದಲ್ಲಿ, ಊಟಮಾಡುವಾತನಲ್ಲಿ, ಅದನ್ನು ಅರಗಿಸುವ ಅಗ್ನಿಯಲ್ಲಿ ಹೊರಗೆ ಸೂರ್ಯಚಂದ್ರಾದಿಗಳಲ್ಲಿ, ಕೆಳಗಿರುವ ಭೂಮಿಯಲ್ಲಿ, ಅದರ ಮೇಲೆ ಬೆಳೆಯುವ ಸಸ್ಯಗಳಲ್ಲಿ, ಇಲ್ಲಿ ಕಾಣುವ ಪ್ರಾಣಿಗಳಲ್ಲಿ, ಎಲ್ಲೆಲ್ಲಿಯೂ ಬ್ರಹ್ಮಬುದ್ಧಿಯನ್ನು ಮಾಡುತ್ತಾಬಂದರೆ ಬ್ರಹ್ಮಕ್ಕಿಂತ ಬೇರೆಯೊಂದಿಲ್ಲ; ಬ್ರಹ್ಮವು ನಾನು, ನೀನು, ಮತ್ತೊಂದು - ಎಲ್ಲವೂ ಆಗಿದೆ ಎಂಬ ಬುದ್ಧಿಯೇ ನಮ್ಮ ವ್ಯಕ್ತಿತ್ವಜ್ಞಾನವನ್ನು ಕಳೆಯುವ ಮಹಾಸ್ತ್ರವಾಗುವದು; ಈ ಭಾವನೆಯಿಂದಲೇ ಮೇಲೆ ಹೇಳಿದ ಅಸಂಗಶಸ್ತ್ರವು ಕೈವಶವಾಗುವದು, "ಊರ್ಧ್ವಮೂಲಮ್" ಎಂಬ ತತ್ತ್ವಾರ್ಥವು ಮನದಟ್ಟಾಗುವದು.

ಒಟ್ಟು ಸಾರವೇನೆಂದರೆ ಜೀವತತ್ತ್ವವನ್ನು ಶೋಧನೆಮಾಡುವದಕ್ಕೆ ಹೊರಟರೆ ದೇಹೇಂದ್ರಿಯಸಂಘಾತಕ್ಕಿಂತ ವಿಲಕ್ಷಣನಾದ ಶುದ್ಧಚೈತನ್ಯರೂಪನಾದ ಪರಮಾತ್ಮನೇ ಜೀವನು ಎಂಬ ಅರಿವಾಗುವದು. ಆ ಬಳಿಕ ಪರಮಾತ್ಮನೇ ಹೊರಗೂ ಒಳಗೂ ಎಲ್ಲೆಲ್ಲಿಯೂ ಇರುತ್ತಾನೆ ಎಂಬ ಅರಿವು ಮನದಲ್ಲಿ ಮಿಂಚುವದು. ಅಲ್ಲಿಂದ ಮುಂದಕ್ಕೆ ನಮ್ಮ ತತ್ತ್ವಜ್ಞಾನಪ್ರಾಪ್ತಿಗೆ ಅಡ್ಡಿಯಾಗಿದ್ದ ದೃಶ್ಯಗಳು ಕೂಡ ನಮಗೆ ಪರಮಾತ್ಮಭಾವನೆಯಿಂದ ರೂಪಾಂತರವನ್ನು ಹೊಂದಿ ಅನುಕೂಲವಾಗಿಯೇ ಮಾರ್ಪಡುವವು. ಶ್ರೀರಾಮಕೃಷ್ಣಪರಮಹಂಸರಿಗೆ ಒಬ್ಬ ಸುಂದರಿಯಾದ ಸ್ತ್ರೀಯ ನೋಟದಿಂದ ಸೀತಾದೇವಿಯ ಸ್ಮರಣೆಯೇ ಬಂದು ಭಾವಸಮಾಧಿಯು ಬಂದಿತಂತೆ! ಪರಮಾತ್ಮಭಾವನೆಯನ್ನು ಅಳವಡಿಸಿಕೊಂಡವರಿಗೆ ಎಂದೆಂದಿಗೂ ಸಹಜವಾಗಿ ಆನಂದಸಮಾಧಿಯು ಸಂನಿಹಿತವಾಗಿರುತ್ತದೆ.

ಈಗ ಗಣಪತಿಯ ಹಬ್ಬವು ಬಂದಿದೆ. ಪರಮಾತ್ಮಭಾವನೆಗೆ ಇದೊಂದು ಉತ್ತಮಸಂನಿವೇಶವೆಂದು ನಾವು ಎಣಿಸಬೇಕು. ಪರಮಾತ್ಮಭಾವನೆಗೆ ಅಡ್ಡಿಯನ್ನು ಕಳೆಯಲು ಆ ವಿಘ್ನೇಶ್ವರನನ್ನೇ ಶರಣುಹೊಂದಬೇಕು. ಭಕ್ತಶರಣ್ಯನಾದ ವಿಘ್ನೇಶ್ವರನು ತನ್ನ ಸೊಂಡಿಲಿನಿಂದ ವಿಘ್ನಾಟವಿಯನ್ನೇ ಧ್ವಂಸಮಾಡುವನೆಂದು ಭಾವಿಸಿರಿ; ತನ್ನ ಶೂರ್ಪಕರ್ಣದಿಂದ ಉತ್ತಮವಾದ ಭಾವಗಳ ತಂಗಾಳಿಯನ್ನು ಬೀರುವನೆಂದು ಭಾವಿಸಿರಿ. ಅಡ್ಡಿಗಳೆಂಬಿವು ನಮಗೆ ಈ ಅವಸ್ಥೆಯಲ್ಲಿ ಅಡ್ಡಿಗಳಾಗಿದ್ದರೂ ನಿಜವಾಗಿ ಅವೂ, ಆ ಪರಮಾತ್ಮನೇ ಆಗಿವೆ. ಎಲ್ಲೆಲ್ಲಿಯೂ ಪರಮಾತ್ಮನೇ ಎಂಬ ಭಾವನೆಯನ್ನು ಬಲಪಡಿಸಿಕೊಂಡವರಿಗೆ ಅಡ್ಡಿಗಳೂ ಅಡ್ಡಿಗಳಾಗಿ ನಿಲ್ಲುವದಿಲ್ಲ. ಎಲ್ಲಾ ಸಿದ್ಧಿಗಳನ್ನೂ ದಯಪಾಲಿಸುವ ವರಸಿದ್ಧಿವಿನಾಯಕನು ನಮಗೆ ಈ ಸಿದ್ಧಿಯನ್ನು ಪಾಲಿಸಲಿ ! ಪರಮಾತ್ಮನೇ ಎಲ್ಲಕ್ಕೂ ಮೂಲವು, ಎಲ್ಲಕ್ಕೂ ಆಧಾರವು, ಎಲ್ಲಾ ರೂಪದಿಂದಲೂ ತೋರಿಕೊಳ್ಳುವವನು ಎಂಬ ಜ್ಞಾನಕ್ಕೆ ಏರುವದಕ್ಕೆ ಈ ಭಾವನೆಯು ನಿಚ್ಚಣಿಕೆಯಾಗಲಿ!



# ೧೪೨. ಪುರುಷೋತ್ತಮಸ್ವರೂಪ 15 - (15-19)
## (4.9.49)

· ಸಂಸಾರವೆಲ್ಲವೂ ಪರಮಾತ್ಮನಿಂದ ಬಂದಿದ್ದು ಅವನಲ್ಲಿಯೇ ಇದ್ದುಕೊಂಡಿದೆ, ಮುಂದೆ ಅವನಲ್ಲಿಯೇ ಸೇರುವದು; ಆದ್ದರಿಂದ ಅವನೇ ಎಲ್ಲವೂ ಆಗಿರುತ್ತಾನೆ- ಎಂಬುದನ್ನು ತಿಳಿದುಕೊಂಡರೆ ಎಲ್ಲಾ ವೇದವನ್ನೂ ತಿಳಿದುಕೊಂಡಂತಾಯಿತು. ಜೀವನು ಪರಮಾತ್ಮನ ಅಂಶವೇ; ಆದ್ದರಿಂದ ಜೀವರುಗಳಲ್ಲಿ ಎಷ್ಟು ಉಚ್ಚನೀಚಭಾವಗಳು ತೋರುತ್ತಿದ್ದರೂ ಜ್ಞಾನಚಕ್ಷುಸ್ಸಿನಿಂದ ನೋಡುವವರಿಗೆ ಜೀವನ ನಿಜವಾದ ಸ್ವರೂಪವು ಹೇಗೆ ಪರಮಾತ್ಮನಲ್ಲಿ ಒಂದಾಗಿರುವದೆಂಬುದು ತಿಳಿಯುವದು, ವಿಷಯಾಸಕ್ತರಿಗೆ ಈ ನಿಜವು ತಿಳಿಯಲಾರದು - ಎಂದು ಹೇಳಿದ್ದಾಗಿದೆ.

ಜೀವನು ಪರಮಾತ್ಮನಲ್ಲಿ ಒಂದಾಗಿರುತ್ತಾನೆಂಬುದನ್ನು ಸಾಮಾನ್ಯರು ತಪ್ಪಾಗಿ ಅರ್ಥಮಾಡಿಕೊಳ್ಳುವ ಸಂಭವವಿದೆ. ಸ್ವಾತಂತ್ರ್ಯವೆಂದರೆ ಸ್ವೇಚ್ಛಾ ವಿಹಾರವೆಂದು ಅನೇಕರು ತಿಳಿದುಕೊಳ್ಳುವಂತೆ ನಾನು ಪರಮಾತ್ಮನೇ ಎಂಬುದನ್ನು ತಪ್ಪಾಗಿ ತಿಳಿದುಕೊಂಡು ಅಹಂಭಾವಕ್ಕೆ ಅವಕಾಶವನ್ನು ಕಲ್ಪಿಸಿಕೊಳ್ಳುವದು ಹಲವರಲ್ಲಿ ಕಂಡುಬಂದಿರುತ್ತದೆ. ಈ ವಿವಿಧ ಅಹಂಕಾರಕ್ಕೆ ಎಡೆಯಿಲ್ಲದಿರಲೆಂದೇ ಜೀವನು ಪರಮಾತ್ಮನದೇ ಅಂಶವು, ಎಂದು ಭಗವಂತನು ಹೇಳಿರುತ್ತಾನೆ. ಉತ್ಕೃಷ್ಟಜೀವರುಗಳಾದ ಆದಿತ್ಯಾದಿಗಳನ್ನು ಈ ಸಂದರ್ಭದಲ್ಲಿ ಉದಾಹರಿಸುವದಕ್ಕೂ ಇದೇ ಕಾರಣ. ಸೂರ್ಯಾದಿಗಳು ಪರಮಾತ್ಮನ ವಿಭೂತಿಗಳು ಎಂದು ತಿಳಿಸುವದಕ್ಕೆ ಮಾತ್ರವಲ್ಲ; ಸೂರ್ಯಾದಿಗಳಲ್ಲಿರುವ ಮಹತ್ತ್ವವು ಪರಮಾತ್ಮನದೇ, ಪರಮಾತ್ಮನೇ ಸೂರ್ಯಾದಿರೂಪದಿಂದ ತೋರುತ್ತಿದ್ದಾನೆ ಎಂದು ತಿಳಿಸುವದಕ್ಕೆ. ಒಂದು ಮಗು ಹೊಸದಾಗಿ ಮಗ್ಗಿಯನ್ನು ಕಲಿಯುವದಕ್ಕೆ ಪ್ರಾರಂಭಿಸಿದಾಗ ತನಗೆ ಗಣಿತಶಾಸ್ತ್ರದ ತಿಳಿವಳಿಕೆಯು ಹೆಚ್ಚಾಗಿದೆ ಎಂಬುದನ್ನು ತೋರಿಸುವದಕ್ಕೆ "ಅಮ್ಮ, ನನಗೆ ಆಗಲೆ ಒಂದೊಂದಲು ಒಂದು - ಎಂಬವರೆಗೂ ತಿಳಿಯಿತು" ಎಂದು ಕೊಚ್ಚಿಕೊಂಡಿತಂತೆ! "ನಾನು ಬ್ರಹ್ಮವೇ" ಎಂದು ಘೋಷಣೆಮಾಡುವ ಎಷ್ಟೋ ಜನರು ನಿಜವಾಗಿ ಆ ಮಗುವಿನ ಸ್ಥಾನದಲ್ಲಿರುತ್ತಾರೆ. "ನಾನು ಬ್ರಹ್ಮವು" ಎಂಬ ವಾಕ್ಯದ ಅರ್ಥವೇನೂ ಅವರಿಗೆ ತಿಳಿದಿರುವದಿಲ್ಲ; ಅದರಿಂದ ಅವರಿಗೆ ಯಾವ ಲಾಭವೂ ಆಗಿರುವದಿಲ್ಲ, ಅವರ ಅಹಂಕಾರವು ಮಾತ್ರ ಸ್ವಲ್ಪ ಉಬ್ಬಿಕೊಂಡಿರುತ್ತದೆ. ಅಷ್ಟೆ. ಗೋಲಕೊಂಡದಲ್ಲಿ ಕೋಹಿನೂರ್ ವಜ್ರವು ಒಬ್ಬ ರೈತನಿಗೆ ತನ್ನ ಹೊಲದಲ್ಲಿ ಸಿಕ್ಕಿತೆಂಬ ಕಥೆಯನ್ನು ನೀವು ಕೇಳಿರಬಹುದು. ಆ ರೈತನಿಗೆ ಹೊಲದಲ್ಲಿ ಪೈರುಬೆಳೆಯುವದು ತಿಳಿದಿತ್ತೇ ಹೊರತು ವಜ್ರದ ಬೆಲೆಯೇನೂ ತಿಳಿದಿರಲಿಲ್ಲ. ಅದರ ಬೆಲೆಯನ್ನು ಕಟ್ಟುವದಕ್ಕೆ ರತ್ನಪಡಿವ್ಯಾಪಾರಿಯೇ ಬೇಕಾಯಿತು. ಅದರಂತೆ ನಮ್ಮಲ್ಲಿ ನಮ್ಮ ಆತ್ಮನ ತಿರುಳೇ ಆಗಿ ಪರಮಾತ್ಮನು ಇರುತ್ತಿದ್ದರೂ ಆ ಪರಮಾತ್ಮನು ನಮ್ಮ ಪಾಲಿಗಿಲ್ಲ; ಜ್ಞಾನಚಕ್ಷುಸ್ಸುಳ್ಳವರಿಗೆ ಮಾತ್ರ ಅವನು ಕಾಣಿಸುತ್ತಾನೆ.

ಆದಿತ್ಯಾದಿಗಳಲ್ಲಿ ಆಯಾ ವಿಶೇಷರೂಪದಿಂದ ಪರಮಾತ್ಮನು ತೋರಿಕೊಳ್ಳುತ್ತಾನೆಂಬುದು ನಿಜ; ಆದರೆ ಅವನು ಆಯಾ ಆದಿತ್ಯಾದಿಶರೀರಕ್ಕೆ ಮಾತ್ರ ಕಟ್ಟುಬಿದ್ದಿಲ್ಲ, ಇದನ್ನು ಭಗವಂತನು ಹೀಗೆಂದು ತಿಳಿಸಿರುತ್ತಾನೆ:

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ।**

**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾನ್ತಕೃದ್ ವೇದವಿದೇವ ಚಾಹಮ್ ॥ 15-15**

ಭಗವಂತನು ಎಲ್ಲರ ಹೃದಯದಲ್ಲಿಯೂ ಇರುತ್ತಾನೆ; ಆ ಭಗವಂತನಿಂದಲೇ ಜೀವರುಗಳಿಗೆ ನೆನಪೂ ಜ್ಞಾನವೂ ಅವುಗಳ ಅಗಲುವಿಕೆಯೂ ಆಗುವವು. ಯಾವ ಜೀವರು ಎಷ್ಟೆಷ್ಟು ಪುಣ್ಯಾತಿಶಯದಿಂದ ಉತ್ಕೃಷ್ಟರಾಗಿರುವರೋ ಅವರವರ ಸತ್ತ್ವಶುದ್ಧಿಗೆ ಅನುಗುಣವಾಗಿ ಅಷ್ಟಷ್ಟುಮಟ್ಟಿಗೆ ಅವರಿಗೆ ಪರಮಾತ್ಮನ ನೆನಪೂ ಅನುಭವವೂ ಆಗುವವು: ಮತ್ತು ಯಾರುಯಾರು ಎಷ್ಟೆಷ್ಟುಪಾಪಾತಿಶಯದಿಂದ ಆವೃತರಾಗಿರುವರೋ ಅವರವರ ಚಿತ್ತಮಾಲಿನ್ಯಕ್ಕೆ ಅನುಗುಣವಾಗಿ ಅಷ್ಟಷ್ಟುಮಟ್ಟಿಗೆ ಅವರವರಿಗೆ ಪರಮಾತ್ಮಜ್ಞಾನಸ್ಮೃತಿಗಳು ದೂರವಾಗಿರುವವು. ಹಿರಣ್ಯಕಶಿಪು ತನ್ನ ಮಗನನ್ನು ನೀನು `ವಿಷ್ಣು', `ವಿಷ್ಣು' ಎಂದು ಬಾರಿಬಾರಿಗೂ ಕರೆಯುವೆಯಲ್ಲ, ಅವನು ಎಲ್ಲಿರುತ್ತಾನೆ? ಎಂದು ಕೇಳಿದ್ದಕ್ಕೆ ಆ ಪ್ರಹ್ಲಾದನು `ನನ್ನಲ್ಲಿ, ನಿನ್ನಲ್ಲಿ, ಈ ಎಲ್ಲಾ ಚರಾಚರಗಳಲ್ಲಿಯೂ ಇರುತ್ತಾನೆ' ಎಂದು ಉತ್ತರವನ್ನು ಕೊಟ್ಟನಂತೆ. ಆದರೆ ಈ ತತ್ತ್ವವು ಭಕ್ತವರನಾದ ಪ್ರಹ್ಲಾದನಿಗೆ ಸ್ಫುಟವಾಗಿದ್ದಂತೆ ಹಿರಣ್ಯಕಶಿಪುವಿಗೆ ಆಗಿರಲಿಲ್ಲ; ಆ ವಿಷ್ಣುವು ನನ್ನ ಹೃದಯದಲ್ಲಿಯೇ ಇದ್ದರೆ ನನಗೇಕೆ ಗೋಚರವಾಗಲಿಲ್ಲ! ಎಂದು ಅವನಿಗೆ ಆಶ್ಚರ್ಯವಾಯಿತು. ಪೃಥಿವಿ, ಆದಿತ್ಯ, ಮೊದಲಾದ ದೇವತೆಗಳಲ್ಲಿಯೂ ಅವರೊಳಗೇ ಅಂತರ್ಯಾಮಿಯಾಗಿ ಪರಮಾತ್ಮನು ಇರುತ್ತಿದ್ದರೂ ಆ ದೇವತೆಗಳಿಗೆ ನಮ್ಮೊಳಗೆ ಪರಮಾತ್ಮನಿದಾನೆ ಎಂಬ ಅರಿವಾಗುವಂತಿಲ್ಲವೆಂದು ಶ್ರುತಿಯು ಸಾರುತ್ತಿದೆ. ಕಾರ್ಯಕರಣಗಳ ಪಾರಿಶುದ್ಧ್ಯವುಳ್ಳ ದೇವತೆಗಳಿಗೇ ಆ ತತ್ತ್ವವು ತಿಳಿಯದೆಂದಮೇಲೆ ನಮ್ಮಂಥವರ ಪಾಡೇನು ?

ನಮ್ಮಂಥ ಸಾಮಾನ್ಯಜೀವರಿಗೆ ಯಾವಯಾವದೋ ಕುತ್ಸಿತವಿಷಯಗಳ ನೆನಪೂ ಜ್ಞಾನವೂ ಉಂಟಾಗುತ್ತಿರುವವು; ಪರಮಾತ್ಮನ ಜ್ಞಾನವಾಗಲಿ ನೆನಪಾಗಲಿ ನಮಗೆ ಆಗುವದೇ ಇಲ್ಲ. ಭಗವಂತನಿಂದಲೇ ನೆನಪಾಗುವದು, ಅವನಿಂದಲೇ ನೆನಪು ಹೋಗುವದು- ಎಂದರೆ ಆ ಭಗವಂತನು ನೆನಪುಕೊಡುವದು, ಅದನ್ನು ಹಾರಿಸುವದು- ಹೀಗೆ ಬೆಕ್ಕು ಇಲಿಯನ್ನು ಚಿಣ್ಣಾಟದಿಂದ ಗೋಳುಗುಟ್ಟಿಸುವಂತೆ ಭಗವಂತನು ನಮ್ಮನ್ನು ಆಡಿಸುತ್ತಿದಾನೆಂದು ಅರ್ಥ ಮಾಡಿಕೊಳ್ಳಬಾರದು. ಯಾರು ಪರಮಾತ್ಮನಿಗೆ ವಿಮುಖರಾಗಿ ವಿಷಯಭೋಗದಲ್ಲಿಯೇ

ಮುಳುಗಿರುವವರೋ ಅವರಿಗೆ ಆತನ ಜ್ಞಾನವಾಗಲಿ ಸ್ಮೃತಿಯಾಗಲಿ ಆಗುವದಿಲ್ಲ. ಯಾರು ಆತನ ಕಡೆಗೇ ತಿರುಗುವರೋ ಅವರಿಗೆ ಅವಶ್ಯವಾಗಿ ಉಂಟಾಗುತ್ತವೆ; ಹೀಗೇ ಆಗಲೆಂಬುದು ಆ ಪರಮಾತ್ಮನ ಸಂಕಲ್ಪವು- ಎಂಬುದೇ ಈ ವಾಕ್ಯದ ಅರ್ಥ. ಮಹಾನಾಗರಿಕರೆಂದು ಕೊಚ್ಚಿಕೊಳ್ಳುವ ಎಷ್ಟೋ ಜನಾಂಗದವರು ಈಗ `ದೇವರೇ ಇಲ್ಲ' ಎಂಬ ನಾಚಿಕೆಗೇಡಿನ ಕೂಗನ್ನು ಎಬ್ಬಿಸಿಲ್ಲವೆ? ಕುಲಮದ, ವರ್ಣಮದ, ಧನಮದ, ವಸ್ತುವಾಹನಾದಿಗಳ ಮದ, ವಿದ್ಯಾಮದ- ಮುಂತಾದವುಗಳಿಂದ ಮತ್ತರಾಗಿರುವವರಿಗೆ ಹೇಗೆತಾನೆ ಆ ಪರಮಾತ್ಮನ ನೆನಪು ಉಂಟಾದೀತು ?

ಈ ಶ್ಲೋಕದಲ್ಲಿರುವ ಮೊದಲನೆಯ ಮೂರು ವಾಕ್ಯಗಳಿಗೂ ಒಟ್ಟು ಅರ್ಥವೇನಾಗುವದೆಂದರೆ ಪರಮಾತ್ಮನೇ ಸಕಲವೇದಗಳಿಗೂ ವಿಷಯನು. ಆತನೇ ನಮ್ಮ ಜ್ಞಾನಸ್ಮೃತಿಗಳೆರಡಕ್ಕೂ ಸಾಕ್ಷಿಯಾಗಿ ನಮ್ಮ ಹೃದಯದಲ್ಲಿ ಇದ್ದುಕೊಂಡಿರುತ್ತಾನೆ. ಆತನ ಅನುಗ್ರಹದಿಂದಲೇ ನಮಗೆ ಆತನ ಜ್ಞಾನವೂ ಸ್ಮರಣೆಯೂ ಆಗಬೇಕಾಗಿರುತ್ತದೆ. ಆದ್ದರಿಂದ ಆತನನ್ನು ತಪಸ್ಸು, ಬ್ರಹ್ಮಚರ್ಯ–ಮುಂತಾದ ಸಾಧನಗಳಿಂದ ಶರಣುಹೋಗಬೇಕು.

ಆ ಭಗವಂತನೇ ವೇದಾಂತಕರ್ತನು. ವೇದಾಂತವೆಂದರೆ ಪರಮಾತ್ಮನನ್ನು ತಿಳಿಸುವ ವಾಙ್ಮಯವು. ಅದನ್ನು ಮಾಡುವದೆಂದರೆ ಅದಕ್ಕೆ ಸಂಪ್ರದಾಯಕರ್ತನಾಗಿರುವದು. ಗುರುಶಿಷ್ಯಪರಂಪರೆಯಿಂದ ವೇದಾಂತವನ್ನು ಒಬ್ಬರಿಂದೊಬ್ಬರಿಗೆ ತಿಳಿಯುವಂತೆ ಮಾಡಿದ ಮೂಲಾಚಾರ್ಯನು ಪರಮಾತ್ಮನೇ, ಅದನ್ನು ಅರಿತು ಕೃತಾರ್ಥನಾಗುವ ಶಿಷ್ಯನೂ ಪರಮಾತ್ಮನೇ. ಶ್ರೀಕೃಷ್ಣನು ಒಂದಾನೊಂದು ಕಾಲದಲ್ಲಿ ಪರಮೇಶ್ವರನನ್ನು ಕಮಲಗಳಿಂದ ಅರ್ಚಿಸುತ್ತಿದ್ದನೆಂದೂ ಸಹಸ್ರಸಂಖ್ಯೆಯ ಕಮಲಗಳು ಪೂರ್ತಿಯಾಗುವದಕ್ಕೆ ಇನ್ನೊಂದು ಸಾಲದೆಂದೂ ಕೊನೆಯಲ್ಲಿ ಕಂಡುಬಂದದ್ದರಿಂದ ತನ್ನ ಕಣ್ಣನ್ನೇ ಕಮಲದ ಸ್ಥಾನದಲ್ಲಿ ಅರ್ಚಿಸಿದನೆಂದೂ ಪುರಾಣಕಥೆಯಿದೆ. ಶ್ರೀಕೃಷ್ಣನು ಭಗವಂತನಲ್ಲವೆ? ಅವನು ಮತ್ತೆ ಪರಮೇಶ್ವರನನ್ನು ಅರ್ಚಿಸಿ ಪಡೆಯಬೇಕಾದದ್ದು ಏನಿತ್ತು? - ಎಂದು ಅಜ್ಞರು ಆಕ್ಷೇಪಿಸುವದುಂಟು. ಆದರೆ ಪರಮೇಶ್ವರನಿಗಾಗಿ ಕಣ್ಣನ್ನಾದರೂ ಕಿತ್ತುಕೊಡುವಷ್ಟು ತ್ಯಾಗಬುದ್ಧಿಯಿರಬೇಕೆಂಬ ಸತ್ಸಂಪ್ರದಾಯವನ್ನು ಕಲಿಸಿಕೊಡುವದಕ್ಕೆ ಆ ಭಗವಂತನಿಂದಲ್ಲದೆ ಮತ್ತೆಯಾರಿಂದ ತಾನೆ ಸಾಧ್ಯವಾದೀತು? ಆ ಭಗವಂತನೇ ಹೀಗೆ ಪೂಜ್ಯಪೂಜಕಭಾವದಿಂದ ಲೀಲಾವಿಗ್ರಹವನ್ನಾಂತು ನಮಗೆ ಸಾಧನಕ್ರಮವನ್ನು ಕಲಿಸಿಕೊಟ್ಟಿರುತ್ತಾನೆಂದು ಭಾವಿಸಬೇಕು. ಹೀಗೆಯೇ ವೇದಾಂತಸಂಪ್ರದಾಯದಲ್ಲಿ ಗುರುಶಿಷ್ಯ ಭಾವವನ್ನು ತಳೆದು ಆ ಪರಮಾತ್ಮನೇ ನಮಗೆ ತತ್ತ್ವವನ್ನು ತಿಳಿಸಿಕೊಟ್ಟಿರುತ್ತಾನೆ.

ಇಲ್ಲಿಯವರೆಗೆ `ಮಮೈವಾಂಶಃ' ಎಂಬ ವಾಕ್ಯದರ್ಥವನ್ನು ವಿಸ್ತರಿಸಿ ತಿಳಿಕೊಟ್ಟಂತಾಯಿತು. ಈಗ ಪರಮಾತ್ಮನ ವಾಸ್ತವಿಕರೂಪವನ್ನು ತಿಳಿಸುವದಕ್ಕೆ ಹೊರಟಿದೆ.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ॥ 15-16**

ಪರಮಾತ್ಮನಿಗೆ ಸೋಪಾಧಿಕರೂಪವೆಂದೂ ನಿರುಪಾಧಿಕರೂಪವೆಂದೂ ಎರಡು ರೂಪಗಳುಂಟು. ಆದಿತ್ಯಾದಿವಿಭೂತಿಗಳ ಮೂಲಕವಾಗಿ ತಿಳಿಯುವದು ಸೋಪಾಧಿಕರೂಪವು; ಯಾವ ಉಪಾಧಿಯ ಸಂಬಂಧವೂ ಇಲ್ಲದಿರುವ ಸ್ವಾಭಾವಿಕರೂಪವು ನಿರುಪಾಧಿಕವು. ಸೋಪಾಧಿಕರೂಪವೂ ಎರಡು ಬಗೆಯಾಗಿರುತ್ತದೆ. ಆದ್ದರಿಂದ ಆ ಬಗೆಗಳನ್ನು ತಿಳಿಸಿಕೊಟ್ಟು ಅವಕ್ಕಿಂತ ವಿಲಕ್ಷಣವಾದ ಪರಮಾರ್ಥವನ್ನು ಮನದಟ್ಟುಮಾಡಿಕೊಡುವ ಉದ್ದೇಶದಿಂದ ಇಲ್ಲಿ ಕ್ಷರಾಕ್ಷರವಿಭಾಗವನ್ನು ಮಾಡಿದೆ. ಇಡಿಯ ಜ್ಞೇಯರಾಶಿಯನ್ನೆಲ್ಲ ಕ್ಷರ, ಅಕ್ಷರ-ಎಂಬ ಎರಡು ರಾಶಿಗಳೊಳಗೆ ಅಡಕಮಾಡಬಹುದು. ಕ್ಷರವೆಂದರೆ ಎಲ್ಲಾ ಭೂತಗಳು. ಇಲ್ಲಿ ಎಲ್ಲಾ ಪ್ರಾಣಿಗಳು, ಎಂದರೆ ಜೀವಾವಿಷ್ಟವಾದ ಶರೀರಗಳು ಎಂದರ್ಥ. ಯಾರ ಶರೀರಗಳೇ ಆಗಲಿ ನಾಶವಾಗತಕ್ಕವೇ ಆಗಿರುತ್ತವೆ. ಬ್ರಹ್ಮಾದಿಸ್ತಂಬಪರ್ಯಂತವಾಗಿ ವಿಂಗಡಿಸಿಕೊಂಡಿರುವ ಸಕಲಭೂತಗಳ ಶರೀರಗಳೂ ಕ್ಷರವೇ, ಎಂದರೆ ನಾಶವಾಗತಕ್ಕವೇ. ಆದ್ದರಿಂದ ಭೂತಗಳೆಲ್ಲವೂ ಕ್ಷರ ಎಂದಿದೆ. ಜೀವರೆಲ್ಲರೂ ಪರಮಾತ್ಮನ ಅಂಶವೇ ಎಂದು ಹಿಂದೆ ಹೇಳಿರುವದು ಚೇತನಸ್ವರೂಪವನ್ನು ಲಕ್ಷ್ಯದಲ್ಲಿಟ್ಟು ಹೇಳಿದ್ದು. ಈಗ ಉಪಾಧಿಯಾಗಿರುವ ಶರೀರಗಳನ್ನು ಲಕ್ಷ್ಯದಲ್ಲಿಟ್ಟು ಪ್ರಾಣಿಗಳೆಲ್ಲವೂ ಕ್ಷರವೆಂದಿದೆ.

ನಮ್ಮ ಕಾರ್ಯಕರಣಗಳು ಶಾಶ್ವತವಾಗಿರುವವೆಂಬ ಭಾವನೆಯು ನಮಗೆ ಅವಿದ್ಯೆಯಿಂದ ಉಂಟಾಗಿರುತ್ತದೆ. ಆದರೆ ಲೋಕದಲ್ಲಿ ಯಾರೊಬ್ಬರೂ ಶಾಶ್ವತವಾಗಿರುವದಿಲ್ಲ. ಈ ಕ್ಷರವಾದ ದೇಹವನ್ನು ನಾನು ಎಂದು ತಿಳಿದುಕೊಂಡು ವಿರೋಚನಸಿದ್ಧಾಂತವನ್ನು ಅನುಸರಿಸಿದರೆ ಆಗುವ ಅನರ್ಥವನ್ನು ತೊಲಗಿಸುವದಕ್ಕಾಗಿ `ಎಲ್ಲಾ ಭೂತಗಳೂ ಕ್ಷರವು' ಎಂಬ ವಾಕ್ಯವು ಬಂದಿದೆ. ಮನುಷ್ಯದೇಹವು ಹೇಗೆ ನಶ್ವರವೋ ಹಾಗೆ ಬ್ರಹ್ಮನ ದೇಹವೂ ನಶ್ವರವೇ. ಶರೀರವೆಂದರೆ ಒಂದಲ್ಲ ಒಂದು ದಿನ ನಾಶವಾಗತಕ್ಕದ್ದು, ಇರುವವರೆಗೂ ಪ್ರಿಯಾಪ್ರಿಯಗಳ ಹೊಡೆತಕ್ಕೆ ಸಿಕ್ಕಿರತಕ್ಕದ್ದು ಎಂಬುದನ್ನು ಈ ಕ್ಷರಶಬ್ದವು ತಿಳಿಸುತ್ತದೆ.

'ಕೂಟಸ್ಥೋಽಕ್ಷರ ಉಚ್ಯತೇ' (ಕೂಟಸ್ಥವಾದದ್ದನ್ನು ಅಕ್ಷರವೆನ್ನುವರು) ಎಂಬ ವಾಕ್ಯದ ಅಭಿಪ್ರಾಯವನ್ನು ಈಗ ತಿಳಿಯುವದಕ್ಕೆ ಪ್ರಯತ್ನಿಸೋಣ. ಬ್ರಹ್ಮಾದಿಸ್ತಂಬಪರ್ಯಂತವಾಗಿ ಬಗೆಬಗೆಯ ನಾಮರೂಪಗಳಿಂದ ವಿಂಗಡವಾಗಿರುವ ಈ ಜಗತ್ತು `ವ್ಯಾಕೃತ' ಎನಿಸುತ್ತದೆ. ಈ ಜಗತ್ತು ಇರುವಷ್ಟು ಕಾಲ ತನ್ನ ವಿಲಾಸವನ್ನು ತೋರಿಸಿ ಕೊನೆಗೆ ಪ್ರಲಯದಲ್ಲಿ ಒಂದಾನೊಂದು ಸೂಕ್ಷ್ಮರೂಪವನ್ನು ಪಡೆಯುತ್ತದೆ. ಇದನ್ನು ಅವ್ಯಾಕೃತ ಎನ್ನುವರು. ಮಣ್ಣಿನ ಮುದ್ದೆಗೂ ಮಣ್ಣಿನಿಂದಾದ ಗಡಿಗೆ, ಮಡಕೆ, ಕುಡಿಕೆ - ಮುಂತಾದ ಬೇರೆಬೇರೆಯ ವಿವಿಧ

ನಾಮರೂಪಕರ್ಮಗಳ ಪದಾರ್ಥಗಳಿಗೂ ಇರುವ ಹೆಚ್ಚುಕಡಿಮೆಯೇ ಅವ್ಯಾಕೃತ, ವ್ಯಾಕೃತ-ಇವೆರಡಕ್ಕೂ ಇರುತ್ತದೆ. ಜಗತ್ತು ಈ ಎರಡು ರೂಪಗಳನ್ನೂ ಕ್ರಮವಾಗಿ ತಾಳುತ್ತಾ ಕಣ್ಣುಮುಚ್ಚಾಲೆಯ ಆಟವನ್ನು ಅನುಕರಿಸುತ್ತಿರುವದು. ಎಲ್ಲಿಯವರೆಗೆ ಈ ಜಗತ್ತು ಹೀಗೆ ಸ್ಥೂಲಸೂಕ್ಷ್ಮರೂಪಗಳನ್ನು ಪಡೆಯುತ್ತಲೇ ಇರುವದೋ ಅಲ್ಲಿಯವರೆಗೂ ಇದಕ್ಕೆ ನಾಶವಿಲ್ಲ. ವಸ್ತುತತ್ತ್ವವು ರೂಪಾಂತರವನ್ನು ಹೊಂದುತ್ತಿರುವದೇ ಹೊರತು ವಿನಾಶವನ್ನು ಹೊಂದುವಂತಿಲ್ಲ-ಎಂಬ ಭೌತಿಕಶಾಸ್ತ್ರಜ್ಞರ ಉಕ್ತಿಯು ಅಲ್ಲಿಯವರೆಗೆ ನಿಜವಾಗಿರುತ್ತದೆ.

ಜೀವರುಗಳು ಅನುಭವಿಸುವ ಜನನಮರಣಗಳನ್ನೂ ಇದರಂತೆ ತಿಳಿಯಬೇಕು. ಶರೀರವು ರೂಪಾಂತರವನ್ನು ಪಡೆದರೆ, ಅಥವಾ ಜೀವನು ಶರೀರಾಂತರವನ್ನು ಪಡೆದರೆ, ಜೀವನಿಗೆ ನಿಜವಾಗಿ ಯಾವ ಜನನಮರಣಗಳೂ ಆಗುವದಿಲ್ಲ. ಆದರೂ ಶರೀರವೇ ತಾವೆಂದು ತಿಳಿದಿರುವ ಮೂಢರು ತಮಗೇ ಜನನಮರಣಗಳಾಗುವವೆಂದು ತಿಳಿಯುವರು. ಜೀವರು ಮರಣವಾದಮೇಲೆ ಏನಾಗುವರೆಂಬುದು ನಮ್ಮ ಲೌಕಿಕದೃಷ್ಟಿಗೆ ತಿಳಿಯುವದಿಲ್ಲ; ಆದರೆ ಜಾಗ್ರತ್ತಿನಲ್ಲಿ ವ್ಯವಹಾರವನ್ನೆಲ್ಲ ಮಾಡಿದ ಬಳಿಕ ಸುಷುಪ್ತಿಯಲ್ಲಿ ನಾವು ಯಾವದೊಂದು ವೈಯಕ್ತಿಕರೂಪದಲ್ಲಿಯೂ ಇರದೆ ಏಕೀಭೂತರಾಗಿ ಉಳಿದುಕೊಂಡುಬಿಡುತ್ತೇವೆಂಬುದು ನಮಗೆ ದಿನದಿನವೂ ಅನುಭವಕ್ಕೆ ಬರುತ್ತದೆ. ಎಚ್ಚರಕ್ಕೆ ಬರುವಾಗ ನಾನು, ನೀನು, ಅವರು, ಜಗತ್ತು-ಎಂದು ಎಲ್ಲವೂ ಒಟ್ಟಿಗೆ ಹೊರಹೊಮ್ಮಿ ತೋರಿಕೊಳ್ಳುತ್ತದೆ; ತನಿನಿದ್ರೆಗೆ ಹೋಗುವಾಗ ಎಲ್ಲವೂ ಒಟ್ಟಿಗೆ ಮುಳುಗುತ್ತದೆ. ಈ ಅನುಭವದಲ್ಲಿ ಎಚ್ಚರವನ್ನು ವ್ಯಾಕೃತಕ್ಕೆ ಹೋಲಿಸಬಹುದು; ಸುಷುಪ್ತಿಯನ್ನು ಅವ್ಯಾಕೃತಕ್ಕೆ ಹೋಲಿಸಬಹುದು. ಪರಮಾತ್ಮನಿಗೆ ಬೀಜರೂಪವಾದ ಪ್ರಲಯಾವಸ್ಥೆಯ ಅವ್ಯಾಕೃತವೆಂಬ ಉಪಾಧಿ, ಕಾರ್ಯರೂಪವಾದ ವ್ಯಾಕೃತವೆಂಬ ಸೃಷ್ಟ್ಯವಸ್ಥೆಯ ಉಪಾಧಿ-ಎಂಬ ಎರಡು ಉಪಾಧಿಗಳಿರುವವು. ಪರಮಾತ್ಮನೇ ಪ್ರಲಯದಲ್ಲಿದ್ದು ಅವ್ಯಾಕೃತೋಪಾಧಿಯ ವಶದಿಂದ ಸೂಕ್ಷ್ಮರೂಪವನ್ನು ಧರಿಸುವಂತೆಯೂ ಸೃಷ್ಟಿಯಲ್ಲಿ ವ್ಯಾಕೃತೋಪಾಧಿಯ ವಶದಿಂದ ಕಾರ್ಯರೂಪವನ್ನು ಧರಿಸುವಂತೆಯೂ ಕಾಣುತ್ತಿರುವನು. ಆದರೆ ನಿಜವು ಹೀಗಿಲ್ಲ. ಪರಮಾತ್ಮನು ವ್ಯಾಕೃತೋಪಾಧಿಯಿಂದ ಕೂಡಿರಲಿ, ಅವ್ಯಾಕೃತೋಪಾಧಿಯಿಂದ ಕೂಡಿರಲಿ, ಇವುಗಳ ಸಂಬಂಧವು ಅವನಿಗೆ ಎಳ್ಳಷ್ಟೂ ಇರುವದಿಲ್ಲ. ಹೇಗೆಂದರೆ,

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ |**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ||** 15-17

ಕ್ಷರ ಎಂಬ ಸರ್ವಭೂತಾತ್ಮಕಪುರುಷನೂ ಅಲ್ಲದೆ, ಅಕ್ಷರ ಎಂಬ ಬೀಜಾತ್ಮಕ ಪುರುಷನೂ ಅಲ್ಲದೆ, ಸೃಷ್ಟಿಸ್ಥಿತಿಪ್ರಲಯಗಳೆಂಬ ಮೂರು ಅವಸ್ಥೆಗಳನ್ನೂ ಹೊರದೂಡಿ ಯಾವಾಗಲೂ ತನ್ನ ನಿತ್ಯಚೈತನ್ಯಸ್ವರೂಪದಿಂದ ಅವುಗಳನ್ನು ಬೆಳಗುತ್ತಿರುವ ರೂಪವೇ

ನಿಜವಾದ ಪರಮೇಶ್ವರಸ್ವರೂಪವು. ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಮೂರು ಅವಸ್ಥೆಗಳು ಬಂದುಹೋಗುವದನ್ನು ನೋಡುತ್ತಿರುವ ಆತ್ಮನಿಗೆ ಆ ಅವಸ್ಥೆಗಳ ಕಲಂಕವು ಒಂದಿಷ್ಟೂ ಇರುವದಿಲ್ಲ. ಕನಸಿನಲ್ಲಿ ಮಿಥ್ಯಾರೂಪದಿಂದ ಕಾಣುವ ದೃಶ್ಯಗಳ ಮತ್ತು ಶರೀರಾದ್ಯಾಭಾಸಗಳ ಸಂಬಂಧವು ನಮಗೆ ಒಂದಿಷ್ಟೂ ಅಂಟಿರಲಿಲ್ಲವೆಂಬುದು ಎಚ್ಚರದಲ್ಲಿ ನಿಶ್ಚಿತವಾಗಿ ತೋರುವಂತೆಯೇ ಈ ಪರಮಾತ್ಮನಲ್ಲಿ ತೋರುವ ವ್ಯಾಕೃತಾವ್ಯಾಕೃತೋಪಾಧಿಗಳ ಸಂಬಂಧವು ಎಳ್ಳಷ್ಟೂ ಇರುವದಿಲ್ಲವೆಂಬುದು ಶಾಸ್ತ್ರದೃಷ್ಟಿಯಿಂದ ಪಡೆದುಕೊಂಡ ಜ್ಞಾನರೂಪವಾದ ಎಚ್ಚರದಲ್ಲಿ ನಿಶ್ಚಿತವಾಗಿ ತೋರುತ್ತದೆ. ಒಬ್ಬ ಆತ್ಮನೇ ಜಾಗ್ರತ್ಸ್ವಪ್ನಸುಷುಪ್ತಿಗಳನ್ನು ಅನುಭವಿಸುತ್ತಿರುವನೆಂದು ಲೋಕದ ಜನರೆಲ್ಲರೂ ತಿಳಿದಿರುತ್ತಾರೆ. ಈ ಅನುಭವದಿಂದ ಹೊರಡುವ ಸಿದ್ಧಾಂತವೇನೆಂದರೆ ಆತ್ಮನು ಎಚ್ಚೆತ್ತಿರುವಾಗ ಕನಸುನಿದ್ರೆಗಳಿಲ್ಲವೆಂಬುದು ಎಷ್ಟು ನಿಶ್ಚಯವೋ ಆತ್ಮನು ನಿದ್ರಿಸುತ್ತಿರುವಾಗ ಅವನಲ್ಲಿ ಎಚ್ಚರಕನಸುಗಳು ಇಲ್ಲವೆಂಬುದೂ ಅಷ್ಟೇ ನಿಶ್ಚಯವು. ಆತ್ಮನು ನಿದ್ರೆಯಲ್ಲಿರುವಾಗ ಎಚ್ಚರಕನಸುಗಳ ಸಂಬಂಧವು ಹೇಗೆ ಒರಸಿಹೋಗುತ್ತದೆಯೋ, ಎಚ್ಚರದಲ್ಲಿರುವಾಗ ನಿದ್ರೆಯ ಮಂಕಿನ ಸಂಬಂಧವು ಹೇಗೆ ಒಂದಿಷ್ಟೂ ಇರುವದಿಲ್ಲವೋ, ಹಾಗೆಯೇ ಸೃಷ್ಟಿಸ್ಥಿತಿಪ್ರಲಯಗಳೆಂಬ ಅವಸ್ಥೆಗಳ ಸೋಂಕು ಪರಮಾತ್ಮನಿಗೆ ಒಂದಿಷ್ಟೂ ಇಲ್ಲ. ಆತ್ಮನ ಸ್ವರೂಪಕ್ಕೆ ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಅವಸ್ಥೆಗಳಾಗಲಿ ಸೃಷ್ಟಿಸ್ಥಿತಿಪ್ರಲಯಗಳೆಂಬ ಅವಸ್ಥೆಗಳಾಗಲಿ ಒಂದಿಷ್ಟೂ ಸೇರಿರುವದಿಲ್ಲ. ಸರಿಯಾಗಿ ನೋಡಿದರೆ ನಮ್ಮ ಜಾಗ್ರದವಸ್ಥೆಯಲ್ಲಿ ಕಾಣುವ ಇಡಿಯ ಪ್ರಪಂಚವೇ ನಮ್ಮ ಜಾಗ್ರದವಸ್ಥೆಗೆ ಕಟ್ಟುಬಿದ್ದಿರುವದರಿಂದ ಅವಸ್ಥಾಂತರದಲ್ಲಿ ನಮಗೆ ಸಪ್ರಪಂಚತ್ವವೂ ಇರುವದೇ ಇಲ್ಲ; ಆದರೆ ಅದರಿಂದ ನಮ್ಮ ಸ್ವರೂಪದಲ್ಲಿ ಯಾವ ಮುಕ್ಕೂ ಆಗಿರುವದಿಲ್ಲ. ಇದಕ್ಕೆ ಕಾರಣವೇನೆಂದರೆ ಸರ್ವಪ್ರಪಂಚವೂ ಈ ಆತ್ಮಸ್ವರೂಪದಲ್ಲಿ ಕಾಣುವ ವಿಕಲ್ಪಮಾತ್ರವಾಗಿರುತ್ತದೆಯೇ ಹೊರತು ಅದಕ್ಕಿಂತ ವ್ಯತಿರಿಕ್ತವಾಗಿರುವದೇ ಇಲ್ಲ. ಈ ಕಾರಣದಿಂದಲೇ ಶ್ರುತಿಯಲ್ಲಿ ಜಾಗ್ರದಾದ್ಯವಸ್ಥೆಗಳಲ್ಲಿರುವ ಆತ್ಮನೇ ಆಯಾ ಉಪಾಧಿಗಳಿಂದ ವೈಶ್ವಾನರ, ಹಿರಣ್ಯಗರ್ಭ, ಪ್ರಾಜ್ಞ-ಎಂಬ ಹೆಸರುಗಳಿಂದೊಪ್ಪುತ್ತಿರುವನೆಂದೂ ತನ್ನ ಸ್ವರೂಪದಿಂದ ನಿಷ್ಪ್ರಪಂಚನಾದ ತುರೀಯನೇ ಆಗಿರುವನೆಂದೂ ಹೇಳಿರುತ್ತದೆ. ಈ ಸ್ವರೂಪವನ್ನೇ ಇಲ್ಲಿ ಪುರುಷೋತ್ತಮನೆಂದು ಕರೆದಿರುತ್ತದೆ.

ಸರಿಯಾದ ಅಂತಃಕರಣಶುದ್ಧಿ ಇರುವವರು ಯಾರಾದರೂ ಈ ಎಚ್ಚರ ಕನಸುತನಿನಿದ್ರೆಗಳೆಂಬ ಅವಸ್ಥಾತ್ರಯವನ್ನು ತಾವು ಕ್ರಮಕ್ರಮವಾಗಿ ಹೊಂದಿದಂತೆ ಭಾವನೆ ಮಾಡಿದರೆ ಅಷ್ಟರಿಂದಲೇ ಈ ತತ್ತ್ವವನ್ನು ಮನಗಾಣಬಹುದು. ಇಗೊ, ಈಗ ಎಚ್ಚರವೆಂಬ ಅವಸ್ಥೆಯನ್ನು ಅದರಲ್ಲಿರುವ ಸರ್ವಪ್ರಪಂಚದೊಡನೆ ಬೆಳಗುತ್ತಿರುವ ಸಾಕ್ಷಿಯಾಗಿರುತ್ತೇನೆ; ಇಗೊ, ಈಗ ಇದೆಲ್ಲವೂ ಕನಸಾಯಿತು, ಪ್ರಪಂಚವೆಲ್ಲವೂ ಅಭಾಸಮಾತ್ರವಾಯಿತು; ಇಗೊ, ಈಗ ಎಲ್ಲವನ್ನೂ ನನ್ನೊಳಗೇ ಅಡಗಿಸಿಕೊಂಡು ನಾನೇ ನಾನಾಗಿ ಉಳಿದುಕೊಂಡು

ತನಿನಿದ್ರೆಯನ್ನು ಅನುಭವಿಸಿದೆನು-ಎಂದು ಆಯಾ ಅವಸ್ಥೆಗಳ ಅನುಭವವನ್ನು ಭಾವನೆಮಾಡಿಕೊಳ್ಳಿರಿ. ನಾಲ್ಕಾರು ವೇಳೆ ಎಚ್ಚರ ನಿದ್ರೆ, ಎಚ್ಚರ ನಿದ್ರೆ ಹೀಗೆ ಅನುಭವಿಸಿದಂತೆ, ವಿದ್ಯುದ್ದೀಪದ ಗುಂಡಿಯನ್ನು ಒತ್ತಿದ ಮಾತ್ರದಿಂದ ಮನೆಯೆಲ್ಲವೂ ಬೆಳಕಿನಿಂದ ತುಂಬಿಕೊಂಡು ಅದನ್ನು ಕೈಬಿಟ್ಟಮಾತ್ರದಿಂದ ಮತ್ತೆ ಅದೇ ಬೆಳಕು ತನ್ನ ಸಾಮಾನ್ಯವಾದ ಅವ್ಯಕ್ತರೂಪವನ್ನು ಹೊಂದುವಂತೆ, ಪ್ರಪಂಚವು ವ್ಯಾಕೃತಾವ್ಯಾಕೃತಸ್ವರೂಪವನ್ನು ಪಡೆದಂತೆಯೂ ಅದು ತನ್ನನ್ನು ನೋಡುತ್ತಿರುವ ಆತ್ಮಚೈತನ್ಯದ ಬೆಳಕಿನಿಂದಲೇ ತೋರುತ್ತಿರುವಂತೆಯೂ ತಾನೇ ವ್ಯಾಕೃತಾವ್ಯಾಕೃತರೂಪಗಳನ್ನಾಗಿರುವಂತೆಯೂ ಭಾವಿಸಿ ಕೊಂಡರೂ ಸಾಕು - ಅಷ್ಟರಿಂದಲೇ ಸಾಕ್ಷಿರೂಪದಲ್ಲಿ ಯಾವ ಭೇದಪ್ರಪಂಚದ ಸೋಂಕೂ ಇರುವದಿಲ್ಲವೆಂಬುದು ಮನಸ್ಸಿನಲ್ಲಿ ಮಿಂಚುವದು. ಸುಷುಪ್ತಿ, ಅವ್ಯಾಕೃತಾವಸ್ಥೆ, ಪ್ರಲಯ - ಎಂಬಿವು ಅತ್ಯಂತ ನಿರ್ವಿಶೇಷವಾಗಿರುವ ಆತ್ಮಸ್ವರೂಪದಿಂದ ಮಾತ್ರವೇ ಉಳಿದುಕೊಳ್ಳುವದಲ್ಲದೆ ನಿಜವಾಗಿ ಅಲ್ಲಿ ಕಾರಣತ್ವವೆಂಬ ವಿಶೇಷಧರ್ಮವು ಯಾವದೊಂದೂ ಇಲ್ಲವೆಂಬ ಅರಿವು ಮೂಡಿದರಂತೂ ನಿತ್ಯಶುದ್ಧಬುದ್ಧಮುಕ್ತಸ್ವಭಾವವೇ ನಮ್ಮ ನಿಜವಾದ ಸ್ವರೂಪವೆಂಬುದು ಮನದಟ್ಟಾಗಿಬಿಡುವದು.

ವ್ಯಾಕೃತಾವ್ಯಾಕೃತಗಳಿಗೆ ವಿಲಕ್ಷಣನಾಗಿ ಆ ಕಲ್ಪನೆಗಳೆರಡನ್ನೂ ತನ್ನೊಳಗೆ ನುಂಗಿಕೊಂಡಿರುವದೇ ಭಗವಂತನ ಪರಮಾರ್ಥಸ್ವರೂಪವು. ವ್ಯಾಕೃತವೆಂಬ ಉಪಾಧಿಯಿಂದೊಡಗೂಡಿದ ಪುರುಷನಿಗಿಂತಲೂ ಅವ್ಯಾಕೃತೋಪಾಧಿಯುಕ್ತ ಪುರುಷನಿಗಿಂತಲೂ ವಿಲಕ್ಷಣನಾಗಿರುವ ಉತ್ತಮಪುರುಷನವನು. ಪುರುಷನೆಂದರೆ ಎಲ್ಲವನ್ನೂ ತುಂಬಿಕೊಂಡಿರುವವನು. ತುಂಬಿಕೊಳ್ಳುವದಕ್ಕೆ ಒಂದು ಉಪಾಧಿಯಿರುವಾಗ ಪರಮೇಶ್ವರನು ಅದೆಲ್ಲವನ್ನೂ ವ್ಯಾಪಿಸಿಕೊಂಡಿರುವದರಿಂದ ಪುರುಷನೆನಿಸುವನು; ಯಾವ ಉಪಾಧಿಯೂ ಇಲ್ಲದ ಸ್ವರೂಪದಲ್ಲಿ ಅವನು ತಾನೇ ಎಲ್ಲವೂ ಆಗಿರುವದರಿಂದ ಪರಿಪೂರ್ಣಸ್ವರೂಪನೆಂಬ ಕಾರಣದಿಂದ ಅವನು ಪುರುಷೋತ್ತಮನೆನಿಸುವನು.

ಈ ಪುರುಷೋತ್ತಮನು ಪರಮಾತ್ಮನು. ಅವಿದ್ಯಾಕಲ್ಪಿತವಾಗಿರುವ ಆತ್ಮರುಗಳೆಲ್ಲಕ್ಕಿಂತಲೂ ಪರಮನಾಗಿ ಎಲ್ಲಾ ಭೂತಗಳಿಗೂ ಆತ್ಮನಾಗಿರುವದರಿಂದ ಇವನನ್ನು ಪರಮಾತ್ಮನೆಂದು ಉಪನಿಷತ್ತುಗಳಲ್ಲಿ ಕರೆದಿರುತ್ತದೆ. ನಮಗೆ ಬಹಳವಾಗಿ ಬೇಕಾದವನು ಯಾರಾದರೂ ಇದ್ದರೆ ಅವನನ್ನು `ಇವನು ನನ್ನ ಆತ್ಮನು, ಇವನನ್ನು ನಾನೇ ಎಂದು ತಿಳಿಯಿರಿ!' ಎನ್ನುವಂತೆ ದೇಹ ಪ್ರಾಣಮನೋಬುದ್ಧಿಗಳನ್ನು ಮಾತ್ರವಲ್ಲದೆ ಹೊರಗಿನ ಹೆಂಡಿರುಮಕ್ಕಳು, ಹೊಲಮನೆ, ಹಣಕಾಸು, ಆಳುಕಾಳು -ಇದೆಲ್ಲವನ್ನೂ ನಾವೆಂದೇ ಅಭಿಮಾನ ಪಡುತ್ತಿರುವದು ನಮಗೆ ಸ್ವಭಾವವಾಗಿಬಿಟ್ಟಿದೆ. ಆದರೆ ನಿಜವಾಗಿ ನಮ್ಮ ಆತ್ಮನಾದವನು ಯಾರು? ಆ ಭಗವಂತನಾದ ಪುರುಷೋತ್ತಮನೇ.

ಈ ಪರಮಾತ್ಮನು ಮೂರು ಲೋಕಗಳನ್ನೂ ಒಳಹೊಕ್ಕು ಧರಿಸಿರುತ್ತಾನೆ. ನಾವು ಈ ಮೂರು ಮೊಳದ ದೇಹದೊಳಗೆ ಮಾತ್ರ ಇರುವೆವೆಂದೂ ನಮಗೆ ಈ ದೇಹದ ಮತ್ತು ದೇಹಕ್ಕೆ ಸಂಬಂಧಪಟ್ಟವರ ಪೋಷಣೆಯೇ ಕರ್ತವ್ಯವೆಂದೂ ಅಜ್ಞರ ಭಾವನೆ. ಆದರೆ ಪರಮಾರ್ಥವೇನು? ಆ ಆತ್ಮನೇ ಎಲ್ಲರಿಗೂ ಆತ್ಮನು; ಮೂರು ಲೋಕಗಳಲ್ಲಿ ಯಾವಯಾವ ಜೀವರಿರುವರೋ ಅವರೆಲ್ಲರಲ್ಲಿಯೂ ಹೊಕ್ಕಿರುವನು. ಎಲ್ಲರ ಆತ್ಮನೂ ಅವನೇ, ಆತನೇ ಈ ಲೋಕಗಳೆಲ್ಲವನ್ನೂ ಹಿಡಿದೆತ್ತಿಕೊಂಡಿರುವನು. ಆದರೆ ಅವನಿಗೆ ಈ ಜಗತ್ತೇನೂ ಹೊರೆಯಾಗಿಲ್ಲ; ಇದರಿಂದ ಅವನಲ್ಲಿ ಯಾವ ವಿಕಾರವೂ ಆಗುವಂತಿಲ್ಲ. ಇವನು ಅವ್ಯಯನು, ನಾಶರಹಿತನು. ಇಷ್ಟೇ ಇಲ್ಲ, ಅವನು ಮತ್ತೊಬ್ಬರ ಅಧೀನದಲ್ಲಿದ್ದುಕೊಂಡು ತನ್ನ ಕಾರ್ಯವನ್ನು ಮಾಡುತ್ತಿಲ್ಲ; ಈಶ್ವರನಾಗಿರುತ್ತಾನೆ; ಸ್ವತಂತ್ರನು, ಎಲ್ಲಕ್ಕೂ ನಿಯಾಮಕನಾಗಿರುತ್ತಾನೆ. ನಮ್ಮಲ್ಲಿ ಯಾರು ಎಷ್ಟು ಸಂಪಾದಿಸಿದ್ದರೂ ಎಂಥ ಗಟ್ಟಿಯಾದ ಶರೀರವನ್ನು ಪಡೆದವರಾದರೂ. ಜ್ಞಾನಬಲವೀರ್ಯಾದಿಗಳಲ್ಲಿ ಎಷ್ಟೇ ಮಿಕ್ಕವರಿಗಿಂತ ಮಿಗಿಲೆನಿಸಿಕೊಂಡಿದ್ದರೂ, ಎಲ್ಲರೂ ಪರಾಧೀನತೆಯಿಂದ ನರಳುತ್ತಿರುವವರೇ; ಅನೀಶ್ವರರೇ; ಈ ಸರ್ವಾಂತರ್ಯಾಮಿಯಾದ ಸರ್ವಜ್ಞನಾದ ನಾರಾಯಣನೊಬ್ಬನೇ ಸರ್ವಸ್ವತಂತ್ರನಾದ ಮಹೇಶ್ವರನು.

ಹೀಗೆ ಪರಮಾತ್ಮನು ಕ್ಷರ, ಅಕ್ಷರ - ಎರಡಕ್ಕಿಂತಲೂ ಹೆಚ್ಚಿನ ಸ್ವರೂಪವುಳ್ಳವನಾಗಿರುವದರಿಂದ, ಸಂಸಾರವೆಂಬ ಮಾಯಾವೃಕ್ಷವನ್ನೂ ಆ ಮಾಯಾವೃಕ್ಷದ ಬೀಜವಾದ ಅವ್ಯಾಕೃತವನ್ನೂ ಮೀರಿ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿರುವದರಿಂದಲೇ ಲೋಕದಲ್ಲಿ ಭಕ್ತಜನರು ಆತನನ್ನು ಪುರುಷೋತ್ತಮನೆಂದು ಕರೆಯುತ್ತಾರೆ.; ಕವಿಗಳೂ ಆತನನ್ನು ಪುರುಷೋತ್ತಮನೆಂದು ವರ್ಣಿಸಿರುತ್ತಾರೆ. ವೇದದಲ್ಲಿಯೂ ಆತನನ್ನು ಪುರುಷೋತ್ತಮನೆಂದೇ ಕರೆದಿರುತ್ತದೆ. ನಿರುಪಾಧಿಯಾದ ಆತ್ಮನೇ ಪುರುಷೋತ್ತಮನೆಂಬುದು ವೇದಾಂತದ ಸಿದ್ಧಾಂತವು. ನಾರದರು ಒಂದಾನೊಂದು ಕಾಲದಲ್ಲಿ ಪರಮಾತ್ಮನ ಯಾಥಾತ್ಮ್ಯವನ್ನು ಅರಿಯುವದಕ್ಕೋಸ್ಕರ, ನರನಾರಾಯಣರ ಅಪ್ಪಣೆಯಂತೆ ಶ್ವೇತದ್ವೀಪಕ್ಕೆ ಹೋಗಿ ಅಲ್ಲಿರುವ ದಿವ್ಯಪುರುಷನನ್ನು ಕಂಡು ಭಗವಂತನಾದ ನಾರಾಯಣನನ್ನು ಸ್ತೋತ್ರಮಾಡಿದರು. ಆ ಸ್ತೋತ್ರದಿಂದ ಪ್ರಸನ್ನನಾಗಿ ವಿಶ್ವರೂಪವನ್ನು ಧರಿಸಿ ಭಗವಂತನು ಅವರಿಗೆ ಮಾಡಿದ ಉಪದೇಶದಲ್ಲಿ ಹೀಗೆಂದಿರುತ್ತಾನೆ; "ಎಲೈನಾರದನೇ, ನೀನು ಈಗ ನೋಡುತ್ತಿರುವ ಈ ರೂಪವೂ ಮಾಯಿಕವೇ; ನಾನು ಸರ್ವಭೂತಗುಣಗಳಿಂದ ಕೂಡಿದವನೇ ಎಂದು ಎಂದಿಗೂ ತಿಳಿಯದಿರು." ಭಗವಂತನ ನಿರುಪಾಧಿಕಸ್ವರೂಪವೇ ಸರ್ವೋತ್ತಮವೆಂಬುದು ಇದರಿಂದಲೂ ವ್ಯಕ್ತವಾಗುತ್ತದೆ.

ಜೀವನು ಮಾಯಾಪರವಶನಾಗಿ ಸಶರೀರತ್ವವೇ ತನ್ನ ನಿಜವಾದ ಸ್ವರೂಪವೆಂದು ತಪ್ಪಾಗಿ ಭಾವಿಸಿಕೊಂಡಿರುತ್ತಾನೆ. ಅವನು ನಾನೇ ಈ ದೇಹವು, ಇಂಥವನ ಮಗನಾಗಿ

ಹುಟ್ಟಿದೆನು; ಈಗ ಮುದುಕನಾಗಿರುತ್ತೇನೆ. ಇಷ್ಟರಲ್ಲಿಯೇ ಸಾಯುವೆನು-ಎಂದು ಮುಂತಾಗಿ ಭಾವಿಸಿಕೊಂಡು ದುಃಖಪಡುತ್ತಿರುತ್ತಾನೆ. ಅನಾದಿನಿದ್ರೆಯಿಂದ ಈ ಜೀವತತ್ತ್ವದಲ್ಲಿ ಬಿದ್ದು ವಿವಿಧವಾದ ಅನರ್ಥಕರವಾದ ಕನಸುಗಳನ್ನು ಕಾಣುತ್ತಿರುತ್ತಾನೆ. ಆದರೆ ಪರಮ ಕರುಣಾಳುವಾದ ಆಚಾರ್ಯನು ಅವನಿಗೆ "ಅಪ್ಪ, ನೀನು ಸಶರೀರನಲ್ಲ, ನಿತ್ಯಶುದ್ಧನಾದ ಅಸಂಗನಾದ ಚೈತನ್ಯಸ್ವರೂಪನು: ಆ ಪರಮಾತ್ಮನೇ ನಿನ್ನ ಆತ್ಮನು" - ಎಂದು ಬೋಧಿಸಲು ಆಗ ಪರಂಜ್ಯೋತಿಯಾದ ಆ ಪರಮಾತ್ಮನನ್ನೇ ಜ್ಞಾನದಿಂದ ಸೇರಿಕೊಂಡು ತನ್ನ ನಿಜವಾದ ಸ್ವರೂಪವನ್ನು ಪಡೆದುಕೊಳ್ಳುವನು. ಆಗ ಅವನು ಉತ್ತಮಪುರುಷನಾಗುವನು ಎಂದು ಛಾಂದೋಗ್ಯಶ್ರುತಿಯಲ್ಲಿ ಹೇಳಿರುತ್ತದೆ.

ಈ ಪುರುಷೋತ್ತಮಜ್ಞಾನದಿಂದಾಗುವ ಫಲವೇನು? ಎಂದರೆ:

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥** **15-19**

ಯಾವನು ಹೀಗೆ ಅಸಂಮೂಢನಾಗಿ ಭಗವಂತನು ಪುರುಷೋತ್ತಮನೆಂದು ತಿಳಿದುಕೊಳ್ಳುವನೋ ಅವನು ಸರ್ವಜ್ಞನಾಗಿ ಆ ಭಗವಂತನನ್ನು ಸರ್ವಭಾವದಿಂದ ಭಜಿಸುತ್ತಾನೆ. ಒಂದು ಕೋಣೆಯಲ್ಲಿ ತಿಂಡಿಯ ಸಾಮಾನುಗಳನ್ನೂ ಆಟದ ಸಾಮಾನುಗಳನ್ನೂ ತುಂಬಿ ಮಕ್ಕಳನ್ನು `ಅಲ್ಲಿ ನಿಮಗೆ ಬೇಕಾದದ್ದನು ತೆಗೆದುಕೊಳ್ಳಿರಿ' ಎಂದು ಬಿಟ್ಟರೆ ಆ ಮಕ್ಕಳು ಹೇಗೆ ವರ್ತಿಸುತ್ತವೆ? ಮೊದವೊದಲು ಕುತೂಹಲದಿಂದ ಅಲ್ಲಿರುವ ವಸ್ತುಗಳನ್ನು ನೋಡುತ್ತವೆ. ಒಂದಕ್ಕಿಂತ ಒಂದು ಹೆಚ್ಚಿನ ಪ್ರಿಯವಸ್ತುವೆಂದು ಅವಕ್ಕೆ ಕಾಣುತ್ತದೆ. ಇದನ್ನು ತೆಗೆದುಕೊಳ್ಳೋಣ-ಎಂಬಷ್ಟರಲ್ಲಿ ಇನ್ನೊಂದು ವಸ್ತು ಅವಕ್ಕೆ ಸೊಗಸೆಂದು ತೋರುತ್ತದೆ. ಇದಿದ್ದರೆ ವಿನೋದದಿಂದ ಕಾಲವನ್ನು ಹಾಕಬಹುದು, ಅದಿದ್ದರೆ ಸರಿಯಾಗಿರುತ್ತದೆ; ಈ ವಾದ್ಯವಿದ್ದರೆ ಬಾರಿಸಿಕೊಂಡು ವಿನೋದದಿಂದ ಇರಬಹುದು, ಆ ತ್ರಿಚಕ್ರದ ಗಾಡಿಯಿದ್ದರೆ ಚೆನ್ನಲ್ಲವೆ? - ಎಂದುಕೊಂಡು ಅವು ಬೆರಗಾಗಿ ಎತ್ತೆತ್ತಲೂ ನೋಡುತ್ತಾ ಯಾವದೊಂದನ್ನು ತೆಗೆದುಕೊಳ್ಳುವದಕ್ಕೂ ಬಿಡುವದಕ್ಕೂ ಆಗದೆ ಪೇಚಾಡುತ್ತಿರುತ್ತವೆ ಅಲ್ಲವೆ? ಪ್ರಪಂಚದಲ್ಲಿ ಈಗಿನ ನವನಾಗರಿಕತೆಯ ತಿಳಿವಳಿಕೆಯಿಂದ ನಮಗೂ ಇದೇ ಪೇಚಾಟವು ಬಂದಿದೆ. ನಮ್ಮ ಇಂದ್ರಿಯಗಳು ಹೊಸಹೊಸ ಭೋಗಸಾಮಾಗ್ರಿಗಳನ್ನು ಬಯಸುತ್ತಿವೆ; ಭೌತಿಕಶಾಸ್ತ್ರಜ್ಞರು ಹೊಸ ಹೊಸ ಯಂತ್ರಗಳನ್ನೂ ಕ್ರೀಡಾವಸ್ತುಗಳನ್ನೂ ಸಿದ್ಧಗೊಳಿಸುತ್ತಿದ್ದಾರೆ, ವಿವಿಧಕಾಲಕ್ಷೇಪದ ಮಾರ್ಗಗಳನ್ನು ಕಂಡುಹಿಡಿದು ಕೊಡುತ್ತಿದ್ದಾರೆ. ಆದರೇನು? ಇವೇ ನಮ್ಮನ್ನು ಬೆಪ್ಪುಗೊಳಿಸಿವೆ. ಇಲ್ಲಿ ಯಾವ ಭೋಗವನ್ನು ಎಷ್ಟುಮಟ್ಟಿಗೆ ರಾಶಿಹಾಕಿಕೊಂಡರೆ ನಮ್ಮ ಸುಖವು ಸಾಕಾದಷ್ಟೆನಿಸೀತು? - ಎನ್ನುವದು ನಮಗೆ ಬಗೆಹರಿಯದೆ ಇದೆ. ಇದೇ ನಮಗೆ ಆಗಿರುವ ಸಮ್ಮೋಹವು. ನಾವು ಹೀಗೆ ಸಮ್ಮೂಢರಾಗಿ ಸುಮ್ಮನೆ ಕುಳಿತಿಲ್ಲ; ಇಡಿಯ

ಜಗತ್ತಿನ ಎಲ್ಲಾ ಭೋಗರಾಶಿಗಳೂ ನಮಗೊಬ್ಬರಿಗೇ ಇದ್ದರೆ ಚೆನ್ನಾಗಿ ಇದ್ದೀತಲ್ಲವೆ? - ಎಂಬ ಹಿಡಿಯದಾಸೆಗೆ ವಿಷಯರಾಗಿದ್ದೇವೆ. ನಮಗೆ ಅಡ್ಡಲಾಗಿ ಬರುವವರನ್ನೆಲ್ಲ ಹೇಗಾದರೂ ಸದೆಬಡಿದು ಎತ್ತಲಾದರೂ ಓಡಿಸಿ ಎಲ್ಲಾ ಸುಖವನ್ನೂ ನಿರಾತಂಕದಿಂದ ಅನುಭವಿಸಬೇಕೆಂಬ ಹುಚ್ಚು ನಮಗೆಲ್ಲರಿಗೂ ಹಿಡಿದಿರುತ್ತದೆ. ಇದರಿಂದ ನಾವು ಸಮ್ಮೂಢರಾಗಿ ದಿಕ್ಕುತೋಚದವರಾಗಿ ಇನ್ನಷ್ಟು ಪೇಚಾಟಕ್ಕೆ ಸಿಕ್ಕಿಕೊಂಡಿರುತ್ತೇವೆ. ಏಕೆಂದರೆ ಎಲ್ಲರಿಗೂ ಅದೇ ಪಿಶಾಚಿಯು ಹಿಡಿದುಕೊಂಡುಬಿಟ್ಟಿರುವದರಿಂದ ಯಾರೊಬ್ಬರಿಗೂ ಈ ಆಶೆಯು ನೆರವೇರುವದಕ್ಕೆ ಇಲ್ಲವಾಗಿರುತ್ತದೆ. ಆದರೆ ಇಂದ್ರಿಯಭೋಗಗಳಿಗೆ ಹೀಗೆ ಯಾರು ಬಾಯಿನೀರುಕರೆಯುತ್ತಿಲ್ಲವೋ ಅಂಥವರು ಅಸಂಮೂಢರು; ಅವರಿಗೆ ಈ ಪ್ರಪಂಚದಲ್ಲಿ ಕಾಣಬರುವ ಯಾವ ವಿಲಾಸಸಾಮಾಗ್ರಿಯೂ ಸೊಗಸೆನಿಸುವದಿಲ್ಲ; ಅಂಥವರೇ ಇಡಿಯ ವ್ಯಾಕೃತಜಗತ್ತಿಗಿಂತಲೂ ಅದರ ಬೀಜವಾದ ಅವ್ಯಾಕೃತಕ್ಕಿಂತಲೂ ವಿಲಕ್ಷಣನಾಗಿರುವ, ಈ ವ್ಯಾಕೃತಾವ್ಯಾಕೃತಗಳ ಕಲ್ಪನೆಗೆಲ್ಲ ಪರಮಾರ್ಥಸತ್ಯವಾದ ಆಧಾರನಾಗಿರುವ ಪುರುಷೋತ್ತಮನನ್ನು ಅರಿತುಕೊಳ್ಳುವದಕ್ಕೆ ಸಮರ್ಥರು.

ಹೊರಗಿನ ಯಾವದೊಂದು ಭೋಗಸಾಮಗ್ರಿಯಿಂದಲೂ ನಮಗೆ ಸಂತೃಪ್ತಿಯಾಗಲಾರದು. ಏಕೆಂದರೆ ಆ ಸಾಮಗ್ರಿಯನ್ನುಎಷ್ಟೇ ರಾಶಿರಾಶಿ ಹಾಕಿಕೊಂಡರೂ ಅದರಲ್ಲಿ ಮತ್ತೆ ಮತ್ತೆ ವಿಕಾರವಾಗುವ ಸ್ವಭಾವವಿದೆ; ಕ್ರಮಕ್ರಮವಾಗಿ ನಮ್ಮ ಅಂತಃಕರಣವೂ ಅದರಲ್ಲಿರುವ ಕುತೂಹಲರಾಗಾದಿಗಳನ್ನು ಬಿಟ್ಟುಬಿಡಬಹುದು. ಹೀಗಿರುವಲ್ಲಿ ಎಲ್ಲಾ ಭೋಗಗಳನ್ನೂ ನಾವು ರಾಶಿಹಾಕಿಕೊಂಡು ಸಂಪೂರ್ಣತೃಪ್ತಿಯನ್ನು ಪಡೆಯುವೆವೆಂಬುದು ಎಂಥ ಅಸಂಭವನೀಯ!

ಆದರೆ ಈ ದೃಶ್ಯಗಳೆಲ್ಲವೂ ಬರಿಯ ಅವಿದ್ಯಾವಿಲಾಸವಾದ ಮಾಯಾಮಾತ್ರವೆಂಬ ನಿಶ್ಚಯದಿಂದ ಯಾವನು ಇವುಗಳಿಗೆ ಆಧಾರನಾಗಿರುವ ಸರ್ವಸಾಕ್ಷಿಯಾದ, ಚೇತನಸ್ವರೂಪಿಯಾದ ಅದ್ವಿತೀಯನಾದ, ಪುರುಷೋತ್ತಮನನ್ನು ಕಂಡುಕೊಳ್ಳುವನೋ ಅವನು ಸರ್ವಜ್ಞನು, ಎಲ್ಲವನ್ನೂ ಬಲ್ಲವನು;ಏಕೆಂದರೆ ಆ ಪುರುಷೋತ್ತಮತತ್ತ್ವಕ್ಕಿಂತ ಮತ್ತೆ ಯಾವದೂ ಇಲ್ಲವಾದ್ದರಿಂದ ಅದೇ ಸರ್ವವು. ಇಂಥ ಸರ್ವಜ್ಞನೇ ಸರ್ವಭಾವದಿಂದ ಸರ್ವಾತ್ಮನೆಂದು ಭಗವಂತನನ್ನು ಭಜಿಸುವದಕ್ಕೆ ಅಧಿಕಾರಿಯು. ಮಿಕ್ಕವರಿಗೆ ಭಗವಂತನೇ ಸರ್ವಸ್ವವಲ್ಲ, ಭಗವಂತನೇ ಸರ್ವರೂಪದಿಂದ ಇದಾನೆಂದೂ ಅವನೇ ತಮ್ಮ ಆತ್ಮನೆಂದೂ ಅವರು ಅರಿತುಕೊಂಡಿರುವದಿಲ್ಲ. ಆದ್ದರಿಂದ ಅವರಿಗೆ ಭಗವಂತನಲ್ಲಿ ನಿರತಿಶಯವಾದ ಭಕ್ತಿಯು ಎಂದಿಗೂ ಉಂಟಾಗಲಾರದು. ಬೈಬಲಿನಲ್ಲಿ ಒಂದು ಕಥೆಯಿದೆ. ಒಬ್ಬ ಸಾಧಕನು ತನಗೆ ಪರಮಪುರುಷಾರ್ಥಪ್ರದವಾದ ಸಾಧನವನ್ನು ತಿಳಿಸಿಕೊಡಬೇಕೆಂದು ಕ್ರೈಸ್ತನನ್ನು ಬೇಡಿಕೊಂಡನಂತೆ. ಆಗ ಕ್ರೈಸ್ತನು ಹೇಳಿದ್ದೇನೆಂದರೆ: `ಈಶ್ವರನನ್ನು ಸರ್ವಾತ್ಮನಾಗಿ ಹೃತ್ಪೂರ್ವಕವಾಗಿ ಭಜಿಸುವದು, ನೆರೆಯವರನ್ನು ಸಂಪೂರ್ಣಪ್ರೇಮದಿಂದ ಕಾಣುವದು -

ಇವೆರಡೇ ಸರ್ವಶಾಸ್ತ್ರಗಳ ಮತ್ತು ಆಚಾರ್ಯರುಗಳ ಉಪದೇಶಗಳ ಸಾರಸಂಗ್ರಹವು.' ಈ ಉಪದೇಶವನ್ನು ಯಾವನು ಅನುಷ್ಠಾನದಲ್ಲಿ ತರಬಹುದು? - ಎಂದು ನೋಡಿದರೆ ಯಾವನು ಈ ಸಕಲಚರಾಚರಜಗತ್ತಿಗೂ ಪರಮಾರ್ಥವಾದ ಆತ್ಮನಾಗಿರುವ ಭಗವಂತನೇ ತನ್ನ ಆತ್ಮನೆಂದೂ ಈ ವ್ಯಾಕೃತಾವ್ಯಾಕೃತಜಗತ್ತೆಲ್ಲವೂ ಆತನ ವಿಭೂತಿಮಾತ್ರವೇ ಎಂದೂ ತಿಳಿದಿರುವನೋ ಆ ಸರ್ವಜ್ಞನಾದ ಭಕ್ತನಿಗೆ ಮಾತ್ರ ಇದು ಸಾಧ್ಯವೆಂದು ನಿಶ್ಚಯವಾಗುತ್ತದೆ.

ಪರಮೇಶ್ವರನನ್ನು ಸರ್ವಭಾವದಿಂದ ಭಜಿಸುವದೆಂದರೆ ನೀನೇ ನನ್ನ ಸರ್ವಸ್ವವು ಎಂದು ಅರಿತು ಭಜಿಸುವದು. ತಾಯಿತಂದೆ, ಹೆಂಡಿರುಮಕ್ಕಳು, ಹಣಕಾಸು, ಹೊಲಮನೆ, ಬಂಧುಬಾಂಧವರು-ಮುಂತಾಗಿ ಎಲ್ಲವೂ ನಮಗೆ ಆತನೇ ಆಗಿರಬೇಕು. ಭಗವಂತನ ಜೊತೆಗೆ ಮತ್ತೆ ಯಾವದೊಂದೂ ಪ್ರೇಮಕ್ಕೆ ಆಸ್ಪದವಾದದ್ದಾಗಿ ಉಳಿದುಕೊಳ್ಳಬಾರದು. ಪುರುಷೋತ್ತಮನೇ ಸರ್ವವೂ, ನಾನು ಅವನದೇ ಅಂಶವು; ನನ್ನ ನಿಜವಾದ ಸ್ವರೂಪವೇ ಆತನು - ಎಂಬ ನಿಶ್ಚಯವು ಯಾವನ ಹೃದಯದಲ್ಲಿ ಮೂಡಿರುವದೋ ಅಂಥವನಿಗೆ ಮಾತ್ರ ಸರ್ವಭಾವದ ಭಕ್ತಿಯು ಸಾಧ್ಯವು. ಇದೇ ಶಾಸ್ತ್ರರಹಸ್ಯವು, ಇದನ್ನು ತಿಳಿದವನೇ ಜ್ಞಾನಿಯು, ಮಿಕ್ಕವರು ಅಜ್ಞಾನಿಗಳು; ಇದನ್ನು ಬಲ್ಲವನೇ ಕೃತಕೃತ್ಯನು. ಮಿಕ್ಕವರು ಬರಿಯ ಸಂಸಾರದಲ್ಲಿ ತೊಳಲುತ್ತಿರುವವರು. ನಾವು ದೈನ್ಯಮನೋಭಾವದಿಂದ (Inferiority Complex) ಕೆಟ್ಟಿರುತ್ತೇವೆ ಎಂದು ಈಗಿನವರು ಆಗಾಗ್ಗೆ ಅನ್ನುವದುಂಟು. ಇದು ಸರ್ವಥಾ ನಿಜವಲ್ಲ. ನಮಗೆ ನಾನು ನಾನು ಎಂಬ ಹೆಮ್ಮೆಯು ಬಂದಿರುವದೇ ನಮ್ಮ ಪುರುಷಾರ್ಥಕ್ಕೆಲ್ಲ ಅಡ್ಡಿಯಾಗಿರುತ್ತದೆ. ಎಷ್ಟರವಟ್ಟಿಗೆ ಈ ಅಭಿಮಾನವು ಎದ್ದುಕೊಂಡಿರುತ್ತದೆಯೋ ಅಷ್ಟರವಟ್ಟಿಗೆ ನಾವು ಶರೀರಾದಿಗಳಲ್ಲಿಯೇ ಅಹಂತೆಯನ್ನು ಇಟ್ಟುಕೊಂಡು ನರಳುತ್ತಿರುತ್ತೇವೆ. ನಮ್ಮ ಪಾಲಿಗೆ ಆ ಪುರುಷೋತ್ತಮನು ಇಲ್ಲದಂತೆ ಮರೆಯಾಗಿರುತ್ತಾನೆ. ಇದೇ ನಮ್ಮ ಸರ್ವಾನರ್ಥಗಳಿಗೂ ಮೂಲವಾಗಿರುತ್ತದೆ ಪುರುಷೋತ್ತಮನೊಬ್ಬನೇ ಪರಮಾರ್ಥವು ಎಂಬ ಸರಿಯಾದ ತಿಳಿವಳಿಕೆಯನ್ನು ಪಡೆದುಕೊಂಡು ಆತನ ಭಕ್ತಿಯಲ್ಲಿ ನಿತ್ಯತೃಪ್ತರಾಗಿರುವದೇ ಜೀವನದ ಗುರಿಯು, ಅದೇ ಪರಮಪುರುಷಾರ್ಥವು. ಆ ತಿಳಿವಳಿಕೆಯನ್ನು ಪಡೆಯುವದಕ್ಕೆ ನಾವು ಎಲ್ಲಾ ಪ್ರಯತ್ನವನ್ನೂ ಮಾಡಬೇಕು.

## ೧೪೩. ದೈವಾಸುರಸಂಪತ್ತುಗಳು 15-(20); 16-(1)

**(11.9.49)**

ಹದಿನೈದನೆಯ ಅಧ್ಯಾಯದ ಕೊನೆಯಲ್ಲಿ ಭಗವಂತನು ಅಪ್ಪಣೆಕೊಡಿಸಿರುವ ವಾಕ್ಯವನ್ನು ಇನ್ನೊಮ್ಮೆ ನಾವು ಮನದಂದುಕೊಳ್ಳುವದು ಒಳ್ಳೆಯದು.

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ 15-20**

ಈ ಗುಹ್ಯತಮವಾದ ಶಾಸ್ತ್ರವನ್ನು ನಿನಗೆ ಹೇಳಿರುತ್ತೇನಷ್ಟೆ; ಇದನ್ನು ತಿಳಿದುಕೊಂಡರೆ ಜ್ಞಾನಿಯಾಗುವನು, ಕೃತಕೃತ್ಯನೂ ಆಗುವನು.

ಇದು ಗುಹ್ಯತಮವಾದದ್ದು. ಭಗವದ್ಗೀತೆಯಲ್ಲಿ ಅಲ್ಲಲ್ಲಿ ಗುಹ್ಯ, ಗೋಪ್ಯ -ಎಂಬ ಮಾತುಗಳು ಬರುತ್ತವೆ. ಉಪನಿಷತ್ತುಗಳ ಸಾರವೇ ಗೀತೆ; ಉಪನಿಷತ್ತುಗಳಿಗೂ `ರಹಸ್ಯ' ವೆಂಬ ಹೆಸರುಂಟು. ಇಷ್ಟು ಸ್ಪಷ್ಟವಾಗಿ ಹೇಳಿರುವದರಲ್ಲಿ ಗುಟ್ಟೇನಿದೆ? ಇದನ್ನು ರಹಸ್ಯವೆಂದೂ ಕರೆದಿರುವದೇಕೆ? - ಎಂದು ನೀವು ಕೇಳಬಹುದು. ಇದು ಸಾಮಾನ್ಯರಿಗೆ ತಿಳಿಯುವದಕ್ಕೆ ಬಹಳ ಕಷ್ಟವಾಗಿರುತ್ತದೆಯಾದ್ದರಿಂದ ಮಾತ್ರವೇ ರಹಸ್ಯವು. ಗುಟ್ಟನ್ನು ರಟ್ಟುಮಾಡುವದಕ್ಕೆ ಪ್ರಯತ್ನವನ್ನು ಮಾಡಿದಲ್ಲದೆ ಆಗದಿರುವಂತೆ ಈ ತತ್ತ್ವವನ್ನು ಅರಿತುಕೊಳ್ಳುವದಕ್ಕೆ ಹೆಚ್ಚಿನ ಪ್ರಯತ್ನವು ಬೇಕು ಎಂಬುದೇ ಇದು ರಹಸ್ಯವೆಂಬುದಕ್ಕೆ ಕಾರಣವು. ಬಹಿರ್ಮುಖಚಿತ್ತರಿಗೆ ಈ ತತ್ತ್ವವು ಎಂದೆಂದಿಗೂ ರಹಸ್ಯವಾಗಿಯೇ ಇರುತ್ತದೆ. ಇಂದ್ರಿಯಜಯ, ಶ್ರದ್ಧಾತಾತ್ಪರ್ಯ-ಮುಂತಾದ ಸಾಧನಗಳಿಂದೊಡಗೂಡಿ ಗುರೂಪದೇಶದಿಂದ ಮಾತ್ರವೇ ಇದನ್ನು ತಿಳಿಯುವದಕ್ಕೆ ಸಾಧ್ಯವೆಂಬುದನ್ನೇ ರಹಸ್ಯವೆಂಬ ಮಾತು ಸೂಚಿಸುತ್ತದೆ ಇಷ್ಟೇ ಹೊರತು ಇದನ್ನು ಯಾರಿಗೂ ಹೇಳದಂತೆ ಗುಟ್ಟಾಗಿ ಇಟ್ಟುಕೊಂಡಿರತಕ್ಕದ್ದು ಎಂದೇನೂ ಅಭಿಪ್ರಾಯವಲ್ಲ.

ಪರಮಾರ್ಥತತ್ತ್ವವು ನಮ್ಮ ಸ್ವರೂಪವೇ ಆಗಿರುತ್ತಿದ್ದರೂ ನಮ್ಮ ವ್ಯವಹಾರವನ್ನೆಲ್ಲ ನಾವು ಆ ಪರಮಾತ್ಮನಲ್ಲಿಯೇ ಇದ್ದುಕೊಂಡು ನಡೆಯಿಸುತ್ತಿದ್ದರೂ ನಮಗೆ ಆ ತತ್ತ್ವವು ಈಗ ಒಂದು ಅಭೇದ್ಯರಹಸ್ಯವಾಗಿರುತ್ತದೆ. ಇದಕ್ಕೆ ಏನು ಕಾರಣ? ವಿಷಯದೃಷ್ಟಿಯಿಂದ ನಾವು ಸಂಮೂಢರಾಗಿರುವದೇ ಇದಕ್ಕೆ ಕಾರಣ. ಇಡಿಯ ಜಗತ್ತು ವ್ಯಾಕೃತ, ಅವ್ಯಾಕೃತ-ಎಂಬ ಎರಡು ರೂಪಗಳನ್ನು ಬೀಜಾಂಕುರನ್ಯಾಯದಿಂದ ಧರಿಸುತ್ತಲೇ ಇದೆ; ಇದಕ್ಕಿಂತಲೂ ಅತ್ಯಂತವಿಲಕ್ಷಣನಾದ ನಮ್ಮೆಲ್ಲರ ಆತ್ಮನನ್ನು ಸಾಕ್ಷ್ಯವಾದ ಆ ಜಗತ್ತಿನಲ್ಲಿಯೇ ನೋಡಬೇಕೆಂದು ನಾವು ಹವಣಿಸುತ್ತೇವೆ; ಅದನ್ನು ಬೆಳಗುತ್ತಿರುವ ಸಾಕ್ಷಿಯೇ ನಾನೆಂದು ಯಾವನೊಬ್ಬನಿಗೂ ಉಪದೇಶವಿಲ್ಲದೆ ಹೊಳೆಯುವದೇ ಇಲ್ಲ. ಆದ್ದರಿಂದ ಗುಹ್ಯತಮವಾಯಿತು; ಗುಟ್ಟುಗಳಲ್ಲೆಲ್ಲ ಗುಟ್ಟೆನಿಸಿರುವ ಈ ತತ್ತ್ವವನ್ನು ಭಗವಂತನು ಅರ್ಜುನನಿಗೆ ಉಪದೇಶಿಸಿರುತ್ತಾನೆ.

"ಇದೇ ಶಾಸ್ತ್ರವು". ಏಕೆಂದರೆ ಈ ರಹಸ್ಯತತ್ತ್ವವನ್ನು ಈ ಅಧ್ಯಾಯದಲ್ಲಿ ಹೇಳಿರುತ್ತದೆ. ಒಟ್ಟುಗೀತೆಯನ್ನೇ ಶಾಸ್ತ್ರವೆಂದು ಕರೆಯತಕ್ಕದ್ದುಯುಕ್ತವಾದರೂ ಗೀತಾಶಾಸ್ತ್ರದ ಒಟ್ಟರ್ಥವನ್ನೆಲ್ಲ ಇಲ್ಲಿ ಸಂಗ್ರಹವಾಗಿ ಹೇಳಿರುವದರಿಂದ ಈ ಅಧ್ಯಾಯವನ್ನೇ ಶಾಸ್ತ್ರವೆಂದು ಹೊಗಳಿದೆ. ಇದರಲ್ಲಿ ಗೀತಾ ಶಾಸ್ತ್ರದ ಒಟ್ಟರ್ಥವು ಮಾತ್ರವೇ ಅಲ್ಲ, ಸಕಲವೇದಾರ್ಥವೂ ಅಡಗಿರುತ್ತದೆ; ಆದ್ದರಿಂದಲೇ ಇದನ್ನು ತಿಳಿದರೆ ವೇದವನ್ನು ತಿಳಿದವನಾಗುವನು( ೧೫-೧)

ಎಂದು ಉಪಕ್ರಮದಲ್ಲಿಯೇ ಹೇಳಿರುತ್ತದೆ. ಶಾಸ್ತ್ರವೆಲ್ಲ ಪರಮಾತ್ಮನನ್ನೇ ಹೇಳುವದಕ್ಕೆ ಬಂದಿದೆ; ಈ ಅಧ್ಯಾಯದಲ್ಲಿ ಮುಖ್ಯವಾಗಿ ಪರಮಾತ್ಮನನ್ನೇ ಹೇಳಿರುವದರಿಂದ ಇದು ಸಕಲಶಾಸ್ತ್ರದ ಸಾರವೆನಿಸಿರುತ್ತದೆ.

ಇದು ಯಾವದನ್ನು ಪ್ರತಿಪಾದಿಸುವದರಿಂದ ಶಾಸ್ತ್ರವೆನಿಸಿದೆ -ಎಂಬುದನ್ನು ತಿಳಿದಿರುವದು ಒಳ್ಳೆಯದು. ಪರಮಾತ್ಮನ ವಿಷಯವಾದದ್ದರಿಂದಲೇ ಇದು ಶಾಸ್ತ್ರವು. ಶಾಸ್ತ್ರದಿಂದಲೇ ನಮ್ಮ ಅಜ್ಞಾನವು ಪೂರ ಹೋಗಿಬಿಡುತ್ತದೆ; ತಿಳಿಯಬೇಕಾದದ್ದನ್ನು ತಿಳಿದುಕೊಂಡಂತೆ ಆಗುತ್ತದೆ. ಇದರಿಂದ ನಾವು ಮಾಡಬೇಕಾದದ್ದನ್ನು ಮಾಡಿದಂತೆಯೂ ಆಗುತ್ತದೆ. ನಮ್ಮಲ್ಲಿ ಅನೇಕರಿಗೆ ನಾವೇತಕ್ಕೆ ಈ ಲೋಕಕ್ಕೆ ಬಂದಿರುತ್ತೇವೆ? - ಎಂಬುದೇ ತಿಳಿಯದು. ಒಬ್ಬರನ್ನು ನೋಡಿ ಒಬ್ಬರು ವ್ಯವಹಾರದಲ್ಲಿ ತೊಡಗಿರುತ್ತೇವೆ. ಹುಟ್ಟುವದು, ಬೆಳೆಯುವದು, ಉಣ್ಣುವದು ತಿನ್ನುವದು, ಮದುವೆಯಾಗುವದು, ಮಕ್ಕಳನ್ನು ಹೆರುವದು, ಆಸ್ತಿಯನ್ನು ಸಂಪಾದಿಸಿ ಅವರಿಗೆ ಕೂಡಿಟ್ಟು ಹೋಗುವದು-ಇವೇ ಮನುಷ್ಯನು ಮಾಡಬೇಕಾದ ಕೆಲಸ ಎಂದು ನಮ್ಮಗಳ ಭಾವನೆ. ಮತ್ತೊಬ್ಬರು ಹೀಗೆಯೇ ಮಾಡುತ್ತಾರಲ್ಲ! -ಎನ್ನುವದೇನೂ ಜಾಣತನವಲ್ಲ. ನಿಜವಾಗಿ ಮಾನವನು ಮಾಡತಕ್ಕದ್ದೇನು? - ಎಂಬ ಪ್ರಶ್ನೆಗೆ ಉತ್ತರವನ್ನು ಕಂಡುಹಿಡಿಯಬೇಕು. ಮನುಷ್ಯನಾದವನು ಮುಖ್ಯವಾಗಿ ಮಾಡತಕ್ಕದ್ದು ಒಂದಿದೆ; ಅದೇ ಮನುಷ್ಯಜನ್ಮದ ಸಾಫಲ್ಯವು. ಪರಮಾತ್ಮಜ್ಞಾನವನ್ನು ಮಾಡಿಕೊಂಡು ಆತನಲ್ಲಿ ಸೇರಬೇಕು; ಆಗಲೇ ನಾವು ಕೃತಕೃತ್ಯರಾಗುವದು. ಇದನ್ನು ಹೇಗೆ ಮಾಡಬೇಕೆಂದು ತಿಳಿಸುವದೇ ಶಾಸ್ತ್ರದ ವ್ಯಾಪಾರ.

ಇಲ್ಲಿಯವರೆಗೆ ಗೀತೆಯ ಹದಿನೈದು ಅಧ್ಯಾಯಗಳ ಅಭಿಪ್ರಾಯವಾಯಿತು. ಶಾಸ್ತ್ರದ ಅರ್ಥವನ್ನು ಸಂಗ್ರಹಿಸಿ ತಿಳಿಸಿದ್ದಾಗಿದೆ. ಇನ್ನು ಮುಂದೆ ಬರುವ ಗ್ರಂಥಭಾಗವು ವೇದದ ಖಿಲಕಾಂಡವಿದ್ದಂತೆ. ಈ ಭಾಗದ ಅಭಿಪ್ರಾಯವು ಹಿಂದಿನ ಅಧ್ಯಾಯಗಳಲ್ಲಿ ಅಲ್ಲಲ್ಲಿ ಸೂಚಿತವಾಗಿಯೇ ಇದೆ; ಈಗ ಅದನ್ನೇ ವಿಸ್ತರಿಸಿ ಹೇಳಲಾಗುವದು. ಹದಿನಾರನೆಯ ಅಧ್ಯಾಯದಲ್ಲಿ ದೈವಾಸುರಸಂಪದ್ವಿಭಾಗವನ್ನು ಹೇಳಿದೆ. ಈ ಅಧ್ಯಾಯವು ಪಾಠಕ್ರಮದಲ್ಲಿ ಇಲ್ಲಿ ಬಂದಿದ್ದರೂ ಅರ್ಥಕ್ರಮದಲ್ಲಿ ಮೊದಲು ಬರಬೇಕು. ಗೀತಾಶಾಸ್ತ್ರವು ಎಲ್ಲರಿಗೂ ಅನ್ವಯಿಸುತ್ತದೆಯೆ? ಗೀತೆಯ ಪ್ರಯೋಜನವು ಯಾವ ಯೋಗ್ಯತೆಯಿದ್ದವರಿಗೆ ಆಗುತ್ತದೆ, ಯಾವ ದೋಷಗಳಿದ್ದರೆ ಆಗುವದಿಲ್ಲ? - ಎಂಬುದನ್ನು ಮೊದಲು ತಿಳಿದುಕೊಳ್ಳಬೇಕು. ದೈವಸಂಪತ್ತು ಗೀತೆಯ ಪ್ರಯೋಜನವನ್ನು ಪಡೆದುಕೊಳ್ಳಬೇಕಾದರೆ ಸಂಪಾದಿಸಿಕೊಳ್ಳಬೇಕಾದ ಯೋಗ್ಯತೆಯು ; ಅಸುರಸಂಪತ್ತು ಕೊಡವಿಕೊಳ್ಳಬೇಕಾದ ದೋಷವು. ಪ್ರತಿಯೊಬ್ಬನಲ್ಲಿಯೂ ದೈವಾಸುರಸಂಪತ್ತುಗಳ ವಾಸನೆಯು ಇದ್ದೇ ಇರುತ್ತದೆ. ಯಾವಾಗ ನಮ್ಮ ದೇಹೇಂದ್ರಿಯಗಳೆಲ್ಲ ಶುದ್ಧವಾಗಿ ಅಧ್ಯಾತ್ಮತತ್ತ್ವವನ್ನು ಗ್ರಹಿಸುವದಕ್ಕೆ ಅರ್ಹವಾಗುವವೊ ಆಗ ದೈವಸಂಪತ್ತು ನಮ್ಮಲ್ಲಿ ಹೆಚ್ಚಿರುತ್ತದೆ. ಶಾಸ್ತ್ರದಲ್ಲಿ ಹೇಳಿರುವ ಸಾಧನೆಗಳನ್ನು ಮಾಡಿ ಅಭ್ಯಾಸಬಲದಿಂದ ಯಾವಾಗ ಸಾಧನೆಗಳ ವಾಸನೆಯು ಬಲವಾಗಿ ಎದ್ದುಕೊಳ್ಳುವದೋ ಆಗ

ದೈವಸಂಪತ್ತಿಗೆ ಜಯವಾದಂತೆ. ಆದರೆ ಯಾವಾಗ ಸ್ವಾಭಾವಿಕವಾದ ಜ್ಞಾನಕರ್ಮಗಳ ವಾಸನೆಯೇ ಪ್ರಬಲವಾಗಿರುತ್ತದೆಯೋ ಆಗ ಅಸುರಸಂಪತ್ತಿಗೆ ಜಯವಾದಂತೆ.

ಆದ್ದರಿಂದ ಭಗವಂತನು ಈ ವಿಭಾಗವನ್ನು ಇಲ್ಲಿ ಒತ್ತಿ ಹೇಳುತ್ತಿದ್ದಾನೆ. ಭಗವಂತನಿಗೆ ಯಾರಲ್ಲಿಯೂ ಪಕ್ಷಪಾತವಿರುವದಿಲ್ಲ. ಅಂಥ ಭಗವಂತನು ಹೇಳುತ್ತಿದ್ದಾನೆ ಎಂಬುದನ್ನು `ಭಗವಾನುವಾಚ' ಎಂಬ ಮಾತು ಸೂಚಿಸುತ್ತದೆ. ಭಗವದ್ವಚನವು ಪುರುಷಾರ್ಥಹೇತುವೆಂಬುದನ್ನು ಲಕ್ಷ್ಯದಲ್ಲಿಟ್ಟು ಮನಮುಟ್ಟಿ ಈ ವಿಷಯವನ್ನು ನಾವು ಕೇಳಬೇಕು.

ಯಾರು ದೈವಸಂಪತ್ತಿಗೆ ಅರ್ಹರಾಗಿರುವರೋ ಅವರ ಮೇಲೆ ವಾಸುದೇವಭಗವಂತನ ಕೃಪಾಕಟಾಕ್ಷವು ಬಿದ್ದಿದೆ ಎಂದು ಭಾವಿಸಬೇಕು. ಅವರಿಗೆ ಮುಂದೆ ಕಲ್ಯಾಣವು ಅವಶ್ಯವಾಗಿ ಆಗುತ್ತದೆ. ದೈವಸಂಪತ್ತಿನವರಲ್ಲಿ ಅನೇಕಗುಣಗಳು ಕಾಣಿಸುತ್ತಿರುತ್ತವೆ. ಆ ಗುಣಗಳೆಲ್ಲವೂ ಮೋಕ್ಷಕ್ಕೇ ಒಯ್ಯುತ್ತವೆ. ಮುಂದೆ ಯಾವ ಸ್ಥಿತಿಗೆ ನಾವು ಹೋಗಬೇಕೋ ಅದರ ಚಿಹ್ನೆಗಳು ಈಗಲೇ ಕಾಣುವವು. ಮೋಕ್ಷದಲ್ಲಿ ಯಾವ ಯಾವ ಅಸಾಧಾರಣಧರ್ಮವಿರಬೇಕೋ ಅವುಗಳು ಈಗಲೇ ದೈವಸಂಪತ್ತಿನವರಲ್ಲಿ ಕಾಣುತ್ತವೆ. ಬೆಳೆಯುವ ಪೈರು ಮೊಳಕೆಯಲ್ಲಿಯೇ ಕಾಣಿಸುತ್ತದೆಯಲ್ಲವೆ?

ಶ್ರೀಭಗವಾನುವಾಚ-
**ಅಭಯಂ ಸತ್ತ್ವಸಂಶುದ್ಧಿಃ ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥** **16-1**

ಅಭಯವೆಂಬುದು ಇಂಥ ಗುಣಗಳಲ್ಲಿ ಒಂದು. ಈ ಗುಣವನ್ನು ಕುರಿತು ಸ್ವಲ್ಪ ವಿಚಾರಮಾಡುವದರಿಂದ ಲಾಭವುಂಟು. ಭಯದ ಹೇತು, ಸ್ವರೂಪ, ಸ್ಥಿತಿ, ಕಾರ್ಯ - ಇವುಗಳನ್ನೂ ಅಭಯದ ಹೇತು, ಸ್ವರೂಪ, ಸ್ಥಿತಿ, ಕಾರ್ಯ - ಇವುಗಳನ್ನೂ ವಿಮರ್ಶೆಮಾಡುವದರಿಂದಲೇ ನಮಗೆ ಅಭಯವು ಬರುವ ಮಾರ್ಗವು ತಿಳಿದುಬಿಡುತ್ತದೆ. ಮನುಷ್ಯನ ಮನಸ್ಸಿಗೆ ಒಂದು ಸ್ವಭಾವವಿದೆ. ಅದು ಯಾವದರ ವಿಚಾರದಲ್ಲಿಯೇ ಬಹುಕಾಲ ವ್ಯಾಪೃತವಾಗಿರುತ್ತದೆಯೋ ಅದಕ್ಕೆ ಅದೇ ಸಂನಿವೇಶವನ್ನೇ ಕಾಣುವ ಸ್ಥಿತಿ ಏರ್ಪಡುತ್ತದೆ. ಆದ್ದರಿಂದ ನಮಗೆ ಅಭಯವು ಬೇಕಾದರೆ ಅಭಯವಿಚಾರದಲ್ಲಿ ಮನಸ್ಸನ್ನು ನಿಲ್ಲಿಸಿಕೊಂಡಿರುವ ಪದ್ಧತಿಯನ್ನು ಏರ್ಪಡಿಸಿಕೊಳ್ಳಬೇಕು.

ಮನುಷ್ಯನ ಜೀವನವು ಸಾಮಾನ್ಯವಾಗಿ ಭಯಜೀವನವಾಗಿರುತ್ತದೆ. ಅವನಿಗೆ ಹೆದರಿಕೆ ಎಂಬುದು ಬೆನ್ನಿಗೆ ಕಟ್ಟಿರುತ್ತದೆ. ಅವನ ರಕ್ತದಲ್ಲೆಲ್ಲ ನರದಲ್ಲೆಲ್ಲ, ಭಯವು ಸೇರಿಕೊಂಡುಬಿಟ್ಟಿರುತ್ತದೆ. ಅವನು ಎಲ್ಲರಿಗೂ ಹೆದರುತ್ತಾನೆ. ಎಲ್ಲಕ್ಕೂ ಹೆದರುತ್ತಾನೆ. ಅಂಚೆ ಮನೆಯಿಂದ ಬರುವ ಕಾಗದದಲ್ಲಿ ಯಾವ ಕೆಟ್ಟಸುದ್ದಿಯಿರುವದೊ, ಅಧಿಕಾರಿಗಳನ್ನು

ನೋಡುವಾಗ ನನಗೇನು ಅನಿಷ್ಟವೊದಗುವದೊ, ಮುಂದಿನ ವರ್ಷ ಕ್ಷಾಮವು ಬಂದರೆ ನಮ್ಮ ಕುಟುಂಬಭರಣವು ಸಾಗುವದು ಎಷ್ಟು ಕಷ್ಟವಾಗುವದೊ, ಈ ವರ್ಷ ಆರೋಗ್ಯವು ಕೆಟ್ಟರೆ ನನಗೆ ಏನು ಗತಿಯಾದೀತೊ? - ಎಂದು ಮುಂತಾಗಿ ಕಲ್ಪನೆಯ ಭಯಗಳನ್ನು ಸುತ್ತಲೂ ಹಾಕಿಕೊಂಡಿರುವದೇ ಬಹುಜನರ ಸ್ವಾಭಾವವಾಗಿಬಿಟ್ಟಿರುತ್ತದೆ.

ಕೆಲವು ಜನರು ಅಭಯವನ್ನು ಅಭ್ಯಾಸಬಲದಿಂದ ಸಂಪಾದಿಸಿಕೊಳ್ಳುತ್ತಾರೆ. ಆದರೆ ಹೇಳಿಕೊಟ್ಟ ಮಾತು, ಕಟ್ಟಿಕೊಟ್ಟ ಬುತ್ತಿ ಬಹುಕಾಲ ಬರುವದಿಲ್ಲ; ಇದರಂತೆ ನಾವು ಯಾವವಾದರೂ ಅಭ್ಯಾಸದಿಂದ ತಂದುಕೊಂಡ ಅಭಯವು ಬಹುಕಾಲ ನಿಲ್ಲಲಾರದು. ಎಷ್ಟೋ ವೇಳೆಗಳಲ್ಲಿ ಅದು ಸಮಯಕ್ಕೆ ಒದಗುವದೂ ಇಲ್ಲ. ನಿಜವಾದ ಅಭಯವೆಂದರೆ ಭಗವಂತನ ಅನುಗ್ರಹದಿಂದ ಬಂದದ್ದು. ಕೆಲವರಲ್ಲಿ ಅಭಯವು ಸಹಜವಾಗಿಯೇ ಇರುತ್ತದೆ. ದೈವಸಂಪತ್ತಿಯು ಅವರಲ್ಲಿ ಬೀಜರೂಪದಿಂದ ಇರುತ್ತದೆ; ಅದನ್ನು ಬೆಳೆಯಿಸಿಕೊಂಡರೆ ಅಧ್ಯಾತ್ಮವಿದ್ಯೆಗೆ ಅಧಿಕಾರಿಯಾಗುತ್ತಾರೆ.

ಭಯ, ಅಭಯ-ಇವುಗಳಿಗೆ ಮೂಲವು ಯಾವದು? ಪರಮಾತ್ಮನು ಅಭಯಕ್ಕೆ ಆಶ್ರಯನು. ಪರಮಾತ್ಮನು ನಮ್ಮೆಲ್ಲರಿಗೂ ಆತ್ಮನಾಗಿರುತ್ತಾನೆ. ನಾವು ಪರಮಾತ್ಮನಲ್ಲಿ ನೆಲೆಸಿದ್ದರೆ ಯಾವ ಭಯಕ್ಕೂ ಕಾರಣವಿರುವದಿಲ್ಲ. ಮನಸ್ಸು ಪರಮಾತ್ಮನಲ್ಲಿ ನಿಂತಿದ್ದರೆ ಸಮಾಹಿತವಾಗಿರುತ್ತದೆ, ಪರಮಾತ್ಮನಿಂದ ಈಚೆಗೆ ಬಂದರೆ ಹೊಯ್ದಾಡುತ್ತದೆ. ಹೊಯ್ದಾಟವೇ ಭಯ, ಸಮಾಧಾನವೇ ಅಭಯ. ಪರಮಾತ್ಮನಿಗೆ ಹತ್ತಿರವಾದಷ್ಟೂ ನಮಗೆ ಅಭಯವು ಹೆಚ್ಚುತ್ತದೆ. ಅವನಿಗೆ ನಾವು ದೂರವಾದಷ್ಟೂ ಭಯವು ಹೆಚ್ಚುತ್ತದೆ. ಈ ತತ್ತ್ವವನ್ನು ಅಧ್ಯಾತ್ಮಸಾಧನಗಳಲ್ಲಿ ನಿರತರಾದವರು ತಿಳಿದಿರುತ್ತಾರೆ; ಮಿಕ್ಕವರಿಗೆ ಇದರ ಗುಟ್ಟು ತಿಳಿಯದು.

ಕೆಲವರ ಮನಸ್ಸು ಒಳಮುಖವಾಗಿರುತ್ತದೆ. ಅನೇಕ ಜನರ ಮನಸ್ಸು ಹೊರಮುಖವಾಗಿರುತ್ತದೆ. ಒಳಮುಖವೆಂದರೆ ಆತ್ಮನ ಕಡೆಗೆ ತಿರುಗಿರುವದು. ಹೊರಮುಖವೆಂದರೆ ಹೊರಗಿನ ವಿಷಯಗಳ ಚಿಂತೆಯಲ್ಲಿ ಮುಳುಗಿರುವದು. ಯಾವನ ಮನಸ್ಸು ಸಹಜವಾಗಿ ಹೊರಮುಖವಾಗಿರುವದೋ ಅವನಿಗೆ ಎಲ್ಲೆಲ್ಲಿಯೂ ಭಯವೇ ಕಾಣುತ್ತಿರುತ್ತದೆ. ಎಲ್ಲರೂ ತನಗೆ ಭಯಹೇತುಗಳೆಂದೇ ಅವನ ನಂಬಿಕೆ. ಹೊರಗಿನ ವಸ್ತುಗಳು ಬರುತ್ತವೆ, ಹೋಗುತ್ತವೆ; ಇದು ಅವುಗಳ ಸ್ವಭಾವ. ಆದರೆ ಬಂದರೆ ಬಂದವಲ್ಲ ಎಂಬ ಭಯ, ಹೋದರೆ ಹೋದವಲ್ಲ ಎಂಬ ಭಯ-ಹೀಗೆ ಹೊರಮುಖವಾಗಿರುವ ಮನಸ್ಸಿನವನು ಯಾವಾಗಲೂ ಭಯದಲ್ಲಿಯೇ ಇದ್ದುಕೊಂಡಿರುತ್ತಾನೆ. ಯಾವನು ಪರಮಾತ್ಮನ ಬಲವನ್ನು ಅವಲಂಬಿಸಿಕೊಂಡಿರುತ್ತಾನೋ ಅವನೊಬ್ಬನೇ ಅಭಯದಲ್ಲಿರುವವನು. ಮಿಕ್ಕವರೆಲ್ಲ ಈ ಪ್ರಪಂಚವನ್ನು ಒಂದು ಭಯದ ಬಲೆ ಎಂತ ಬಗೆಯುತ್ತಿರುವರು. ಯಾವನ ಹೃದಯದೊಳಗೆ ಭಯವಿಲ್ಲವೋ ಅವನಿಗೆ ಹೊರಗೂ ಭಯವಿಲ್ಲ; ಯಾವನು ಭಯವನ್ನು ಹೃದಯದೊಳಗೆ

ಇಟ್ಟು ಕೊಂಡಿರುವನೋ ಅವನಿಗೆ ಭಯರಹಿತವಾದ ಸ್ಥಲವಾಗಲಿ ವಸ್ತುವಾಗಲಿ ಕಾಣಿಸಲೇ ಆರದು. ಹೀಗೆ ಪರಮ್ಮೇಶ್ವರನನ್ನವಲಂಬಿಸಿ ಯಾರು ಭಯವನ್ನು ಹೃದಯದಿಂದ ಕಿತ್ತುಹಾಕಿಕೊಂಡಿರುವರೋ ಅವರು ದೈಸಂಪತ್ತಿನವರೆಂದು ತಿಳಿಯಬೇಕು. ಅವರಿಗೆ ಅಧ್ಯಾತ್ಮಶಾಸ್ತ್ರದಲ್ಲಿ ಹೆಚ್ಚಿನ ಅಧಿಕಾರವಿರುತ್ತದೆ ಎಂದು ತಿಳಿಯಬೇಕು.

ಭಯ, ಅಭಯ-ಇವುಗಳಿಗೆ ಇನ್ನೊಂದು ರೂಪವುಂಟು ಕೆಲವರು ನಮಗೆ ಮನೆಯಿದೆ, ಹೊಲವಿದೆ, ಹಣವಿದೆ, ಹೆಂಡಿರುಮಕ್ಕಳಿದ್ದಾರೆ, ನೆಂಟರಿಷ್ಟರಿದ್ದಾರೆ, ಆರೋಗ್ಯವಿದೆ, ವಿದ್ಯೆಯಿದೆ, ಬುದ್ಧಿಯಿದೆ, ಜನಸಹಾಯವಿದೆ; ಆದ್ದರಿಂದ ನಮಗೇನೂ ಭಯವಿಲ್ಲ ಎಂದು ತಿಳಿದುಕೊಂಡಿರುತ್ತಾರೆ. ಇಷ್ಟು ಅನುಕೂಲ್ಯವಿರುವ ನನಗೆ ಏತರ ಭಯ? ನಾನು ಗಟ್ಟಿಯಾದ ನೆಲದಮೇಲೆ ನಿಂತಿದ್ದೇನೆ. ಆದ್ದರಿಂದ ನನ್ನ ಕಾಲು ದೊಸಕೊಳ್ಳುವ ಭಯವಿಲ್ಲ-ಎಂದು ಅವರ ನಂಬಿಕೆ. ಆದರೆ ಇಂಥ ಅಭಯಕಾರಣವು ನಿಜವಾದ ಅಭಯವನ್ನು ಕೊಡಲಾರದು. ರಾವಣನ ಸಿರಿಗೆ ಏನು ಕಡಿಮೆಯಿತ್ತು? ಅವನಿಗೆ ಕುಲದ, ಧನದ, ಅಧಿಕಾರದ, ವಿದ್ಯೆಯ, ಹರೆಯದ, ಬಂಧುಬಾಂಧವರ-ಇವೇ ಮುಂತಾದವುಗಳ ಬಲವೆಲ್ಲವೂ ಇತ್ತು. ಸಮುದ್ರದಿಂದಾಚೆಗಿರುವ ದ್ವೀಪದಲ್ಲಿರುವ ಐಶ್ವರ್ಯವಂತನಾದ ಬಲವಂತನಾದ ತನಗೆ ಯಾವ ಭಯವೂ ಇಲ್ಲ ಎಂದಿತ್ತು, ಅವನ ನಂಬಿಕೆ. ಯಕ್ಷರಾಕ್ಷಸಗಂಧರ್ವಾದಿಗಳಿಂದಲೂ ತನಗೆ ಮರಣವಾಗದಂತೆ ವರವನ್ನು ಪಡೆದುಕೊಂಡಿದ್ದನು. ಆದರೇನು? ಕ್ಷಣಮಾತ್ರದಲ್ಲಿ ಅವನ ಐಶ್ವರ್ಯವೆಲ್ಲ ಹಾಳಾಯಿತು; ಅವನ ಪುತ್ರಪೌತ್ರಬಂಧುಬಾಂಧವರೆಲ್ಲರೂ ನಾಶವಾದರು! ಹೀಗೆ ಭಯದಲ್ಲಿ ಅಭಯಬುದ್ಧಿಯನ್ನು ಮಾಡುವವರು ಹಲವರು ಇರುತ್ತಾರೆ. ಇನ್ನು ಅಭಯದಲ್ಲಿ ಭಯಬುದ್ಧಿಯನ್ನು ಮಾಡುವವರೂ ಉಂಟು. ಅವರಿಗೆ ಪರಮಾತ್ಮವಿಚಾರವೆಂದರೆ ಭೀತಿ. ಈಗ ಸಂಸಾರದಲ್ಲಿ ಯಾವ ಭಯವೂ ಇಲ್ಲದೆ ಇದ್ದುಕೊಂಡಿರುತ್ತೇವೆ. ಈ ಸಾಧುಸತ್ಪುರುಷರ ಬೋಧೆಯನ್ನು ಕೇಳಿ ನಮಗೆ ಎಲ್ಲಿಯಾದರೂ ವೈರಾಗ್ಯವುಂಟಾದರೆ ಏನು ಗತಿ? - ಎಂದು ಅಂಜಿಕೊಂಡು ನಡುಗುವ ಮೂಢರೂ ಉಂಟು. ಆಹಾ! ಏನು ವಿಚಿತ್ರ! ನಿಜವಾಗಿ ಅಂಜಬೇಕಾದ ಅನರ್ಥಗಳಲ್ಲಿ ನಮಗೆ ಹೆಚ್ಚಿನ ನಂಬಿಕೆ; ಇದರಲ್ಲಿ ಎಂದಿಗೂ ಯಾವದೂ ನಿಜವಾಗಿ ಭದ್ರವಲ್ಲ ಎಂದು ದೊಡ್ಡವರು ಎಷ್ಟು ಸಾರಿದರೂ ನಾವು ಕೇಳುವದಿಲ್ಲ. ಆದರೆ ಈ ಭಯದಿಂದ ಬಿಡುಗಡೆ ಹೊಂದುವದಕ್ಕೆ ಪರಮಾರ್ಥಸಾಧನೆಯನ್ನು ಕೈಗೊಳ್ಳಿರಿ ಎಂದರೆ ನಮಗೆ ಇಲ್ಲದ ಭಯ!

ಈ ಸಂಸಾರದಲ್ಲಿ ಆಗಾಗ್ಗೆ ಶೋಕಗಳೂ ಭಯಗಳೂ ಒಂದರಮೇಲೊಂದು ಬಂದು ಕಾಣಿಸಿಕೊಳ್ಳುತ್ತಲೇ ಇರುವವು. "ಶೋಕಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ । ದಿವಸೇ ದಿವಸೇ ಮೂಢಂ ಪ್ರವಿಶನ್ತಿ ನ ಪಣ್ಡಿತಮ್॥" ಎಂಬ ವ್ಯಾಸೋಕ್ತಿಯಂತೆ ನಮಗೆ `ಅಯ್ಯೋ ಅದು ಹೋಯಿತಲ್ಲ' ಅಯ್ಯೋ, ಇದು ಹೋಗುವದಲ್ಲ! - ಎಂಬ ಶೋಕವೂ ಭಯವೂ ಮೇಲಿಂದ ಮೇಲೆ ಕಾಣಿಸಿಕೊಳ್ಳುತ್ತಲೇ ಇರುವವು. ಆದರೆ ಯಾರು ಈ ಕಗ್ಗತ್ತಲೆಯ

ಸಂಸಾರದಲ್ಲಿ ಪರಮಾತ್ಮನನ್ನು ಬಿಡದೆ ಸ್ಮರಿಸುತ್ತಿರುವರೋ ಅವರು ಕತ್ತಲೆಯ ದಾರಿಯಲ್ಲಿ ಅಪ್ಪನ ಕೈಹಿಡಿದಿರುವ ಬಾಲಕನಂತೆ ಏತರ ಅಂಜಿಕೆಯೂ ಇಲ್ಲದೆ ಮುಂದೆ ಸಾಗುವರು. ಪರಮಾತ್ಮನಿಗೆ "ಭಯಕೃದ್ಭಯನಾಶನಃ" (ಭಯವನ್ನುಂಟುಮಾಡುವವನು, ಭಯದಿಂದ ಪಾರುಮಾಡುವವನು) ಎಂಬ ಹೆಸರುಗಳಿವೆ. ತತ್ತ್ವವನ್ನು ಅರಿಯದೆ ಇರುವವರಿಗೆ ಪರಮಾತ್ಮನೇ ಬಗೆಬಗೆಯ ಭಯಕಾರಣಗಳ ರೂಪದಿಂದ ಕಾಣಿಸಿಕೊಳ್ಳುತ್ತಿರುವನು; ಆತನ ಸ್ಮರಣೆ ಬಂದರೂ ಸಾಕು, ನಮಗೆ ಆತನು ಅಭಯಪ್ರದನಾಗುವನು.

ಅಭಯವೆಂಬುದು ಈಶ್ವರಾನುಗ್ರಹದಿಂದ ನಮಗೆ ದೊರೆತಿದ್ದರೆ ಒಳ್ಳೆಯದು; ಹಾಗಿಲ್ಲದಿದ್ದರೆ ಅದನ್ನು ಪ್ರಯತ್ನಪೂರ್ವಕವಾಗಿ ಸಂಪಾದಿಸಿಕೊಳ್ಳಬೇಕು. ಪರಮಾತ್ಮನ ನಾಮವನ್ನು ಸರ್ವದಾ ಸ್ಮರಣೆಮಾಡುತ್ತಿರಿ; ರಾಮ, ಕೃಷ್ಣ, ನಾರಾಯಣ - ಮುಂತಾದ ಹೆಸರುಗಳಿಂದ ಆತನನ್ನು ಕೂಗಿ ಕರೆಯುತ್ತಿರಿ. ಆರ್ತರಾದವರೂ ವಿಷಣ್ಣರಾದವರೂ ಭೀತರಾಗಿರುವವರೂ "ನಾರಾಯಣ"! ಎಂಬ ಶಬ್ದಮಾತ್ರವನ್ನು ಉಚ್ಚರಿಸಿದರೂ ಆ ಸಂಕೀರ್ತನೆಯಿಂದ ದುಃಖವೆಲ್ಲವನ್ನೂ ಕಳೆದುಕೊಳ್ಳುವರು- ಎಂದು ಸ್ಮೃತಿಯಿದೆ. ಪರಮಾತ್ಮನ ನಾಮಸ್ಮರಣೆಯಿಂದ, ಪರಮಾತ್ಮನ ಅಸ್ತಿತ್ವದಲ್ಲಿಯೂ ಸರ್ವವ್ಯಾಪಿತ್ವ, ದೀನ ದಯಾಲುತ್ವ-ಮುಂತಾದ ಗುಣಗಳಲ್ಲಿಯೂ ನಂಬಿಕೆಯಿಡುವದರಿಂದ ನಮಗೆ ಅಭಯವು ಮೆಲ್ಲಮೆಲ್ಲನೆ ವಶವಾಗುವದು.

## ೧೪೪. ದೈವಸಂಪತ್ತು 16 - (1)

**(2-10-49)**

ಹದಿನಾರು ಹದಿನೇಳನೆಯ ಅಧ್ಯಾಯಗಳಲ್ಲಿರುವ ವಿಷಯಗಳು ಗೀತೆಯ ಪರಿಶಿಷ್ಟದಂತೆ ಇವೆ ಎಂದು ಹಿಂದೆ ಹೇಳಿರುತ್ತೇನೆ. ಗೀತೆಗೆಲ್ಲ ಅನ್ವಯಿಸುವ ವಿಷಯಗಳು ಇಲ್ಲಿರುತ್ತವೆ. ಯಾರು ದೈವಸಂಪತ್ತಿನಿಂದ ಕೂಡಿರುವರೋ ಅವರಿಗೆ ಮಾತ್ರ ಗೀತೆಯ ಬೋಧೆಯು ರುಚಿಸುತ್ತದೆ. ಆದ್ದರಿಂದ ದೈವಸಂಪತ್ತನ್ನು ಮೊದಲು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು.

ದೈವಸಂಪತ್ತಿನವರು, ಆಸುರಸಂಪತ್ತಿನವರು - ಎಂದು ಎರಡು ಬೇರೆ ಬೇರೆಯ ಗುಂಪಿನ ಜನರು ಜಗತ್ತಿನಲ್ಲಿ ಸೃಷ್ಟಿಯಾಗಿರುತ್ತಾರೆಂದು ಭಾವಿಸಬಾರದು. ಪ್ರತಿಯೊಬ್ಬನಲ್ಲಿಯೂ ಆಯಾ ಸಂದರ್ಭಕ್ಕೆ ತಕ್ಕಂತೆ ಈ ಎರಡು ಸ್ವಭಾವಗಳೂ ಹಿಗ್ಗುತ್ತಲೂ ಕುಗ್ಗುತ್ತಲೂ ಇರುತ್ತವೆ. ನಮ್ಮಲ್ಲಿ ದೈವಾಸುರಯುದ್ಧವು ಪ್ರತಿಯೊಬ್ಬನಲ್ಲಿಯೂ ನಿತ್ಯವೂ ನಡೆಯುತ್ತಿರುತ್ತದೆ. ಒಟ್ಟಿನಲ್ಲಿ ಯಾವದು ಗೆಲ್ಲುತ್ತದೆಯೋ ಆ ಸಂಪತ್ತಿನವರು ನಾವು ಎನ್ನಿಸುತ್ತೇವೆ. ಅಷ್ಟೆ.

ನನ್ನಲ್ಲಿ ದೈವೀಸಂಪತ್ತು ಇಲ್ಲವೇ ಇಲ್ಲ, ಎಂದಿಗೂ ಬರುವ ಹಾಗೆ ಇಲ್ಲ - ಎಂದು ಯಾರೂ ನಿರಾಶರಾಗುವದಕ್ಕಿಲ್ಲ; ಅಥವಾ ವಯಸ್ಸಾದಮೇಲೆ ತಾನಾಗಿಯೇ ಬರುತ್ತದೆ ಎಂದು ಭರವಸೆಯನ್ನಿಟ್ಟುಕೊಳ್ಳುವಂತೆಯೂ ಇಲ್ಲ. ನಮ್ಮನ್ನು ಮನುಷ್ಯತ್ವಕ್ಕಿಂತ ಹೆಚ್ಚಿನ ಮಟ್ಟಕ್ಕೆ ಅಂತಃಕರಣದ ವಾಸನೆಯು ಏರಿಸಿದರೆ ಅದು ದೈವ, ಕೆಳಕ್ಕೆ ಇಳಿಸಿದರೆ ಅದು ಆಸುರ. ಭರತಖಂಡದಲ್ಲಿ ತತ್ತ್ವಪ್ರಿಯರೂ ಧರ್ಮಪ್ರಿಯರೂ ಸ್ವಭಾವದಿಂದಲೇ ಹೆಚ್ಚಾಗಿರುತ್ತಾರೆಂದು ಪಾಶ್ಚಾತ್ಯರನೇಕರು ನಂಬುತ್ತಾರೆ! ನಮ್ಮ ದೇಶವೇ ದೈವಸಂಪತ್ತಿನ ಬೆಳವಣಿಗೆಗೆ ತಕ್ಕ ಸಂನಿವೇಶಗಳಿಂದ ತುಂಬಿರುತ್ತದೆ. ನಾವು ಮಾತ್ರ ಅದನ್ನು ಸರಿಯಾಗಿ ಉಪಯೋಗಿಸಿಕೊಳ್ಳುತ್ತಲಿಲ್ಲ. ಅದನ್ನು ಉಪಯೋಗಿಸಿಕೊಂಡು ಕೃತಾರ್ಥರಾಗುವದು ನಮ್ಮ ಮೇಲೆ ಬಿದ್ದ ಭಾರವಾಗಿದೆ.

ಹಿಂದಿನ ದಿನ `ಅಭಯ' ಎಂಬ ಗುಣವನ್ನು ಕುರಿತು ಮಾತನಾಡಿದ್ದಾಯಿತು. ಈಗ ``**ಸತ್ತ್ವಸಂಶುದ್ಧಿ**'' ಯನ್ನು ಕುರಿತು ಹೇಳಬೇಕಾಗಿದೆ. ಸತ್ತ್ವಸಂಶುದ್ಧಿ ಎಂದರೆ ಭಾವಸಂಶುದ್ಧಿಯು. ಅಂತಃಕರಣಕ್ಕೆ ಸತ್ತ್ವಗುಣವು ಹೆಚ್ಚಾಗಿರುವಾಗ ಅದಕ್ಕೆ ಸತ್ತ್ವವೆಂಬ ಹೆಸರು ಬರುತ್ತದೆ. ಆದ್ದರಿಂದ ಸತ್ತ್ವ ಸಂಶುದ್ಧಿ ಎಂಬುದು ಕೆಂಪುಗುಲಾಬಿ ಎಂಬ ಮಾತಿನಂತೆ ವಿಶಿಷ್ಟಪದಾರ್ಥದಲ್ಲಿರುವ ಗುಣವನ್ನೇ ಬಿಡಿಸಿ ಸ್ಫುಟಗೊಳಿಸಿ ಹೇಳಿದ್ದಾಗಿರುತ್ತದೆ.

ಸತ್ತ್ವವು ಶುದ್ಧವಾಗಿರುತ್ತದೆ ಎಂದರೇನರ್ಥ? ಮಾಯೆ, ಅನೃತ, ವಂಚನೆ-ಮುಂತಾದ ದೋಷಗಳಿಲ್ಲದಿರುವದು. ಸಾತ್ತ್ವಿಕರ ಮನಸ್ಸಿನಲ್ಲಿ ಮಾಯೆ, ಅನೃತ - ಮುಂತಾದವುಗಳಿರುವದಿಲ್ಲವೆಂಬುದಿಷ್ಟೇ ಅಲ್ಲ; ಅವರು ಮತ್ತೊಬ್ಬರನ್ನು ಕೂಡ ಮಾಯಾದಿಗಳೆಂದು ಸಂಶಯದೃಷ್ಟಿಯಿಂದ ಕಾಣಲಾರದೆ ಇರುತ್ತಾರೆ. ಅವರ ಹತ್ತಿರ ಅಶುದ್ಧವಾದ ಅಂತಃಕರಣವಿರುವವರು ಬಂದರೆ ಸಾತ್ತ್ವಿಕರಾಗಿ ಪರಿಣಮಿಸುವ ಸಂಭವವೇ ಬಹಳವಿದೆ. ವಾಲ್ಮೀಕಿಯು ಕಿರಾತನಾಗಿರುವಾಗಲೂ ಋಷಿಗಳ ಸಂಪರ್ಕದಿಂದ ಸಾತ್ತ್ವಿಕನಾಗಿ ಪರಿಣಮಿಸಿದ ಕಥೆ ನಮ್ಮಲ್ಲಿ ಪ್ರಸಿದ್ಧವಾಗಿರುತ್ತದೆ. ಟಾಲ್‌ಸ್ಟಾಯ್ ಎಂಬ ರಷ್ಯದೇಶದ ಗ್ರಂಥಕರ್ತನೊಬ್ಬನು ಒಂದು ಕಥೆಯನ್ನು ಬರೆದಿರುವದನ್ನು ಓದಿರುವ ನೆನಪು ನನಗೆ ಇದೆ. ಅದರಲ್ಲಿ ಒಬ್ಬ ಕಳ್ಳನು ಎಲ್ಲಿಗೆ ಹೋದರೂ ಜನರು ಅವನನ್ನು ಸಂಶಯಗ್ರಸ್ತರಾಗಿಯೇ ಕಾಣುತ್ತಿದ್ದದ್ದರಿಂದ ಅವನಿಗೆ ಎಲ್ಲಿಯೂ ಆಸರೆಯು ಸಿಕ್ಕುವಂತಿರಲಿಲ್ಲ ; ಅವನು ತಾನು ಮಾಡಿದ ಕಳ್ಳತನಕ್ಕೆ ಶಿಕ್ಷೆಯನ್ನು ಅನುಭವಿಸಿ ಅನುಭವಿಸಿ ಕಲ್ಲುಹೃದಯದವನಾಗಿಬಿಟ್ಟಿದ್ದನು. ಹೀಗಿರುವಲ್ಲಿ ಅವನಿಗೆ ಒಬ್ಬ ಬಿಷಪ್ಪನು - ಧರ್ಮಾಧಿಕಾರಿ ಆಶ್ರಯವನ್ನು ಕೊಟ್ಟನು. ಅವನಿಗೆ ಆತಿಥ್ಯವನ್ನು ಮಾಡಿ ರಾತ್ರೆ ವಿಶ್ರಾಂತಿಗೂ ಸ್ಥಳವನ್ನು ಕೊಟ್ಟನು. ಕಳ್ಳನು ತನ್ನ ಸ್ವಭಾವದಲ್ಲಿದ್ದ ವರ್ತನೆಯ ವಾಸನೆಯಿಂದ ಆ ಬಿಷಪ್ಪನ ಮನೆಯಲ್ಲಿದ್ದ ಬೆಳ್ಳಿಯ ಚಮಚ, ಪಾತ್ರೆ - ಮುಂತಾದವನ್ನು ಕದ್ದು ಓಡಿದನು ; ಪೋಲಿಸಿನವರು ಅವನನ್ನು ಹಿಡಿದುಕೊಂಡು ಬಂದು

`ಈ ಪದಾರ್ಥಗಳು ನಿಮ್ಮವೆ?" ಎಂದು ಬಿಷಪ್ಪನನ್ನು ಕೇಳಿದ್ದಕ್ಕೆ 'ಹೌದು, ಅವು ನನ್ನವೇ, ಅವನ್ನು ನಾನೇ ಇವನಿಗೆ ಕೊಟ್ಟಿರುತ್ತೇನೆ- ಎಂದು ಕನಿಕರದಿಂದ ನುಡಿದುಬಿಟ್ಟನಂತೆ. ಅಂದಿನಿಂದ ಆ ಕಳ್ಳನ ಹೃದಯದಲ್ಲಿ ಒಂದು ದೊಡ್ಡ ಪರಿವರ್ತನೆಯಾಗಿಬಿಟ್ಟಿತು. ಈ ಕಥೆಯು ಯಾವ ಕಾದಂಬರಿಯದು, ಇದರ ವಿವರಗಳು ನಾನು ಈಗ ಹೇಳಿರುವಂತೆಯೇ ಇವೆಯೆ - ಎಂಬುದು ಕೂಡ ನನಗೆ ಚೆನ್ನಾಗಿ ನೆನಪಿಲ್ಲ. ಹೇಗಾದರೂ ಆಗಲಿ, ಸತ್ತ್ವಸಂಶುದ್ಧಿಯಿರುವವರ ಸ್ವಭಾವವನ್ನು ತಿಳಿಯುವದಕ್ಕೆ ಇಲ್ಲಿ ಒಂದು ಒಳ್ಳೆಯ ನಿದರ್ಶನವಿದೆ ಎಂಬುದಕ್ಕೆ ಸಂದೇಹವಿಲ್ಲ. ಸ್ವಾಮಿ ವಿವೇಕಾನಂದರವರು ಒಂದು ಕಡೆಯಲ್ಲಿ ಹೀಗೆಂದಿರುತ್ತಾರೆ.: `ನಿಮ್ಮ ಹೃದಯದಲ್ಲಿ ಕಳ್ಳನಿದ್ದರೆ ನಿಮಗೆ ಹೊರಗೂ ಕಳ್ಳರೇ ಕಾಣುತ್ತಾರೆ. ಇಲ್ಲದಿದ್ದರೆ ಕಾಣುವದಿಲ್ಲ.' ಈ ಮಾತು ನಿಜ. ಸಾತ್ತ್ವಿಕನಾದ ಬಿಷಪ್ಪನ ಕಣ್ಣಿಗೆ ಕಳ್ಳನು ಕಾಣಿಸಲೇ ಇಲ್ಲ. ಅತಿಥಿಯೇ ಕಂಡನು.

ನಮ್ಮ ದೇಶದಲ್ಲಿ ಸುಪ್ರಸಿದ್ಧರಾಗಿ ಬಲುಮಟ್ಟಿಗೆ ಸತ್ತ್ವಸಂಶುದ್ಧಿಯನ್ನು ತೋರಿಸಿದ ಮಹಾತ್ಮಗಾಂಧಿಯವರನ್ನೂ ಇಲ್ಲಿ ಉದಾಹರಿಸಬಹುದು.. ಅವರು ಬ್ರಿಟಿಷ್ ಸರಕಾರದೊಡನೆ ಹೋರಾಡುವಾಗ ಯಾವದೊಂದು ಮುಚ್ಚುಮರೆಯೂ ಇಲ್ಲದೆ ತಮ್ಮ ಮುಂದಿನ ಕಾರ್ಯಕ್ರಮವನ್ನು ಮೊದಲೇ ತಿಳಿಸಿಬಿಡುತ್ತಿದ್ದರು. ಅವರ ಭಾವಶುದ್ಧಿ ಎಂಥ ಮೇಲ್ಮಟ್ಟದ್ದು ! ಪ್ರಹ್ಲಾದನನ್ನು ತಂದೆಯು ಶತ್ರುಗಳಲ್ಲಿ ಹೇಗೆ ವರ್ತಿಸಬೇಕು. ಮಿತ್ರರಲ್ಲಿ ಹೇಗೆ ನಡೆಯಬೇಕು? - ಎಂದು ಮುಂತಾದ ರಾಜನೀತಿಯ ವಿಷಯದಲ್ಲಿ ಪ್ರಶ್ನೆಯನ್ನು ಹಾಕಿದಾಗ `ತಂದೆಯೆ, ನನಗೆ ಶತ್ರುಮಿತ್ರರುಗಳೇ ಕಾಣಿಸುವದಿಲ್ಲ, ಎಲ್ಲರಲ್ಲಿಯೂ ನನಗೆ ಪರಮಾತ್ಮನೇ ಕಾಣಿಸುತ್ತಿದಾನೆ' ಎಂದನಂತೆ ! ಅದೇ ನಿಜವಾದ ಸತ್ತ್ವಸಂಶುದ್ಧಿ.

ಸತ್ತ್ವಸಂಶುದ್ಧಿಯಿಲ್ಲದವರ ಮನಸ್ಸು ರಜಸ್ತಮಸ್ಸುಗಳಿಂದ ಮಿಶ್ರವಾಗಿರುವದರಿಂದ ಅವರು ಎಲ್ಲರನ್ನೂ ಸಂಶಯಭಯಾದಿಗಳಿಂದ ಕೂಡಿಯೇ ನೋಡುತ್ತಿರುತ್ತಾರೆ. ಸಂಪೂರ್ಣವಿಶ್ವಾಸದಿಂದ ಇದ್ದ ದಂಪತಿಗಳಲ್ಲಿಯೇ ಒಬ್ಬನು ಒಡಕುಹುಟ್ಟಿಸಿದನೆಂದು ಒಂದು ಕಥೆಯಲ್ಲಿ ಹೇಳಿರುವದನ್ನು ನೀವು ಕೇಳಿರಬಹುದು. `ನನಗೆ ಜನ್ಮಾಂತರದ ವೃತ್ತಾಂತವನ್ನು ಹೇಳುವ ತಿಳಿವಳಿಕೆ ಇದೆ; ನಿನ್ನ ಗಂಡನು ಹಿಂದೆ ಉಪ್ಪಾರರವನಾಗಿದ್ದನು, ಆದ್ದರಿಂದಲೇ ಅವನ ಬೆನ್ನು ಈಗಲೂ ಉಪ್ಪುಪ್ಪಾಗಿರುತ್ತದೆ. ಬೇಕಾದರೆ ಈ ರಾತ್ರೆ ನೆಕ್ಕಿನೋಡು' ಎಂದು ಆ ಕುಚ್ಚೇಷ್ಟೆಗಾರನು ಹೆಂಡತಿಗೆ ಹೇಳಿದನಂತೆ. `ನಿನ್ನ ಹೆಂಡತಿ ಹಿಂದಿನ ಜನ್ಮದಲ್ಲಿ ನಾಯಿಯಾಗಿದ್ದಳು; ಅವಳು ಆದ್ದರಿಂದಲೇ ಈಗಲೂ ಆಗಾಗ್ಗೆ ನಿನ್ನ ಬೆನ್ನು ನೆಕ್ಕುವಳು; ಎಚ್ಚರದಿಂದ ಪರೀಕ್ಷಿಸುತ್ತಿರು' ಎಂದು ಗಂಡನಿಗೆ ಏಕಾಂತದಲ್ಲಿ ತಿಳಿಸಿದನಂತೆ. ಸಂಶಯಕುತೂಹಲಗಳಿಂದ ಕೂಡಿದ ಆ ಗಂಡಹೆಂಡಿರು ಈ ಧೂರ್ತನ ಸೂಚನೆಯಂತೆಯೇ ಮಾಡಿಬಿಟ್ಟರಂತೆ. ಆ ಹೆಣ್ಣುಮಗಳು ಗಂಡನ ಬೆನ್ನು ನೆಕ್ಕುವದಕ್ಕೆ ಹೋಗಲು ಅವನು ``ಛೀ, ನಾಯಿ! " ಎಂದನಂತೆ ! ಅವಳು ``ಥೇ, ಉಪ್ಪಾರರವನೆ?" ಎಂದಳಂತೆ! ಇಷ್ಟು ನಗೆಪಾಟಲಾಗಿ

ನಾವು ನಿಜವಾದ ವ್ಯವಹಾರದಲ್ಲಿ ವರ್ತಿಸದೇ ಇರಬಹುದು. ಆದರೆ ಮನಸ್ಸಿನಲ್ಲಿ ಅಶುದ್ಧಿಯಿರುವವರು ಹೊರಗೆ ಎಲ್ಲೆಲ್ಲಿಯೂ ಅಶುದ್ಧಿಯನ್ನು ಕಾಣುವರೆಂಬುದು ನಿಶ್ಚಯ.

ಆದ್ದರಿಂದ ಜೀವನವು ಸುಖಶಾಂತಿಗಳಿಂದ ಕೂಡಿರುವದಕ್ಕೆ ಸತ್ತ್ವಶುದ್ಧಿಯೂ ಅತ್ಯವಶ್ಯವಾಗಿರುತ್ತದೆ. ಪರಮಾರ್ಥಜ್ಞಾನಕ್ಕಂತೂ ಸತ್ತ್ವಶುದ್ಧಿಯಿಲ್ಲದೆ ಆಗುವದೇ ಇಲ್ಲ. ವ್ಯವಹಾರದಲ್ಲಿ ಜನರಿಗೆ ಸಂಪೂರ್ಣಸತ್ತ್ವಶುದ್ಧಿಯಿರುವದಕ್ಕೆ ಅವಕಾಶವಿರುವದಿಲ್ಲ; ಏಕೆಂದರೆ ಹಾಸ್ಯವೇ ಮುಂತಾದ ನಿಮಿತ್ತದಿಂದಲಾದರೂ ಅವರಲ್ಲಿ ವಕ್ರವಾದ ನಡತೆಯೂ ಒಳಗೊಂದು ಹೊರಗೊಂದು ಇರುವ ಮನೋಭಾವವೂ ಸುಳ್ಳಾಡುವದೂ ತಪ್ಪುವಂತಿಲ್ಲ. ಮುಮುಕ್ಷುಗಳಾದವರು ಪರಮಾತ್ಮನೇ ತಮಗೆ ಬೇಕು, ಈ ಇಚ್ಛೆಯಿಂದ ತಮಗೆ ಯಾವ ವ್ಯವಹಾರದ ನಷ್ಟವಾದರೂ ಆಗಲಿ - ಎಂದಿರುವದರಿಂದ ಅವರು ಸತ್ತ್ವಶುದ್ಧಿಯಿಂದ ಇರಬಹುದಾಗಿರುತ್ತದೆ.

ಜ್ಞಾನಯೋಗವ್ಯವಸ್ಥಿತಿ ಎಂಬುದು ಇನ್ನೊಂದು ದೈವಸಂಪತ್ಸೂಚಕ ಗುಣವು. ಇಲ್ಲಿ ಜ್ಞಾನವೆಂದರೆ ಶಾಸ್ತ್ರದಿಂದಲೂ ಗುರುವಿನಿಂದಲೂ ತತ್ತ್ವವನ್ನು ಅರಿತುಕೊಂಡದ್ದು, ಶಾಸ್ತ್ರದ ದೃಷ್ಟಿಯು ಹೇಗಿರುವದೋ ಅದೇ ದೃಷ್ಟಿಯನ್ನು ಅವಲಂಬಿಸಿರುವದು; ಗುರುವು ಹೇಗೆ ಶಾಸ್ತ್ರಾರ್ಥವನ್ನು ತಿಳಿಸಿಕೊಡುತ್ತಾನೋ ಹಾಗೆಯೇ ಅದನ್ನು ತಿಳಿದುಕೊಂಡಿರುವದು. ಹೇಗೆ ದೀಪವು ಇದ್ದ ವಸ್ತುವನ್ನು ಇದ್ದಂತೆಯೇ ಬೆಳಗಿ ತೋರಿಸಿಕೊಡುವದೋ ಹಾಗೆಯೇ ಶಾಸ್ತ್ರವೂ ಗುರುಗಳೂ ತಿಳಿಸಿಕೊಡುತ್ತಾರೆ. ನಾವುನಾವೇ ಶಾಸ್ತ್ರದ ತತ್ತ್ವವನ್ನು ಸ್ವತಂತ್ರರಾಗಿ ನಿರ್ಧರಿಸಲಾರೆವು. ಅನುಭವಿಗಳಾದ ಗುರುಗಳೇ ಶಾಸ್ತ್ರವನ್ನು ಸರಿಯಾಗಿ ತಿಳಿಸಿಕೊಡಬಲ್ಲರು. ಶಾಸ್ತ್ರವಾಗಲಿ ಗುರುವಾಗಲಿ ನಮ್ಮನ್ನು ಕಷ್ಟಕ್ಕೆ ಈಡುಮಾಡಿಸಿ ಈ ಲೋಕದ ಸುಖದಿಂದ ವಂಚಿತರನ್ನಾಗಿ ಮಾಡುವದಕ್ಕೆ ಹುಟ್ಟಿರುವದಿಲ್ಲ. ಮೊದಮೊದಲು ನಮಗೆ ಲೌಕಿಕಜ್ಞಾನವೇ ನಿಜವಾದ ಜ್ಞಾನವೆಂದು ತೋರಿದರೂ ಗುರುಶಾಸ್ತ್ರಗಳಲ್ಲಿ ಶ್ರದ್ಧೆಯಿಂದ ತತ್ತ್ವವಿಚಾರವನ್ನು ಮಾಡಿದ ಬಳಿಕ ನಮ್ಮ ಸಾಮಾನ್ಯಜ್ಞಾನವು ಅಜ್ಞಾನವೆಂದೂ ಶಾಸ್ತ್ರಜ್ಞಾನವೇ ಪರಮಪುರುಷಾರ್ಥಕ್ಕೆ ಉಪಾಯವೆಂದೂ ತಿಳಿದುಬರುತ್ತದೆ. ಈ ಜ್ಞಾನವನ್ನು ನಮ್ಮ ಅನುಭವಕ್ಕೆ ಹೊಂದುಗಡೆಮಾಡುವದೇ ಯೋಗವು. ಈ ಜ್ಞಾನಯೋಗಗಳಲ್ಲಿಯೇ ನೆಲೆನಿಲ್ಲತಕ್ಕದ್ದು ಒಂದು ದೈವಸಂಪತ್ತು.

ಜ್ಞಾನವನ್ನು ಸಂಪಾದಿಸುವದೂ ಅದರ ಯೋಗದಲ್ಲಿ ಎಂದರೆ ಅನುಭವದಲ್ಲಿ ಆನಂದವನ್ನು ಪಡೆಯುತ್ತಿರುವದೂ ದೇವತೆಗಳ ಸಂಪತ್ತು ಎಂದದ್ದರಿಂದ ದೇವತೆಗಳಿಗೆ ಸ್ವಭಾವವಾಗಿ ಜ್ಞಾನಯೋಗಗಳಲ್ಲಿ ಒಲವು ಇರುತ್ತದೆ ಎಂದು ತಿಳಿಸಿದಂತೆ ಆಯಿತು. ಜ್ಞಾನವೆಂಬುದು ಮನುಷ್ಯನನ್ನು ದೇವತೆಯಾಗಿ ಮಾಡತಕ್ಕದ್ದು. ಆದ್ದರಿಂದ ಜ್ಞಾನದಲ್ಲಿ ನಮಗೆ ಯಾವಾಗಲೂ ಆಸೆಯಿರಬೇಕು. ಹುಡುಗರಿಗೆ ಓದಿಸುವದು ಎಂದರೆ ದಂಡತೆರತಕ್ಕದ್ದು ಎಂದು

ಭಾವಿಸಿ ಕೆಲವು ಕಾಲ ಪುಸ್ತಕಗಳು, ಓದುವದಕ್ಕೆ ಫೀಜು, ಅನ್ನ, ಬಟ್ಟೆ, ಮುಂತಾದವುಗಳನ್ನು ಒದಗಿಸಿಕೊಡುವದನ್ನೇ ವಿದ್ಯಾಭ್ಯಾಸ ಎಂದು ತಿಳಿಯುವ ಮಟ್ಟಕ್ಕೆ ನಾವು ಈಗ ಇಳಿದಿರುತ್ತೇವೆ. ತತ್ತ್ವವನ್ನು ತಿಳಿಯುವದರಲ್ಲಿ ಪರಮಾದರವಿರುವದು, ತಿಳಿದದ್ದನ್ನು ಅನುಭವಕ್ಕೆ ಇಳಿಸಿಕೊಂಡು ಜೀವನವನ್ನು ಸುಖಮಯವಾಗಿ ಮಾಡಿಕೊಳ್ಳುವದು- ಇವೆರಡೂ ಮಾನವನ ಹೆಗ್ಗುರಿಯಾಗಿರಬೇಕು. ಇಲ್ಲಿ ತತ್ತ್ವವೆಂದರೆ ಪರಮಾರ್ಥವೇ. ಅದರ ಜ್ಞಾನದಿಂದಲೂ ಅನುಭವದಿಂದಲೂ ಮನುಷ್ಯನೂ ಅತ್ಯಂತಪೂಜ್ಯಸ್ಥಾನವನ್ನು ಪಡೆದುಕೊಳ್ಳುತ್ತಾನೆ. ಆದ್ದರಿಂದ ಜ್ಞಾನಯೋಗಗಳಲ್ಲಿ ನೆಲೆನಿಂತಿರುವದು ಪ್ರಧಾನವಾದ ದೈವಸಂಪತ್ತು. ಇದಕ್ಕೆ ಬೇಕಾದ ಮಿಕ್ಕ ಸಾಧನಗಳನ್ನು ದೈವೀಸಂಪತ್ತೆಂದು ಕರೆದಿರುವದು ಉಪಚಾರಕ್ಕೆಂತ ತಿಳಿಯಬೇಕು.

ದಾನವೆಂಬುದೊಂದು ಇಂಥ ಗೌಣವಾದ ದೈವಸಂಪತ್ತು, ದಾನವೆಂಬ ಮಾತಿನ ಅರ್ಥವನ್ನು ಸ್ವಲ್ಪ ಒಳಹೊಕ್ಕು ವಿಚಾರಮಾಡಿ ತಿಳಿದುಕೊಳ್ಳಬೇಕಾದದ್ದು ಅವಶ್ಯ. ಏಕೆಂದರೆ ದಾನಶಬ್ದದ ಅರ್ಥವು ಈಗಿನ ವ್ಯವಹಾರದಲ್ಲಿ ಬಹಳ ಸಂಕುಚಿತವಾಗಿಬಿಟ್ಟಿದೆ. ಶಾಸ್ತ್ರದಲ್ಲಿ ಹೇಳಿರುವದರಿಂದಲೂ ಜನರಲ್ಲಿರುವ ಪದ್ಧತಿಯನ್ನು ಕಾಪಾಡತಕ್ಕದ್ದೆಂಬ ನಿರ್ಬಂಧಕ್ಕಾಗಿಯೂ ಹೇಗೋ ದಾನವನ್ನು ಮಾಡಿದರಾಯಿತು ಎಂಬ ಬುದ್ಧಿಯು ನಮ್ಮಲ್ಲಿ ಅನೇಕರಲ್ಲಿ ಬೇರೂರಿಕೊಂಡುಬಿಟ್ಟಿರುತ್ತದೆ. ದಾನದ ವಸ್ತ್ರ, ದಾನದ ಪಂಚಪಾತ್ರೆ - ಎಂದು ಕಳಪೆಯ ಪದಾರ್ಥಗಳನ್ನು ಆರಿಸಿಡುವಷ್ಟು ಲೋಭವು ದಾತೃಗಳಲ್ಲಿ ಕಾಣಬರುತ್ತದೆ. ಹೀಗೆಯೇ `ಪ್ರತಿಗ್ರಹ' ವೆಂಬುದೊಂದು ಸುಲಿಗೆಯ ಉಪಾಯವೆಂದು ಭಾವಿಸುವವರೂ ಈಗ ಹೆಚ್ಚಿಕೊಂಡಿರುತ್ತಾರೆ. ಇಂಥ ದಾನವಾಗಲಿ ಪ್ರತಿಗ್ರಹವಾಗಲಿ ಯಾರಿಗೂ ಸಾಧನವೆನಿಸುವದಿಲ್ಲ; ಅದು ಅಂತಃಕರಣದಲ್ಲಿ ಕಲ್ಮಷವನ್ನುಂಟುಮಾಡುತ್ತದೆ. ತತ್ತ್ವಜ್ಞಾನಕ್ಕೆ ಅಡ್ಡಿಯಾಗಿರುತ್ತದೆ. ಆದ್ದರಿಂದ ಅಂಥ ದಾನದ ಪದ್ಧತಿಯನ್ನು ಕೂಡಲೆ ನಿಲ್ಲಿಸತಕ್ಕದ್ದು ಅತ್ಯವಶ್ಯವಾಗಿರುತ್ತದೆ. ದಾನಮಾಡುವ ಗೃಹಸ್ಥರನೇಕರು ತಾವು ಪ್ರತಿಗ್ರಹೀತೃಗಳನ್ನು ಉದ್ಧಾರಮಾಡುತ್ತೇವೆಂದುಕೊಂಡು ನಂಬಿರುತ್ತಾರೆ; ಆ ಪ್ರತಿಗ್ರಹೀತೃಗಳಾದ ವೈದಿಕರಲ್ಲನೇಕರೂ ಹಾಗೆಯೇ ತಾವು ಗೃಹಸ್ಥರಿಂದ ಉದ್ಧಾರವಾಗತಕ್ಕವರು ಎಂದು ತಿಳಿದುಕೊಂಡಿರುತ್ತಾರೆ. ಕಾಗದಪತ್ರಗಳಲ್ಲಿ ವೈದಿಕರು ತಮ್ಮ ಗೃಹಸ್ಥ ಶ್ರೀಮಂತರಿಗೆ ಬರೆಯುವ ಒಕ್ಕಣೆಯನ್ನು ಜ್ಞಾಪಿಸಿಕೊಳ್ಳಿರಿ. ``ಆಶ್ರಿತ ರಾಮಾಜೋಯಿಸನ ಆಶೀರ್ವಾದಗಳು" ಎಂದು ಪ್ರಾರಂಭವಾಗುತ್ತದೆ, ಪತ್ರ ! ಆಶ್ರಿತನೆ? ಶಾಸ್ತ್ರಜ್ಞನು ಗೃಹಸ್ಥನನ್ನು ಆಶ್ರಯಿಸಿಕೊಂಡಿರುವನೆಂಬುದು ಎಂಥ ಉಪಹಸನೀಯವಾದದ್ದು! ಅಂಥವನು ಮಾಡುವ ``ಆಶೀರ್ವಾದ" ಕ್ಕಾದರೂ ಬೆಲೆ ಎಷ್ಟಿದ್ದೀತು? ನಿಜವಾದ ದಾನವೆಂದರೆ ಹೀಗೆ ಅಂಗಲಾಚಿ ಬೇಡಿಕೊಳ್ಳುವ ಆಶ್ರಿತರಿಗೆ ಕೊಡುವದಲ್ಲ. ಸತ್ಪಾತ್ರರಿಗೆ ನಿರ್ಮಮತೆಯಿಂದ ಕೊಟ್ಟು ಅವರ ಅನುಗ್ರಹವನ್ನು ಸಂಪಾದಿಸಿಕೊಳ್ಳುವದು.

ಮನುಷ್ಯನಿಗೆ ಲೋಭವು ಹುಟ್ಟುಗುಣವಾಗಿರುತ್ತದೆ. ಬೃಹದಾರಣ್ಯಕದಲ್ಲಿ ಒಂದು ಕಥೆಯಿದೆ. ಮನುಷ್ಯರೂ ದೇವತೆಗಳೂ ದಾನವರೂ ಪ್ರಜಾಪತಿಯ ಬಳಿಗೆ ಬಂದು ಉಪದೇಶಮಾಡಬೇಕೆಂದು ಪ್ರಾರ್ಥಿಸಿಕೊಳ್ಳಲು "ದ" ಎಂಬ ಒಂದೇ ಅಕ್ಷರವನ್ನು ಉಪದೇಶಮಾಡಿದನಂತೆ . ಮನುಷ್ಯರು "ದಾನಮಾಡಿರಿ" ಎಂದು ನಮಗೆ ಹೇಳುತ್ತಾನೆ ಎಂದೇ ತಿಳಿದುಕೊಂಡರಂತೆ. ನಮ್ಮಲ್ಲಿರುವ ಲೋಭವು ನಮ್ಮನ್ನು ಈ ಕೀಳುಸ್ಥಿತಿಗೆ ತಂದುಬಿಟ್ಟಿರುತ್ತದೆ! ಯೋಗ್ಯರಾದವರಿಗೆ ನನ್ನ ದಾನವು ಸಂದರೆ ನಾನು ಕೃತಾರ್ಥನಾದೇನಲ್ಲ! - ಎಂಬ ಮನೋಭಾವವಿರಬೇಕು. ಆಗ ಮನಸ್ಸು ವಿಶಾಲವಾಗುತ್ತದೆ, ಆಗ ದಾನವು ದೈವಸಂಪತ್ತಿಗೆ ಸೇರುತ್ತದೆ. ಹೀಗೆಯೇ ಪ್ರತಿಗ್ರಹವೂ ಉತ್ತಮತರಗತಿಗೆ ಸೇರಿದ್ದೆನಿಸಬೇಕಾದರೆ ದಾನಕ್ಕಾಗಿ ದಾನವನ್ನು ಕೊಡುತ್ತಾರಾದ್ದರಿಂದ ಅವರಿಗೆ ಒಳ್ಳೆಯದನ್ನು ಹಾರೈಸಿ ಸ್ವೀಕರಿಸತಕ್ಕದ್ದು ನನ್ನ ಕರ್ತವ್ಯ ಎಂಬ ಬುದ್ಧಿಯಿಂದ ಮಾತ್ರವೇ ಸ್ವೀಕರಿಸಬೇಕು. ಆದರೆ ಪ್ರತಿಗ್ರಹಮಾಡಿದ್ದೆಲ್ಲವೂ ತನಗೇ ಆಗಬೇಕು ಎಂಬ ದುರಾಶೆಯಿರಬಾರದು. ಕಲಿಯುಗದಲ್ಲಿ ದಾನವೊಂದೇ ಮುಖ್ಯಸಾಧನವೆಂದು ಭಾರತದಲ್ಲಿ ಮತ್ತೆ ಮತ್ತೆ ಹೇಳಿರುತ್ತದೆ. ಏನನ್ನು ಕೊಡುವದು, ಎಷ್ಟು ಕೊಡುವದು- ಇವಲ್ಲ , ದಾನಕ್ಕೆ ಮುಖ್ಯವಾದವುಗಳು. ಪಾತ್ರರಾದವರಿಗೆ ಸರಿಯಾದ ದೇಶಕಾಲಗಳಲ್ಲಿ ಅಹಂಕಾರಮಮಕಾರಗಳನ್ನು ಬಿಟ್ಟು ಉದಾರಭಾವದಿಂದ ಕೊಡುವದೇ ಮುಖ್ಯವಾದ ದಾನವು. ಇಂಥ ದಾನವೊಂದು ದೈವಸಂಪತ್ತಿನ ಗುರುತಾಗಿರುತ್ತದೆ.



## ೧೪೫. ದೈವಸಂಪತ್ತು 16 - (1)

**(9-10-49)**

ದೈವಸಂಪತ್ತಿನ ವಿಚಾರವು ನಡೆದಿದೆ. ಮನುಷ್ಯನಿಗೆ ಎರಡು ಭಾವಗಳಿರಬಹುದು. ಆಯಾ ಭಾವದ ಸ್ವರೂಪವನ್ನು ಅದರದರ ಪರಿಣಾಮದಿಂದ ಗೊತ್ತುಮಾಡಿಕೊಳ್ಳಬೇಕು.

ಒಂದು ಬಗೆಯ ಭಾವದಿಂದ ಶಾಂತಿಯೂ ಸುಖವೂ ಉಂಟಾಗುವವು. ಮತ್ತೊಂದು ಬಗೆಯದು ಬಂದರೆ ತಳಮಳವುಂಟಾಗುತ್ತದೆ. ಯಾವದರಿಂದ ಶಾಂತಿಸುಖಗಳು ಉಂಟಾಗುವವೋ ಅದೇ ದೈವಸಂಪತ್ತು. ದೈವಸಂಪತ್ತಿನಲ್ಲಿ ಎದ್ದುಕಾಣುವ ಗುಣಗಳನ್ನು ಒಂದೊಂದಾಗಿ ಇಲ್ಲಿ ಹೇಳುತ್ತಿದೆ. ಈಗ ದಾನದ ವಿಚಾರವಾಯಿತು, ಇನ್ನು **ದಮದ** ವಿಚಾರವಾಗಬೇಕು.

ಈ ಗುಣಗಳು ಒಂದಿಷ್ಟು ಯಾವಾಗಲಾದರೂ ಯಾರಲ್ಲಾದರೂ ತೋರಿಕೊಳ್ಳಬಹುದು; ಆದರೆ ಅಷ್ಟುಮಾತ್ರದಿಂದ ಅವರನ್ನು ದೈವಸಂಪತ್ತಿನವರು ಎಂದು

ತಿಳಿಯುವದಕ್ಕೆ ಬರುವದಿಲ್ಲ. ಕಟುಕನಲ್ಲಿಯೂ ಒಂದಿಷ್ಟು ದಯೆ ಇರಬಹುದು ; ಆದರೆ ಅಷ್ಟುಮಾತ್ರದಿಂದ ಅವನು ದಯಾವಂತನೆನಿಸಿಯಾನೇನು ? ಇಲ್ಲ. ಪ್ರಭೂತವಾದ ದಯೆಯಿರುವವನೇ ದಯಾವಂತನೆನಿಸಿಯಾನು. ಇದರಂತೆ ಈ ಗುಣವಿಶೇಷಗಳು ಸಹಜವಾಗಿ ಯಾರಲ್ಲಿ ತೋರುತ್ತವೆಯೋ ಅವರನ್ನೇ ದೈವೀಸಂಪತ್ತಿನವರೆಂದು ಭಾವಿಸಬೇಕು. ಕೆಲವರು ತಮ್ಮ ತಮ್ಮ ತೃಪ್ತಿಗಾಗಿ ತಾವುತಾವೇ ತಮ್ಮನ್ನು ಹೊಗಳಿಕೊಳ್ಳುತ್ತಾರೆ. ತಮ್ಮ ಹೆಸರನ್ನು ವರ್ತಮಾನಪತ್ರಿಕೆಗಳಲ್ಲಿ ಹಾಕಿಸಿಕೊಂಡು, ಅಚ್ಚಾದದ್ದನ್ನು ಓದಿ, ಅಥವಾ ಮತ್ತೊಬ್ಬರಿಂದ ಓದಿಸಿಕೇಳಿ ಸಂತೋಷಪಡುತ್ತಾರೆ. ಇದರಿಂದ ಸ್ವಲ್ಪ ತಾತ್ಕಾಲಿಕಸಮಾಧಾನವಾಗಬಹುದು. ನಮ್ಮಲ್ಲಿ ದೈವಸಂಪತ್ತಿಲ್ಲದಿದ್ದರೂ ಇದೆಯೆಂದು ತೋರಿಸಿಕೊಳ್ಳುವದು ಅಭಾಸಮಾತ್ರವಾಗುತ್ತದೆ. ಒಂದು ದಿನ ಅಭಯವು ತೋರಿಕೊಂಡರೆ ಅದು ನಮಗೆ ಅಳವಟ್ಟಂತಲ್ಲ, ಒಂದಿಷ್ಟು ವಿಚಾರವೂ ಒಂದಿಷ್ಟು ಸಮಾಹಿತಚಿತ್ತತೆಯೂ ತೋರಿಕೊಂಡರೆ ಅದು ಜ್ಞಾನಯೋಗವ್ಯವಸ್ಥಿತಿ ಎನಿಸಲಾರದು. ಇದರಂತೆ ದಾನಾದಿಗಳನ್ನೂ ತಿಳಿಯಬೇಕು. ಇಲ್ಲಿ ಹೇಳಿರುವ ಗುಣಗಳೆಲ್ಲ ನಮಗೆ ಸ್ವಭಾವದಲ್ಲಿ ತೋರಿಕೊಳ್ಳುವವಾಗಬೇಕು. ಆಗಲೇ ನಾವು ದೈವೀಸಂಪತ್ತಿನವರು ಎನಿಸುವೆವು.

ಈಗ ದಮದ ವಿಚಾರವನ್ನು ಮಾಡೋಣ. ದಮವೆಂದರೆ ಹೊರಗಿನ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವದು. ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವದೆಂದರೆ ಹೇಗೆ ? ವಾಕ್ಪಾಣಿಪಾದಾದಿಗಳಲ್ಲಿ ಒಂದು ಬಗೆಯ ಚಾಪಲ್ಯವಿದೆ ; ಅವುಗಳನ್ನು ಬಲಾತ್ಕಾರದಿಂದ ಹಿಡಿದಿಟ್ಟಿದ್ದಮಾತ್ರಕ್ಕೆ ದಮವೆನಿಸಲಾರದು. ಹುಡುಗರು ಸ್ಕೂಲಿನಲ್ಲಿ ಮೇಷ್ಟರಿಗೆ ಹೆದರಿ ಗದ್ದಲವಿಲ್ಲದೆ, ಹರಿದಾಡದೆ ಕುಳಿತುಕೊಂಡಿರಬಹುದು. ಆದರೆ ಅದು ನಿಜವಾಗಿ ಅವರ ಸ್ವಭಾವವಾದೀತೆ ? ಇದರಂತೆ ಜನರು ಸಮಾಜದ ಕಣ್ಣಿಗೆ ಹೆದರಿ, ಅಥವಾ ಸರಕಾರದವರ ದಂಡಕ್ಕೆ ಹೆದರಿ, ಸರಿಯಾದ ವರ್ತನೆಯಲ್ಲಿರುವಂತೆ ತೋರಿಸಿಕೊಳ್ಳುವದು ಪೋಲೀಸು ನೀತಿಯಾದೀತೇ ಹೊರತು ಸ್ವಾಭಾವಿಕವಾದ ಅವರ ಯೋಗ್ಯತೆಯ ಗುರುತಾಗಲಾರದು. ಇದರಂತೆ ಇಂದ್ರಿಯಗಳನ್ನು ಸುಮ್ಮನೆ ಕಟ್ಟಿಹಾಕುವದು ದಮವಲ್ಲ. ವ್ರತದ ದಿನಗಳಲ್ಲಿ ಎಲ್ಲರೂ ವ್ರತವನ್ನು ಮಾಡುವರಷ್ಟೆ; ಅಂದು ಪುರೋಹಿತರು ಹೊತ್ತಿಗೆ ಸರಿಯಾಗಿ ಬಾರದಿದ್ದರೆ ಯಜಮಾನನು ಸಿಟ್ಟಿಗೇಳುವದನ್ನು ನೀವು ನೋಡಿರಬಹುದು. ಆ ದಿನ ವ್ರತದ ದಿನವೆಂದೂ ಕೋಪತಾಪಗಳಿಗೆ ಎಡೆಗೊಡಬಾರದೆಂದೂ ವ್ರತದ ನಿಯಮಗಳಲ್ಲಿ ಹೇಳಿದ್ದರೂ ಸ್ವಭಾವಕ್ಕೆ ಪರವಶನಾಗಿಯೇ ಅವನು ಹಾಗೆ ಮಾಡುವನು. ಮನಸ್ಸಿಗೆ ಒಲವು ವಿಷಯಗಳಲ್ಲಿರುತ್ತದೆ ; ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸದೆ, ಸುಮ್ಮನಿದ್ದಮಾತ್ರಕ್ಕೆ ಅವನನ್ನು ಇಂದ್ರಿಯನಿಗ್ರಹಮಾಡಿದವನೆನ್ನಬಹುದೇನು ? ಓಡುವ ಕುದುರೆಯನ್ನು ಲಗಾಮಿನಿಂದ ಹಿಡಿದುನಿಲ್ಲಿಸುವಂತೆ ಇಂದ್ರಿಯಗಳನ್ನು ಸುಮ್ಮನೆ ಬಲಾತ್ಕಾರದಿಂದ ಬಿಗಿಹಿಡಿದು ನಿಲ್ಲಿಸಿಕೊಂಡಮಾತ್ರಕ್ಕೆ ಅದು ಹೇಗೆ ದಮವಾದೀತು ?

ದಮವು ಸ್ವಭಾವಸಿದ್ಧವಾಗಿರಬೇಕು. ಪುರಾಣಪ್ರಸಿದ್ಧಳಾದ ದಮಯಂತಿಯನ್ನು ನೆನಪಿಗೆ ತಂದುಕೊಳ್ಳಿರಿ. ಆಕೆಯಲ್ಲಿ ನಿಜವಾಗಿ ದಮವಿತ್ತು; ನಳನು ತನ್ನನ್ನು ಕಾಡಿನಲ್ಲಿ ಅರ್ಧವಸ್ತ್ರದಲ್ಲಿ ಬಿಟ್ಟುಹೊದರೂ ತಾನು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿದ್ದಳು. ಅವಳು ಆಗಲೂ ನನ್ನದೇನೋ ತಪ್ಪಿದೆ, ಇಲ್ಲದಿದ್ದರೆ ಹೀಗೆ ನನ್ನ ಪತಿಯು ಏತಕ್ಕೆ ನನ್ನನ್ನು ಬಿಟ್ಟುಹೋಗುತ್ತಿದ್ದರು ? - ಎಂದು ಸಮಾಧಾನಮಾಡಿಕೊಂಡಳು. ಆಮೇಲೂ ಕ್ರಮದಿಂದ ತೌರುಮನೆಯನ್ನು ಸೇರಿ ನಳನನ್ನು ಹುಡುಕಿಸಿ ಅವನ ಪ್ರೀತಿಯನ್ನು ಎಂದಿನಂತೆ ಸಂಪಾದಿಸಿಕೊಂಡು ಸುಖವಾಗಿ ಬಾಳುವವರೆಗೂ ತನ್ನ ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡಿದ್ದಳಲ್ಲವೆ ? ಅದೀಗ ನಿಜವಾದ ದಮವು.

ರಾವಣನು ಶ್ರೀರಾಮನಿಂದ ಹತನಾಗಿ ರಣರಂಗದಲ್ಲಿ ಬಿದ್ದಿರುವಲ್ಲಿ 'ಹಿಂದೆ ಇಂದ್ರಿಯಗಳನ್ನು ಗೆದ್ದುಕೊಂಡು ತ್ರಿಭುವನವನ್ನೇ ಜಯಿಸಿದ್ದ ನಿನ್ನನ್ನು ಅದೇ ಇಂದ್ರಿಯಗಳೇ ಈಗ ಸೇಡನ್ನು ತೀರಿಸಿಕೊಳ್ಳುವದಕ್ಕೋ ಎಂಬಂತೆ ಜಯಿಸಿಬಿಟ್ಟವಲ್ಲ ! ' ಎಂದು ಮಂಡೋದರಿಯು ಶೋಕಪ್ರದರ್ಶನವನ್ನು ಮಾಡಿರುತ್ತಾಳೆ. ರಾವಣನ ಉನ್ನತಿಗೆ ತಪಆದಿಗಳು ಕಾರಣವಾದಂತೆ ಅವನ ಅಧಃಪತನಕ್ಕೆ ಇಂದ್ರಿಯಪಾರವಶ್ಯವೇ ಕಾರಣವಾಯಿತೆನ್ನಬಹುದು. ನಿಜವಾಗಿ ನೋಡಿದರೆ ದಮವೆಂಬುದೊಂದು ಮಹಾಗುಣವು. ದಮದಿಂದ ತನ್ನನ್ನು ತಾನು ಜಯಿಸಿಕೊಂಡವನು ಇಡಿಯ ಜಗತ್ತನ್ನೇ ಜಯಿಸಿದಂತೆ. ಆದರೆ ಯಾವನು ಇಂದ್ರಿಯಗಳಿಗೆ ಪರವಶನಾಗುವನೋ ಅವನಿಗೆ ದಮವೆಂಬುದು ಮದವಾಗಿ ಪರಿಣಮಿಸಿ ಅನರ್ಥಕಾರಿಯಾಗುವದು. ಲೋಕದಲ್ಲಿ ದೋಷಯುಕ್ತವಾದದ್ದು ಗುಣಯುಕ್ತವಾಗಿಯೂ ಗುಣಯುಕ್ತವಾದದ್ದು ದೋಷಯುಕ್ತವಾಗಿಯೂ ಕಾಣುವದು ಜನರ ಇಂದ್ರಿಯಲೋಲುಪತೆಯಿಂದ. ಅವಿವೇಕಿಗಳಾದವರು "ಇಂದ್ರಿಯಗಳನ್ನು ಬಿಗಿಹಿಡಿಯುವದು ಸರಿಯಲ್ಲ. ಈಶ್ವರನು ನಮಗೆ ಇಂದ್ರಿಯಗಳನ್ನು ಅನುಗ್ರಹಿಸಿರುವದೇಕೆ? ವಿಷಯಭೋಗವನ್ನು ಮಾಡಿ ಸುಖವಾಗಿರಲೆಂದಲ್ಲವೆ?" ಎನ್ನುತ್ತಾರೆ. ಆದರೆ ಇದು ಸರಿಯಾದ ತರ್ಕವಲ್ಲ. ನಮ್ಮ ಮನಸ್ಸಿನಲ್ಲಿ ಇರುವ ಒಲವುಗಳನ್ನೆಲ್ಲ ಪರಿಪೂರ್ತಿಗೊಳಿಸಲೆಂದೇ ದೇವರು ನಮಗೆ ಇಂದ್ರಿಯಗಳನ್ನು ಕೊಟ್ಟಿರುವನೆಂದು ಹೇಳುವದಕ್ಕಾಗುವುದಿಲ್ಲ. ಇಂಥ ಇಂದ್ರಿಯಗಳನ್ನು ಜಯಿಸಿ ಧೀರನಾಗಲಿ ಎಂದೇ ಈಶ್ವರನು ಕೊಟ್ಟಿದ್ದಾನೆಂಬುದು ಯುಕ್ತತರವಾದದ್ದು. `ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್' ಯಾವನೋ ಒಬ್ಬ ಧೀರನು ಮಾತ್ರ ಇಂದ್ರಿಯಗಳನ್ನು ಹಿಂದೆಳೆದುಕೊಂಡು ಅಮೃತತ್ವವನ್ನು ಹೊಂದುವ ಬಯಕೆಯಿಂದ ಪ್ರತ್ಯಗಾತ್ಮನನ್ನು ನೋಡುತ್ತಾನೆ - ಎಂದು ಶ್ರುತಿ ಹೇಳುತ್ತದೆ. ಇಂದ್ರಿಯಗಳ ಅನುಸರಣೆಯಲ್ಲಿ ಮೃತ್ಯುವಿದೆ. ಇಂದ್ರಿಯಲೋಲುಪತೆಯಿಂದ ಎಷ್ಟೋ ರಾಜ್ಯಗಳೇ ತಲೆಕೆಳಗಾಗಿವೆ, ಅದರಿಂದ ಎಷ್ಟೋ ಅನರ್ಥಗಳಾಗಿರುತ್ತವೆ. `ಸುಮತಿ-ಮದನ ಕುಮಾರ ಚರಿತ್ರೆಯು' ಕಲ್ಪಿತಕಥೆಯಾದರೂ ಅದರಲ್ಲಿ ಸುಮತಿಯ ವಿದ್ಯಾಭ್ಯಾಸವು ಹೇಗೆ ದಮದ ಆಧಾರದ ಮೇಲೆ ನಡೆದಿತ್ತು ಎಂಬುದನ್ನು ಸ್ಪಷ್ಟಪಡಿಸಿದೆ.

ನಮ್ಮ ಹುಡುಗರಿಗೆ ಇಂದ್ರಿಯನಿಗ್ರಹವನ್ನು ಮಾಡಿಸುವ ವಿದ್ಯಾಭ್ಯಾಸವನ್ನು ಕೊಡಿಸುವದರಿಂದ ಪ್ರಯೋಜನವುಂಟು. ಅವರನ್ನು ಉಣ್ಣುವದು, ತಿನ್ನುವದು, ಸ್ವೇಚ್ಛಾವಿಹಾರ, ಸಂಗೀತ, ನರ್ತನ - ಮುಂತಾದವುಗಳಲ್ಲಿಯೇ ಹರಿಯಬಿಟ್ಟರೆ ಅವರಿಗೆ ಲೋಕದಲ್ಲಿ ಬರುವ ಕಷ್ಟತಮವಾದ ಸಮಸ್ಯೆಗಳನ್ನು ಎದುರಿಸುವ ಶಕ್ತಿಯು ಹೇಗೆ ಬಂದೀತು? ವಿಷಯಭೋಗದಲ್ಲಿ ಚುರುಕಾಗಿರುವದೂ ಷೋಕಿಯಾಗಿರುವ ಭಾವವನ್ನು ಮನಸ್ಸಿನಲ್ಲಿ ನಿಲ್ಲಿಸುವದೂ ಕಷ್ಟವೇನೂ ಅಲ್ಲ. ಅತ್ಯಂತಕೋಮಲವಾಗಿ ಬೆಳೆದವರು ಜೀವನದ ಕಷ್ಟಗಳನ್ನು ತಡೆದುಕೊಳ್ಳಲೇ ಆರರು. ಇನ್ನು ಅವರಿಗೆ ಶಾಸ್ತ್ರೀಯಕರ್ಮದಿಂದ ಸಿಕ್ಕುವ ಪರಲೋಕಸುಖವೆಲ್ಲಿ ಬಂದೀತು? ಲೋಕದಲ್ಲಿರುವ ವೈಚಿತ್ರ್ಯವೆಲ್ಲ ಇಂದ್ರಿಯ ಪ್ರಜ್ಞೆಗಳಿಂದಲೇ ಆಗಿರುವದು; ಅದರ ಬೆನ್ನಂಟಿಹೋಗುವವನು ಮಾಯಾಪರವಶನಾಗುತ್ತಾನೆ. ತನ್ನಲ್ಲಿ ತಾನು ನಿಲ್ಲುವ ತತ್ತ್ವಜ್ಞಾನವನ್ನು ಪಡೆಯಬೇಕೆನ್ನುವವನು ಎಂದಿಗೂ ಇಂದ್ರಿಯಗಳ ಬೆನ್ನುಹತ್ತಬಾರದು. ಈ ಕಾರಣದಿಂದಲೇ ದಮವನ್ನು ಇಲ್ಲಿ ದೈವಸಂಪತ್ತಿನಲ್ಲಿ ಸೇರಿಸಿರುತ್ತದೆ.

**ಯಜ್ಞ :** ಯಜ್ಞದ ವಿಚಾರವು ಹಿಂದೊಂದು ಸಲ ಆಗಲೆ ಬಂದಿದೆ. ಯಜ್ಞವೆಂದರೆ ದೇವತೆಗಳ ಉದ್ದೇಶದಿಂದ ಸ್ವತ್ವವನ್ನು ಬಿಡುವದು. ದೇವತೆಗಳೆಂದರೇನು? ಅವರು ಪರಮಾತ್ಮನ ಶಕ್ತಿವಿಶೇಷಗಳು. ಮನುಷ್ಯನಿಗೆ ಎಲ್ಲವೂ ತನಗೇ ಆಗಬೇಕು - ಎಂದು ಎಳೆದುಕೊಳ್ಳುವ ಸ್ವಭಾವವಿದೆ; ಲೋಕದಲ್ಲಿ ಕಾಣುವದೆಲ್ಲ ತನಗೆ ಬೇಕು ಎಂಬುದೇ ಅವನ ಹೃದಯ. ಇದೇ ಸ್ವತ್ವ. ಪ್ರತಿವಸ್ತುವಿನಲ್ಲಿಯೂ ಸ್ವತ್ವಬುದ್ಧಿಯು ಕೂತಿರುತ್ತದೆ. ಆದರೆ ಇದು ನನ್ನದಲ್ಲ ಎಂಬ ಬುದ್ಧಿಯಿಂದ, ಸ್ವತ್ವವನ್ನು ತ್ಯಾಗಮಾಡಿ ದೇವತೆಗಳಿಗೆ ಅರ್ಪಿಸುವದು ಯಜ್ಞದ ವಿಶೇಷವು. ವ್ಯವಹಾರದಲ್ಲಿ ನಮಗೆ ಸಂಬಂಧಿಸಿರುವದರಮೇಲೆಲ್ಲ ಮಮತ್ವವು ಅಂಟಿಕೊಂಡಿರುತ್ತದೆ; ಹೆಂಡತಿ, ಮಕ್ಕಳು, ಹಣ, ಮನೆ, ಭೋಗ್ಯವಿಷಯಗಳು - ಎಲ್ಲಕ್ಕೂ "ಮಮ" ನನ್ನದು - ಎಂದು ಚೀಟಿ ಬರೆದು ಅಂಟಿಸಿಕೊಂಡಿರುವಂತೆ ಮನಸ್ಸು ಕಾಣುತ್ತಾ ಇರುತ್ತದೆ. ನಮ್ಮಮೈ, ರೂಪ, ಪ್ರಾಯ, ಮಾತು, ಕೀರ್ತಿ, - ಎಲ್ಲಕ್ಕೂ ಈ ಮಮತ್ತ್ವದ ಚೀಟಿ ಅಂಟಿಸಿಕೊಂಡುಬಿಟ್ಟಿರುತ್ತೇವೆ. ನಾವು ನಮ್ಮ ವಸ್ತುವನ್ನು ಯಾರಾದರೂ ಕಸಿದುಕೊಂಡಾಗ ನಮ್ಮ ಮೈಯ ಒಂದು ಭಾಗವನ್ನೇ ಕಿತ್ತು ಹರಿದುಕೊಂಡಷ್ಟು ನೋವೂ ವ್ಯಥೆಯೂ ಆಗುತ್ತದೆ. ಆದರೆ ಅಗ್ನ್ಯಾದಿದೇವತೆಗಳು ನಮಗೆ ವಿಷಯಗಳನ್ನು ಅನುಭವಿಸಿ ಸುಖಪಡುವಂತೆ ಅನುಗ್ರಹಮಾಡತಕ್ಕವರು; ಅವರಿಗೆ ಯಜ್ಞದಿಂದ ಮನಸ್ಸಂತೋಷಪಡಿಸಿದಷ್ಟೂ ನಮಗೆ ಲಾಭವುಂಟು.

ಅಂತೂ ಯಜ್ಞ ಎಂಬ ಶಬ್ದದಲ್ಲಿ ದೇವತೆಗಳ ಪೂಜೆ ಎಂಬರ್ಥವು ಅಡಗಿರುತ್ತದೆ. ಇದು ನನ್ನದಲ್ಲ, ಇದೆಲ್ಲ ಪರಮೇಶ್ವರನದೇ ಎಂಬುದನ್ನು ಮನಸ್ಸಿಗೆ ತಂದುಕೊಳ್ಳುವದೇ ಯಜ್ಞದ ಗುಟ್ಟು. ತಾನು ಕಷ್ಟಪಟ್ಟು ದುಡಿದದ್ದನ್ನು ಪರಮೇಶ್ವರನಿಗೆ ಸಮರ್ಪಿಸುವದಕ್ಕೆ ಗುರುತದು. ಕಾಳಿದಾಸನು ಬರೆದಿರುವ ರಘುವಂಶದಲ್ಲಿ ರಘುಮಹಾರಾಜನು ಮಾಡಿದ

ಒಂದಾನೊಂದು ಯಜ್ಞದಲ್ಲಿ ಸರ್ವಸ್ವದಕ್ಷಿಣೆಯನ್ನು ಕೊಟ್ಟಿದ್ದನೆಂದು ಬರೆದಿದೆ. ಆ ರಾಜನು ಯಜ್ಞವನ್ನು ಪೂರೈಸಿದ ಮೇಲೆ ವರತಂತುಗಳೆಂಬ ಗುರುವಿನ ಶಿಷ್ಯನೊಬ್ಬನು ಅವನಲ್ಲಿ ಯಾಚನೆಗೆ ಬಂದನಂತೆ; ಆಗ ರಾಜನು ಮಣ್ಣಿನ ಪಾತ್ರೆಯಲ್ಲಿಟ್ಟಿದ್ದ ನೀರಿನಿಂದ ಅವನಿಗೆ ಅರ್ಘ್ಯಪಾದ್ಯಾದಿಗಳನ್ನು ಅರ್ಪಿಸಿದನೆಂದು ಬರೆದಿರುತ್ತದೆ. ಇದಲ್ಲವೆ, ಮಮತಾತ್ಯಾಗದ ಕೊನೆ ! ಇದೆಲ್ಲವೂ ಈಶ್ವರದತ್ತವಾದದ್ದು ಎಂದು ಭಾವಿಸಿದವನನ್ನು ಯಾವ ಧನಾಸಕ್ತಿಯ ಭಾವವೂ ಕಾಡುವದಿಲ್ಲ. ಮಮತ್ವವನ್ನು ಬಿಟ್ಟಿದೇನೆಂದು ಬಾಯಲ್ಲಿ ಹೇಳಿಕೊಂಡರೆ ಸಾಲದು; ಮನಃಪೂರ್ವಕವಾಗಿ ಕಾರ್ಯದಲ್ಲಿ ಮಮತೆಯನ್ನು ಬಿಟ್ಟದ್ದು ಹೊರಗೆ ಕಾಣುವಂತಿರಬೇಕು. ನಾವು ಬಿಟ್ಟರೆ ಮತ್ತೆ ಸಿಕ್ಕುವದೊ, ಇಲ್ಲವೋ- ಎಂಬ ಸಂಶಯವು ನಮ್ಮನ್ನು ಬಾಧಿಸುತ್ತಿರುತ್ತದೆ. ಆದರೆ ಈಶ್ವರನ ವಿಷಯದಲ್ಲಿ ಈ ಸಂಶಯಕ್ಕೆ ಕಾರಣವಿಲ್ಲ. ಏಕೆಂದರೆ ಈಶ್ವರನು ಮುಕ್ತಹಸ್ತದಿಂದ ಸರ್ವದಾ ನಮಗೆ ಅನುಗ್ರಹಮಾಡುತ್ತಲೇ ಇರುತ್ತಾನೆ. ಈ ಪ್ರಪಂಚದಲ್ಲಿ ಯಾರದ್ದೂ ಧನವೆಂಬುದೇ ಇಲ್ಲ; ಎಲ್ಲವೂ ಈಶ್ವರನದೇ ಎಂದು ಭಾವಿಸಬೇಕು. ತ್ಯಾಗದಿಂದಲೇ ನಮ್ಮನ್ನು ನಾವು ಕಾಪಾಡಿಕೊಳ್ಳಬೇಕು - ಎಂದು ಶ್ರುತಿ ಹೇಳುತ್ತದೆ. ಆದರೆ ಆ ಜ್ಞಾನಯಜ್ಞವು ಎಲ್ಲರಿಗೂ ದಕ್ಕಬೇಕಲ್ಲ !

**ಸ್ವಾಧ್ಯಾಯ :** ತನ್ನ ಶಾಖೆಯ ವೇದವನ್ನು ಅಧ್ಯಯನಮಾಡುವದು ಸ್ವಾಧ್ಯಾಯವು. ಸ್ವಾಧ್ಯಾಯವು ದ್ವಿಜನಿಗೆ ಕರ್ತವ್ಯವು ಎಂದು ವೇದದಲ್ಲಿ ವಿಧಿಸಿದೆ. ಉಪನಯನವನ್ನು ಮಾಡಿಸುವದೇ ಅಧ್ಯಯನಕ್ಕಾಗಿ. ಆದರೆ ಉಪನಯನವನ್ನು ಈಗ ಕೇವಲ ತೋರುಗಾಣಿಕೆಯಾಗಿ ದ್ವಿಜರು ಮಾಡಿಸಿಕೊಳ್ಳುತ್ತಾರಾದ್ದರಿಂದ ಅವರಿಗೆ ವೇದವು ಕಿವಿಗೆ ಬೀಳದಂತೆ ಆಗಿರುತ್ತದೆ. ಹುಡುಗರಿಗೆ ಸಂಧ್ಯಾವಂದನೆ ಮಾಡುವದಕ್ಕೆ ಬಿಡುವಿಲ್ಲ. ಯಾರಾದರೂ ಶಿಷ್ಟರಾದ ದೊಡ್ಡವರಿಗೆ ನಮಸ್ಕಾರಮಾಡುವಾಗ ಉಪನಯನವಾದ ಹುಡುಗರು ಅಭಿವಾದನಮಾಡಬೇಕು, ಎಂದರೆ ನಾನು ಇಂಥ ಪ್ರವರದ, ಇಂಥ ಗೋತ್ರದವನು, ಇಂಥ ಸೂತ್ರವನ್ನು ಅನುಸರಿಸುವವನು, ಇಂಥ ವೇದವನ್ನು ಅಧ್ಯಯನಮಾಡುವವನು, ಇಂಥ ಹೆಸರಿನವನು - ಎಂದು ತಿಳಿಸಬೇಕು. ಆಗ ಆ ಹಿರಿಯರು ಆಯುಷ್ಮಾನ್ ಭವ..... `ಇಂಥವನೇ' ದೀರ್ಘಾಯುಷ್ಮಂತನಾಗಿರು' ಎಂದು ಹೆಸರಿಡಿದು ಆಶೀರ್ವದಿಸಬೇಕು - ಎಂಬುದು ಅನಾದಿಕಾಲದಿಂದ ಬಂದಿರುವ ಆರ್ಯಸಂಪ್ರದಾಯವು. ಆ ಸಂಪ್ರದಾಯವನ್ನು ಕಾಪಾಡಿಕೊಂಡು ಬರುವದರಲ್ಲಿರುವ ಆಸಕ್ತಿಯು ಒಂದು ದೈವೀಸಂಪತ್ತಿನ ಗುರುತು. ಶ್ರೀ ಶಂಕರಾಚಾರ್ಯಕೃತವೆಂದು ಪ್ರಸಿದ್ಧವಾಗಿರುವ `ಸಾಧನಸೋಪಾನಪಂಚಕ'ದಲ್ಲಿ ಮೊಟ್ಟಮೊದಲನೆಯ ಸಾಧನವನ್ನು ತಿಳಿಸುವ ವಾಕ್ಯವು ಯಾವದೆಂದರೆ `ವೇದೋ ನಿತ್ಯಮಧೀಯತಾಮ್' ವೇದವನ್ನು ನಿತ್ಯವೂ ಅಧ್ಯಯನಮಾಡಬೇಕು-ಎಂಬುದು. ಅಧ್ಯಯನವು ಜ್ಞಾನದಲ್ಲಿ ಆಶೆಯಿದೆ ಎಂಬುದನ್ನು ಸೂಚಿಸುತ್ತದೆ. ಬ್ರಾಹ್ಮಣನು ಯಾವ ಕಾರಣವನ್ನೂ ಬಯಸದೆಯೇ ಷಡಂಗವಾದ ವೇದವನ್ನು ಅಧ್ಯಯನಮಾಡಬೇಕು ಎಂಬುದು ಅಭಿಯುಕ್ತರ

ಉಕ್ತಿಯು. ಈಗ ನಾವು ಹಿಂದುಗಳೆಂದು ಕರೆಯಿಸಿಕೊಳ್ಳುವವರೆಲ್ಲ - ಸಂಸ್ಕೃತವನ್ನು ಕಲಿತು ಆ ಭಾಷೆಯಲ್ಲಿರುವ ಜ್ಞಾನರಾಶಿಯನ್ನು ಸೂರೆಗೊಳ್ಳಬೇಕು.

ಆದರೆ ಈಗಿನ ನಮ್ಮ ವಿದ್ಯಾಭ್ಯಾಸವು ವಿಪರೀತಕ್ರಮವನ್ನು ಅನುಸರಿಸಿದೆ. ನಮಗೆ ವರ್ತಮಾನಪತ್ರಿಕೆಗಳೇ ವೇದಸ್ಥಾನದಲ್ಲಿವೆ. ಅವು ದಪ್ಪದಪ್ಪವಾದ ಅಕ್ಷರಗಳ ತಲೆಬರಹದಲ್ಲಿ ಕೊಲೆ, ಕಳ್ಳತನ, ಮೋಸ, ಸುಳ್ಳು, ಕಪಟ, ಮಾಯೆ - ಮುಂತಾದವುಗಳ ಸುದ್ದಿಯನ್ನೇ ಪ್ರಕಟಿಸುತ್ತವೆ. ಅವುಗಳಲ್ಲಿ ನಿಜವಾದ ವರ್ತಮಾನವು ಕೂಡ ಬಹಳ ಸ್ವಲ್ಪ ಇರುತ್ತದೆ. ಇನ್ನು ಮನಃಶ್ಶಾಂತಿಗೆ ಬೇಕಾದ ವಿಷಯಗಳನ್ನು ಎಲ್ಲಿ ತರಬೇಕು? ಚೂರಿ, ಕತ್ತಿ, ಬಂದೂಕು, ಬಾಂಬು, ಕ್ಷಾಮ, ಭೂಕಂಪ, ಹೊಡೆದಾಟ - ಮುಂತಾದ ಶಬ್ದಗಳಿಂದಲೂ ದಮ, ಶಾಂತಿ ಪರೋಪಕಾರ, ಸ್ವಾರ್ಥತ್ಯಾಗ -ಮುಂತಾದ ಶಬ್ದಗಳಿಂದಲೂ ನಮ್ಮ ಮನಸ್ಸಿನ ಮೇಲೆ ಆಗುವ ಪರಿಣಾಮದ ಹೆಚ್ಚುಕಡಿಮೆಯನ್ನು ಹೋಲಿಸಿದರೆ ಆಗ ವೇದಾಧ್ಯಯನವೇ ಮುಂತಾದವುಗಳ ಬೆಲೆ ಎಷ್ಟೆಂಬುದು ತಿಳಿದೀತು. ವರ್ತಮಾನಪತ್ರಿಕೆಗಳಲ್ಲಿ `ರೇಷನ್ ಕಡಿಮೆಯಾಯಿತು', `ವೀರಕ್ಷಾಮವು ಬಂದಿದೆ' `ಹಳ್ಳಿಗೆ ಬೆಂಕಿಬಿದ್ದಿದೆ', `ಜನರು ದಂಗೆ ಎದ್ದಿದಾರೆ' - ಎಂದು ಮುಂತಾದ ದುಃಖದ ವಾರ್ತೆಗಳನ್ನು ಓದಿ ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಿರುವ ದುರವಸ್ಥೆಗೆ ಇಳಿದಿರುವ ನಮಗೆ ವೇದದಲ್ಲಿ ಶ್ರದ್ಧೆ ಹೇಗೆ ಉಂಟಾಗಬೇಕು? ವೇದದಲ್ಲಿ ಉತ್ತಮಸಂದೇಶವಿದೆ; 'ಈ ಪ್ರಪಂಚದಲ್ಲಿ ಆನಂದವೆಂಬುದು ಇಲ್ಲದಿದ್ದರೆ ಯಾರು ತಾನೆ ಉಸಿರಾಡಿಯಾರು, ಯಾರು ತಾನೆ ವ್ಯವಹಾರವನ್ನು ಸಾಗಿಸಿಯಾರು? - ಎಂಬ ಆಶಾದಾಯಕವಾದ ವಾಕ್ಯವಿದೆ. ಇದೆಲ್ಲವೂ ಆನಂದಮಯವಾದ ಬ್ರಹ್ಮದಿಂದ ಬಂದಿದೆ ಎಂಬ ವಾರ್ತೆಯಲ್ಲಿ? ಆ ದೇಶದಲ್ಲಿ ವಿಷದ ಗಾಳಿಯನ್ನು ಬಿಟ್ಟರಂತೆ, ಕ್ರಿಮಿಗಳನ್ನು ಚೆಲ್ಲಿ ಜನರನ್ನು ಕೊಲ್ಲುವರಂತೆ- ಎಂಬಿದೇ ಮುಂತಾದ ದುಃಖದ ವಾರ್ತೆಯಲ್ಲಿ ! ಈ ವಾರ್ತಾಪತ್ರಿಕೆ ಎಂಬ ವೇದವು ನಮ್ಮನ್ನು ದುಃಖದಲ್ಲಿ ಮುಳುಗಿಸಿದೆ.

ಈ ದುಃಖದ ಅಧ್ಯಯನವು ಸಾಕು; ಇನ್ನು ವೇದಾಧ್ಯಯನದ ಕಡೆಗೆ ತಿರುಗೋಣ. ಅಧ್ಯಯನವೆಂದರೆ ಬರಿಯ ವಾಕ್ಯಗಳನ್ನು ಕುರುಡುಪಾಠಮಾಡಿ ಗಟ್ಟಿಮಾಡಿಕೊಳ್ಳುವದಲ್ಲ, ಈಶ್ವರನ ಸಂದೇಶಕ್ಕೆ ಕಿವಿಗೊಡುವದು. ಸತ್ಯವನ್ನು ತಿಳಿಸುವ ಗ್ರಂಥವು ಸ್ವಾಧ್ಯಾಯ. ಯಾವ ಭಾಷೆಯಲ್ಲಿ ಓದಿದರೂ ಒಳ್ಳೆಯ ಮಾತು ಒಳ್ಳೆಯ ಮಾತೇ ಸರಿ. ಆದರೆ ಸಂಸ್ಕೃತವು ದೇವಭಾಷೆ, ಉತ್ತಮವಾದ ಸಂಸ್ಕೃತಿಯ ನೆನಪನ್ನು ಕೊಡುವ ಭಾಷೆ. ಒಂದು ಉತ್ತಮವಾದ ವಿಷಯವನ್ನು ನೆನಪುಮಾಡುವ ಶಬ್ದವು ಕಿವಿಗೆ ಬಿದ್ದರೆ ಅದರ ಸಾಹಚರ್ಯದಿಂದ ನಮಗೆ ಇನ್ನೂ ಎಷ್ಟೋ ಉತ್ತಮಭಾವನೆಗಳು ಮನಸ್ಸಿನಲ್ಲಿ ಎದ್ದುಕೊಳ್ಳುತ್ತವೆ. ಸಂಸ್ಕೃತದಲ್ಲಿ ಉತ್ತಮಭಾವನೆಗಳನ್ನು ಕೊಡುವ ವಾಙ್ಮಯವೇ ಪ್ರಧಾನವಾಗಿರುತ್ತದೆ. ಆ ಭಾಷೆಯಲ್ಲಿ ಯಾವ ಗ್ರಂಥವನ್ನು ಬರೆದರೂ ಪುಣ್ಯಪಾಪಗಳ ವಿವೇಕ, ಸೌಜನ್ಯ - ಇವುಗಳನ್ನು

ನೆನಪುಕೊಡುವಂತಿರುತ್ತವೆ. ಅಮರಕೋಶವು ಒಂದು ನಿಘಂಟುಮಾತ್ರವಷ್ಟೆ ; ಆದರೂ ನೋಡಿ, ಅಲ್ಲಿ ಸ್ವರ್ಗವರ್ಗವೇ ಮೊದಲನೆಯದು ! ಸ್ವರ್ಗವೆಂದರೆ ಸುಖ; ಮನುಷ್ಯನಿಗೆ ಆನಂದಭಾವನೆಯಿಂದ ವಿದ್ಯಾಭ್ಯಾಸವು ಮೊದಲಾಗಬೇಕು- ಎಂಬ ಭಾವವೇ ಅಲ್ಲಿ ತೋರುತ್ತದೆ. ನಮ್ಮ ಪ್ರಾಚೀನಪದ್ಧತಿಯಲ್ಲಿ ಅಕ್ಷರಾಭ್ಯಾಸವು ಕೂಡ "ಓಂ ನಮಃ ಶಿವಾಯ। ಸಿದ್ಧಂ ನಮಃ' ಎಂದು ಮಂಗಲಭಾವನೆಯಿಂದಲೇ ಪ್ರಾರಂಭವಾಗುತ್ತಿತ್ತು! ಸಂಸ್ಕೃತದಲ್ಲಿ ಕಾಮಾದಿವಿಷಯಗಳ ಗ್ರಂಥಗಳೇ ಇಲ್ಲವೆನ್ನುವದಕ್ಕಿಲ್ಲ; ಆದರೆ ಅಲ್ಲಿಯೂ ಉತ್ತಮಭಾವನೆಗಳಿಗೇ ಗೌರವ!

ದ್ವಿಜರಾದವರು ವೇದವನ್ನು ಅವಶ್ಯವಾಗಿ ಅಧ್ಯಯನಮಾಡಬೇಕು; ಅದಕ್ಕಾಗಿ ಸಂಸ್ಕೃತಭಾಷೆಯನ್ನು ಕಲಿಯಬೇಕು. ಸಂಸ್ಕೃತಿಯು ಎಲ್ಲಕ್ಕೂ ಮೂಲ; ಸಂಸ್ಕೃತವು ಎಲ್ಲಾ ಸಂಸ್ಕೃತಿಗೂ ಭಂಡಾರ. ಆದ್ದರಿಂದ ಸಂಸ್ಕೃತ ಭಾಷೆಯನ್ನು ಕಲಿಯುವದಕ್ಕೆ ಆರಂಭಿಸೋಣ. ಇಂಗ್ಲಿಷನ್ನು ಕಲಿಯುವದಕ್ಕೆ ಪಡುವ ಶ್ರಮವನ್ನು - ಅಥವಾ ಅದರ ಅರ್ಧಶ್ರಮವನ್ನಾದರೂ ಈ ಭಾಷೆಯನ್ನು ಕಲಿಯುವದಕ್ಕೆ ಮೀಸಲಿಡೋಣ. ಬೆಳಗ್ಗೆ ಎದ್ದರೆ ಒಬ್ಬರನ್ನೊಬ್ಬರು "ಗುಡ್ ಮಾರ್ನಿಂಗ್" ಎಂದು ಸ್ವಾಗತಿಸುವ ಬದಲು `ಸುಪ್ರಭಾತಮ್" ಎನ್ನುವದಕ್ಕಾದರೂ ಮೊದಲು ಮಾಡೋಣ. ನಾರದರು ದಾಸೀಪುತ್ರರಾಗಿದ್ದರೂ ಋಷಿಗಳ ಸಂಬಂಧದಿಂದ ವಾಸುದೇವಮಂತ್ರವನ್ನು ಸಂಪಾದಿಸಿಕೊಂಡು ಪರಮಭಕ್ತರಾದಂತೆ ಸಂಸ್ಕೃತವನ್ನು ಬಲ್ಲವರ ಜೊತೆಯಲ್ಲಿ ಸೇರಿಕೊಂಡಂತೆಲ್ಲ ನಮಗೂ ಸಂಸ್ಕೃತವು ಬರುತ್ತದೆ. ನನಗೆ ತಿಳಿದಂತೆ ಒಬ್ಬ ಮುಸಲ್ಮಾನ ಸಬ್‌ರಿಜಿಸ್ಟ್ರಾರ್ ಇದ್ದರು. ಅವರು ಹೇಗೋ ಸಂಸ್ಕೃತವನ್ನು ಸ್ವಲ್ಪಮಟ್ಟಿಗೆ ಕಲಿತಿದ್ದರು; ಭರ್ತೃಹರಿಯ ಶ್ಲೋಕಗಳನ್ನು ಆಗಾಗ್ಗೆ ಸಂಭಾಷಣೆಯಲ್ಲಿ ಅವರು ಉದಾಹರಿಸುತ್ತಿದ್ದರು. ಹಿಂದೂಮುಸ್ಲಿಮರ ಐಕ್ಯವು ಅಂಥವರ ವರ್ತನೆಯಿಂದ ಸಾಧ್ಯವಾದಷ್ಟು ಬರಿಯ ಆಡಂಬರದ ಉಪನ್ಯಾಸಗಳಿಂದ ಎಂದಿಗೂ ಆಗಲಾರದು. ಭಾರತದಲ್ಲಿರುವವರೆಲ್ಲರೂ ಸಂಸ್ಕೃತವನ್ನು ಕಲಿತರೆ ಒಳ್ಳೆಯದು; ಕೊನೆಗೆ ಹಿಂದುಗಳಾದರೂ ಅವಶ್ಯವಾಗಿ ಕಲಿಯಬೇಕು. ದ್ವಿಜರು, ಅದರಲ್ಲಿಯೂ ಬ್ರಾಹ್ಮಣರು, ಕಡ್ಡಾಯವಾಗಿ ಕಲಿಯಬೇಕು. ಆಗಲೆ ನಮಗೆ ವೈದಿಕಸಂಸ್ಕೃತಿಯ ಪರಿಚಯವು ಉಂಟಾಗುತ್ತದೆ. ದೈವಸಂಪತ್ತೆಂದರೇನೆಂಬುದು ತಿಳಿಯುತ್ತದೆ.



# ೧೪೬. ದೈವಸಂಪತ್ತು 16 - (1)

**(16.10.49)**

ತಪಸ್ಸು, ಆರ್ಜವ - ಇವುಗಳು ಇಂದಿನ ವಿಷಯ. ತಪಸ್ಸೆಂದರೆ ಏನು? ತಪ್ ಎಂದರೆ ಕಾಯಿಸುವದು. ಶರೀರವನ್ನು ಬಿಸಿಲುಮಳೆಯೆನ್ನದೆ ತಾಪಕ್ಕೆ ಗುರಿಮಾಡಿ ಸ್ವಾಧೀನಕ್ಕೆ ತೆಗೆದುಕೊಳ್ಳುವದು ಎಂಬ ಅರ್ಥದಲ್ಲಿಯೇ ಜನರು ಮೊದಲು ಈ ಶಬ್ದವನ್ನುಪಯೋಗಿಸಿರಬೇಕೆಂದು ತೋರುತ್ತದೆ. `ತಪೋ ನಾನಶನಾತ್ ಪರಮ್' - ಊಟಮಾಡದೆ ಇರುವದಕ್ಕಿಂತಲೂ ಹೆಚ್ಚಿನ ತಪಸ್ಸಿಲ್ಲ ಎಂದು ವೇದವಚನವಿದೆ.

ಹಾಗಾದರೆ ಊಟಮಾಡದೆ ಇದ್ದರೆ ತಪಸ್ಸಾಯಿತೆ ? - ಎಂದು ನೀವು ಕೇಳಬಹುದು. ಹಾಗೇನೂ ಇಲ್ಲ. ಆದರೂ ಇಲ್ಲಿ ಊಟದ ವಿಷಯವಾಗಿ ಸ್ವಲ್ಪ ಮಾತನಾಡುವದು ಲಾಭಕರವೆಂದು ನನ್ನ ಎಣಿಕೆ. ನಾವುಗಳು ಸಾಮಾನ್ಯವಾಗಿ ನಮಗೆ ಬೇಕಾದದ್ದಕ್ಕಿಂತಲೂ ಹೆಚ್ಚಿಗೆಯೇ ಊಟಮಾಡುತ್ತಿದೇವೆ. ಅಕ್ಕಿಯನ್ನು ನಾವು ಹೆಚ್ಚಿಗೆ ತಿನ್ನದೆ ಇದ್ದರೆ ನಮಗೆ ಪುಷ್ಟಿಗೆ ತಕ್ಕಷ್ಟು ಆಹಾರಪದಾರ್ಥವು ಸಿಕ್ಕುವದಿಲ್ಲ. ಎಲ್ಲಾ ಅಕ್ಕಿಗಳೂ ಒಂದೇ ಪ್ರಮಾಣದ ಸಾರಾಂಶವನ್ನೊಳಗೊಂಡಿರುವದಿಲ್ಲ. ಆದ್ದರಿಂದ ನಾವು ಹೆಚ್ಚು ಅನ್ನವನ್ನೇ ತಿನ್ನಬೇಕಾಗುತ್ತದೆ. ಬಲವುಂಟಾಗುವದಕ್ಕೆ ತಕ್ಕಷ್ಟು ಆಹಾರವು ಬೇಕೆನ್ನುವದು ನಿಜ : ಆದರೆ ರುಚಿಯಾಗುವದಕ್ಕೆ ತಕ್ಕಷ್ಟು ಮೇಲೋಗರವೂ ಬೇಕೆನಿಸುತ್ತದೆ. ಆಗ ಮೇಲೋಗರದ ರುಚಿಗಾಗಿ ಬೇಕಾದಷ್ಟಕ್ಕಿಂತಲೂ ಹೆಚ್ಚಿಗೆಯೇ ತಿನ್ನಬಹುದು. ನಾಲಗೆಗೂ ಹೊಟ್ಟೆಗೂ ವೈರ ಎಂದು ಬಲ್ಲವರು ಹೇಳುತ್ತಾರೆ. ಹೊಟ್ಟೆತುಂಬಿದರೂ ನಾಲಗೆ "ತಿನ್ನು" ಎಂದು ಹೊಟ್ಟೆಯೊಳಕ್ಕೆ ಆಹಾರವನ್ನು ದೂಡಬಹುದು; ನಾಲಿಗೆಗೆ ಸವಿಯಾಗದಿದ್ದರೆ ಅವಶ್ಯವಾದ ಆಹಾರವನ್ನು ಕೂಡದೆ ಇರಬಹುದು. ಇದಂತಿರಲಿ. ನಾವು ವಿವಿಧವಾದ ಆಹಾರಪದಾರ್ಥಗಳನ್ನು ಅಡಿಗೆಮಾಡಿ ತಿನ್ನುವದಕ್ಕೆ ಮೊದಲುಮಾಡಿದರೆ ಹೊಟ್ಟೆ ಹಿಗ್ಗಿ ಇನ್ನಷ್ಟು ಆಹಾರವು ಸೇರುತ್ತದೆ. ಇದರ ಮರ್ಮವೇನು? ಒಂದೊಂದು ಬಗೆಯ ಆಹಾರಕ್ಕೆ ಒಂದೊಂದು ಬಗೆಯ ನರಗಳು ಆಡುತ್ತವೆ ಎಂದು ಕೆಲವು ವೈದ್ಯರು ಹೇಳುತ್ತಾರೆ. ಆದ್ದರಿಂದಲೇ ಮಜ್ಜಿಗೆಯ ಅನ್ನಕ್ಕೆ ಬಂದಿರುವಾಗಲೂ ಸಮಾರಾಧನೆಯಲ್ಲಿ ಮತ್ತಷ್ಟು ಭಕ್ಷ್ಯವನ್ನೂ ಭೋಜ್ಯವನ್ನೂ ಊಟಮಾಡುವದಕ್ಕೆ ಜನರು ಮತ್ತೆ ಸಿದ್ಧರಾಗುವರು. ಅಳತೆ ಸಿಕ್ಕದಂತೆ ಊಟಮಾಡಿದರೆ ಅದು ಉತ್ತಮರೀತಿಯಿಂದ ಪರಿಣಾಮವಾಗುವದಿಲ್ಲ. ತಿಂದ ಅನ್ನವು ರಸವಾಗಬೇಕು, ರಸದಿಂದ ರಕ್ತವಾಗಬೇಕು, ರಕ್ತದಿಂದ ಮಾಂಸವಾಗಬೇಕು. ಅದರಿಂದ ಮೇಧಸ್ಸಾಗಬೇಕು, ಅದರಿಂದ ಅಸ್ಥಿಗಳಾಗಬೇಕು, ಅದರಿಂದ ಮಜ್ಜೆಯಾಗಬೇಕು, ಅದರಿಂದ ರೇತಸ್ಸಾಗಬೇಕು, ಅದರಿಂದ ಶರೀರಕ್ಕೆ ಆರೋಗ್ಯವೂ ಬಲವೂ ಕಾಂತಿಯೂ ದೊರಕಬೇಕು. ಆದರೆ ಮೇಲಿಂದ ಮೇಲೆ ಕಟ್ಟಿಗೆಯನ್ನು ಒಟ್ಟುತ್ತಿದ್ದರೆ ಬೆಂಕಿಯು ಹೊತ್ತಿಕೊಳ್ಳುವದಕ್ಕೇ ಅವಕಾಶವಿಲ್ಲದಿರುವಂತೆ ಮೇಲಿನಿಂದ ಮೇಲೆ ಆಹಾರವನ್ನು ತಿನ್ನುತ್ತಲೇ ಇದ್ದರೆ

ಜಾಠರಾಗ್ನಿಯು ಕೆಲಸಮಾಡುವದಕ್ಕೆ ಅವಕಾಶವೇ ಇರುವದಿಲ್ಲ. ಅನ್ನದಿಂದಲೇ ಪ್ರಾಣವು ನಿಂತಿರುವದು, ಅದರಿಂದ ಬಲವುಂಟಾಗುವದು, ಅದರಿಂದ ತಪಸ್ಸು, ಅದರಿಂದ ಶ್ರದ್ಧೆ, ಶ್ರದ್ಧೆಯಿಂದ ಮೇಧೆ, ಅದರಿಂದ ಮನೀಷೆ, ಅದರಿಂದ ಮನಸ್ಸು, ಅದರಿಂದ ಶಾಂತಿ, ಶಾಂತಿಯಿಂದ ಚಿತ್ತ, ಚಿತ್ತದಿಂದ ಸ್ಮೃತಿ, ಆ ಸ್ಮೃತಿಯಿಂದ ನೆನಪಾಗಿ ಜ್ಞಾನವುಂಟಾಗುತ್ತದೆ; ಆದ್ದರಿಂದ ಅನ್ನವನ್ನು ದಾನಮಾಡಿದರೆ ಇದೆಲ್ಲವನ್ನೂ ದಾನಮಾಡಿದಂತೆ - ಎಂದು ಶ್ರುತಿ ಸಾರುತ್ತಿದೆ. ನಮಗೆ ಅನವಶ್ಯವಾಗಿರುವದಲ್ಲದೆ ಮತ್ತೊಬ್ಬರಿಗೆ ಪ್ರಯೋಜನಕರವೂ ಆಗಿರುವ ಅನ್ನವನ್ನು ಅತಿಯಾಗಿ ತಿಂದು ಆರೋಗ್ಯಾದಿಗಳನ್ನು ಕೆಡಿಸಿಕೊಳ್ಳುವದು ಎಂಥ ಪಾಪವಾಯಿತು! ಮನಷ್ಯನು ಅನ್ನಕ್ಕಾಗಿಯೇ ಅನೇಕ ಪಾಪಗಳನ್ನು ಮಾಡುತ್ತಾನೆ. ಆದ್ದರಿಂದ ಅನ್ನದಲ್ಲಿ ಅನೇಕ ದೋಷಗಳು ಅಂಟಿಕೊಂಡಿರುತ್ತವೆ ಎಂದು ಸ್ಮೃತಿಕಾರರು ಹೇಳುತ್ತಾರೆ. ಇದಲ್ಲದೆ ಅನ್ನವನ್ನು ಮಾಡುವವರ ಭಾವನೆಗಳಿಂದ ಅನ್ನವು ಅಪವಿತ್ರವೂ ಆಗಿರುತ್ತದೆ. ಹೋಟಲಿನಲ್ಲಿ ಆಗುವ ಅನ್ನದಲ್ಲಿ ಆಧ್ಯಾತ್ಮಿಕವಾದ ಮತ್ತು ಆಧಿಭೌತಿಕವಾದ ಅನೇಕ ದೋಷಗಳು ಅಂಟಿಕೊಂಡಿರುತ್ತವೆ ಎಂಬುದಕ್ಕೆ ಇದೇ ಕಾರಣ. ಮನುಷ್ಯನು ಯಾವಾಗಲೂ ಉಪವಾಸಮಾಡಿಕೊಂಡಿರುವದಕ್ಕೆ ಆಗುವದಿಲ್ಲ; ಅನ್ನವನ್ನು ಉಂಡರೆ ಅದರ ದೋಷಗಳು ತಪ್ಪದೆ ನಮಗೆ ಹತ್ತುವವು. ಪಂಚ ಮಹಾಯಜ್ಞಗಳಿಂದ ಅನ್ನದೋಷಗಳು ಸ್ವಲ್ಪ ಕಡಿಮೆಯಾಗಬಹುದು. ಆದರೆ ಸರ್ವಥಾ ದೋಷಗಳನ್ನು ತಪ್ಪಿಸಿಕೊಳ್ಳುವದು ಆಗುವದೇ ಇಲ್ಲ. ಈ ಎಲ್ಲಾ ಕಾರಣಗಳಿಂದ ಆಗಾಗ್ಗೆ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಉಪವಾಸಮಾಡುವದೊಂದು ಶುದ್ಧೀಕರಣದ ಉಪಾಯವೇ ಸರಿ. ವೇದದಲ್ಲಿ ಈ ದೃಷ್ಟಿಯಿಂದಲೇ ಅನಶನವನ್ನು ತಪಸ್ಸೆಂದು ಕರೆದಿರುವದು. ಉತ್ತಮ ಭಾವನೆಗಳಿಂದ ಮಾಡಿದ ಅನಶನವು ಹೆಚ್ಚಿನ ತಪಸ್ಸಾಗುತ್ತದೆ. ಮಹಾತ್ಮಾ ಗಾಂಧಿಯವರು ಆಗಾಗ್ಗೆ ಮಾಡುತ್ತಿದ್ದ ಈ ಬಗ್ಗೆಯ ತಪಸ್ಸುಗಳಿಂದ ತಮಗೆ ಬಹಳ ಲಾಭವಾಗುತ್ತದೆ ಎಂದು ಹೇಳಿಕೊಳ್ಳುತ್ತಿದ್ದರು; ಅವರ ಉಪವಾಸಗಳು ಜನರ ಮನಸ್ಸಿನ ಮೇಲೆ ಎಂಥ ಉತ್ತಮಪರಿಣಾಮವನ್ನು ಮಾಡುತ್ತಿದ್ದವೆಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಹೀಗಿರುವಲ್ಲಿ ಲೋಕಹಿತೈಕದೃಷ್ಟಿಯಿಂದ ಋಷಿಗಳು ಮಾಡುತ್ತಿದ್ದ ಈ ಬಗೆಯ ತಪಸ್ಸಿನಿಂದ ಉತ್ತಮಪರಿಣಾಮವಾಗಿರಬೇಕೆಂಬುದರಲ್ಲಿ ಸಂಶಯವೇನು? ಪ್ರಾಣವಿದ್ಯೆಯನ್ನು ಅಭ್ಯಾಸಮಾಡಿರುವವನು ಮಾಡುವ ಅಗ್ನಿಹೋತ್ರದಿಂದ ಜನರ ಮೇಲೆ ಆಗುವ ಸತ್ಪರಿಣಾಮವನ್ನು ಛಾಂದೋಗ್ಯೋಪನಿಷತ್ತಿನಲ್ಲಿ ವರ್ಣಿಸಿರುವದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಹಸಿದ ಹುಡುಗರು ತಾಯಿಯ ಸುತ್ತಲೂ ಇದ್ದುಕೊಂಡು ಅನ್ನಕ್ಕಾಗಿ ಕಾಯುತ್ತಿರುವಂತೆ ವೈಶ್ವಾನರವಿದ್ಯೆಯಲ್ಲಿ ನಿಷ್ಣನಾದವನು ಎಂದಿಗೆ ಪ್ರಾಣಾಗ್ನಿಹೋತ್ರವನ್ನು ಮಾಡುವನೋ ಎಂದು ಸಮಸ್ತಭೂತಗಳೂ ಕಾದಿರುವವು-ಎಂದು ಶ್ರುತಿಯು ಕೊಂಡಾಡಿರುತ್ತದೆ.

ಅಂತೂ ಹೀಗೆ ಅನಶನರೂಪತಪಸ್ಸಿಗೂ ಒಂದು ಬೆಲೆ ಇದೆ ಎಂದು ತಿಳಿಯಬರುತ್ತದೆ. ಋಷಿಗಳು ಫಲ, ಪರ್ಣ, ವಾಯು - ಮುಂತಾದವುಗಳನ್ನೇ ತಿಂದುಕೊಂಡು ಪರಮೇಶ್ವರಧ್ಯಾನವನ್ನು ಮಾಡುತ್ತಿದ್ದರು ಎಂದು ಪುರಾಣಗಳಲ್ಲಿ ವರ್ಣಿಸಿದೆ. ಆದರೆ ಈಗ ನಮಗೆ ಅದರಲ್ಲಿ ನಂಬಿಕೆಯುಂಟಾಗುವಂತಿಲ್ಲ. ಒಂದಾನೊಂದು ತ್ರೈಮಾಸಿಕ ಪತ್ರಿಕೆಯಲ್ಲಿ ಸರ್ ರಾಧಾಕೃಷ್ಣನ್‌ರವರು ಎರಡು ಹೊತ್ತು ಮಾತ್ರವೇ ಊಟಮಾಡಿ ಫಲಾಹಾರವನ್ನು ಮಿತವಾಗಿ ಮಾಡುವದರ ಲಾಭವನ್ನು ಕುರಿತು ಪ್ರಶಂಸೆಮಾಡಿದ್ದರು; ಅದನ್ನು ಸಮಾಲೋಚನೆ ಮಾಡುವಾಗ ಒಬ್ಬ ಅಮೆರಿಕದ ವಿದ್ವಾಂಸರು ಈ ಯುಗದಲ್ಲಿ ಇಂಥ ಉಪವಾಸ ವನವಾಸಗಳು ಸಾಧ್ಯವಿಲ್ಲ ! - ಎಂದು ಬರೆದಿದ್ದದ್ದನ್ನು ಬಹಳ ವರ್ಷಗಳ ಹಿಂದೆ ನಾನು ಓದಿದ ನೆನಪಿದೆ ! ಇನ್ನು ಋಷಿಗಳ ವರ್ಣನೆಯಾಗಲಿ, ಅವರು ಮಾಡಿದ ದೀರ್ಘಕಾಲದ ಉಪವಾಸಗಳಾಗಲಿ ಹೇಗೆ ಈಗಿನವರ ವಿಶ್ವಾಸಕ್ಕೆ ಪಾತ್ರವಾದಾವು? ಹಿಂದಿನವರು ದೀರ್ಘಕಾಲ ಉಪವಾಸಮಾಡಿಯೂ ಶಕ್ತರಾಗಿದ್ದರು; ಈಗ ನಾವು ಇಷ್ಟು ಉಂಡರೂ ನಿಃಶ್ಯಕ್ತರಾಗಿರುತ್ತೇವೆ. ಉಪವಾಸವೆಂಬುದು ಒಂದು ಬಗೆಯ ತಪಸ್ಸೆಂಬುದಕ್ಕೆ ಇನ್ನು ಹೆಚ್ಚಿಗೆಯೇನೂ ಹೇಳಬೇಕಾದದ್ದಿಲ್ಲ, ಇಷ್ಟು ಸಾಕು.

ಇನ್ನು ಈ ತಪಸ್ಸಲ್ಲದೆ ಮತ್ತೊಂದು ಬಗೆಯ ತಪಸ್ಸಿದೆ. ಅಂತಃಕರಣಕ್ಕೂ ಇಂದ್ರಿಯಗಳಿಗೂ ಒಂದು ಬಗೆಯ ಉಪವಾಸವನ್ನು ಮಾಡಿಸಿ ಯೋಗ್ಯವಾದ ಪಾರಣೆಯನ್ನು ಮಾಡಿಸಬೇಕು. ಅಂತಃಕರಣಕ್ಕೆ ಕಾಮ, ಕ್ರೋಧ - ಮುಂತಾದ ದುರಾಹಾರಗಳ ಚಟವಿದೆ; ಸೂಕ್ಷ್ಮಶರೀರಕ್ಕೆ ಕಾಮಕ್ರೋಧಾದಿಗಳ ಅನುಭವವಾದಂತೆಲ್ಲ, ಇದು ಮತ್ತಷ್ಟು ಬೇಕು ಎನ್ನಿಸುತ್ತದೆ. ಊಟವೂ ನಿದ್ರೆಯೂ ಪಾಟಿಸಿದಂತೆ - ಎಂಬ ಗಾದೆಯು ಸೂಕ್ಷ್ಮಶರೀರಕ್ಕೂ ಒಪ್ಪುತ್ತದೆ. ಆಗ ಸೂಕ್ಷ್ಮಶರೀರಕ್ಕೆ ಅಪಥ್ಯವಾಗುತ್ತದೆ. ಆದಕ್ಕೆ ಆರೋಗ್ಯ ತಪ್ಪುತ್ತದೆ. ಆದ್ದರಿಂದ ವಿವೇಕಿಗಳಾದವರು ಆ ಶರೀರಕ್ಕೂ ಉಪವಾಸಮಾಡಿಸುವದು ಅವಶ್ಯ. ಉತ್ತಮವಾದ ಭಾವನೆಗಳಿಂದ ಅದಕ್ಕೆ ಕೆಟ್ಟ ಆಲೋಚನೆಗಳ ಆಹಾರವನ್ನು ತಪ್ಪಿಸಬೇಕು. ಮೌನವನ್ನು ಆಚರಿಸುವದು, ಮತ್ತೊಬ್ಬರು ನಮ್ಮನ್ನು ಬೈದರೂ ಸಮಾಧಾನದಿಂದಿರುವದನ್ನು ಅಭ್ಯಾಸಮಾಡುವದು - ಇವೆಲ್ಲ ಸೂಕ್ಷ್ಮಶರೀರದ ಉಪವಾಸವು. ಕಾಮ, ಅಸೂಯೆ, ಲೋಭ - ಮುಂತಾದ ಭಾವನೆಗಳನ್ನು ಹೀಗೆಯೇ ಸೂಕ್ಷ್ಮಶರೀರಕ್ಕೆ ತಪ್ಪಿಸಿ ತಪಸ್ಸುಮಾಡಬೇಕು. ಯೋಗವಾಸಿಷ್ಠದಲ್ಲಿ ಏನೇನು ಮಾಡಿದರೆ ಚಿತ್ತವು ಕೊಬ್ಬುತ್ತದೆ ಎಂಬುದನ್ನು ಚೆನ್ನಾಗಿ ವರ್ಣಿಸಿದೆ. ಅದನ್ನೆಲ್ಲ ವಿಮರ್ಶೆಮಾಡಿ ಸೂಕ್ಷ್ಮಶರೀರಕ್ಕೆ ಕೊಬ್ಬು ಬಾರದಂತೆ ತಪಸ್ಸುಮಾಡಿಸಬೇಕು.

ಇದಲ್ಲದೆ ಮನಸ್ಸನ್ನು ಏಕಾಗ್ರತೆಗೊಳಿಸಿ ನಿಲ್ಲಿಸುವದಕ್ಕೆ ಪ್ರಯತ್ನಿಸುವದು ಒಂದು ಬಗೆಯ ಉತ್ತಮವಾದ ತಪಸ್ಸು. ಮನಸ್ಸಿಗೂ ಇಂದ್ರಿಯಗಳಿಗೂ ಐಕಾಗ್ರ್ಯವನ್ನುಂಟುಮಾಡಿಕೊಳ್ಳುವದೊಂದು ಮಹಾತಪಸ್ಸು. ಭೌತಿಕವಿಷಯಗಳಲ್ಲಿ ಕೂಡ

ವಿಜ್ಞಾನಶಾಸ್ತ್ರಜ್ಞರು ಒಂದು ಬಗೆಯ ತಪಸ್ಸು ಮಾಡುತ್ತಿರುತ್ತಾರೆ. ಪರಿಶೋಧನಾಲಯದಲ್ಲಿ (Laboratory) ಅವರು ಏಕಾಗ್ರತೆಯಿಂದ ವಿಷಯಶೋಧನೆ ಮಾಡದಿದ್ದರೆ ಹೊಸ ಹೊಸ ವಿಷಯಗಳನ್ನು ಕಂಡುಹಿಡಿಯುವದು ಎಂದಿಗೂ ಆಗುತ್ತಿರಲಿಲ್ಲ. ಆದ್ದರಿಂದ ಅವರು ಆ ವಿಷಯಗಳಲ್ಲಿ ತಪಸ್ಸುಮಾಡಿದವರೆನ್ನಬಹುದು. ಇನ್ನು ಅಧ್ಯಾತ್ಮದಲ್ಲಿ ತಪಸ್ಸಿಗೆ ಎಷ್ಟು ಹೆಚ್ಚಿನ ಬೆಲೆಯಿರುವದೆಂದಾಯಿತು! ನಮ್ಮ ಮನಸ್ಸನ್ನು ನಾವೇ ಏಕಾಂತದಲ್ಲಿ ಕುಳಿತು ನೋಡಿಕೊಳ್ಳುತ್ತಿದ್ದರೆ ಅದರಲ್ಲಿರುವ ದೋಷಗಳು ಒಂದೊಂದಾಗಿ ಕಾಣಬರುವವು. ಮಹನೀಯರನ್ನು ಸ್ಮರಿಸಿಕೊಂಡರೆ ಅವರ ದೊಡ್ಡದೊಡ್ಡ ಆಲೋಚನೆಗಳು ನಮ್ಮ ಮನಸ್ಸಿನಲ್ಲಿ ಎದ್ದುಕೊಳ್ಳುವವು. ಅದೂ ಒಂದು ಬಗೆಯ ತಪಸ್ಸು. ರಾಮಶಬ್ದವನ್ನು ಮನಸ್ಸಿನ ಮುಂದೆ ನಿಲ್ಲಿಸಿಕೊಂಡರೆ ರಾಮನ ಗುಣಗಳು ಒಂದೊಂದಾಗಿ ಹೊಳೆಯಬಹುದು; ಆ ಗುಣಗಳನ್ನು ನೆನಪಿಗೆ ತಂದುಕೊಂಡರೆ ಆ ಗುಣಗಳನ್ನು ಕುರಿತ ತಪಸ್ಸುಮಾಡಿದಂತೆ ಆಗುವದು. ತಪಸ್ಸಿನಲ್ಲಿ ಏಕಾಗ್ರತೆಯನ್ನು ಮಾಡಿಕೊಂಡವನಿಗೆ ಹೊರಗಿನ ಭಾನವೇ ಇರುವದಿಲ್ಲ. ಧ್ರುವನು ವಿಷ್ಣುವನ್ನೇ ಹೃದಯದಲ್ಲಿ ನೆನೆಯುತ್ತಿದ್ದಾಗ ಹೊರಗೆ ಸಾಕಾರನಾಗಿ ಅದೇ ವಿಷ್ಣುವು ಎದುರಿಗೆ ಬಂದದ್ದು ಕೂಡ ಅವನಿಗೆ ಅರಿವಾಗಲಿಲ್ಲ. ಅಕ್ಕಸಾಲೆಯು ಯಾವದಾದರೊಂದು ಒಡವೆಗೆ ನಕಾಶೆಯ ಕೆಲಸವನ್ನು ಮಾಡುತ್ತಾ ಅದರಲ್ಲಿಯೇ ಮಗ್ನನಾಗಿರುವಾಗ ಹೊರಗೆ ಯಾರಾದರೂ ಬಂದದ್ದು, ಹೋದದ್ದು -ಒಂದರ ಅರಿವೂ ಅವನಿಗಿರುವದಿಲ್ಲವೆಂಬುದನ್ನು ನೀವು ನೋಡಿರಬಹುದು. ಚಿತ್ರಗಾರರೇ ಮುಂತಾದವರ ಉದ್ಯೋಗಕ್ಕೂ ಇದು ಅನ್ವಯಿಸುತ್ತದೆ. ಹೀಗೆಯೇ ಮನಸ್ಸನ್ನು ಸದ್ವಿಷಯದಲ್ಲಿ ಏಕಾಗ್ರತೆಗೊಳಿಸುವದು ತಪಸ್ಸೆನಿಸುವದು. ಅಂತೂ ಶರೀರವನ್ನು ಹಿಡಿತದಲ್ಲಿಟ್ಟುಕೊಂಡಿರುವದು, ಇಂದ್ರಿಯಗಳನ್ನೂ ಮನಸ್ಸನ್ನೂ ಏಕಾಗ್ರತೆಗೊಳಿಸಿಕೊಳ್ಳುವದು - ಇವೆರಡೂ ತಪಸ್ಸು ಎಂಬ ಶಬ್ದದಿಂದ ಇಲ್ಲಿ ಉಕ್ತವಾಗಿವೆ. ಈ ತಪಸ್ಸು ದೈವಸಂಪತ್ತಿನ ಒಂದು ಗುರುತು.

ಆರ್ಜವವೆಂಬುದು ಮತ್ತೊಂದು ದೈವಸಂಪತ್ತಿನ ಲಕ್ಷಣವು. ಆರ್ಜವವೆಂದರೆ ಋಜುಭಾವವು, ಮನಸ್ಸು ವಕ್ರವಾಗಿಲ್ಲದಂತೆ ನೋಡಿಕೊಳ್ಳುವದು. ಮನಸ್ಸಿನಲ್ಲಿಯೂ ಮಾತಿನಲ್ಲಿಯೂ ಕರ್ಮದಲ್ಲಿಯೂ ಒಂದೇ ಬಗೆಯಾಗಿರುವದು ಆರ್ಜವವು. ನಾವುಗಳು ವ್ಯವಹಾರದಲ್ಲಿ ಈ ಋಜುತೆಯಿಂದ ಎಷ್ಟು ದೂರವಾಗಿರುತ್ತೇವೆಂಬುದು ನಮ್ಮನ್ನು ನಾವೇ ಪರೀಕ್ಷಿಸಿದರೆ ಗೊತ್ತಾಗುತ್ತದೆ. ನಮಗೆ ಜನರಲ್ಲಿ ಸೌಹಾರ್ದವಿಲ್ಲದೆ ಎಲ್ಲರನ್ನೂ ಶಂಕೆಯಿಂದ ಕಾಣುತ್ತಿರುವದೇ ಈ ವಕ್ರತೆಗೆ ಕಾರಣ. ಸ್ವಭಾವದ ವಕ್ರತೆಯೇ ನಮ್ಮನ್ನು ಕಾಪಾಡುತ್ತದೆ ಎಂದು ನಮ್ಮಲ್ಲಿ ಅನೇಕರು ನಂಬಿರುತ್ತಾರೆ. ಐತರೇಯಶ್ರುತಿಯಲ್ಲಿ ಒಂದು ವಾಕ್ಯವಿದೆ. "ಇದೇ ಹಾದಿಯು, ಇದೇ ಮಾಡತಕ್ಕದ್ದು; ಇದನ್ನು ಬಿಟ್ಟು ಎಂದಿಗೂ ಅತ್ತಿತ್ತ ಕದಲಬಾರದು; ಹೀಗೆ ಕದಲಿದ್ದರಿಂದಲೇ ಕಪಿಗಳು, ಉರಗಮನಿಗಳು ಮುಂತಾದ ಪ್ರಾಣಿಗಳು ಕೀಳುಸ್ಥಿತಿಗೆ ಇಳಿದಿರುತ್ತವೆ. " ಈ ಪ್ರಾಣಿಗಳು ಈಗಲೂ ಒಂದು ಸರಳವಾದ ದಾರಿಯನ್ನು ಹಿಡಿಯದೆ

ಚಾಪಲ್ಯಕ್ಕೆ ಈಡಾಗಿರುತ್ತವೆ. ನಾವು ಎಲ್ಲಿಯಾದರೂ ಸ್ವಲ್ಪ ವಕ್ರತೆಯನ್ನು ಮೊದಲು ಮಾಡಿದರೆ ಸಾಕು, ಅದು ನಮ್ಮನ್ನು ಹಿಡಿದುಕೊಂಡುಬಿಡುತ್ತದೆ. ಜನರು ಆ ಬಳಿಕ ನಮ್ಮನ್ನು ನಂಬುವದೇ ಕಷ್ಟವಾಗುತ್ತದೆ. ಪ್ರಹ್ಲಾದನು ತಂದೆಯು ಎಷ್ಟು ಹಿಂಸೆತೋರಿದರೂ ಪರಮಾತ್ಮನಲ್ಲಿ ತನಗಿದ್ದ ಶ್ರದ್ಧಾಭಕ್ತಿಗಳನ್ನು ಎಲ್ಲರಿಗೂ ಹೇಳುತ್ತಿದ್ದದ್ದರಿಂದ ಅವನು ಎಲ್ಲಾ ಕಷ್ಟಗಳಿಂದಲೂ ಪಾರಾದನೆಂದು ಪುರಾಣಗಳಲ್ಲಿದೆ. ಧರ್ಮರಾಯನ ಆರ್ಜವವೂ ಪುರಾಣಗಳಲ್ಲಿ ಪ್ರಶಂಸಿತವಾಗಿದೆ. ಈಚೆಗೆ ಮಹಾತ್ಮಾಗಾಂಧಿಯವರು ಬ್ರಿಟಿಷ್ ಸರ್ಕಾರದ ನೌಕರರು ತಮ್ಮ ವಿಷಯದಲ್ಲಿ ಎಷ್ಟೇ ವಕ್ರತೆಯಿಂದ ನಡೆದರೂ ತಮ್ಮ ಸರಳತನವನ್ನೇ ಕಾಪಾಡಿಕೊಂಡು ಬಂದರೆಂಬುದು ಲೋಕವಿದಿತವಾಗಿರುತ್ತದೆ. ಯಾರಲ್ಲಿ ವಕ್ರತೆಯೂ ಸುಳ್ಳೂ ಮಾಯೆಯೂ ಇಲ್ಲವೋ ಅವರಿಗೇ ಬ್ರಹ್ಮವಿದ್ಯೆಯ ಫಲವು ದಕ್ಕುವದೆಂದು ಶ್ರುತಿ ಸಾರುತ್ತಿದೆ. ಆರ್ಜವವೂ ಒಂದು ದೈವಸಂಪತ್ತಿನ ಹೆಗ್ಗುರುತು.

ಈಗ ನಾವು ಹೇಳುತ್ತಿರುವ ದೈವಸಂಪತ್ತಿನ ಲಕ್ಷಣಗಳು ಮನಸ್ಸಿಗೆ ಸಂಬಂಧಪಟ್ಟವುಗಳೆಂಬುದನ್ನು ನೀವು ಎಂದಿಗೂ ಮರೆಯಬಾರದು. ಮನಸ್ಸೇ ಬಂಧಮೋಕ್ಷಗಳಿಗೆ ಕಾರಣವಾಗಿರುತ್ತದೆ; ಮನಸ್ಸಿನ ಸ್ಥಿತಿಯನ್ನು ಮಾರ್ಪಡಿಸಿಕೊಂಡು ದೈವಸಂಪತ್ತನ್ನು ಬೆಳೆಯಿಸಿಕೊಳ್ಳುವದೇ ಮೋಕ್ಷಕಾರಣಸಾಮಗ್ರಿಯನ್ನು ಕೂಡಿಹಾಕಿಕೊಳ್ಳುವ ಉಪಾಯವು. ಶರೀರಕ್ಕೆ ಬಂದ ರೋಗವನ್ನು ಔಷಧಿಯೇ ಮುಂತಾದ ಉಪಾಯಗಳಿಂದ ಪರಿಹರಿಸಿಕೊಳ್ಳುವಂತೆ ಮನಸ್ಸಿಗೆ ಬಂದಿರುವ ಅಜ್ಞಾನಕೃತರೋಗವನ್ನು ದೈವಸಂಪತ್ತೇ ಮುಂತಾದವುಗಳನ್ನು ಸಂಪಾದಿಸಿ ಮಾನಸಿಕ ಚಿಕಿತ್ಸೆಯಿಂದಲೇ ಪರಿಹರಿಸಿಕೊಳ್ಳಬೇಕಾಗಿದೆ ಎಂಬುದನ್ನು ನಾವು ಮರೆಯದೆ ಇರಬೇಕು.



## ೧೪೭. ದೈವಸಂಪತ್ತು 16 - (2)

**(23.10.49)**

ಹಿಂದಿನ ದಿನ ಆರ್ಜವದ ವಿಚಾರವನ್ನು ಹೇಳಿದ್ದಾಯಿತು. ಯಾವನಿಗೆ ಆರ್ಜವಕ್ಕೆ ಅಡ್ಡಿಯಾದ ವಕ್ರತೆಯಿಲ್ಲವೋ ಅವನಿಗೆ ಮಾತ್ರ ಈ ಆರ್ಜವವು ಸಾಧ್ಯ. ಆದರೆ ವಕ್ರತೆಯೆಂಬ ಅಡ್ಡಿಯು ನಾವೇ ಮಾಡಿಕೊಂಡದ್ದು. ಕೆಲವು ಸಂದರ್ಭಗಳಲ್ಲಿ ವಕ್ರವಾಗಿ ನಡೆದುಕೊಳ್ಳುವದರಿಂದ ಲಾಭವುಂಟೆಂದು ನಮಗೆ ತೋರುತ್ತದೆ, ಆದ್ದರಿಂದ ಅದನ್ನು ಉಪಯೋಗಿಸುತ್ತೇವೆ; ಆದರೆ ಸರಳವಾಗಿ ನಡೆಯುವವನಿಗೆ ಎತ್ತಲೂ ಭಯವಿಲ್ಲ. ಯುದ್ಧಕಾಲದಲ್ಲಿ ಶತ್ರುಗಳಿಗೆ ತಿಳಿಯದಂತೆ ತಾತ್ಕಾಲಿಕವಾದ ಸೇತುವೆಗಳನ್ನು ಹಾಕಿಕೊಂಡು ನದಿಗಳನ್ನು ದಾಟುವದುಂಟು; ಆದರೆ ಅಂಥ ಸಂದರ್ಭದಲ್ಲಿ ಮತ್ತೆ ಆ ಸೇತುವೆಗಳನ್ನು

ಉಪಯೋಗಿಸದಂತೆ ಶತ್ರುಗಳು ಅಡ್ಡಿಮಾಡಿದರೆ, ಅಥವಾ ದಾಟುವ ಸ್ಥಲದಲ್ಲಿ ನಮಗೆ ಅನಿರೀಕ್ಷಿತವಾದ ಕಾರಣಗಳಿಂದ ಶತ್ರುಸೈನ್ಯದವರು ಅವಿತುಕೊಂಡಿದ್ದರೆ ನಮಗೆ ಈ ಸೇತುವೆಗಳು ಮೃತ್ಯುವಿನ ಬಾಯಿಗೆ ಬೀಳುವ ಹೆದ್ದಾರಿಗಳಾಗಿ ಪರಿಣಮಿಸುತ್ತವೆ. ಋಜುಭಾವನೆಯಿರುವವರಿಗೆ ಧೂರ್ತರು ಮೋಸಮಾಡುವರಲ್ಲ ! - ಎಂದು ಕೆಲವರು ಅಂಜುವರು. ಆದರೆ ಧೂರ್ತರು ಎಲ್ಲರನ್ನೂ ವಂಚಿಸುವದಕ್ಕಾಗುವದಿಲ್ಲ; ಸರಳಮಾರ್ಗದವರೆಂದು ತಿಳಿದುಬಿಟ್ಟರೆ ಧೂರ್ತರ ಧೂರ್ತತ್ವವೂ ಹೋಗಿಬಿಡುತ್ತದೆ. ಯಾರ ಹೃದಯದಲ್ಲಿ ಪರಮಾತ್ಮನ ಭಾವನೆಗಳು ಇರುವವೋ ಅವರಿಗೆ ಆರ್ಜವದಿಂದ ಎಂದಿಗೂ ತೊಂದರೆಯಾಗುವದಿಲ್ಲ. ಮಹಾತ್ಮಗಾಂಧಿಯವರು ಸರಳವಾಗಿಯೇ ನಡೆದುಕೊಂಡು ಬ್ರಿಟಿಷರನ್ನು ರಾಜಕೀಯಮಾರ್ಗದಲ್ಲಿ ಕೂಡ ಎದುರಿಸಿ ಜಯಶೀಲರಾದದ್ದು ನಮ್ಮೆಲ್ಲರ ನೆನಪಿನಲ್ಲಿ ಈಗಲೂ ಇದೆ.

ವಕ್ರತೆ, ಮೋಸ - ಮುಂತಾದ ವಿಘ್ನಗಳನ್ನು ನಾವೇ ಏರ್ಪಡಿಸಿಕೊಂಡಿರುವೆವು. ಆದರೆ ಸರಳತೆಯಿರುವವರಿಗೆ ಅನಿರೀಕ್ಷಿತವಾದ ಕಡೆಯಿಂದಲೂ ಸಹಾಯವಾಗುವದು. ಇದಕ್ಕೆ ಒಂದು ಘಟನೆಯು ಉದಾಹರಣೆಯಾಗಿ ನೆನಪಿಗೆ ಬರುತ್ತದೆ. ಕಾನ್ಹನ್‌ಗಾಡಿನ ಸ್ವಾಮಿ ರಾಮದಾಸರು ಸುಪ್ರಸಿದ್ಧ ಸಾಧುಗಳೆನಿಸಿಕೊಂಡಿದ್ದರು. ಇವರು ಇನ್ನೂ ಸಾಧನಪಥದಲ್ಲಿ ನಡೆಯುತ್ತಿದ್ದಾಗ ಒಮ್ಮೆ ಕೆಲವರು ಸ್ನೇಹಿತರೊಡನೆ ರೈಲು ಪ್ರಯಾಣಮಾಡಿದರಂತೆ. ಅವರ ಕೈಯಲ್ಲಿ ಹಣವು ಯಾವದೂ ಇರಲಿಲ್ಲ; ಇದ್ದ ಹಣವನ್ನು ಯಾರಿಗೋ ದಾನಮಾಡಿ, ಹೊರಟುಬಿಟ್ಟಿದ್ದರು. ಆದ್ದರಿಂದ ಟಿಕೆಟ್ ಕೊಂಡುಕೊಳ್ಳದೆಯೇ ಪ್ರಯಾಣಮಾಡಬೇಕಾಯಿತು. ಹೌರಾ ಸ್ಟೇಷನ್ನಿಗೆ ಈಚೆಯಿರುವ ಒಂದಾನೊಂದು ಸ್ಟೇಷನ್ನಿನಲ್ಲಿ ಒಬ್ಬ ಟಿಕೆಟ್ ಇನ್‌ಸ್ಪೆಕ್ಟರನು ಟಿಕೆಟ್ ಇಲ್ಲದವರೆಂದು ಸಾಧುಗಳೆಲ್ಲರನ್ನೂ ಹಿಡಿದುಹಾಕಿದನು. ಆಗ ರಾತ್ರೆ ಎಂಟು ಘಂಟೆ; ಸ್ಟೇಷನ್ನು ಸಣ್ಣದು. ರೈಲು ಹೊರಟುಹೋಗುವವರೆಗೂ ಅವರೆಲ್ಲರನ್ನೂ ಅಲ್ಲಿಯೇ ನಿಲ್ಲಿಸಿಕೊಂಡಿದ್ದು ಆ ಇನ್‌ಸ್ಪೆಕ್ಟರನು `ಇಲ್ಲಿಗೆ ಬನ್ನಿ, ಅಲ್ಲಿಗೆ ಹೋಗಿ; ನಿಲ್ಲಿರಿ, ಕುಳಿತುಕೊಳ್ಳಿರಿ' ಎಂದು ಇವರನ್ನು ಸ್ವಲ್ಪ ಹೊತ್ತು ಆಟವಾಡಿಸಿದನು. ಸಾಧುಗಳು ಕಂ ಕಿಮ್ ಎನ್ನದೆ ಅವನು ಹೇಳಿದಂತೆಯೇ ಮಾಡುತ್ತಿದ್ದರು. ಸ್ವಲ್ಪ ಹೊತ್ತಿನೊಳಗಾಗಿ ಆ ಇನ್ಸ್ಪೆಕ್ಟರನು ಒಂದು ಲಾಂದ್ರವನ್ನು ಹಿಡಿದುಕೊಂಡು ಬಂದು ಇವರಲ್ಲಿ ಏನೇನು ಸಾಮಾನು ಇದೆ ಎಂದು ಪರೀಕ್ಷಿಸುವದಕ್ಕೆ ಮೊದಲುಮಾಡಿದನು; ರಾಮದಾಸರ ಜೊತೆಯಲ್ಲಿದ್ದ ಒಬ್ಬ ಸಾಧುವಿನ ತಂಬಿಗೆಯೊಂದನ್ನು ತೆಗೆದುಕೊಂಡು `ಇದು ನನಗೆ ಇರಲಿ!' ಎಂದು ಹತ್ತಿರದಲ್ಲಿ ಇಟ್ಟುಕೊಂಡನು. ಬಳಿಕ ಲಾಂದ್ರವನ್ನು ರಾಮದಾಸರ ಕಡೆಗೆ ತಿರುಗಿಸಿದನು. ಅವರು ತಮ್ಮ ಲೋಟವನ್ನೂ ಪುಸ್ತಕಗಳ ಗಂಟನ್ನೂ ಅವನ ಮುಂದೆ ಆಗಲೆ ಇಟ್ಟುಬಿಟ್ಟಿದ್ದರು. `ಅಣ್ಣಾ, ಇವೆರಡೂ ನಿನ್ನವೇ. ಅವಶ್ಯವಾಗಿ ತೆಗೆದುಕೊಳ್ಳಬಹುದು!' ಎಂದರು. ಅವನು ಪಾತ್ರೆಯನ್ನು ಮುಟ್ಟದೆ ಪುಸ್ತಕದ ಗಂಟನ್ನು ಬಿಚ್ಚಿದನು; ಇದರೊಳಗೇನಿದೆ? ಎಂದು ನೋಡುವಷ್ಟರಲ್ಲಿ ಮೇಲುಗಡೆ ಇದ್ದ

ಪುಸ್ತಕದ ಮೇಲೆ `ಹೊಸ ಒಡಂಬಡಿಕೆ' (New Testment) ಎಂಬ ಇಂಗ್ಲಿಷು ಹೆಸರು ಬರೆದಿದ್ದದ್ದನ್ನು ಕಂಡು ಆಶ್ಚರ್ಯ ಚಕಿತನಾದನು. ಇನ್‌ಸ್ಪೆಕ್ಟರನು ಕ್ರಿಸ್ತಿಯನ್ ಮತದವನು. `ಏನು, ಬೈಬಲು ಓದುತ್ತೀಯೊ? ನಿನಗೆ ಕ್ರೈಸ್ತನಲ್ಲಿ ನಂಬಿಕೆಯುಂಟೇನು?' ಎನ್ನುವಷ್ಟರೊಳಗೆ ``ಏಕಾಗಬಾರದು? ಆ ಮಹಾತ್ಮನೂ ಈಶ್ವರನ ಸಂದೇಶವನ್ನು ತಂದವನಲ್ಲವೆ?" ಎಂದು ರಾಮದಾಸರು ಉತ್ತರವನ್ನು ಕೊಟ್ಟರು. ಇದನ್ನು ಕೇಳಿದ ಇನ್‌ಸ್ಪೆಕ್ಟರನ ಹೃದಯವು ಕರಗಿತು. `ಸ್ವಾಮಿ, ಕ್ಷಮಿಸಬೇಕು! ನಿಮಗೆ ಬಹಳ ತೊಂದರೆ ಕೊಟ್ಟೆ!, ಎಂದು ಅವರನ್ನು ಸ್ಟೇಷನ್ನಿನೊಳಕ್ಕೆ ಕರೆದುಕೊಂಡುಹೋಗಿ ಉಪಚರಿಸಿ ಮುಂದಿನ ರೈಲಿನಲ್ಲಿ ಗೌರವದಿಂದ ಹೌರಾಕ್ಕೆ ಕಳುಹಿಸಿಕೊಟ್ಟನಂತೆ! ಸರಳವಾದ ನಡತೆಗೆ ಪರಮೇಶ್ವರನು ಏರ್ಪಡಿಸುವ ಪ್ರತಿಫಲವು ಇಂಥದ್ದು!

ಈಗ ಅಹಿಂಸೆಯ ವಿಚಾರವನ್ನು ಮಾಡಬೇಕಾಗಿದೆ. ಅಹಿಂಸೆಯೆಂದರೇನೆಂಬ ಬಗ್ಗೆ ಜನರಲ್ಲಿ ಭಿನ್ನಾಭಿಪ್ರಾಯವಿದೆ. ಈ ಶಬ್ದಕ್ಕೆ ಶಾಸ್ತ್ರರೀತಿಯಲ್ಲಿರುವ ಅರ್ಥವೇ ಬೇರೆ, ಜನರು ಸಾಮಾನ್ಯವಾಗಿ ತಿಳಿದುಕೊಂಡಿರುವ ಅರ್ಥವೇ ಬೇರೆ. ತ್ರಿಕರಣಗಳಿಂದ ಯಾರನ್ನೂ ಯಾವ ಬಗೆಯಿಂದಲೂ ನೋಯಿಸದಿರುವದೇ ಅಹಿಂಸೆ ಎನ್ನುವದಾದರೆ ಆ ಅಹಿಂಸೆಯು ಮನುಷ್ಯಮಾತ್ರಕ್ಕೆ ಅಸಾಧ್ಯವೆಂದು ಹೇಳಬೇಕಾಗುತ್ತದೆ. ಏಕೆಂದರೆ ಸತ್ಯವನ್ನು ನುಡಿದರೂ ಈ ಅರ್ಥದಲ್ಲಿ ಹಿಂಸೆಯಾಗುತ್ತದೆ. ನಾವು ದಾರಿಯಲ್ಲಿ ನಡೆಯುತ್ತಿರುವಾಗ ನಮ್ಮ ಕಾಲ ಕೆಳಗೆ ಸಿಕ್ಕಿದ ಎಷ್ಟೋ ಪ್ರಾಣಿಗಳಿಗೆ ನಮಗೆ ತಿಳಿಯದಂತೆಯೇ ವ್ಯಥೆಯಾಗುತ್ತದೆ; ಎಷ್ಟೋ ಸಣ್ಣಪ್ರಾಣಿಗಳು ಸತ್ತೇಹೋಗುತ್ತವೆ. ಕಳ್ಳರಿಗೆ ಪೋಲಿಸಿನವರಿಂದ ಹಿಂಸೆಯಾಗುತ್ತಿರುತ್ತದೆ. ಮ್ಯಾಜಿಸ್ಟ್ರೇಟರು, ಡಾಕ್ಟರುಗಳು - ಇವರುಗಳದ್ದೆಲ್ಲ ಹಿಂಸಾಜೀವನವೆಂದೇ ಸಾರಬೇಕಾಗುತ್ತದೆ. ಗೃಹಸ್ಥರು ಉಳುವಾಗ, ಬಿತ್ತುವಾಗ, ಬೆಳೆಯುವಾಗ, ಪೈರುಕೊಯ್ಯುವಾಗ, ಅಡಿಗೆಯನ್ನು ಮಾಡುವಾಗ - ಇನ್ನೂ ಎಷ್ಟೋ ಸಂದರ್ಭಗಳಲ್ಲಿ - ಹಿಂಸೆಯನ್ನು ಮಾಡಲೇಬೇಕಾಗಿಬರುತ್ತದೆ. ಒಮ್ಮೆ ಜೈನಸಂನ್ಯಾಸಿಗಳೊಬ್ಬರು ದಿಗಂಬರರಾಗಿಯೇ ಓಡಾಡುವದು ತಮ್ಮ ವ್ರತವೆಂದೂ ಅವಕ್ಕೆ ಅಡ್ಡಿಮಾಡಿದರೆ ತಮಗೆ ಹಿಂಸೆಯನ್ನು ಮಾಡಿದಂತೆ ಆಗುವದೆಂದೂ ಹೈದರಾಬಾದು ಸರಕಾರಕ್ಕೆ ತಿಳಿಸಿದರಂತೆ! ಸರಕಾರದವರು `ನೀವು ಬೆತ್ತಲೆ ಓಡಾಡುವದನ್ನು ನೋಡುವಾಗ ಎಷ್ಟೋ ಸಭ್ಯಗೃಹಸ್ಥರ ಮನಸ್ಸಿಗೆ ನೋವಾಗುತ್ತದೆ' ಎಂದು ಅವರನ್ನು ತಡೆದುಹಾಕಿದರಂತೆ! ಗಾಂಧಿಯವರು ಅಹಿಂಸೆಯನ್ನೇ ಪ್ರಧಾನವಾಗಿಟ್ಟುಕೊಂಡಿದ್ದರೆಂದು ನಾವೆಲ್ಲರೂ ನಂಬುತ್ತೇವಷ್ಟೆ; ಅವರ ವರ್ತನೆಯಿಂದ ಬ್ರಿಟಿಷ್ ಜನಗಳನೇಕರಿಗೆ ಬಹಳ ವ್ಯಥೆಯಾಯಿತು. ಆದ್ದರಿಂದ ಯಾರಿಗೂ ಯಾವ ನೋವೂ ಉಂಟಾಗದಿರುವದೆಂಬ ಅರ್ಥವನ್ನು ತೆಗೆದುಕೊಂಡರೆ ಅಹಿಂಸೆಯನ್ನು ಆಚರಿಸುವದು ಅಸಾಧ್ಯವೆಂದಾಗುತ್ತದೆ.

ಲೋಕದಲ್ಲಿ ನಮ್ಮ ವರ್ತನೆಯಿಂದ ಯಾರಿಗೂ ಯಾವ ಹಿಂಸೆಯೂ ಆಗದಿರುವದೆಂಬುದು ಅಸಾಧ್ಯವಾದರೂ ನಾವು ಬೇಕೆಂತ ಯಾರೊಬ್ಬರಿಗೂ

ಹಿಂಸೆಯನ್ನುಂಟುಮಾಡಬಾರದು, ಹಿಂಸೆಯು ಅನಿವಾರ್ಯವಾಗಿರುವ ಸಂದರ್ಭದಲ್ಲಿ ಆದಷ್ಟು ಅಲ್ಪ ಹಿಂಸೆಯಿಂದ ಕೆಲಸವನ್ನು ಸಾಗಿಸಬೇಕು; ಅದೂ ಅಹಿಂಸೆಯೇ ಆಗುತ್ತದೆ. `ಅಲವಣಾ ಯವಾಗೂಃ' `ಗಂಜಿಗೆ ಉಪ್ಪೇ ಹಾಕಿಲ್ಲ' ಎಂಬ ವಾಕ್ಯವನ್ನು `ಉಪ್ಪುಸಾಲದು, ಸ್ವಲ್ಪವೇ ಉಪ್ಪನ್ನು ಹಾಕಿದಾರೆ' ಎಂಬರ್ಥದಲ್ಲಿಯೂ ಉಪಯೋಗಿಸುತ್ತಾರಷ್ಟೆ, ಇದರಂತೆಯೇ ಈ ಶಬ್ದದ ಅರ್ಥವನ್ನು ನಾವು ಮಾಡಿಕೊಳ್ಳಬೇಕು. ಈ ಲೋಕವು ಅನ್ನಾನ್ನಾದರೂಪವಾಗಿರುತ್ತದೆ. ಪ್ರಾಣಿಗಳು ಒಂದನ್ನೊಂದು ತಿಂದು ಜೀವಿಸಬೇಕಾಗಿದೆ. ಮನುಷ್ಯನು, ಸ್ಥಾವರಪ್ರಾಣಿಗಳನ್ನು ಹಿಂಸೆಮಾಡಲೇಬೇಕಾಗಿರುತ್ತದೆ. ಆದರೂ ಆದಷ್ಟು ಹಿಂಸಾವರ್ಜಿತವಾಗಿ ನಡೆದುಕೊಳ್ಳಬೇಕೆಂಬುದೇ ಸಾಧಕನ ಉದ್ದೇಶವಾಗಿರಬೇಕು. ಶಾಸ್ತ್ರದಲ್ಲಿ ದೃಷ್ಟಫಲವೇ ಅಲ್ಲದೆ ಅದೃಷ್ಟಫಲವನ್ನೂ ಲೆಕ್ಕಕ್ಕೆ ತೆಗೆದುಕೊಂಡು ಗೃಹಸ್ಥನಿಗೆ ಕೆಲವು ಹಿಂಸಾಕಾರ್ಯಗಳಲ್ಲಿ ಅನುಜ್ಞೆಕೊಟ್ಟಿರುತ್ತದೆ. ಯಜ್ಞಾದಿಗಳಲ್ಲಿ ಪಶುವಿಗೆ ಹಿಂಸೆಯಾದರೂ ಅದನ್ನು ಶಾಸ್ತ್ರದಲ್ಲಿ ಧರ್ಮವೆಂದೇ ಗಣಿಸಿರುತ್ತದೆ. ಸಮಾಜಕ್ಕೆ ಉಪಕಾರವನ್ನು ಮಾಡುವ ಕೆಲಸದ ಹೊಣೆಗಾರಿಕೆಯನ್ನು ಹೊತ್ತಿರುವ ಗೃಹಸ್ಥನಿಗೆ ಅಲ್ಪಹಿಂಸೆಗೆ ಅವಕಾಶವನ್ನು ಕೊಟ್ಟಿರುವದು ಲೌಕಿಕದೃಷ್ಟಿಯಿಂದಲೂ ಯುಕ್ತವಾಗಿಯೇ ಇದೆ. ಆದರೆ ತನ್ನದೆಂಬ ಆಸ್ತಿಯೇ ಇಲ್ಲದ ಸಂನ್ಯಾಸಿಗೆ ಯಾವದೊಂದು ಪ್ರಾಣಿಯನ್ನೂ ಹಿಂಸೆಮಾಡಬಾರದು ಎಂಬ ನಿಯಮವನ್ನು ಬಿಗಿಯಾಗಿಟ್ಟಿರುತ್ತದೆ. ಒಬ್ಬ ಮನುಷ್ಯನು ಮತ್ತೊಬ್ಬನನ್ನು ಖೂನಿಮಾಡಿದ್ದಾನೆಂದು ಇಟ್ಟುಕೊಳ್ಳಿರಿ. ಅದನ್ನು ಮಹಾಪರಾಧವೆಂದು ಎಣಿಸಿ ಸಮಾಜದವರು ಅವನಿಗೆ ಮರಣದಂಡನೆ ವಿಧಿಸುತ್ತಾರೆ. ಆದರೆ ಒಬ್ಬ ಮನುಷ್ಯನಿಗೆ ಜೀವವನ್ನು ಕೊಡಲಾರದ ಮತ್ತೊಬ್ಬ ಮನುಷ್ಯನು ಅವನ ಪ್ರಾಣವನ್ನು ತೆಗೆದುಹಾಕಬಹುದೇ? - ಎಂಬುದು ವಿಚಾರಕ್ಕೆ ಬಂದಾಗ ಅದು ಸ್ವಲ್ಪ ವಾದಗ್ರಸ್ತವೇ ಆಗುತ್ತದೆ. ಕೆಲವರು ಹುಡುಗರನ್ನು ಹೊಡೆದಹೊರತು ಅವರನ್ನು ಸರಿಯಾದ ಮಾರ್ಗಕ್ಕೆ ತರುವದು ಆಗುವದಿಲ್ಲವೆಂಬ ಕಾರಣದಿಂದ ಉಪಾಧ್ಯಾಯನು ಬೆತ್ತವನ್ನುಪಯೋಗಿಸುವಂತೆಯೇ ಮರಣದಂಡನೆಯ ವಿಧಾನವೂ ಆಗಿರುತ್ತದೆ. ಸಮಾಜಕ್ಕೆ ಅಪಾಯಕಾರಿಯಾದ ಕೊಲೆಪಾತಕನನ್ನು ಮರಣದಂಡನೆಗೆ ಗುರಿಮಾಡಿ ಬಹುಜನರನ್ನು ಉಳಿಸುವದೇ ಮೇಲು ಎಂಬುದು ಆ ದಂಡನೆಯನ್ನು ಒಪ್ಪುವವರ ವಾದವಾಗಿರುತ್ತದೆ.

ಈ ರೀತಿಯಲ್ಲಿ ಒಂದೊಂದು ಭೂಮಿಕೆಯಲ್ಲಿಯೂ ಸಾರಾಸಾರವಿವೇಚನೆಯಿಂದ ನಿವಾರ್ಯವಾದ ಹಿಂಸೆ ಯಾವದು, ಅನಿವಾರ್ಯವಾದ ಹಿಂಸೆಯಾವದು? ಎಂಬುದನ್ನು ಯೋಚಿಸಿಯೇ ಒಂದಾನೊಂದು ವರ್ತನೆಯು ಸರಿಯೆ, ಸರಿಯಲ್ಲವೆ - ಎಂಬುದನ್ನು ಗೊತ್ತುಪಡಿಸಬೇಕಾಗುತ್ತದೆ. ಶರೀರದಿಂದಲೇ ಅಥವಾ ಶಸ್ತ್ರಾಸ್ತ್ರಗಳ ಮೂಲಕ ಮಾಡಿದ್ದೇ ಹಿಂಸೆಯಾಗುವದೆಂಬ ನಿಯಮವೇನೂ ಇಲ್ಲ. ಎಷ್ಟೋ ವೇಳೆಯಲ್ಲಿ ಬಿರುಸಾದ ಅಥವಾ ಮೂದಲಿಸುವ ಮಾತುಗಳಿಂದ ನಾವು ಜನರನ್ನು ಅನವಶ್ಯವಾಗಿ ಹಿಂಸಿಸುತ್ತಿರುತ್ತೇವೆ.

ನಯವಾಗಿ ಆಡುವ ಮರ್ಮೋದ್ಘಾಟನೆಯ ಮಾತಿನಿಂದ ಭಾರಿಯ ಬಾಂಬುಗಳಿಂದಾಗುವ ಹಿಂಸೆಗಿಂತಲೂ ಹೆಚ್ಚಿನ ಹಿಂಸೆಯಾಗಬಹುದು. ಒಳ್ಳೆಯ ಮಾತಿನಿಂದ ಎಷ್ಟೋ ಜನರಿಗೆ ಪ್ರೋತ್ಸಾಹವು ದೊರೆತು ರೋಗಕ್ಕೆ ಮದ್ದನ್ನು ಕೊಟ್ಟಂತೆ ಹರ್ಷವೂ ಆರೋಗ್ಯವೂ ದೊರೆಯಬಹುದು; ಆಡಬಾರದ ಮಾತಿನಿಂದ ಮತ್ತೊಬ್ಬರಿಗೆ ಪ್ರಾಣವನ್ನು ಕಳೆದುಕೊಳ್ಳುವ ಸ್ಥಿತಿಯೂ ಬರಬಹುದು. ಆದ್ದರಿಂದ ಹಿಂಸೆಯ ವಿಚಾರವನ್ನು ಮಾಡುವಾಗ ಮಾತಿನಿಂದಾಗುವ ಹಿಂಸೆಯನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಲೇಬೇಕು. ಶಾರೀರಕವಾದ ಹಿಂಸೆ, ವಾಚನಿಕವಾದ ಹಿಂಸೆ - ಇವೆರಡರ ಜೊತೆಗೆ ಮನಸ್ಸಿನಿಂದ ಮಾಡುವ ಹಿಂಸೆಯನ್ನೂ ಸೇರಿಸಬೇಕು. ಮಾನಸಿಕಹಿಂಸೆಯಿಂದ ಮತ್ತೊಬ್ಬರಿಗೆ ತೊಂದರೆಯಾಗುವದು ನಮಗೆ ಅಷ್ಟು ನೇರಾಗಿ ಕಾಣುವದಿಲ್ಲ. ವಿಷಕ್ರಿಮಿಗಳಿಂದ ಹರಡುವ ಸಾಂಕ್ರಾಮಿಕರೋಗವು ಆ ಕ್ರಿಮಿಗಳಿಂದಲೇ ಆಯಿತೆಂದು ನಿಶ್ಚಯಿಸುವದು ಹೇಗೆ ಸಾಮಾನ್ಯರಿಗೆ ಕಷ್ಟವಾಗಿರುತ್ತದೆಯೋ ಹಾಗೆಯೇ ನಮ್ಮ ಮನಸ್ಸಿನಲ್ಲಿ ನಾವು ಮಾಡಿಕೊಳ್ಳುವ ಕೆಟ್ಟ ಆಲೋಚನೆಗಳಿಂದ ಮತ್ತೊಬ್ಬರಿಗೆ ಆಗುವ ಹಿಂಸೆಯೂ ನಮ್ಮಂಥವರಿಗೆ ಬೇಗನೆ ಸ್ಪಷ್ಟವಾಗಿ ತಿಳಿಯಬರುವದು ಕಷ್ಟವಾಗಿರುತ್ತದೆ. ಆದರೂ ಅದರಿಂದ ಹಿಂಸೆಯಾಗುವದೇನೋ ಖಂಡಿತ. ಸೂಕ್ಷ್ಮ ಪ್ರಪಂಚದಲ್ಲಿ ಆಲೋಚನೆಗಳ ಅಲೆಗಳೇ ಓಡಾಡುತ್ತಿರುತ್ತವೆ. ನಾವು ಸ್ನಾನಮಾಡುವ ಕಡೆಯಲ್ಲಿ ಸಮುದ್ರದ ಆಯಾ ಭಾಗದ ಅಲೆಗಳು ನಮನಮಗೆ ತಾಕುವಂತೆ ಅವು ಸಂಬಂಧಪಟ್ಟ ಜನರಮೇಲೆ ಅವಶ್ಯವಾಗಿ ಪರಿಣಾಮವನ್ನು ಉಂಟುಮಾಡುವವು.

ಆದ್ದರಿಂದ ತ್ರಿಕರಣದಿಂದಲೂ ಯಾರೊಬ್ಬರಿಗೂ ಅನವಶ್ಯವಾಗಿ ಹಿಂಸೆಯನ್ನು ಮಾಡುವದಿಲ್ಲವೆಂದು ಸಂಕಲ್ಪಿಸಿ ಅದಕ್ಕೆ ತಕ್ಕ ಪ್ರಯತ್ನವನ್ನು ಮಾಡುವದೇ ಅಹಿಂಸೆಯು. ಇದು ದೈವೀಸಂಪತ್ತಿನ ಒಂದು ಗುರುತು.

ಹಿಂಸೆಮಾಡುವವನಿಗೆ ಆದರಿಂದ ಯಾವ ಪ್ರತಿಕ್ರಿಯೆಯೂ ಆಗುವದಿಲ್ಲವೆಂದು ತಿಳಿಯಬಾರದು. ಅದರಿಂದ ಪಾಪವುಂಟಾಗುತ್ತದೆ ಎಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಒಬ್ಬ ಮನುಷ್ಯನಿಗೆ ನಾವು ತೊಂದರೆಯನ್ನುಂಟುಮಾಡುವದಕ್ಕೆಂದು ಪ್ರಯತ್ನಿಸುವಾಗ ನಮ್ಮ ಮನಸ್ಸನ್ನು ಅಷ್ಟುಮಟ್ಟಿಗೆ ತಿರಿಚಿ ಒಗ್ಗಿಸಿಕೊಳ್ಳಬೇಕಾಗುತ್ತದೆ. ಆಗ ನಮಗೂ ಹಿಂಸೆಯಾಗುತ್ತದೆ ಎಂದಾಯಿತು. ಆದರೆ ಅದು ನಮಗೆ ಅಷ್ಟಾಗಿ ಗೊತ್ತಾಗುವದಿಲ್ಲ; ಏಕೆಂದರೆ ಆಗ ನಾವು ಮತ್ತೊಬ್ಬನಿಗೆ ಮಾಡುವ ಹಿಂಸಾಕಾರ್ಯದಲ್ಲಿಯೇ ವ್ಯಗ್ರರಾಗಿರುತ್ತೇವೆ. ಹೀಗೆಯೇ ಹಿಂಸೆಯನ್ನು ಮಾಡುತ್ತಲೇ ಇದ್ದರೆ ನಮ್ಮ ಹೃದಯವು ಮೊಂಡಾಗಿ ಹಿಂಸೆಯು ನಮಗೆ ನೀರುಕುಡಿದಷ್ಟು ಅನಾಯಾಸದ ಕೆಲಸವಾಗುವದು. ಹೀಗಾದರೆ ತನ್ನನ್ನು ತಾನೇ ಹಾಳುಮಾಡಿಕೊಂಡಂತಾಗುವದು. ಇಡಿಯ ಜಗತ್ತೇ ಮನಸ್ಸಿನ ಆಳ್ವಿಕೆಯಲ್ಲಿರುತ್ತದೆ; ಮನಸ್ಸಿನಲ್ಲಿ ಎಂಥ ಆಲೋಚನೆಗಳು ಉಂಟಾಗುವವೋ ಅದಕ್ಕೆ ತಕ್ಕಂತೆ ನಮ್ಮ ಹೊರಗಿನ ಸಂನಿವೇಶವೂ ಮಾರ್ಪಡುವದು. ಆದ್ದರಿಂದ ಹಿಂಸೆಯು ನಮ್ಮ ಪುರುಷಾರ್ಥಕ್ಕೆ

ಅಡ್ಡಿಯಾಗುವದೆಂಬುದರಲ್ಲಿ ಸಂಶಯವಿಲ್ಲ. ಯಾವದು ನಮ್ಮ ಮನಸ್ಸನ್ನು ಕೆಡಿಸಿ ನಮ್ಮ ಇಹಪರಪುರುಷಾರ್ಥಕ್ಕೆ ಅಡ್ಡಿಯನ್ನುಂಟುಮಾಡುವದೋ ಅದೇ ಪಾಪವು; ಇದಕ್ಕೆ ವಿಪರೀತವಾಗಿ ಯಾವದು ಪುರುಷಾರ್ಥಕ್ಕೆ ಹೇತುವಾಗಿರುವದೋ ಅದೇ ಪುಣ್ಯವು.

ಹಿಂಸೆಯ ವರ್ಣನೆಯನ್ನು ಮಾಡಿ ಅಹಿಂಸೆಯನ್ನು ತಿಳಿಸಿದ್ದರ ಉದ್ದೇಶವೇನೆಂದರೆ ಹಿಂಸೆಯನ್ನು ಪರಿಹರಿಸಿಕೊಳ್ಳುವುದಕ್ಕೆ ಅನುಕೂಲಿಸಲೆಂದು. ಅಹಿಂಸೆಯೆಂಬ ಮಾತಿಗೆ ಎರಡು ಅರ್ಥಗಳನ್ನು ಕೊಟ್ಟು ಸರಿಯಾದ ಅರ್ಥವೆಂಬುದು ಯಾವದೆಂಬುದನ್ನು ನಿರ್ಧರಿಸಿದ್ದಾಯಿತು. ತಪ್ಪು ಅಭಿಪ್ರಾಯವನ್ನು ತಿಳಿಸದೆ ಸರಿಯಾದದ್ದನ್ನು ನಿಷ್ಕರ್ಷಿಸುವದು ಸಾಧ್ಯವಲ್ಲ. ಆದ್ದರಿಂದ ಈಗಿನ ಕಾಲಕ್ಕೆ ಪ್ರಚಾರದಲ್ಲಿರುವ ಅರ್ಥವನ್ನು - ಯಾರೊಬ್ಬರಿಗೂ ಯಾವ ಹಿಂಸೆಯನ್ನೂ ಮಾಡದಿರುವದೆಂಬ ಅರ್ಥವನ್ನು - ವಿಮರ್ಶಿಸಿ ಈ ಅಕ್ಷರಾರ್ಥವನ್ನು ಅನುಷ್ಠಾನಕ್ಕೆ ತರುವದು ಅಸಾಧ್ಯವೆಂಬುದನ್ನು ತಿಳಿಸಿರುತ್ತೇನೆ. ಭಾರತದಲ್ಲಿರುವ ತುಲಾಧಾರನ ಕಥೆಯನ್ನು ನೀವು ಓದಿರಬಹುದು; ಅಥವಾ ಕೇಳಿರಬಹುದು. ಆ ವೈಶ್ಯನು ತಾನು ಆದಷ್ಟು ಅಲ್ಪಹಿಂಸೆಯ ರೂಪದಲ್ಲಿ ಅಹಿಂಸೆಯನ್ನು ಅನುಸರಿಸಿ ನಡೆದುಕೊಂಡದ್ದರಿಂದ ತನಗೆ ಪರೋಕ್ಷಜ್ಞಾನವುಂಟಾದ ರೀತಿಯನ್ನು ತಿಳಿಸಿರುತ್ತಾನೆ. ಯಾವ ಹಿಂಸೆಯನ್ನು ಮಾಡದಿರುವದೆಂಬ ಅಹಿಂಸೆಯು ಹೇಗೆ ಅಸಾಧ್ಯವೆಂಬುದನ್ನು ಲೋಕದಲ್ಲಿ ನಡೆಯುತ್ತಿರುವ ಹಿಂಸೆಗಳ ವರ್ಣನೆಯಿಂದ ತಿಳಿಸಿಕೊಟ್ಟಿರುತ್ತೇನೆ. ಕರ್ತವ್ಯವನ್ನು ಪಾಲಿಸುವದರಲ್ಲಿ ಎಷ್ಟೋ ಸಂದರ್ಭಗಳಲ್ಲಿ ಹಿಂಸೆಯು ಅವಶ್ಯವೇ ಆಗಿರುತ್ತದೆ. ಆದರೆ ಆ ಹಿಂಸೆಯು ಪಾಪಕರವೂ ಅಲ್ಲ, ನಿಜವಾದ ಅಹಿಂಸೆಗೆ ವಿರುದ್ಧವೂ ಅಲ್ಲ. ಈ ಗುಟ್ಟನ್ನು ತಿಳಿದು ನಾವು ಅಹಿಂಸೆಯೆಂಬ ದೈವಸಂಪತ್ತನ್ನು ಸಂಪಾದಿಸಿಕೊಳ್ಳಲು ಪ್ರಯತ್ನಿಸಬೇಕು.



## ೧೪೬. ದೈವಸಂಪತ್ತು 16 - (2)

**(30-10-49)**

ಅಹಿಂಸೆಯ ವಿಚಾರದ ಪಕ್ಕದಲ್ಲಿಯೇ ಸತ್ಯದ ವಿಚಾರವು ಬಂದಿರುವದರಲ್ಲೊಂದು ವಿಶೇಷವಿದೆ. ಅಹಿಂಸೆಯ ವಿಚಾರವಾಗಿ ಮಾತನಾಡುವಾಗ ಅಹಿಂಸಾಶಬ್ದದ ಅಕ್ಷರಾರ್ಥವನ್ನು ತೆಗೆದುಕೊಳ್ಳುವದಕ್ಕೆ ಆಗುವದಿಲ್ಲ; ಯಾರೊಬ್ಬರಿಗೂ ಯಾವ ವಿಧದಲ್ಲಿಯೂ ನೋವನ್ನುಂಟುಮಾಡದೆ ಇರುವದಕ್ಕೆ ಸಾಧ್ಯವೇ ಇಲ್ಲ - ಎಂಬುದನ್ನು ತಿಳಿಸಿ ಅಹಿಂಸೆ ಎಂದರೆ ಅಲ್ಪಹಿಂಸೆ, ಮನಃಪೂರ್ವಕವಾಗಿ ಮತ್ತೊಬ್ಬರಿಗೆ ಅನಿವಾರ್ಯವಲ್ಲದ ಹಿಂಸೆಯನ್ನು ಮಾಡದಿರುವದು; ಶಾಸ್ತ್ರೋಕ್ತವಾದ ಹಿಂಸೆಯು ಅಹಿಂಸೆಗೆ ಪ್ರತಿಷೇಧವರ್ತನೆಯಲ್ಲ -

ಎಂಬುದನ್ನು ಸ್ಪಷ್ಟಪಡಿಸಿದ್ದಾಯಿತು. ಅಹಿಂಸೆ, ಸತ್ಯ-ಇವೆರಡನ್ನೂ ಗಾಂಧಿಯವರು ತಮ್ಮ ಜೀವನಸೂತ್ರವೆಂದು ಹೇಳುತ್ತಿದ್ದರು. ಆದ್ದರಿಂದ ತತ್ತ್ವವಿಚಾರದ ದೃಷ್ಟಿಯಿಂದ ಸತ್ಯದ ವಿಷಯವನ್ನು ಸ್ವಲ್ಪ ಬಿಡಿಸಿ ನೋಡುವದು ಲಾಭದಾಯಕವಾಗಿರುತ್ತದೆ.

ಸತ್ಯವು ವಸ್ತುವಿಗೆ ಸಂಬಂಧಪಟ್ಟದ್ದು, ಮಾತಿಗೆ ಸಂಬಂಧಪಟ್ಟದ್ದು, ಮನಸ್ಸಿಗೆ ಸಂಬಂಧಪಟ್ಟದ್ದು - ಎಂದು ಮೂರು ಬಗೆಯಾಗಿದೆ. ಯಾವ ವಸ್ತು ಅರ್ಥಕ್ರಿಯಾಕಾರಿಯಾಗಿರುವದೋ ಅದನ್ನು ಸತ್ಯವೆಂದು ಜನರು ವ್ಯವಹರಿಸುತ್ತಾರೆ. ಉದಾಹರಣೆಗೆ `ನೀರು ಬಾಯಾರಿಕೆಯನ್ನು ಇಂಗಿಸುತ್ತದೆ; ಆದ್ದರಿಂದ ಅದು ಸತ್ಯವಾದ ನೀರು. ಇದು ಜನರನ್ನು ಕಚ್ಚಿದಾಗ ವಿಷವೇರಿ ಸತ್ತಿದ್ದಾರೆ, ಆದ್ದರಿಂದ ಇದು ನಿಜವಾದ ನಾಗರಹಾವು' ಎಂದು ಜನರು ಆಡಿಕೊಳ್ಳುತ್ತಾರೆ. ಆದರೆ ಈ ಲಕ್ಷಣವು ಕನಸಿನಲ್ಲಿ ಅತಿವ್ಯಾಪ್ತವಾಗುತ್ತದೆ. ಕನಸಿನ ನೀರು ನೀರಡಿಕೆಯನ್ನು ಹೋಗಲಾಡಿಸುವದಾದರೂ, ಕನಸಿನ ಹಾವು ಕಚ್ಚಿ ಜನರು ಸತ್ತದ್ದನ್ನು ನಾವು ಕಂಡಿದ್ದರೂ, ಅವು ನಿಜವಾದ ನೀರೆಂದಾಗಲಿ ನಿಜವಾದ ಹಾವೆಂದಾಗಲಿ ನಾವು ಯಾರೂ ಎಣಿಸುವದಿಲ್ಲ. ಶ್ರೀ ಶಂಕರಾಚಾರ್ಯರು ಸತ್ಯವಸ್ತುವಿನ ನಿರ್ದುಷ್ಟಲಕ್ಷಣವನ್ನು ಹೇಗೆ ತಿಳಿಸಿರುತ್ತಾರೆಂದರೆ, ಯಾವ ರೂಪದಲ್ಲಿರುವದೆಂದು ಯಾವದನ್ನು ನಿಶ್ಚಯಿಸಿದ ಬಳಿಕ ಆ ರೂಪವನ್ನು ಬದಲಾಯಿಸಿಕೊಳ್ಳದೆ ಹಾಗೆಯೇ ಇರುವದೋ, ಅದು ಸತ್ಯವಾದದ್ದು. ಇನ್ನು ಜ್ಞಾನಕ್ಕೆ ಸಂಬಂಧಪಟ್ಟಂತೆ ಸತ್ಯವೆಂದರೇನು? ವಸ್ತುವನ್ನು ಪೂರ್ಣದೃಷ್ಟಿಯಿಂದ ವಿಚಾರಮಾಡದೆ ಇರುವಾಗ ಅದರ ವಿಷಯದಲ್ಲಾಗಬಹುದಾದ ತಪ್ಪು ತಿಳಿವಳಿಕೆಗೆ ಮಿಥ್ಯಾಜ್ಞಾನವೆಂದು ಹೆಸರು. ದೊಡ್ಡವರ ಉಪದೇಶದಿಂದಲೂ ಸರಿಯಾದ ವಿಚಾರದಿಂದಲೂ ನಮಗೆ ವಸ್ತುವು ಇದ್ದಂತೆಯೇ ಆಗುವ ತಿಳಿವಳಿಕೆಗೆ ಸಮ್ಯಗ್ಜ್ಞಾನವೆಂದು ಹೆಸರು. ಹೀಗೆ ವಸ್ತುವು ಇದ್ದಂತೆ ತಿಳಿಸುವ ಜ್ಞಾನವು ಯಥಾರ್ಥವಾದದ್ದು ಅಥವ ಸತ್ಯವಾದದ್ದು - ಎಂದಾಗುತ್ತದೆ. ಪ್ರಕೃತದಲ್ಲಿ ಈ ಎರಡು ಬಗೆಯ ಸತ್ಯಗಳ ವಿಚಾರವನ್ನು ನಾವು ಮಾಡುತ್ತಿಲ್ಲ. ವಾಕ್ಕಿಗೆ ಸಂಬಂಧಪಟ್ಟ ಸತ್ಯವನ್ನೇ ಇಲ್ಲಿ ವಿಮರ್ಶಿಸಬೇಕಾಗಿರುವದು: ತಾವು ಕಂಡ ವಸ್ತುವಾಗಲಿ, ತಮಗೆ ಆದ ತಿಳಿವಳಿಕೆಯ ಯಾಥಾರ್ಥ್ಯವಾಗಲಿ ಇಲ್ಲಿ ವಿಚಾರಕ್ಕೆ ವಿಷಯವಲ್ಲ. ತಾನು ಕಂಡದ್ದನ್ನು ಕಂಡಂತೆಯೂ ತಿಳಿದಿರುವದನ್ನು ತಿಳಿದರುವಂತೆಯೂ ಆಡುವದೇ ಇಲ್ಲಿ ಸತ್ಯಶಬ್ದಕ್ಕೆ ಅರ್ಥ. ಸತ್ಯವಚನದ ವಿಷಯದಲ್ಲಿ ಒಂದು ಸ್ಮೃತಿಯುಂಟು. `ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾನ್ನ ಬ್ರೂಯಾತ್ ಸತ್ಯಮಪ್ರಿಯಮ್| ಪ್ರಿಯಂ ಚ ನಾನೃತಂ ಬ್ರೂಯಾದೇಷ ಧರ್ಮಃ ಸನಾತನ!!' ಸತ್ಯವನ್ನು ಹೇಳಬೇಕು. ಪ್ರಿಯವಾದದ್ದನ್ನು ಹೇಳಬೇಕು. ಅಪ್ರಿಯವಾದ ಸತ್ಯವನ್ನು ಹೇಳಬಾರದು, ಪ್ರಿಯವಾದ ಅನೃತವನ್ನು ಹೇಳಬಾರದು - ಇದೇ ಸನಾತನವಾದ ಧರ್ಮವು. ಈ ವಾಕ್ಯದ ಅಭಿಪ್ರಾಯವನ್ನು ಮನಸ್ಸಿಗೆ ತಂದುಕೊಂಡೇ ಸತ್ಯವದನವೆಂಬ ಧರ್ಮವನ್ನು ಪಾಲಿಸಬೇಕು. ಶಕುನಿಯು ದುರ್ಯೋಧನನಿಗೆ ಪ್ರಿಯವಾದದ್ದನ್ನೇ ಹೇಳುತ್ತಿದ್ದನು; ಆದರೆ

ಸತ್ಯವನ್ನು ನುಡಿಯುತ್ತಿರಲಿಲ್ಲ. ಇದರಿಂದ ದುರ್ಯೋಧನನಿಗೆ ಎಂಥ ಅನರ್ಥವು ಬಂದೊದಗಿತೆಂಬುದು ನಮಗೆಲ್ಲರಿಗೂ ತಿಳಿದ ವಿಷಯವಾಗಿದೆ. ಮದುವೆಯ ಸಮಯದಲ್ಲಿ ಮೃತಾಶೌಚದ ಸುದ್ದಿಯನ್ನು ಹೇಳುವದು ಸತ್ಯವಚನವಾಗಿರಬಹುದಾದರೂ ಕೇಳುವವರಿಗೆ ಪ್ರಿಯವಲ್ಲ. ಇಂಥ ಸಂದರ್ಭದಲ್ಲಿ ಮೌನವೇ ಉತ್ತಮವಾದದ್ದು. ಇಂಗ್ಲಿಷಿನಲ್ಲಿ `ಮೌನವು ಚಿನ್ನದ್ದು, ಮತಾಡುವದು ಬೆಳ್ಳಿಯದು' ಎಂಬುದೊಂದು ಗಾದೆ. ಅನೇಕ ಸಂದರ್ಭಗಳಲ್ಲಿ ಮಾತನಾಡದಿರುವದೇ ಉತ್ತಮವಾಗಿರುವದೆಂಬ ಭಾವವು ಗಾದೆಯಲ್ಲಿ ಅಡಗಿರುತ್ತದೆ. ಇಲ್ಲಿ ಸತ್ಯವನ್ನೇ ಹೇಳಬೇಕು ಎಂದು ಸತ್ಯದಲ್ಲಿ ಅವಧಾರಣೆಯಿದೆಯೇ ಹೊರತು ಹೇಳಲೇಬೇಕೆಂಬ ಅವಧಾರಣೆಯಿಲ್ಲ. ನಾವು ಕಂಡಿರುವದನ್ನೆಲ್ಲ ಸತ್ಯವೆಂದು ಆಡಿದರೆ ಎಷ್ಟೋ ಅನರ್ಥಗಳು ಆಗುತ್ತವೆ. ಜ್ವರಬಂದವನಿಗೆ ಪ್ರಿಯವಾಗಿದೆ ಎಂಬ ಕಾರಣದಿಂದ ಹುಳಿಯನ್ನವನ್ನು ತಿನ್ನಬಹುದು - ಎಂಬುದು ಸತ್ಯಹೀನವಾಗಿರುವದರಿಂದ ಅಧರ್ಮವಾಗಿರುತ್ತದೆ.

ಸತ್ಯವನ್ನೇ ಆಡಬೇಕು ಎಂಬ ವಿಧಾನಕ್ಕೆ ತಾತ್ಪರ್ಯವೇನೆಂದರೆ ಸತ್ಯವನ್ನೇ ಆಡುತ್ತಿರುವವನಿಗೆ ಉತ್ತಮವಾದ ಶ್ರೇಯಸ್ಸಾಗುವದೆಂದೂ. ಸುಳ್ಳನ್ನು ಹಗುರವಾಗಿ ಹೇಳುವ ಅಭ್ಯಾಸವನ್ನು ತಪ್ಪಿಸುವದೂ ಶಾಸ್ತ್ರದ ಒಂದು ಉದ್ದೇಶವಾಗಿರುತ್ತದೆ. ಧರ್ಮರಾಯನು ಯಾವದೋ ಒಂದು ರಾಜಕೀಯದ ಬಿಕ್ಕಟ್ಟಿಗೆ ಸಿಕ್ಕಿಬಿದ್ದಿದ್ದಾಗ "ಅಶ್ವತ್ಥಾಮೋ ಹತಃ ಕುಞ್ಜರಃ" ಎಂದು ಸ್ನೇಹಿತರ ಪ್ರೇರಣೆಯಂತೆ ಗಟ್ಟಿಯಾಗಿ ಕೂಗಿ ಹೇಳಿದನು. ಆ ಹೊತ್ತಿನಲ್ಲಿ `ಕುಞ್ಜರ' ಎಂಬ ಮಾತು ಜನರ ಕಲಕಲದಿಂದ ದ್ರೋಣಾಚಾರ್ಯರಿಗೆ ಕೇಳಿಸದೆ ಅವರು ತಮ್ಮ ಪ್ರಿಯಪುತ್ರನು ಸತ್ತನೆಂಬ ಅರ್ಥವನ್ನು ವಾಕ್ಯಕ್ಕೆ ಮಾಡಿಕೊಂಡರು. ಈ ಅಭಿಪ್ರಾಯವೂ ದ್ರೋಣರಿಗೆ ಆಗಬಹುದೆಂದು ತಿಳಿದು ಆಡಿದ್ದು ಧರ್ಮರಾಯನ ತಪ್ಪಾಯಿತು. ಅದಕ್ಕಾಗಿ ಅವನಿಗೆ ನರಕದರ್ಶನವಾಯಿತು ಎಂದು ಹೇಳುತ್ತಾರೆ. ಆದರೆ ಈಗಿನವರಾದ ನಮಗೆ ಸುಳ್ಳಾಡುವದೆಂಬುದು ಎಷ್ಟು ನೀರುಕುಡಿದಂತೆ ಆಗಿಬಿಟ್ಟಿರುತ್ತದೆ! ಕೋರ್ಟಿನಲ್ಲಿ ಸುಳ್ಳಾಡುವದೆಂಬುದೊಂದು ಅನೇಕರಿಗೆ ಹವ್ಯಾಸವಾಗಿಬಿಟ್ಟಿರುತ್ತದೆ. ಒಬ್ಬ ಮಹನೀಯರು ಕೋರ್ಟಿನಲ್ಲಿ ಸಾಕ್ಷಿಹೇಳಬೇಕಾಗಿ ಬಂದದ್ದರಿಂದ ಅಷ್ಟಕ್ಕೇ ಕೊರಗಿ ಕೆಲವು ದಿನಗಳಲ್ಲಿ ಪ್ರಾಣವನ್ನೇ ಬಿಟ್ಟರೆಂದು ನನ್ನ ಸ್ನೇಹಿತರೊಬ್ಬರು ನನಗೆ ತಿಳಿಸಿದ್ದರು. ಕೋರ್ಟಿನಲ್ಲಿ `ಸತ್ಯವನ್ನು ನುಡಿಯುತ್ತೇನೆ' ಎಂದು ಪ್ರಮಾಣಮಾಡಿಸುತ್ತಾರೆ. ಅಸತ್ಯವನ್ನು ಆಡದೆ ಇರುವ ಆ ಮಹಾತ್ಮರಿಗೆ ಹೀಗೇ ಆಣೆಮಾಡಬೇಕಲ್ಲ! - ಎಂಬ ಕೊರಗು ಹತ್ತಿಕೊಂಡಿರಬೇಕು. ಹಾಗೆಯೇ ಧರ್ಮರಾಯನಿಗೂ ತಾನು ಆಡಿದ ಅರ್ಧಸತ್ಯದ ಮಾತು ದ್ರೋಣಾಚಾರ್ಯರಿಗೆ ಶಸ್ತ್ರಸಂನ್ಯಾಸವನ್ನು ಮಾಡಿಸಿತಲ್ಲ! - ಎಂಬ ಕೊರಗು ಹತ್ತಿಕೊಂಡಿತು. ಆದರೆ ಈ ಕಲಿಯುಗದಲ್ಲಿ ನೋಡಿ, ಸುಳ್ಳು ಜನರ ನಾಲಗೆಯಮೇಲೆ ನಲಿಯುತ್ತಿರುತ್ತದೆ. ಅದರಲ್ಲಿಯೂ ಈಚೀಚೆಗೆ ವಿಶ್ವಭೂಲೋಕದ ಯುದ್ಧವು ಪ್ರಾರಂಭವಾದಂದಿನಿಂದ ರೇಡಿಯೋ ಸ್ಥಾನಗಳೆಂಬ ಸುಳ್ಳನ್ನು ಹಂಚುವ ಸ್ಥಲಗಳನ್ನೇ ಏರ್ಪಡಿಸಿಕೊಂಡಿರುತ್ತಾರೆ. ಪ್ರತಿಯೊಂದು ರಾಷ್ಟ್ರದವರೂ

ಆ ರೇಡಿಯೋಗಳ ಮೂಲಕ ತಮ್ಮಲ್ಲಿಲ್ಲದ ಗುಣಗಳನ್ನು ಆರೋಪಿಸಿ ಕೊಚ್ಚಿಕೊಳ್ಳುವದು, ಮತ್ತೊಬ್ಬರಲ್ಲಿಲ್ಲದ ದೋಷಗಳನ್ನು ಆರೋಪಿಸುತ್ತಿರುವದು - ಹೀಗೆ ಅನೃತರೂಪವಾದ ವಾಗ್ಬಾಣಗಳನ್ನು ಅಭಿಮಂತ್ರಿಸಿ ಪ್ರಯೋಗಮಾಡುತ್ತಲೇ ಇರುತ್ತಾರೆ; ಸಾಮಾನ್ಯಜನರು ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಅದನ್ನು ಕೇಳುತ್ತಲೇ ಇರುತ್ತಾರೆ; ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಿರುತ್ತಾರೆ.

ಮನುಷ್ಯನು ಸತ್ಯವನ್ನೇ ಆಡುವೆನೆಂಬ ಸಂಕಲ್ಪವನ್ನು ಮಾಡಿದರೆ ಸುಳ್ಳಿಗೆ ಅವಕಾಶವಿರುವದಿಲ್ಲ. ಸತ್ಯವಚನಕ್ಕೆ ಚ್ಯುತಿ ಬರುವ ಕಾಲಗಳನ್ನು ನಾವು ನೆನಪಿನಲ್ಲಿಟ್ಟುಕೊಂಡಿದ್ದು ಆಗ್ಗೆ ಎಚ್ಚರಿಕೆಯಿಂದ ನಡೆದುಕೊಳ್ಳಬೇಕು. ನಮಗೆ ಲಾಭವಾಗುವದಕ್ಕಾಗಿ ಅಥವಾ ನಷ್ಟವು ಕಡಿಮೆಯಾಗುವದಕ್ಕಾಗಿ ಮಾತಿನಲ್ಲಿ ಸುಳ್ಳಿನ ಬೆರಕೆಯಾಗುತ್ತಿರುತ್ತದೆ. ಆತ್ಮಶ್ಲಾಘನೆಗೆ ಪ್ರಾರಂಭಿಸಿದರೆ ಸ್ವಲ್ಪ ಸುಳ್ಳನ್ನು ಬೆರೆಸುವ ಪ್ರಲೋಭನವಾಗುತ್ತದೆ. ವೃದ್ಧರೂ ಸೋಮಾರಿಗಳೂ ಮತ್ತೇನೂ ಮಾಡುವದಕ್ಕೆ ಆಗದಿರುವಾಗ ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಾರೆ; ಆಗ್ಗೆ ಅವರ ಸತ್ಯವಚನಕ್ಕೆ ಸ್ವಲ್ಪವಾದರೂ ಭಂಗವು ಬಾರದೆ ಇರುವದಿಲ್ಲ. ತಮ್ಮ ಕಷ್ಟವನ್ನು ವರ್ಣನೆಮಾಡಿ ಮತ್ತೊಬ್ಬರಿಗೆ ಮರುಕವು ಉಂಟಾಗಲೆಂದು ಮಾತಿಗೆ ಪ್ರಾರಂಭಿಸುವವರಿಗೆ ಸತ್ಯವನ್ನು ಕಾಪಾಡಿಕೊಳ್ಳುವದು ಕಷ್ಟವಾಗುತ್ತದೆ. ಇಂಥ ಸಂದರ್ಭದಲ್ಲಿ ಸುಳ್ಳುಹೇಳಿದರೇ ನಮಗೆ ಜಯವಾಗುವದೆಂದು ಜನರ ನಂಬಿಕೆಯಿರುತ್ತದೆ. ಹಿಂದಕ್ಕೆ ಒಬ್ಬರು ಒಂದು ಮುದ್ರಾಯಂತ್ರವನ್ನು ಪ್ರಾರಂಭಿಸಬೇಕೆಂದಿದ್ದರು; ಆಗ್ಗೆ ಆ ಊರಿನ ಮುದ್ರಕರು ಬಹಳ ಸುಳ್ಳು ಹೇಳುತ್ತಾರೆಂಬ ಪ್ರತೀತಿಯು ಹೆಚ್ಚಾಗಿ ಜನರಿಗೆ ಇತ್ತು. ಆದ್ದರಿಂದ ಈ ಹೊಸಬರು ಆದಷ್ಟುಮಟ್ಟಿಗೂ ಸತ್ಯವನ್ನೇ ನುಡಿಯಬೇಕೆಂದು ಸಂಕಲ್ಪಮಾಡಿಕೊಂಡು ಅವರಿವರ ಸಲಹೆ ಕೇಳುವದಕ್ಕೆ ಮೊದಲು ಮಾಡಿದರು. ಆಗ ಒಬ್ಬ ಹಳೆಯ ಮುದ್ರಣಾಲಯದ ಮಾಲೀಕನು "ಸುಳ್ಳು ಹೇಳದೆ ಅಚ್ಚಿನ ಕೆಲಸಮಾಡುವದು ಆದೀತೆ? ಯಾರು ಇದ್ದಾರೆ, ಹಾಗೆ ಮಾಡುವವರು?" ಎಂದನಂತೆ ! ಸತ್ಯವು ಈಗ ಚಲಾವಣೆಯ ನಾಣ್ಯವಲ್ಲ, ಅಸತ್ಯವೇ ನಡೆಯತಕ್ಕದ್ದು - ಎಂದು ಜನರು ನೆರೆನಂಬಿರುವದರಿಂದ ಹಾಗೆ ಮಾಡುತ್ತಾರೆ. ಎಷ್ಟೋ ಸಲ ನಾವು ಮಾತನಾಡುವಾಗ ಸತ್ಯವೆಂದೇ ಭಾವಿಸಿ ಮನಸ್ಸಿಗೆ ತೋಚಿದ್ದನ್ನು ಮಾತನಾಡಿಬಿಡುತ್ತೇವೆ; ಆ ಮೇಲೆ ಓಹೋ ! ಸುಳ್ಳಾಡಿದಂತಾಯಿತು - ಎಂದು ಗೊತ್ತಾಗುತ್ತದೆ. ಹೀಗಿದೆ, ಸುಳ್ಳಿನ ವೇಗ !

ಸುಳ್ಳಿನಿಂದ ಸದ್ಯಕ್ಕೆ ಲಾಭವಿರುವಂತೆ ತೋರಿದರೂ ಕೊನೆಕೊನೆಗೆ ಅದರಿಂದ ಅನರ್ಥವೇ ಆಗಿಬಿಡುತ್ತದೆ. ಒಬ್ಬ ಮನುಷ್ಯನು ತಾನೊಬ್ಬ ಯೋಗಿ ಎಂದು ಸುಳ್ಳುಹೇಳಿಕೊಂಡು ಒಮ್ಮೆ ಮೈಸೂರಿಗೆ ಬಂದನು. ಅವನು ತಾನು ಜರ್ಮನಿಗೆ ಹೋಗಿ ಯೋಗಾಭ್ಯಾಸವನ್ನು ಮಾಡಿಕೊಂಡು ಬಂದಿರುವದಾಗಿಯೂ ವಶೀಕರಣವಿದ್ಯೆಯೇ

ಮುಂತಾದವುಗಳನ್ನು ತಿಳಿದುಕೊಂಡಿರುವದಾಗಿಯೂ ಹೇಳಿಕೊಳ್ಳುತ್ತಿದ್ದನು. `ಜರ್ಮನಿಯಲ್ಲಿ ಆಹಾರವೇನು ತೆಗೆದುಕೊಳ್ಳುತ್ತಿದ್ದಿರಿ?" ಎಂದದ್ದಕ್ಕೆ "ಹಾಲು, ಹಣ್ಣು - ಇಷ್ಟೇ ಆಹಾರ ! ಅಲ್ಲಿ ಒಂದು ವಿಸ್ತಾರವಾದ ಹಣ್ಣಿನ ತೋಟವನ್ನು ಏರ್ಪಡಿಸಿದ್ದರು, ಒಂದು ಗೋಶಾಲೆಯನ್ನೂ ಇಟ್ಟಿದ್ದರು" ಎಂದನು. ಆ ಗೋಶಾಲೆಯ ಸ್ಥಳನಿರ್ದೇಶಕ್ಕಾಗಿ ಕೆಲವು ಪ್ರಶ್ನೆಗಳನ್ನು ಮಾಡಲಾಗಿ ಅವನಿಗೆ ಸರಿಯಾಗಿ ಇಂಗ್ಲೀಷಾಗಲಿ ಜರ್ಮನ್ ಭಾಷೆಯಾಗಲಿ ಬಾರದೆಂದೂ ಜರ್ಮನಿಯಲ್ಲಿ ಪ್ರಸಿದ್ಧವಾದ ನಗರಗಳು ಕೂಡ ತಿಳಿಯವೆಂದೂ ಗೊತ್ತಾಯಿತು. ಆತನು ವಿದೇಶಕ್ಕೆ ಹೋಗಿ ಬಂದವನೆಂದು ತಿಳಿದುಬಂದದ್ದರಿಂದ, ಆಸ್ತಿಕವೈದಿಕರಾದ ಮನೆಯ ಯಜಮಾನರು ಅವನನ್ನು ಅಷ್ಟಾಗಿ ಒಳಕ್ಕೆ ಸೇರಿಸಿಕೊಳ್ಳಲು ಇಷ್ಟಪಡಲಿಲ್ಲ. ಸಾಯಂಕಾಲ ಅವನನ್ನು ಮೆಲ್ಲಗೆ ಮನೆಯಿಂದ ಹೊರಕ್ಕೆ ಸಾಗಿಸಿದರು. ಅವನು ತನ್ನ ಗಂಟನ್ನು ರೈಲುಸ್ಟೇಷನ್ನಿನಲ್ಲಿಯೇ ಬಿಟ್ಟುಬಂದಿದ್ದೇನೆಂದು ಹೇಳಿದ್ದರಿಂದ ಲಗ್ಗೇಜು ರೂಮಿನ ಟಿಕೆಟು ಇಲ್ಲದಿದ್ದರೆ ಅದು ಅಪಹಾರವಾಗುವ ಸಂಭವವಿದೆ ಎಂಬ ಹುಸಿಯಂಜಿಕೆಯನ್ನು ಎಬ್ಬಿಸಿದರು. ಅವನು ತಾನು ಹೇಳಿದ್ದ ಸುಳ್ಳಿಗೆ ತಾನೇ ಕಟ್ಟುಬಿದ್ದು ಹೇಗೋ ರೈಲಿಗೆ ಹೋಗುವದಾಗಿ ಹೇಳಿ ಹೊರಟುಹೋಗಿಬಿಟ್ಟನು. ಈಚೆಗೆ ಅವನು ಹೀಗೆಯೇ ಸುಳ್ಳುಹೇಳಿ ಒಬ್ಬಿಬ್ಬರಲ್ಲಿ ಒಂದೆರಡು ರೂಪಾಯಿಗಳನ್ನು ತೆಗೆದುಕೊಂಡನೆಂಬುದು ಗೊತ್ತಾಗಿ ಜನರು ಅವನನ್ನು ಪತ್ತೆಮಾಡುವದಕ್ಕೆ ಉದ್ಯುಕ್ತರಾದರು. ಅವನಿಗೆ ಇದು ತಿಳಿಯಿತೊ ಏನೊ, ಅಂದಿನಿಂದ ಇಂದಿನವರೆಗೂ ಆತನು ಮತ್ತೆ ಮುಖವನ್ನು ತೋರಿಸಿರುವದಿಲ್ಲ! ಸುಳ್ಳು ಎಂದಿಗಾದರೂ ಸುಳ್ಳೇ; ನಿಜವು ಎಂದಿಗೂ ನಿಜವೇ. ಸತ್ಯವನ್ನೇ ಆಡುವದು ಕಷ್ಟವಾಗಿ ಕಾಣಬಹುದು; ಆದರೆ ಸತ್ಯವನ್ನೇ ಆಡುವ ಅಭ್ಯಾಸವನ್ನು ಮಾಡುವದಕ್ಕೆ ಪ್ರಾರಂಭಿಸಿದರೆ ಸಾಕು, ಎಂದೆಂದಿಗೂ ಅದು ನಮ್ಮನ್ನು ಕೈಬಿಡುವದಿಲ್ಲ. ಸುಳ್ಳೊ, ಎಂದರೆ ಒಂದು ಸಲ ಅದು ಹೊರಬಿದ್ದರೆ ನಮ್ಮನ್ನು ತೀರ ಗುಂಡಿಗೆ ಕೆಡವಿಬಿಡುತ್ತದೆ.

ಪರಮಾತ್ಮನು ಸತ್ಯಪ್ರಿಯನು. ಅದರಲ್ಲಿಯೂ ಕಲಿಯುಗದಲ್ಲಿ ಸತ್ಯವನ್ನು ಹಿಡಿದವನಿಗೆ ಎಲ್ಲಿಯೂ ಭಯವಿರುವದಿಲ್ಲ; ಪರಮಾತ್ಮನು ಅವನನ್ನು ಎಲ್ಲಾ ಕಷ್ಟಗಳಿಂದಲೂ ಹೇಗೋ ಪಾರುಮಾಡಿಬಿಡುತ್ತಾನೆ. ಈಚೆಗೆ ನಮ್ಮ ದೇಶದಲ್ಲಿ ಬಹಳವಾಗಿ ಹರಡಿಕೊಂಡಿರುವ ಸತ್ಯನಾರಾಯಣವ್ರತದ ಕಥೆಯನ್ನು ನೀವು ಕೇಳಿರುತ್ತೀರಿ. ಪರಮಾತ್ಮನಿಗೆ ಸತ್ಯನು, ಸತ್ಯನಾರಾಯಣನು - ಎಂದೇ ಹೆಸರು ; ಕಲಿಯುಗದಲ್ಲಿ ಸತ್ಯನಾರಾಯಣವ್ರತಕ್ಕೆ ಬಹಳ ಬೆಲೆ ಎಂದು ಅಲ್ಲಿ ಹೇಳಿರುವದನ್ನು, ಲಕ್ಷಿಸಬೇಕು. ಒಬ್ಬ ವೈಶ್ಯನು ಸತ್ಯನಾರಾಯಣವ್ರತವನ್ನು ಮಾಡುವೆನೆಂದು ಪ್ರತಿಜ್ಞೆಮಾಡಿ, "ಹಾಗಲ್ಲ, ನನ್ನ ಅಭಿಪ್ರಾಯ; ಆಗ ಮಾಡುವೆನು, ಈಗ ಮಾಡುವೆನು" ಎಂದು ತಪ್ಪಿಸಿಕೊಳ್ಳುವದಕ್ಕೆ ಹೋದದ್ದು; ತಾನು ಬಹಳವಾಗಿ ಸಂಪಾದಿಸಿದ್ದ ಹಣವನ್ನು ತುಂಬಿದ ಹಡಗಿನಲ್ಲಿ `ಬರಿಯ ಎಲೆಯಿದೆ' ಎಂದು ಸುಳ್ಳು ಹೇಳಿದ್ದು - ಅದರಿಂದ ಬಗೆಬಗೆಯ ಕಷ್ಟಗಳನ್ನು ಅನುಭವಿಸಿದ್ದು - ಇವುಗಳನ್ನೆಲ್ಲ

ವರ್ಣಿಸಿದೆ. ಸತ್ಯವನ್ನೇ ಪೂಜ್ಯಧ್ಯೇಯವಾಗಿ ಇಟ್ಟುಕೊಂಡವರಿಗೆ ಆಗುವ ಸದ್ಗತಿಯನ್ನೂ ಆ ಕಥೆಯಲ್ಲಿ ವರ್ಣಿಸಿದೆ. ಅದನ್ನು ನಾವು ಮನಸ್ಸಿಗೆ ಹತ್ತಿಸಿಕೊಳ್ಳಬೇಕು.

"ಸತ್ಯದಿಂದ ಗಾಳಿಯು ಒಂದೇ ಸಮನೆ ಬೀಸುತ್ತಿದೆ; ಸತ್ಯದಿಂದಲೇ ಆದಿತ್ಯನು ಅಂತರಿಕ್ಷದಲ್ಲಿ ಹೊಳೆಯುತ್ತಿರುತ್ತಾನೆ; ಸತ್ಯದಲ್ಲಿಯೇ ವಾಕ್ಕು ಪ್ರತಿಷ್ಠಿತವಾಗಿರುತ್ತದೆ; ಸತ್ಯದಲ್ಲಿ ಎಲ್ಲವೂ ನಿಲುಗಡೆಯನ್ನು ಹೊಂದುತ್ತದೆ; ಆದ್ದರಿಂದ ಸತ್ಯವೇ ಹೆಚ್ಚಿನದೆಂದು ಬಲ್ಲವರು ಹೇಳುತ್ತಾರೆ" ಎಂದು ಉಪನಿಷತ್ತು ಸತ್ಯವನ್ನು ಕೊಂಡಾಡುತ್ತದೆ. ನಮ್ಮ ದೇಶವು ಸತ್ಯದಲ್ಲಿ ಬಹಳ ಪ್ರಸಿದ್ಧವಾದದ್ದು. ಪರದೇಶದವರು ಸತ್ಯಪ್ರಿಯರಾದ ಗಾಂಧಿಯವರನ್ನು ವಿಶ್ವಶಾಂತಿಗೆ ಒಬ್ಬ ಸಾಧಕರೆಂದು ಭಾವಿಸಿದ್ದರು. ಆದರೂ ನಮ್ಮ ದೌರ್ಭಾಗ್ಯದಿಂದ ಗಾಂಧಿಯವರ ಅನುಯಾಯಿಗಳೆಂಬವರಿಗೆ ಕೂಡ ಪೂರ್ಣವಾಗಿ ಸತ್ಯದಲ್ಲಿ ವಿಶ್ವಾಸವಿಲ್ಲವೆಂಬಂತೆ ತೋರಹತ್ತಿದೆ? ಸತ್ಯವೆಂಬುದೊಂದು ದೈವಸಂಪತ್ತಿನ ಹೆಗ್ಗುರುತು. ಶ್ರದ್ಧೆಯಿಂದ ಅದನ್ನು ಅನುಸರಿಸುವದಕ್ಕೆ ಸ್ವಲ್ಪಮಟ್ಟಿಗೆ ಪ್ರಯತ್ನಮಾಡಿದರೂ ಮಹಾಫಲವುಂಟು.

## ೧೪೯. ದೈವಸಂಪತ್ತು 16- (2)

**(6-11-49)**

ಈ ದಿನ ಅಕ್ರೋಧವೆಂಬ ದೈವಸಂಪತ್ತಿನ ಗುಣದ ವಿಷಯವಾಗಿ ಮಾತನಾಡಬೇಕಾಗಿದೆ. ಅಕ್ರೋಧವೆಂಬ ಶಬ್ದಕ್ಕೆ ಸಿಟ್ಟಿಲ್ಲದಿರುವಿಕೆ, ಸಿಟ್ಟುಬಾರದಂತೆ ಪ್ರಯತ್ನಮಾಡುವಿಕೆ - ಎಂಬವರೆಗೂ ಅರ್ಥವಿದೆ. ಕ್ರೋಧಕ್ಕೆ ವಿರುದ್ಧವಾದ ಪ್ರಯತ್ನವನ್ನು ಕೈಗೊಳ್ಳುವದೇ ಅಕ್ರೋಧವು. ಮನುಷ್ಯನಿಗೆ ಶಾಂತಿ, ಭಯ, ಕ್ರೋಧ - ಇವುಗಳೆಲ್ಲವೂ ಸಹಜವಾಗಿ ಉಂಟಾಗುತ್ತಿರುತ್ತವೆ. ಆದ್ದರಿಂದ ತಕ್ಕ ಸಮಯದಲ್ಲಿ ಈ ಭಾವನೆಗಳು ಬರುವದು ಯುಕ್ತವೇ ಆಗಿರುತ್ತದೆ. ಆದ್ದರಿಂದ ಅಕ್ರೋಧ ಎಂದರೆ ಎಂಧಿಗೂ ಕ್ರೋಧವನ್ನು ಮಾಡದಿರುವದು ಎಂಬರ್ಥಕ್ಕಿಂತ ಎಂದಿಗೂ ಕ್ರೋಧಕ್ಕೆ ವಶರಾಗದಿರುವದು ಎಂಬ ಅರ್ಥವನ್ನು ಸ್ವೀಕರಿಸುವದೇ ಸರಿಯಾಗಿರುತ್ತದೆ.

ಸಾಮಾನ್ಯಜನರಿಗೆ ಕ್ರೋಧವು ಯಾವಾಗ ಬರುತ್ತದೆ? ಕಾಮಕ್ಕೆ ಅಡ್ಡಿಯಾದಾಗ ಕ್ರೋಧವು ಬರುತ್ತದೆ - ಎಂದು ಶ್ರೀ ಶಂಕರಾಚಾರ್ಯರವರು ತಮ್ಮ ಗೀತಾಭಾಷ್ಯದಲ್ಲಿ ಬರೆದಿರುತ್ತಾರೆ. ಕ್ರೋಧವು ಬಂದದ್ದು ಸ್ವಲ್ಪಕಾಲದ ಮೇಲೆ ತಾನಾಗಿಯೇ ಶಾಂತವಾಗುತ್ತದೆ; ಆದ್ದರಿಂದ ಕ್ರೋಧವು ಬಂದದ್ದು ಹೋಯಿತು ಎಂಬುದರಲ್ಲಿ ನಮ್ಮದೇನೂ ಹೆಚ್ಚುಗಾರಿಕೆಯಿಲ್ಲ. ಅದು ಬಂದಾಗ ಅದಕ್ಕೆ ವಶರಾಗದಿರುವದೇ ನಿಜವಾದ ಅಕ್ರೋಧವು.

ಕ್ರೋಧವು ನಮ್ಮನ್ನು ಹೇಗೆ ವಶಕ್ಕೆ ತೆಗೆದುಕೊಳ್ಳುತ್ತದೆ ಎಂಬುದಕ್ಕೆ ಒಂದು ದೃಷ್ಟಾಂತವನ್ನು ಕೊಡಬಹುದು. ಒಮ್ಮೆ ಬೆಂಗಳೂರಿನಲ್ಲಿ ಒಬ್ಬ ದೊಡ್ಡ ಮನುಷ್ಯರ ಮನೆಯಲ್ಲಿ ಒಂದು ಸಂತರ್ಪಣೆಯು ನಡೆಯುತ್ತಿತ್ತು. ಆ ಕಾಲಕ್ಕೆ ಹೆಚ್ಚಿನ ಹುದ್ದೆಯ ಮತ್ತು ಗೌರವಯುತರಾದ ಮಹಾಶಯರನ್ನು ಅನೇಕರನ್ನು ಭೋಜನಕ್ಕೆ ಆಮಂತ್ರಿಸಲಾಗಿತ್ತು. ಆ ನಗರಿಯಲ್ಲಿ ಕೆಲವರು ಔತಣವನ್ನು ಹೇಳಿಸಿಕೊಳ್ಳದೆ ತಾವೇ ಊಟಕ್ಕೆ ನುಗ್ಗುವ ಜನರೂ ಇರುತ್ತಾರಷ್ಟೆ; ಈ ಸಂದರ್ಭದಲ್ಲಿ ಅಂಥ ಅನಿರೀಕ್ಷಿತಜನರು ಯಾರೂ ಒಳಕ್ಕೆ ಬಾರದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳಲಾಗಿತ್ತು. ಕಾಂಪೌಂಡು ಗೋಡೆಯ ಸುತ್ತಲೂ ಅಲ್ಲಲ್ಲಿಗೆ ಒಬ್ಬೊಬ್ಬ ಜವಾನನನ್ನೇ ಕಾವಲು ಇರಿಸಲಾಗಿತ್ತಂತೆ. ಆದರೆ ಇಷ್ಟರಲ್ಲಿ ಒಂದು ಚಮತ್ಕಾರವಾಯಿತು. ಆ ದಿನ ಊಟಕ್ಕೆ ಬಂದಿದ್ದ ಜನರು ವಿನೋದವಾಗಿ ಮಾತನಾಡುತ್ತಾ ಕುಳಿತಿರುವಾಗ ಪರಿಚಾರಕನು ತಯಾರಿಸಿದ್ದ ಜಹಾಂಘಿರ್ ಎಂಬ ಭಕ್ಷ್ಯವು ಸ್ವಲ್ಪ ಅತಿಪಕ್ವವಾಗಿ ಕಗ್ಗಾಗಿತ್ತು; ಯಜಮಾನರಿಗೆ ಇಂಥ ಮಹಾಸಂಭ್ರಮಕಾಲದಲ್ಲಿ ಇವನು ಹೀಗೆ ತಮಗೆ ಅಪಮಾನವಾಗುವಂತೆ ಅಡಿಗೆ ಕೆಡಿಸಿಬಿಟ್ಟನಲ್ಲ! - ಎಂಬ ಕಾರಣದಿಂದ ತಡೆಯಲಾರದ ಕೋಪವು ಕಾಣಿಸಿಕೊಂಡಿತು. ಅವರು ರೌದ್ರಾವತಾರವನ್ನು ತಾಳಿ ಬಡಿಸುವವನನ್ನು ಹೊಡೆಯುವದಕ್ಕೇ ಹೊರಟುಬಿಟ್ಟರು! ಇದೇ ಸಮಯಕ್ಕೆ ಅನಾಮಂತ್ರಿತ ಬ್ರಾಹ್ಮಣನೊಬ್ಬನು ಕಾವಲುಗಾರನ ಕಣ್ಣಿಗೆ ಮಣ್ಣೆರಚಿ ಪೌಳಿಯ ಗೋಡೆ" ಯನ್ನು ಹಾರಿಬಂದು ರಾಯರ ಎಲೆಗೆ ಪರಿಷೇಚನೆಯನ್ನು ಮಾಡಿಬಿಟ್ಟನು! ಇದನ್ನು ಕಂಡು ಯಜಮಾನರಿಗೆ ಮತ್ತಷ್ಟು ಕೋಪವು ಉಕ್ಕಿಬಂತು. ಆದರೆ ಸುತ್ತಲೂ ಇದ್ದ ಮಹಾಶಯರುಗಳು `ಈಗ ಕೋಪಕ್ಕೆ ಸಮಯವಲ್ಲ, ಬ್ರಾಹ್ಮಣ ಶಾಂತನಾಗಿ ಊಟಮಾಡಲಿ!' ಎಂದು ನಗುತ್ತಾ ಹೇಳಿದ್ದರಿಂದ ಅವರು ನಾಚಿಕೆಯಿಂದ ತಲೆತಗ್ಗಿಸಬೇಕಾಗಿ ಬಂದಿತಂತೆ! ಅನಿರೀಕ್ಷಿತವಾಗಿ ಬಂದೊದಗಿದ ಇಂಥದ್ದೇ ಒಂದು ಸಮಾರಂಭದಲ್ಲಿ ಸಿಟ್ಟಿಗೆ ಒಂದಿಷ್ಟೂ ಎಡೆಯನ್ನು ಕೊಡದೆ ಅದರ ವಿರುದ್ಧಗುಣವನ್ನೇ ಹೊರಪಡಿಸಿಕೊಂಡ ಮತ್ತೊಂದು ಘಟನೆಯನ್ನೂ ಇಲ್ಲಿ ಉದಾಹರಿಸುವದು ಉಚಿತ. ಅದೇ ಬೆಂಗಳೂರುನಗರಿಯಲ್ಲಿ ಮತ್ತೊಬ್ಬ ದೊಡ್ಡ ಮನುಷ್ಯರು ದಿವಂಗತರಾಗಿ ಅವರ ವೈಕುಂಠಸಮಾರಾಧನೆಯು ನಡೆದಿತ್ತು. ದೇಹವನಿಟ್ಟು ಪರಲೋಕಕ್ಕೆ ತೆರಳಿದ್ದವರಿಗೆ ಬೇಕಾಗಿದ್ದ ಅನೇಕ ದೊಡ್ಡ ಮನುಷ್ಯರುಗಳಿಗೆ ಕಾಲಕ್ಲಿಪ್ತಿಯಿಂದ ಔತಣಕ್ಕೆ ಆಮಂತ್ರಣವನ್ನು ಕೊಡಲಾಗಿತ್ತು. ಆದರೆ ಅವರೆಲ್ಲರೂ ಬರುವ ಸಮಯಕ್ಕೆ ಹತ್ತು ಹದಿನೈದು ನಿಮಿಷಗಳು ಮುಂಚೆ ಒಂದು ಅನಾಮಂತ್ರಿತ ಬ್ರಾಹ್ಮಣರ ಗುಂಪು, ಸುಮಾರು ಐವತ್ತು ಅರವತ್ತು ಜನ, ಊಟದ ಮನೆಯೊಳಕ್ಕೆ ಬಂದು ಹಾಕಿದ್ದ ಎಲೆಯ ಮುಂದೆ ಕುಳಿತುಕೊಂಡುಬಿಟ್ಟರು! ದಿವಂಗತರ ಭಾವಮೈದುನರು ಸಂತರ್ಪಣೆಯ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ಅವರು ಒಂದಿಷ್ಟೂ ಮನಸ್ಸಿನಲ್ಲಿ ವಿಕಾರವನ್ನು ಪಡೆದುಕೊಳ್ಳದೆ, ಹೊರಗೂ ಶಾಂತಮುಖಮುದ್ರೆಯಿಂದ ಎಲ್ಲರನ್ನೂ ಬರಮಾಡಿಕೊಂಡು ಮಾಡಿದ್ದ ಭಕ್ಷ್ಯಭೋಜ್ಯಾದಿಗಳನ್ನು ಅವರಿಗೆ

ಉಣಬಡಿಸಿದರು. ಇಷ್ಟರಲ್ಲಿಯೇ ಬಂದ ಆಹೂತರಾಗಿದ್ದ ಅತಿಥಿಗಳನ್ನು ಒಂದು ಕಡೆಯಲ್ಲಿ ಆದರದಿಂದ ಕುಳ್ಳಿರಿಸಿ ನಡೆದ ಸಂದರ್ಭವನ್ನು ಸ್ವಲ್ಪ ಮಾತುಗಳಿಂದಲೇ ತಿಳಿಸಿ, ಊಟಮಾಡಿದ ಬ್ರಾಹ್ಮಣರುಗಳಿಗೆಲ್ಲ ಸಂತೃಪ್ತಿಯನ್ನು ಪಡಿಸಿದ ಬಳಿಕ, ಕ್ರಮಾತಿಥಿಗಳ ಭೋಜನಕ್ಕೆ ಏರ್ಪಾಡುಮಾಡಿಸಿದರು. ಅನಾಹೂತರಾಗಿ ಬಂದಿದ್ದ ಬ್ರಾಹ್ಮಣರಿಗೆ ತಾಂಬೂಲದಕ್ಷಿಣಾದಿಗಳನ್ನು ಕೊಟ್ಟು ಕಳುಹಿಸಿಕೊಟ್ಟಾಗ ಅವರು ಸಂತೋಷದಿಂದ ಇವರನ್ನು ಹರಸಿದ ಕ್ರಮವನ್ನು ಈಗ ನಾನು ಮಾತುಗಳಿಂದ ಬಣ್ಣಿಸಲಾರೆ. ಇವರು ಸ್ವಲ್ಪ ಹೊತ್ತಿನೊಳಗಾಗಿಯೇ ಮಿಕ್ಕವರಿಗೂ ಅಸಂತೋಷಕ್ಕೆ ಕಾರಣವೇ ಇಲ್ಲದಂತೆ ಭೋಜನದ ಏರ್ಪಾಡನ್ನು ಮಾಡಿದ ಬುದ್ಧಿ ಚಮತ್ಕಾರಕ್ಕೂ ಇವರ ಶಾಂತಿಮಯವಾದ ನಡೆತೆಯ ಮಟ್ಟಕ್ಕೂ ಎಲ್ಲರ ಮನ್ನಣೆಯೂ ದೊರೆಯಿತು. ಆ ದಿನ ನಡೆದದ್ದು ಅನ್ವರ್ಥವಾಗಿಯೂ ವೈಕುಂಠಸಮಾರಾಧನೆಯೇ ಆಯಿತು!

ಮೇಲಿನ ಉದಾಹರಣೆಗಳಲ್ಲಿ ಅವಿವೇಕದಿಂದ ಕೋಪಕ್ಕೆ ವಶವಾಗುವಿಕೆ, ವಿವೇಕದಿಂದ ಕೋಪವನ್ನು ತಡೆಗಟ್ಟಿ ಸಮಾಧಾನವನ್ನು ಕಾಪಾಡಿಕೊಳ್ಳುವಿಕೆ - ಇವುಗಳು ಎದ್ದು ಕಾಣುತ್ತವೆ. ನಾವು ವಿವೇಚನೆಮಾಡುವದಕ್ಕೆ ಮೊದಲೇ ಕೋಪವು ಬಂದರೂ ಆಮೇಲಾದರೂ ವಿವೇಕದಿಂದ ಅದನ್ನು ತಪ್ಪಿಸಿಕೊಳ್ಳುವದೂ ಒಂದು ಸದ್ಗುಣವೇ ಸರಿ ಎಂಬುದನ್ನು ಇಲ್ಲಿ ಲಕ್ಷಿಸಬೇಕು. ಕ್ರೋಧವು ಉಂಟಾದ ಮೇಲೆ ವಿವೇಕದಿಂದ ವಿಮರ್ಶಿಸುವದರಿಂದ ತಾನೆ ಏನು ಪ್ರಯೋಜನ? ಎಂದು ಕೆಲವರು ಶಂಕಿಸಬಹುದು. ಆದಕ್ಕೆ ಉತ್ತರವೇನೆಂದರೆ ಒಂದು ಸಲ ಕೋಪಕ್ಕೆ ಪಶ್ಚಾತ್ತಾಪವುಂಟಾದರೆ ಎರಡನೆಯ ಸಲ ಬರುವ ಕೋಪವು ನಾಚಿಕೆಯಿಂದ ಬರುತ್ತದೆ. ಮೊದಲನೆಯ ಸಲ ಇದ್ದ ಅದರ ವೇಗವು ಈಗ ಮಟ್ಟಾಗಿರುತ್ತದೆ. ಒಮ್ಮೆ ಒಬ್ಬ ದೊಡ್ಡ ಮನುಷ್ಯರು ಇಂಗ್ಲಿಷಿನಲ್ಲಿ ಮಾಡಿದ್ದ ಉಪನ್ಯಾಸವನ್ನು ಕನ್ನಡಿಸಿ ಪತ್ರಿಕೆಯ ಸಂಪಾದಕರೊಬ್ಬರು ಪ್ರಕಟಿಸಿದರು. ಆ ಅನುವಾದವನ್ನು ಓದಿಸಿ ಕೇಳಿದಾಗ ಅದು ಮೂಲದ ಅಭಿಪ್ರಾಯವನ್ನು ಸರಿಯಾಗಿ ತಿಳಿಸಿಲ್ಲವೆಂದು ತೋಚಿ ಆ ದೊಡ್ಡಮನುಷ್ಯರಿಗೆ ಅಸಮಾಧಾನವಾಯಿತು. `ಇದೆಂಥ ಅನುವಾದ? ಹೀಗೇಕೆ ಮಾಡಿಸಿದಿರಿ?' ಎಂದು ಸಂಪಾದಕರನ್ನು ಕೋಪದಿಂದ ಆಕ್ಷೇಪಿಸಿದರು. ಆದರೆ ಮತ್ತೆ ಅದನ್ನು ತಾವೇ ಓದಿದ ಬಳಿಕ ಮಾರನೆಯ ದಿನ ಅವರನ್ನು ಕಂಡಾಗ ``ನಿನ್ನೆ ನಾವ ಮಾಡಿದ ಆಕ್ಷೇಪಣೆ ಸರಿಯಲ್ಲ; ಓದುವವರು ಸರಿಯಾಗಿ ಓದದೆ ಇದ್ದದ್ದರಿಂದ ನನಗೆ ಹಾಗೆ ತೋಚಿತು. ಅದನ್ನು ಚೆನ್ನಾಗಿಯೇ ಕನ್ನಡಿಸಿದ್ದೀರಿ. ಹೀಗಿದ್ದರೂ ನಿಮ್ಮ ಮೇಲೆ ಕೋಪವನ್ನು ತೋರಿಸಿದ್ದು ನನ್ನದೇ ತಪ್ಪು'' ಎಂದರು! ಕೋಪವನ್ನು ಶಾಂತಗೊಳಿಸುವ ಇಚ್ಛೆಯಿಲ್ಲದ ದೊಡ್ಡಮನುಷ್ಯರ ನಡತೆ ಹೀಗಿರುತ್ತದೆ. ಕ್ರೋಧವು ಬಾರದಂತೆ ಮೊದಲೇ ವಿವೇಕವಿರಬೇಕು; ಬಂದಾಗ ತಡೆದುಕೊಳ್ಳುವ ಪ್ರಯತ್ನವನ್ನು ಮಾಡಬೇಕು; ಹೋದಮೇಲೆ ನನಗೆ ಕೋಪ ಬಂದದ್ದು ಸರಿಯೆ? - ಎಂದು ಯೋಚಿಸಿ ನೋಡಬೇಕು. ಈ ಮೂರು ಬಗೆಯ ವಿವೇಕವನ್ನು ಅಭ್ಯಾಸಮಾಡುವದರಿಂದ

ಅಕ್ರೋಧವು ರೂಢಮೂಲವಾಗುತ್ತಾ ಬರುತ್ತದೆ. ಕ್ರೋಧಕ್ಕೆ ವಶರಾಗುವದು ಹೇಗೂ ತಪ್ಪೇ. ಕೋಪವು ಅಂತಃಕರಣದ ಧರ್ಮವಷ್ಟೆ. ಆದರೆ ಅದನ್ನು ಬಿಡಿಸಿಕೊಂಡು ನಮ್ಮೆದುರಿಗೆ ಇಟ್ಟು ಅದರ ವಿಮರ್ಶೆಯನ್ನು ಮಾಡುವ ಅಭ್ಯಾಸವನ್ನು ಮಾಡಿದರೆ ಅದು ಬೇಗ ಆರಿಹೋಗುತ್ತದೆ. ಕಣ್ಣಿನ ದೋಷವಿರುವ ಜನರು ಕನ್ನಡಕದ ಮೂಲಕವೇ ಹೊರಗೆ ನೋಡುವಂತೆ ನಾವು ಹೊರಗಿನ ವಿಷಯಗಳನ್ನೆಲ್ಲ ಅಂತಃಕರಣದ ಮೂಲಕವೇ ನೋಡಬೇಕಾಗಿರುತ್ತದೆ. ಕನ್ನಡಕವನ್ನುಕೂಡ ಆಗಾಗ್ಗೆ ನೋಡಿ ಶುದ್ಧಿಮಾಡಿಕೊಳ್ಳುವದೂ ಬದಲಾಯಿಸುವದೂ ಅವಶ್ಯವಾಗಿರುವಂತೆ ಅಂತಃಕರಣವನ್ನೂ ಆಗಾಗ್ಗೆ ಪರೀಕ್ಷಿಸುವ ಪದ್ಧತಿಯನ್ನೇಕೆ ಇಟ್ಟು ಕೊಳ್ಳಬಾರದು? ಹರಿದಾಸರುಗಳು ಮನಸ್ಸನ್ನೇ ಉದ್ದೇಶಿಸಿ ಕೆಲವು ಪದಗಳನ್ನು ಹಾಡಿರುತ್ತಾರೆ; ಹಾಗೆಯೇ ನಾವೂ ನಮ್ಮ ಮನಸ್ಸನ್ನು ಸಂಬೋಧಿಸಿ ಅದರ ಗುಣದೋಷಗಳನ್ನು ವಿಮರ್ಶಿಸುವ ನಿಯಮವನ್ನು ಇಟ್ಟುಕೊಳ್ಳಬೇಕು. ಅಂತಃಕರಣದ ಬಾಗಿಲಿನಿಂದ ಒಳಕ್ಕೆ ಬರುವವರನ್ನು ನೋಡಿನೋಡಿ ಒಳಕ್ಕೆ ಬಿಡಬೇಕು. ಹಾಗಾದರೆ ಒಳಕ್ಕೆ ಬರುವ ಕ್ರೋಧಾದಿಗಳಿಗೆ ಸ್ವಲ್ಪ ನಾಚಿಕೆ ಬರುತ್ತದೆ. ಇದು ಒಂದು ದೊಡ್ಡ ಸಾಧನವಾಗಿ ಪರಿಣಮಿಸುತ್ತದೆ. ಮನಸ್ಸನ್ನು ಯಾರು ವಿಷಯಮಾಡಿಕೊಳ್ಳುವರೋ ಅವರ ವಿಷಯದಲ್ಲಿ ಮನಸ್ಸಿನ ಕಾಮಕ್ರೋಧಗಳು ದುರ್ಬಲವಾಗುತ್ತವೆ.

ಇದುವರೆಗೆ ನಾವು ಮಾತನಾಡಿರುವದು ವ್ಯಕ್ತವಾದ ಸಿಟ್ಟಿನ ವಿಚಾರ. ಆದರೆ ಕ್ರೋಧವು ನಮಗೆ ಗೊತ್ತೇ ಇಲ್ಲದಂತೆ ಅವ್ಯಕ್ತವಾಗಿಯೂ ನಮ್ಮ ಅಂತಃಕರಣದ ಒಳಗೆ ಅಡಗಿಕೊಂಡಿರಬಹುದು. ಪಾಶ್ಚಾತ್ತ್ಯದೇಶದ ಮನಃಶಾಸ್ತ್ರಜ್ಞರು ಹೀಗೆ ಅವ್ಯಕ್ತವಾಗಿರುವ ವಾಸನೆಗಳ ಭಾಗವನ್ನು ಅಧೋವಿಜ್ಞಾನ (Subconsciousness) ಎನ್ನುವರು. ಇಂಥ ಕೋಪಕ್ಕೆ ಏನು ಮಾಡಬೇಕು? ಅದು ಯಾವಾಗಲೋ ನಮಗೆ ತಿಳಿಯದಂತೆ ಎದ್ದುಕೊಂಡು ತನ್ನ ಕೆಲಸವನ್ನು ಮಾಡಿಬಿಡುತ್ತದೆ. ಸಮುದ್ರವನ್ನು ಯಾವದಾದರೊಂದು ದೊಡ್ಡ ಯಂತ್ರದಿಂದ ಗರಬಾಡಿದರೆಮಾತ್ರ ತೀರ ಆಳದಲ್ಲಿದ್ದ ಕೆಲವು ಪ್ರಾಣಿಗಳು ಮೇಲಕ್ಕೆದ್ದು ಬರುತ್ತವೆ. ಹಾಗೆ ಯಾವಾಗಲೋ ಮೇಲೆದ್ದುಬರುವ ಕೋಪವನ್ನು ಹಾಗೆಯೇ ಕೈಬಿಡಬಹುದಷ್ಟೆ? ಆಗ ನಾವೇನೂ ಕ್ರೋಧಕ್ಕೆ ವಶರಾಗುವದಿಲ್ಲವಲ್ಲ! - ಎಂದು ಯಾರಾದರೂ ಅಂದುಕೊಳ್ಳಬಹುದು. ಕೆಲವು ವೇಳೆಗಳಲ್ಲಿ ಇದ್ದಕ್ಕಿದ್ದ ಹಾಗೆಯೇ ಸಾಂಕ್ರಾಮಿಕರೋಗವು ಕಾಣಿಸಿಕೊಂಡು ಎಲ್ಲೆಲ್ಲಿಯೂ ಹರಡಿಕೊಳ್ಳುತ್ತದೆ; ಆದಮಾತ್ರಕ್ಕೆ ಆಗತಾನೆ ರೋಗವು ಉತ್ಪತ್ತಿಯಾಯಿತೆಂದು ಹೇಳುವದಕ್ಕೆ ಆಗುವುದಿಲ್ಲ, ರೋಗಬೀಜಗಳು ಜನರಿಗೆ ಗೊತ್ತಿಲ್ಲದೆ ಇದ್ದೇ ಇರುತ್ತವೆ; ರೋಗಕ್ಕೆ ಬಲಿಬೀಳುವ ಅರ್ಹತೆಯಿರುವವರು ಅವು ಅಂಕುರಿಸಿದಕೂಡಲೆ ಅದಕ್ಕೆ ತುತ್ತಾಗುತ್ತಾರೆ. ಕೆಲವು ಕ್ರಿಮಿವಿಶೇಷಗಳು ಅವ್ಯಕ್ತವಾಗಿ ಶರೀರದಲ್ಲಿದ್ದುಕೊಂಡು ಆಗಿಂದಾಗ್ಗೆ ಶರೀರಕ್ಕೆ ತೊಂದರೆಯನ್ನುಂಟುಮಾಡುತ್ತಿರುತ್ತವೆ. ಆದ್ದರಿಂದ ಅವು ಇನ್ನೂ ಅವ್ಯಕ್ತವಾಗಿರುವಾಗಲೇ ಅವಕ್ಕೆ ತಕ್ಕ ಚಿಕಿತ್ಸೆಯನ್ನು ಮಾಡಿಕೊಳ್ಳಬೇಕಾಗುವದು. ಅದರಂತೆ

ಅವ್ಯಕ್ತವಾಗಿರುವ ಕಾಮಕ್ರೋಧಾದಿಗಳಿಗೂ ಅಧ್ಯಾತ್ಮಶಾಸ್ತ್ರದಲ್ಲಿ ತಕ್ಕ ಚಿಕಿತ್ಸೆಯನ್ನು ಹೇಳಿರುತ್ತಾರೆ. ಅದನ್ನು ಅನುಸರಿಸಿದರೆ ಸಮೂಲವಾಗಿ ಕ್ರೋಧವನ್ನು ಪರಿಹರಿಸಿಕೊಂಡಂತೆ ಆಗುತ್ತದೆ.

ಭಗವದ್ಗೀತೆಯು ಮುಖ್ಯವಾಗಿ ಅರ್ಜುನನಂಥ ಮುಮುಕ್ಷುಗಳಿಗಾಗಿ ಹೇಳಿದ ಗ್ರಂಥವು. ಮುಮುಕ್ಷುಗಳಿಗೆ ಗೀತೆಯಲ್ಲಿ ಮುಖ್ಯಾಧಿಕಾರ; ಮಿಕ್ಕವರೂ ಅವರವರ ಯೋಗ್ಯತೆಗೆ ತಕ್ಕಂತೆ ಅದನ್ನು ಉಪಯೋಗಿಸಿಕೊಳ್ಳುವ್ರದಕ್ಕೆ ಬರುತ್ತದೆ. ಆದ್ದರಿಂದ ಮುಮುಕ್ಷುಗಳಿಗೆ ಅತ್ಯುಪಯುಕ್ತವಾದ ದೈವಸಂಪತ್ತಿನ ಗುಣಗಳನ್ನು ಇಲ್ಲಿ ಪ್ರಧಾನವಾಗಿ ಹೇಳಿರುತ್ತದೆ. ನಮಗೆ ಈ ಗುಣಗಳಲ್ಲಿ ಯಾವದಾದರೊಂದು ಅಳವಡುವದು ಕಷ್ಟವೆಂದು ತೋರಿದರೆ ಪರಮಾತ್ಮನಿಗೇ ಶರಣುಹೊಗಬೇಕು. ನಮಗೆ ಯಾವ ಸಾಧನದಲ್ಲಿ ಕಷ್ಟವು ಕಂಡರೂ ಪರಮಾತ್ಮನ ಅನುಗ್ರಹದಿಂದ ಅದು ನಿರಾಯಾಸವಾಗಿ ವಶವಾಗುತ್ತದೆ. ಕಾಮಕ್ರೋಧಾದಿಗಳನ್ನು ಜಯಿಸುವೆವೆಂದು ನಾವೇ ಪಣತೊಟ್ಟರೆ ಎಷ್ಟೋ ವೇಳೆಗಳಲ್ಲಿ ಅವಕ್ಕೆ ನಾವು ನಮಗೂ ತಿಳಿಯದೆಯೇ ವಶರಾಗಿಬಿಟ್ಟಿರುತ್ತೇವೆ. ರಾವಣನು ಎಂಥ ತಪಸ್ವಿ! ಆದರೂ ಅವನು ಒಂದು ಸಲ ಸಲ್ಲದ ಕಾಮಕ್ಕೆ ವಶನಾದ್ದರಿಂದ ತನಗೆ ಬುದ್ಧಿವಾದವನ್ನು ಹೇಳುವವರ ಮೇಲೂ ಕಿಡಿಕಿಡಿಯಾದನು! ಸಿಟ್ಟನ್ನು ಬಿಟ್ಟೆನು - ಎಂದು ನಮ್ಮಲ್ಲಿ ಅನೇಕರು ತಿಳಿದುಕೊಂಡಿರುತ್ತೇವೆ; ಆದರೆ ನಮಗೂ ತಿಳಿಯದಂತೆಯೇ ಅದು ಯಾವಾಗಲೋ ಎದ್ದು ಕೊಂಡುಬಿಡುತ್ತದೆ. ನಾವು ಆರೋಗ್ಯವಾಗಿದ್ದೇವೆಂದು ಯಾವದೋ ಒಂದು ಸಣ್ಣ ರೋಗದಿಂದ ಮಾತ್ರ ನರಳುತ್ತಿದ್ದೇವೆಂದೂ ನಾವು ತಿಳಿದುಕೊಂಡಿರುವಾಗಲೂ ನಮ್ಮಲ್ಲಿ ಅವ್ಯಕ್ತವಾದ ರೋಗಗಳು ಇದ್ದುಕೊಂಡಿರಬಹುದು. ಜಾಣರಾದ ವೈದ್ಯರು ನಾಡೀಪರೀಕ್ಷೆಯೇ ಮುಂತಾದ ದ್ವಾರಗಳಿಂದ ಅವುಗಳನ್ನು ಕಂಡುಕೊಂಡು ಒಳಗೆ ಅಡಗಿರುವ ಆ ರೋಗಗಳನ್ನು ಕೆರಳಿಸಿ ಆ ಬಳಿಕ ಅವು ಸಮೂಲವಾಗಿ ನಾಶವಾಗುವ ಔಷಧಿಯನ್ನು ಕೊಡುತ್ತಾರಲ್ಲವೆ? ಇದರಂತೆ ನಾವು ಶಮದಮಾದಿಸಂಪನ್ನರೆಂದುಕೊಂಡು ಗುರುಗಳ ಬಳಿಗೆ ಹೋದಾಗಲೂ ಅವರು ಕೆಲಕೆಲವು ರೀತಿಗಳಿಂದ ನಮ್ಮನ್ನು ಪರೀಕ್ಷಿಸಿ ನಮ್ಮಲ್ಲಿ ಗುಪ್ತವಾಗಿರುವ ಕಾಮಕ್ರೋಧಾದಿಗಳನ್ನು ಕಂಡುಹಿಡಿದುಕೊಳ್ಳುತ್ತಾರೆ. ಅವುಗಳನ್ನು ಕೆರಳಿಸಿ ಆಮೇಲೆ ನಮಗೆ ತಕ್ಕ ಸಾಧನಗಳನ್ನು ಹೇಳುತ್ತಾರೆ. ಒಬ್ಬ ಶಿಷ್ಯನು ಬಹಳ ಸಿಟ್ಟಿಗೇಳುವ ಸ್ವಭಾವದವನಾಗಿದ್ದನು. ಗುರುಗಳು ಕೆಲವು ತಿಂಗಳು ಮೌನವಾಗಿದ್ದು ಶಾಂತಿಯಿಂದಲೂ ಕ್ಷಮಾಗುಣದಿಂದಲೂ ಸಿಟ್ಟನ್ನು ಜಯಿಸುವ ಪ್ರಯತ್ನವನ್ನು ಮಾಡಿ ಮತ್ತೊಂದು ಸಲ ನನ್ನ ಬಳಿಗೆ ಬಾ! - ಎಂದರು. ಶಿಷ್ಯನು ಬಹಳ ಸಾಹಸದಿಂದ ಸಿಟ್ಟನ್ನು ಬಲುಮಟ್ಟಿಗೆ ತಡೆದುಕೊಳ್ಳುವ ಪ್ರಯತ್ನವನ್ನು ಮಾಡಿದನು. ಆಮೇಲೆ ಗುರುಗಳ ಸಂನಿಧಿಗೆ ಉಪದೇಶಕ್ಕೆಂದು ಬಂದನು. ಅವರು ``ಸಿಟ್ಟನ್ನು ಬಿಟ್ಟೆಯ?" ಎಂದು ಕೇಳಿದ್ದಕ್ಕೆ `ಬಿಟ್ಟೆನು, ತಮ್ಮ ದಯದಿಂದ ಇನ್ನು ನನ್ನನ್ನು ಅದು ಕಾಡುವಂತೆ

ಕಾಣುವದಿಲ್ಲ!' ಎಂದು ಉತ್ತರವನ್ನು ಕೊಟ್ಟನು. ಸ್ವಲ್ಪ ಹೊತ್ತಾದ ಬಳಿಕ `ಸಿಟ್ಟನ್ನು ಬಿಟ್ಟೆಯಷ್ಟೆ?' ಎಂದು ಅವರು ಮತ್ತೆ ಕೇಳಿದರು. `ಬಿಟ್ಟೆನು' ಎಂದು ಶಿಷ್ಯನು ಸಮಾಧಾನದಿಂದಲೇ ಉತ್ತರವನ್ನು ಕೊಟ್ಟನು. ಆದರೆ ಹೀಗೆ ಸ್ವಲ್ಪ ಹೊತ್ತು ಬಿಟ್ಟುಬಿಟ್ಟು ಎಂಟುಹತ್ತು ಸಲ ಅವರು `ಸಿಟ್ಟನ್ನು ಬಿಟ್ಟು ಬಿಟ್ಟೆಯ? ಹಾಗಾದರೆ ಇನ್ನು ಸಿಟ್ಟು ಬರುವಂತಿಲ್ಲ!' `ಬಹಳ ಹೆಚ್ಚು, ಸಿಟ್ಟನ್ನು ಬಿಟ್ಟೆಯ?" ಎಂದು ಬೇರೆಬೇರೆಯ ಮಾತುಗಳಿಂದ ಅದೇ ಪ್ರಶ್ನೆಯನ್ನು ಮಾಡಲು ಶಿಷ್ಯನಿಗೆ ಸಮಾಧಾನವು ತಪ್ಪಿತು. `ಬಿಟ್ಟೆ ಎಂದು ಒಂದು ಸಲ ಹೇಳಿದರೆ ಆಗಲಿಲ್ಲವೆ?" ಎಂದನು. ಕೊನೆಗೆ ಒಂದು ಸಲ `ಬಿಟ್ಟೆ ಕಾಣಿರೀ! ಎಷ್ಟು ಸಲ ಹೇಳುವದು?" ಎಂದು ಸಿಟ್ಟನ್ನೇ ಪ್ರಕಟಮಾಡಿಬಿಟ್ಟನು! ಇದೊಂದು ಹಳೆಯ ಕಥೆ. ನಾವು ಸಾಧನದಲ್ಲಿ ತೀರ್ಣರಾದೆವೆಂದು ಭಾವಿಸಿರುವಾಗಲೂ ಹೇಗೆ ನಮ್ಮನ್ನು ಅದು ವಂಚಿಸಿ ಮತ್ತೆ ಮತ್ತೆ ಬಂದು ಕಾಡುವದು ಎಂಬುದಕ್ಕೆ ಇದು ಉದಾಹರಣೆಯಾಗಿರುತ್ತದೆ. ನಾವು ದುರ್ಗುಣಗಳನ್ನು ಬಿಟ್ಟು ಹೃದಯವನ್ನು ಸ್ವಚ್ಛಗೊಳಿಸುವದಕ್ಕೆ ಪ್ರಯತ್ನಪಟ್ಟಾಗ ಅಲ್ಲಿ ಅವಕ್ಕೆ ವಿರುದ್ಧವಾದ ಸುಗುಣಗಳನ್ನು ತುಂಬಿಕೊಳ್ಳದಿದ್ದರೆ ಅದೇ ದುರ್ಗುಣಗಳು ಮತ್ತಷ್ಟು ಪ್ರಬಲವಾಗಿ ತಮ್ಮ ಗೆಳೆಯರೊಂದಿಗೆ ಅಲ್ಲಿಗೆ ಬಂದು ಬೇರುಬಿಟ್ಟುಕೊಳ್ಳುವ ಸಂಭವವಿದೆ.

ಸಾಧಕರು ಬೇರೆಬೇರೆಯ ಸಂನಿವೇಶಗಳನ್ನು ಕಲ್ಪಿಸಿಕೊಂಡು ತಮಗೆ ಇಂಥಿಂಥ ಸಾಧನವು ಅಳವಟ್ಟಿತೊ, ಇಲ್ಲವೊ? - ಎಂಬುದನ್ನು ಪರೀಕ್ಷಿಸಿಕೊಳ್ಳುತ್ತಿರಬೇಕು. ಯತಿಗಳಾದವರು ತಮಗೆ ಜನರು ಮಾಡುವ ಅಪಮಾನವನ್ನು ಅಮೃತದ ಗುಳಿಗೆಯಂತೆ ನುಂಗಿಕೊಂಡು ಶಾಂತಿಯಿಂದಿರುವದನ್ನು ಕಲಿಯಬೇಕು - ಎಂದು ಬಲ್ಲವರು ಹೇಳುತ್ತಾರೆ. ಸ್ವಾಮಿ ವಿವೇಕಾನಂದರು ಪರಮಹಂಸಪರಿವ್ರಾಜಕರಾಗಿ ಭರತಖಂಡವನ್ನೆಲ್ಲ ಕಾಲುನಡಗೆಯಿಂದ ಸಂಚರಿಸುತ್ತಿರುವಲ್ಲಿ ಬಗೆಬಗೆಯ ಜನರು ಅವರಿಗೆ ಪ್ರಾಪ್ತರಾಗುತ್ತಿದ್ದರು. ಬಗೆಬಗೆಯ ಸಂನಿವೇಶಗಳು ಬಂದೊದಗುತ್ತಿದ್ದವು. ಆಗ ಅವರು ತಮ್ಮ ಮನಸ್ಸನ್ನು ಅಸಮಾಧಾನಕ್ಕೆ ಒಳಗುಮಾಡಿಕೊಳ್ಳದೆ ಇದ್ದ ರೀತಿಯನ್ನು ನಾವು ಓದಿದರೆ ಇಲ್ಲಿ ಹೇಳಿರುವ ಅಕ್ರೋಧಾದಿದೈವಸಂಪತ್ತಿನ ಗುಣಗಳು ಅಷ್ಟು ಸುಲಭವಾಗಿ ವಶವಾಗುವವಲ್ಲ ಎಂಬುದು ಸ್ಪಷ್ಟವಾಗುತ್ತದೆ. ನಮಗೆ ಎಲ್ಲರಮೇಲೂ ಕೋಪವನ್ನು ಮಾಡಿಕೊಳ್ಳಬೇಕೆಂದು ಹಾತುವರಿಯುವ ಹವ್ಯಾಸವು ಸುಲಭವಾಗಿ ಬರುತ್ತದೆ. ಆದರೆ ತಪ್ಪು ಮಾಡಿದವರ ಮೇಲೆ ಸಿಟ್ಟಾಗುವದಾದರೆ ಸಿಟ್ಟಿನ ಮೇಲೇಕೆ ಸಿಟ್ಟುಮಾಡಿಕೊಳ್ಳುವದಿಲ್ಲ? - ಎಂದು ವಿದ್ಯಾರಣ್ಯರು ಕೇಳಿರುತ್ತಾರೆ. ಕೋಪವು ಮಹಾಪರಾಧಿ, ನಮ್ಮನ್ನು ಎಷ್ಟೋ ಅನರ್ಥಗಳಿಗೆ ಗುರಿಪಡಿಸುತ್ತದೆ. ಹೀಗಿರುವಲ್ಲಿ ನಾವೇಕೆ ಅದನ್ನು ಕ್ಷಮಿಸಬೇಕು? ಕ್ರೋಧವನ್ನು ನಮ್ಮ ಸ್ವಾಧೀನದಲ್ಲಿಟ್ಟುಕೊಂಡಿದ್ದು ನಾವು ಹೇಳಿದಂತೆ ಕೇಳುವಂತೆ ಮಾಡಿಕೊಂಡರೆ ಅಕ್ರೋಧವು ಸಂಪೂರ್ಣವಾಯಿತೆಂದು ಹೇಳಬಹುದು. ಪರಮೇಶ್ವರನು ತನ್ನ ಕ್ರೋಧವನ್ನು ಹೇಗೆ

ವಶದಲ್ಲಿಟ್ಟುಕೊಂಡಿರುತ್ತಾನೆ! ಇಡಿಯ ಜಗತ್ತನ್ನು ಸಂಹಾರಮಾಡುವಾಗಲೂ ನಗುತ್ತಲೇ ಸಂಹಾರಮಾಡುತ್ತಾನಂತೆ! ಆದ್ದರಿಂದ ಸಂಹಾರವೆಂಬುದೂ ಸೃಷ್ಟಿಸ್ಥಿತಿಗಳಂತೆ ಆತನ ಒಂದು ಲೀಲೆ ಎನಿಸಿರುತ್ತದೆ. ಆ ಪರಮೇಶ್ವರನ ಪ್ರಸಾದವನ್ನು ಪಡೆದವರಿಗೂ ಕ್ರೋಧಾದಿಗಳು ಹೀಗೆಯೇ ವಶವಾಗುವವು.

ದೈವಸಂಪತ್ತೆಂಬುದು ಮನಸ್ಸಿನೊಳಗೇ ನಿರ್ಮಾಣಮಾಡಿಕೊಳ್ಳಬೇಕಾಗಿರುವ ಒಂದಾನೊಂದು ಕಟ್ಟಡವು. ಕ್ರೋಧಾದಿಗಳಿಂದ ರಚಿತವಾಗಿರುವ ಕಟ್ಟಡವೊಂದು ನಮ್ಮಲ್ಲಿ ಈಗ ಇರುತ್ತದೆ. ಅದನ್ನು ಸಂಪೂರ್ಣವಾಗಿ ಕೆಡಹಿ ಅದರ ಸ್ಥಾನದಲ್ಲಿ ವೈರಾಗ್ಯ, ಕ್ಷಮೆ - ಮುಂತಾದವುಗಳಿಂದ ಬೇರೊಂದು ಕಟ್ಟಡವನ್ನು ಕಟ್ಟಿಕೊಳ್ಳಬೇಕು. ಈ ಕಟ್ಟಡವು ಹೊರಗಣ್ಣಿಗೆ ಕಾಣಿಸುವದಿಲ್ಲವಾದರೂ ಅದು ನಮ್ಮೊಳಗೆ ನಿರ್ಮಾಣವಾದಮೇಲೆ ಪರಮೇಶ್ವರನು ಅದರೊಳಕ್ಕೆ ಪ್ರವೇಶಿಸಿ ನಮ್ಮ ಜೀವನಕ್ಕೆ ಶಾಂತಿಸುಖಗಳನ್ನು ನೀಡುತ್ತಾನೆ.

## ೧೫೦. ದೈವಸಂಪತ್ತು 16 - (2)

### (13-11-49)

ದೈವಸಂಪತ್ತಿನ ಗುಣಗಳ ಪಟ್ಟಿಯಲ್ಲಿ ಇಂದು ತ್ಯಾಗ, ಶಾಂತಿ, ಅಪೈಶುನ ಇವುಗಳ ವಿಷಯವಾಗಿ ಮಾತನಾಡಬೇಕೆಂದಿರುವೆನು. ಈ ಗುಣಗಳು ಮುಖ್ಯವಾಗಿ ಮನಸ್ಸಿಗೇ ಸಂಬಂಧಪಟ್ಟಿರುತ್ತವೆ. ದೇಹೇಂದ್ರಿಯಗಳಿಗೆ ಸಂಬಂಧಪಟ್ಟ ಸಾಧನಗಳೂ ಇಲ್ಲಿ ಕಾಣಿಸಬಹುದು. ಆದರೆ ಅವೂ ಮನಸ್ಸಿನ ಮೂಲಕ ಮಾಡಿದಾಗಲೇ ಪರಿಣಾಮಕರವಾದ ಸಾಧನಗಳಾಗುತ್ತವೆ. ದಾಯಾದಿಗಳು ಒಬ್ಬರೊಡನೊಬ್ಬರು ಕಾದಾಡುವಾಗ, ರಾಷ್ಟ್ರಗಳು ಒಂದರೊಡನೊಂದು ಕಲಹದಲ್ಲಿ ತೊಡಗಿರುವಾಗ, ಕರಾರುಮಾಡಿಕೊಳ್ಳುವದೂ ಮತ್ತೆ ಮತ್ತೆ ಅದನ್ನು ಮುರಿಯುವದೂ ನಮಗೆ ಕಾಣಬರುತ್ತಲೇ ಇರುತ್ತದೆಯಷ್ಟೆ. ವ್ಯಾಜ್ಯಗಳಲ್ಲಿ ಪಂಚಾಯಿತಿಯಿಂದ ಎಷ್ಟೋ ತೀರ್ಮಾನಗಳಾದರೂ ಅವು ಮತ್ತೆ ಹಾಗೆಯೇ ಇದ್ದು

ಒಪ್ಪಿಗೆ ಕೊಟ್ಟರೂ ಒಳಗಿನ ಮನಸ್ಸು ಆ ಒಪ್ಪಿಗೆಯನ್ನು ಮುರಿಯುವದು. ಆದರೆ ಮನಸ್ಸು ತನ್ನ ಒಪ್ಪಿಗೆಯನ್ನು ನಿರ್ಣಯವಾಗಿ ಕೊಟ್ಟರೆ ದೇಹೇಂದ್ರಿಯಗಳು ಅದನ್ನು ಎಂದಿಗೂ ಮುರಿಯುವದಿಲ್ಲ. ಅಧ್ಯಾತ್ಮಸಾಧನಗಳನ್ನು ಹೇಳುವ ಆಚಾರ್ಯರು ಯಾವ ದೇಶದವರೇ ಆದರೂ ಮನಸ್ಸಿಗೆ ಸಾಧನಗಳನ್ನು ಹೇಳಿಯೇ ಇರುತ್ತಾರೆ. ಆದರೆ ಮನಸ್ಸಿಗೇ ಪ್ರಾಮುಖ್ಯವನ್ನು ಕೊಟ್ಟು ಅದರ ವಿಷಯದ ಸಾಧನಗಳನ್ನೇ ಅವಧಾರಣೆಮಾಡಿ ಹೇಳಿರುವದು ನಮ್ಮ ದೇಶದ

ಆಚಾರ್ಯರುಗಳಿಗೆ ಮೀಸಲಾಗಿದೆ ಎನ್ನಬಹುದು. ದುರ್ಬಿನ್ನು ಯಂತ್ರವನ್ನು ಸರಿಯಾಗಿ ಹೊಂದಿಸಿ ಗುರಿಯಿಟ್ಟು ನೋಡಿದಾಗಲೇ ದೂರದಲ್ಲಿರುವ ಸೂಕ್ಷ್ಮವಸ್ತುವು ಕಾಣಿಸುವಂತೆ ಮನಸ್ಸಿನ ಕೇಂದ್ರವನ್ನು ಪ್ರಧಾನಮಾಡಿಕೊಂಡು ಸಾಧನವನ್ನು ಮಾಡಿದಾಗಲೇ ನಮಗೆ ಅಧ್ಯಾತ್ಮವಿಚಾರಗಳು ಸ್ಫುಟವಾಗಿ ಮನದಟ್ಟಾಗುತ್ತವೆ. ದೈವೀಸಂಪತ್ತಿದ್ದರೆ ಗೀತೆಯು ಸರಿಯಾಗಿ ಅರ್ಥವಾಗುತ್ತದೆ ಎಂಬುದಕ್ಕೆ ಇದೇ ಕಾರಣ. ವೀಣೆಯೇ ಮುಂತಾದ ಯಂತ್ರಗಳು ನಮ್ಮಲ್ಲಿರಬಹುದು.; ಆದರೆ ಅವನ್ನು ನುಡಿಯಿಸುವದಕ್ಕೆ ನಮಗೆ ಸರಿಯಾಗಿ ಬಂದಾಗಲೇ, ಅವನ್ನು ಶ್ರುತಿಮಾಡುವದು ನಮಗೆ ತಿಳಿದಾಗಲೇ, ಅವುಗಳ ನಿಜವಾದ ಪ್ರಯೋಜನವು ಲಭಿಸುತ್ತದೆ. ಅವುಗಳ ಮರ್ಮವನ್ನು ತಿಳಿಯದವನು ಮನಬಂದಂತೆ ಅವನ್ನು ಬಾರಿಸಿ ಹದಗೆಡಿಸಿ ಮತ್ತೆ ಮತ್ತೆ ಅವುಗಳನ್ನು ರಿಪೇರಿಮಾಡಿಸಿ ಕೆಡಿಸಿಕೊಳ್ಳುವಂತೆ ದೈವೀಸಂಪತ್ತಿಲ್ಲದವನು ಮನಸ್ಸನ್ನು ಸ್ವೇಚ್ಛೆಯಿಂದ ಉಪಯೋಗಿಸಿಕೊಂಡು ಅದನ್ನು ಹದಗೆಡಿಸಿಕೊಳ್ಳುತ್ತಾನೆ.

ಈಗ ತ್ಯಾಗದ ವಿಷಯವನ್ನು ತೆಗೆದುಕೊಳ್ಳೋಣ. ಇಲ್ಲಿ ಹೇಳಿರುವ ತ್ಯಾಗಶಬ್ದದ ಅಕ್ಷರಾರ್ಥವನ್ನು ಸ್ವೀಕರಿಸಿ ಬಿಡುವದು ಎಂದಿಷ್ಟೇ ಅದರ ಲಕ್ಷ್ಯವೆಂದು ಭಾವಿಸಬಾರದು. ನಮ್ಮಲ್ಲಿರುವ ಒಡವೆವಸ್ತುಗಳನ್ನು ಬೇರೊಬ್ಬರಿಗೆ ಕೊಟ್ಟುಬಿಡುವುದೇ ತ್ಯಾಗವೆಂದೂ ತಿಳಿಯಬಾರದು. ಹೆಂಡಿರುಮಕ್ಕಳನ್ನು ಬಿಟ್ಟು ಕಾಶೀಯಾತ್ರೆಗೆ ಹೊರಟುಬಿಡುವದೇ ತ್ಯಾಗವೆಂದೂ ತಿಳಿಯಬಾರದು. ಎಲ್ಲಿಯ ಮನೆ, ಎಲ್ಲಿಯ ಮಕ್ಕಳು - ಎಂದು ಎಲ್ಲವನ್ನೂ ಬಿಡುವದೇ ತ್ಯಾಗವೆಂದು ಕೆಲವರ ಭಾವನೆಯಿದೆ. ಇವೆಲ್ಲ ಹೊರಗಿನ ತ್ಯಾಗ; ಆದರೆ ತ್ಯಾಗವೆಂಬುದು ಮುಖ್ಯವಾಗಿ ಮನಸ್ಸಿಗೆ ಸಂಬಂಧಪಟ್ಟದ್ದಾಗಿದೆ.

ಪುರಂದರದಾಸರ ಕಥೆಯನ್ನು ನೀವೆಲ್ಲ ಕೇಳಿರುತ್ತೀರಿ. ಅವರು ದಾಸರಾಗುವ ಮುಂಚೆ ಸಾಹುಕಾರರಾಗಿದ್ದರು. ಅವರ ಮನಸ್ಸಿನಲ್ಲಿ ತ್ಯಾಗದ ಒರತೆಯೇ ಇರಲಿಲ್ಲ. ಯಾರೊಬ್ಬ ಅತಿಥಿಗಳಿಗೂ ಅನ್ನವನ್ನು ಹಾಕುವದು ಅವರ ಮನಸ್ಸಿಗೆ ಬಾರದು; ದಾನಧರ್ಮಗಳೆಂದರೆ ಅವರ ಮನಸ್ಸಿಗೆ ಹಿಡಿಯುತ್ತಲೇ ಇರಲಿಲ್ಲ. ಒಮ್ಮೆ ಭಗವಂತನೇ ಒಬ್ಬ ಯಾಚಕನ ವೇಷದಲ್ಲಿ ಬಂದು ಅವರನ್ನು ತನ್ನ ಮನೆಯಲ್ಲಿ ನಡೆಯಬೇಕಾಗಿದ್ದ ಕಾರ್ಯಕ್ಕಾಗಿ ಧನಸಹಾಯವನ್ನು ಕೇಳಿದನು. ಸಾಹುಕಾರನು ಸವಕಲು ದುಡ್ಡುಗಳನ್ನೆಲ್ಲ ಒಂದು ಡಬ್ಬಿಯಲ್ಲಿ ಹಾಕಿಟ್ಟಿದ್ದನಂತೆ. ಅವುಗಳಲ್ಲಿ ತೀರ ಸವಕಲಾಗಿರುವದನ್ನು ಆರಿಸಿ ಯಾಚಕನಿಗೆ ಕೊಟ್ಟನಂತೆ! ಹೀಗಿತ್ತು, ಅವರ ಮನಸ್ಸಿನ ಸ್ಥಿತಿ! ಆದರೆ ಆಗತಾನೆ ಅವನ ಯಾವದೋ ಒಂದು ಪುಣ್ಯಕರ್ಮವು ವಿಪಾಕವಾಗಿತ್ತು. ಭಗವಂತನು ಸಾಹುಕಾರನ ಹೆಂಡತಿಯನ್ನು ಯಾಚಿಸಿದ್ದು, ಆಕೆಯು ತನ್ನ ಮೂಗುತಿಯನ್ನೇ ಕೊಟ್ಟದ್ದು, ಸಾಹುಕಾರನಿಗೆ ಮೂಗುತಿ ಇಲ್ಲದ್ದು ತಿಳಿದು ಅವನು ಕಿಡಿಕಿಡಿಯಾದದ್ದು, ಮುಂದೆ ಆಕೆಯು ಅಂಜಿ ವಿಷವನ್ನು ಪ್ರಾಶನ ಮಾಡಬೇಕೆಂದು ಕುಡಿಯುವ ಬಟ್ಟಲನ್ನು ಎತ್ತಿದಾಗ ಭಗವಂತನ ಲೀಲೆಯಿಂದ ಮೂಗುತಿಯು ಅಲ್ಲಿಕಾಣಿಸಿದ್ದು, ಗಂಡನಿಗೆ ಇದು ತಿಳಿದುಬಂದು

ಭಕ್ತಿವೈರಾಗ್ಯಗಳ ಅಂಕುರವಾದದ್ದು-ಇದೆಲ್ಲ ನಿಮಗೆ ತಿಳಿದಿರುವ ಕಥೆಯಾಗಿದೆ. ಆಗ ಪುರಂದರದಾಸರು ಹೊಸ್ತಿಲಮೇಲೆ ತುಳಸಿಯಿಟ್ಟು ನೀರುಬಿಟ್ಟು ಮನೆಯನ್ನು ಬಿಟ್ಟು ಹೊರಟುಹೋದರೆಂದು ಹೇಳುತ್ತಾರೆ. ಮನಸ್ಸಿನಲ್ಲಿ ಆಗ ಎಂಥ ಪರಿವರ್ತನೆಯಾಗಿರಬೇಕು! `ಮಮೇತಿ ಬಧ್ಯತೇ ಜನ್ತುರ್ನ ಮಮೇತಿ ವಿಮುಚ್ಯತೇ' ಎಂಬುದೊಂದು ಶಾಸ್ತ್ರವಚನವು. ಇಲ್ಲಿನ ಮಮ (ನನ್ನದಲ್ಲ) ಎಂದು ಬಾಯಲ್ಲಿ ಹೇಳಿದರೆ ಅಷ್ಟು ಮಾತ್ರದಿಂದ ತ್ಯಾಗವಾಯಿತೆಂದೂ ಅದರಿಂದ ವಿಮುಕ್ತಿಯಾಗುವದೆಂದೂ ಅರ್ಥವನ್ನು ಮಾಡಿಕೊಳ್ಳುವದಕ್ಕೆ ಆಗಲಾರದಷ್ಟೆ ಮಮ ಎಂಬುದು ಹೇಗೆ ಈಗ ಮನುಷ್ಯನ ಹೃದಯದ ಮೇಲೆ ಬರೆದು ಬಿಟ್ಟಿದೆಯೋ ಹಾಗೆಯೇ `ನ ಮಮ' ಎಂಬುದು ಬರೆದು ಗುರುತಾಗಿಬಿಡಬೇಕು. ಒಮ್ಮೆ ಜನಕಚಕ್ರವರ್ತಿಯ ಮುಂದೆ ಒಬ್ಬ ಅಪರಾಧಿಯು ನಿಂತಿದ್ದನಂತೆ. ಆ ಪ್ರಭುವು ಕೋಪದಿಂದ ನನ್ನ ರಾಜ್ಯವನ್ನು ಬಿಟ್ಟು ಆಚೆಗೆ ಹೊರಡು!' ಎಂದು ಅಪ್ಪಣೆಮಾಡಿದನಂತೆ. ಆದರೆ ಎದುರಿಗೆ ನಿಂತಿದ್ದವನು ತತ್ತ್ವವಿಚಾರವನ್ನು ಬಲ್ಲವನು. ಅವನು ಒಂದು ಪ್ರಶ್ನೆಯನ್ನು ಮಾಡಿದನು.

`ತಮ್ಮ ರಾಜ್ಯವು ಎಲ್ಲಿಯವರೆಗೆ?' ಎಂದು ಕೇಳಿದನು. ಆಗ ವಿಚಾರಪರನಾದ ಜನಕನಿಗೆ ತನ್ನೊಳಗೇ ಮನನವು ಎದ್ದುಕೊಂಡಿತು. `ನನ್ನ ರಾಜ್ಯವೆಂದರೇನು? ನನ್ನ ಮಮತೆಗೆ ವಿಷಯವಾದದ್ದು. ಬೇಕಾದರೆ ಎಲ್ಲಾ ಪೃಥಿವಿಯೂ ಆಗಬಹುದು; ಇಲ್ಲದಿದ್ದರೆ ಯಾವದೊಂದೂ ನನ್ನದಲ್ಲವೇ ಅಲ್ಲ. ಈ ಜ್ಞಾನಿಯು ನನಗೆ ಒಳ್ಳೆಯ ಬುದ್ಧಿಯನ್ನು ಕಲಿಸಿದನು. ನಾನು ರಾಜ್ಯದಲ್ಲಿ ನನ್ನದು ಎಂಬ ಅಭಿಮಾನವನ್ನು ಬಿಡಬೇಕೆಂಬುದಲ್ಲವೆ, ಈತನ ಅಭಿಪ್ರಾಯ?' ಎಂದು ತನ್ನೊಳಗೇ ತಾನು ಗುಣಿಸಿಕೊಂಡನಂತೆ. ಮನುಷ್ಯನು ಪರಿಚ್ಛೇದದಿಂದ ಇಷ್ಟು ನನ್ನದು, ಇಲ್ಲಿಯವರೆಗೆ ನನ್ನದು - ಎಂದುಕೊಳ್ಳುವದೇ ಅವನ ಅಭಿವೃದ್ಧಿಗೆ ಕುಂದಕವನ್ನು ತರುತ್ತದೆ. ಎಲ್ಲವನ್ನೂ ನನ್ನದು ಎಂದರೆ ಅದು ಆ ಅರ್ಥದಲ್ಲಿ ಎಲ್ಲರದೂ ಆಗಿರುವದರಿಂದ ಮಮತೆಯ ಕಾಟವು ತಪ್ಪಿಹೋಗುತ್ತದೆ; ಅಥವಾ ನನ್ನದು ಯಾವದೂ ಇಲ್ಲ ಎಂದು ತ್ಯಾಗದ ಪರಮಫಲವನ್ನು ಪಡೆದುಕೊಳ್ಳಬೇಕು. ಆಗಲೂ ಮನಸ್ಸಿಗೆ ಶಾಂತಿಯು ದೊರೆಯುತ್ತದೆ.

ಗೀತೆಯಲ್ಲಿ ತ್ಯಾಗಕ್ಕೆ ಬಹಳ ಮಹತ್ತ್ವವಿರುತ್ತದೆ. ಶ್ರೀರಾಮಕೃಷ್ಣಪರಮಹಂಸರು `ಗೀತಾ' `ಗೀತಾ' ಎಂದು ಬಾರಿಬಾರಿಗೂ ಗೀತಾಶಬ್ದವನ್ನು ಉಚ್ಚರಿಸಿದರೂ `ತ್ಯಾಗೀ' `ತ್ಯಾಗೀ' ಎಂದಾಗುತ್ತದೆ ಎಂದು ಹೇಳುತ್ತಿದ್ದರಂತೆ. ಗೀತಾ ಎಂಬುದು ವಿಪರೀತವಾಗಿ ಉಚ್ಚಾರವಾದರೆ `ತಾಗೀ' ಎಂದಾಗುವದಲ್ಲವೆ? ಎಂದು ಬಳಿಯಲ್ಲಿದ್ದವರೊಬ್ಬರು ಕೇಳಿದ್ದಕ್ಕೆ ಇನ್ನು ಯಾರೋ ಒಬ್ಬರು ತಗ್ ಎಂಬ ಧಾತುವೊಂದು ಇದೆ; ಅದಕ್ಕೂ ತ್ಯಾಗವೇ ಅರ್ಥ ಎಂದು ಸಮಾಧಾನವನ್ನು ಹೇಳಿದರಂತೆ. ಆ ಧಾತುವಿರಲಿ ಇಲ್ಲದಿರಲಿ, ಗೀತಾನುಸಂಧಾನವನ್ನು ಮಾಡಿದವನಿಗೆ ತ್ಯಾಗವು ಗೀತೆಯಲ್ಲಿ ಹೇಳಿರುವ ಬಹಳ ದೊಡ್ಡ ಸಾಧನವೆಂದು ಹೊಳೆಯುವದರಲ್ಲಿ ಸಂಶಯವಿಲ್ಲ.

ಗೀತೆಯ ಉಪದೇಶವು ಮುಖ್ಯವಾಗಿ ಅರ್ಜುನನಿಗೆ ಆಯಿತು. ಅರ್ಜುನನು `ನಾನು ಯುದ್ಧವನ್ನು ಮಾಡುವದಿಲ್ಲ' ಎಂದು ಸಶರವಾಗಿ ಬಿಲ್ಲನ್ನೇ ಕೈಬಿಟ್ಟಿದ್ದನು. ಆದರೂ ಅದು ನಿಜವಾದ ತ್ಯಾಗವಾಗಲಿಲ್ಲ. ಅವನಿಗೆ ತ್ಯಾಗದ ರಹಸ್ಯವನ್ನು ಭಗವದ್ಗೀತೆಯು ಉಪದೇಶಿಸಿತು. `ಇವರೆಲ್ಲರೂ ನನ್ನವರು, ನಾನು ಇವರವನು' ಎಂಬ ವ್ಯಾಮೋಹವು ಅರ್ಜುನನನ್ನು ಕಾಡುತ್ತಿತ್ತು. ಅದನ್ನು ಬಿಡಿಸಿ ಭಗವದ್ಭಕ್ತಿಯನ್ನು ತಿಳಿಸಿಕೊಟ್ಟು ನಿಷ್ಕಾಮಕರ್ಮಯೋಗವನ್ನು ಭಗವಂತನು ಉಪದೇಶಿಸಿದನು.

ಮಮತೆಯು ಹೃದಯಕ್ಕೆ ಸೇರಿದ್ದು, ತ್ಯಾಗವೂ ಹೃದಯಕ್ಕೇ ಸೇರಿದ್ದು. ಅಂಗಡಿಯಲ್ಲಿ ಒಬ್ಬನು ಒಂದು ಹಣ್ಣನ್ನು ಕೊಂಡುಕೊಳ್ಳುತ್ತಾನೆ. ಆ ಹಣ್ಣಿನಲ್ಲಿ ಮಮತೆಯು ಬಂದು ಕೂರುತ್ತದೆ. ಆದರೆ ಅದರಲ್ಲಿ ಹುಳುಗಳು ಸೇರಿವೆಯೆಂದು ತಿಳಿದುಬಂದರೆ ಕೂಡಲೆ ಅದರಲ್ಲಿ ಮಮತೆ ಹೋಗಿಬಿಡುತ್ತದೆ. ಅಲ್ಲವೆ? ಮಮತೆಯೂ ತ್ಯಾಗವೂ ಮನಸ್ಸಿಗೆ ಸಂಬಂಧಪಟ್ಟವು ಎಂಬುದಕ್ಕೆ ಇದೊಂದು ದೃಷ್ಟಾಂತವಲ್ಲವೆ! ಒಬ್ಬ ಕವಿಯು ಜಿಪುಣತನವನ್ನು ಹಳಿಯುವದಕ್ಕಾಗಿ ಹೀಗೆಂದಿದಾನೆ; ``ಜಿಪುಣನಷ್ಟು ಮಹಾತ್ಯಾಗಿ ಯಾರೂ ಇಲ್ಲ; ಏಕೆಂದರೆ ಅವನು ತಾನು ದುಡಿದದ್ದರಲ್ಲಿ ಒಂದಿಷ್ಟನ್ನೂ ಉಪಯೋಗಿಸದೆ ಎಲ್ಲವನ್ನು ಮತ್ತೊಬ್ಬರಿಗೇ ಬಿಟ್ಟುಹೋಗುತ್ತಾನೆ!" ಇದು ಜಿಪುಣನಿಗೆ ತ್ಯಾಗಬುದ್ಧಿಯಿರುತ್ತದೆ ಎಂದು ತಿಳಿಸುವದಕ್ಕೆ ಹೇಳಿದ್ದಲ್ಲ; ಜಿಪುಣತನವು ತನ್ನ ಸುಖವನ್ನು ಕೂಡ ತೊರೆಯಿಸುವದು ಎಂದು ಹಾಸ್ಯಮಾಡಿ ತಿಳಿಸಿದ್ದು. ವಸ್ತುವನ್ನು ಬಿಡುವದು, ಅಥವಾ ಇಟ್ಟುಕೊಳ್ಳುವದು, ತ್ಯಾಗಾತ್ಯಾಗಗಳಿಗೆ ಗುರುತಲ್ಲ; ಅವುಗಳಲ್ಲಿರುವ ಮಮತೆಯನ್ನು ಅತ್ಯಂತವಾಗಿ ಬಿಟ್ಟುಬಿಡುವದೇ ನಿಜವಾದ ತ್ಯಾಗವು.

ತ್ಯಾಗವು ಅನೇಕ ವಿಧವಾಗಿರುತ್ತದೆ. ಗೀತೆಯಲ್ಲಿ ಅವುಗಳನ್ನು ಮೆಟ್ಟಿಲು ಮೆಟ್ಟಿಲಾಗಿ ತಿಳಿಸಿರುತ್ತದೆ. ಕರ್ಮಫಲತ್ಯಾಗ, ಸಂಗತ್ಯಾಗ, ಸರ್ವಧರ್ಮತ್ಯಾಗ ಇವುಗಳೆಲ್ಲ ತ್ಯಾಗವೇ. ತ್ಯಾಗದಲ್ಲೆಲ್ಲ ಅನುಸ್ಯೂತವಾಗಿ ಒಂದು ಸ್ವಭಾವವಿರುತ್ತದೆ. ಮಮತಾತ್ಯಾಗವು ಅವುಗಳಲ್ಲೆಲ್ಲ ಇರುತ್ತದೆ. ಪರಮೇಶ್ವರನ ಸ್ಮರಣೆಯೂ ಧ್ಯಾನವೂ ಈ ತ್ಯಾಗಕ್ಕೆ ಉತ್ತಮ ಸಹಕಾರಿಯಾಗಿರುತ್ತವೆ. ತ್ಯಾಗದ ಉದ್ದೇಶವು ಬರಿಯ ತ್ಯಾಗವಲ್ಲ, ಪರಮೇಶ್ವರನ ಕಡೆಗೆ ತಿರುಗುವದೇ ಎಂಬುದನ್ನು ನಾವು ಮರೆಯದೆ ಇರಬೇಕು.

ಶಾಂತಿ : ಈ ದೈವಸಂಪತ್ತಿನ ಗುಣವನ್ನು ಕುರಿತು ಮಾತನಾಡುವ ಮುಂಚೆ ಶಾಂತಿ ಎಂದರೇನೆಂಬುದನ್ನು ನಾವು ಮನಸ್ಸಿಗೆ ತಂದುಕೊಳ್ಳುವದು ಅವಶ್ಯವು. ಜಗಳಕ್ಕೂ ಯುದ್ಧಕ್ಕೂ ವಿರುದ್ಧವಾಗಿರುವ ಮನೋಭಾವವನ್ನು ಶಾಂತಿಯೆಂದು ಕರೆಯುವದು ಈಗ ರೂಢಿಯಲ್ಲಿರುತ್ತದೆ. ಆದರೆ ಜಗಳವಿಲ್ಲದಿದ್ದ ಮಾತ್ರದಿಂದ, ಯುದ್ಧವಿಲ್ಲದ ಮಾತ್ರದಿಂದ, ಶಾಂತಿಯಾಗಲಾರದು. ಏಕೆಂದರೆ ಜಗಳವು ಅಥವಾ ಯುದ್ಧವು ನಿಂತಿರುವದು, ಮತ್ತೆ ಜಗಳದ

ಅಥವಾ ಯುದ್ಧದ ಸಿದ್ಧತೆಗಾಗಿಯೂ ಇರಬಹುದು. ಹುಲಿ ಮುಂತಾದ ಹಿಂಸ್ರಪ್ರಾಣಿಗಳು ತಮ್ಮ ಲಕ್ಷ್ಯವಾಗಿರುವ ಪ್ರಾಣಿಯ ಮೇಲೆ ಸರಿಯಾಗಿ ಬೀಳುವದಕ್ಕೆ ಹಿಂದಕ್ಕೆ ಹೋಗುತ್ತವೆ; ಯಾವದಾದರೊಂದು ದೂರವನ್ನು ಹಾರಬೇಕೆನ್ನುವವರು, ಅಥವಾ ಇಂತಿಷ್ಟು ಎತ್ತರಕ್ಕೆ ಹಾರಬೇಕೆನ್ನುವವರು ಝೋಕ್ ತೆಗೆದುಕೊಳ್ಳುವದಕ್ಕೆಂದು ಸ್ವಲ್ಪ ಹಿಂದಕ್ಕೆ ಹೋಗುತ್ತಾರೆ. ಈಗ ರಾಜಕೀಯ ಕ್ಷೇತ್ರದಲ್ಲಿ ಅನೇಕ ಜನಾಂಗಗಳು ಒಟ್ಟಾಗಿ ಸೇರಿ ಸಂಯುಕ್ತಜನಾಂಗಗಳ ಸಂಘವಾಗಿರುತ್ತವೆ; ಎಲ್ಲಾ ಜನರೂ ಸ್ವಾತಂತ್ರ್ಯವನ್ನು ಅನುಭವಿಸಿಕೊಂಡು ಶಾಂತಿಯಿಂದ ಬಾಳಬೇಕೆಂಬುದೇ ಆ ಸಂಘದ ಉದ್ದೇಶವಂತೆ. ಆದರೆ ಈ ಸಂಘದವರೇ ಒಬ್ಬರೊಡನೊಬ್ಬರು ಕಚ್ಚಾಡುತ್ತಿದಾರೆ. ಘಾತುಕಶಸ್ತ್ರಗಳನ್ನೂ ಬಾಂಬುಗಳನ್ನೂ ಕಡಿಮೆಮಾಡಬೇಕೆಂದು ಒಂದೆರಡು ಜನಾಂಗದವರೆಂದರೆ ಮಿಕ್ಕವರು ಅದಕ್ಕೆ ಒಪ್ಪುವದಿಲ್ಲ; ಎಲ್ಲರನ್ನೂ ಸಮಾನವಾಗಿ ಕಾಣಬೇಕೆಂದು ಒಬ್ಬರೆಂದರೆ ಮಿಕ್ಕವರು ಅದಕ್ಕೆ ಒಪ್ಪುವದಿಲ್ಲ. ಇಂಥ ಸಂಘವು ಶಾಂತಿಪ್ರಿಯವೆಂದು ಹೇಳಲಾದೀತೆ?

ನಮ್ಮ ದೇಶಕ್ಕೆ ಬ್ರಿಟಿಷರ ಆಳ್ವಿಕೆಯಲ್ಲಿ ಎಷ್ಟೋ ತೊಂದರೆಗಳಿಂದ ಬಿಡುಗಡೆಯಾಗಿತ್ತು. ಆಗ ದೇಶಕ್ಕೆ ಶಾಂತಿ ಲಭಿಸಿದೆ ಎಂದು ಅನೇಕರು ಭಾವಿಸಿದ್ದರು. ಆದರೆ ಆ ಸರ್ಕಾರದವರು ಇಲ್ಲಿಂದ ಕಾಲ್ತೆಗೆದರೊ ಇಲ್ಲವೊ, ಕೂಡಲೆ ಜನರು ಒಬ್ಬರನ್ನೊಬ್ಬರು ಕೆಂಗಣ್ಣಿನಿಂದ ನೋಡುವದಕ್ಕೆ ಮೊದಲು ಮಾಡಿದರು. ರಾಜರುಗಳು ಸೇನೆಯನ್ನು ಹೆಚ್ಚಿಸುತ್ತಾ ಬಂದರು; ಹಿಂದುಮುಸಲ್ಮಾನರಿಗೆ ಘೋರವಾದ ಕಲಹಗಳಾಗಿ ರಕ್ತಪಾತವೇ ಆಯಿತು. ಇಂಥ ಸ್ಥಿತಿಯನ್ನು ಹೇಗೆತಾನೆ ಶಾಂತಿಯೆಂದು ಕರೆಯಲಾದೀತು? ಗದ್ದಲವಿಲ್ಲದ ಮಾತ್ರದಿಂದ ಶಾಂತಿಯೆನಿಸುವದಿಲ್ಲ. ಆಲಸ್ಯನಿದ್ರಾದಿಗಳಿಂದ ತೆಪ್ಪಗಿರುವದು ಶಾಂತಿಯಲ್ಲ. ಕೈಯಲ್ಲಿ ಹರಿಯದಿರುವಾಗ ಎದುರಾಳಿಯು ಮಾಡುವ ಅಪಮಾನವನ್ನು ಸಹಿಸಿಕೊಂಡಿರುವದು ಶಾಂತಿಯಲ್ಲ. ಒಬ್ಬರ ಮನೆಯಲ್ಲಿ ಅವರ ಅಧೀನನಾಗಿ ಅನ್ನತಿಂದುಕೊಂಡಿರುವ ಸ್ವಭಾವದವನೊಬ್ಬನನ್ನು `ಹೂ ಆಗಲಿ, ತಿಂದುಹೋಗು' ಎಂದು ತಿರಸ್ಕಾರಭಾವದಿಂದ ಮನೆಯವನು ಹೇಳಿದರೆ 'ಅಂದುಕೊಳ್ಳಲಿ, ಇದನ್ನು ಬಿಟ್ಟರೆ ಎಲ್ಲಿಗೆ ಹೋಗುವದು? ಎಂದು ತೆಪ್ಪಗಿರುವವನನ್ನು ಶಾಂತನೆನ್ನಬಹುದೆ? ಬ್ರಿಟಿಷರು ರಾಜಕೀಯದಲ್ಲಿ ಕೈಹಾಕದಿದ್ದವರನ್ನು ಸುಮ್ಮನೆ ಬಿಟ್ಟು ಉಳಿದವರನ್ನು ತುಳಿದಿಟ್ಟುಕೊಂಡಿದ್ದರು; ಆದರೂ ಅವರಿಗೆ ಭೀತಿ ತಪ್ಪಿರಲಿಲ್ಲ. ಅಮೆರಿಕಾ ಮುಂತಾದ ಕಡೆಗಳಲ್ಲಿ ವಿವೇಕಾನಂದರು ಉಪನ್ಯಾಸವನ್ನು ಕೊಡುವಾಗ ತಮ್ಮ ಸರ್ಕಾರದ ಮೇಲೆ ಯಾವದೋ ಒಂದು ಅಪಪ್ರಚಾರವನ್ನು ಮಾಡುತ್ತಾರೆ ಎಂದು ಹೊಂಚುಹಾಕಿ ನೋಡುತ್ತಿದ್ದರಂತೆ! ಭೀತಿಯಿಂದ, ಅಧೈರ್ಯದಿಂದ, ಅಥವಾ ನಾಚಿಕೆಯಿಂದ ಸುಮ್ಮನಿರುವದೂ ಶಾಂತಿಯಲ್ಲ. ಇವೆಲ್ಲ ಶಾಂತ್ಯಭಾಸಗಳು.

ಹಾಗಾದರೆ ಶಾಂತಿಯೆಂದರೇನು? ಮನಸ್ಸಿನಲ್ಲಿ ವಿಕ್ಷೇಪವಿಲ್ಲದಿರುವದೇ. ಮನಸ್ಸು ಯಾವಾಗಲೂ ಅಲುಗಾಡುವ ಸ್ವಭಾವದ್ದಾಗಿರುತ್ತದೆ. ಗಾಢನಿದ್ರೆಯುಲ್ಲಿರುವ ಕಾಲವನ್ನು

ಬಿಟ್ಟರೆ ಮನಸ್ಸು ಯಾವಾಗಲೂ ಹೊಯ್ದಾಡುತ್ತಲೇ ಇರುತ್ತದೆ. ಇದರಿಂದ ಮನುಷ್ಯನಿಗೆ ಆಯಾಸವಾಗುತ್ತದೆ. ತಳಮಳಗೊಳ್ಳುತ್ತಾನೆ. ಮನಸ್ಸಿಗೆ ಗಾಬರಿಯನ್ನೂ ಅಂಜಿಕೆಯನ್ನೂ ಕೋಪವನ್ನೂ ಕಾಮಾದಿಗಳನ್ನೂ ಉಂಟುಮಾಡುವ ಮನಸ್ಸಿನ ಸ್ಥಿತಿಯು ಅಶಾಂತಿಯೆನ್ನಿಸುವದು: ಇದಕ್ಕೆ ವ್ಯತಿರಿಕ್ತವಾಗಿರುವದು ಶಾಂತಿಯು. ಯಾವದಾದರೊಂದು ವಸ್ತುವು ಬಂದರೂ ಹೋದರೂ, ನಮಗೆ ಭೀತಿ, ಹರ್ಷ, ಉದ್ವೇಗ-ಮುಂತಾದವು ಆಗುವದು ಅಶಾಂತಿಯಿಂದ. ಮನಸ್ಸನ್ನು ರಾಜಸಸ್ಥಿತಿಯಿಂದ ಸಾತ್ತ್ವಿಕ ಪರಿಸ್ಥಿತಿಗೆ ತಿರುಗಿಸಿಕೊಂಡವರಿಗೆ ಅದು ನೆಮ್ಮದಿಯನ್ನು ಹೊಂದುತ್ತದೆ. ಸಾತ್ತ್ವಿಕವಿಚಾರಗಳು, ಸದಾಚಾರಗಳು, ಸತ್ಸಹವಾಸ -ಇವುಗಳಿಂದ ಆಗುವ ನೆಮ್ಮದಿಯೇ ಶಾಂತಿಯೆನಿಸುವದು. ಯಾವ ಮನೋವೃತ್ತಿಯಿರುವಾಗ ಮತ್ತೊಬ್ಬರಿಗೆ ಉದ್ವೇಗವಾಗದಿರುವದೋ ಅದು ಶಾಂತಿಯೆನಿಸುವದು. ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ಹೊರಗಿನ ಪರಿಸ್ಥಿತಿ ಹೇಗೆ ಇರಲಿ ಅದನ್ನು ಸರಿಯಾದ ತಕ್ಕಡಿಯಂತೆ ಸಮತೂಕವಾಗಿಟ್ಟುಕೊಂಡಿರುವದು ಶಾಂತಸ್ಥಿತಿಯು. ಯಾವದಾದರೊಂದು ಅಶುಭವಾದ ಸುದ್ದಿಯನ್ನು ಕೇಳಿದರೆ, ತನ್ನನ್ನು ಯಾರಾದರೂ ಬಯ್ದರೆ, ಹೊಡೆಯುವದಕ್ಕೆ ಬಂದರೆ, ಅಪಮಾನಗೊಳಿಸಿದರೆ, ಅಥವಾ ಮುಂದೆ ನಮಗೇನಾದರೂ ಅನನುಕೂಲಗಳು ಒದಗಬಹುದೆಂಬ ಸೂಚನೆಗಳು ತೋರಿದರೆ, ಮನಸ್ಸು ಹೊಯ್ದಾಡುವದಕ್ಕೆ ಮೊದಲು ಮಾಡುತ್ತದೆ. ಇದು ಅಶಾಂತಿಯು. ಹೊರಗಿನ ಸಂನಿವೇಶವು ಹೇಗೇ ಇರಲಿ, ಮನಸ್ಸಿಗೆ ಏರುಪೇರು ಆಗದಂತೆ ಇಟ್ಟುಕೊಳ್ಳುವದು ಶಾಂತಪ್ರಕೃತಿಯೆನಿಸುತ್ತದೆ. ಯಾವನಿಗೆ ಇಂಥ ಶಾಂತಿಯು ಸ್ವಭಾವದಿಂದಲೇ ಇರುವದೋ ಆತನನ್ನು ದೈವಸಂಪತ್ತಿನವನೆಂದು ತಿಳಿಯಬಹುದು.

ಈಗ **ಅಪೈಶುನ :** ಪೈಶುನವೆಂದರೆ ಚಾಡಿಯು; ಇದಕ್ಕೆ ವಿರುದ್ಧವಾಗಿರುವದು ಅಪೈಶುನವು. ಹಿಂದೆ ಅಕ್ರೋಧದ ವಿಚಾರದಲ್ಲಿ ಬರಿಯ ಕ್ರೋಧವಿಲ್ಲದಿರುವದೇ ಅಕ್ರೋಧವಲ್ಲವೆಂದು ಹೇಳಿದ್ದಾಗಿದೆಯಷ್ಟೆ; ಇದರಂತೆಯೇ ಅಪೈಶುನವುವೆಂಬುದೂ ಬರಿಯ ಅಭಾವವಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ಪೈಶುನವೆಂಬುದು ಜನರಿಗೆ ಒಂದು ಹವ್ಯಾಸ. ಮತ್ತೊಬ್ಬರಿಗೆ ಕೇಡಾಗಲಿ ಎಂಬ ಕಾರಣದಿಂದ ಅವರ ಮೇಲೆ ಇಲ್ಲದ ಸಲ್ಲದ ವಿಷಯಗಳನ್ನು ಹಿಂದುಗಡೆಯಲ್ಲಿ ಪ್ರಚಾರಮಾಡುವ ಬಹಳ ದುಷ್ಟಸ್ವಭಾವವು ಕೆಲವರಲ್ಲಿ ಕಾಣದೆ ಇರಬಹುದು. ತಮಗೆ ಸಂಬಂಧಪಡದೆ ಇದ್ದರೂ ಒಬ್ಬರ ವಿಷಯವನ್ನು ಹಗುರವಾಗಿ ಮತ್ತೊಬ್ಬರಿಗೆ ಹೇಳುವದು, ವಿನೋದಕ್ಕಾಗಿ ಅಥವಾ ಹಾಸ್ಯಕ್ಕಾಗಿರಬಹುದು; ಆದರೆ ಅದರಲ್ಲಿ ಪೈಶುನದ ದೋಷವೇನೋ ತಪ್ಪಿದ್ದಲ್ಲ. ಪೈಶುನವನ್ನು ಒಂದಾನೊಂದು ಪ್ರಯೋಜನಕ್ಕಾಗಿಯೇ ಆಡಿರಬೇಕೆಂಬುದೇನೂ ಇಲ್ಲ. ಪೈಶುನವನ್ನು ತಿಳಿದೋ ತಿಳಿಯದೆಯೋ ಜನರು ಪ್ರಾರಂಭಿಸುವರು. ಆಮೇಲೆ ಅದಕ್ಕೆ ಅವರು ವಶರಾಗಿಬಿಡುತ್ತಾರೆ. ಅಲಸರಾದವರು ಒಂದು ಕಡೆಕುಳಿತು ಮಾತನಾಡುತ್ತಿರುವಾಗ ಕಾಲಕ್ಷೇಪಕ್ಕೆಂದು ಅವರ ಮನೆ ಇವರ ಮನೆಯ ಮಾತನ್ನು

ಆಡುವದಕ್ಕೆ ಆರಂಭಿಸುವರು; ನದಿಯಲ್ಲಿ ಸ್ನಾನಕ್ಕೆ ಹೋದಾಗ, ದಾರಿ ನಡೆಯುವಾಗ, ರೈಲಲ್ಲಿ ಕುಳಿತು ದೀರ್ಘಪ್ರಯಾಣಮಾಡುವಾಗ - ಇವೇ ಮುಂತಾದ ಸಂದರ್ಭಗಳಲ್ಲಿ ಕಾಡುಹರಟೆಗೆ ಅವಕಾಶವು ಬಹಳವಾಗಿರುತ್ತದೆ. ಅಂಥ ವೇಳೆಗಳಲ್ಲಿ ಹೇಗೋ ನಮಗೂ ತಿಳಿಯದೆಯೇ ಪೈಶುನವು ನಮ್ಮನ್ನು ಮಟ್ಟಹಾಕಿಬಿಡುತ್ತದೆ.

ಪೈಶುನಕ್ಕೆ ವಿರುದ್ಧವಾದ ಸ್ವಭಾವವೇ ಅಪೈಶುನವೆಂದು ಹೇಳಿದೆನಷ್ಟೆ. ಆ ಸ್ವಭಾವವನ್ನು ಹೇಗೆ ಸಂಪಾದಿಸಿಕೊಳ್ಳಬೇಕು? ಎಂದರೆ ನಾಲಗೆಗೆ ಉತ್ತಮವಾದ ಕೆಲಸವನ್ನು ಕೊಡಬೇಕು. ಅದಕ್ಕೆ ಮತ್ತೊಬ್ಬರಲ್ಲಿರುವ ಗುಣವನ್ನು ತೆಗೆದು ಹೊಗಳುವ ಅಭ್ಯಾಸವನ್ನು ಮಾಡಿಸಬೇಕು. ಜಪ, ಸ್ತೋತ್ರ, ಪಾರಾಯಣ, ಭಜನೆ - ಮುಂತಾದ ಉತ್ತಮವಾದ ಅಭ್ಯಾಸಗಳಲ್ಲಿ ಅದನ್ನು ನಿಲ್ಲಿಸಬೇಕು. ಆಗ ಅಪೈಶುನವು ತನಗೆ ತಾನೇ ಅಳವಡುತ್ತದೆ.

ತನಗೆ ಗೊತ್ತಿಲ್ಲದಿದ್ದರೂ ಮತ್ತೊಬ್ಬರ ವಿಷಯದಲ್ಲಿ ಸಣ್ಣಪುಟ್ಟ ಮಾತುಗಳನ್ನು ಆಡುವ ಪೈಶುನದಿಂದ ಆ ಮತ್ತೊಬ್ಬರಿಗೆ ಕೇಡಾಗಲಿ ಬಿಡಲಿ, ಅದರಿಂದ ಆಡಿದವರಿಗೇನೋ ದುಷ್ಫಲವು ಆಗಿಯೇ ತೀರುತ್ತದೆ. ಆ ಫಲವು ಏನೆಂಬುದು ಕಣ್ಣಿಗೆ ಕಾಣದೆ ಇರಬಹುದು.; ಆದರೆ ಸೂಕ್ಷ್ಮವಾಗಿ ಒಳಹೊಕ್ಕು ನೋಡುವವವರಿಗೆ ಅವಶ್ಯವಾಗಿ ಅದು ಗೊತ್ತಾಗುತ್ತದೆ. ಒಂದು ಸುತ್ತಿಗೆಯಿಂದ ಭಾರಿಯ ಕಬ್ಬಿಣದ ತುಂಡೊಂದನ್ನು ಎತ್ತೆತ್ತಿ ಹೊಡೆಯುವವನಿಗೆ ಕೈಗುಳ್ಳೆಯಾದದ್ದು ಆಮೇಲಾದರೂ ತಿಳಿಯುವದಷ್ಟೆ. ಪೈಶುನದ ದುಷ್ಫಲವೂ ಹೀಗೆಯೇ ಕಾಲಾನುಕಾಲಕ್ಕೆ ತನಗೇ ಗೊತ್ತಾಗುತ್ತದೆ. ಯಾವ ದುರ್ಗುಣವಾದರೂ ತನ್ನನ್ನು ಕೆಡಿಸುತ್ತದೆ; ಯಾವ ಸುಗುಣವಾದರೂ ತನ್ನನ್ನು ಉನ್ನತಿಗೆ ತರುತ್ತದೆ. ಉನ್ನತಿಗೆ ತರುವ ಗುಣಗಳಲ್ಲಿ ಅಪೈಶುನವೊಂದಾಗಿದೆ.



## ೧೫೧. ದೈವಸಂಪತ್ತು

**(4-12-49)**

ಹಿಂದಿನ ದಿನ ಅಪೈಶುನದ ವಿಚಾರವು ನಡೆದಿತ್ತು. ಅಪೈಶುನವೆಂಬುದು ಚಾಡಿಯ ಅಭಾವಮಾತ್ರದೆಂದು ತಿಳಿಯಬಾರದು. ಅದಕ್ಕೆ ವಿರುದ್ಧವಾದ ಪ್ರಯತ್ನವನ್ನು ಮಾಡುವದು ಎಂದೇ ಅದರ ಅರ್ಥವನ್ನು ಮಾಡಿಕೊಳ್ಳಬೇಕು. ಪೈಶುನವು ಕಪಿಯನ್ನು ಕುಣಿಸುವ ಹಾಗೆ ನಮ್ಮನ್ನು ಕುಣಿಸುತ್ತಿರುತ್ತದೆ. ಹಿಂದೆ ಕೆಲವರು ಕಪಿಗಳಿಗೆ ಭಾರತರಾಮಾಯಣಾದಿಗಳ ಪಾತ್ರಗಳ ವೇಷವನ್ನು ಹಾಕಿ ಅವುಗಳನ್ನು ಕುಣಿಸುತ್ತಿದ್ದರು. ನೋಡುವವರಿಗೆ ಆ ಕಪಿಗಳು ಆಯಾಭಾವವನ್ನು ಅಭಿನಯಿಸಿ ತೋರಿಸುವಂತೆ ಕಾಣುತ್ತಿದ್ದವು. ಆದರೆ ನಿಜವೇನೆಂದರೆ

ಕಪಿಗಳಿಗೆ ಹಗ್ಗವನ್ನು ಕಟ್ಟಿ ಕೈಯಲ್ಲಿ ಅದನ್ನು ಹಿಡಿದು ಎರಡಕ್ಕೂ ಬಲಕ್ಕೂ ತಿರುಗಿಸುತ್ತಾ ಒಂದು ಕೋಲನ್ನು ಎತ್ತುತ್ತಿದ್ದರು. ಅದರಿಂದ ಕಪಿಗೆ ಅಂಜಿಕೆಯ ಅಭ್ಯಾಸಬಲದಿಂದ ಆಯಾ ಭಾವವನ್ನು ತೋರಿಸುವ ಹಾಗೆ ಆಗುತ್ತಿತ್ತು. ಕಪಿಯನ್ನಾಡಿಸುವವನು ತನ್ನ ಲಾಭಕ್ಕಾಗಿ ಕಪಿಯನ್ನು ಹಾಗೆ ಹಿಂಸಿಸುತ್ತಿದ್ದನು ; ಹೀಗೆಯೇ ಪೈಶುನವೆಂಬುದು ನಮ್ಮನ್ನು ಹಿಂಸಿಸುತ್ತಾ ಇರುತ್ತದೆ. ಆದರೂ ನಮಗೆ ಅಭ್ಯಾಸಬಲದಿಂದ ಅದೇ ಸ್ವಾಭಾವಿಕವಾಗಿ ಕಾಣಿಸುತ್ತಾ ಇರುತ್ತದೆ. ಪಿಶುನತ್ವವು ಯಾವದೋ ಅಲ್ಪ ಕಾರಣದಿಂದ ಪ್ರಾರಂಭವಾಗುತ್ತದೆ. ; ಆಮೇಲೆ ನಮಗೂ ತಿಳಿಯದೆಯೇ ಅದಕ್ಕೆ ವಶವಾಗಿಬಿಡುತ್ತೇವೆ. ಹಾಸ್ಯಕ್ಕಾಗಿಯೇ ವಿನೋದಕ್ಕಾಗಿಯೋ ಮತ್ತೊಬ್ಬರ ವಿಷಯವನ್ನು ಕುರಿತು ಪ್ರಸ್ತಾಪಿಸುತ್ತೇವೆ. ಆ ಮೇಲೆ ಅದೇ ನಮ್ಮ ಪದ್ಧತಿಯಾಗಿ ಪರಿಣಮಿಸಿಬಿಡುತ್ತದೆ. ಕೆಲವರು ಮತ್ತೊಬ್ಬರನ್ನು ಹೊಗಳುವ ನೆಪದಿಂದಲೇ ಅವರಲ್ಲಿ ದೋಷಾರೋಪಣೆಯನ್ನು ಮಾಡುತ್ತಾ ಪೈಶುನವನ್ನು ಅಭ್ಯಾಸಮಾಡಿಕೊಳ್ಳುತ್ತಾರೆ. ಕೇಳಿದವರು ಮೊದಮೊದಲು ಇದು ವಿನೋದಕ್ಕಾಗಿ ಆಡಿದ ಮಾತೆಂದು ಬಗೆದರೂ ಬರುಬರುತ್ತಾ ಅದೇ ನಿಜವೆಂದು ನಂಬುವದಕ್ಕೆ ಮೊದಲುಮಾಡುತ್ತಾರೆ. ಮತ್ತೊಬ್ಬರ ವಿಷಯವನ್ನು ಹೇಳುವಾಗ ಇಲ್ಲದ ಸಲ್ಲದ ವಿಷಯಗಳನ್ನು ಕಥೆಯ ಸವಿಗಾಗಿ ಸೇರಿಸಿ ಹೇಳುವ ಪ್ರಲೋಭನಕ್ಕೆ ಕೆಲವರು ವಶರಾಗುತ್ತಾರೆ. ಬಳಿಕ ಅವರಿಗೂ ತಿಳಿಯದೆಯೇ ಪೈಶುನವು ಅವರನ್ನು ವಶಕ್ಕೆ ತೆಗೆದುಕೊಂಡುಬಿಡುತ್ತದೆ. ವರ್ತಮಾನ ಪತ್ರಿಕೆಗಳಲ್ಲಿ ಚಂದಾದಾರರ ಸಂಖ್ಯೆಯನ್ನು ಹೆಚ್ಚಿಸುವ ಆಸೆಯಿಂದಲೂ ಜನರ ಮನಸ್ಸನ್ನು ವಿನೋದಗೊಳಿಸಬೇಕೆಂಬ ಕುತೂಹಲದಿಂದಲೂ ಕೆಲವು ಸುಳ್ಳುಗಳನ್ನು ವೈಚಿತ್ರ್ಯಕ್ಕಾಗಿ ಬರೆಯಿಸುವ ಹವ್ಯಾಸವು ಕೆಲವು ಸಂಪಾದಕರಲ್ಲಿ ಕಂಡುಬರುತ್ತದೆ. ಆದರೆ ಅಂತ್ಯದಲ್ಲಿ ಅದು ಆ ಪತ್ರಿಕೆಗಳಿಗೆ ಅಪಕೀರ್ತಿಯನ್ನೇ ತರುವದಕ್ಕೆ ಕಾರಣವಾಗುತ್ತದೆ. ಹೀಗೆ ಪೈಶುನದಿಂದಾಗುವ ದುಷ್ಪರಿಣಾಮವನ್ನು ಕಂಡವರು ಅದಕ್ಕೆ ವಿರುದ್ಧವಾದ ಅಪೈಶುನವನ್ನು ಕೈಗೊಳ್ಳಬೇಕಾಗುತ್ತದೆ. ಸ್ವಾಭಾವಿಕವಾಗಿಯೇ ಈ ಗುಣವುಳ್ಳವರನ್ನು ನಾವು ದೈವೀಸಂಪತ್ತಿನವರೆಂದು ಎಣಿಸುತ್ತೇವೆ.

ಅಪೈಶುನವು ನಮಗೆ ಅಳವಡಬೇಕಾದರೆ ಮನಸ್ಸು ಪರರ ದೋಷವನ್ನು ಆಲೋಚಿಸದಿರುವಂತೆಯೂ ವಾಕ್ಕು ಪರರ ದೋಷವನ್ನು ಆಡದಂತೆಯೂ ನೋಡಿಕೊಳ್ಳಬೇಕು. ಹಾಗಿಲ್ಲದಿದ್ದರೆ ನಮಗೂ ತಿಳಿಯದಂತೆಯೇ ಪೈಶುನವು ನಮ್ಮನ್ನು ಸೆರೆಹಿಡಿದುಬಿಡುತ್ತದೆ. ಪೈಶುನಕ್ಕೆ ಒಬ್ಬರಲ್ಲಿ ಇಲ್ಲದ ದೋಷವನ್ನು ಕೂಡ ಆರೋಪಿಸುವ ಸ್ವಭಾವವಿರುತ್ತದೆ ; ಆದರೆ ಅದರ ವಿರುದ್ಧವಾಗಿ ವರ್ತಿಸುವದಕ್ಕೆ ಪ್ರಯತ್ನಿಸುವಾಗ ನಾವು ಇಲ್ಲದ ಗುಣವನ್ನಾದರೂ ಕಲ್ಪಿಸಿ ಜನರನ್ನು ಬಣ್ಣಿಸಬೇಕಾದದ್ದೇನೂ ಇಲ್ಲ. ಲೋಕದಲ್ಲಿ ಯಾರೊಬ್ಬರೂ ಗುಣಹೀನರಿರುವದಿಲ್ಲ. ಅವರವರಲ್ಲಿರುವ ಗುಣವನ್ನು ಕಂಡು ಸಂತೋಷಪಡುವದಕ್ಕೂ ಪ್ರಚಾರಪಡಿಸುವದಕ್ಕೂ ಏತಕ್ಕೆ ಪ್ರಯತ್ನಿಸಬಾರದು? ಇದೇ ಅಪೈಶುನಕ್ಕೆ ಸಹಾಯವಾಗಿರುವ ಸಾಧನು. ಮಹಾತ್ಮರ ಕಣ್ಣಿಗೆ ಎಲ್ಲೆಲ್ಲಿಯೂ ದೈವಿಕ

ಗುಣಗಳು ಕಾಣುತ್ತಲೇ ಇರುತ್ತವೆ. ನಾವು ಅವರ ದೃಷ್ಟಿಯನ್ನು ಅವಲಂಬಿಸಿ ಅಲ್ಲಲ್ಲಿರುವ ಗುಣಗಳನ್ನು ಮೆಚ್ಚುವದನ್ನು ಅಭ್ಯಾಸಮಾಡಬೇಕು. ಆಗ ಅಪೈಶುನಕ್ಕೆ ನಾವು ಯೋಗ್ಯರಾಗುವೆವು.

**ದಯಾ ಭೂತೇಷು :** ಪ್ರಾಣಿಗಳಲ್ಲಿ ದಯೆಯಿರುವದೂ ಒಂದು ದೈವಸಂಪತ್ತಿನ ಗುಣವು. ಹಿಂದೆ ಅಹಿಂಸೆ ಎಂಬ ಗುಣವು ಬಂದಿತ್ತು. ಅಲ್ಲಿ ನಾವು ಅನಿವಾರ್ಯವಾದ ಹಿಂಸೆಗೆ ಅವಕಾಶವನ್ನು ಕೊಟ್ಟು ಅಹಿಂಸಾಶಬ್ದಕ್ಕೆ ಅರ್ಥವನ್ನು ಮಾಡಿದ್ದೆವು. ಭೂತದಯೆ ಎಂಬುದು ನಿಜವಾದ ಅಹಿಂಸೆಗೆ ತಳಹದಿ. ಯಾರಿಗೆ ಭೂತಗಳಲ್ಲಿ ದಯೆಯಿರುತ್ತದೆಯೋ ಅವರಿಂದ ಯಾರಿಗೂ ಹಿಂಸೆಯು ಆಗುವ ಸಂಭವವಿಲ್ಲ. ಆದ್ದರಿಂದ ಅಹಿಂಸೆಗೆ ಮೂಲಸ್ತಂಭದಂತಿರುವ ದಯಾಗುಣವನ್ನು ದೈವಸಂಪತ್ತಿನಲ್ಲಿ ಬೇರೆಯಾಗಿ ಸೇರಿಸಿರುವದು ಯುಕ್ತವಾಗಿದೆ.

ಸ್ವಭಾವದಿಂದಲೇ ದಯಾಗುಣವನ್ನು ತೋರ್ಪಡಿಸಿಕೊಳ್ಳುವದು ಈಶ್ವರನ ಅನುಗ್ರಹದಿಂದ ಬಂದಿರುವ ಒಂದು ಗುಣವು. ಸಾಮಾನ್ಯರಿಗೆ ಒಂದಿಷ್ಟು ದಯೆಯನ್ನು ತೋರಿಸಿದ ಮಾತ್ರದಿಂದ ಅಹಂಕಾರವು ಎದ್ದುಕೊಳ್ಳುತ್ತದೆ. ದಯೆಯು ಕಾಣಿಸಿಕೊಳ್ಳುವದಕ್ಕಿಂತಲೂ ನಾವು ದಯಾವಂತರೆಂಬುದು ಜನರಿಗೆ ಗೊತ್ತಾದರೆ ಸಾಕು ಎಂಬ ಮನೋಭಾವವು ಜನರಲ್ಲಿ ಸುಲಭವಾಗಿ ಉಂಟಾಗುತ್ತದೆ. ಆದರ ಅದು ದಂಭವೆನಿಸೀತೇ ಹೊರತು ದಯೆಯಾಗಲಾರದು. `ಅಯಂ ಸ್ವಭಾವಃ ಸ್ವತ ಏವ ಯತ್ಪರಶ್ರಮಾಪನೋದಪ್ರವಣಂ ಮಹಾತ್ಮನಾಮ್' ಎಂದಂತೆ ಸ್ವಾಭಾವಿಕವಾಗಿಯೇ ಮತ್ತೊಬ್ಬರಲ್ಲಿ ಕರುಣೆಯಿರುವದೇ ನಿಜವಾದ ದಯೆ. ಬಡವರು, ಅಜ್ಞರು, ರೋಗಿಗಳು, ಬಗೆಬಗೆಯಿಂದ ವ್ಯಥೆಪಡುತ್ತಿರುವವರು, ಅಂಗಹೀನರು -ಮುಂತಾದವರಲ್ಲಿ ಕನಿಕರ ಉಂಟಾಗುವದು ವರ್ತಮಾನ ಪತ್ರಿಕೆಗಳಲ್ಲಿ ನಮ್ಮ ಹೆಸರು ಪ್ರಕಟವಾಗಬೇಕೆಂದಲ್ಲ; ನಮ್ಮ ಹೃದಯಕ್ಕೆ ಪರಿಶುದ್ಧ್ಯವಾಗಬೇಕೆಂಬ ಕಾರಣದಿಂದ.

ಪಶ್ಚಿಮಪ್ರದೇಶದಲ್ಲಿ ಬಡವರು ಜನರನ್ನು ಕಾಡದಂತೆ ಏರ್ಪಾಡುಗಳನ್ನು ಮಾಡಿ `ದರಿದ್ರಹ ಭವನಗಳನ್ನು' ನಿರ್ಮಿಸಿರುತ್ತಾರೆ; ತಾವೇ ಸ್ವತಂತ್ರರಾಗಿ ದುಡಿಯಲಾರದ ಬಡವರಾದವರು ಆ ಭವನಗಳಿಗೆ ಹೋಗಿ ಅವರಿಗೆ ಕೊಟ್ಟ ಕೆಲಸವನ್ನು ಮಾಡಿ ತಮ್ಮ ದಿನದಿನದ ಜೀವನವನ್ನು ಸಂಪಾದಿಸಬೇಕಾಗುತ್ತದೆ. ಬಡವರೆಂದು ನಟಿಸುತ್ತಾ ಸಮಯಾಸಮಯಗಳನ್ನು ಲಕ್ಷಿಸದೆ ಮನೆಗಳ ಮುಂದೆ ನಿಂತು ಕೂಗುತ್ತಾ ಜನರಿಗೆ ಹಿಂಸೆಕೊಡುವ ಎಷ್ಟೋ ಭಿಕ್ಷುಕರು ನಮ್ಮ ದೇಶದಲ್ಲಿಯೂ ಇರುತ್ತಾರೆ. ಅವರ ಕಾಟವನ್ನು ತಪ್ಪಿಸಿಕೊಳ್ಳುವದಕ್ಕೆ ಭಿಕ್ಷುಕರ ಕಾನೂನನ್ನು ಮಾಡಿ ಅವರಿಗೆ ಶಿಕ್ಷೆ ವಿಧಿಸಬೇಕೆಂದು ಕೆಲವ ಭಾವನೆಯಿದೆ. ಮೋಸಗಾರರಿಗೆ ತಕ್ಕ ದಂಡನೆಯಿರಬೇಕಾದದ್ದು ನ್ಯಾಯವೇ ಸರಿ. ಆದರೆ ಕಾನೂನಿನಿಂದ ಭಿಕ್ಷೆಯನ್ನು ತಪ್ಪಿಸಿದರೆ ದಯಾಗುಣದ ಅಭ್ಯಾಸಕ್ಕೆ ಅವಕಾಶವೇ ಇಲ್ಲದಂತೆ

ಆಗಿಬಿಟ್ಟಿತು. ಭಿಕ್ಷುಕರ ಕಾನೂನು, ಬಡವರ ಮನೆಗಳು- ಮುಂತಾದವುಗಳನ್ನು ಏರ್ಪಾಡುಮಾಡುವ ಕಡೆಗಳಲ್ಲಿ ಆ ಕಾನೂನನ್ನು ಜಾರಿಗೆ ತರುವದರಲ್ಲಿ ಎಷ್ಟೋ ಅನ್ಯಾಯಗಳೂ ಆಗುವ ಸಂಭವವಿದೆ ; ಆ ಕಾನೂನಿನ ಹಿಂಸೆಯನ್ನು ತಪ್ಪಿಸಿಕೊಳ್ಳುವದಕ್ಕೆ ಯತ್ನಿಸುವ ಕೆಲವರು, ದಯಾವಂತರಾದವರ ಬಳಿಗೆ ಬಂದು ಭಿಕ್ಷೆಯನ್ನು ಬೇಡುವದಕ್ಕೆ ಬದಲು `ಈ ಬೆಂಕಿಪೆಟ್ಟಿಗೆಯನ್ನು ಕೊಂಡುಕೊಳ್ಳುತ್ತೀರ?' `ಈ ಗುಂಡುಸೂಜಿಗಳು ಬೇಕೇನು?' ಎಂದು ಮುಂತಾಗಿ ಚಿಲ್ಲರೆಸಾಮಾನುಗಳನ್ನು ಮಾಡುವ ನೆಪದಿಂದ ಭಿಕ್ಷೆಬೇಡುತ್ತಾರೆಂತಲೂ ಅವರು ಮುಖಚಿಹ್ನೆಗಳಿಂದ ಅವರು ನಿಜವಾಗಿ ಯಾಚಕರೇ ಎಂಬುದನ್ನು ತಿಳಿದು ಆ ಉದಾರಸ್ವಭಾವದ ಮಹಾಶಯರು ಅವುಗಳಿಗೆ ಹೆಚ್ಚಿನ ಬೆಲೆಯನ್ನೇ ಕೊಟ್ಟು ಕೊಂಡುಕೊಳ್ಳುತ್ತಾರೆಂತಲೂ ತಿಳಿಯಬಂದಿದೆ. ಆಲಿವರ್ ಗೋಲ್ಡ್‌ಸ್ಮಿತ್ ಎಂಬಾತನು ಇಂಥ ಭಿಕ್ಷುಕರ ಮೇಲೆ ರೇಗಿದವನಂತೆ ನಟಿಸಿ ಪ್ರಚ್ಛನ್ನವಾಗಿ ತನ್ನ ದಯಾಗುಣವನ್ನೂ ಹೀಗೆ ತೋರಿಸುತ್ತಿದ್ದನೆಂದು ಅವನ ಜೀವನಚರಿತ್ರೆಯಿಂದ ತಿಳಿದುಬಂದಿದೆ. ದಯಾಗುಣವನ್ನು ಅಭ್ಯಾಸಮಾಡುವದಕ್ಕೆ ಎಂಥ ಅವಕಾಶವಾಯಿತು!

ಇದನ್ನು ತಿಳಿದು ನಾವು ಮತ್ತೊಬ್ಬರಲ್ಲಿ ದಯೆಯನ್ನು ತೋರಿಸುವ ಅವಕಾಶವು ದೊರೆಯುವದು ನಮ್ಮ ಭಾಗ್ಯವೆಂದು ತಿಳಿಯಬೇಕು. ಭಿಕ್ಷುಕರೇ ಮುಂತಾದವರು ಮತ್ತೊಬ್ಬರ ಸಹಾಯವನ್ನು ಅನವಶ್ಯವಾಗಿ ಕೋರಬಾರದೆಂಬುದು ಬೇರೆಯ ವಿಷಯ. ಭಿಕ್ಷಾವೃತ್ತಿಜೀವನವು ಮಾನವನಿಗೆ ಲಜ್ಜಾಸ್ಪದವಾದದ್ದು ಎಂಬ ಭಾವವನ್ನು ಸರಿಯಾದ ಶಿಕ್ಷಣದಿಂದ ಆ ಜನರಿಗೆ ತಿಳಿಸಿಕೊಡುವದು ತಪ್ಪಲ್ಲ; ಆದರೆ ಅಷ್ಟು ಮಾತ್ರದಿಂದ ನಮ್ಮ ಹೃದಯವು ಕಲ್ಲಾಗಬೇಕಾದದ್ದೇನೂ ಇಲ್ಲ. ಈಶ್ವರನು ಅಪಾರಕರುಣೆಯಿಂದ ಮಾನವನಿಗೆ ದಯಪಾಲಿಸಿರುವ ಸದ್ಗುಣಗಳಲ್ಲಿ ದಯೆಯೆಂಬುದು ಒಂದು ಉತ್ತಮ ಗುಣವೆಂದು ನಾವಾ ಭಾವಿಸಬೇಕು. ದಯೆಯನ್ನು ತೋರಿಸುವದಕ್ಕೆ ಸಿಕ್ಕುವ ಸಂದರ್ಭಗಳನ್ನೆಲ್ಲ ನಾವು ದೈವಾನುಗ್ರಹವೆಂದೇ ಭಾವಿಸಬೇಕು. ನಾವು ದಯಾವಂತರು ಎಂಬ ಹೆಮ್ಮೆಯನ್ನು ಪ್ರಕಟಿಸುವದು ನಮ್ಮ ಸ್ವಭಾವಕ್ಕೆ ಲಾಂಛನಾಸ್ಪದವಾದದ್ದೆಂಬುದನ್ನು ಮರೆಯದೇ ನೆನಪಿನಲ್ಲಿಡಬೇಕು.

ಈ ದೈವಸಂಪತ್ತಿನ ಗುಣದ ಹೆಸರನ್ನು `ದಯಾ ಭೂತೇಷ' (ಪ್ರಾಣಿಗಳಲ್ಲಿ ದಯೆ) ಎಂದು ಹೇಳಿರುವದನ್ನು ಲಕ್ಷಿಸತಕ್ಕದ್ದಾಗಿದೆ. ಮನುಷ್ಯನು ಮನುಷ್ಯರಲ್ಲಿ ದಯೆಯನ್ನು ತೋರಿಸುವದು ಆ ಇನ್ನೊಬ್ಬನ ಕೃತಜ್ಞತೆಯ ಸಂಪಾದಿಸುವದಕ್ಕಾಗಬಹುದು. ಆದರೆ ಪ್ರಾಣಿಗಳಲ್ಲಿ ದಯೆಯನ್ನು ತೋರಿಸುವದು ಹಾಗಲ್ಲ. ಪಾಶ್ಚಾತ್ತ್ಯರಲ್ಲಿ ಸುಂದರವಾದ ಪಕ್ಷಿಗಳ ಗರಿಗಳು, ಪ್ರಾಣಿಗಳ ಚರ್ಮ-ಮುಂತಾದವುಗಳಿಗಾಗಿ ಪ್ರಾಣಿಗಳನ್ನು ಹಿಂಸಿಸುವದು ಬಹಳ ರೂಢಿಯಲ್ಲಿದೆ. ಕೆಲವು ದೇಶಗಳಲ್ಲಿ ಗ್ರಾಮ್ಯಪ್ರಾಣಿಗಳೆಂದು ಕಾನೂನಿನಲ್ಲಿ ಗಣಿಸದ

ಮೂಲವೇ ಮುಂತಾದ ಪ್ರಾಣಿಗಳನ್ನು ಹಿಂಸಿಸುವದೂ ಬದುಕಿದ್ದಂತೆಯೇ ಸುಡುವದೂ ತಪ್ಪಲ್ಲವೆಂದು ಸರ್ಕಾರದವರೂ ಕಾನೂನುಮಾಡಿರುತ್ತಾರೆ. ಮನುಷ್ಯನ ಆಹಾರ, ಶರೀರದ ಭೂಷಣ, ಹೊದಿಕೆ, ಬೇಟೆ, ಭೌತಿಕಶಾಸ್ತ್ರದ ಶೋಧನೆಗಳು-ಮುಂತಾಗಿ ಯಾವ ಕೆಲಸಕ್ಕಾದರೂ ಪ್ರಾಣಿಗಳನ್ನು ಹಿಂಸಿಸಬಹುದೆಂದು ಆ ದೇಶದ ಜನಗಳ ಭಾವನೆಯಿದೆ. ಉತ್ತಮವಾದ ನರಿಯ ಚರ್ಮಗಳಿಗಾಗಿಯೇ ಒಂದು ಜಾತಿಯ ನರಿಯನ್ನುಸಾಕುತ್ತಿದ್ದಾರೆಂದು ಒಂದು ಪತ್ರಿತ್ರಿಕೆಯಲ್ಲಿ ನಾನು ಓದಿದ್ದೇನೆ. ಶಾರೀರಕ ಶಾಸ್ತ್ರಗ್ರಂಥಗಳಲ್ಲಿ `ಕಪ್ಪೆಯ ತಲೆಯನ್ನು ಕಡಿದುಹಾಕಿರಿ' ಎಂಬ ಮಾತು ಭೌತಿಕಪ್ರಯೋಗಕ್ಕಾಗಿ ಎಷ್ಟೋ ಸಲ ಬರುವದುಂಟು. ಪಾಪ! ಆ ಪ್ರಾಣಿಗಳಿಗೆ ಅದು ಹೇಗೆ ಆದೀತೆಂಬುದನ್ನು ಯಾರು ಬಲ್ಲರು? ಇಂಥ ಪಾಶ್ಚಾತ್ಯದೇಶಗಳಲ್ಲಿಕೂಡ ಈಗ ಮನುಷ್ಯನ ಸ್ವಾಭಾವಿಕವಾದ ದಯಾಗುಣವು ತನ್ನ ಪ್ರತಿಕ್ರಿಯೆಯನ್ನು ತೋರಿಸುತ್ತಿದೆ. ಎಷ್ಟೋ ಜನರು ಈಗ ಸಸ್ಯಾಹಾರದ ಹೆಚ್ಚುಗಾರಿಕೆಯನ್ನು ಆ ದೇಶದಲ್ಲಿಯೂ ಕೊಂಡಾಡುತ್ತಿದ್ದಾರೆ; ಭೌತಿಕಶಾಸ್ತ್ರಪ್ರಯೋಗಕ್ಕೆ ಕೂಡ.ಪ್ರಾಣಿಗಳನ್ನು ಹಿಂಸಿಸುವದು ಯೋಗ್ಯವಲ್ಲವೆಂದು ಅನೇಕರು ಆ ವಿಷಯದಲ್ಲಿ ದೊಡ್ಡ ದೊಡ್ಡ ಗ್ರಂಥಗಳನ್ನು ಬರೆಯುತ್ತಿದ್ದಾರೆ. ಕೆಲವರು ಪ್ರಾಣಿದಯಾಸಂಘಗಳನ್ನು ಏರ್ಪಡಿಸುತ್ತಾರೆ. ಕೆಲವು ದಯಾರ್ದ್ರಹೃದಯರಾದವರು "ಭೂತದಯಾ ದಿನ" (Animals Day) ಎಂಬ ವಾರ್ಷಿಕ ದಿನವೊಂದನ್ನು ಏರ್ಪಡಿಸಿಕೊಂಡು ಈ ವಿಷಯದಲ್ಲಿ ಸಭೆಗಳನ್ನು ಮಾಡುವದು ಮುಂತಾದ ರೀತಿಗಳಿಂದ ಪ್ರಾಣಿಗಳಿಗೆ ಆಗುವ ನಿವಾರ್ಯಹಿಂಸೆಗಳನ್ನು ನಿಲ್ಲಿಸುವದಕ್ಕೆ ಪ್ರಯತ್ನಿಸುತ್ತಿದ್ದಾರೆ. ಪ್ರಾಣಿದಯೆ ಎಂಬುದು ಮನುಷ್ಯನ ಕರ್ತವ್ಯವೆಂಬುದಕ್ಕೆ ಈ ಪ್ರತಿಕ್ರಿಯೆಯೂ ಒಂದು ಸಾಕ್ಷಿಯೆಂದು ನಾವು ಧಾರಾಳವಾಗಿ ನಂಬಬಹುದು.

ನಮ್ಮ ದೇಶದಲ್ಲಿ ಭೂತಗಳಲ್ಲಿ ದಯೆ ಎಂಬುದು ವೇದಕಾಲದಿಂದಲೂ ಸರ್ವಸಮ್ಮತವಾಗಿ ಬಂದಿರುವ ಒಂದು ಗುಣವಾಗಿದೆ. ಯಾವ ಪ್ರಾಣಿಗಳನ್ನೂ ಅನವಶ್ಯವಾಗಿ ಹಿಂಸಿಸಕೂಡದು ಎಂದು ಶಾಸ್ತ್ರದಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ಜೈನಬೌದ್ಧರ ಕಾಲದಲ್ಲಿ ಯಜ್ಞಾದಿಗಳಿಗಾಗಿ ಕೂಡ ಪ್ರಾಣಿಗಳನ್ನು ಕೊಲ್ಲಕೂಡದು ಎಂಬ ವಾದವು ಜಗತ್ತಿನಲ್ಲೆಲ್ಲ ಹರಡಿತು. ಮಾಂಸಾಹಾರವು ಬಹುಮಟ್ಟಿಗೆ ಕಡಿಮೆಯಾಯಿತು. ಪ್ರಾಣಿಗಳಲ್ಲಿ ಹೆಚ್ಚಿನ ದಯೆಯನ್ನು ತೋರಿಸುವ ಆಚರಣೆಗಳು ಹರಡಿದವು. ಕೆಲವು ವೈದ್ಯಗ್ರಂಥಗಳಲ್ಲಿ ಪಶುವೈದ್ಯವನ್ನು ಕುರಿತು ಎಷ್ಟೋ ವಿಷಯಗಳಿಗೆ ಅವಕಾಶವು ದೊರೆಯಿತು. ಗೀತೆಯಲ್ಲಿ ಭೂತಗಳಲ್ಲಿ ದಯೆಯಿರಬೇಕು, ಎಲ್ಲಾ ಭೂತಗಳಲ್ಲಿಯೂ ಸಮಬುದ್ಧಿಯಿರಬೇಕು-ಎಂದು ಮುಂತಾಗಿ ಮನುಷ್ಯರ ಜೊತೆಗೆ ಪ್ರಾಣಿಗಳನ್ನು ಸೇರಿಸಿರುವದನ್ನು ನಾವು ಮನದಂದರೆ ಒಂದು ಪ್ರಶ್ನೆಯು ಎದ್ದುಕೊಳ್ಳುತ್ತದೆ. ಭೂತದಯೆಯಿಂದ ಸಾಧಕನಿಗೆ ಆಗುವ ಪ್ರಯೋಜನವೇನು? ಎಂದರೆ ಅಧ್ಯಾತ್ಮಜ್ಞಾನವೂ ಪರಮೇಶ್ವರಭಕ್ತಿಯೂ ಪರಿಪೂರ್ಣವಾಗಬೇಕಾದರೆ ಇದು ಅತ್ಯಂತ ಅವಶ್ಯವಾಗಿರುತ್ತದೆ. `ಭೂತೇಷು ಭೂತೇಷು ವಿಚಿತ್ಯ ಧೀರಾಃ ಪ್ರೇತ್ಯಾಸ್ಮಾಲ್ಲೋ-

ಕಾದಮೃತಾ ಭವನ್ತಿ' ( ಸ್ಥಾವರಜಂಗಮಾತ್ಮಕವಾದ ಭೂತಗಳಲ್ಲೆಲ್ಲ ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಂಡ ವಿವೇಕಿಗಳೇ ನಾನು ನನ್ನದೆಂಬ ಅವಿದ್ಯೆಯನ್ನು ದಾಟಿ ಅಮೃತರಾಗುವರು) ಎಂದು ಶ್ರುತಿಯಿದೆ. `ಈಶ್ವರನು ಜೀವಕಲೆಯಿಂದ ಸಮಸ್ತ ಪ್ರಾಣಿಗಳಲ್ಲಿಯೂ ಪ್ರವಿಷ್ಟನಾಗಿರುವನೆಂದು ತಿಳಿದು ಸಂನ್ಯಾಸಿಯಾದವನು ಸಮಸ್ತಪ್ರಾಣಿಗಳನ್ನೂ ಗೌರವಿಸಬೇಕು'-ಎಂದು ಭಾಗವತಪುರಾಣದಲ್ಲಿ ಹೇಳಿರುತ್ತದೆ. ಸರ್ವಭೂತಗಳಲ್ಲಿಯೂ ಪರಮಾತ್ಮನು ಸಮನಾಗಿಯೇ ಇದ್ದುಕೊಂಡಿರುವನು-ಎಂದು ಗೀತೆಯಲ್ಲಿ ಹೇಳಿರುವದು ನಮಗೆಲ್ಲ ತಿಳಿದೇ ಇದೆ. ಆದ್ದರಿಂದ ಭೂತದಯೆ ಎಂಬುದು ಅಧ್ಯಾತ್ಮಸಾಧಕನಿಗೆ ಅತ್ಯವಶ್ಯವಾದದ್ದು.

ಹಳೆಯ ಸಂಪ್ರದಾಯಗಳಲ್ಲಿ ಈಗ ನಾಮಮಾತ್ರಕ್ಕೆ ಉಳಿದಿರುವವು ಕೆಲವು, ಹೊರಗಿನ ಆಕಾರವು ಮಾತ್ರವು ಉಳಿದುಕೊಂಡು ಒಳಗಿನ ತಿರುಳು ಹೋಗಿರುವವು ಕೆಲವು-ಹೀಗೆಲ್ಲ ಕಾಲಗತಿಯಿಂದ ಆಗಿರುತ್ತದೆ. ಪ್ರಾಣಿಗಳ ವಿಷಯದಲ್ಲಿ ದಯೆತೋರಿಸುವದೆಂಬ ಸಂಪ್ರದಾಯವು ಅಂಥವುಗಳಲ್ಲಿ ಒಂದಾಗಿರುತ್ತದೆ. ಜನರು ಕೆಲವು ಸಂದರ್ಭಗಳಲ್ಲಿ ಇರುವೆಗೂಡುಗಳನ್ನು ಹುಡುಕಿಕೊಂಡು ಹೋಗಿ ಅವಕ್ಕೆ ಆಹಾರವನ್ನು ಹಾಕುವದನ್ನು ನೀವು ನೋಡಿರಬಹುದು ; ಆದರೆ ಅದೇ ಜನರು ದೊಡ್ಡದೊಡ್ಡವಾದ ನಾಯಿ, ಕತ್ತೆ, ಕುರಿ, ಆಡು, ಹಸು-ಮುಂತಾದ ಪ್ರಾಣಿಗಳಲ್ಲಿ ಎಷ್ಟು ಕ್ರೌರ್ಯದಿಂದ ನಡೆದುಕೊಳ್ಳುತ್ತಾರೆಂಬುದನ್ನು ನೋಡಿದರೆ ಅವರ ವಿಷಯಕ್ಕೆ ನಗೆಯೂ ಮರುಕವೂ ಉಂಟಾಗುತ್ತದೆ. ಮಿಕ್ಕ ಪ್ರಾಣಿಗಳು ಎಲ್ಲಾದರೂ ಹೋಗಲಿ, ನೂರಾರು ಪ್ರಕಾರಗಳಿಂದ ನಮಗೆ ಉಪಕಾರವನ್ನು ಮಾಡುತ್ತಿರುವ ಗೋವುಗಳ ವಿಷಯದಲ್ಲಿ ನಾವು ಎಷ್ಟು ಕೃತಘ್ನರಾಗಿರುತ್ತೇವೆ! ಹಿಂದೆ ಬ್ರಾಹ್ಮಣನಾದವನು ಅವಶ್ಯವಾಗಿ ಗೋವನ್ನು ಸಾಕಬೇಕೆಂಬ ನಿಯಮವಿತ್ತು. ಊಟದಲ್ಲಿ ಗೋಗ್ರಾಸವೆಂದು ಒಂದು ಎಲೆಯನ್ನಿಡುವ ಸಂಪ್ರದಾಯವು ಮೊನ್ನಮೊನ್ನೆಯವರೆಗೂ ಇದ್ದದ್ದು ನಿಮ್ಮಲ್ಲಿ ಕೆಲವರಿಗಾದರೂ ನೆನಪಿನಲ್ಲಿರಬಹುದು. ಆದರೆ ಈಗ ಯಾರ ಮನೆಯಲ್ಲಿ ಹಸುಗಳಿವೆ? ಪಟ್ಟಣಗಳಲ್ಲಿ ಬಹುಜನರು ಹಸುಗಳನ್ನು ಸಾಕುವದೇ ಇಲ್ಲ. ಹಳ್ಳಿಯವರೇ ಅವರಿಗೆ ಹಾಲು ಒದಗಿಸಿಕೊಡಬೇಕಾಗಿ ಬಂದಿದೆ. "ನಾವು ಈಗ ಸಾಕುವದಕ್ಕೆ ಅವಕ್ಕೆ ಸರಿಯಾಗಿ ಮೇವಿಲ್ಲ; ಮನೆಯವರು ಅವುಗಳನ್ನು ನೋಡಿಕೊಳ್ಳುವದಿಲ್ಲ" ಎಂದು ಕೆಲವರು ದೂರು ಹೇಳಿಕೊಳ್ಳುತ್ತಾರೆ. ಆದರೆ ಈ ಅಡಚಣೆಗಳನ್ನು ಯಾರು ತಂದರು? ನಾವು ನಾವೇ ತಂದುಕೊಂಡಿದ್ದೇವೆ. ಊರ ಸುತ್ತಮುತ್ತಲೂ ಇರುವ ಜಮೀನುಗಳಲ್ಲಿ ಒಂದನ್ನೂ ಮೇವಿಗೆಂದು ಬಿಡದೆ ವ್ಯವಸಾಯಕ್ಕೆಂದು ಇಟ್ಟುಕೊಳ್ಳುತ್ತೇವೆ; ಅಥವಾ ಅಲ್ಲಿಯೂ ಮನೆಗಳನ್ನು ಕಟ್ಟುವದಕ್ಕೆ ಹೋಗುತ್ತೇವೆ. ದನವನ್ನು ಸಾಕುವದು ಜೀವನದ ಸೌಕರ್ಯಕ್ಕೂ ಧರ್ಮದ ಅಭಿವೃದ್ಧಿಗೂ ಅವಶ್ಯವೆಂಬುದನ್ನು ಮರೆತುಬಿಟ್ಟುದ್ದೇವೆ. ಒಬ್ಬಿಬ್ಬರು ಬ್ರಾಹ್ಮಣರು ಗೋವುಗಳನ್ನು ಸಾಕುವದುಂಟು; ಆದರೆ ಅವಕ್ಕೆ ಹೊಟ್ಟೆತುಂಬ ಮೇವನ್ನೇ ಹಾಕುವದಿಲ್ಲ,

ಬೆಳಿಗ್ಗೆ ಅವಕ್ಕೆ ಕುಂಕುಮ ಹಚ್ಚುವದು ಮುಂತಾದ ರೀತಿಯಲ್ಲಿ ಹೊರಗಿನ ಗೌರವ ತೋರಿಸುವದು ಮಾತ್ರ ಅವರಲ್ಲಿ ಉಳಿದುಕೊಂಡಿದೆ! ಬ್ರಾಹ್ಮಣರು ಮಡಿ, ಮಡಿ! ಎಂದು ಇನ್ನೂ ಹಾರಾಡುತ್ತಿದ್ದಾರೆ. ಹಿಂದೆ ಶೂದ್ರರು ಕೊಟ್ಟ ಹಾಲನ್ನು ಬ್ರಾಹ್ಮಣರು ಸ್ವೀಕರಿಸುತ್ತಿರಲಿಲ್ಲ; ಈಗ ಎಷ್ಟು ನೀರು ಬೆರೆಯಿಸಿಕೊಟ್ಟರೂ ಬಿಡುವದಿಲ್ಲ! ಅದೊಂದು ಹಿಂದಿನ ಆಚಾರವನ್ನು ಕಾಪಾಡಿಕೊಂಡುಬಂದಿದ್ದರೂ ಗೋವನ್ನು ಸಾಕುವ ಪದ್ಧತಿಯು ಕಡ್ಡಾಯವಾಗಿ ಬರುತ್ತಿತ್ತು. ಬ್ರಾಹ್ಮಣರ ಮೇಲುಪಂಕ್ತಿಯನ್ನು ಕಂಡ ಮಿಕ್ಕವರೂ ಈ ಶುದ್ಧಾಚಾರವನ್ನು ಅನುಸರಿಸುತ್ತಿದ್ದರು. ಗೋವಿನ ವಿಷಯಕ್ಕೆ ವಿಶೇಷವಾಗಿ ಹೇಳತಕ್ಕದ್ದು ಬಹಳವಿದೆಯಾದರೂ ಸದ್ಯಕ್ಕೆ ಇದು ಸ್ಥಳವಲ್ಲವಾದ್ದರಿಂದ ಇಲ್ಲಿಗೆ ಬಿಡುತ್ತೇನೆ. ಇಷ್ಟವುಳ್ಳವರು ಗೋರಖಪುರದಲ್ಲಿ ಪ್ರಕಟವಾಗುವ ಕಲ್ಯಾಣವೆಂಬ ಹಿಂದೀ ಮಾಸ ಪತ್ರಿಕೆಯಲ್ಲಿ "ಗೋ ಅಂಕ" ಎಂಬ ವಿಶೇಷಾಂಕವನ್ನು ನೋಡಬೇಕು. ಅಂತೂ ಸರ್ವಭೂತದಯೆ ಎಂಬುದೊಂದು ಅಮೋಘವಾದ ದೈವಸಂಪತ್ತಿನ ಗುಣವು. ಇದನ್ನು ನಾವೆಲ್ಲರೂ ಕೈಯಲ್ಲಾದಮಟ್ಟಿಗೂ ಸಂಪಾದಿಸಿಕೊಳ್ಳುವದಕ್ಕೆ ಯತ್ನಿಸಬೇಕು.

ಅಲೋಲುಪ್ತ್ವ- ಲೋಲುಪತೆ ಎಂದರೆ ವಿಷಯಗಳಿಗೆ ಮನಸ್ಸು ಜೋಲುಬಿಡುವದು. ಇದೊಂದು ಸದ್ಯಕ್ಕೆ ಭೂಲೋಕನಿವಾಸಿಗಳಿಗೆ ಅಂಟಿಕೊಂಡಿರುವ ರೋಗವಾಗಿದೆ. ಮನುಷ್ಯನು ತನ್ನ ಜೀವನಕ್ಕೆ ಅವಶ್ಯವಾಗಿ ಬೇಕಾಗಿರುವದೇನು?-ಎಂಬುದನ್ನು ಲಕ್ಷ್ಯಕ್ಕೆ ತಾರದೆ ಅನವಶ್ಯವಾದ ಎಷ್ಟೋ ಭೋಗ್ಯವಿಷಯಗಳನ್ನು ರಾಶಿಹಾಕುವದರಲ್ಲಿ ತೊಡಗಿರುತ್ತಾನೆ. ವಿಷಯಲೋಲುಪತೆಯೇ ಮನುಷ್ಯರನ್ನು ಕಾಮಕ್ಕೆ ಅಡಿಯಾಳಾಗಿ ಮಾಡುತ್ತದೆ; ಅದರಿಂದ ಪಾಪಕ್ಕೆ ಕೈಹಾಕಿ ದೈವೀಸಂಪತ್ತನ್ನು ಹಾಳುಮಾಡಿಕೊಂಡು ಅಸುರರಾಗಿ ಪರಿಣಮಿಸುತ್ತಾರೆ.

ಮನುಷ್ಯನಿಗೆ ಬದುಕಿರುವದಕ್ಕೆ ನಿಜವಾಗ ಎಷ್ಟುಬೇಕು? ಅಮೆರಿಕದಲ್ಲಿ ಥೋರೋ ಎಂಬಾತನು ಬರೆದಿರುವ ವಾಲ್ಡಾನ್ ಎಂಬ ಗ್ರಂಥದಲ್ಲಿ ಹೇಳಿರುವದನನಲು ನೀವುಗಳು ಸ್ವಲ್ಪ ಓದಬೇಕು. ನಮಗೆ ಬೇಕಾಗಿರುವ ಗಾಳಿ, ಬೆಳಕು, ನಿದ್ರೆ, ಶರೀರದ ಶಾಖಕ್ಕೆ ಬೇಕಾದ ಆಹಾರ, ಉಡುಪು ಇಂಥ ಅವಶ್ಯವಾದ ಪದಾರ್ಥಗಳ ಸಂಗ್ರಹಕ್ಕೆ ಮನುಷ್ಯನು ತನ್ನ ಇಡಿಯ ಜೀವಮಾನವನ್ನೆಲ್ಲ ಕಳೆಯ ಬೇಕಾದ ಅವಶ್ಯಕತೆ ಇದೆಯೇ ಇಲ್ಲವೇ- ಎಂಬುದು ನಿಮಗೆ ಆಗ ಮನದಟ್ಟಾಗುತ್ತದೆ. ನನ್ನ ಸ್ವಂತ ಜೀವನದಲ್ಲಿ ನಾನು ಆಶ್ರಮವನ್ನು ಸ್ವೀಕಾರಮಾಡುವದಕ್ಕೆ ಪೂರ್ವದಲ್ಲಿ ಕೂಡಿಹಾಕಿದ್ದ ಉಡುಪಿನ ಬಟ್ಟೆಗಳು ಎರಡು ಟ್ರಂಕುಗಳು ತುಂಬಿದ್ದವು; ಹಾಸಿಗೆಯ ಜಮಖಾನೆ, ಮೆತ್ತೆ, ಮಗ್ಗಲು ಹಾಸಿಗೆ, ರಗ್ಗು ಮುಂತಾದವುಗಳ ಹೊರೆಯೂ ಕಡಿಮೆಯಿರಲಿಲ್ಲ. ಶಾಸ್ತ್ರವಿಧಿಯ ಪ್ರಕಾ ಸಂನ್ಯಾಸ ಮಾಡುವಾಗ ಅವನ್ನೆಲ್ಲ ಬಿಟ್ಟುಬಿಡಬೇಕಾಯಿತು. ಆದರೆ ಈಗ ನನಗೆ ಇರುವಷ್ಟು ಅಲ್ಪವಸ್ತ್ರಸಂಗ್ರಹದಲ್ಲಿ ನನಗೆ ಯಾವ ಕೊರತೆಯೂ ಕಾಣುವದೇ ಇಲ್ಲ. .ಹೀಗೆಯೆ ಆಹಾರಾದಿಗಳನ್ನೂ ವಿಂಗಡಿಸಿ

ನೋಡಬಹುದು. ಪೂರ್ವದಲ್ಲಿ ನಮ್ಮ ದೇಶದ ಋಷಿಗಳು ಎಷ್ಟು ಸರಳಜೀವನದಿಂದ ಕಾಲವನ್ನು ಕಳೆಯುತ್ತಿದ್ದರು ! ಆದರೂ ಅವರ ಜೀವನದಲ್ಲಿ ಎಂಥ ಉದಾತ್ತಧ್ಯೇಯಗಳಿದ್ದವು! ಅವರು ಎಂಥೆಂಥ ಉತ್ತಮಶಾಸ್ತ್ರಗಳನ್ನು ಕಂಡುಹಿಡಿದರು ! ಜನಸಾಮಾನ್ಯಕ್ಕೆ ಜೀವನದಲ್ಲಿ ಬೇಕಾಗಿರುವ ಇಹಪರಸೌಖ್ಯಗಳ ಮೂಲವನ್ನೆಲ್ಲ ಕಂಡುಹಿಡಿದಿದ್ದರಲ್ಲ! ಇದನ್ನು ನಾವು ಮನಸ್ಸಿನಲ್ಲಿ ಹೊರಳಾಡಿಸಬೇಕು. ಮನುಷ್ಯನ ಮನಸ್ಸು ಸ್ವಭಾವದಿಂದಲೇ ವಿಷಯಗಳ ಕಡೆಗೆ ಹರಿಯುತ್ತಿರುತ್ತದೆ. ಆದ್ದರಿಂದ ನಮಗೆ ಎಂಥೆಂಥ ವಸ್ತುಗಳು ಬೇಕು? ಎಷ್ಟು ಬೇಕು?- ಎಂಬುದನ್ನು ಯೋಚಿಸುವದಕ್ಕಿಂತ ಮೊದಲು ಎಷ್ಟು ಸಾಕು?"- ಎಂಬುದನ್ನು ಯೋಚಿಸಬೇಕು.

ವಿಷಯಗಳಲ್ಲಿ ಹಾತುವರಿಯುತ್ತಾ ಅದು ಬೇಕು, ಇದು ಬೇಕು-ಎಂದು ತಹತಹಪಡುತ್ತಿರುವವನಿಗೆ ಅಧ್ಯಾತ್ಮದ ವಿಚಾರಗಳು ಎಂದಿಗೂ ಮನಸ್ಸಿಗೆ ಹಿಡಿಯುವದಿಲ್ಲ. "ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್" ( ಅನಿತ್ಯವೂ ದುಃಖಪೂರಿತವೂ ಆಗಿರುವ ಈ ಲೋಕವನ್ನು ಪಡೆದಿರುವದರಿಂದ ನನ್ನನ್ನು ಭಜಿಸು) ಎಂಬ ಭಗವಂತನ ಮಾತಿನಲ್ಲಿ ಅಂಥವನು ಮನಸ್ಸಿಗೆ ಎಂದಿಗೂ ಆದರವುಂಟಾಗುವದಿಲ್ಲ. ಇಂಥದ್ದು ದೈವೀಸಂಪತ್ತಿನ ಗುಣವು, ಇದನ್ನು ಸಂಪಾದಿಸಿಕೊಳ್ಳಬೇಕು-ಎಂದರೆ ಎಂದಿಗೂ ಅದರಲ್ಲಿ ಔತ್ಸುಕ್ಯವುಂಟಾಗಲಾರದು. ಆದರೆ ವಿಷಯಗಳಲ್ಲಿ ಲೋಲುಪನಾಗಬಾರದು ಎಂದರೆ ವಿಷಯಗಳನ್ನು ದ್ವೇಷಿಸಬೇಕೆಂದೇನೂ ಅರ್ಥವಲ್ಲ; ವಿಷಯಗಳನ್ನು ಅತ್ಯಂತ ಹಿಡಿತದಲ್ಲಿ ಉಪಯೋಗಿಸುತ್ತಾ ಜಿಪುಣನಾಗಿ ನಡೆಯಬೇಕೆಂದೂ ಅರ್ಥವಲ್ಲ. ಆಹಾರ, ವಿಹಾರ, ನಿದ್ರೆ, ಎಚ್ಚರ-ಮುಂತಾದವುಗಳನ್ನು ತೀರ ಹೆಚ್ಚು ಅಥವಾ ತೀರ ಕಡಿಮೆ ಇಲ್ಲದೆ ಬಳಸುತ್ತಾ ವಿಷಯಗಳ ತೊಳಲಿಕೆಯಿಂದ ಮನಸ್ಸನ್ನು ಹಿಮ್ಮೆಟ್ಟಿಸಬೇಕು. ದೈವಸಂಪತ್ತಿನ ಗುಣಗಳನ್ನು ಬೆಳೆಯಿಸಿಕೊಳ್ಳಬೇಕು ಎಂಬುದೇ ಇಲ್ಲಿ ತಿಳಿಯಬೇಕಾದದ್ದು. ಅವಶ್ಯಕತೆಗಳನ್ನು ಬಿಟ್ಟು ಶರೀರವನ್ನು ದಂಡಿಸಬೇಕು ಎಂಬರ್ಥವನ್ನು ಎಂದಿಗೂ ಮಾಡಿಕೊಳ್ಳಬಾರದು. ಲೋಕದಲ್ಲಿ ಮನುಷ್ಯನು ವಿಷಯಗಳ ಸಂಗ್ರಹವನ್ನು ಮಾಡುವದಕ್ಕೆ ಹುಟ್ಟಿಲ್ಲ, ಅತ್ಯವಶ್ಯಕವಾಗಿರುವ ಜೀವನಸಾಮಗ್ರಿಗಳನ್ನು ಸಂಪಾದಿಸಿಕೊಂಡು ಕೂಡಿದಮಟ್ಟಿಗೂ ಕಾಲವನ್ನು ಉಳಿಸಿಕೊಂಡು ಅಧ್ಯಾತ್ಮಚಿಂತನೆಗೆ ಮನಸ್ಸನ್ನು ತಿರುಗಿಸಬೇಕು ಎಂಬುದೇ ಇಲ್ಲಿ ತಿಳಿಯಬೇಕಾದದ್ದು.



# ೧೫೨. ದೈವಸಂಪತ್ತು

**(11-12-49)**

ಹಿಂದಿನ ದಿನದ ಕೊನೆಯಲ್ಲಿ ಅಲೋಲುಪ್ತ್ವದ ವಿಚಾರವನ್ನು ಮಾಡಿತ್ತು ವಿಷಯಗಳಲ್ಲಿ ಲೋಲುಪನಾಗದಿರುವದು ಎಂದರೆ ಹಾಗಾಗದಂತೆ ಅದಕ್ಕೆ ವಿರುದ್ಧವಾದ ಪ್ರಯತ್ನವನ್ನು ಮಾಡುತ್ತಿರುವದು ಎಂದು ಹೇಳಿತ್ತು. ಯಾವದಾದರೊಂದು ವಸ್ತುವನ್ನು ಕಂಡಾಗ ಅಥವಾ ನೆನಸಿಕೊಂಡಾಗ ಬೀಜರೂಪದಿಂದ ಮನಸ್ಸಿನಲ್ಲಿದ್ದ ಅದರ ಭಾವನೆಯು ಅದರ ಕಡೆಗೆ ಜೋಲುಬಿದ್ದು ಅಲ್ಲಿಯೇ ನಿಲ್ಲುತ್ತದೆ. ಇಂಥ ಮನಸ್ಸಿನವನು ವಿಷಯಗಳಲ್ಲಿಯೇ ಮುಳುಗಿಬಿಡುತ್ತಾನೆ. ಅವನಿಗೆ ಲೋಲುಪನೆಂದು ಹೆಸರು. ವಿಷಯಗಳನ್ನು ಅನುಭವಿಸುವವರೆಲ್ಲ ಲೋಲುಪರಲ್ಲ; ವಿಷಯಗಳಲ್ಲಿ ನೆಟ್ಟ ಮನಸ್ಸನ್ನು ಅವುಗಳಿಂದ ಬಿಡಿಸಿಕೊಳ್ಳಲಾರದವನ್ನೇ ಇಲ್ಲಿ ಲೋಲುಪರೆಂದು ಕರೆದಿದೆ. ಇದರ ವಿರುದ್ಧವಾಗಿ ಪ್ರಯತ್ನವನ್ನು ಮಾಡುವದು ಎಂದರೆ ವಿಷಯಗಳನ್ನು ನೆನೆಯದಂತೆ ಮನಸ್ಸನ್ನು ಸಜ್ಜುಗೊಳಿಸಿಕೊಳ್ಳುವದು; ಉತ್ತಮವಾದ ವಸ್ತುಗಳನ್ನು ಸ್ಮರಿಸುತ್ತಿರುವದು, ಸಾಧುಗಳ ಸಹವಾಸವನ್ನು ಮಾಡುವದು, ಸದ್ಗ್ರಂಥಗಳನ್ನು ನೋಡುವದು- ಇವೇ ಮುಂತಾದವು ಇಂಥ ಪ್ರಯತ್ನಕ್ಕೆ ಉಪಾಯಗಳು.

ಇಂದ್ರಿಯಗಳು ವಿಷಯಗಳು ಕಡೆಗೆ ಹರಿದಮಾತ್ರದಿಂದ ಏನೂ ತಪ್ಪಾಗುವದಿಲ್ಲ. ಆ ಇಂದ್ರಿಯಗಳನ್ನು ಬೆನ್ನಟ್ಟಿ ವಿಷಯಗಳಲ್ಲಿಯೇ ನಿಲ್ಲುವದು ಮಾತ್ರ ಅವಿವೇಕವಾಗುತ್ತದೆ. ವಿಷಯಗಳನ್ನು ಬಿಡುವದೆಂದರೆ ಮನೆಮಠ, ಊರುಕೇರಿಗಳನ್ನು ಬಿಟ್ಟು ದೂರಹೋಗುವದೆಂದು ಎಂದಿಗೂ ಅರ್ಥವನ್ನು ಮಾಡಬಾರದು. ನಾವು ದೂರಕ್ಕೆ ಹೋದಮಾತ್ರದಿಂದ ವಿಷಯಗಳ ಯೋಚನೆಯು ನಮ್ಮನ್ನು ಬಿಡಬೇಕಲ್ಲ! ಒಂದೂರಿನಲ್ಲಿ ಒಬ್ಬರು ಪ್ರತಿಯೊಂದು ಏಕಾದಶಿಯೂ ರಾತ್ರೆ ಜಾಗರಣೆಯನ್ನು ಮಾಡುವದಕ್ಕೆ ತಮ್ಮ ಮನೆಯಲ್ಲಿ ಏರ್ಪಾಡುಮಾಡಿದ್ದರು. ತಮ್ಮ ಮಿತ್ರರನೇಕರನ್ನು ಅಲ್ಲಿಗೆ ಕರೆಯಿಸಿಕೊಳ್ಳುತ್ತಿದ್ದರು. ರಾತ್ರೆಯಲ್ಲಿ ಭಜನೆಯು ನಡೆಯುತ್ತಿತ್ತು. ಜನರು ಆ ಗೃಹಸ್ಥರು ಮಾಡಿರುವ ಉತ್ತಮವಾದ ಏರ್ಪಾಡನ್ನೂ ಕೊಂಡಾಡುತ್ತಿದ್ದರು. ಆದರೆ ಅವರು ರಾತ್ರೆ ಏನು ಮಾಡುತ್ತಿದ್ದರು, ಬಲ್ಲಿರಾ? ಅವರು ಸ್ವಲ್ಪ ಹೊತ್ತು ಭಜನೆಯ ಕೂಟದಲ್ಲಿದ್ದು ಆ ಬಳಿಕ ಒಳಗೆ ಕೋಣೆಯೊಳಗೆ ಹೋಗಿ ಮಲಗಿಕೊಂಡಿರುತ್ತಿದ್ದರು. ಅವರೇನೂ ನಿದ್ರೆಯನ್ನು ಮಾಡುತ್ತಿರಲಿಲ್ಲ; ಭಜನೆಯನ್ನು ಕೇಳುತ್ತಲೇ ಕಾಲವನ್ನು ಕಳೆಯುತ್ತೇನೆಂದು ಅವರ ಮನಸ್ಸಿನ ಭಾವ. ಆದರೆ ಅರ್ಧರಾತ್ರೆಯಾಗುತ್ತಲೂ ಅವರ ಮನಸ್ಸು ದ್ವಾದಶಿಯ ಕಡೆಗೆ ಹೋಗುತ್ತಿತ್ತು. ಅವರು ಪೂರ್ಣವಾಗಿ ಉಪವಾಸವನ್ನು ಮಾಡಿದ್ದರಿಂದಲನೋ ಏನೊ, ಬೆಳಗ್ಗೆ ಬೇಗನೆ ಪಾರಣೆ ಮಾಡಬೇಕು ಎಂಬ ಕಡೆಗೆ ಅವರ ಮನಸ್ಸಿನ ಒಲವು ಬೆಳೆಯುತ್ತಿತ್ತೆಂದು ತೋರುತ್ತದೆ.

ಅವರು ಆಗಾಗ್ಗೆ `ಘಂಟೆ ಎಷ್ಟಾಯಿತು?' ಎಂದು ಕೇಳುತ್ತಲೇ ಇದ್ದರು. ಮಿಕ್ಕವರ ಮನಸ್ಸು ಭಜನೆಯಲ್ಲಿ ಕೂತಿರುವಾಗ ಅವರ ಮನಸ್ಸು ಪಾರಣೆಯಲ್ಲಿ ಕುಳಿತಿರುತ್ತಿತ್ತು! ಇದನ್ನೇ ಲೋಲುಪತ್ವವೆಂದು ಕರೆಯುವದು. ನೀವು ಏನಾದರೂ ಮಾಡುತ್ತಿರಿ, ಯಾವ ವಿಷಯಗಳನ್ನಾದರೂ ಕೈಬಿಟ್ಟಿರಿ; ಅದೇನೂ ಮುಖ್ಯವಲ್ಲ. ನಿಮ್ಮ ಮನಸ್ಸು ವಿಷಯಗಳ ಅನುಭವದಲ್ಲಿ ಅಥವಾ ಕಲ್ಪಿತ ಭೋಗದಲ್ಲಿಯೇ ಆಡುತ್ತಿದ್ದರೆ ನೀವು ವಿಷಯಲೋಲುಪರೇ ಆಗಿರುವಿರಿ. ಆದ್ದರಿಂದ ವಿಷಯಗಳಲ್ಲಿ ನಾವು ಲೋಲುಪರೆ, ಅಲ್ಲವೆ? ಎಂಬುದನ್ನು ನಮ್ಮ ಮನಸ್ಸಿನ ಒಲವಿನಿಂದ ತಿಳಿದುಕೊಳ್ಳಬೇಕಾಗುವದು. ಇಂದಿಷ್ಟೂ ಹಿಂದಿನ ದಿನದ ವಿಚಾರಕ್ಕೇ ಸೇರಿದ್ದು.

ಈ ದಿನ `ಮಾರ್ದವಂ ಹ್ರೀರಚಾಪಲಮ್' ಎಂಬ ಶ್ಲೋಕಪಾದವನ್ನು ಕುರಿತು ವಿಚಾರವನ್ನು ಮಾಡಬೇಕಾಗಿದೆ. ಮಾರ್ದವವೆಂದರೆ ಹೊರಗೆ ಕಾಠಿನ್ಯವನ್ನು ತೋರಿಸದೆ ಮೆತ್ತಗಿರುವದು ಎಂದು ಅರ್ಥವನ್ನು ಮಾಡಿಕೊಳ್ಳಬೇಡಿರಿ. ಮನಸ್ಸಿನಲ್ಲಿ, ವಾಕ್ಕಿನಲ್ಲಿ, ಕರ್ಮದಲ್ಲಿ-ಹೇಗೂ ಮತ್ತೊಬ್ಬರನ್ನು ನೋಯಿಸುವ ಕಾಠಿನ್ಯವನ್ನು ಗೆದ್ದುಕೊಂಡಿರುವದೇ ಮಾರ್ದವವು. ಜನರಿಗೆ ಒಂದಲ್ಲ, ಒಂದು ದುಃಖವು ಇದ್ದೇ ಇರುತ್ತದೆ. ಹೀಗಿರುವಲ್ಲಿ ನಾವೇಕೆ ಅವರನ್ನು ಮತ್ತೂ ನೋಯಿಸುವದಕ್ಕೆ ಹೋಗಬೇಕು ? ಕಾಠನ್ಯದ ಕ್ರೌರ್ಯವು ಬಗೆಬಗೆಯಲ್ಲಿ ಕಾಣಿಸಿಕೊಳ್ಳಬಹುದು. ಒಬ್ಬರನ್ನು ಹೊಡೆಯುವದು, ಬಯ್ಯುವದು, ಒಬ್ಬರ ವಿಷಯಕ್ಕೆ ದುರಾಲೋಚನೆಮಾಡುವದು-ಇಂಥ ಕ್ರೌರ್ಯವನ್ನೇ ಮನಸ್ಸಿಗೆ ತಂದುಕೊಳ್ಳಬೇಕಾದ್ದೇನೂ ಇಲ್ಲ. ಸ್ವಾರ್ಥತೆಯಿಂದ ಮತ್ತೊಬ್ಬರ ಮನಸ್ಸಿಗೆ ಹೇಗೆ ಹೇಗೆ ನೋವುಮಾಡಬಹುದೆಂಬುದಕ್ಕೆ ಉದಾಹರಣೆಗಳನ್ನು ಬೇಕಾದಷ್ಟು ಕೊಡಬಹುದು. ಮಕ್ಕಳು ಆಸೆಯಿಂದ ತನ್ನೆದುರಿಗೇ ನೋಡುತ್ತಿರುವಾಗ ಹಣ್ಣು, ಮಿಠಾಯಿ-ಮುಂತಾದವುಗಳನ್ನು ತಾನೊಬ್ಬನೇ ತಿನ್ನುತ್ತಿರುವವನ ಮನಸ್ಸು ಎಷ್ಟು ಕಠಿನವಾಗಿರಬೇಕು! ರೇಷನ್ ಅಂಗಡಿಯಲ್ಲಿ ಬಾಗಿಲು ಮುಚ್ಚುವ ವೇಳೆಗೆ ಬಂದು ಸ್ವಲ್ಪ ಸಹಾಯಮಾಡಿರೆಂದು ಕೇಳುವ, ಕೈಯಲ್ಲಿ ಸಾಗದ ಮುದುಕಿಯೊಬ್ಬಳನ್ನು ಅನಾದರಮಾಡಿ ತಮಗೆ ಬೇಕಾದ ಸಾಮಾನುಗಳನ್ನು ಕೊಂಡುಕೊಂಡು ಹೋಗಿಬಿಡುವದೂ ಈ ಜಾತಿಯ ಕ್ರೌರ್ಯವೇ ಆಗಿರುತ್ತದೆ. ಇವೆಲ್ಲ ಮಾರ್ದವಕ್ಕೆ ವಿರುದ್ಧವಾಗಿರುವ ಅಡಚಣೆಗಳೆಂದು ಭಾವಿಸಬೇಕು.

ವ್ಯಕ್ತಿಗಳಲ್ಲದೆ ಕುಟುಂಬದವರೂ ಮತ್ತೊಂದು ಕುಟುಂಬದವರ ವಿಷಯಕ್ಕೆ ಒಂದು ಸಮಾಜದವರು ಮತ್ತೊಂದು ಸಮಾಜದ ವಿಷಯಕ್ಕೆ, ಒಂದು ರಾಷ್ಟ್ರದವರು ಮತ್ತೊಂದು ರಾಷ್ಟ್ರದ ವಿಷಯಕ್ಕೆ ಕಾಠಿನ್ಯವನ್ನಾಗಲಿ ಮಾರ್ದವವನ್ನಾಗಲಿ ವಹಿಸುವದಕ್ಕೆ ಆಗುತ್ತದೆ. ಈಗಿನ ಯುದ್ಧಗಳಲ್ಲಿ ಅನೇಕ ಯುದ್ಧಗಳು ಆರ್ಥಿಕಯುದ್ಧಗಳಾಗಿರುತ್ತವೆ. ನಮ್ಮ ದೇಶದಲ್ಲಿ ಸಾಮಾನುಗಳು ಹೆಚ್ಚಾಗಿ ಇದ್ದರೂ ಮತ್ತೊಂದು ದೇಶದವರಿಗೆ ಅವು ಬೇಕಾಗಿದ್ದರೂ

ಕಳುಹಿಸಿಕೊಡದೆ ಇರುವಿಕೆ, ಅಥವಾ ನಮಗೆ ಬೇಡದೆ ಇರುವ ರಾಷ್ಟ್ರಗಳಿಗೆ ಅತ್ಯವಶ್ಯಕವಾಗಿ ಬೇಕಾಗುವ ಜೀವನಸಾಮಗ್ರಿಗಳನ್ನು ಮತ್ತೆ ಯಾರೊಬ್ಬರೂ ಒದಗಿಸಿಕೊಡದಂತೆ ತಂತ್ರದಿಂದ ಏರ್ಪಡಿಸುವಿಕೆ, ಒಂದು ರಾಷ್ಟ್ರದವರಿಗೆ ಕೆಟ್ಟದಾಗಲೆಂಬ ಕಾರಣದಿಂದ ನಮಗೆ ಬೇಕಾಗುವ ಪದಾರ್ಥಗಳು ಆ ದೇಶದಲ್ಲಿ ಹೆಚ್ಚಾಗಿ ಬೆಳೆಯುತ್ತಿದ್ದರೂ ಅಥವಾ ತಯಾರಾಗುತ್ತಿದ್ದರೂ ಅವುಗಳನ್ನು ನಮ್ಮ ದೇಶದೊಳಕ್ಕೆ ಪ್ರವೇಶಿಸದಂತೆ ದಿಗ್ಬಂಧನವನ್ನು ಮಾಡಿ ನಮ್ಮ ದೇಶದಲ್ಲಿ ಅವನ್ನು ಸಿದ್ಧಗೊಳಿಸುವ ಏರ್ಪಾಡುಮಾಡುವಿಕೆ-ಅವೆಲ್ಲ ಹೃದಯದ ಮಾರ್ದವವನ್ನು ತಡೆಗಟ್ಟುವ ಅಥವಾ ಅಳಿಸಿಹಾಕುವ ಕೃತ್ಯಗಳು. ಜನರಿಗೆ ಯಾವ ಅಧಿಪತ್ಯದಿಂದ ಸುಖವಾದೀತೆಂಬುದನ್ನು ಮನಸ್ಸಿಗೆ ತಾರದೆ ಸ್ವಾರ್ಥಕ್ಕಾಗಿಯೇ ಮತ್ತೊಬ್ಬರು ಆಳುವ ಸರಕಾರವನ್ನು ದೂಷಿಸಿ ಆ ಸರಕಾರದ ಮೇಲೆ ಇಲ್ಲ ಸಲ್ಲದ ಸುದ್ದಿಗಳ ಅಪಪ್ರಚಾರವನ್ನು ಮಾಡುವಿಕೆ, ಅಥವಾ ಅವರು ನಿರಪರಾಧಿಗಳಾಗಿದ್ದರೂ ಅಪರಾಧಿಗಳೆಂಬಂತೆ ತೋರಿಸಿಕೊಟ್ಟು ಬಹುರಾಷ್ಟ್ರಗಳನ್ನು ಒಟ್ಟುಗೂಡಿಸಿ ಆ ದೇಶದ ಮೇಲೆ ಯುದ್ಧವನ್ನು ಹೂಡಿ ಜನರನ್ನು ನಿಷ್ಕಾರಣವಾಗಿ ಅಸಂಖ್ಯಾತವಾಗಿ ಕೊಲ್ಲುವಿಕೆ-ಇವೆಲ್ಲ ಕಾಠಿನ್ಯದ ಅಥವಾ ಅಮಾರ್ದವದ ಚಿಹ್ನೆಗಳೇ. ಈಗಿನ ನಾಗರಿಕತೆಯಲ್ಲಿ ಇಂಥ ಕ್ರೌರ್ಯಕ್ಕೂ ಅವಕಾಶವಿರುವದೊಂದು ಇದರ ಮೇಲಿನ ಲಾಛನವೆನ್ನಬಹುದು.

ಸ್ವಾರ್ಥತೆಯಿಂದ ಮತ್ತೊಬ್ಬರನ್ನು ನೋಯಿಸುವ ಕ್ರೌರ್ಯವಿಲ್ಲದೆ, ಅವರ ವಿಷಯದಲ್ಲಿ ಮನಸ್ಸು ಕಗುವ ಸ್ಥಿತಿಯನ್ನಿಟ್ಟುಕೊಳ್ಳುವದೇ ಮಾರ್ದವವೆಂದೆನಷ್ಟೆ. ಇಲ್ಲಿ `ಸ್ವ' ಎಂಬುದು ಯಾವದು? ಸ್ವ ಶಬ್ದಕ್ಕೆ ತಾನು, ತನ್ನದು, ಎಂದರ್ಥ. ಆದರೆ ನಿಜವಾಗಿರುವ ತನ್ನ ಸ್ವರೂಪವನ್ನು ತಿಳಿದುಕೊಳ್ಳದೆ ಮಾನವನು ತಾನಲ್ಲದ್ದನ್ನೇ ತಾನೆಂದುಕೊಳ್ಳುತ್ತಾನೆ; ಆ ತನಗೆ ಸಂಬಂಧಪಟ್ಟಿರುವದನ್ನೆಲ್ಲ ತನ್ನದು ಎಂದುಕೊಳ್ಳುತ್ತಾನೆ. ಈ ತಪ್ಪುತಿಳಿವಳಿಕೆಯಿಂದ ತಾನು ತನ್ನದಕ್ಕೆ ಪ್ರಯೋಜನವಾಗಲೆಂದು ಆ ತನ್ನ ಯೋಗಕ್ಷೇಮದಿಂದ ಮತ್ತೊಬ್ಬರನ್ನೂ ನೋಯಿಸುವದೇ ಅಮಾರ್ದವವು. ಈ ದೃಷ್ಟಿಯಿಂದ ತಾನು ಎಂದರೆ ತನ್ನ ದೇಹ, ತನ್ನ ಇಂದ್ರಿಯಗಳು, ತನ್ನ ಮನೋಬುದ್ಧಿಗಳು; ದೇಹೇಂದ್ರಿಯಗಳ ಗುಂಪಿನಲ್ಲಿ ಮುಖ್ಯವಾಗಿ ದೇಹಕ್ಕೇ ಪ್ರಾಧನ್ಯವನ್ನು ಕೊಡುವವರನ್ನೇ ಇಲ್ಲಿ ಸ್ವಾರ್ಥಿಗಳೆಂದು ನಾವು ಕರೆಯುತ್ತಿರುವದು. ಈ `ತಾನು' ಎಂಬ ಸ್ವಕ್ಕೆ ಬೇಕಾಗಿರುವ ಹೆಂಡಿರುಮಕ್ಕಳು, ಮನೆಮಠ, ಹಣಕಾಸು, ಹೊಗದ್ದೆಗಳು, ಇತರ ಭೋಗಸಾಮಗ್ರಿಗಳು, ಸಂಪತ್ತು, ಕೀರ್ತಿ-ಮುಂತಾದವೆಲ್ಲ `ತನ್ನವು' ಎನಿಸುತ್ತವೆ. ಅಜ್ಞರು ಈ ತಾನು ತನ್ನದುಗಳಿಗೆ ಬೇಕಾದದ್ದನ್ನು ಹೇಗಾದರೂ ಮಾಡಿ ಯಾರಿಗೆ ಯಾವ ತೊಂದರೆಯಾದರೂ ಚಿಂತೆಯಿಲ್ಲ, ಎಂದು ಕೂಡಿಹಾಕಿಕೊಳ್ಳುವದಕ್ಕೆ ಹವಣಿಸುವರು. ಆದರೆ ಪರಮಾರ್ಥದೃಷ್ಟಿಯಿಂದ ದೈವೀಸಂಪತ್ತಿನವರೇ ಸ್ವಾರ್ಥಿಗಳೆನ್ನಬೇಕು. ಏಕೆಂದರೆ ಅವರು ತಮ್ಮ ನಿಜವಾದ ಆತ್ಮನನ್ನು ಕಂಡುಕೊಳ್ಳುವದಕ್ಕೆ ಯತ್ನಿಸುತ್ತಿರುವರು. ಆ ಸ್ವಾರ್ಥಕ್ಕೆ ಅಡ್ಡಿಯಾದದ್ದನ್ನೆಲ್ಲ ಅವರು ಕೈಬಿಡುತ್ತಾರೆ, ಕಾಠಿನ್ಯನವು ಅದಕ್ಕೆ ಅಡ್ಡಿಯಾಗಿರುತ್ತದೆ,

ಪರಮಾತ್ಮನ ವ್ಯಾಪ್ತಿಯನ್ನು ಅರಿತುಕೊಳ್ಳುವದಕ್ಕೆ ಅದು ಪ್ರತಿಬಂಧಕವಾಗುತ್ತದೆ; ಏಕೆಂದರೆ ಈ ದೇಹದಲ್ಲಿ ಮತ್ತು ಈ ದೇಹಕ್ಕೆ ಸಂಬಂಧಪಟ್ಟವರಲ್ಲಿ ಮಾತ್ರ ನಮ್ಮ ಆತ್ಮನು ಇರುತ್ತಾನೆಂಬ ತಪ್ಪುತಿಳಿವಳಿಕೆಯನ್ನೇ ಕಾಠಿನ್ಯವು ಹೆಚ್ಚಿಸುತ್ತದೆ. ಆದ್ದರಿಂದ ಆತ್ಮನ ವೈಶಾಲ್ಯವನ್ನು ಮರೆಯಿಸುವ ಕಾಠಿನ್ಯಯವನ್ನು ಬಿಟ್ಟು ಅವರು ಮಾರ್ದವವನ್ನೇ ಅವಲಂಬಸುತ್ತಾರೆ. ಮಾರ್ದವವು ಹೆಚ್ಚಾದಷ್ಟೂ ನಮಗೂ ಇತರ ಜೀವರಿಗೂ ಸಂಬಂಧವು ಹೆಚ್ಚು ಹೆಚ್ಚು ಹತ್ತಿರದ್ದಾಗುವದು. ಪರಮಾತ್ಮನ ವ್ಯಾಪಕತ್ವವು ಅಷ್ಟಷ್ಟು ಹೆಚ್ಚಾಗಿ ಮನಸ್ಸಿಗೆ ತಟ್ಟುವದು. ಮಾತಿನಲ್ಲಿ, ಮನಸ್ಸಿನಲ್ಲಿ, ನಡತೆಯಲ್ಲಿ ಸರ್ವವಿಧದಿಂದಲೂ ದೈವಸಂಪತ್ತಿನ ಜನರು ಮಾರ್ದವವನ್ನು ಹೊಂದುವದಕ್ಕೆ ಇದೇ ಕಾರಣ. ಮತ್ತೊಬ್ಬರ ಮನಸ್ಸಿಗೆ ನೋವನ್ನುಂಟುಮಾಡಬಾರದೆಂಬವರ ವರ್ತನೆಯನ್ನು ನಾವು ಲಕ್ಷಿಸಿ ನೋಡಬೇಕು. ಅದರಿಂದ ನಮ್ಮ ನಡತೆಯನ್ನು ತಿದ್ದಿಕೊಳ್ಳುವದಕ್ಕೆ ಸೂಚನೆ ಸಿಕ್ಕುವದು. ದೆಹಲಿಲಯಲ್ಲಿ ಬಾದಷಹನಾಗಿದ್ದ ನಸಿರುದ್ದೀನನ ವಿಷಯದಲ್ಲಿ ಕೆಲವು ಇಂಥ ವರ್ತನೆಗಳ ಉದಾಹರಣೆಗಳನ್ನು ಹೇಳುತ್ತಾರೆ. ಆ ಚಕ್ರವರ್ತಿಯು ಬಹಳ ಸರಳಜೀವನದವನು; ಕುರಾನು ಗ್ರಂಥವನ್ನ ಕೈಯಿಂದ ಬರೆ ಬರೆದು ಜನರಿಗೆ ಹಂಚುತ್ತಿದ್ದನಂತೆ. ತಾನು ಬರೆದಿದ್ದ ಒಂದು ಲೇಖನದಲ್ಲಿ ಪಂಡಿತನೊಬ್ಬನು ಒಂದು ದೋಷವನ್ನು ತೋರಿಸಲು ಕೂಡಲೆ ಅದನ್ನು ತಿದ್ದಿಕೊಂಡನಂತೆ. ಆ ವಿದ್ವಾಂಸನು ಹೊರಟುಹೋದಮೇಲೆ ಮತ್ತೆ ಅದನ್ನು ತಾನು ಬರೆದಂತೆಯೇ ನೇರ್ಪಡಿಸಿದನಂತೆ. ಈ ನಡುವೆ ಒಬ್ಬನು `ಪ್ರಭುವೆ, ತಾವು ಬರೆದದ್ದೇ ಸರಿಯಾಗಿತ್ತಲ್ಲವೆ? ಆತನು ಹಳಿದಮಾತ್ರದಿಂದ ಏತಕ್ಕೆ ತಿದ್ದಿದಿರಿ?' ಎಂದು ಕೇಳಲು, "ಆ ವಿದ್ವಾಂಸನಿಗೆ ಅಷ್ಟರಿಂದ ಮನಸ್ಸಂತೋಷವಾಗುವಂತಿದ್ದರೆ ನಾನೇಕೆ ಅದಕ್ಕೆ ಅಡ್ಡಬರಬೇಕು? ನಿನ್ನದು ತಪ್ಪು-ಎಂದು ನಾನು ಹೇಳಿದ್ದರೆ, ಪಾರ! ಅವನ ಮನಸ್ಸಿಗೆ ನೋವಾಗುತ್ತಿತ್ತು!" ಎಂದು ಹೇಳಿದನಂತೆ.

ಮೃದುತ್ವವನ್ನು ವಹಿಸಿದ ಮಾತ್ರದಿಂದ ಮತ್ತೊಬ್ಬರ ಮೇಲೆ ಯಾವ ಪರಿಣಾಮವೂ ಆಗುವದಿಲ್ಲವೆಂದೂ ಅದಕ್ಕಾಗಿ ಕಾಠನ್ಯವನ್ನೇ ವಹಿಸಬೇಕಾಗುವದೆಂದೂ ಕೆಲವರು ನಂಬಿರುತ್ತಾರೆ. ಆದರೆ ನಿಜವು ಹೀಗಿಲ್ಲ. ಸರಿಯಾದ ಮಾತುಗಳಿಂದ ಮೃದುವಾಗಿ ಆಡಿದ ಮಾತು, ಕಾಠನ್ಯವನ್ನು ಮೃದುತ್ವದಿಂದ ಎದುರಿಸುವ ನಡತೆ- ಇವುಗಳಿಂದ ಬಹಳ ಹೆಚ್ಚಿನ ಪರಿಣಾಮವಾಗುತ್ತದೆ. ಇದನ್ನು ತಿಳಿಸುವದಕ್ಕಾಗಿ `ಮೃದುತ್ವವು ಅತ್ಯಂತ ಕಠಿನವಾದದ್ದು' ಎಂದು ಮಹಾಭಾರತದಲ್ಲಿ ಬರೆದಿರುತ್ತದೆ. ಒಬ್ಬ ವಿದ್ಯಾಭ್ಯಾಸ ಇಲಾಖೆಯ ದೊಡ್ಡ ಅಧಿಕಾರಸ್ಥರು ತಮ್ಮ ಕೈಕೆಳಗಿನ ಗುಮಾಸ್ತರುಗಳನ್ನೂ ಉಪಾಧ್ಯಾಯರುಗಳನ್ನೂ ಮೃದುಭಾವದಿಂದಲೇ ಕಾಣುತ್ತಾ ಅವರ ದೂರುಗಳನ್ನು ಕೇಳಿ ಆಗಾಗ್ಗೆ ಕೈಯಲ್ಲಾದ ಮಟ್ಟಿಗೂ ಪರಿಹಾರಮಾಡುತ್ತಾ ಸರಕಾರದ ನಿಯಮನಿಬಂಧನೆಗಳಿಗೆ ಒಂದಿಷ್ಟೂ ತಪ್ಪದಂತೆ ನಡೆಯುತ್ತಿದ್ದರು. ಇದರಿಂದ ಅವರು ಹೇಳಿದ ಮಾತುಗಳಿಗೆ ಬಹಳ ಬೆಲೆಯಿರುತ್ತಿತ್ತು; ಅವರು ಯರೊಬ್ಬರಲ್ಲಿಯೂ ಪಕ್ಷಪಾತವಿಲ್ಲದೆ ನ್ಯಾಯಕ್ಕೆ ಸರಿಯಾಗಿ ನಡೆದುಬಿಡುತ್ತಾರೆಂಬ

ಭರವಸೆಯಿದ್ದದ್ದರಿಂದ ಜನರು ತಪ್ಪುಮಾರ್ಗಕ್ಕೆ ಹೋಗಲು ಅಂಜಿಸುತ್ತಿದ್ದರು. ಅವರ ಅಧಿಕಾರದ ಗುಣಗಳನ್ನು ಅವರು ಕೆಲಸದಿಂದ ನಿವೃತ್ತರಾದ ಬಳಿಕವೂ ಅವರಿಂದ ಉಪಕಾರವನ್ನು ಹೊಂದದೆ ಕೆಲವು ಕಷ್ಟಗಳನ್ನು ಅನುಭವಿಸಿದವರುಕೂಡ ಹೊಗಳಿದ್ದನನ್ನು ನಾನು ಕೇಳಿದೆನು!

ಮನಃಕಾಠಿನ್ಯವನ್ನು ಹೆಚ್ಚಿಸಿಕೊಂಡವನಿಗೆ ಇಹವಿಲ್ಲ, ಪರವಿಲ. ಅದು ರಜಸ್ಸಿನ ಫಲವಾಗಿದೆ. ಮಾರ್ದವವು ರಜಸ್ತಮೋಗುಣಗಳು ಕಡಿಮೆಯಾದಾಗಲೇ ತೋರಿಕೊಳ್ಳತಕ್ಕದ್ದಾಗಿದೆ. ಅಲ್ಪಸ್ವಲ್ಪ ರಜಸ್ಸಿರುವದರಿಂದ ಕಾಠಿನ್ಯವು ತಲೆದೋರಿದರೂ ಸತ್ತ್ವಪ್ರಧಾನವಾಗಿರುವವನು ತನ್ನನ್ನು ತಾನೆ ತಿದ್ದಿಕೊಳ್ಳುತ್ತಾನೆ. ಒಬ್ಬ ಸಂನ್ಯಾಸಿಗಳು ತಮ್ಮ ಮಾರ್ದವಕ್ಕೆ ಪ್ರಸಿದ್ಧರಾಗಿದ್ದರು. ಅವರು ಎಂದಿಕೂ ಮತ್ತೊಬ್ಬರ ವಿಷಯದಲ್ಲಿ ಕಠಿನೋಕ್ತಿಯನ್ನು ಆಡಿದವರಲ್ಲ. ಒಮ್ಮೆ ಅವರು ಮತ್ತೊಬ್ಬರೊಡನೆ ವೇದಾಂತದ ವಿಷಯದಲ್ಲಿ ಮಾತನಾಡುತ್ತಿದ್ದಾಗ ಆ ಹೊಸಬರು ಜ್ಞಾನದ ಹೆಚ್ಚುಗಾರಿಕೆಯನ್ನು ಕುರಿತು ವಿಸ್ತಾರವಾಗಿ ಮಾತನಾಡುತ್ತಿದ್ದರು. ಅವರು ಸಮಾಧಿಯೇ ಮುಂತಾದ ಸಾಧನಕ್ಕೆ ಅಷ್ಟು ಬೆಲೆಯನ್ನು ಕೊಟ್ಟಂತೆ ಕಾಣಲಿಲ್ಲ. ಸಂನ್ಯಾಸಿಗಳು ಸ್ವಭಾವದಿಂದಲೇ ಸಾಧನಪರರು. ಮತ್ತೆ ಮತ್ತೆ ಜ್ಞಾನವನ್ನು ತಮ್ಮ ಪ್ರತಿವಾದಿಗಳು ಹೊಗಳುತ್ತಿದ್ದದ್ದನ್ನೂ ಸಮಾಧ್ಯಾದಿಗಳ ವಿಷಯಕ್ಕೆ ಅವರು ತೋರಿಸುತ್ತಿದ್ದ ಅನಾದರವನ್ನೂ ಕಂಡು ಅವರಿಗೆ ಸ್ವಲ್ಪ ಅಸಮಾಧಾನವಾಯಿತು. `ಹಾಗಾದರೆ ಈ ಜ್ಞಾನವೆಂಬುದು ಯಾವದು?' ಎಂದು ಸ್ವಲ್ಪ ಬಿಸಿಯಾಗಿ ಅವರು ಪ್ರಶ್ನಿಸಿದರು; ಪ್ರತ್ಯುತ್ತರವನ್ನು ಕೊಡುವಾಗ ಗೀತೆಯಲ್ಲಿ `ಭಗವಂತನು ಹೇಳಿರುವ ಸಿದ್ಧಾಂತವು ಆ ಇನ್ನೊಬ್ಬರು ವಿವರಿಸಿದರು. ಇಂದ್ರಿಯಗಳಿಂದ ಯಾವ ವ್ಯಾಪಾರವು ನಡೆಯುತ್ತಿದ್ದರೂ ತಾನು ಯಾವದನ್ನು ಮಾಡುತ್ತಿರುವೆನೆಂಬುದನ್ನು ಮನಸ್ಸಿಗೆ ತಂದುಕೊಳ್ಳದೆ ಆತ್ಮ ಸ್ವರೂಪಚಿಂತನೆಯನ್ನು ಮನದಂದುಕೊಳ್ಳುತ್ತಿರುವದೇ ಜ್ಞಾನವು ಎಂಬುದು ಅವರ ಉತ್ತರವಾಗಿತ್ತು. ಅದಕ್ಕೆ ಸಂನ್ಯಾಸಿಗಳು "ಇಷ್ಟೆ ತಾನೆ? ಇದು ಮೂರುಕಾಸಿಗೂ ಬರುವದಿಲ್ಲ!" ಎಂದು ಸ್ವಲ್ಪ ತಿರಸ್ಕಾರಭಾವದಿಂದಲೇ ನುಡಿದರು. ಆಗ ಎರಡನೆಯವರು "ಇದಕ್ಕೆ ಬೆಲೆ ಎಷ್ಟು ಕಾಸೆಂಬುದೇನೂ ನನಗೆ ಮುಖ್ಯವಲ್ಲ; ಇದನ್ನು ಭಗವಂತನು ಹೇಳಿರುತ್ತಾನೆ. ಈ ಜ್ಞಾನವಿಲ್ಲದವನಿಗಿಂತ ಇದು ಇರುವವನು ಉತ್ತಮನೆಂಬುದನ್ನು ತಾವೂ ತಪ್ಪುತ್ತೀರೆಂದು ನನ್ನ ನಂಬಿಕೆಯಿದೆ" ಎಂದರು. ಸಂನ್ಯಾಸಿಗಳು ಕೂಡಲೆ ಎಚ್ಚತ್ತುಕೊಂಡರು. `ನೀವು ಹೇಳಿದ್ದು ನಿಜ; ನಾನು ಹಾಗೆ ಅದನ್ನು ಅಸಡ್ಡೆಮಾಡಿ ನುಡಿಯಬಾರದಾಗಿತ್ತು" ಎಂದು ಮೃದುವಾಗಿ ಉತ್ತರಕೊಟ್ಟರು. ಹೀಗಿರುತ್ತದೆ, ಮಾರ್ದವದ ಬಲ! ಯಾವನು ಹೆಚ್ಚಿನ ಮಾರ್ದವವುಳ್ಳವನೋ ಅವನು ಪರಮಾತ್ಮನ ಕಡೆಗೆ ನಡೆಯುತ್ತಿರುತ್ತಾನೆ. ಅವನೇ ಮೋಕ್ಷಕ್ಕೆ ತಕ್ಕವನು.

ಹ್ರೀಃ ಎಂದರೆ ನಾಚಿಕೆ. ನಾಚಿಕೆಯಲ್ಲಿ ಅನೇಕ ವಿಧಗಳುಂಟು. ಮತ್ತೊಬ್ಬರು ಕಂಡಾರು ಎಂದು ಕೆಟ್ಟಕೆಲಸಕ್ಕೆ ಹೇಸುವದು, ಅಥವಾ ಮತ್ತೊಬ್ಬರು ಕಂಡಾಗ ತಮ್ಮ ನಡತೆಗೆ ತಾವೇ ನಾಚಿಕೊಳ್ಳುವದು ಒಂದು ಬಗೆಯ ನಾಚಿಕೆ. ಅದು "ಪೋಲೀಸು ನೀತಿ" ಎನಿಸುವದು ; ಪೋಲೀಸಿನವರಿಗೆ ಹೆದರಿ ಕಳ್ಳತನವನ್ನು ಬಿಟ್ಟವನು ಹೇಗೆ ನಿಜವಾಗಿ ಅಸ್ತೇಯವನ್ನು ಅರಿಯನೋ ಹಾಗೆ ಜನರ ಅಭಿಪ್ರಾಯಕ್ಕೆ ಅಂಜಿ ನಾಚಿಕೊಳ್ಳುವದು ನಿಜವಾದ ನಾಚಿಕೆಯೇ ಅಲ್ಲ. ತಾವು ಮಾಡಿದ ಒಳ್ಳೆಯ ಕೆಲಸವನ್ನು ಮತ್ತೊಬ್ಬರು ಹೊಗಳಿದರೆ ಒಂದು ಬಗೆಯ ನಾಚಿಕೆಯಾಗುವದುಂಟು. ಇದು ತನ್ನ ಔದ್ಧತ್ಯವನ್ನು ಪರಿಹರಿಸಿಕೊಳ್ಳುವ ನಾಚಿಕೆ; ಈ ನವಿರಾದ ನಾಚಿಕೆ ಸಾಮಾನ್ಯರಿಗೆ ಬರತಕ್ಕದ್ದಲ್ಲ. ಶ್ರೀರಾಮನು ರಾವಣನನ್ನು ಕಾಣುವವರೆಗೆ ಅನೇಕ ಪರಾಕ್ರಮಗಳನ್ನು ಪ್ರಕಟಿಸಿದ್ದನು; ಆದರೆ ಅವುಗಳನ್ನು ತಾನು ಎಂದಿಗೂ ಹೇಳಿಕೊಳ್ಳಲಿಲ್ಲ; ಸೀತೆಯು ಅನಸೂಯೆಗೆ ತನ್ನ ಗಂಡನು ಧನಸ್ಸನ್ನು ಆರೋಪಣೆಮಾಡಿ ತನ್ನನ್ನು ವರಿಸಿದ ಕಥೆಯನ್ನು ಹೇಳಿಕೊಳ್ಳುವದಕ್ಕೆ ಎಂಥ ನಾಚಿಕೆಯಾಯಿತು! ಸರಕಾರದವರು ಅಥವಾ ಯಾವದಾದರೊಂದು ಸಭೆಯವರು ತಮಗೆ ಕೊಟ್ಟಿರುವ ಬಿರುದುಬಾವಲಿಗಳನ್ನು ಮತ್ತೊಬ್ಬರಿಗೆ ತಿಳಿಸಲು ನಾಚುವವರೂ ತಮ್ಮ ಅಧಿಕಾರದ ಕಾಲದಲ್ಲಿ ನಡೆದ ಉತ್ತಮಕೆಲಸಗಳನ್ನು ಕೊಂಡಾಡುವ ಪ್ರಸ್ತಾಪವು ಬಂದಾಗ ಸಂಭಾಷಣೆಯನ್ನು ಮತ್ತೊಂದು ಕಡೆಗೆ ತಿರುಗಿಸಿ ತಮ್ಮ ಪ್ರಶಂಸೆಯನ್ನು ನಿವಾರಣೆಮಾಡಿಕೊಳ್ಳುವವರೂ ಈ ಲಜ್ಜಾಗುಣದ ಉಪಯೋಗವನ್ನು ತಿಳಿದವರು. ತಾವು ಮಾಡುವ ಅಧ್ಯಾತ್ಮಸಾಧನಗಳನ್ನು ಹೊಗೆ ಹೇಳಿಕೊಳ್ಳುವದಕ್ಕೆ ನಾಚುವವರು ಒಳ್ಳೆಯ ದೈವಸಂಪತ್ತಿನವರು ; ಏಕೆಂದರೆ ತಾನು ಮಾಡಿರುವ ತಪಸ್ಸನ್ನು ತಾನೇ ನೋಡಿ ವಿಸ್ಮಿತನಾಗುವದರಿಂದ ಅದರ ವೀರ್ಯವು ಕಡಿಮೆಯಾಗುವದೆಂದು ಶಾಸ್ತ್ರದಲ್ಲಿ ಹೇಳಿದೆ. ಮತ್ತೊಬ್ಬರು ರಹಸ್ಯವಾಗಿ ಮಾಡುವ ಅನುಷ್ಠಾನದ ವಿವರವನ್ನು ಬಿಡಿಸಿ ಬಿಡಿಸಿ ಕೇಳುವರು ಆ ಇನ್ನೊಬ್ಬರಿಗೆ ಹ್ರೀಗುಣವಿಲ್ಲವೆಂದು ಇಟ್ಟುಕೊಂಡಂತೆ ಆಗುತ್ತದೆ. ಆ ವಿಷಯದಲ್ಲಿ ಪ್ರಶ್ನೆಯನ್ನು ಮಾಡುವದಕ್ಕೂ ಸ್ವಲ್ಪ ಹ್ರೀ ಇರಬೇಕು.

ಈಗ **ಅಚಾಪಲದ** ವಿಚಾರ. ಇದೂ ಮನಸ್ಸಿನ ಗುಣವೇ. ಚಂಚಲಚಿತ್ತನಾಗಿರುವದೇ ಚಾಪಲ್ಯವು. ಕೈಕಾಲು ಮುಂತಾದ ಅವಯುವಗಳನ್ನು ಕುಣಿಸಬಾರದೆಂದು ಶಾಸ್ತ್ರದಲ್ಲಿ ಹೇಳಿದೆ. ಇವುಗಳನ್ನು ಆಡಿಸದೆ ಬಿಟ್ಟರೆ ಅಷ್ಟರಿಂದ ಅಚಾಪಲವಾಗುವದಿಲ್ಲ. ಅವುಗಳನ್ನು ಅಲುಗಾಡಿಸುವದಕ್ಕೆ ಮನಸ್ಸೇ ಮೂಲವು. ಮನಸ್ಸಿನ ಚಾಪಲ್ಯವನ್ನು ಕುಗ್ಗಿಸಿದರೇ ಅಚಾಪಲವಾಗುತ್ತದೆ. ತಮ್ಮ ತಮ್ಮ ವ್ಯವಹಾರದ ಪ್ರಯೋಜನಕ್ಕಾಗಿ ಸಾಮಾನ್ಯಜನರರು ಕೂರ ಹೊರಗಿನ ಅಚಾಪಲವನ್ನು ಸಾಧಿಸಬಹುದು. ಒಮ್ಮೆ ಕೆಲವು ಜನ ಧೂರ್ತರು ತಮ್ಮಲ್ಲಿಯೇ ಒಬ್ಬನನ್ನು ಗುರುವೆಂದು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಊರೂರು ಮೆರೆಯಿಸುತ್ತಾ ಇದ್ದರು. ಹೊರಗೆ ನೋಡುವವರಿಗೆ ಯಾರಿಗೂ ಇವರ ಠಕ್ಕು ತಿಳಿಯಲಿಲ್ಲ. ಗುರುವು ಸ್ವಲ್ಪವೂ ಕೈಕಾಲುಗಳನ್ನು ಅಲುಗಾಡಿಸದೆ ಮೌನವಾಗಿ ಇರುತ್ತಿದ್ದನು. ಜನರು

ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ತಿಳಿಯುವವರಂತೆ ಬಂದು ಶಿಷ್ಯರು ವಸ್ತ್ರದಿಂದ ಬಾಯಿಮುಚ್ಚಿಕೊಂಡು "ನಗಬೇಡ!" ಎಂದು ಪಿಸುಮಾತಿನಲ್ಲಿ ಹೇಳಿಹೋಗುತ್ತಿದ್ದರಂತೆ! ಪಾಪ ಹೊರಗಿನವರಿಗೆ ಇದೆಲ್ಲ ಹೇಗೆ ಗೊತ್ತಾಗಬೇಕು? ಹೀಗೆ ಕೆಲವು ದಿನಗಳು ಕಳೆದ ಮೇಲೆ ಆ ಜನರು ತಮ್ಮ ಆಟವನ್ನು ನಿಲ್ಲಿಸಿಬಿಟ್ಟರು. ಕಟ್ಟಕಡೆಗೆ ಅವರ ಗುಟ್ಟು ರಟ್ಟಾಯಿತು! ಸ್ವಲ್ಪ ಬಿಗಿಯಿಂದ ಅವಯವಗಳನ್ನು ಹಿಡಿದಿಟ್ಟುಕೊಂಡು ಹೊರಗೆ ಗಾಂಭೀರ್ಯವನ್ನು ನಟಿಸಿದ ಮಾತ್ರದಿಂದ ಅಚಾಪಲವು ವಶವಾದೀತೆ? ಅಚಾಪಲವೆಂದರೆ ಚಾಪಲ್ಯವಿಲ್ಲದಿರುವದು ಎಂಬುದಿಷ್ಟೇ ಅಲ್ಲ; ಮತ್ತೇನೆಂದರೆ ಚಾಪಲ್ಯಕ್ಕೆ ವಿರುದ್ಧವಾದ ಸಾಧನವನ್ನು ಅಳವಡಿಸಿಕೊಳ್ಳುವದು. ಪರಮಾತ್ಮನನ್ನು ಬಿಟ್ಟರೆ ಮತ್ತೆ ಯಾವದರಲ್ಲಿಯೂ ಚಾಂಚಲ್ಯವಿಲ್ಲದಿರುವದಿಲ್ಲ. ಆದ್ದರಿಂದ ಮನಸ್ಸಿಗೆ ಆತ್ಮಚಿಂತನೆಯನ್ನು ಹತ್ತಿಸಿದರೆ, ಆತನ ನಾಮಸ್ಮರಣೆ, ಕೀರ್ತನೆ ಮುಂತಾದವುಗಳನ್ನು ಅನುಷ್ಠಾನಕ್ಕೆ ಇಟ್ಟುಕೊಂಡರೆ, ಅಚಾಪಲವು ಅಷ್ಟಷ್ಟು ಅಳವಡುತ್ತದೆ. ಮನಸ್ಸಿಗೂ ಇಂದ್ರಿಯಗಳಿಗೂ ಹೊರಮುಖವಾಗಿರುವದೇ ಸ್ವಭಾವ; ಅವುಗಳಿಗೆ ಗೋಚರಿಸುವ ವಿಷಯಗಳಿಗೆ ಮಾರ್ಪಡತ್ತಿರುವದೇ ಸ್ವಭಾವ. ಆದ್ದರಿಂದ ಅಂತರ್ಮುಖರಾಗದೆ ಇರುವವರಿಗೆ, ಪರಮಾತ್ಮನ ವಿಚಾರ, ಚಿಂತನೆ- ಮುಂತಾದವುಗಳನ್ನು ಸ್ವಲ್ಪವಾದರೂ ಅಭ್ಯಾಸಮಾಡದೆ ಇರುವವರಿಗೆ, ಅಚಾಪಲವು ದಕ್ಕಲಾರದು.



## ೧೫೩. ದೈವಸಂಪತ್ತು 16 - (3)

**(18-12-49)**

ದೈವಸಂಪತ್ತಿನ ಗುಣಗಳನ್ನೇ ಕೆಲವು ದಿನಗಳಿಂದಲೂ ವಿವರಿಸುತ್ತಾ ಬರುತ್ತಿದೆಯಷ್ಟೆ. ಇಂಥ ಗುಣಗಳ ಬೆಲೆಯು ಸಾಧನೆಯಿಂದಲೇ ಗೊತ್ತಾಗತಕ್ಕದ್ದು; ಬರಿಯ ಉಪನ್ಯಾಸ ಶ್ರವಣದಿಂದ ಗೊತ್ತಾಗುವದಲ್ಲ. ಈ ಸಾಧನಗಳಲ್ಲಿ ಯಾವದಾದರೊಂದನ್ನು ಒಗ್ಗಿಸಿಕೊಂಡರೆ ಸಾಕು, ಮಿಕ್ಕವುಗಳು ತಮಗೆ ತಾವೇ ಹಿಂಬಾಲಿಸುವವು. ಯಾವ ಸಾಧನವೇ ಆಗಲಿ ಪರಮಾತ್ಮನಲ್ಲಿ ಮನಸ್ಸನ್ನಿಟ್ಟುಕೊಳ್ಳುವದರಿಂದ ಬೇಗನೆ ದಕ್ಕುವದೆಂದು ತಿಳಿಯಬೇಕು.

ದೈವಸಂಪತ್ತಾದಮೇಲೆ ಆಸುರೀಸಂಪತ್ತಿನ ವಿವರವನ್ನು ಹೇಳಲಾಗುವದು. ಅದನ್ನು ಬಿಡುವದಕ್ಕಾಗಿ ಹೇಳಿದೆ; ದೈವಸಂಪತ್ತು ಅಳವಡಿಸಿಕೊಳ್ಳುವದಕ್ಕಾಗಿ ಹೇಳಿದ್ದು. ನಮ್ಮ ಅಂತಃಕರಣದಲ್ಲಿ ಈ ಎರಡು ಬಗೆಯ ಸಂಪತ್ತುಗಳಲ್ಲಿ ಒಂದೊಂದು ಒಂದೊಂದುಕಾಲದಲ್ಲಿ ಸಹಜವಾಗಿ ಎದ್ದುಕೊಂಡಿರುತ್ತದೆ. ನಮ್ಮಲ್ಲಿ ಯಾವದು ಹೆಚ್ಚಾಗಿದೆ ಎಂಬುದನ್ನು ತಿಳಿದು ದೈವಸಂಪತ್ತಿನ ಅಲೆಗಳೇ ಹೆಚ್ಚಾಗಿ ಎದ್ದುಕೊಳ್ಳುವಂತೆ ಮಾಡಿಕೊಳ್ಳಬೇಕು. ಇದಕ್ಕಾಗಿಯೇ

ಗೀತೆಯಲ್ಲಿ ಮೊದಲು ದೈವಸಂಪತ್ತನ್ನು ತಿಳಿಸಿರುವದು. ಆಸುರಸಂಪತ್ತೂ ದೈವಸಂಪತ್ತೂ ಆಗಾಗ್ಗೆ ನಮ್ಮ ಬಳಿಯಲ್ಲಿ ಬಂದು ಕಾಣಿಸಿಕೊಳ್ಳುತ್ತಿರುತ್ತವೆ. ನಾವು ಎಚ್ಚರಿಕೆಯಿಂದ ಇದ್ದು ದೈವಸಂಪತ್ತನ್ನೇ ಆರಿಸಿಕೊಂಡು ಮುಂದುವರಿಯಬೇಕು. ಹಿಂದೆ ಶೃಂಗೇರಿ ಪೀಠಾಧಿಪರಾಗಿದ್ದ ಶ್ರೀಸಚ್ಚಿದಾನಂದಶಿವಾಭಿನವನೃಸಿಂಹಭಾರತೀಸ್ವಾಮಿಗಳವರುಃ ಒಮ್ಮೆ ಶಿಷ್ಯರಿಗೆ ಉಪದೇಶಿಸುತ್ತಿದ್ದಾಗ ಹತ್ತಿರದಲ್ಲಿಯೇ ಒಂದು ಹಾವು ಹರಿದು ಬಂದಿತಂತೆ. ಆದರೂ ಅವರು ಅದನ್ನು ಕಾಣದೆ ಇದ್ದರೆ ಹೇಗೋ ಹಾಗೆ ಉಪದೇಶವನ್ನು ಮಾಡುತ್ತಲೇ ಇದ್ದರು. ಶಿಷ್ಯರುಗಳಿಗೆ ಹೆದರಿಕೆಯೇನೋ ಆಯಿತು; ಆದರೆ ಗುರುಗಳು ಏಳದೆ ಇದ್ದದ್ದರಿಂದ ತಾವೂ ಹೇಗೋ ಸುಮ್ಮನೆ ಕುಳಿತಿದ್ದರು. ಆಗ ಗುರುಗಳು "ಹಾವೇನೋ ಬಂದಿತು; ಹಾಗೆಯೇ ಅದು ಹೋಗಿಬಿಡುತ್ತದೆ. ಆದರೆ ನೀವು ಅದರ ಕಡೆಗೆ ನೋಡಿದಷ್ಟೂ, ಹುಷ್! ಎಂದು ಅದನ್ನು ಹೆದರಿಸಿದಷ್ಟೂ ಅದು ನಿಮ್ಮ ಕಡೆಗೇ ತಿರುಗುವ ಸಂಭವವಿದೆ" ಎಂದರಂತೆ. ಆಸುರಸಂಪತ್ತೂ ಹೀಗೆಯೇ. ಅದು ನೈಸರ್ಗಿಕವಾಗಿಯೇ ನಮ್ಮ ಕಡೆಗೆ ಬಂದು ಹರಿದುಹೋಗುತ್ತಿರುತ್ತದೆ. ಆದರೆ ನಾವು ಅದರ ಕಡೆಗೆ ಕಣ್ಣು ತಿರುಗಿಸಬಾರದು; ಅದನ್ನು ನೇರಾಗಿ ಹೊಡೆದೋಡಿಸುವ ಪ್ರಯತ್ನವನ್ನೂ ಮಾಡಬಾರದು. ಹಾಗಾದರೆ ಅದು ನಮ್ಮ ಮೇಲೆಯೇ ತಿರುಗಿಬೀಳುವ ಸಂಭವವು ಹೆಚ್ಚಾಗಿರುತ್ತದೆ. ಅದು ಹತ್ತಿರಕ್ಕೆ ಬಾರದೇಇದ್ದರೆ ಹೇಗೋ ಹಾಗೆ ನಮ್ಮಷ್ಟಕ್ಕೆ ನಾವು ದೈವಸಂಪತ್ತಿನ ಗುಣಗಳನ್ನು ಸಂಪಾದಿಸುವದಕ್ಕೂ ಬೆಳೆಯಿಸಿಕೊಳ್ಳುವದಕ್ಕೂ ಪ್ರಯತ್ನ ಮಾಡುತ್ತಿರಬೇಕು. ಹಾಗಾದರೆ ಅದು ತನ್ನಷ್ಟಕ್ಕೆ ತಾನೇ ಕಣ್ಮರೆಯಾಗಿಬಿಡುತ್ತದೆ.

ಈ ದಿನ "ತೇಜಃ ಕ್ಷಮಾ ಧೃತಿಃ ಶೌಚಮ್" ಎಂಬ ಶ್ಲೋಕಾರ್ಥದ ಕಡೆಗೆ ತಿರುಗಬೇಕಾಗಿರುತ್ತದೆ. ತೇಜಸ್ಸು ಎಂದರೆ ಕಾಂತಿಯು. ಇಲ್ಲಿ ಶರೀರದ ಕಾಂತಿಯೇನೂ ವಿವಕ್ಷಿತವಲ್ಲ; ಉತ್ಸಾಹಶಕ್ತಿಯೆಂದು ಅದಕ್ಕೆ ಅರ್ಥವನ್ನು ಮಾಡಿಕೊಳ್ಳಬಹುದು. ರಾಜರಿಗೆ ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿ-ಎಂಬು ಮೂರು ಶಕ್ತಿಗಳಿರಬೇಕು ಎಂದು ನೀತಿಶಾಸ್ತ್ರದಲ್ಲಿ ಹೇಳಿದೆ. ಈ ಉತ್ಸಾಹಶಕ್ತಿಯಲ್ಲಿ ತೇಜಸ್ಸು ಸೇರಿರುತ್ತದೆ. ಪರಮಾತ್ಮನ ಷಡ್ಗುಣಗಳಲ್ಲಿ ಈ ತೇಜಸ್ಸು ಒಂದು ; ಅದು ಆತನಿಗೆ ನಿತ್ಯಸ್ವಭಾವವಾಗಿರುತ್ತದೆ ಎಂದು ಶ್ರೀ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಬರೆದಿರುತ್ತಾರೆ. ಅಧ್ಯಾತ್ಮಸಾಧನೆಗೂ ಮಿಕ್ಕ ಕೆಲಸಗಳಂತೆ ತೇಜಸ್ಸು, ಅಥವಾ ಉತ್ಸಾಹವು, ಅತ್ಯಂತ ಅವಶ್ಯವಾಗಿರುತ್ತದೆ. ಹಿಂದೆ ಒಬ್ಬ ಪ್ರಸಿದ್ಧಸೇನಾಧಿಪತಿಯು ತನ್ನ ಸೈನ್ಯವನ್ನು ಮುನ್ನಡೆಯಿಸುತ್ತಿರಲು ದಾರಿಗೆ ಅಡ್ಡಲಾಗಿ ಆಲ್ಪ್ಸ್‌ಪರ್ವತವು ಬಂದಿತು; ಆಗ ಸೈನಿಕರು "ಆಲ್ಪ್ಸ್ ನಮಗೆ ಪ್ರತಿಬಂಧಕವಾಗಿದೆಯಲ್ಲ, ಏನು ಮಾಡೋಣ?"- ಎನ್ನುತ್ತಿರುವಲ್ಲಿ ಆ ಮಹಾವೀರನು "ಆಲ್ಪ್ಸ್ ಅಡ್ಡನಿಲ್ಲದಂತೆ ಆಗಲಿ!" ಎಂದನಂತೆ. ಸೈನಿಕರು ಒಂದು ಸುರಂಗದ ಮಾರ್ಗವನ್ನು ಮಾಡಿಕೊಂಡು ಮುಂದಕ್ಕೆ ನುಗ್ಗಿಯೇ ಬಿಟ್ಟರು! ಭರತನು ಶ್ರೀರಾಮನನ್ನು ನೋಡುವದಕ್ಕೆಂದು ಹೊರಟಾಗ ಸೇನೆಯ ಮುಂದೆಯೇ ಕೆಲಸಗಾರರು ಕಾಡಿನಲ್ಲಿಯೂ ರಸ್ತೆಗಳನ್ನು ಮಾಡಿಕೊಂಡು ಹೊರಟರೆಂದು

ರಾಮಾಯಣದಲ್ಲಿದೆ. ಈಗಲೂ ಮಿಲಿಟರಿ ಇಲಾಖೆಯವರು ರಹಸ್ಯವಾಗಿ ದೇಶದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಹೋಗುವಾಗ ತಾತ್ಕಾಲಿಕವಾದ ರಸ್ತೆಗಳು, ಸೇತುವೆಗಳು-ಮುಂತಾದವುಗಳನ್ನು ರಚಿಸಿಕೊಳ್ಳುತ್ತಾರೆ. ಹೀಗೆಯೇ ದೈವಸಂಪತ್ತಿನ ಸಾಧಕನು ಅಧ್ಯಾತ್ಮ ಸಾಧನಗಳಿಗೆ ಯಾವ ಅಡಚಣೆಯು ಬಂದರೂ ತನ್ನ ತೇಜಸ್ಸಿನಿಂದಲೇ ಅದೆಲ್ಲವನ್ನೂ ಲೀಲಾಮಾತ್ರದಿಂದ ದಾಟಿಕೊಂಡು ಮುನ್ನುಗ್ಗುತ್ತಾನೆ. ಗೋಂದಾವಳಿಯ ಮಹಾರಾಜರು ತಮ್ಮ ಬಳಿಗೆ ತಂಡತಂಡವಾಗಿ ಬರುತ್ತಿದ್ದ ಶಿಷ್ಯರಿಗೆ ಏನಾದರೊಂದು ಕೆಲಸವನ್ನು ಕಲ್ಪಿಸುತ್ತಲೇ ಇದ್ದರು. ಅವರು ಅಲ್ಲಿ ಒಂದು ಸಣ್ಣ ಸಕ್ಕರೆಯಂತ್ರವನ್ನಿಡಿಸಿದ್ದರಂತೆ. ಕೆಲವು ಸಾರಿ ಅವಶ್ಯಬಿದ್ದರೆ ಒಂದು ಮನೆಯ ತೊಲೆಯೇ ಮುಂತಾದದ್ದನ್ನು ಕೂಡ ತೆಗೆಯಿಸಿ ಸೌದೆಗೆ ಉಪಯೋಗಿಸಿ ಮತ್ತೆ ಹೊಸದಾಗಿಯೇ ಮನೆಯನ್ನು ಕಟ್ಟಿಸುತ್ತಿದ್ದರು. ನಮ್ಮಂಥವರಿಗೆ ಅದೊಂದು ಹುಚ್ಚು ಎಂದು ತೋರಬಹುದು; ಆದರೆ ಅದರಲ್ಲಿಯೂ ಒಂದು ತತ್ತ್ವವಿದೆ! ಪರಮೇಶ್ವರನು ಕಲ್ಪಾಂತದಲ್ಲಿ ಇಡಿಯ ಬ್ರಹ್ಮಾಂಡವನ್ನೇ ಸಂಹಾರಮಾಡಿ ಹೊಸದೊಂದನ್ನು ಸಂಕಲ್ಪಮಾತ್ರದಿಂದ ಸೃಜಿಸಿಬಿಡುತ್ತಾನೆ. ಒಂದು ಗುಡಿಸಲನ್ನು ಕೂಡ ಹೊಸದಾಗಿ ಕಟ್ಟಿಸುವದಕ್ಕೆ ಯೋಗ್ಯತೆಯಿಲ್ಲದವರು ಅದು ಸಲ್ಲದ ಕಾರ್ಯವೆಂದೇ ಬಗೆಯಬಹುದಲ್ಲವೆ? ಆದರೆ ನಿಜವಾಗಿ ಅಲ್ಲಿ ಪರಮಾತ್ಮನ ತೇಜಸ್ಸೇ ವ್ಯಕ್ತವಾಗುತ್ತದೆ.

ಸಾಧಕರು ಇಂಥ ತೇಜಸ್ಸಿನಿಂದ ಅಥವಾ ಉತ್ಸಾಹದಿಂದ ಕೂಡಿ ಮುನ್ನಡೆಯಬೇಕು. ಎಷ್ಟೋ ಜನರು `ನಾವೆಲ್ಲಿ, ಬ್ರಹ್ಮಜ್ಞಾನವೆಲ್ಲಿ?' ಎಂದು ನಿರುತ್ಸಾಹರಾಗಿ ಪರಾಗ್ವಿಷಯಗಳಲ್ಲಿಯೇ ಮನಸ್ಸಿಟ್ಟು ಅದರಲ್ಲಿಯೂ ಉತ್ಸಾಹವು ಸಾಲದೆ, "ನಮ್ಮ ಯೋಗ್ಯತೆಗೆ ಇಷ್ಟೇ ಸಾಕು!" ಎಂಬ ಅಭಾವವಿರಕ್ತಿಯನ್ನು ಪ್ರದರ್ಶಿಸುತ್ತಾರೆ. ನಿಜವಾದ ಸಾಧಕನಲ್ಲಿ ತನ್ನ ಆಯುಸ್ಸೆಲ್ಲ ಕಳೆಯುತ್ತಾ ಬಂದಿದ್ದರೂ ಸಾಧನವಿಷಯದ ಉತ್ಸಾಹವು ಕುಗ್ಗಿರುವದಿಲ್ಲ. ಖಟ್ವಾಂಗರಾಜನು ತಪಸ್ಸುಮಾಡುತ್ತಿರುವಲ್ಲಿ ದೇವದೂತರು ಬಂದು ಅವನಿಗೆ ಸ್ವರ್ಗಕ್ಕೆ ಬರಲು ಇಂದ್ರನು ಆಹ್ವಾನವಿತ್ತಿದ್ದಾನೆಂದು ಕರೆದರು. ಆದರೆ ಅವನಿಗೆ ಸ್ವರ್ಗವು ಕೂಡ ಅಲ್ಪವಾಗಿ ಕಂಡಿತು. "ನನಗೆ ನಿಮ್ಮ ಸ್ವರ್ಗವು ಬೇಡ; ನನ್ನ ಆಯುಸ್ಸು ಇನ್ನೆಷ್ಟಿದೆ, ಹೇಳಿ" ಎಂದು ಆತನು ಕೇಳಿದನು. ಅವನಿಗೆ ಇನ್ನು ಎರಡು ಮುಹೂರ್ತಮಾತ್ರ ಆಯುಸ್ಸು ಇತ್ತಂತೆ ಆದರೂ ಅವನು ಅಷ್ಟುಕಾಲದಲ್ಲಿಯೇ ಪರಮಾತ್ಮನ ಸಾಯುಜ್ಯವನ್ನು ಪಡೆಯಬೇಕೆಂದು ಪ್ರಯತ್ನಮಾಡಿ ಜಯಶೀಲನಾದನಂತೆ.

ಕಲಿಯುಗದಲ್ಲಿ ಇತ್ತೀಚಿನ ಕಾಲದಲ್ಲಿ, ಅದರಲ್ಲಿಯೂ ಪಾಶ್ಚಾತ್ಯರಲ್ಲಿ, ನಡೆದ ಒಂದು ಘಟನೆಯನ್ನು ಇಲ್ಲಿ ಉದಾಹರಿಸಬಹುದು. ಜಾರ್ಜ್ ಮುಲ್ಲರ್ ಎಂಬಾತನು ಈಶ್ವರನನ್ನು ನಂಬಿದವರ ಯೋಗಕ್ಷೇಮವನ್ನು ಆತನೇ ನೋಡಿಕೊಳ್ಳುತ್ತಾನೆ ಎಂಬ ನಂಬಿಕೆಯಲ್ಲಿ ಏನಾದರೂ ತತ್ತ್ವವಿದೆಯೆ? ಎಂಬುದನ್ನು ಗೊತ್ತು ಮಾಡುವದಕ್ಕಾಗಿ ಪ್ರಯತ್ನಿಸಿದನು. ಅವನು ಈ ನಂಬಿಕೆಯನ್ನು ಆಚರಣೆಯ ಕ್ಷೇತ್ರಕ್ಕೆ ಇಳಿಸುವದಕ್ಕೆ ಪ್ರಯತ್ನಪಟ್ಟಾಗ ತಂದೆತಾಯಿಗಳು,

ಇತರ ಜನಗಳು-ಎಲ್ಲರೂ ಸಹಾಯವನ್ನು ಮಾಡುವದಕ್ಕೆ ಹಿಂತೆಗೆದರೂ ಮನಸ್ಸಿಗೆ ತಂದುಕೊಳ್ಳದೆ ಪ್ರಯತ್ನಮಾಡಿ ಧರ್ಮಾತ್ಮರಾದವರು ಅಪ್ರಾರ್ಥಿತವಾಗಿ ಕೊಟ್ಟ ಧನಸಹಾಯದಿಂದಲೇ ಒಂದು ಅನಾಥಾಲಯವನ್ನು ನಿರ್ಮಿಸಿದನು. ಆಲಯದಲ್ಲಿ ನೂರಾರು ಹುಡುಗರು ಇದ್ದುಕೊಂಡಿದ್ದರು; ಅವರ ಖರ್ಚುವೆಚ್ಚಗಳಿಗೆ ಸಾಲದೆ ಇದ್ದರೆ ವಾರ್ಷಿಕ ವೃತ್ತಾಂತದ ವರದಿಯನ್ನು ಸ್ವಲ್ಪ ತಡೆದು ಪ್ರಕಟಿಸುತ್ತಿದ್ದನು. ಅನಾಥಾಲಯವು ಕಷ್ಟದಲ್ಲಿದೆ ಎಂಬ ಕಾರಣದಿಂದ ಯಾರೂ ಒತ್ತಾಯದಿಂದ ಹಣವನ್ನು ಕೊಡಬಾರದು; ತಾವಾಗಿಯೇ ಇದು ಯೋಗ್ಯವಾದ ಕಾರ್ಯವೆಂಬ ದೃಷ್ಟಿಯಿಂದ ಸಹಾಯಮಾಡುವ ಉದಾರಹೃದಯರ ಸಹಾಯವನ್ನು ಮಾತ್ರ ಸ್ವೀಕರಿಸಬೇಕು- ಎಂಬುದು ಅವನ ನಡತೆಯ ಸೂತ್ರವಾಗಿತ್ತು. ಒಮ್ಮೆ ಅನಾಥಾಲಯದಲ್ಲಿ ಹುಡುಗರಿಗೆ ತತ್ಕಾಲಕ್ಕೆ ಬೇಕಾದ ಅನ್ನಾಹಾರವು ಕೂಡ ಇರಲಿಲ್ಲ. ಭೋಜನದ ಏರ್ಪಾಡು ಮಾಡುವ ವ್ಯವಸ್ಥಾಪಕನು ಇದ್ದ ಸಂಗತಿಯನ್ನು ತಿಳಿಸಿದನು. ಆದರೂ ಮುಲ್ಲರನು ಎದೆಗೆಡಲಿಲ್ಲ. ಊಟದ ಹೊತ್ತಿಗೆ ಸರಿಯಾಗಿ ಘಂಟೆಯನ್ನು ಹೊಡೆಯುವಂತೆ ಆಜ್ಞಾಪಿಸಿದನು. ಊಟದ ತಟ್ಟೆಗಳನ್ನು ಯಥಾಕ್ರಮವಾಗಿ ಹಾಕಿದರು. ಊಟದ ಕಾಲದ ಪ್ರಾರ್ಥನೆಯೂ ನಡೆಯಿತು. ಊಟವು ಪ್ರಾರಂಭವಾಗುವ ವೇಳೆಗೆ ಸರಿಯಾಗಿ ಒಂದು ವಿಚಿತ್ರದೈವಿಕ ಘಟನೆಯು ನಡೆಯಿತಂತೆ. ಯಾರೋ ಅನಿರೀಕ್ಷಿತವಾಗಿ ಎರಡುಗಾಡಿಯ ತುಂಬ ರೊಟ್ಟಿಗಳನ್ನು ಹೇರಿಕೊಂಡು ಬಂದು ಅನಾಥಾಯಲಕ್ಕೆ ಸಲ್ಲಿಸಿಬಿಟ್ಟರು! ಇಂಥ ಇತಿಹಾಸಗಳನ್ನು ಕೇಳಿದ ಸಾಧಕರಿಗೆ ಇದರಿಂದ ಉತ್ಸಾಹವು ಉಕ್ಕಿಬರುವದಿಲ್ಲವೆ?

ಈಗ ಕ್ಷಮೆ ಎಂಬ ಗುಣದ ವಿಚಾರವಾಗಿ ಮಾತನಾಡಬೇಕಾಗಿದೆ. ನಮಗೆ ಮತ್ತೊಬ್ಬರು ಯಾವ ಅಪರಾಧವನ್ನು ಮಾಡಿದರೂ ಬಯ್ದರೆ, ಹೊಡೆದರೆಕೂಡ, ಸಹಿಸಿಕೊಳ್ಳುವದು ಕ್ಷಮೆಯು. ಇದು ಧೀರರಿಗೆ ಮಾತ್ರ ದಕ್ಕುವ ಸಾಧನವು. ಉಪಕಾರವನ್ನು ಮಾಡುವವರಿಗೆ ಉಪಕಾರಮಾಡುವದರಲ್ಲೇನೂ ಹೆಚ್ಚಿಗೆಯಿಲ್ಲ; ಆದರೆ ಅಪಕಾರಿಗಳಿಗೂ ಒಳ್ಳೆಯದನ್ನೇ ಮಾಡುವವನು ನಿಜವಾಗಿ ಸಾಧುವೆನಿಸುತ್ತಾನೆ-ಎಂದು ಒಂದು ಸುಭಾಷಿತವಿದೆ. ಇಂಥ ಕ್ಷಮಾಗುಣವು ಬಲುಹೆಚ್ಚಿನ ಮಟ್ಟವನ್ನು ಏರಿರುವ ಸತ್ತ್ವಗುಣಪ್ರಧಾನರಾದ ಅಂತಃಕರಣದವರಿಗೆ ಮಾತ್ರವೇ ಅಳವಡುತ್ತದೆ. ಶ್ರೀರಾಮನು ವೀರ್ಯದಲ್ಲಿ ಯಾರಿಗೂ ಕಡಿಮೆಯಿರಲಿಲ್ಲ; ಆದರೆ ಶರಣಾಗತರಾದವರು ತನಗೇ ಅಪಕಾರವನ್ನು ಮಾಡಿದ್ದರೂ ಅದನ್ನು ಮರೆತು ಕ್ಷಮಿಸುತ್ತಿದ್ದನು. ಕಾಕಾಸುರನ ಕಥೆಯನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು.

ತಮಗೆ ಪ್ರತೀಕಾರವನ್ನು ಮಾಡುವ ಶಕ್ತಿಯಿಲ್ಲದಾಗ ಮತ್ತೊಬ್ಬರನ್ನು ಕ್ಷಮಿಸಿದ್ದೇನೆಂದು ಹೆಮ್ಮೆಪಡುವವರೂ ಲೋಕದಲ್ಲಿ ಉಂಟು. ಆದರೆ ಅದು ನಿಜವಾದ ಕ್ಷಮೆಯಾಗುವದಿಲ್ಲ. ಭಾರತದಲ್ಲಿ ಕಶ್ಯಪಶೃಂಗಾಲಸಂವಾದವೆಂಬ ಆಖ್ಯಾನವಿದೆ. ಅದನ್ನು ನಿಮ್ಮಲ್ಲಿ ಕೆಲವರಾದರೂ ಕೇಳಿರಬಹುದು. ಕಶ್ಯಪನು ಒಬ್ಬ ಬಡಬ್ರಾಹ್ಮಣನು; ಅವನನ್ನು ಒಬ್ಬ ಧನಿಕನ ರಥವು ದಾರಿಯಲ್ಲಿ ಕೆಡವಿ ಮುಂದಕ್ಕೆ ಹೋಯಿತು. ಈಗಿನ ಕಾಲದಲ್ಲಿ

ಮೋಟಾರ್ ಅಪಘಾತಗಳು ಪ್ರಚುರವಾಗಿವೆಯಷ್ಟೆ; ಆದರೆ ತಮಗೆ ಅವುಗಳಿಂದ ಆದ ನಷ್ಟಕ್ಕೆ ಕೋರ್ಟಿನಲ್ಲಿ ಆಗುವ ದಾವಾಗಳೂ ಅಷ್ಟೇ ಹೆಚ್ಚಾಗಿರುತ್ತವೆ. ಕಶ್ಯಪನು ಆ ಮದಾಂಧನಾದ ಧನಿಕನಿಂದ ತನಗೆ ಆದ ಅಪಮಾನಕ್ಕೂ ತೊಂದರೆಗೂ ಬೇಸತ್ತು ಪ್ರತೀಕಾರವನ್ನೇನೂ ಮಾಡಲರಿಯದೆ ಆತ್ಮಹತ್ಯೆಯನ್ನು ಮಾಡಿಕೊಳ್ಳುವದಕ್ಕೆ ಪ್ರಯತ್ನಿಸಿದನು. ಆ ಸಮಯಕ್ಕೆ ಇಂದ್ರನು ನರಿಯ ವೇಷದಿಂದ ಬಂದು ಅವನಿಗೆ ಬುದ್ಧಿ ಹೇಳಿದನು-ಎಂಬುದು ಭಾರತಕಥೆಯ ಸಾರವು. ಈ ಸಂದರ್ಭದಲ್ಲಿ ಕಶ್ಯಪನು ಸಾಹುಕಾರನನ್ನು ಕ್ಷಮಿಸಿದನು-ಎಂದು ಯಾರೂ ಬಗೆಯುವದಿಲ್ಲ. ಕ್ಷಮೆಗೂ ಹೇಡಿತನಕ್ಕೂ ಬಹಳ ಅಂತರವಿದೆ.

ಆದರೆ ಕ್ರೈಸ್ತನು ತನ್ನನ್ನು ಶಿಲುಬೆಗೆ ಹಾಕಿದ ಯಹೋದ್ಯರ ಮೇಲೆ ಸ್ವಲ್ಪವೂ ರೇಗಿಕೊಳ್ಳದೆ ತನ್ನ ಮರಣದ ಕಾಲದಲ್ಲಿಯೂ ಈಶ್ವರನನ್ನು "ತಂದೆಯೆ, ಇವರನ್ನು ಕ್ಷಮಿಸು; ಅವರಿಗೆ ತಾವು ಮಾಡುವದು ತಪ್ಪೆಂಬುದು ತಿಳಿಯದು!" ಎಂದು ಪ್ರಾರ್ಥಿಸಿದನಂತೆ. ಕ್ರೈಸ್ತನು ಮತ್ತೊಬ್ಬರಿಗೆ ಅಂಜಿ ಹಾಗೆ ಮಾಡಲಿಲ್ಲವೆಂಬುದು ಅವನ ವರ್ತನೆಯಿಂದ ಗೊತ್ತಾಗುತ್ತದೆ. ಇವನು ತಾನೇ ರಾಜನೆಂದು ಹೇಳಿಕೊಳ್ಳುತ್ತಾನೆಂದು ಜನರು ಅವನ ಮೇಲೆ ಆರೋಪಣೆ ಮಾಡಿ ಪೈಲೆಟ್ ಎಂಬ ರೋಮನ್ ಗವರ್ನರನ ಬಳಿಗೆ ಅವನನ್ನು ಕರೆತಂದರು. ಗವರ್ನರನು `ನೀನು ಯಹೋದ್ಯರ ಅರಸೊ?'ಎಂದು ಕೇಳಲು "ನನ್ನ ರಾಜ್ಯವು ಈ ಲೋಕದ್ದಲ್ಲ; ನಾನು ಈ ಲೋಕಕ್ಕೆ ಬಂದದ್ದು ಜನರಿಗೆ ತತ್ತ್ವವನ್ನು ಉಪದೇಶಿಸುವದಕ್ಕಾಗಿ. ಯಾರು ಯಾರಿಗೆ ತತ್ತ್ವವು ಬೇಕೋ ಅವರೆಲ್ಲ ನನ್ನ ಮಾತನ್ನು ಕೇಳುತ್ತಾರೆ" ಎಂದು ಉತ್ತರವನ್ನು ಕೊಟ್ಟನಂತೆ! ಯಾವ ಅಧಿಕಾರಿಗೂ ಅಂಜದೆ ಧೈರ್ಯದಿಂದ ಇದ್ದದ್ದನ್ನು ಹೇಳುತ್ತಾ ಜನರಿಗೆ ಉಪಕಾರವನ್ನೇ ಮಾಡುತ್ತಿದ್ದ ಆ ನಿರಪರಾಧಿಯನ್ನು ಆ ದೇಶದಲ್ಲಿ ಕೆಲವರು ಅಸೂಯೆಯಿಂದ ಮರಣದಂಡನೆಗೆ ಗುರಿಮಾಡಿದರು. ಆಗಲೂ ಅವರನ್ನು ಕ್ಷಮಿಸೆಂದು ಈಶ್ವರನನ್ನು ಪ್ರಾರ್ಥಿಸಿದ ಕ್ಷಮಾವಂತನವನು!

ಭಾರತದಲ್ಲಿ ಧರ್ಮರಾಯನ ಕ್ಷಮಾಗುಣವನ್ನು ನಾವು ನೆನಪಿಗೆ ತಂದುಕೊಳ್ಳಬಹುದಾಗಿದೆ. ದುರ್ಯೋಧನನು ಕಪಟದ್ಯೂತದಲ್ಲಿ ಅವನನ್ನು ಗೆದ್ದು ಬಗೆಬಗೆಯಿಂದ ಅಪಮಾನವನ್ನು ಮಾಡಿ ಕಾಡಿಗೆ ಅಟ್ಟಿದವನಲ್ಲವೆ? ಅಲ್ಲಿಯಾದರೂ ಪಾಂಡವರು ನೆಮ್ಮದಿಯಿಂದ ಇರುವದು ಅವನಿಗೆ ಸಹಿಸಲಿಲ್ಲ. ತನ್ನ ಐಶ್ವರ್ಯವನ್ನು ಅವರ ಮುಂದೆ ಮೆರೆಯಿಸಿ ಅವರ ಮನಸ್ಸಿಗೆ ವ್ಯಥೆಯನ್ನುಂಟುಮಾಡಬೇಕೆಂದು ಅವನು ಸಂಕಲ್ಪಿಸಿದನು. ಅವನು ಘೋಷಯಾತ್ರೆಯ ನೆಪದಿಂದ ಪಾಂಡವರಿದ್ದ ವನಕ್ಕೆ ಸೈನ್ಯಸಮೇತನಾಗಿ ಬಂದನು. ಕಾರಣಾಂತರದಿಂದ ಗಂಧರ್ವರು ಅವನನ್ನು ಸೆರೆಹಿಡಿದುಕೊಂಡು ಹೊರಟುಹೋದರು. ಈ ಸುದ್ದಿಯನ್ನು ಕೇಳಿದ ಧರ್ಮರಾಯನು ಇಂಥ ದುಷ್ಟಶತ್ರುವಿಗೆ ಕೂಡ ಒಳ್ಳೆಯದನ್ನೇ ಹಾರೈಸಿ ತನ್ನ ತಮ್ಮನಾದ ಅರ್ಜುನನ ಮೂಲಕ ಅವನನ್ನು ಬಿಡಿಸಿ ಸಮಾಧಾನಗೊಳಿಸಿ ಊರಿಗೆ ಕಳುಹಿಸಿಕೊಟ್ಟನು. ಇದು ಎಂಥ ಕ್ಷಮೆ!

ಇನ್ನು ಧೃತಿ. ಇದು ತೇಜಸ್ಸಿನ ಹೊರಗಿನ ರೂಪವೆನ್ನಬಹುದು. ಶರೀರೇಂದ್ರಿಯಗಳು ಅವಸಾದದಿಂದ ಕುಗ್ಗಿ ಕುಸಿಯುತ್ತಿರುವಾಗ ಅವುಗಳನ್ನು ಹಿಡಿದೆತ್ತಿಕೊಂಡು ಸ್ವಲ್ಪವೂ ಎದೆಗೆಡದೆ ಇರುವದು ಧೃತಿಯು. ಈ ಲೋಕದಲ್ಲಿ ನಮಗೆ ಬಗೆಬಗೆಯ ಕಷ್ಟಗಳು ಬರುತ್ತಿರುವವು. ಆದರೆ ಆಗ ಅವಕ್ಕೆ ವಶರಾಗಿ ಉಸ್ಸೆಂದು ಕುಸಿಯುವ ಸ್ವಭಾವವು ಮನುಷ್ಯನ ಅಭಿವೃದ್ಧಿಗೆ ಅಡ್ಡಿಯನ್ನುಂಟುಮಾಡುತ್ತದೆ. ಅಧ್ಯಾತ್ಮಮಾರ್ಗದಲ್ಲಂತೂ ಧೃತಿಯಿಲ್ಲದವರು ಸ್ವಲ್ಪವೂ ಮುಂದುವರಿಯಲಾರರು.

ಲೋಕದಲ್ಲಿ ಕೆಲವರಿಗೆ ಸ್ವಭಾವದಿಂದಲೇ ಧೃತಿಯಿರುತ್ತದೆ. ಅವರು ತಮಗೆ ಎಂಥ ಕಷ್ಟವು ಬಂದೊದಗಿದರೂ ಮನಸ್ಸಿಗೆ ಹತ್ತಿಸಿಕೊಳ್ಳದೆ ಇರುತ್ತಾರೆ. ತಮ್ಮ ಕರ್ತವ್ಯವನ್ನು ತಾವು ಮಾಡುತ್ತಲೇ ಇರುತ್ತಾರೆ. ಒಬ್ಬ ದೊಡ್ಡ ಮನುಷ್ಯರಿಗೆ ಇಬ್ಬರು ಅಳಿಯಂದಿರು ಒಬ್ಬರಾಗುತ್ತಲೂ ಒಬ್ಬರು ಸ್ವಲ್ಪ ಕಾಲದಲ್ಲಿಯೇ ಸ್ವರ್ಗಸ್ಥರಾದರು. ಅವರ ಕುಟುಂಬಕ್ಕೆ ಅದರಿಂದ ಬಹಳ ಸಂಕಟವು ಬಂದೊದಗಿತ್ತು. ಈ ದುಃಖಕಾಲದಲ್ಲಿಯೂ ಮನಃಸಮಾಧಾನವನ್ನು ಕೆಡಿಸಿಕೊಳ್ಳದೆ ಮನೆಯವರಿಗೆಲ್ಲ ಧೈರ್ಯವನ್ನು ಹೇಳುತ್ತಿದ್ದ ಆ ಮಹನೀಯರನ್ನು ನೋಡಿ ಅನುತಾಪವನ್ನು ಸೂಚಿಸುವದಕ್ಕೆ ಕೆಲವರು ಬಂದು `ನಿಮಗೆ ಬಹಳ ಕಷ್ಟವು ಒದಗಿತು!' ಎಂದು ಮೇಲಿಂದ ಮೇಲೆ ಹೇಳುತ್ತಿದ್ದರು; ಆದರೂ ಅವರು `ನನಗೆ ಮಾತ್ರ ಹೆಚ್ಚಿನ ಕಷ್ಟವೇನು ಬಂದಿದೆ? ಮನುಷ್ಯನಿಗೆ ಇದು ಬರತಕ್ಕದ್ದೇ ಅಲ್ಲವೆ?' ಎಂದು ಬಂದವರಿಗೆ ಸಮಾಧಾನ ಹೇಳಿ ಕಳುಹಿಸುತ್ತಿದ್ದರು! ಇದೇ ದೊಡ್ಡ ಮನುಷ್ಯರಿಗೆ, ಮತ್ತೊಬ್ಬ ಇವರ ಸ್ನೇಹಿತರಿಗೆ ಕೂಡ ಸರಕಾರದಲ್ಲಿ ಯಾವದೋ ಇಲಾಖೆಯ ಅವಶ್ಯಕತೆಯ ಕಾರಣದಿಂದ ತಾತ್ಕಾಲಿಕವಾಗಿ ಸ್ಥಾನಪಲ್ಲಟವಾಯಿತು; ಆಗ ಇವರಿಬ್ಬರಿಗೂ ಈ ಬದಲಾವಣೆಯಿಂದ ಅನ್ಯಾಯವಾಗಿತ್ತು. ಆದರೆ ಆ ಸ್ನೇಹಿತರು ಈ ಬದಲಾವಣೆಯಿಂದ ಧೃತಿಗೆಟ್ಟು ಪಟ್ಟ ವ್ಯಥೆಯು ಅವರ ಮುಖದಮೇಲೆ ಯಾರಿಗಾದರೂ ಕಾಣುವಷ್ಟು ಸ್ಫುಟವಾಗಿತ್ತು; ಈ ಮಹನೀಯರು ಮಾತ್ರ ತಮಗೆ ಏನೂ ಆಗದೆ ಇದ್ದರೆ ಹೇಗೋ ಹಾಗೆ ಉಲ್ಲಾಸದಿಂದಲೇ ಇದ್ದುಬಿಟ್ಟರು. ಹೀಗೆ ಆಗಿಂದಾಗ್ಗೆ ಒದಗುವ ಸಂಕಷ್ಟಗಳಿಂದ ಮನಸ್ಸಿನಲ್ಲಿ ಕುಸಿಯದೆ ಇರುವಷ್ಟು ದಾರ್ಢ್ಯವಿರುವದು ವ್ಯವಹಾರದಲ್ಲಿಯೇ ಬಹಳ ಲಾಭದಾಯಕವಾಗಿರುತ್ತದೆ; ಪರಮಾರ್ಥಸಾಧನೆಗಂತೂ ಅದರಿಂದ ಅತ್ಯುತ್ತಮ ಪ್ರಯೋಜನವುಂಟು. ಮಹಾಭಾರತದಲ್ಲಿ ಒಂದು ಶ್ಲೋಕವು ಆಗಿಂದಾಗ್ಗೆ ಬರುತ್ತಲೇ ಇರುತ್ತದೆ. ಮೂಢನಾದವನಿಗೆ ಶೋಕಕ್ಕೂ ಭಯಕ್ಕೂ ಕಾರಣಗಳು ನೂರಾರು, ಸಾವಿರಾರು, ಪ್ರತಿದಿನವೂ ಕಾಣಿಸಿಕೊಳ್ಳುತ್ತಿರುವವು; ಆದರೆ ಪಂಡಿತನಾದವನಿಗೆ ಅವು ಕಾಣಿಸಿಕೊಳ್ಳುವದೇ ಇಲ್ಲ-ಎಂಬುದು ಅದರ ಅಭಿಪ್ರಾಯ. ಧೀರರಾದವರು ಎಂದಿಗೂ ಇಂಥ ಕಷ್ಟಗಳು ಬಂದೊದಗಿದರೂ ಧೃತಿಗೆಡುವದಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇಂಥವರೇ ಅಧ್ಯಾತ್ಮಸಾಧನಕ್ಕೆ ತಕ್ಕವರಾಗುವರು.



# ೧೫೪. ದೈವಸಂಪದ್ವರ್ಣನೆಯ ಉಪಸಂಹಾರ 16 - (3)

**(25-12-49)**

ಈ ದಿನ "ಶೌಚಮದ್ರೋಹೋ ನಾತಿಮಾನಿತಾ" ಎಂಬ ಶ್ಲೋಕದಪಾದವನ್ನು ವಿಚಾರಕ್ಕಿಟ್ಟುಕೊಂಡಿರುತ್ತೇನೆ. ಮೊಟ್ಟಮೊದಲು ಶೌಚವನ್ನು ಕುರಿತು ಆಲೋಚಿಸೋಣ. ಇಲ್ಲಿ ಹೇಳಿರುವ ಗುಣಗಳು ಹಿಂದೆಯೂ ಬಂದಿರಬಹುದು. ಆದರೆ ಅವುಗಳು ನಮಗೆ ಅಳವಡುವವರೆಗೂ ಹೊಸವೇ ಆಗಿರುತ್ತವೆ. ಆದ್ದರಿಂದ ಅವುಗಳನ್ನು ಮತ್ತೆ ಹೇಳಿದ ಮಾತ್ರದಿಂದ ಪುನರುಕ್ತಿದೋಷವುಂಟಾಗುವದಿಲ್ಲ.

ಶೌಚವೆಂದರೇನು? ಶುಚಿಯಾಗಿರುವದು. ಮೃಜ್ಜಲಾದಿಗಳಿಂದ ದೇಹವನ್ನು ಶುಚಿಗೊಳಿಸುವ ಬಾಹ್ಯಶೌಚವು ಮೊದಲನೆಯದು; ಮನೋಬುದ್ಧಿಗಳನ್ನು ನಿರ್ಮಲವಾಗಿಟ್ಟುಕೊಳ್ಳುವದೆಂಬ ಅಂತರಶೌಚವು ಎರಡನೆಯದು. ಈಚೆಗೆ ನಾವು ಶರೀರವನ್ನು ತೊಳೆಯುವದಕ್ಕೆ ಮೃಜ್ಜಲಾದಿಗಳಲ್ಲದೆ ಬೇರೆಯ ದ್ರವ್ಯಗಳನ್ನೂ ಉಪಯೋಗಿಸುತ್ತಿರುತ್ತೇವೆ. ಆದರೂ ನಮ್ಮ ಶರೀರವನ್ನು ಶುಚಿಯಾಗಿಟ್ಟುಕೊಳ್ಳುವದು ಕಷ್ಟವಾಗಿರುತ್ತದೆ. ಶರೀರವನ್ನು ಎಷ್ಟು ಶುಚಿಮಾಡಿಕೊಂಡರೂ ಅದು ಅಶುಚಿಯೇ ಆಗಿರುತ್ತದೆ. ಹೊರಗಿನ ಶಾರೀರಕವಾದ ಕೆಲಸವನ್ನು ಮಾಡುವವರಿಗೆ ಶುಚಿಯಾಗಿರುವದು ಬಹಳ ಕಷ್ಟವಾಗಿರುತ್ತದೆ. ಅದು ಅನಿವಾರ್ಯವಾಗಿರುವಲ್ಲಿ ಯಾರೂ ಏನೂ ಮಾಡುವದಕ್ಕೆ ಬರುವದಿಲ್ಲ. ಮನುಷ್ಯನ ದೇಹವು ಯಾವಾಗಲೂ ಬೆವರುತ್ತಿರುತ್ತದೆ. ಅದರ ದ್ವಾರಗಳಿಂದ ಬಗೆಬಗೆಯ ಮಲಗಳು ಹೊರಕ್ಕೆ ಬರುತ್ತಿರುತ್ತವೆ. ಆದ್ದರಿಂದ ಅದನ್ನು ಎಷ್ಟು ತೊಳೆದರೂ ಸಾಲದು. ಆದರೇನು? ಮನುಷ್ಯನಿಗೆ ದಿನಕ್ಕೊಂದು ಸ್ನಾನವನ್ನು ಮಾಡುದವಕ್ಕೆ ಕೂಡ ತಕ್ಕಷ್ಟು ನೀರು ಸಿಕ್ಕುವದು ಕೆಲವು ಕಡೆಗಳಲ್ಲಿ ಕಷ್ಟವಾಗಿರುತ್ತದೆ.

ವರ್ಣಾಶ್ರಮಧರ್ಮದ ದೃಷ್ಟಿಯಿಂದ ಕೆಲಕೆಲವು ಆಚಾರಗಳಿಂದ ಶೂದ್ರನಿಗೆ ಅಶುಚಿತ್ವವುಂಟಾಗುವದಿಲ್ಲವೆಂದು ಅನುಜ್ಞೆಕೊಟ್ಟಿರುವದು ಈ ಅನಿವಾರ್ಯವಾದ ಸನ್ನಿವೇಶಗಳನ್ನು ಲೆಕ್ಕಕ್ಕೆ ತೆಗೆದುಕೊಂಡು. ಆದರೆ ಅಷ್ಟುಮಾತ್ರದಿಂದ ಶೂದ್ರರು ಯಾವಾಗಲೂ ಅಶುಚಿಯಾಗಿರಬೇಕು- ಎಂಬ ಅಭಿಪ್ರಾಯವೇನೂ ಶಾಸ್ತ್ರಕಾರರಿಗೆ ಇರುವದಿಲ್ಲ. ಅವಕಾಶವಿದ್ದ ಕಡೆಗಳಲ್ಲಿ ಅವರೂ ಸ್ನಾನಾದಿಗಳನ್ನು ಅವಶ್ಯವಾಗಿ ಮಾಡಬೇಕು. ವೈಶ್ಯಾದಿವರ್ಣದವರಿಗೆ ಹೆಚ್ಚು ಹೆಚ್ಚು ಶೌಚವು ವಿಹಿತವಾಗಿರುತ್ತದೆ. ಬ್ರಾಹ್ಮಣನಿಗೆ ನಿತ್ಯಸ್ನಾನವಲ್ಲದೆ ನೈಮಿತ್ತಿಕಸ್ನಾನವನ್ನೂ ಶಾಸ್ತ್ರವು ವಿಧಿಸಿರುತ್ತದೆ. ಸಂನ್ಯಾಸಿಗಳಿಗಂತೂ ಮಿಕ್ಕವರೆಲ್ಲರಿಗಿಂತಲೂ ಹೆಚ್ಚಿನ ಶೌಚವನ್ನು ಶಾಸ್ತ್ರದಲ್ಲಿ ವಿಧಿಸಿದೆ. ಅವರು ಮಿಕ್ಕವರಿಗೆ ಈ ವಿಷಯದಲ್ಲಿ ಆದರ್ಶವಾಗಿರಬೇಕೆಂಬುದೇ ಇದರ ಉದ್ದೇಶ.

ಎಷ್ಟೇ ಸ್ನಾನವನ್ನು ಮಾಡಿದರೂ ಶರೀರವು ಶುಚಿಯಾಗುವದು ಅಸಾಧ್ಯ. ಆದ್ದರಿಂದ ಎಲ್ಲರೂ ಯಥಾಶಕ್ತಿಯಾಗಿ ಸ್ನಾನಾದಿಗಳನ್ನು ಆಚರಿಸುವದಲ್ಲದೆ ಪರಮಾತ್ಮನ ಸ್ಮರಣೆಯನ್ನು ಮಾಡಿ ಶುಚಿಯಾಗಬೇಕು- ಎಂದು ಶಾಸ್ತ್ರಕಾರರು ಹೇಳುತ್ತಾರೆ. ಆದರೆ ಆ ವಚನದ ಭಾವವನ್ನು ಅರಿಯದೆ ಅನೇಕರು ಸ್ನಾನವಿಲ್ಲದಿದ್ದರೂ "ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ! ಯಃ ಸ್ಮರೇತ್ ಪುಣ್ಡರೀಕಾಕ್ಷಂ ಸ ಬಾಹ್ಯಾಭ್ಯನ್ತರಃ ಶುಚಿಃ" ಎಂದು ಒಂದು ಶ್ಲೋಕವನ್ನು ಹೇಳಿಕೊಂಡು ಮೈಮೇಲೆ ನೀರು ಚಿಮುಕಿಸಿಕೊಂಡರೆ ಪಾವಿತ್ರ್ಯವುಂಟಾಗುವದೆಂಬ ತಪ್ಪುಭಾವನೆಯನ್ನು ಇಟ್ಟುಕೊಂಡಿರುತ್ತಾರೆ !

ಮನುಷ್ಯವ್ಯಕ್ತಿಗಳಲ್ಲದೆ ಗ್ರಾಮಪತ್ತನಾದಿಗಳೂ ಚೊಕ್ಕಟವಾಗಿರುವಂತೆ ನೋಡಿಕೊಳ್ಳುವದು ನಮ್ಮೆಲ್ಲರ ಕರ್ತವ್ಯವಾಗಿರುತ್ತದೆ. ಅನೇಕ ಮುನಿಸಿಪಾಲಿಟಿ ಎಂಬ ಗ್ರಾಮನಿರ್ಮಲೀಕರಣಸಂಘದವರು ನಾಮಮಾತ್ರಕ್ಕೆ ಕಸಗುಡಿಸುವ ಶಾಸ್ತ್ರವನ್ನು ಮಾಡಿದರೆ ತಮ್ಮ ಹೊಣೆಗಾರಿಕೆ ಮುಗಿಯಿತೆಂದು ತಿಳಿಯುತ್ತಾರೆ. ದೇಹದಲ್ಲಿ ಅಶುಚಿತ್ವದಿಂದ ಹೇಗೆ ಬಗೆ ಬಗೆಯ ರೋಗಗಳು ಹೊರತೋರುವವೋ ಹಾಗೆ ಗ್ರಾಮದ ಅಶುಚಿತ್ವದಿಂದ ಶುಚಿಯಾಗಿರುವವರಿಗೆ ಕೂಡ ಸಾಂಕ್ರಾಮಿಕ ಉಪದ್ರವವು ತಟ್ಟುವದಕ್ಕೆ ಅವಕಾಶವಾಗುತ್ತದೆ. "ಪಟ್ಟಣದಲ್ಲಿ ಪಾದಾಚಾರ" ಎಂದು ಹೇಳಿಕೊಳ್ಳುತ್ತಾ ಜನರು ಶೌಚಾಚಾರಗಳನ್ನು ಅಲ್ಲಿ ಕುಂಠಿತವಾಗಿ ಮಾಡಿಕೊಳ್ಳುವದುಂಟು. ಆದರೆ ಆ ಪಾದಾಚಾರವು ಬಹಳ ಸಂದರ್ಭಗಳಲ್ಲಿ ಪಾಪಾಚಾರವಾಗಿ ಪರಿಣಮಿಸುತ್ತದೆ. ಶರೀರದ ಅಶುಚಿತ್ವವು ನಮಗೆ ಆಗಾಗ್ಗೆ ನೆನಪಿಗೆ ಬರಬೇಕಾದರೆ ಮಡಿಮೈಲಿಗೆಗಳ ವಿವೇಕವು ಅವಶ್ಯವಾಗಿರುತ್ತದೆ. ಶೌಚದ ಆಚರಣೆಯನ್ನು ಎಚ್ಚರಿಕೆಯಿಂದ ನಡೆಯಿಸಿಕೊಂಡು ಹೋಗಬೇಕು. ಆದರೆ ತಾವು ಅಶುಚಿಯ ರಾಶಿಯೇ ಆಗಿದ್ದುಕೊಂಡು ಮಿಕ್ಕವರನ್ನು ಅಸ್ಪೃಶ್ಯರೆಂದು ಕುತ್ಸಿತವಾಗಿ ಕಾಣುವ ಕುಬುದ್ಧಿಯೂ ಹೆಮ್ಮೆಯೂ ನಮ್ಮಲ್ಲಿ ಕೆಲವರಿಗೆ ಹೆಚ್ಚುತ್ತಿದೆ. ಅಸ್ಪೃಶ್ಯತಾನಿವಾರಣೆ ಎಂಬ ಉದಾರಭಾವನೆಯ ಹೆಸರಿನಲ್ಲಿ ಎಲ್ಲರೂ ಅಸ್ಪೃಶ್ಯರೇ ಆಗುವ ಆಚಾರವನ್ನು ಮುಂದಕ್ಕೆ ತರುವದರಲ್ಲಿ ಆಸಕ್ತಿಯೂ ಹಲವರಲ್ಲಿ ಕಾಣಬರುತ್ತಿದೆ. ಇದೆಲ್ಲ ಶೌಚದ ಮರ್ಮವನ್ನರಿಯದ್ದರ ಫಲವು. ಹೊರಗಿನ ದೇಹವನ್ನು ಶುಚಿಯಾಗಿಟ್ಟುಕೊಳ್ಳುವದಲ್ಲದೆ ಒಳಗಿನ ಮನಸ್ಸನ್ನೂ ಶುಚಿಯಾಗಿಟ್ಟುಕೊಳ್ಳುವದೂ ಅವಶ್ಯವಾಗಿರುತ್ತದೆ. ಅಂತಃಕರಣವು ಕಾಮಕ್ರೋಧಾದಿಗಳಿಂದ ಒಂದೊಂದು ಘಳಿಗೆಯಲ್ಲಿಯೂ ಅಶುಚಿಯಾಗುತ್ತಲೇ ಇರುತ್ತದೆ. ಅದರಲ್ಲಿ ಸತ್ಸಂಗದಲ್ಲಿ ಸಂಪಾದಿಸಿದ ಸದ್ವಿಚಾರಗಳನ್ನೂ ಪರಮಪಾವನನಾದ ಭಗವಂತನ ನಾಮದ ಸ್ಮರಣೆಯನ್ನೂ ತುಂಬಿಕೊಳ್ಳುವದರಿಂದ ಮಾಯೆ, ರಾಗದ್ವೇಷಗಳು-ಮುಂತಾದ ಕಾಲುಷ್ಯಗಳು ಇಲ್ಲವಾಗುವವು. ಹೊರಗಿನ ಶರೀರದಲ್ಲಾದ ಅಶುಚಿತ್ವವು ಕೂಡಲೆ ಎಲ್ಲರಿಗೂ ಗೊತ್ತಾಗಿಬಿಡುತ್ತದೆ. ಆದರೆ ಮನಸ್ಸಿನ ಕಾಲುಷ್ಯವು ಸೂಕ್ಷ್ಮವಾಗಿರುವದರಿಂದ ಎಲ್ಲರಿಗೂ ಬೇಗನೆ ತಿಳಿಯಬರುವದಿಲ್ಲ. ಆದ್ದರಿಂದ ಪ್ರತಿಯೊಬ್ಬನೂ ಎಚ್ಚರಿಕೆಯಿಂದ ಅಂತಃಶೌಚವನ್ನು

ಮಾಡಿಕೊಳ್ಳುವದಕ್ಕೆ ತಾನು ತಾನೇ ಪ್ರಯತ್ನಿಸುತ್ತಿರಬೇಕು. ಮನಸ್ಸು ಶುಚಿಯಾಗಿಲ್ಲದಿದ್ದರೆ ಹೊರಗಿನ ಶುಚಿತ್ವವು ತನ್ನ ಪೂರ್ಣಫಲವನ್ನು ಎಂದಿಗೂ ಕೊಡಲಾರದು.

ಚಳಿದೇಶದಲ್ಲಿರುವವರು ಆಗಾಗ್ಗೆ ಸ್ನಾನಮಾಡದೆ ಇದ್ದರೂ ಬೇಗನೆ ದೇಹದಲ್ಲಿ ದೌರ್ಗಂಧ್ಯವು ಕಾಣಿಸಿಕೊಳ್ಳುವದಿಲ್ಲ. ಆದರೆ ಅಷ್ಟುಮಾತ್ರದಿಂದ ಅವರ ದೇಹವು ಹೆಚ್ಚು ಶುಚಿಯಾಗಿರುವದೆಂದು ತಿಳಿಯಬಾರದು. ನಮ್ಮ ದೇಶದವರು ಸ್ನಾನಾಚಮನಾದಿ ಶೌಚಪ್ರಕಾರವನ್ನು ಬಹಳ ಸೂಕ್ಷ್ಮ ದೃಷ್ಟಿಯಿಂದ ವಿವರಿಸಿರುತ್ತಾರೆ. ಪಾಶ್ಚಾತ್ಯರ ಸಂಸರ್ಗದಿಂದ ನಮಗೆ ಈಗ ಆ ಉತ್ತಮವಾದ ನಡೆನುಡಿಗಳ ಪದ್ಧತಿಯು ಸಡಿಲವಾಗುತ್ತಾ ಬರುತ್ತಿದೆ. ಇದರ ಜೊತೆಗೆ ಭಾರತದೇಶವು ಮತಪ್ರಧಾನವಾಗಿರಬಾರದೆಂದು ರಾಜನೀತಿಯ ದೃಷ್ಟಿಯಿಂದ ಸರಕಾರದವರು `ಲೌಕಿಕಸರಕಾರ' (Secular Govrenment) ಎಂಬ ವೇಷವನ್ನು ತಳೆದಿರುತ್ತಾರೆ. ಇದನ್ನು ಅಮೆರಿಕದೇಶದವರೇ ಮುಂತಾದವರು ಶ್ಲಾಘಿಸುತ್ತಿದ್ದಾರೆ. ಮತದ ದುರಭಿಮಾನವೂ ಕೋಮುವಾರುದೃಷ್ಟಿಯ ಅಂಧತ್ವವೂ ಇರಬಾರದೆಂಬುದಕ್ಕೆ ನಾವೆಲ್ಲರೂ ಸಮ್ಮತಿಯನ್ನು ಕೊಡುವದು ಯುಕ್ತವಾದರೂ ಮಡಿಮೈಲಿಗೆ, ಆಚಾರ-ಇವುಗಳನ್ನು ಬಿಟ್ಟುಕೊಡಬೇಕೆಂಬ ಭಾವನೆಯನ್ನು ಈ ದೃಷ್ಟಿಯಿಂದ ಬೆಳೆಯಿಸಿಕೊಳ್ಳುವದಕ್ಕೆ ಯಾವ ಕಾರಣವೂ ಇರುವದಿಲ್ಲ. ಕೆಲವರು ಅಮೆರಿಕದವರು "ಇಂಡಿಯಾದೇಶವು ಮತಾಂಧತೆಯನ್ನು ಬಿಟ್ಟಿದೆ, ಪಾಕಿಸ್ತಾನದಂತೆ ಮತಪ್ರಧಾನವಾಗಿಲ್ಲವೆಂಬುದೊಂದು ಹೆಮ್ಮೆಯ ಮಾತು" ಎಂದು ನಮ್ಮನ್ನು ಹೊಗಳಿ ಕುಣಿಸುತ್ತಿದ್ದಾರೆ. ಆದರೆ ಅವರ ಹೊಗಳಿಕೆಯು ಹೃತ್ಪೂರ್ವಕವೆಂದು ಹೇಳುವದಕ್ಕೆ ಬರುವದಿಲ್ಲ. ಅಮೆರಿಕವು ಬಹಳಮಟ್ಟಿಗೆ ಭೂಮಂಡಲವನ್ನು ಸಾಹುಕಾರನ ಕಣ್ಣಿನಿಂದ ನೋಡುತ್ತಿದೆ. ತನ್ನ ಹಣವನ್ನು ಅಲ್ಲಲ್ಲಿ ಸಾಲವಾಗಿ ಕೊಟ್ಟು ರಾಷ್ಟ್ರಗಳನ್ನು ತನ್ನ ರಾಜನೀತಿಗೆ ಎಳೆದುಕೊಳ್ಳಬೇಕೆಂಬ ದಾಹವು ಅದಕ್ಕೆ ದಿನದಿನಕ್ಕೂ ಹೆಚ್ಚುತ್ತಿದೆ. ಈಗ ಆ ಖಂಡವು ನಮ್ಮನ್ನು ಹೊಗಳುತ್ತಿದ್ದರೆ ಇನ್ನು ಕೆಲವು ವರ್ಷಗಳಲ್ಲಿ ಕಾರಣಾಂತರದಿಂದ ನಮ್ಮನ್ನು ತೆಗಳಬಹುದು. ದುಡ್ಡಿಗಾಗಿಯೂ ಅಧಿಕಾರಕ್ಕಾಗಿಯೂ ಏನುಬೇಕಾದರೂ ಜನರು ಮಾಡುತ್ತಾರೆ. ಅಂಥವರ ಮೆಚ್ಚಿಗೆಯಿಂದ ನಮ್ಮ ಆಚಾರವಿಚಾರಗಳನ್ನು ಎಂದಿಗೂ ಮಾರ್ಪಡಿಸಿಕೊಳ್ಳಬಾರದು. ಶುಚಿತ್ವದ ವಿಷಯಕ್ಕೆ ನಾವು ವಿದೇಶೀಯರಿಂದ ಕಲಿತುಕೊಳ್ಳಬೇಕಾದದ್ದು ಏನೂ ಇರುವದಿಲ್ಲ. `ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ' ( ಶ್ರುತಿ, ಸ್ಮೃತಿ, ಶಿಷ್ಟಾಚಾರ ಮತ್ತು ಸಾತ್ತ್ವಿಕವಾದ ತನ್ನ ಅಂತಃಕರಣಕ್ಕೆ ಮೆಚ್ಚಾದದ್ದು) ಇವುಗಳನ್ನನುಸರಿಸಿ ನಮ್ಮ ನಡೆನುಡಿಗಳನ್ನು ತಿದ್ದಿಕೊಳ್ಳಬೇಕಾಗಿದೆ.

ಪ್ರಕೃತವಾದ ಶುಚಿತ್ವವು ಮನಸ್ಸಿನಲ್ಲಿ ಮುಖ್ಯವಾಗಿ ಬೇರುಬಿಟ್ಟುಕೊಳ್ಳಬೇಕು. ಹಾಗಾದರೆ ಬಾಹ್ಯಶೌಚವು ತನಗೆ ತಾನೇ ಏರ್ಪಡುತ್ತದೆ. ಹಿಂದಿನವರು ತೃಣಕಾಷ್ಠಜಲನಸಮೃದ್ಧವಾದ ಕಡೆಯಲ್ಲಿ ಗೃಹಸ್ಥನು ನೆಲಸಬೇಕು ಎನ್ನುತ್ತಿದ್ದರು. ಇದರಿಂದ ಅವರಿಗೆ ಆಚಾರವಿಚಾರಗಳೂ ಇಹಪರಸೌಖ್ಯವೂ ನಿರಾತಂಕವಾಗಿ ವಶವಾಗುತ್ತಿತ್ತು. ಆದರೆ

ಈಗಿನವರ ಕಣ್ಣು ಬೇರೆಯ ಬಗೆಯಾಗಿದೆ. ಅವರು ವ್ಯಾಪಾರವೂ ಬಗೆಬಗೆಯ ಉದ್ಯೋಗವೂ ಸಿಕ್ಕುವ ಪುರಪಟ್ಟಣಗಳಿಗೆ ಹೋಗಿ ಅಲ್ಲಿ ನೆಲಸುತ್ತಾ ಬಂದಿರುತ್ತಾರೆ. ದುಡ್ಡೊಂದಿದ್ದರೆ ಯಾವ ಆಚಾರವನ್ನಾದರೂ ಬಿಡುವದಕ್ಕೆ ಸಿದ್ಧರಾಗುತ್ತಾರೆ. ಅವರಿಗೆ `ಶೇಕಡ ಇಂತಿಷ್ಟುಲಾಭ' ಎಂಬ ಕಡೆಗೆ ದೃಷ್ಟಿಯಿರುತ್ತದೆಯೇ ಹೊರತು ಆತ್ಮಲಾಭದ ಕಡೆಗೆ ಇರುವದಿಲ್ಲ. ಯಾವನು ಆಶೆಗೆ ಪರತಂತ್ರನೋ ಅವನು ಮತ್ತೊಬ್ಬರ ಅಧೀನವಾಗಿ ತನ್ನ ಆಚಾರವಿಚಾರಗಳನ್ನು ಇಟ್ಟುಕೊಳ್ಳಬೇಕಾಗುತ್ತದೆ. ಈ ಕಾರಣದಿಂದಲೇ ನಮಗೆ ಶುಚಿತ್ವದಂಥ ದೈವಸಂಪತ್ತನ್ನು ಒದಗಿಸಿಕೊಳ್ಳುವದು ಇಷ್ಟೊಂದು ಕಷ್ಟವಾಗಿರುತ್ತದೆ. ಯಮನಿಯಮಗಳು ದೈವಸಂಪತ್ತಿಗೆ ತಳಹದಿ ಎನ್ನಬಹುದು. ಮನಃಪ್ರಧಾನವಾಗಿರುವ ಸಾಧನಗಳನ್ನು ಯಮವೆಂದೂ ಶರೀರಪ್ರಧಾನವಾದವುಗಳನ್ನು ನಿಯಮವೆಂದೂ ಭಾವಿಸುವರು. ತ್ರಿಕರಣಶುದ್ಧಿಯು ಯಾವನಿಗೆ ಇರುವದೋ ಅವನೇ ಪರಮಾತ್ಮನ ಜ್ಞಾನಕ್ಕೆ ಅರ್ಹನು. ಪರಮಾತ್ಮನು ಸರ್ವವ್ಯಾಪಕನೇ ಸರಿ; ಆದರೆ ಸ್ವಚ್ಛವಾದ ಅಂತಃಕರಣದಲ್ಲಿ ಮಾತ್ರವೇ ಅವನ ಪ್ರತಿಬಿಂಬವು ಮೂಡಿಕೊಳ್ಳುತ್ತದೆ. ಈ ಕಾರಣದಿಂದ ಈಶ್ವರಾನುಗ್ರಹಕ್ಕೆ ಶುಚಿತ್ವವು ಒಂದು ಮುಖ್ಯವಾದ ಸಾಧನವೆನಿಸಿರುತ್ತದೆ.

**ಅದ್ರೋಹ :** ಒಳಗಿನ ಶೌಚದಲ್ಲಿ ಅದ್ರೋಹವು ಒಂದು ಭಾಗವು. ಯಾರೊಬ್ಬರಿಗೂ ದ್ರೋಹವನ್ನು ಬಗೆಯದೆ, ಅದಕ್ಕೆ ವಿರುದ್ಧವಾದ ಪ್ರಯತ್ನವನ್ನು ಮಾಡುತ್ತಿರುವದೇ

ಎಲ್ಲಿ ಸ್ವಾರ್ಥತೆಯಿರುವದೋ ಅಲ್ಲಿ ದ್ರೋಹವಿರುತ್ತದೆ. "ಈ ಶರೀರವನ್ನು ಆಶ್ರಯಿಸಿ ಮಾಡಬಾರದ ಕೆಲಸವನ್ನು ಮಾಡಬಾರದು" ಎಂದು ಸ್ಮೃತಿವಚನವಿದೆ. ವಿಷಯಭೋಗದ ನಿಮಿತ್ತದಿಂದಲೇ ನಾವು ಬಹುಸಂದರ್ಭಗಳಲ್ಲಿ ದ್ರೋಹವನ್ನು ಮಾಡುವದಕ್ಕೆ ಹೊರಡುತ್ತೇವೆ. ಆದರೆ ಹಾಗೆ ದ್ರೋಹದಿಂದ ಪಡೆದ ಭೋಗವು ನಮಗೆ ಸುಖವನ್ನು ಎಂದಿಗೂ ಕೊಡಲಾರದು; ಅದು ಕೊಡಬಹುದಾದ ಅಲ್ಪಸ್ವಲ್ಪ ಸುಖವೂ ನಮಗೆ ದಕ್ಕಲಾರದು. ಭರ್ತೃಹರಿಯು ಹೇಳಿರುವಂತೆ ದ್ರೋಹಿಗಳು ಭೋಗಗಳನ್ನು ಉಪಭೋಗಿಸುವದಿಲ್ಲ, ಅವೇ ಅವರನ್ನು ಉಪಭೋಗಿಸುವವು. ಸಾಯುವಾಗ ಜ್ಞಾನಿಗೆ ಯಾವ ಪಾಪಭೀತಿಯೂ ಇರುವದಿಲ್ಲವಷ್ಟೆ. ದ್ರೋಹಿಗಳಾದವರಿಗೆ "ಅಯ್ಯೋ, ನಾವು ಇಷ್ಟೊಂದು ದ್ರೋಹವನ್ನು ಮಾಡಿ ಗಳಿಸಿದ ಈ ಧನವನ್ನಂತೂ ಬಿಟ್ಟುಹೋಗುತ್ತಿದ್ದೇವೆ; ಪರಲೋಕದಲ್ಲಿ ನಮಗೆ ಯಾವ ದುಷ್ಫಲವು ಕಾದುಕೊಂಡಿರುತ್ತದೆಯೊ!" ಎಂಬ ಕೊರಗು ಎಂದಿಗೂ ತಪ್ಪಿದ್ದಲ್ಲ. ಇಷ್ಟು ದಿನ ಮಾಡಿದ್ದರ ಫಲವು, ಈ ವ್ಯಥೆಯು. ಮಾನವನು ಯಾವ ಶರೀರದ ಸುಖಕ್ಕಾಗಿ ಈ ದ್ರೋಹವನ್ನೆಸಗಿದನೋ ಆ ಶರೀರರವು ಇಲ್ಲಿಯೇ ಸುಟ್ಟು ಬೂದಿಯಾಗುವದು. ಪಾಪವು ಮಾತ್ರ ಬೆನ್ನಂಟಿಕೊಂಡು ಹಿಂದೆ ಬರುತ್ತದೆ. ಇದನ್ನು ತಿಳಿದು ಮನುಷ್ಯನು ಯಾರೊಬ್ಬರಿಗೂ ತ್ರಿಕರಣಗಳಿಂದಲೂ ದ್ರೋಹವನ್ನು ಮಾಡದೆ ಆದಷ್ಟು ಪರೋಪಕಾರವನ್ನು ಮಾಡುವದರಲ್ಲಿಯೇ ಕಾಲವನ್ನು ಕಳೆಯಬೇಕು. ಇದೊಂದು ದೈವಸಂಪತ್ತಿನ ಗುಣವಾಗುವದು.

**ನಾತಿಮಾನಿತಾ:** ಅತಿಮಾನಿತ್ವವಿಲ್ಲದಿರುವದು ನಾತಿಮಾನತೆಯು. ಹಿಂದೆ ಅಮಾನಿತ್ವದ ವಿಷಯದಲ್ಲಿ ಹೇಳಿರುವದನ್ನು ಇಲ್ಲಿ ಜ್ಞಾಪಿಸಿಕೊಳ್ಳಬೇಕು. ಅತಿಮಾನಿತ್ವವನ್ನು ಬಿಡುವದು, ಅದಕ್ಕೆ ವಿರುದ್ಧವಾದ ಪ್ರಯತ್ನವನ್ನು ಮಾಡುವದು, ಪರಮಾತ್ಮನಲ್ಲಿಯೇ ಮನಸ್ಸಿಡುವದಕ್ಕೆ ಪ್ರಯತ್ನವನ್ನು ಮಾಡುವದು-ಇದೆಲ್ಲವೂ "ನಾತಿಮಾನಿತಾ" ಎಂಬುದರಲ್ಲಿ ಸೇರಿರುತ್ತದೆ. ಯಾವದಾದರೂ ವಸ್ತು ತನ್ನದೆಂದರೆ, ಯಾವದಾದರೂ ಪ್ರಾಣಿ ತನ್ನದೆಂದು ತೋರಿದರೆ, ಅಥವಾ ಯಾವನಾದರೊಬ್ಬ ಮನುಷ್ಯನು ತನ್ನವನೆಂದು ತೋರಿದರೆ, ಆ ಅಭಿಮಾನದಿಂದ ಆಯಾ ವಸ್ತುವಿನಲ್ಲಿ ಅಥವಾ ಮನುಷ್ಯನಲ್ಲಿ ಹೆಚ್ಚಿನ ಪ್ರೀತಿಯುಂಟಾಗುತ್ತದೆ. ಶಕುನಿಯು ತನ್ನವನೆಂಬ ದುರಭಿಮಾನದಿಂದ ಅವನು ಆಡಿದ ಮಾತುಗಳಲ್ಲೆಲ್ಲ ದುರ್ಯೋಧನನಿಗೆ ವಿಶ್ವಾಸವುಂಟಾಗಿತ್ತು; ಪಾಂಡವಪಕ್ಷಪಾತಿಗಳೆಂಬ ತಪ್ಪು ತಿಳಿವಳಿಕೆಯಿದ್ದದ್ದರಿಂದ ಭೀಷ್ಮರ ಹಿತವಚನಗಳು ಯಾವವೂ ಅವನಿಗೆ ರುಚಿಸಲಿಲ್ಲ. ಇದರಂತೆ ಯಾವನಿಗೆ ತನ್ನಲ್ಲಿಯೇ ಹೆಚ್ಚಿನ ಅಭಿಮಾನವಿರುವದೋ ಅವನನ್ನು ನನ್ನ ಮಾತು ಹೆಚ್ಚಿನದು, ನನ್ನ ನಡತೆ ಎಲ್ಲಕ್ಕೂ ಆದರ್ಶಪ್ರಾಯವಾದದ್ದು, ನನ್ನ ಭಾವನೆಗಳು ಮಿಕ್ಕವುಗಳೆಲ್ಲಕ್ಕಿಂತಲೂ ಮಿಗಿಲಾದವುಗಳು ಎಂಬ ಹೆಮ್ಮೆಯು ಆವರಿಸಿಕೊಳ್ಳುವದು. ಹಿರಣ್ಯಕಶಿಪುವಿಗೆ ಎಂಥ ಅತಿಮಾನಿತ್ವವಿತ್ತು! ಆದ್ದರಿಂದಲೇ ಪ್ರಹ್ಲಾದನು ಹೇಳಿದ ತತ್ತ್ವಾರ್ಥವು ಅವನಿಗೆ ರುಚಿಸಲಿಲ್ಲ. ಅತಿಮಾನಿತ್ವವು ಸರ್ವವ್ಯಾಪಕನಾದ ಪರಮಾತ್ಮನನ್ನು ಮರೆಮಾಡುವ ಕಾರ್ಮೋಡವಾಗುತ್ತದೆ, ಮನುಷ್ಯನ ಅಧಃಪತನಕ್ಕೆ ಕಾರಣವಾಗುತ್ತದೆ. ಇದಕ್ಕೆ ವಿರುದ್ಧವಾದ ನಾತಿಮಾನತೆ ಎಂಬ ದೈವಸಂಪತ್ತಿನ ಗುಣವು ಎಲ್ಲರಲ್ಲಿಯೂ ಗೌರವವನ್ನು ತೋರಿಸಿ ತನ್ನ ಒಣಹೆಮ್ಮೆಯನ್ನು ತಗ್ಗಿಸುತ್ತದೆ. ಸತ್ಸಂಗವನ್ನು ತಂದುಕೊಡುತ್ತದೆ, ಸಂತರ ವಚನವನ್ನು ಆದರದಿಂದ ಆಲೈಸುವಂತೆ ಮಾಡುತ್ತದೆ, ಸನ್ಮಾರ್ಗದಲ್ಲಿ ನಡೆಯಿಸಿ ಭಗವತ್ಪ್ರಾಪ್ತಿಯು ಅನಾಯಾಸದಿಂದ ದೊರೆಯುವಂತೆ ಮಾಡುತ್ತದೆ.

ಇಲ್ಲಿಗೆ ಭಗವಂತನು ಅರ್ಜುನನಿಗೆ ಹೇಳಿದ ದೈವಸಂಪತ್ತಿನ ಗುಣಗಳ ವರ್ಣನೆಯು ಮುಗಿಯಿತು. ಈ ಗುಣಗಳ ಪಟ್ಟಿಯನ್ನು ಗಟ್ಟಿಮಾಡಿಕೊಳ್ಳುವದು ಸುಲಭ. ಆದರೆ ಅವುಗಳನ್ನು ಅನುಷ್ಠಾನದಲ್ಲಿ ತರುವದಕ್ಕೆ ಪ್ರಯತ್ನಿಸುವವರಿಗೆ ಮಾತ್ರವೇ ಅವುಗಳ ಬೆಲೆಯು ಗೊತ್ತಾಗುತ್ತದೆ. ಈ ಎಲ್ಲಾ ಗುಣಗಳನ್ನೂ ಒಟ್ಟಿಗೇ ಸಾಧಿಸುವದಕ್ಕೆ ಹೊರಡಬೇಕಾದದ್ದೇನೂ ಇಲ್ಲ. ತನಗೆ ಅತ್ಯವಶ್ಯವೆಂದು ತೋರುವ ಯಾವದಾದರೊಂದನ್ನು ಸಾಧನವಾಗಿಟ್ಟುಕೊಳ್ಳಬೇಕು. ಇವುಗಳಲ್ಲಿ ಯಾವದು ಕಷ್ಟವೆಂದು ತೋರುತ್ತದೆಯೋ ಅದನ್ನೇ ಮೊದಲು ಪ್ರಾರಂಭಿಸಬೇಕು. ಪರಮೇಶ್ವರನ ದಯೆಯಿಂದ ಅದೇ ಕಾಲಾನುಕಾಲಕ್ಕೆ ಬಹಳ ಸುಲಭಸಾಧ್ಯವಾಗಿರುತ್ತದೆ. ಯಾವ ಸಾಧನವನ್ನಾದರೂ ನಾನೇ ಮಾಡಿ ಗೆಲ್ಲುವೆನೆಂಬ ಹೆಮ್ಮೆಯನ್ನು ತ್ಯಜಿಸಬೇಕು. ಪರಮೇಶ್ವರನ ಮೇಲೆ ಭಾರವನ್ನು ಹಾಕಿ ಸಾಧನವನ್ನು ಮುಂದುವರಿಸುತ್ತಾ ಬರಬೇಕು. ಮೊದಮೊದಲು ಬಹಳ ಕಷ್ಟವಾಗಿ ಕಾಣಬಹುದು. ಆದರೆ ಅಭ್ಯಾಸಬಲದಿಂದ ಅದು ಹೆಚ್ಚು ಹೆಚ್ಚು ಸುಲಭವಾಗುತ್ತಾ ಬರುತ್ತದೆ. ಮನುಷ್ಯನ ಮನಸ್ಸು

ಯಾವ ಕಡೆಗೆ ಎಳೆದರೆ ಆ ಕಡೆಗೆ ಬರುತ್ತದೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಈ ದೈವ ಸಂಪತ್ತಿನ ಗುಣಗಳನ್ನು ಸಾಧಿಸುವದಕ್ಕೆ ಮನಸ್ಸನ್ನು ಪಳಗಿಸಬೇಕು.

ಸಾಧಕನ ಅಭಿವೃದ್ಧಿಯು ಒಂದಾನೊಂದು ಕ್ರಮವನ್ನು ಅನುಸರಿಸುತ್ತದೆ. ಗಿಡಮರಗಳು ಬೆಳೆಯುವಂತೆ ಮುಂದುಮುಂದಕ್ಕೆ ಹೋಗುತ್ತಲೇ ಇರುವದಾದರೂ ಸ್ವಲ್ಪಸ್ವಲ್ಪ ಬಿಟ್ಟು ಸಾಧನವು ಬೆಳೆಯುತ್ತದೆ. ಯಾವ ಅಭಿವೃದ್ಧಿಯೂ ಕಾಣದೆ ಸುಮ್ಮನಿದ್ದಂತೆ ಕಾಣುವಾಗ ನಾವು ಎಚ್ಚರಿಕೆಯಿಂದಿರಬೇಕು. ಆಗ ನಾನು ಮೇಲಕ್ಕೇರದೆ ಇದ್ದರೂ ಕೆಳಕ್ಕೆ ಜಾರುವದಕ್ಕೆ ಅವಕಾಶವನ್ನು ಕೊಡಬಾರದು. ಈಗಲೆ ಫಲವು ಕಾಣದೆ ಇದ್ದರೂ ಚಿಂತೆಯಿಲ್ಲ, ಪ್ರಯತ್ನವನ್ನು ಮಾತ್ರ ಮುಂದುಮುಂದಕ್ಕೆ ನಡೆಯಿಸುತ್ತಲೇ ಇರಬೇಕು. ಈಶ್ವರನೇ ನಮ್ಮ ಸಾಧನಗಳನ್ನೆಲ್ಲ ಕೊನೆಗಾಣಿಸಿ ನಮ್ಮನ್ನು ಪಾರುಗಾಣಿಸುವನು.



## ೧೫೫. ಆಸುರಸಂಪತ್ತಿನ ಪೂರ್ವಪೀಠಿಕೆ 16 - (4-7)

**(1-1-50)**

ಈ ದಿನದವರೆಗೆ ದೈವಸಂಪತ್ತಿನ ಗುಣಗಳನ್ನು ವರ್ಣಿಸಿದ್ದಾಯಿತು. ಅಮಾನಿತ್ವಾದಿಗಳಂತೆಯೇ ಇವನ್ನು ತಿಳಿಯಬೇಕು. ಇಲ್ಲಿ ಹೇಳದೆ ಇರುವ ಉತ್ತಮಗುಣಗಳನ್ನೆಲ್ಲ ದೈವಸಂಪತ್ತಿನ ಗುಣಗಳ ಪಟ್ಟಿಗೆ ಸೇರಿಸಿಕೊಳ್ಳಬೇಕು. ಇತಿಹಾಸದಲ್ಲಿ ಸತ್ಯವನ್ನು ಬದಿಗೊತ್ತಿ ಕೆಲಕಾಲ ಪ್ರಸಿದ್ಧರಾದವರ ಹೆಸರು ಕಾಣಬರಬಹುದು. ಆದರೆ ಸತ್ಯ, ಅಹಿಂಸೆ-ಮುಂತಾದ ಈ ದೈವಸಂಪತ್ತಿನ ಗುಣಗಳು ತ್ರಿಕಾಲಾಬಾಧ್ಯವಾದ ಬೆಲೆಯುಳ್ಳವುಗಳಾಗಿವೆ. ಇವುಗಳನ್ನು ಜನರು ಅನುಸರಿಸಲಿ, ಬಿಡಲಿ, ಇವುಗಳ ಬೆಲೆಯೇನೂ ಕಡಿಮೆಯಾಗುವದಿಲ್ಲ; ಆಯಾಸಂದರ್ಭದ ಆನುಕೂಲ್ಯಕ್ಕಾಗಿ ನಾವು ಇವುಗಳನ್ನು ಬಿಡಬಹುದು. ಆದರೆ ಅದು ಹಾಗೆ ಬಿಟ್ಟವರ ಹೇಡಿತನವನ್ನು ಸೂಚಿಸುತ್ತದೆ. ಅಷ್ಟೆ. ಮುಂದೆ ಕಲ್ಯಾಣವಾಗಬೇಕೆಂದಿರುವವನು ಇವನ್ನು ತಪ್ಪದೆ ಅನುಸರಿಸುತ್ತಾನೆ. ಈ ಕಾರಣದಿಂದಲೇ ಭಗವಂತನು ಅರ್ಜುನನಿಗೆ ಇವುಗಳ ಪಟ್ಟಿಯನ್ನು ಹೇಳಿ, "ಅರ್ಜುನ, ಅಂಜದಿರು, ಶೋಕಿಸದಿರು ; ನೀನು ದೈವಸಂಪತ್ತಿನ ಗುಣಗಳಿಂದ ಕೂಡಿ ಹುಟ್ಟಿರುತ್ತೀಯೆ. ನಿನಗೆ ಭವಿಷ್ಯತ್ಕಲ್ಯಾಣವು ಕಟ್ಟಿಟ್ಟ ಬುತ್ತಿಯಾಗಿದೆ" ಎಂದು ಪ್ರೋತ್ಸಾಹಿಸಿ ನುಡಿದಿರುತ್ತಾನೆ.

ಈ ಲೋಕದಲ್ಲಿ ದೈವಸೃಷ್ಟಿ, ಆಸುರಸೃಷ್ಟಿ-ಎಂದು ಎರಡು ಬಗೆಯ ಸೃಷ್ಟಿಯಾಗಿದೆ. ಇವುಗಳಲ್ಲಿ ಯಾವದು ಯಾವಾಗ ಅಂತಃಕರಣವನ್ನು ಆವರಿಸಿಕೊಳ್ಳುವದೋ ಹೇಳುವದಕ್ಕಿಲ್ಲ. ಆದ್ದರಿಂದ ಎಚ್ಚರಿಕೆಯಿಂದ ಇರಬೇಕು. ದೈವಸಂಪತ್ತಿನ ಗುಣವಿರುವವನು ಮುಕ್ತನಾಗುವನು, ಆಸುರಸಂಪತ್ತಿನ ಗುಣವಿರುವವನು ಬದ್ಧನಾಗುವನು. ಮೋಕ್ಷವೆಂದರೇನು? ಸ್ವಾತಂತ್ರ್ಯವು.

ಈಗಿನ ಕಾಲದಲ್ಲಿ ಸ್ವಾತಂತ್ರ್ಯ ಶಬ್ದಕ್ಕೆ ಅರ್ಥವನ್ನು ವಿವರಿಸುವದು ಕಷ್ಟವಾಗಿರುತ್ತದೆ. ಏಕೆಂದರೆ ಸ್ವೇಚ್ಛಾವಿಹಾರವನ್ನೇ, ಯಾರೊಬ್ಬರನ್ನೂ ಲೆಕ್ಕಿಸದೆ ಮದಾಂಧರಾಗಿ ಮನಬಂದಂತೆ ವರ್ತಿಸುವದನ್ನೇ ನಾವು ಸ್ವಾತಂತ್ರ್ಯವೆಂದು ವ್ಯವಹರಿಸುವದಕ್ಕೆ ಮೊದಲುಮಾಡಿರುತ್ತೇವೆ. ಮನುಷ್ಯನಿಗೆ ಐಶ್ವರ್ಯ, ಅಧಿಕಾರ, ಯೌವನ, ಶಾರೀರಬಲ-ಮುಂತಾದವುಗಳು ಬಂದಾಗ ತನ್ನನ್ನು ತಾನೇ ಅರಿಯದೆ ಸ್ವೇಚ್ಛೆಯಿಂದ ನಡೆಯುತ್ತಾನೆ. ಆ ಕಾಲಕ್ಕೆ ತನ್ನ ನಡತೆಗೆ ಯಾರೂ ಅಡ್ಡಿಮಾಡದೆ ಇದ್ದರೆ ಅದೇ ಸ್ವಾತಂತ್ರ್ಯವೆಂದು ಭ್ರಮಿಸುತ್ತಾನೆ. ನಾನು ಬಹಳ ಚಿಕ್ಕವನಾಗಿದ್ದಾಗ ಹಳ್ಳಿಯಲ್ಲಿ ಯಕ್ಷಗಾನದ ಪದ್ಧತಿಯ ಬಯಲಾಟವೊಂದನ್ನು ಆಡಿದ್ದನ್ನು ನೋಡಿದ ನೆನಪಿದೆ. ಅಲ್ಲಿ ಕುಂಭಾಂಡಮಂತ್ರಿಯ ಪಾತ್ರವನ್ನು ವಹಿಸಿದವನೊಬ್ಬನು ಅಧಿಕಾರಮದದಿಂದ ಆಡಿದ ಹುಚ್ಚಾಟಗಳು ಆಗ ನನಗೆ ಬಹಳ ನಗುವನ್ನುಂಟುಮಾಡಿತ್ತು. ಆದರೆ ಆಗ ನನಗೆ ಅದು ಅಧಿಕಾರಮದದ ವಿಲಾಸವನ್ನು ತೋರಿಸುವ ಹಾಸ್ಯರಸಪ್ರಧಾನವಾದ ದೃಶ್ಯವೆಂಬುದು ತಿಳಿಯಲಿಲ್ಲ. ಮಂತ್ರಿಯು ವೇಶ್ಯಾನರ್ತನವೊಂದನ್ನು ನೋಡುತ್ತಾ ಕುಳಿತಿದ್ದನು; ಆಗ್ಗೆ ಜನರು ಬಂದು ಪೈರು ಒಣಗುತ್ತಿದೆ ಎಂದು ದೂರುಹೇಳಿಕೊಂಡರು. ಮಂತ್ರಿಯು `ಕೆರೆಯ ಏರಿಯನ್ನು ಒಡೆದು ನೀರುಬಿಡಿರಿ!' ಎಂದು ಕೂಡಲೆ ಅಪ್ಪಣೆಮಾಡಿ, ವಿಶೇಷವೇನೂ ಆಗಲಿಲ್ಲವೆಂಬಂತೆ, ನರ್ತನವನ್ನು ನೋಡುತ್ತಾ ಕುಳಿತುಕೊಂಡನು. ಅಷ್ಟರಲ್ಲಿ `ಕೆರೆಯ ನೀರೆಲ್ಲ ಹೋಗಿಬಿಟ್ಟಿತು!' ಎಂಬ ರೈತನ ದೂರಿನ ಅರ್ಜಿ ಬಂದಿತು. ಆಗ ಆ ಮಂತ್ರಿಯು ಸ್ವಲ್ಪವೂ ಹಿಂದುಮುಂದೆ ಯೋಚಿಸದೆ `ಏರಿಯ ಕಲ್ಲುಗಳನ್ನು ಬೇಗಬೇಗನೆ ತೆಗೆದುಕೊಂಡು ಹೋಗಿ ನೀರನ್ನು ಅಡ್ಡಗಟ್ಟಿರಿ' ಎಂದು ಅಪ್ಪಣೆಮಾಡಿದನು. `ಪೈರೆಲ್ಲ ಒಣಗುತ್ತಿದೆ' ಎಂಬ ಮತ್ತೊಂದು ದೂರಿಗೆ "ತೆಂಗಿನಮರ, ಅಡಿಕೆಮರ-ಮುಂತಾದವುಗಳನ್ನು ಕಡಿದು ಚಪ್ಪರವನ್ನು ಹಾಕಿರಿ!" ಎಂಬ ಉತ್ತರ ಬಂದಿತು! ಇತ್ಯಾದಿ, ಇತ್ಯಾದಿ. ಇಂಥ ಹುಚ್ಚು ಮಂತ್ರಿ ಯಾವನೂ ನಿಜವಾದ ಲೋಕದಲ್ಲಿರಲಾರನೆಂದು ನಾವು ಒಪ್ಪಿಕೊಳ್ಳಬೇಕು. ಆದರೆ ಅಧಿಕಾರಮದದಿಂದ ಮನಸ್ಸು ಬಂದಂತೆ ವರ್ತಿಸುವ ಉದ್ಧತರಾದ ಅಧಿಕಾರಿಗಳಿಗೇನೂ ಕಡಿಮೆಯಿಲ್ಲ; ಅಧಿಕಾರಿಗಳೇಕೆ, ಪ್ರತಿಯೊಬ್ಬ ಮಾನವನೂ ವಿವೇಕಿಯಲ್ಲದಿರುವಾಗ ಹೀಗೆಯೇ ವರ್ತಿಸುತ್ತಾನೆ. ತನ್ನ ಸುಖಭೋಗಕ್ಕೆ ಅಡ್ಡಿಗಳು ಬಂದರೆ ಯುಕ್ತಾಯುಕ್ತಗಳ ವಿವೇಚನೆಯನ್ನು ಮಾಡದೆ ತಾತ್ಕಾಲಿಕವಾದ ಯಾವದಾದರೊಂದು ಉಪಾಯದಿಂದ ಆ ಅಡ್ಡಿಗಳನ್ನು ಪರಿಹರಿಸಿಕೊಳ್ಳುವದಕ್ಕೆ ಯತ್ನಿಸುವದೂ, ಹಾಗೆ ವರ್ತಿಸುವದನ್ನೇ ಸ್ವಾತಂತ್ರ್ಯವೆಂದು ಎಣಿಸುವದೂ ಲೋಕದಲ್ಲಿ ಲೆಕ್ಕವಿಲ್ಲದಷ್ಟು ರೂಪಗಳಿಂದ ಕಂಡುಬರುತ್ತದೆ. ಅಂತೂ ಸ್ವೇಚ್ಛಾವೃತ್ತಿಯು ಸ್ವಾತಂತ್ರ್ಯವಲ್ಲ. ಅದು ಆಸುರಸಂಪತ್ತಿನಿಂದಾದ ಬಂಧದ ರೂಪಭೇದವಾಗಿರುತ್ತದೆ ಎಂಬುದನ್ನು ನಾವು ನೆನಪಿನಲ್ಲಿಡಬೇಕು.

ಬಂಧಮೋಕ್ಷಗಳು ಮನಸ್ಸಿನ ಪರಿಸ್ಥಿತಿಯಿಂದ ಆಗುತ್ತವೆಯೆಂದು ಇಲ್ಲಿ ಹೇಳಿರುವದನ್ನು ಲಕ್ಷಿಸಬೇಕು. ನಮ್ಮನ್ನು ನಿಜವಾಗಿ ಯಾರೂ ಕಟ್ಟಿಹಾಕಿರುವದಿಲ್ಲ. ನಮ್ಮನ್ನು

ನಾವೇ ಹೃದಯದಲ್ಲಿ ಆಸುರಗುಣಗಳಿಂದ ಕಟ್ಟಿಹಾಕಿಕೊಂಡಿರುತ್ತೇವೆ; ಹೃದಯದಲ್ಲಿ ಏರ್ಪಡಿಸಿಕೊಳ್ಳುವ ದೈವಸಂಪತ್ತಿನ ಭಾವನೆಗಳಿಂದ ನಮ್ಮನ್ನು ನಾವೇ ಆಸುರಸಂಪತ್ತಿನಿಂದ ಬಿಡಿಸಿಕೊಳ್ಳಬೇಕಾಗಿದೆ. ಹೀಗೆ ಹೃದಯದ ಪರಿಸ್ಥಿತಿಯಿಂದಲೇ ನಮ್ಮ ಹೊರಗಿನ ಸನ್ನಿವೇಶವೂ ಮಾರ್ಪಡುವದೆಂಬುದನ್ನೂ ಈ ಜಗತ್ತು ದುಃಖಮಯವಾಗಿ ಅಥವಾ ಆನಂದಮಯವಾಗಿ ಕಾಣುವಂತೆ ಮಾಡಿಕೊಳ್ಳುವದು ನಮ್ಮ ನಮ್ಮ ಮನಸ್ಸಿನ ಸಂಸ್ಕಾರವಿಶೇಷದಿಂದ ಆಗುತ್ತದೆ ಎಂಬುದನ್ನೂ ನೆನಪಿಟ್ಟರೆ ಆಧ್ಯಾತ್ಮಿಕಸಾಧನಗಳ ಆವಶ್ಯಕತೆಯು ವ್ಯಕ್ತವಾಗುವದು. ಇಲ್ಲಿ ದೈವಸಂಪತ್ತಿನ ಗುಣಗಳನ್ನು ಹೇಳಿರುವದು ಅವುಗಳನ್ನು ಅನುಸರಿಸಿ ಅಭ್ಯಾಸಮಾಡಿ ಅಳವಡಿಸಿಕೊಳ್ಳುವದಕ್ಕಾಗಿ; ಆಸುರಸಂಪತ್ತಿನ ಗುಣಗಳನ್ನು ಹೇಳಿರುವದು ಅವುಗಳ ವಿಷಯಕ್ಕೆ ಎಚ್ಚರಿಕೆಯಿಂದ ಇದ್ದು, ಪ್ರಯತ್ನಪೂರ್ವಕವಾಗಿ ಬಿಡುವದಕ್ಕಾಗಿ.

ಇಷ್ಟು ಪೂರ್ವಪೀಠಿಕೆಯಾದ ಬಳಿಕ ಭಗವಂತನು ಆಸುರಸಂಪತ್ತನ್ನು ಹೇಳುವದಕ್ಕೆ ಉಪಕ್ರಮಿಸುತ್ತಾನೆ. ಅಸುರರಾದ ಜನರಿಗೆ ಪ್ರವೃತ್ತಿಯೆಂದರೇನು, ನಿವೃತ್ತಿಯೆಂದರೇನು ಎಂಬುದು ತಿಳಿಯದು. ಇದನ್ನು ಮಾಡತಕ್ಕದ್ದು ಎಂಬುದು ಅವರಿಗೆ ತಿಳಿಯದು. ಇದನ್ನು ಬಿಡತಕ್ಕದ್ದು ಎಂಬುದೂ ಅವರಿಗೆ ತಿಳಿಯದು. ಇಷ್ಟೇ ಅಲ್ಲ. ಯಾರಾದರೂ ಅವರಿಗೆ "ಇದನ್ನು ಮಾಡು" ಎಂದರೆ ಅಥವಾ "ಇದನ್ನು ಮಾಡದಿರು" ಎಂದರೆ ಆ ಬುದ್ಧಿವಾದವನ್ನು ಕೇಳಿ ತಿಳಿದುಕೊಂಡು ಅನುಸರಿಸುವದು ಹಾಗಿರಲಿ, ಹೇಳಿದವರನ್ನು ಅನಾದರದಿಂದ ಕಂಡು ಅಸಡ್ಡೆಮಾಡುವದು ಅಸುರಧರ್ಮದವರ ಸ್ವಭಾವ. ಎರಡು ಆಚಾರಗಳನ್ನು ನೋಡಿದರೆ ಅವುಗಳನ್ನು ಹೋಲಿಸಿನೋಡಿ ಇದು ಅನುಸರಿಸತಕ್ಕದ್ದು, ಇದು ಅನುಸರಿಸತಕ್ಕದ್ದಲ್ಲ-ಎಂದು ತಾನೇ ಹೊಳೆದರೆ ಆಗ ನಾವು ಇನ್ನೂ ಅಭ್ಯುದಯಮಾರ್ಗವನ್ನು ಬಿಟ್ಟಿಲ್ಲ ಎಂದು ನಂಬಬಹುದು. ಆದರೆ ನಮಗೆ ಮತ್ತೊಬ್ಬರು ಸಾರಿ ಸಾರಿ ಹೇಳಿದರೂ ನಾವು ನಿಷಿದ್ಧಾಚಾರವನ್ನು ಬಿಡದೆ ಇದ್ದರೆ, ಅಥವಾ ಸದಾಚಾರವನ್ನೇ ನಿಂದಿಸುವದಕ್ಕೆ ಪ್ರವೃತ್ತರಾದರೆ ಆಗ ನಮ್ಮಲ್ಲಿ ಆಸುರಸಂಪತ್ತಿನ ಭಾವನೆಗಳು ಬೇರೂರಿಕೊಂಡಿವೆ ಎಂದು ತಿಳಿದುಕೊಳ್ಳಬೇಕು. ವಿವೇಕಿಯಾದ ಪುರುಷನು ಜನರು ತನ್ನ ವಿಷಯದಲ್ಲಿ ಏನು ದೋಷವನ್ನು ಹೇಳುತ್ತಾರೆ?-ಬಲ್ಲವರು ಯಾವ ನಡತೆಯನ್ನು ಮೆಚ್ಚುತ್ತಾರೆ, ಯಾವದನ್ನುನಿಂದಿಸುತ್ತಾರೆ ಎಂಬುದನ್ನು ಲಕ್ಷ್ಯವಿಟ್ಟು ಅರಿತುಕೊಳ್ಳುವದಕ್ಕೆ ಪ್ರಯತ್ನಮಾಡುತ್ತಿರಬೇಕು. ಸತ್ಸಹವಾಸದಿಂದಲೂ ಪೂರ್ವಪುಣ್ಯದ ಸಂಸ್ಕಾರದಿಂದಲೂ ಇಂಥ ಸಂದರ್ಭಗಳಲ್ಲಿ ತನ್ನ ನಡತೆಯನ್ನು ತಿದ್ದಿಕೊಳ್ಳುವ ಪ್ರವೃತ್ತಿಯುಂಟಾಗುತ್ತದೆ, ಪುರಾಣದಲ್ಲಿ ಹೇಳಿರುವ ಅಜಮಿಳನ ಕಥೆಯು ಇದಕ್ಕೆ ದೃಷ್ಟಾಂತವು. ಅಜಮಿಳನು ಸತ್ಕುಲದಲ್ಲಿ ಜನಿಸಿದ ಬ್ರಾಹ್ಮಣನಾದರೂ ಪಾಪವಾಸನೆಯಿಂದ ಶೂದ್ರಸ್ತ್ರೀಯನ್ನು ಮೋಹಿಸಿ ಅವಳಲ್ಲಿ ಭೋಗಾಸಕ್ತನಾಗಿ ಹಲವರು ಮಕ್ಕಳನ್ನು ಪಡೆದನು. ಆದರೆ ಅವನಿಗೆ ಒಂದಾನೊಂದು ಕಾಲದಲ್ಲಿ ಯಮದೂತರ ದರ್ಶನವಾಯಿತು; ಅವನು ಭೀತಿಯಿಂದ ತನ್ನ ಮುದ್ದುಮಗನಾದ ನಾರಾಯಣನನ್ನು ಕೂಗಿ ಕರೆದನು. ಅದೇ ಕಾಲದಲ್ಲಿ

ಅತ್ತ ಹೋಗುತ್ತಿದ್ದ ವಿಷ್ಣುದೂತರು `ಇವನು ಸಾಂಕೇತಿಕವಾಗಿ ನಾರಾಯಣನಾಮವನ್ನು ಉಚ್ಚರಿಸಿದ್ದರೂ ಅದರಿಂದ ಇವನಿಗೆ ಹೆಚ್ಚಿನ ಪುಣ್ಯ ಉಂಟಾಗಿದೆ; ಇವನನ್ನು ಯಮಲೋಕಕ್ಕೆ ಒಯ್ಯತಕ್ಕದ್ದಲ್ಲ' ಎಂದು ವಿಷ್ಣುನಾಮಸ್ಮರಣೆಯ ಫಲದ ಮಾಹಾತ್ಮ್ಯವನ್ನು ಯಮದೂತರಿಗೆ ತಿಳಿಯಹೇಳಿದರು. ಇದನ್ನು ಕೇಳಿದ ಅಜಮಿಳನು ತನ್ನ ಹಿಂದಿನ ಪಾಪಕ್ಕೆ ತಾನೇ ಪಶ್ಚಾತ್ತಾಪಪಟ್ಟು ವಿಷ್ಣುದೂತರ ಕೃಪೆಯಿಂದ ತಾನು ನರಕದಿಂದ ಪಾರಾದೆನೆಂಬಷ್ಟರಿಂದಲೇ ತೃಪ್ತನಾಗದೆ ಕೂಡಲೆ ತನ್ನ ಪಾಪಾಚರಣೆಯನ್ನು ಬಿಟ್ಟು ಗಂಗಾತೀರಕ್ಕೆ ಹೋಗಿ ಅಲ್ಲಿ ನಿಯಮದಿಂದ ಪರಮಾತ್ಮನ ಧ್ಯಾನವನ್ನು ಮಾಡಿ ಪರಿಶುದ್ಧನಾಗಿ ವೈಕುಂಠವನ್ನೇ ಪಡೆದನು.

ಹೀಗೆ ಕಾಲವಿಶೇಷದಿಂದ ಮನಸ್ಸು ದುಷ್ಟಪ್ರವೃತ್ತಿಯಿಂದ ಹಿಂತಿರುಗುವ ಸಂಭವವಿರುವದರಿಂದಲೇ ದೈವಸಂಪತ್ತಿನ ಹೆಚ್ಚುಗಾರಿಕೆಯನ್ನೂ ಆಸುರೀಸಂಪತ್ತಿನ ದೋಷವನ್ನೂ ಶ್ರವಣಮಾಡಿಸುವದು ಅವಶ್ಯವಾಗಿಬಿಡುತ್ತದೆ. ಅಜ್ಞಾನಿಗಳಾದವರಿಗೆ ತಿಳಿವಳಿಕೆ ಹೇಳುವದು ವಿವೇಕಿಗಳ ಕರ್ತವ್ಯವು. ಈ ಉಪದೇಶದಿಂದ ಕೂಡಲೆ ಲಾಭವನ್ನು ಪಡೆದುಕೊಂಡು ಮನಸ್ಸನ್ನು ಮಾರ್ಪಡಿಸಿಕೊಳ್ಳುವವರೂ ಉಂಟು. ಎಂಥ ಆಸುರಸಂಪತ್ತಿನವರಿಗೂ ಉದ್ಧಾರವಾಗಲು ಅವಕಾಶವಿರುತ್ತದೆ. ಆದ್ದರಿಂದ ನಾವು ಆಸುರಸಂಪತ್ತಿನವರು ; ನಮಗೆ ದೈವಸಂಪತ್ತಿನ ಗುಣಗಳು ಎಂದಿಗೂ ಬರುವಹಾಗೆಯೇ ಇಲ್ಲ-ಎಂದು ಯಾರೊಬ್ಬರೂ ನಿರಾಶರಾಗುವದಕ್ಕಿಲ್ಲ. ಏಕೆಂದರೆ ಇದು ಆಸುರೀಸಂಪತ್ತಿನ ನಡತೆ ಎಂದು ಯಾವಾಗ ಯಾವನಿಗೆ ತಿಳಿಯುತ್ತದೆಯೋ ಆಗಲೆ ಅವನಿಗೆ ಆಸುರಮಾರ್ಗವನ್ನು ಬಿಟ್ಟು ದೈವಮಾರ್ಗಕ್ಕೆ ತಿರುಗುವ ಸಂದರ್ಭವು ಒದಗಿದಂತೆ ಆಗಿರುತ್ತದೆ. ಈ ತತ್ತ್ವವನ್ನು ಮನಸ್ಸಿನಲ್ಲಿಟ್ಟು ನಾವು ಈ ಆಸುರಸಂಪತ್ತಿನ ವರ್ಣನೆಯನ್ನು ಶ್ರವಣಮಾಡಬೇಕು.

ಆಸುರಸಂಪತ್ತಿನವರಿಗೆ ಪ್ರವೃತ್ತಿನಿವೃತ್ತಿಗಳ ವಿವೇಕವಿರುವದಿಲ್ಲ. ಅವರಿಗೆ ಶೌಚ, ಆಚಾರ, ಸತ್ಯ- ಇವುಗಳು ಯಾವವೂ ಇರುವದಿಲ್ಲ. "ಮನಸ್ಸು ಶುಚಿಯಾಗಿದ್ದರಾಯಿತು" ಎಂದು ಹೇಳಿಕೊಂಡು ಶುಚಿತ್ವದ ವಾರ್ತೆಯನ್ನೇ ಮರೆತಿರುವವರು ಈಗೀಗ ಹೆಚ್ಚುತ್ತಿದ್ದಾರೆ. ಶುಚಿಯಿಲ್ಲದ ಪದಾರ್ಥಗಳನ್ನು ಮುಟ್ಟಲೂಬಾರದು ಎಂಬ ಭಾವನೆ ಹೋಗಿ ತಾನೇ ಅಶುಚಿಯಾದರೂ ಅದರ ಅಂಶವೇ ಇಲ್ಲದಂತೆ ಮೆರೆಯುವ ಹೆಮ್ಮೆಯು ಆಸುರಸಂಪತ್ತಲ್ಲದಿದ್ದರೆ ಮತ್ತೇನು? ಪದಾರ್ಥಗಳು ಬೇರೆ ಬೇರೆಯ ಕಾರಣದಿಂದ ಅಶುಚಿಯಾಗುತ್ತಿರುತ್ತವೆ; ಮನುಷ್ಯದೇಹವಂತೂ ಮತ್ತೆ ಮತ್ತೆ ಅಶುಚಿಯಾಗುತ್ತಲೇ ಇರುತ್ತದೆ. ಅಶುಚಿಯಾದ ಸ್ಥಳದಲ್ಲಿ ಮಾಡಿದ ಕರ್ಮವೂ ಅಶುಚಿಯಾದ ಭಾವನೆಯಿಂದ ಮಾಡಿದ ಕರ್ಮವೂ ವ್ಯರ್ಥವಾಗುವದು. ಅನೇಕರು ನಾವು ಉದ್ಯೋಗದಲ್ಲಿರುತ್ತೇವೆ ; ಉದ್ಯೋಗದ ನಿಮಿತ್ತದಿಂದ (Business) ಸ್ವಲ್ಪ ಶುಚಿತ್ವದ ಕಟ್ಟನ್ನು ಸಡಿಲಮಾಡಬೇಕಾಗುತ್ತದೆ; ಆಚಾರವನ್ನು ಅಷ್ಟಾಗಿ ನಡೆಯಿಸುವದಕ್ಕೆ ಆಗುವದಿಲ್ಲ;

ವ್ಯವಹಾರದಲ್ಲಿ ಯಾವಾಗಲೂ ಸತ್ಯವನ್ನೇ ಅವಲಂಬಿಸುವದಕ್ಕೆ ಆಗುವದಿಲ್ಲ ಎಂದು ಕುಂಟುನೆಪವನ್ನು ಹೇಳಿಕೊಳ್ಳುತ್ತಾ ಶೌಚಾದಿಗಳನ್ನು ಕೈಬಿಡುತ್ತಿರುತ್ತಾರೆ. ಇದರಿಂದ ಅವರು ತಮಗೂ ಅರಿಯದಂತೆಯೇ ಆಸುರಸಂಪತ್ತಿಗೆ ಇಳಿಯುತ್ತಿರುತ್ತಾರೆ.

ಈಗಿನ ಕಾಲದಲ್ಲಿ ಮನೆಯಲ್ಲಿ ಹಿರಿಯರಾದವರೇ ಆಚಾರವಿಚಾರಗಳಲ್ಲಿ ಕಟ್ಟುಬಿದ್ದು ನಡೆಯದಿರುವದರಿಂದ ಅವರ ಮಕ್ಕಳು, ತಪ್ಪುಹಾದಿಗೆ ಹೋಗುತ್ತಿರುತ್ತಾರೆ. ಈ ದೋಷಗಳು ಯಾರಲ್ಲಿದ್ದರೂ ಅವು ಕೆಟ್ಟವೇ; ಮನುಷ್ಯನ ಏಳಿಗೆಗೆ ಅವುಗಳಿಂದ ಕುಂದಾಗುತ್ತದೆ-ಎಂಬುದನ್ನು ಮನಸ್ಸಿಗೆ ಹತ್ತಿಸಿಕೊಳ್ಳಬೇಕು. ಇದು ತಪ್ಪು ಎಂಬುದನ್ನು ತಿಳಿದುಕೊಳ್ಳದಿದ್ದರೆ ಬರುಬರುತ್ತಾ ಅದೇ ಸರ್ವಸಮ್ಮತವಾಗಿಬಿಡುತ್ತದೆ; ಆಗ ಅದು ತಪ್ಪೆಂಬುದನ್ನು ತಿಳಿಸುವವರು ಕೂಡ ಇಲ್ಲದಂತೆ ಆಗಿಬಿಡುತ್ತದೆ. ಮದರಾಸಿನಲ್ಲಿ ಒಂದು ಸೇತುವೆಯಿದೆಯಂತೆ. ಅದಕ್ಕೆ 'ಹ್ಯಾಮಿಲ್ಟನ್‌ಬ್ರಿಡ್ಜ್' ಎಂದು ಹೆಸರಿದ್ದದ್ದು ತಮಿಳು ನುಡಿಯನ್ನು ವೇಗದಿಂದ ಆಡುವವರ ಬಾಯಿಗೆ ಬಿದ್ದು 'ಅಮಟನ್ ಬ್ರಿಡ್ಜ್' ಎಂದಾಗಿ ಇಂಗ್ಲೀಷಿಗೆ ಬಾರ್ಬರ್ಸ್ ಬ್ರಿಡ್ಜ್ (ಹಜಾಮರ ಸೇತುವೆ) ಎಂದು ಪರಿವರ್ತನೆಯಾಗಿಬಿಟ್ಟದೆ ಎಂದು ಒಬ್ಬರು ನನಗೆ ಹೇಳಿದರು! ಗೌರವಯುತವಾದ ಹೆಚ್ಚಿನ ಅರ್ಥವುಳ್ಳ ಶಬ್ದವು ಹೀಗೆ ಕೆಳಗಿನ ಅಪಾರ್ಥವನ್ನು ಕೊಡುವಂತೆ ಆಗಿರುವ ಹಾಗೆ ನಮ್ಮಗಳ ಆಲಸ್ಯ, ಆಲಕ್ಷ್ಯ, ಅಸಡ್ಡೆ-ಮುಂತಾದವುಗಳಿಂದ ಶೌಚ, ಆಚಾರ-ಮುಂತಾದವುಗಳು ಅರ್ಥವಿಲ್ಲದ ಹೊರತೋರಿಕೆಯ ನಡತೆಗಳಾಗಿಬಿಟ್ಟವೆ. ಅವುಗಳ ಅರ್ಥವನ್ನು ನಾವು ಸರಿಯಾಗಿ ತಿಳಿದುಕೊಂಡು ನಮ್ಮ ಮಕ್ಕಳಿಗೂ ಬಾಲ್ಯದಿಂದಲೇ ಅಭ್ಯಾಸಮಾಡಿಸುವ ಪ್ರಯತ್ನವನ್ನು ಕೈಗೊಳ್ಳುವಂತೆ ಅನುಗ್ರಹಿಸೆಂದು ಈಶ್ವರನನ್ನು ಬೇಡಿಕೊಳ್ಳೋಣ.



## ೧೫೬. ಆಸುರಸಂಪತ್ತು 16 - (6-7)

(8-1-50)

ಹದಿನಾರನೆಯ ಅಧ್ಯಾಯದ ವಿಷಯವಾಗಿರುವ ದೈವಾಸುರಸಂಪದ್ವಿಭಾಗದಲ್ಲಿ ದೈವಸಂಪತ್ತಿನ ವಿಚಾರವು ಮುಗಿದು ಆಸುರಸಂಪತ್ತು ಪ್ರಾರಂಭವಾಗಿದೆ. ಆಸುರಸಂಪತ್ತಿನ ವರ್ಣನೆಯು ಪರಿಹಾರಕ್ಕಾಗಿ ಎಂಬುದನ್ನು ಆಗಲೆ ತಿಳಿಸಿರುತ್ತೇನೆ. ದೈವಾಸುರಸಂಪದ್ವಿಭಾಗವೆಂಬುದು ಗೀತೆಗೆ ಪರಿಶಿಷ್ಟದಂತೆ ಇದೆ. ಪ್ರಧಾನವಾಗಿ ಹೇಳಬೇಕಾದದ್ದು ವಾಸುದೇವತತ್ತ್ವ; ಅದನ್ನು ಎರಡನೆಯ ಅಧ್ಯಾಯದಿಂದಲೇ ಪ್ರಾರಂಭಿಸಿ ಅದಕ್ಕೆ ಅಂತರಂಗಬಹಿರಂಗಸಾಧನಗಳನ್ನೂ ತಿಳಿಸಿದ್ದಾಗಿದೆ. ಆದರೆ ಕೊನೆಯಲ್ಲಿ ಹೇಳಿದ್ದು ದೈವಾಸುರಸಂಪತ್ತಿನ ವಿಚಾರವೆಂದು ಸಾಧಕರು ಇದನ್ನು ಕಡೆಗಣಿಸುವಹಾಗಿಲ್ಲ. ಏಕೆಂದರೆ ತತ್ತ್ವವನ್ನು ತಿಳಿಯುವದಕ್ಕೆ ತಕ್ಕ ಯೋಗ್ಯತೆಯುಂಟಾಗುವದಕ್ಕೆ ಮೊದಲೇ ಆಸುರಸಂಪತ್ತನ್ನು

ತ್ಯಜಿಸಿ ದೈವಸಂಪತ್ತಿನ ಗುಣವನ್ನು ಅಳವಡಿಸಿಕೊಳ್ಳಬೇಕು. ಇಂಥ ಅಧಿಕಾರಿಗಳಿಗೇ ತತ್ತ್ವವು ಸುಲಭವಾಗಿ ಮನಸ್ಸಿಗೆ ಹಿಡಿಯುವದು.

ಯಾವ ಕ್ರಮದಲ್ಲಿ ಓದಿದರೇನು? ಮೊದಲು ತತ್ತ್ವವಿಚಾರವನ್ನೇ ಓದುವೆನು; ಆಮೇಲೆಯೇ ಈ ಅಧ್ಯಾಯದ ವಿಷಯುವನ್ನು ಅನುಕ್ರಮಕ್ಕೆ ಸರಿಯಾಗಿ ಅಭ್ಯಾಸಮಾಡಿದರಾಯಿತು- ಎಂದು ಹಿಂದಕ್ಕೆ ಹಾಕಬಾರದು. ಪಾಠಕ್ರಮಕ್ಕಿಂತಲೂ ಅರ್ಥಕ್ರಮವೇ ಮುಖ್ಯ. ಅದರಲ್ಲಿಯೂ ಏಕವಾಕ್ಯವಾಗಿರುವ ವಿಷಯಗಳನ್ನು ಬಿಡಿಸಿ ಕಚ್ಚುಕಚ್ಚಾಗಿ ತಿಳಿದುಕೊಳ್ಳುವದಕ್ಕೆ ಪ್ರಯತ್ನಮಾಡಿದರೆ ಪ್ರಯೋಜನದ ಬದಲು ಅನರ್ಥವೂ ಆಗಬಹುದು. ಮುಸಲ್ಮಾನರ ಧರ್ಮಗ್ರಂಥದಲ್ಲಿ ಒಂದು ವಾಕ್ಯವಿದೆಯಂತೆ; " ಬೇಕಾದಂತೆ ಕುಡಿದು ಉಲ್ಲಾಸದಿಂದ ಮೆರೆಯುತ್ತಿರು ; ಅಂದರೆ ನರಕವು ನಿನಗೇನೂ ದೂರವಿರುವದಿಲ್ಲ". ಈ ವಾಕ್ಯದಲ್ಲಿ ಒಬ್ಬನು ಮೊದಲನೆಯ ಭಾಗವನ್ನು ಮಾತ್ರ ಮತ್ತೆ ಮತ್ತೆ ಪಾರಾಯಣ ಮಾಡುತ್ತಿದ್ದನಂತೆ. ಅವನ ಮಿತ್ರನಾದ ಮೌಲ್ವಿಯು `ಅಪ್ಪ, ಮುಂದಿನ ವಾಕ್ಯವನ್ನು ಓದು; ಅಗ ಅರ್ಥವು ಪೂರ್ಣವಾಗುತ್ತದೆ. ಪಾಪಾಸಕ್ತನಾದವನು ನರಕಕ್ಕೆ ಬೀಳುವನು- ಎಂಬುದೇ ಈ ವಾಕ್ಯದ ಅರ್ಥ. ಕುಡಿದು ವಿಲಾಸಿಯಾಗಿರು ಎಂಬುದೇನೂ ಇಲ್ಲಿ ಉಪದಿಷ್ಟವಾಗಿಲ್ಲ" ಎಂದು ಎಷ್ಟು ಹೇಳಿದರೂ ಆ ಮೂರ್ಖನು "ಎಲ್ಲವನ್ನೂ ಅನುಷ್ಠಾನಮಾಡುವದಕ್ಕೆ ಯಾರಿಂದ ತಾನೇ ಸಾಧ್ಯವಾದೀತು? ನಾನು ಇಷ್ಟು ಭಾಗವನ್ನು ಆಚರಣೆಗೆ ತರುತ್ತಿದ್ದೇನೆ, ಕುಡಿದು ಉಲ್ಲಾಸದಿಂದಿರಬೇಕೆಂದು ಇಲ್ಲಿ ಸ್ಪಷ್ಟವಾಗಿ ಉಪದೇಶಿಸಿರುವದಂತೂ ನಿಜವಷ್ಟೆ?" ಎಂದನಂತೆ! ಆಸುರಸ್ವಭಾವವನ್ನು ತಗ್ಗಿಸಿಕೊಳ್ಳದೆ ನಾನೂ ಪರಮಾತ್ಮನೂ ಒಂದೇ; ಆತನು ನನಗಿಂತ ಬೇರೆಯಿಲ್ಲ- ಎಂದು ಸ್ವೇಚ್ಛಾಚಾರಕ್ಕೆ ಬೀಳುವ ಮೂರ್ಖನು ಈ ಗುಂಪಿಗೆ ಸೇರಿದವನಾಗುತ್ತಾನೆ. ಭಗವದ್ಗೀತೆಯಲ್ಲಿ ಉಪದಿಷ್ಟವಾಗಿರುವ ತತ್ತ್ವವು ದುರಾಚಾರವನ್ನು ಬಿಟ್ಟು ಸದ್ಗುಣವನ್ನು ಅಭ್ಯಾಸದಿಂದ ವಶಪಡಿಸಿಕೊಂಡವರಿಗೆ ಮಾತ್ರ ಸರಿಯಾಗಿ ಒಲಿಯುತ್ತದೆ. ಓದುವ ಕನ್ನಡಕವನ್ನು ಕಣ್ಣಿಗೆ ಇಟ್ಟುಕೊಂಡಷ್ಟರಿಂದ ಹೇಗೆ ಓದುವದಕ್ಕೆಬರಲಾರದೋ ಓದು ಕಲಿತವನಿಗೆ ಮಾತ್ರವೇ ಹೇಗೆ ದೃಷ್ಟಿಗೆ ಅದು ಸಹಾಯಕವಾಗುವದೋ ಹಾಗೆ ದೈವಸಂಪತ್ತಿನ ಗುಣಗಳಿಂದ ಕೂಡಿದವರಿಗೇ ಗೀತೆಯ ಅಭಿಪ್ರಾಯವು ತಿಳಿಯುವದು. ಸುಮ್ಮನೆ ಗೀತೆಯನ್ನು ಓದಿದಮಾತ್ರದಿಂದ ಅದರ ಭಾವವು ಹೃದಯದೊಳಕ್ಕೆ ಪ್ರವೇಶಿಸಲಾರದು. ಆದ್ದರಿಂದ ಈ ಅಧ್ಯಾಯದ ಅರ್ಥವು ನಮಗೆ ಗೀತಾರ್ಥವನ್ನು ತಿಳಿಯುವ ಮುಂಚೆ-ಇರುವ ಶ್ರೀಗಣೇಶಾಯ ನಮಃ ಎಂದು ತಿಳಿಯಬೇಕು.

ಆಸುರಸಂಪತ್ತನ್ನು ತಪ್ಪಿಸಿಕೊಳ್ಳುವದು ಹೇಗೆ?- ಎಂಬುದನ್ನು ಇಲ್ಲಿ ಒಂದಿಷ್ಟು ವಿಚಾರಮಾಡುವದು ಒಳ್ಳೆಯದು. ಏಕೆಂದರೆ ಕೆಲವರು ದುರ್ಗುಣಗಳನ್ನು ಬಲಾತ್ಕಾರವಾಗಿ ಬಿಡುವದಕ್ಕೆ ಯತ್ನಿಸಿ ಹತಾಶರಾಗುತ್ತಾರೆ. ದುರಾಚಾರಗಳೆಂಬಿವು ಅವನ್ನು ಬಿಡಬೇಕೆಂದು ನಾವು ಯತ್ನಿಸಿದಷ್ಟೂ ಬಲವಾಗುವವು. ಅವನ್ನು ನಾವು ಬಿಡುವದಕ್ಕೆ ವಿನಿಯೋಗಿಸುವ

ಶಕ್ತಿಯನ್ನು ಅವುಗಳ ಪ್ರತಿಪಕ್ಷಭಾವನೆಗೇ ಹಾಕುವದಕ್ಕೆ ಯತ್ನಿಸಬೇಕು; ಆಗ ಅವು ನಿರಾಯಾಸವಾಗಿ ನಾಶವಾಗಿಬಿಡುವವು. ಅಶುಚಿತ್ವವು ನಮ್ಮಲ್ಲಿದೆಯಲ್ಲ ಎಂದು ಎಷ್ಟು ಚಿಂತಿಸಿದರೆ ತಾನೆ ಅದು ನಮ್ಮನ್ನು ಬಿಟ್ಟೀತು? ಶುಚಿಯಾಗಿರುವದಕ್ಕೆ ಪ್ರಯತ್ನಿಸಬೇಕು. ಅಷ್ಟರಿಂದಲೇ ಅಶುಚಿತ್ವವು ನಮ್ಮನ್ನು ಬಿಟ್ಟು ತೊಲಗುವದು. ಆದರೆ ಕೆಲವರಿಗೆ ತಮ್ಮಲ್ಲಿ ಆಸುರೀಸಂಪತ್ತಿದೆ ಎಂಬುದೇ ಗೊತ್ತಿರುವದಿಲ್ಲ. ಆದ್ದರಿಂದ ಅಂಥವರಿಗಾಗಿ ಇದೇ ಆಸುರಸಂಪತ್ತು ಎಂದು ಬೆಟ್ಟಿಟ್ಟು ತೋರಿಸಬೇಕಾಗುತ್ತದೆ. ಅದಕ್ಕಾಗಿ ಭಗವಂತನು ಇಲ್ಲಿ ಪ್ರಾರಂಭಿಸಿರುತ್ತಾನೆ. ಅರ್ಜುನನಂಥ ಅಧಿಕಾರಿಗೆ ಇದರ ಪ್ರಯೋಜನವು ಕಡಿಮೆಯಾದರೂ ನಮ್ಮಂಥವರು ಈ ಆಸುರಸಂಪತ್ತಿನ ಹಿಡಿತಕ್ಕೆ ಸಿಕ್ಕದಂತೆ ಪ್ರಯತ್ನಿಸುವದಕ್ಕೆ ಸಹಾಯಕವಾಗಿರಲೆಂದು ಭಗವಂತನ ಅಭಿಪ್ರಾಯವನ್ನು ಅನುಸರಿಸಿ ವ್ಯಾಸರೂ ಇಲ್ಲಿ ಇದನ್ನು ಸೇರಿಸಿರುತ್ತಾರೆ.

ಆಸುರಸಂಪತ್ತಿಗೆಲ್ಲ ತಳಹದಿ ಯಾವದು? ಸಂಕುಚಿತದೃಷ್ಟಿಯೇ. ವಿಶಾಲವಾದ ದೃಷ್ಟಿಯೇ ದೈವಸಂಪತ್ತಿಗೆ ನಮ್ಮನ್ನು ಕೊಂಡೊಯ್ಯುವದು. ಒಬ್ಬ ಪರಮೇಶ್ವರನೇ ಪರಮಾರ್ಥವಾಗಿರತಕ್ಕವನು. ಈಗ ನಮಗೆ ಕಾಣಿಸುತ್ತಿರುವ ದೃಶ್ಯಗಳೆಲ್ಲ ಆತನ ನಿಯಮಕ್ಕೆ ಒಳಪಟ್ಟು ಸ್ವರೂಪಸ್ಥಿತಿಗಳುಳ್ಳವಾಗಿದೆ ಎಂಬುದೇ ವಿಶಾಲದೃಷ್ಟಿಯು. ಈ ಜ್ಞಾನವು ನಮಗೆ ಈಗ ಇಲ್ಲದಿದ್ದರೂ ದೊಡ್ಡವರ ಉಪದೇಶದಲ್ಲಿ ಶ್ರದ್ಧೆಯಿಟ್ಟು ಈ ಭಾವನೆಯನ್ನು ಬೆಳೆಯಿಸಿಕೊಳ್ಳಲು ಪ್ರಯತ್ನಿಸುತ್ತಿರಬೇಕು. ಐತಿಹಾಸಿಕರು, ವೇದಕಾಲದ ದೇವತೆಗಳು ಹೋದ ಬಳಿಕ ಪುರಾಣಕಾಲದ ದೇವತೆಗಳು ಕಾಣಿಸಿಕೊಂಡರು-ಎನ್ನುತ್ತಾರೆ. ಅದು ನಿಜವನ್ನು ತಿಳಿಯದವರ ಮಾತು. ನಮ್ಮ ಧಾರ್ಮಿಕವಾಙ್ಮಯವೆಲ್ಲ ಒಂದೇ ತತ್ತ್ವವನ್ನು ತಿಳಿಸುತ್ತಿರುತ್ತದೆ. ಪರಮಾತ್ಮನೊಬ್ಬನೇ ಇಂದ್ರ, ಮಿತ್ರ, ವರುಣ-ಮುಂತಾದ ಹೆಸರುಗಳಿಂದ ಪ್ರಸಿದ್ಧನಾಗಿರುವವನು, ಆ ಒಬ್ಬನ ವಿಭೂತಿವಿಶೇಷಗಳೇ ದೇವತೆಗಳು. ದೇವತೆಗಳ ಸಮಷ್ಟಿಯೇ ಪರಮೇಶ್ವರನು. ಕಿರಣಗಳೆಲ್ಲ ಸೇರಿಯೇ ಸೂರ್ಯನಾಗಿರುವಂತೆಯೇ ಇದು. ಒಟ್ಟುಗ್ರಂಥರಾಶಿಯಲ್ಲಿ ಒಂದು ಭಾಗವನ್ನು ಮಾತ್ರ ನೋಡಿ ಅದೇ ಪೂರ್ಣವೆಂದು ಭಾವಿಸುವದು ಹುಟ್ಟುಕುರುಡರು ಆನೆಯೆಂದು ಅದರ ಅವಯವವಿಶೇಷಗಳನ್ನೇ ಇಟ್ಟುಕೊಂಡಂತೆ ಆಗುವದು. `ಪ್ರಾಚ್ಯ ಧಾರ್ಮಿಕಗ್ರಂಥಗಳು' (Sacred Books of The East) ಎಂಬ ಹೆಸರಿನಿಂದ ಪಾಶ್ಚಾತ್ಯವಿದ್ವಾಂಸರು ಪೂರ್ವದೇಶಗಳ ಧಾರ್ಮಿಕಗ್ರಂಥಗಳನ್ನು ಇಂಗ್ಲೀಷಿಗೆ ಪರಿವರ್ತನೆಮಾಡಿದ್ದು ಕುರುಡುಗಣ್ಣಿಗಿಂತ ಮೆಳ್ಳಗಣ್ಣು ಮೇಲೆಂಬ ಗಾದೆಯನ್ನನುಸರಿಸಿದೆ. ಅನುವಾದಕರಿಗೆ ಆಯಾಧರ್ಮಗಳ ಸಂಪ್ರದಾಯವು ಚೆನ್ನಾಗಿ ತಿಳಿಯದ್ದರಿಂದಲೂ ಅವರು ಗ್ರಂಥಗಳ ಯಥಾಶ್ರುತಾರ್ಥವನ್ನೇ ಮುಖ್ಯವೆಂದು ಹಿಡಿದದ್ದರಿಂದಲೂ ಓದುಗರನ್ನು ಕೆಲಸಂದರ್ಭಗಳಲ್ಲಿ ತಪ್ಪುಹಾದಿಗೆಳೆಯುವದಕ್ಕೆ ಸಹಾಯಕವಾದಂತಾಗಿದೆ. ಇದಿರಲಿ. ಬಿಡಿಬಿಡಿಯಾದ ದೇವತೆಗಳನ್ನು ಕೂಡ ಅರಿಯದವರು

ಪರಮಾತ್ಮನಿಗೆ ಇನ್ನಷ್ಟು ದೂರವಾಗಿರುವದರಿಂದ ಅವರ ದೃಷ್ಟಿಯು ಇನ್ನೂ ಸಂಕುಚಿತವೆಂದಾಗುವದು. ಹೀಗೆ ಜನರ ದೃಷ್ಟಿಯು ಸಂಕುಚಿತವಾಗುತ್ತಾ ಆಗುತ್ತಾ ಬಂದು ಕೊನೆಗೆ ದೇಹಾತ್ಮವಾದಕ್ಕೆ ಬಂದಿಳಿಯುತ್ತದೆ. ದೇಹದ ಪೋಷಣೆಗೆ ಬೇಕಾದ ಪ್ರಯತ್ನವೇ ಐಹಿಕಜೀವನದ ಕೊನೆಯ ಗುರಿ ಎಂದು ಭಾವಿಸಿದ ಜನರು ಹೆಚ್ಚಿದಂತೆ ಮಾನವನು ಆಸುರಸ್ವಭಾವವನ್ನು ಹೆಚ್ಚು ಹೆಚ್ಚಾಗಿ ಪಡೆದುಕೊಳ್ಳುತ್ತಾನೆ. ಬಲುಸಣ್ಣದಾಗಿರುವ ನಾನು ಎಂಬ ಅಭಿಮಾನಕ್ಕೆ ವಿಷಯವಾಗಿರುವ ಈ ದೇಹವು ಆಸುರಸ್ವಭಾವದ ಕೃತ್ಯಗಳಿಗೆಲ್ಲ ಮೂಲವಾಗುವದು. ಶರೀರಕ್ಕಾಗಿಯೇ ಮಿಕ್ಕದ್ದೆಲ್ಲವೂ ಇರುವದು ಎಂದು ಯಾವನು ತಿಳಿಯುವನೋ ಅವನು ಧರ್ಮವನ್ನು ಕೈಬಿಡುವದು ಖಂಡಿತ. ಆದ್ದರಿಂದ ಸಂಕುಚಿತ ದೃಷ್ಟಿಯನ್ನು ಅವಲಂಬಿಸಿದವರೇ ಅಸುರರು. ಅವರು ಆಹಾರನಿದ್ರಾದಿಗಳನ್ನು ಮುಖ್ಯವೆಂದೆಣಿಸಿ ಶೌಚಾಚಾರಾದಿಗಳನ್ನು ಕಡೆಗಣಿಸುವದು ಸ್ವಾಭಾವಿಕವೇ ಆಗಿರುತ್ತದೆ.

ಅಸುರರಿಗೆ ಶೌಚದೃಷ್ಟಿಯೂ ಇರುವದಿಲ್ಲ, ಆಚಾರದೃಷ್ಟಿಯೂ ಇರುವದಿಲ್ಲ ಧರ್ಮವನ್ನು ತಿಳಿಯುವದಕ್ಕೆ ಸಾಧನಗಳು ಯಾವವು? "ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯಚ ಪ್ರಿಯಮಾತ್ಮನಃ " ಎಂಬಂತೆ ಎಲ್ಲಕ್ಕೂ ಹೆಚ್ಚಿನ ಪ್ರಮಾಣವು ಶ್ರುತಿಯು; ಶ್ರುತಿಯನ್ನು ಅರ್ಥಮಾಡಿಕೊಳ್ಳುವ ಯೋಗ್ಯತೆಯಿಲ್ಲದವರು ಸ್ಮೃತಿಗಳನ್ನು ಓದಬೇಕು; ಶ್ರುತಿ ಸ್ಮೃತಿಗಳಲ್ಲಿ ಕಾಣಿಸದೆ ಇರುವ ವಿಷಯಗಳನ್ನು ಸದಾಚಾರದಿಂದ ತಿಳಿದುಕೊಳ್ಳಬೇಕು: ಈಗಿನ ಸ್ಥಿತಿಯಲ್ಲಿ ಸ್ಮೃತಿಗಳಲ್ಲಿ ಯಾವ ಯಾವದೋ ವಿಷಯಗಳು ಸೇರಿಕೊಂಡುಬಿಟ್ಟಿರುತ್ತವೆ. ಒಂದು ನೂರು ರೂಪಾಯಿ ಎಂದು ಸಾಲದ ಪತ್ರದಲ್ಲಿ ಬರೆದಿದ್ದನ್ನು ಒಬ್ಬ ಧೂರ್ತನು ಅಂಕೆಯನ್ನು ಸ್ವಲ್ಪ ತಿದ್ದಿ ೧೦೦ ನ್ನು ೨೦೦ ಎಂದು ಮಾಡಿಕೊಂಡಿದ್ದನಂತೆ. ಕೋರ್ಟಿನಲ್ಲಿ ಸಾಕ್ಷಿ ಹೇಳುವವನು "ಸ್ವಾಮಿ, ನಾನು ನೋಡಿದಾಗ ಬಿದಿಗೆ ಚಂದ್ರನಾಗಿತ್ತು, ಈಗ ಆ ಚಂದ್ರನಿಗೆ ಬಾಲ ಬಂದಂತಿದೆ!" ಎಂದು ವ್ಯಂಗ್ಯವಾಗಿ ನುಡಿದನಂತೆ! ಹಾಗೆ ಈಗ ಮೂಲಸ್ಮೃತಿಗಳಿಗೆ ಅನೇಕ ಬಾಹ್ಯವಿಷಯಗಳು ಸೇರಿಕೊಂಡುಬಿಟ್ಟಿರುವದರಿಂದ ಅವು ಪರಸ್ಪರವಿರೋಧವಾಗಿ ಕಾಣಿಸುವದಕ್ಕೆ ಮೊದಲಾಗಿವೆ. ಆದ್ದರಿಂದ ವೇದವನ್ನೇ ಮುಖ್ಯವಾಗಿ ಹಿಡಿದು ಅದಕ್ಕೆ ವಿರುದ್ಧವಾದ ಸ್ಮೃತಿವಚನಗಳನ್ನು ಲೆಕ್ಕಕ್ಕೆ ತಂದುಕೊಳ್ಳದೆ ಇರುವದೇ ಯುಕ್ತ. ಆದರೆ ಶ್ರುತಿವಚನವೂ ಸ್ಪಷ್ಟವಾಗಿ ಸಿಕ್ಕದಿದ್ದರೆ ಏನುಮಾಡಬೇಕು? ಶ್ರುತಿಯಲ್ಲಿ ಈ ವಿಷಯದಲ್ಲಿ ಒಂದು ಸ್ಪಷ್ಟವಾದ ಸೂಚನೆಯಿದೆ. ಕರ್ಮದ ವಿಷಯದಲ್ಲಾಗಲಿ ಆಚಾರದ ವಿಷಯದಲ್ಲಾಗಲಿ ಸಂಶಯವುಂಟಾದರೆ, ತಿಳಿದವರೂ ವಿಮರ್ಶೆಮಾಡಿ ನಡೆಯುವವರೂ ಕಾಮಕ್ಕೆ ವಶರಾಗದವರೂ ಆದ ಸತ್ಪುರುಷರು ಹೇಗೆ ನಡೆಯುವರೋ ನಾವು ಹಾಗೆ ನಡೆಯಬೇಕು- ಎಂಬುದೇ ಆ ಸೂಚನೆ. ಸದಾಚಾರವೆಂದರೆ ದಂಭಕ್ಕಾಗಿ ಮಾಡುವ ಆಚಾರವಲ್ಲ, ಸತ್ಪುರುಷರು ಅನುಸರಿಸುವ ಆಚಾರ. ಇಂಥ ಸದಾಚಾರದಿಂದ ವೇದವನ್ನು ಕೂಡ ಅನುಮಾನಮಾಡಬಹುದಾಗುತ್ತದೆ. ಸದಾಚಾರವೆಂಬುದು ಹುಡುಗರ ಬರವಣಿಗೆಗೆ ಹಾಕಿಕೊಡುವ ಮೇಲುಪಂಕ್ತಿಯಂತೆ ಇರುತ್ತದೆ. ಆದ್ದರಿಂದಲೇ

ಆಪಸ್ತಂಬರು ತಮ್ಮ ಧರ್ಮಶಾಸ್ತ್ರದಲ್ಲಿ ಸ್ಥಳದ ಕುಲಾಚಾರಗಳನ್ನು ಸ್ತ್ರೀಯರಿಂದಲೂ ತಿಳಿದುಕೊಳ್ಳಬೇಕು ಎಂದು ಬರೆದಿರುತ್ತಾರೆ. ಆದರೆ ನಮ್ಮ ದುರದೃಷ್ಟಕ್ಕೆ ನಮ್ಮ ಸ್ತ್ರೀಯರಿಗೂ ಆಚಾರಗಳು ಮರೆತುಹೋಗುವ ಸಂದರ್ಭವೊದಗಿರುತ್ತದೆ. ಒಂದು ದೇಶದಿಂದ ಒಂದು ದೇಶಕ್ಕೆ ಹೋದರೆ ಆಚಾರವು ಕೆಡಬಹುದು ಎಂಬ ಅಂಜಿಕೆ ಹಿಂದೆ ಜನರಿಗೆ ಇತ್ತು. ಈಗ ಅಖಂಡಪೃಥ್ವಿಯೇ ಒಂದಾಗಿ ಎಲ್ಲವೂ ಕಲಸಿಹೋಗುತ್ತಿರುವಾಗ ಯಾವ ಆಚಾರವನ್ನು ಅನುಸರಿಸುವದು? ಜನರು ಈಗ ಧರ್ಮಸಿಂಧುವಿಗಿಂತಲೂ ಅನುಕೂಲಸಿಂಧುವನ್ನೇ ಹುಡುಕುತ್ತಾ ಇರುತ್ತಾರೆ. ಹೊಟ್ಟೆಪಾಡಿಗಾಗಿ ಆಚಾರಗಳನ್ನು ಒತ್ತರಿಸುವ ಭರದಲ್ಲಿ ಆಚಾರವು ಮರೆತುಹೋಯಿತು; ಹೊಟ್ಟೆಯಂತೂ ತುಂಬಲೇ ಇಲ್ಲ; ಇಂಥ ಶೋಚನೀಯಾವಸ್ಥೆಗೆ ಜನರು ಇಳಿದಿರುತ್ತಾರೆ! ಬೇರೆ ಬೇರೆ ದೇಶಗಳ, ಬೇರೆ ಬೇರೆಯ ಮತಾಚಾರಗಳ ಸರಕಾರದ ಆಡಳಿತಕ್ಕೆ ಸಿಕ್ಕಿಬಿದ್ದು ನಾವು ನಮ್ಮ ಆಚಾರಗಳನ್ನೆಲ್ಲ ಮರೆಯುತ್ತಾ ಬಂದಿರುತ್ತೇವೆ.

ಲೌಕಿಕದೃಷ್ಟಿಯಿಂದಕೂಡ ಇಂಥ ಸಂದರ್ಭದಲ್ಲಿ ಹೀಗೆ ನಡೆದುಕೊಳ್ಳಬೇಕು ; ಆಯಾ ಲೌಕಿಕ ಆಚಾರಕ್ಕೆ (Etiquette) ಗೌರವವನ್ನು ಕೊಡಬೇಕು ಎಂದು ವ್ಯವಹಾರಜ್ಞರು ಹೇಳುತ್ತಾರೆ. ಹೀಗಿರುವಲ್ಲಿ ಶಾಸ್ತ್ರೀಯಾಚಾರವನ್ನೇಕೆ ನಾವು ಬಿಟ್ಟೆವೆಂಬುದು ತಿಳಿಯುವಹಾಗಿಲ್ಲ. ಶಾಸ್ತ್ರೀಯವಾದ ಫಲವು ಬರಬೇಕಾದರೆ ಆ ಆಚಾರಗಳಿಗೆ ನಾವು ಗೌರವವನ್ನು ಕೊಡುವದು ಯುಕ್ತವಲ್ಲವೆ? ನಮ್ಮತನವನ್ನು ನಾವು ಕಳೆದುಕೊಂಡದ್ದೇ ಈ ಅನಾದರಕ್ಕೆ ಕಾರಣವೆಂದು ನನಗೆ ತೋರುತ್ತಿದೆ. ಪ್ರತಿಯೊಂದು ಆಚಾರವೂ ಒಂದೊಂದು ಧಾರ್ಮಿಕತತ್ತ್ವಕ್ಕೆ ಸಂಕೇತವಾಗಿದ್ದದ್ದರಿಂದಲೇ ನಮ್ಮ ಹಿಂದಿನವರು ಅದನ್ನು ಕಾಪಾಡಿಕೊಂಡು ಬಂದಿದ್ದರು. ಆ ಸಂಕೇತದ ಮರ್ಮವನ್ನು ಮರೆತು, ಸಂಕೇತವನ್ನೂ ಕೈಬಿಟ್ಟದ್ದು ಎಂಥ ಮೂರ್ಖತನವಾಯಿತು! ಸ್ವಲ್ಪ ಎಚ್ಚರತಪ್ಪಿದ್ದರಿಂದ ಮನೆಗೆ ಕಳ್ಳನು ಹೊಕ್ಕಂತೆ ದುರಾಚಾರಗಳು ನಮ್ಮ ಸಮಾಜದೊಳಗೆ ಇಳಿದಿರುತ್ತವೆ. ಈಗಲಾದರೂ ನಾವು ನಮ್ಮ ಆಚಾರವನ್ನು ತಿದ್ದಿಕೊಳ್ಳುವದಕ್ಕೆ ಪ್ರಯತ್ನವನ್ನು ಮಾಡಬೇಕು. ಹುಡುಗರನ್ನು "ವಿದ್ಯಾಭ್ಯಾಸ"ವೆಂಬ ನೆಪದಿಂದ ಆಚಾರವೆಲ್ಲ ಮರೆತುಹೋಗುವಂತೆ ಮಾಡಿರುತ್ತೇವೆ. ಕೂಡಲೆ ಸಮಾಜದ ಶುದ್ಧೀಕರಣಕ್ಕೆ ನಾವು ಸೊಂಟಕಟ್ಟಬೇಕು. ನಮ್ಮ ಸಂಸ್ಕೃತಿಯ ಸಂಕೇತವಾದ ಈ ಆಚಾರಗಳನ್ನು ನಾವು ಮತ್ತೆ ಪಡೆದುಕೊಳ್ಳದಿದ್ದರೆ ನಾವು ಅಸುರರಾಗುವ ಅಂಜಿಕೆಯುಂಟು. ಯಾರು ಶಾಸ್ತ್ರದಲ್ಲಿ ತಿಳಿವಳಿಕೆಯೂ ಶ್ರದ್ಧೆಯೂ ಇರುವವರೋ, ಅಂಥವರಿಂದ ನಾವು ಆಚಾರವನ್ನು ಕಲಿತು ಅದನ್ನು ಅನುಸರಿಸುವದಕ್ಕೆ ಆರಂಭಿಸಬೇಕು; ಸ್ವಲ್ಪ ಶ್ರಮವನ್ನು ವಹಿಸಿ ವಿಚಾರಮಾಡಿದರೆ ಹಿಂದಿನ ಆಚಾರಗಳಲ್ಲಿ ಅಡಗಿರುವ ಮಹತ್ತ್ವವು ಕಂಡುಬರುತ್ತದೆ. ಆ ಆಚಾರಗಳು ನಮ್ಮ ಪುರೋಭಿವೃದ್ಧಿಗೆ ಕಾರಣವೆಂದು ಕಂಡುಬಂದರೆ ಅವನ್ನು ಕೈಬಿಡದೆ ಅನುಷ್ಠಾನಕ್ಕೆ ತಂದುಕೊಳ್ಳಬೇಕು. "ಯಾರೂ ಮಾಡುವದಿಲ್ಲವಲ್ಲ, ನಾನು ಮಾಡುವದು ಹೇಗೆ?" ಎಂದು ಅಂಜಬಾರದು. ಯಾರು ಧೈರ್ಯದಿಂದ ಸದಾಚಾರವನ್ನು ಆರಂಭಿಸುವರೋ

ಅವರೇ ಜನನಾಯಕರಾಗುವರು. ಹೇಗೂ ವಿಚಾರಮಾಡದೆ ಆಚಾರಗಳನ್ನು ತಳ್ಳಿಹಾಕತಕ್ಕದ್ದಲ್ಲ. ಅವುಗಳಲ್ಲಿ ಗುಣವಿದ್ದರೆ ಈಗಲೇ ಅವನ್ನು ಅನುಷ್ಠಾನಕ್ಕೆ ತಂದುಕೊಂಡುಬಿಡಬೇಕು. ಭಗವದ್ಗೀತೆಯು ಲೋಕವೇ ತಲೆಕೆಳಗಾದರೂ ಅಲುಗಾಡದೆ ಇರುವ ತತ್ತ್ವವನ್ನು ತಿಳಿಸುವ ಗ್ರಂಥವು. ಆದ್ದರಿಂದ ಅದಕ್ಕೆ ನಾವು ಗೌರವವನ್ನು ತೋರಿಸಬೇಕು. ಗೀತೆಯು ಒಂದು ಶಾಸ್ತ್ರ; ಶಾಸ್ತ್ರವೆಂದರೆ ಒಂದು ದೊಡ್ಡ ವಿದ್ಯೆಯನ್ನು ತಿಳಿಸುವ ಗ್ರಂಥ. ವಿದ್ಯೆಯನ್ನು ನನ್ನದು ಎಂದು ಆರಿಸಿಕೊಂಡು ಆಚರಣೆಗೆ ತರುವದರ ಮೂಲಕ ಅದಕ್ಕೆ ಗೌರವವನ್ನು ತೋರಿಸುವದು ನಮ್ಮೆಲ್ಲರ ಕರ್ತವ್ಯವು. ಶಾಸ್ತ್ರವನ್ನು ತಿಳಿದವರಿಗೆ ಮತ್ತಷ್ಟು ಗೌರವವನ್ನು ತೋರಿಸಬೇಕು; ಏಕೆಂದರೆ ಅವರೇ ವಿದ್ಯೆಯ ಬೊಕ್ಕಸವಾಗಿರುತ್ತಾರೆ. ಹೀಗೆ ವಿದ್ಯೆಯನ್ನು ಗೌರವಿಸುವದೊಂದು ದೊಡ್ಡ ಆಚಾರವು. ಇಂಥ ಆಚಾರವು ಎಲ್ಲಾ ಲೋಕಕ್ಕೂ ಎಲ್ಲಾ ಕಾಲಕ್ಕೂ ಭೂಷಣವಾದದ್ದು. ತಿಳಿವಳಿಕೆಯಿಲ್ಲದೆ ಆಚಾರಗಳನ್ನೂ ಆಚಾರನಿಷ್ಠರಾದ ದೊಡ್ಡವರನ್ನೂ ತಿರಸ್ಕರಿಸುವದು ಕೇವಲ ಆಸುರಸಂಪತ್ತೇ ಆಗಿರುತ್ತದೆ. ಆದ್ದರಿಂದ ತತ್ತ್ವವನ್ನು ತಿಳಿಸುವ ಅಧ್ಯಾತ್ಮವಿದ್ಯೆಯನ್ನೂ ಅದಕ್ಕೆ ಸಾಧಕವಾದ ಆಚಾರಗಳನ್ನೂ ಅವುಗಳನ್ನು ತಿಳಿಸುವ ಗ್ರಂಥಗಳಿರುವ ಸಂಸ್ಕೃತಭಾಷೆಯನ್ನೂ ಗೌರವಿಸುವ ಆಚಾರವನ್ನು ಮೊದಲು ನಾವೆಲ್ಲರೂ ಕಲಿಯೋಣ. ಹಾಗೆ ಭಗವಂತನು ನಮ್ಮೆಲ್ಲರಿಗೂ ಬುದ್ಧಿಯನ್ನು ಕೊಟ್ಟು ಅನುಗ್ರಹಿಸಲಿ!



## ೧೫೭. ಆಸುರಸಂಪತ್ತು 16 - (7-8)

**(15-1-50)**

ಆಸುರಸಂಪತ್ತಿನವರಿಗೆ ಶೌಚಾಚಾರಗಳ ತಿಳಿವಳಿಕೆಯಿರುವದಿಲ್ಲ ಎಂದು ಹೇಳಿದ್ದಾಯಿತಷ್ಟೆ. ಮನುಷ್ಯನಿಗೆ ಕಾಮವೇ ಮುಂತಾದ ಕಾರಣಾಂತರದಿಂದ ಇವು ತಪ್ಪಿಹೋಗುತ್ತವೆ. ಶೌಚಾಚಾರಗಳಿಗೆ ತೌರುಮನೆಯೆನಿಸಿದ್ದ ಈ ದೇಶವು ಆಚಾರಪ್ರಿಯರಲ್ಲದವರ ಕೈಗೆ ಸಿಕ್ಕಿ ನರಳಿದ್ದರಿಂದ ಆಳುವವರನ್ನು ಅನುಸರಿಸಿ ನಾವೂ ಆಚಾರವನ್ನು ಕೈಬಿಟ್ಟೆವು. ಆದರೂ ನಮ್ಮ ದೇಶದಲ್ಲಿ ಕೆಲವರು ಇನ್ನೂ ಸ್ವಲ್ಪ ಶೌಚವನ್ನೂ ಆಚಾರವನ್ನೂ ಇಟ್ಟುಕೊಂಡಿದ್ದಾರೆ. ಮಿಕ್ಕ ದೇಶದವರಿಗೆ ಹೋಲಿಸಿದರೆ ನಮ್ಮವರನ್ನು ಶುಚಿಯಾದವರೆಂದೂ ಆಚಾರವಂತರೆಂದೂ ಕರೆಯಬೇಕು.

ಶೌಚಾಚಾರಗಳು ನಿಯಮವೆಂಬ ಸಾಧನವರ್ಗಕ್ಕೆ ಸೇರಿದವುಗಳಾಗಿವೆ. ಸತ್ಯವೆಂಬುದು ಯಮವೆಂಬ ಸಾಧನಗಳ ಗುಂಪಿಗೆ ಸೇರಿದ್ದು. ಆಸುರರು ಶೌಚಾಚಾರಗಳನ್ನು ಬಿಡುವದಕ್ಕೆ ಯಾವ ಕಾಮವು ಕಾರಣವೋ ಸತ್ಯವನ್ನು ಬಿಡುವದಕ್ಕೂ ಅದೇ ಕಾಮವೇ ಕಾರಣವು. ಸತ್ಯವು ಮೊದಲು ಮನಸ್ಸಿಗೆ ಸೇರಿದ್ದು; ಆಮೇಲೆ ಮನಸ್ಸಿಗೆ ತಿಳಿದಂತೆಯೇ

ಬಾಯಿಯಲ್ಲಿ ನುಡಿಯುವದು ಬಾಹ್ಯಸತ್ಯವು. ಈ ಸತ್ಯವನ್ನು ಅನುಸರಿಸುವದು ಸುಲಭಸಾಧ್ಯವಲ್ಲ. ಒಬ್ಬರಿಗೊಬ್ಬರು ಮೋಸಮಾಡುವದರಲ್ಲಿ ಪೈಪೋಟಿ ನಡೆಯುತ್ತಿರುವ ಈ ಕಾಲದಲ್ಲಿ ಸತ್ಯವನ್ನು ಅನುಸರಿಸುವದು ಕಷ್ಟವೇ ಸರಿ. ಅಧ್ಯಾತ್ಮಪ್ರಕಾಶಪತ್ರಿಕೆಯಲ್ಲಿ `ಸತ್ಯವನ್ನೇ ಹೇಳಬೇಕು' ಎಂಬ ವಿಷಯದ ಒಂದು ಲೇಖನವನ್ನು ಓದಿ ಒಬ್ಬರು "ಇದು ಹೇಗೆ ಸಾಧ್ಯವಾದೀತು? ವ್ಯಾಪಾರದಲ್ಲಿ ಸತ್ಯವನ್ನೇ ನುಡಿಯುವದು ಆದೀತೆ?" ಎಂಬ ಪ್ರಶ್ನೆಯನ್ನು ಹಾಕಿ ಒಂದು ಪತ್ರವನ್ನು ಬರೆದಿದ್ದರು. ಕೆಲವರು "ವ್ಯಾಪಾದೋ ದ್ರೋಹಚಿನ್ತನಮ್" ಎಂಬ ಕೋಶವಾಕ್ಯವನ್ನು `ವ್ಯಾಪಾರೋ ದ್ರೋಹಚಿನ್ತನಮ್' ಎಂದು ತಿರುಗಿಸಿಕೊಂಡು ವ್ಯಾಪಾರಮಾಡುವಾಗ ದ್ರೋಹವನ್ನು ಮಾಡದಿದ್ದರೆ ಆಗಲಾರದು ಎಂದು ಒಂದು ಸೂತ್ರವನ್ನು ಏರ್ಪಡಿಸಿಕೊಂಡಿರುತ್ತಾರೆ! ಕೆಲವು ವರ್ಷಗಳ ಹಿಂದೆ ಅಚ್ಚಿನ ಉದ್ಯೋಗದಲ್ಲಿದ್ದ ಒಬ್ಬರು `ಪ್ರೆಸ್ಸಿಟ್ಟುಕೊಂಡು ಸುಳ್ಳುಹೇಳದೆ ಇರುವದಕ್ಕಾದೀತೆ, ಸ್ವಾಮಿ?' ಎಂದು ಕೇಳಿದ್ದರು. ಹಿಟ್ಲರನು "ಒಂದು ಸುಳ್ಳನ್ನು ನಾಲ್ಕುಸಲ ಆವೃತ್ತಿಮಾಡಿ ನುಡಿದರೆ ಐದನೆಯಸಲಕ್ಕೆ ಅದು ನಿಜವಾಗುತ್ತದೆ' ಎಂದು ತನ್ನ ಒಂದು ಪ್ರಚಾರಗ್ರಂಥದಲ್ಲಿ ಬರೆದಿದ್ದನಂತೆ. ಈ ಜೀವನಸೂತ್ರವನ್ನು ಅನುಸರಿಸಿ ಒಂದು ದೇಶದವರನ್ನು ಮತ್ತೊಂದು ದೇಶದವರು ಹಳಿದು ಅಪಪ್ರಚಾರಮಾಡುವದಕ್ಕೆ ಸಾವಿರಾರು ರೂಪಾಯಿಗಳನ್ನು ವೆಚ್ಚಮಾಡುವದಕ್ಕೂ ಈ ಕಾಲದಲ್ಲಿ ಹಿಂಜರಿಯುವದಿಲ್ಲ. ನಾನು ನೋಡಿದ ಒಂದು ಪುಸ್ತಕದಲ್ಲಿ "ಹಿಂದೂ ಎಂಬ ಶಬ್ದವು ಕಪ್ಪು ಎಂಬರ್ಥದ ಒಂದು ಮೂಲಶಬ್ದದಿಂದ ಬಂದಿರುತ್ತದೆ" ಎಂದು ಬರೆದಿತ್ತು. ಅಮೆರಿಕ ದೇಶದ ಒಬ್ಬಾಕೆಯ ಹೆಸರಿನಲ್ಲಿ (Mother India) (ಭಾರತಮಾತಾ) ಎಂಬ ಹೆಸರಿನ ಒಂದು ದೂಷಣಪ್ರಚಾರದ ಗ್ರಂಥವನ್ನು ಕೆಲವರು ಸ್ವಾರ್ಥಿಗಳು ಬರೆಯಿಸಿದ್ದೂ ಅದಕ್ಕೆ ಪ್ರತಿಯಾಗಿ ಅಮೆರಿಕ ದೇಶದ ಹುಳುಕುಗಳನ್ನು ಎತ್ತಿ ತೋರಿಸುವ ಗ್ರಂಥವನ್ನು ಈ ದೇಶದವರು ಬರೆದು ಪ್ರಚಾರಮಾಡಿದ್ದೂ ನಿಮ್ಮಗಳ ನೆನಪಿನಲ್ಲಿರಬಹುದು. ಸ್ವಾರ್ಥಪರರಾದ ಅಸುರರು ಹೀಗೆ ಸತ್ಯವನ್ನು ಕಡಗಣಿಸಿ ತಮಗೆ ತೋರಿದಂತೆ ಅಸತ್ಯವಚನವನ್ನು ಅಂಜಿಕೆಯಿಲ್ಲದೆ ಪ್ರಚಾರಮಾಡುತ್ತಿರುತ್ತಾರೆ. ಅಸುರರಿಗೆ ಸತ್ಯವಿರುವದಿಲ್ಲ ಎಂಬುದು ಉಪಲಕ್ಷಣವು. ಯಾವ ಉತ್ತಮ ಆಧ್ಯಾತ್ಮಿಕಗುಣಗಳೂ ಇರುವದಿಲ್ಲ ಎಂಬುದು ಈ ವಾಕ್ಯದ ಅಭಿಪ್ರಾಯ.

ಅಸುರರು ತಾವು ಅಸತ್ಯಪ್ರಿಯರಾದ್ದರಿಂದ ಜಗತ್ತೇ ಅಸತ್ಯಮಯವೆಂದು ತಿಳಿಯುತ್ತಾರೆ. ಯಾರು ಆಸುರಸ್ವಭಾವದ ಬಲವುಳ್ಳವರೋ ಅವರು ಆಸುರಸಂಪತ್ತಿನವರನ್ನೇ ಹೊಗಳುತ್ತಾರೆ. ನ್ಯಾಯವೋ ಅನ್ಯಾಯವೋ ಹೇಗಾದರೂ ಆಗಲಿ-ಜಗತ್ತೆಲ್ಲವನ್ನೂ ಜಯಿಸಿದ ಮಾತ್ರದಿಂದ ವೀರನೆಂದು ನಾವು ಹೊಗಳುವದಕ್ಕೆ ಸಿದ್ಧರಾದರೆ ನಮ್ಮ ಸ್ವಭಾವವು ಆಸುರವೆಂದು ನಿಶ್ಚಿತವಾಗುತ್ತದೆಯಲ್ಲವೆ? ಜಗತ್ತಿಗೆ ಧರ್ಮಾಧರ್ಮಗಳಿಂದ ಸ್ಥಿತಿಯುಂಟಾಗಿರುತ್ತದೆ; ಧರ್ಮದಿಂದ ಅಭ್ಯುದಯವೂ ಅಧರ್ಮದಿಂದ ಅನಿಷ್ಟಫಲವೂ ಆಗುತ್ತದೆ ಎಂಬುದು ನಿಯತ-

ಎಂದು ನಂಬುವದು ದೈವಿಕಸಂಪತ್ತಿನ ಒಂದು ಹೆಗ್ಗುರುತು. ಈ ಪ್ರತಿಷ್ಠೆಯನ್ನೇ ಕಡೆಗಣಿಸಿ ಯಾವನು ಮೇಲುಗೈಯೆಂದು ನಮಗೆ ಕಾಣುತ್ತದೆಯೋ ಅವನನ್ನು ಹೊಗಳುವದು ನಿಶ್ಚಯವಾಗಿಯೂ ಆಸುರಸಂಪತ್ತೇ ಸರಿ. ಕೆಲವರು ನಿಪುಣನಾದ ಕಳ್ಳನನ್ನು ಸಂತೋಷದಿಂದ ಬಾಯಿತುಂಬ ಹೊಗಳುವದನ್ನು ನಾವು ಕಂಡಿರುತ್ತೇವೆ. ಹಾಗೆ ಅಧರ್ಮವನ್ನು ಮೆಚ್ಚುವದು. ಆಸುರಸ್ವಭಾವವಲ್ಲದೆ ಮತ್ತೇನು? ಒಂದಾನೊಂದು ಕೋ-ಆಪರೇಟಿವ್ ಬ್ಯಾಂಕಿನಲ್ಲಿ ವರ್ಷದ ಬಡ್ಜೆಟ್ ವಿಚಾರವು ನಡೆದಿತ್ತು. ಅಲ್ಲಿ ವರ್ಷಕ್ಕೊಂದು ಸಲ ಆಗುವ ಪ್ರಾಥಮಿಕ ಸಭೆಯಲ್ಲಿ ಸಭಾಸದರ ಉಪಹಾರಕ್ಕೆಂದು ಇಂತಿಷ್ಟು ಹಣ ಎಂದು ಮಂಜೂರುಮಾಡುವ ವಾಡಿಕೆಯಿತ್ತು. ಸಭೆಯ ದಿನ ಯುಗಾದಿಹಬ್ಬವಾದರೂ ಆ ತಿಂಡಿಗೆ ಹಣಸಾಲದೆಂದೂ ಇನ್ನಷ್ಟು ಮಂಜೂರುಮಾಡಬೇಕೆಂದೂ ಕೆಲವರು ಕುಕ್ಷಿಂಭರಿಗಳು ಒಂದು ಸೂಚನೆ ತಂದರು. ನ್ಯಾಯಪ್ರಿಯರಾದವರು ಇದು ಸೊಸೈಟಿಗೆ ಕೆಟ್ಟ ಹೆಸರನ್ನು ತರುವದೆಂದೂ ಇದೊಂದು ಕಾಫಿಬೋಂಡದ ಸೊಸೈಟಿ ಎಂಬ ಅಪಯಶಸ್ಸಿಗೆ ಗುರಿಯಾಗಬಹುದೆಂದೂ ವಾದಿಸಿದರು. ಆದರೆ ಓಟುಗಳ ಮೇಲೆ ತೀರ್ಮಾನವಾಗುವ ಈ ಕಾಲಕ್ಕೆ ಆ ನ್ಯಾಯಪರರ ವಾದವು ಅರಣ್ಯರೋದನವಾಯಿತು. ತಿಂಡಿತೀರ್ಥಕ್ಕೆ ಇನ್ನಷ್ಟು ಹಣವನ್ನು ಮಂಜೂರುಮಾಡಬೇಕೆಂದೇ ತೀರ್ಮಾನವಾಯಿತು! ಆಸುರಸಂಪತ್ತಿನವರು ನ್ಯಾಯವನ್ನೂ ಧರ್ಮವನ್ನೂ ಲೆಕ್ಕಿಸುವದಿಲ್ಲ; ಪ್ರಿಯಾವದದ್ದನ್ನೂ ತತ್ಕಾಲಕ್ಕೆ ಚೆನ್ನಾಗಿ ಕಾಣುವದನ್ನೂ ಎತ್ತಿಹಿಡಿಯುತ್ತಾರೆ. ಅಸತ್ಯವೂ ಅಧರ್ಮವೂ ತತ್ಕಾಲದ ಕಾಮಪೂರ್ತಿಗೆ ಸಹಾಯವಾದರೆ ಅವೂ ಅವಶ್ಯವಾಗಿ ಅನುಸರಿಸತಕ್ಕದ್ದೆಂದೇ ಅವರ ವಾದ! ಆಚಾರಪ್ರಿಯರನ್ನೂ ಸತ್ಯಧರ್ಮಪ್ರಿಯರನ್ನೂ ತಿರಸ್ಕರಿಸುವದು ಅಸುರರಿಗೆ ಬಹಳ ಮೆಚ್ಚಾಗಿರುತ್ತದೆ. ಜ್ವರಬಂದವರೇ ಒಂದು ಸಭೆಯಲ್ಲಿ ಹೆಚ್ಚುಮಂದಿ ಸೇರಿದರೆ ವೈದ್ಯರನ್ನು ತಿರಸ್ಕರಿಸಿ ಮೊಸರನ್ನವು ಅಪಥ್ಯವಲ್ಲ ಎಂದು ತೀರ್ಮಾನಮಾಡುವದು ಹೇಗೋ ಹಾಗೆ ಆಸುರಸಂಪತ್ತಿನವರು ಹೆಚ್ಚಾಗಿರುವೆಡೆಗಳಲ್ಲಿ ಅಸತ್ಯವೂ ಅಧರ್ಮವೂ ಅನುಸರಿಸತಕ್ಕವೆಂದು ತೀರ್ಮಾನವಾಗುವದೂ ಹಾಗೆಯೇ.

ಈ ಅಸುರರಿಗೆ ಜಗತ್ತೇ ಅನೀಶ್ವರವಾಗಿರುತ್ತದೆ. ಈಶ್ವರನೊಬ್ಬನು ಈ ಜಗತ್ತನ್ನು ಆಳುತ್ತಿರುತ್ತಾನೆ; ಅವನು ಧರ್ಮಾಧರ್ಮಗಳಿಗೆ ತಕ್ಕಂತೆ ಫಲವನ್ನು ಕೊಡುತ್ತಿರುತ್ತಾನೆ- ಎಂಬುದು ದೈವಸಂಪತ್ತಿನವರ ನಂಬಿಕೆ. ಆಸುರರೆಂದಮಾತ್ರದಿಂದ ಅವರು ಭಂಡರ ಹಾಗೆ ವರ್ತಿಸುವರೆಂದೂ ಯುಕ್ತಿಯನ್ನು ಕೈಬಿಡುವರೆಂದೂ ತಿಳಿಯಬಾರದು. ಕಲಿಯುಗದ ಆಸುರಸಂಪತ್ತಿನವರಿಗೆ ತರ್ಕವೆಂಬುದು ಒಂದು ಬ್ರಹ್ಮಾಸ್ತ್ರವಾಗಿರುತ್ತದೆ. ಇಂಗ್ಲೆಂಡಿನಲ್ಲಿ Rationalistic Society (ಯುಕ್ತಿಪ್ರಧಾನರ ಸಂಘ) ಎಂಬುದೊಂದು ಸಮಾಜವುಂಟು. ಆ ಸಮಾಜಕ್ಕೆ ದೊಡ್ಡ ದೊಡ್ಡ ವ್ಯಕ್ತಿಗಳು ಸಭಿಕರಾಗಿರುತ್ತಾರೆ. ಅವರ ಯುಕ್ತಿಶಾಸ್ತ್ರಗಳ ಹೊಡೆತಕ್ಕೆ ನಿಲ್ಲಲಾರದೆ ಆ ಕಡೆಯ ಕ್ರಿಸ್ತಿಯನ್ನರು ಒದ್ದಾಡುತ್ತಿರುತ್ತಾರೆ. ಪುಣ್ಯಾಪುಣ್ಯಗಳು, ಪರಲೋಕ, ಈಶ್ವರಭಕ್ತಿ-ಮುಂತಾದವುಗಳನ್ನು ಸಡಿಲಿಸುವದು ಈ ಸಮಾಜದವರ ಒಂದು

ಮುಖ್ಯೋದ್ದೇಶವಾಗಿರುತ್ತದೆ. ಇವರೊಂದು ಮಾಸಪತ್ರಿಕೆಯನ್ನು ಹೊರಡಿಸುತ್ತಾರೆ. ಧರ್ಮಪಂಥಗಳನ್ನು ಖಂಡಿಸಿ ಬರೆದ ಲಕ್ಷಗಟ್ಟಲೆಯ ಹಸ್ತಪತ್ರಿಕೆಗಳನ್ನು ಹಂಚುತ್ತಾರೆ. ಈಗ್ಗೆ ನಮ್ಮ ದೇಶವದರೂ ಅವರ ತರ್ಕಕ್ಕೆ ಮರುಳಾಗಿ ತಾವು ತಾರ್ಕಿಕಾಗ್ರೇಸರರೆಂದು ಕೊಚ್ಚಿಕೊಳ್ಳುತ್ತಾ ಹಿಂದಿನವರ ಆಚಾರವಿಚಾರಗಳನ್ನು ಹಳಿಯುವದಕ್ಕೆ ಮುಂದೆ ಬರುತ್ತಿರುವರು. ಒಂದಾನೊಂದು ಸರ್ವಮತಗಳ ಸಮ್ಮೇಳನದಲ್ಲಿ ಈ ಸಮಾಜಕ್ಕೆ ಸೇರಿದ ಒಬ್ಬ ಅಯ್ಯಂಪಾರ್ಯರ ಉಪನ್ಯಾಸಕ್ಕೆ ಅವಕಾಶವನ್ನು ಕೊಟ್ಟಿದ್ದರು. ಆ ನಾಸ್ತಿಕ ಮಹಾಶಯರು ಪ್ರಸಿದ್ಧವಾದ ಮುಕುಂದಮಾಲಾಸ್ತೋತ್ರಕ್ಕೆ ತಮ್ಮದೇ ಒಂದು ಹೊಸ ವ್ಯಾಖ್ಯಾನವನ್ನು ಬರೆದು "ಮನುಷ್ಯತ್ವವೇ ದೇವರು" ಎಂದು ಕಲ್ಪಿಸಿ ತಮ್ಮ ಕಲ್ಪಿತದೇವರ ಪರವಾಗಿ ಆ ಸ್ತೋತ್ರದ ಅರ್ಥವನ್ನು ವಿವರಿಸಿದರು; ಅವರಲ್ಲೊಬ್ಬ ವಿಶ್ವವಿದ್ಯಾನಿಲಯದ ಪದವೀಧರರು!

ಹೀಗೆ ಬಹಳ ಜಾಣರಾದವರು ಕೂಡ ಈಶ್ವರನಾಸ್ತಿಕ್ಯವನ್ನು ಎತ್ತಿಹಿಡಿಯುವ ಕಾಲವು ಬಂದಿರುತ್ತದೆ. ಮಾನವನಿಗೆ ಈಶ್ವರನ ಅಸ್ತಿತ್ವವನ್ನು ಕಂಡುಕೊಳ್ಳುವದು ಕಷ್ಟ; ಅವನು ಇಲ್ಲ ಎನ್ನುವದು ಸುಲಭ. ಏಕೆಂದರೆ ಇಲ್ಲ ಎಂಬುವರಿಗೆ ಯಾವ ಪ್ರಮಾಣವೂ ಬೇಕಿಲ್ಲ; ಈಶ್ವರನಿದ್ದಾನೆ ಎನ್ನುವವರು ಪ್ರಮಾಣವನ್ನು ತೋರಿಸಬೇಕಾಗುತ್ತದೆ. ಈಶ್ವರನನ್ನು ಪ್ರತಿಪಾದಿಸುವ ಶಾಸ್ತ್ರಗಳನ್ನು ಪ್ರತ್ಯಕ್ಷಾನುಮಾನಗಳನ್ನೇ ಮುಖ್ಯವಾಗಿ ಹಿಡಿದು ನಿಂದಿಸುವದು ಬಹಳ ಸುಲಭವಾಗಿರುತ್ತದೆ. ಈ ಯುಕ್ತಿಪ್ರಧಾನರಿಗೇಕೆ ದೇವರು ಸಿಕ್ಕುವದಿಲ್ಲ?- ಎಂದು ನೀವು ಕೇಳಬಹುದು. ಅವರಿಗೆ ಈಶ್ವರನನ್ನು ಹುಡುಕುವ ಸಾಧನದ ಸಹಾಯವಿಲ್ಲದಿರುವದೇ ಇದಕ್ಕೆ ಮುಖ್ಯಕಾರಣವು. ಈಶ್ವರನನ್ನು ಹುಡುಕುವ ಸಾಧನವು ಪ್ರೇಮವು; ಅದು ಹೃದಯಕ್ಕೆ ಸೇರಿದ್ದು. ತರ್ಕವು ಬುದ್ಧಿಯ ಧರ್ಮವು. ವಾಸನೆಯನ್ನು ಮೂಗಿನಿಂದ ತಿಳಿದುಕೊಳ್ಳಬಹುದೇ ಹೊರತು ಕಣ್ಣಿನಿಂದ ತಿಳಿಯುವದಕ್ಕೆ ಆಗಲಾರದಷ್ಟೆ. ಅದರಂತೆ ಯುಕ್ತಿಯಿಂದ ದೇವರ ಅಸ್ತಿತ್ವವನ್ನಾಗಲಿ ನಾಸ್ತಿತ್ವವನ್ನಾಗಲಿ ಅರಿತುಕೊಳ್ಳುವದಕ್ಕೆ ಆಗುವದಿಲ್ಲ. ಹಾಲನ್ನು ಪರೀಕ್ಷಿಸಿ ಅದರೊಳಗೆ ನೀರು ಬೆರೆತಿದೆ ಎಂಬುದನ್ನು ಕಂಡುಹಿಡಿಯುವದಕ್ಕೆ ಒಂದು ಯಂತ್ರವನ್ನು ಕಂಡುಹಿಡಿದಿರುತ್ತಾರೆ. ಆದರೆ ಅಂಥ ಯಂತ್ರದಿಂದ ಒಬ್ಬ ಮನುಷ್ಯನಲ್ಲಿ ಇಂತಿಷ್ಟು ದಯಾಗುಣವಿದೆ ಎಂಬುದನ್ನು ಎಂದಿಗೂ ಕಂಡುಹಿಡಿಯುವದು ಆಗಲಾರದು. ಭೌತಿಕವಿಜ್ಞಾನವು ಪ್ರತ್ಯಕ್ಷಾನುಮಾನಗಳಿಂದ ಅನಾತ್ಮವನ್ನು ಪರೀಕ್ಷಿಸುವ ನಿರೀಕ್ಷಣಪ್ರಯೋಗ ಸಂವಾದಗಳ ಕ್ರಮವನ್ನು ತಿಳಿಸಿಕೊಡುತ್ತದೆ. ಅದಕ್ಕೆ ಆತ್ಮನು ಎಂದಿಗೂ ವಿಷಯನಾಗಲಾರನು. ಈಶ್ವರನು ಎಲ್ಲಾ ಜಗತ್ತಿಗೂ ತಿರುಳಾಗಿರುವ ಆತ್ಮನು. ಅವನು ನಮ್ಮ ಆತ್ಮನೊಳಗೂ ಇದ್ದುಕೊಂಡಿರುವ ಪರಮಾತ್ಮನು. ನಮ್ಮೊಳಗೆ ಒಬ್ಬ ಪರಮಾತ್ಮನು ಇರುತ್ತಾನೆ-ಎಂಬುದನ್ನು ಹೊರಗಣ್ಣಿನಿಂದ ವಿಷಯವನ್ನು ಕಾಣುವ ನಾವು ಎಂದಿಗೂ ಅರಿತುಕೊಳ್ಳಲಾರೆವು. ಒಬ್ಬ ಮುದುಕಿಯು ಕತ್ತಲಲ್ಲಿ ಮನೆಯಲ್ಲಿ ಕಳೆದುಕೊಂಡ ಒಂದು ಗುಂಡುಸೂಜಿಯನ್ನು

ಬೀದಿಯಲ್ಲಿ ಲಾಂದ್ರದ ಬೆಳಕಿದೆ ಎಂಬ ಕಾರಣದಿಂದ ಅಲ್ಲಿ ತಡಕಿ ಹುಡುಕುವದಕ್ಕೆ ಹೊರಟಳಂತೆ. ನಮ್ಮೊಳಗೇ ಇರುವ ಆತ್ಮನನ್ನು ಅಜ್ಞಾನದ ಮಬ್ಬಿನಲ್ಲಿ ಕಳೆದುಕೊಂಡು ಹೊರಗೆ ಇಂದ್ರಿಯಗಳ ಬೆಳಕು ಇದೆ, ಪ್ರಮಾಣಪ್ರಮೇಯವ್ಯವಹಾರದ ಬೆಳಕು ಇದೆ- ಎಂಬ ಕಾರಣದಿಂದ ಅಲ್ಲಿ ಹುಡುಕಿದರೆ ಈಶ್ವರನು ಹೇಗೆ ಸಿಕ್ಕಬೇಕು? "ಎಲ್ಲಿ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ಕಂಡಾನು ?"- ಎಂದು ಶ್ರುತಿ ಹೇಳುತ್ತದೆ. ವಿಜ್ಞಾನಶಾಸ್ತ್ರಕ್ಕೆ ಜ್ಞಾತೃಜ್ಞಾನಜ್ಞೇಯ-ಎಂಬ ತ್ರಿಪುಟಿಯ ತಿಳಿವಳಿಕೆಯು ಬಹುಮುಖ್ಯವಾದ ಆಹಾರವು. ಈ ತ್ರಿಪುಟಿಯ ತಿಳಿವಳಿಕೆಯು ಪರಿಚ್ಛಿನ್ನವಸ್ತುಗಳ ನಿರ್ಧಾರಕ್ಕೆ ಅನುಕೂಲವಾಗಿಯೂ ಇರುತ್ತದೆ. ಆದರೆ ಅನಂತನಾಗಿರುವ ಪರಮಾತ್ಮನನ್ನು ಈ ಪರಿಚ್ಛಿನ್ನವಾದ ಸಾಧನದಿಂದ ಅರಿತುಕೊಳ್ಳುವದು ಹೇಗಾದೀತು?

ಆದ್ದರಿಂದ ಸೈನ್ಸಿನ (ವಿಜ್ಞಾನಶಾಸ್ತ್ರದ) ಕ್ರಮವನ್ನು ಅನ್ವಯಿಸಿದರೆ ಈಶ್ವರನು ಸಿಕ್ಕಲಾರನು. ವಸ್ತುವನ್ನು ಇದ್ದದ್ದು ಇದ್ದಂತೆ ಅರಿಯುವದಕ್ಕೆ, ಅರಿಯದೆ ಅರಿಯಬಲ್ಲ ಹೃದಯವನ್ನು ಉಪಯೋಗಿಸಬೇಕು. ಈಶ್ವರನು ಸ್ವತಃಸಿದ್ಧನಾದ ಕೂಟಸ್ಥಚೈತನ್ಯನಾದ ನಮ್ಮ ಆತ್ಮನೇ ಆಗಿರುತ್ತಾನೆ. ಅವನನ್ನು ನಮ್ಮ ನಮ್ಮ ಹೃದಯಗುಹೆಯಲ್ಲಿಯೇ ಅರಿತುಕೊಳ್ಳಬೇಕೆಂದು ಶ್ರುತಿಯು ಸಾರುತ್ತಿದೆ. ಆದರೆ ಅಸುರರಿಗೆ ಹೃದಯವೇ ಇಲ್ಲ. ಈಗಿನ ಯುಕ್ತಿಪ್ರಧಾನರಾದ ಜನರೂ ಹಾಗೆಯೇ ಹೃದಯವನ್ನು ಕಳೆದುಕೊಂಡಿರುತ್ತಾರೆ. ಈಶ್ವರನು ಅನುಭವರೂಪನಾದ ಆತ್ಮನಾಗಿರುವದರಿಂದ ಅವನು ಇಲ್ಲವೆನ್ನುವದು ಎಂದಿಗೂ ಯಾವ ತಾರ್ಕಿಕನಿಂದಲೂ ಆಗಲಾರದು. `ಇಮಮ್ ಪ್ರಾಶ್ನಿಕಮುದ್ದಿಶ್ಯ ತರ್ಕಜ್ವರಭೃಶಾತುರಾಃ! ತ್ವಾಚ್ಛಿರಸ್ಕವಚೋಜಾಲೈರ್ಮೋಹಯನ್ತೀತರೇತರಮ್' ( ನೈ.ಸಿ. ೨-೫೯) ಅನುಭವರೂಪನಾದ ಈ ಮಧ್ಯಸ್ಥಗಾರನನ್ನು ಇಟ್ಟುಕೊಂಡೇ ತರ್ಕಜ್ವರದಿಂದ ನರಳುತ್ತಿರುವವರು ಅಮುಕತ್ವಾತ್, ಅಮುಕತ್ವಾತ್- `ಹೀಗಿರುವದರಿಂದ ಹೀಗೆ', " ಹೀಗಿರುವದರಿಂದ ಹೀಗೆ"-ಎಂದು ಪಂಚಮ್ಯಂತಹೇತುವಚನಗಳಿಂದ ಒಬ್ಬರನ್ನೊಬ್ಬರು ಮರುಳುಮಾಡುತ್ತಿರುವರು ಎಂದು ಸುರೇಶ್ವರಾಚಾರ್ಯರವರು ಬರೆದಿರುವದನ್ನು ಇಲ್ಲಿ ನಾವು ಮನಸ್ಸಿಗೆ ತಂದುಕೊಳ್ಳಬೇಕು. ತಾರ್ಕಿಕರು ಎಷ್ಟೇ ವಾದಮಾಡಲಿ, ಎಷ್ಟೇ ಯುಕ್ತಿಗಳನ್ನು ಕೊಡಲಿ, ಅವರ ಯುಕ್ತಿಗಳಿಗೆಲ್ಲ ಅನುಭವವು ಆಧಾರವಾಗಿರುತ್ತದೆ. ಸಾರ್ವತ್ರಿಕವಾದ ಅನುಭವವನ್ನು ಇಲ್ಲವೆಂದು ಹೇಳಿದರೆ ತರ್ಕವೇ ತಳಗಟ್ಟಿಲ್ಲದ ಕಟ್ಟಡವಾಗಿಬಿಡುತ್ತದೆ. ತಾರ್ಕಿಕರ ಕಟ್ಟಡಕ್ಕೆ ಆಧಾರವಾಗಿರುವ ಅನುಭವವೇ ಶ್ರುತಿಯಲ್ಲಿ ಹೇಳಿರುವ ಆತ್ಮನು; ಆ ಆತ್ಮನ ಪರಮಾರ್ಥವೇ ಪರಮೇಶ್ವರನು. ಆದ್ದರಿಂದ ಈ ಈಶ್ವರನನ್ನು ಇಲ್ಲವೆಂದರೆ ನಾವೇ ಇಲ್ಲವೆಂದಾಗುತ್ತದೆ. ನಾವು ತಾರ್ಕಿಕರಾಗುವ ಬದಲು ಕುತಾರ್ಕಿಕರಾಗುತ್ತೇವೆ. ಆದ್ದರಿಂದ ಪರಾಗ್ದೃಷ್ಟಿಯ ಬುದ್ಧಿಗೆ ರಜವನ್ನು ಕೊಟ್ಟು ಪ್ರತ್ಯಗ್ದೃಷ್ಟಿಯ ಹೃದಯವನ್ನು ಒಂದಿಷ್ಟು ಅರಳಿಸಿಕೊಂಡು ನೋಡಬೇಕು. ಆಗ ಈ ಜಗತ್ತು ಅಸತ್ಯವು, ಅಪ್ರತಿಷ್ಠವು, ಅನೀಶ್ವರವು-ಎಂಬ ಆಸುರಸಂಪತ್ತಿನ ವಾದವು ಮರೆಯಾಗುವದು.

ನಮಗೆ ಸೈನ್ಸು (ಭೌತಿಕವಿಜ್ಞಾನ)ವೆಂಬ ಒಂದು ವಿಚಾರಕ್ರಮವು ಹೊಸದಾಗಿ ಗೋಚರವಾಗುತ್ತಲೂ ಜಗತ್ತಿನಲ್ಲಿ ಮೊದಲು ಗೋಚರವಾಗದೆ ಇದ್ದ ಎಷ್ಟೋ ಹೊಸ ವಿಷಯಗಳು ಕಾಣುವದಕ್ಕೆ ಮೊದಲಾಯಿತು. ಆಗ ಸೈನ್ಸಿನಿಂದ ಏನನ್ನು ಬೇಕಾದರೂ ಸಾಧಿಸಿಬಿಡಬಹುದು ಎಂಬ ಹುಚ್ಚು ನಂಬಿಕೆಯು ನಮ್ಮನ್ನು ಹಿಡಿದುಕೊಂಡಿತು. ಹೊಸದಾಗಿ ಕೈಗೆ ಸಿಕ್ಕಿದ ಚೂರಿಯನ್ನು ಹಿಡಿದ ಹುಡುಗನಂತೆ ನಾವು ಈ ಸೈನ್ಸನ್ನು ತಪ್ಪಾಗಿ ಉಪಯೋಗಿಸುತ್ತಾ ಈಶ್ವರನ ಸತ್ತೆಯನ್ನು ಅಲ್ಲಗಳೆಯುವದಕ್ಕೆ ಮೊದಲುಮಾಡಿದೆವು! ಆದರೆ ಇದು ಸೈನ್ಸಿನ ತಪ್ಪಲ್ಲ. ಯುದ್ಧಕಾಲದಲ್ಲಿ ಇಂಗ್ಲೆಂಡಿನಲ್ಲಿ ಮಿಲಿಟರಿಬೈಬಲ್ ಎಂದು ಒಂದು ಸಣ್ಣ ಗ್ರಂಥವನ್ನು ಸಿಪಾಯಿಗಳಿಗಾಗಿ ಬರೆದಿದ್ದರಂತೆ. ಅದರಲ್ಲಿ "ಭಗವಂತನಿಗಾಗಿ ಯುದ್ಧಮಾಡಿರಿ!" ಎಂಬ ವಾಕ್ಯವು ಎದ್ದುಕಾಣುತ್ತಿತ್ತಂತೆ. ಧರ್ಮಕ್ಕಾಗಿ ಯುದ್ಧಮಾಡುವದು ಎಂದರೆ ಧರ್ಮವನ್ನು ಅನುಸರಿಸುವದು; ಅದು ಸರಿಯೇ ಆದರೂ ಯುದ್ಧವನ್ನು ಯಾವ ಉಪಾಯದಿಂದಲಾದರೂ ಮಾಡಿ ಪರದೇಶವನ್ನು ವಂಚಿಸುವದು ಈಶ್ವರನಿಗಾಗಿ ಮಾಡುವ ಯುದ್ಧವಾದೀತೆ? ಹೀಗೆಯೇ ನಮ್ಮ ದೇಶದಲ್ಲಿ ಗೀತೆಯಲ್ಲಿರುವ "ತಸ್ಮಾದ್ ಯುಧ್ಯಸ್ವ ಭಾರತ". ಆದ್ದರಿಂದ ಅರ್ಜುನನೆ, ಯುದ್ಧವನ್ನು ಮಾಡು !- ಎಂಬ ವಾಕ್ಯವನ್ನು ದುರುಪಯೋಗಮಾಡುವ ಆಸುರಸ್ವಭಾವದವರೂ ಇರುತ್ತಾರೆ.

ಹೀಗೆ ಆಸುರಸಂಪತ್ತು ಹೆಚ್ಚಿದರೆ ದೈವಸಂಪತ್ತು ಕುಗ್ಗುತ್ತದೆ. ಆಗ ಸತ್ಯಧರ್ಮಗಳು ಕಾಣದೆಹೋಗುತ್ತವೆ. ಆದ ಮಾತ್ರಕ್ಕೆ ಸತ್ಯಧರ್ಮಪ್ರಿಯರು ಹೆದರಬೇಕಾದದ್ದಿಲ್ಲ. ಅಸತ್ಯ, ಅಧರ್ಮ-ಇವುಗಳಿಗೂ ಈಶ್ವರನ ಪ್ರಪಂಚದಲ್ಲಿ ಅವಕಾಶವಿದೆ. ಹೇಗೆ ಕನ್ನಡಿಯಲ್ಲಿರುವ ತೋರಿಕೆಯ ಮನುಷ್ಯನು ನನಗೆ ಎರಡನೆಯವನಾಗನೋ ಹಾಗೆ ಅಸತ್ಯ, ಅಧರ್ಮಗಳು-ಬರಿಯ ತೋರಿಕೆಯಾದ್ದರಿಂದ ಅವುಗಳಿಂದ ಪರಮಾರ್ಥವಾದ ಸತ್ಯಧರ್ಮಗಳಿಗೆ ಏನೂ ಧಕ್ಕೆಯಾಗಲಾರದು. ಈಶ್ವರನನ್ನಂತೂ ಅಸತ್ಯಾಧರ್ಮಗಳು ಎಳ್ಳಷ್ಟೂ ಅಲುಗಾಡಿಸಲಾರವು. ಕೊನೆಗೂ ಸತ್ಯವೇ, ಧರ್ಮವೇ, ಜಯಿಸುತ್ತದೆ. ಧರ್ಮಿಷ್ಠರು ಕಡಿಮೆ ಇರಬಹುದು, ಆದರೆ ಅಧರ್ಮಿಷ್ಠರು ಅವರಿಗೆ ವಶರಾಗಿಯೇ ತೀರಬೇಕಾಗುತ್ತದೆ. ಯುದ್ಧದಲ್ಲಿ ಒಬ್ಬ ರಾಮನೇ ರಕ್ಕಸರಿಗೆ ಸಾವಿರಾರು ರಾಮನಾಗಿ ತೋರಿದಂತೆ ಧರ್ಮಿಷ್ಠರ ಪ್ರಭಾವವು ಎಲ್ಲೆಲ್ಲಿಯೂ ಹಬ್ಬಿ ಅಧರ್ಮಿಷ್ಠರನ್ನು ಹಿಡಿತಕ್ಕೆ ತಂದುಕೊಳ್ಳುತ್ತದೆ. ಮಹಾತ್ಮಗಾಂಧಿಯವರು ಸತ್ಯ, ಅಹಿಂಸೆ-ಮುಂತಾದವುಗಳ ಹೆಸರಿನಲ್ಲಿ ದೇಶವನ್ನು ಒಟ್ಟುಗೂಡಿಸುವದಕ್ಕೆ ಪ್ರಯತ್ನಪಟ್ಟಾಗ ಅನೇಕರು ಆಶ್ಚರ್ಯಪಟ್ಟರು. ಆದರೆ ಕೊನಗೆ ಸತ್ಯವೇ ಗೆದ್ದಿತು. ದೇಶವೆಲ್ಲ ಒಂದಾಯಿತು, ಕಂ ಕಿಂ ಎನ್ನದೆ ಪರದೇಶದವರು ತಮ್ಮ ಆಳ್ವಿಕೆಯನ್ನು ಕೈಬಿಟ್ಟುಬಿಟ್ಟರು! ಕಾಂಗ್ರೆಸ್ಸು ಮಹಾತ್ಮರ ಉಪದೇಶವನ್ನು ಅನುಸರಿಸುವವರೆಗೆ ಅವರಿಗೆ ಜಯವಿರುತ್ತದೆ.; ಅದನ್ನು ಬಿಟ್ಟರೆ ಅವರಿಗೂ ಅಸತ್ಯಾಧರ್ಮಗಳೇ ಮೃತ್ಯುವಾಗುವವು. "ಸಂಘೇ ಶಕ್ತಿಃ ಕಲೌ ಯುಗೇ" ಎಂದರೆ ಧರ್ಮಸಂಘದಲ್ಲಿ ಶಕ್ತಿಯೆಂದೇ ಅರ್ಥವನ್ನು ಮಾಡಿಕೊಂಡರೆ ಸರಿಯಾಗುತ್ತದೆ. ಬಹುಜನರು

ಸೇರಿದಮಾತ್ರದಿಂದ ಮೊದಲಿಲ್ಲದ ಶಕ್ತಿಯು ಎಂದಿಗೂ ಅವರಿಗೆ ಹೊಸದಾಗಿ ಬರಲಾರದು. ಆದ್ದರಿಂದ ಆಸುರದೃಷ್ಟಿಯ ದೌರ್ಬಲ್ಯವನ್ನು ತ್ಯಜಿಸಿ ನಾವು ದೈವಸಂಪತ್ತಿನ ದೃಷ್ಟಿಯ ಬಲವನ್ನು ಸಂಪಾದಿಸಿಕೊಂಡು ಸುಖವಾಗಿ ಬಾಳೋಣ! ದೈವಸಂಪತ್ತಿನ ದೃಷ್ಟಿಯ ಸಂಘವನ್ನು ಏರ್ಪಡಿಸಿಕೊಳ್ಳೋಣ!

## ೧೫೮. ಆಸುರಸಂಪತ್ತು 16 - (9-12)

**(22-1-50)**

ಆಸುರಸ್ವಭಾವದವರಿಗೆ ಸತ್ಯವಿಲ್ಲ, ಧರ್ಮಾಧರ್ಮಗಳಲ್ಲಾಗಲಿ ಈಶ್ವರನಲ್ಲಾಗಲಿ ನಂಬಿಕೆಯಿರುವದಿಲ್ಲ-ಎಂಬುದನ್ನು ಹಿಂದೆ ತಿಳಿಸಿದ್ದಾಗಿದೆ. ಅವರ ಮುಖ್ಯವಾದ ನಂಬಿಕೆಯೇನೆಂದರೆ ಕಾಮವೇ ಈ ಜಗತ್ತಿಗೆ ಮುಖ್ಯವಾದ ಹೇತುವು. ನಮ್ಮ ಮನಸ್ಸಿನಲ್ಲಿ ಯಾವದಾದರೊಂದು ವಿಷಯದ ಉತ್ಸಾಹವು ಇದ್ದುಬಿಟ್ಟರೆ ಸಾಕು, ಅದು ತನಗೆ ಬೇಕಾದ ಅವಕಾಶಗಳನ್ನೆಲ್ಲ ಕಲ್ಪಿಸಿಕೊಂಡು ಕೆಲಸವನ್ನು ಮಾಡಿಬಿಡುತ್ತದೆ. ಹಿರಿಯವರಾದವರು ಉತ್ಸಾಹಜನಕವಾದ ಮಾತುಗಳನ್ನು ಹೇಳಿದರೆ ಕಿರಿಯವರು ಹಿಂದುಮುಂದೆ ನೋಡದೆ ಮಾಡಬಾರದ ಕೆಲಸಗಳನ್ನೂ ಮಾಡಿಬಿಡುವದುಂಟು. ಉದಾಹರಣೆಗೆ `ಇಂಥವನೊಬ್ಬ ಸಾಹುಕಾರನಲ್ಲಿ ಅನ್ಯಾಯವಾಗಿ ಸಂಪಾದಿಸಿದ ಹಣವಿದೆ; ಅದು ಎಷ್ಟುದಿನ ಇದ್ದೀತು? ಎಂದು ಒಬ್ಬನು ನುಡಿದರೆ, ಆ ಸಾಹುಕಾರನ ಹಣವನ್ನು ಲೂಟಿಮಾಡಿಬಿಡಬೇಕೆಂದೇನೂ ಅವನ ಉದ್ದೇಶವಿರುವದಿಲ್ಲ. ಆದರೆ ಉತ್ಸಾಹಭರಿತರಾದ ತರುಣರು ಕಾಮದಿಂದ ಪ್ರೇರಿತರಾಗಿ ಲೂಟಿಯನ್ನು ಮಾಡುವದಕ್ಕೂ ಹಿಂಜರಿಯುವದಿಲ್ಲ. ಅಸುರರಲ್ಲಿ ಇಂಥ ಕಾಮಪ್ರೇರಿತವಾದ ಉತ್ಸಾಹವು ಇರುತ್ತದೆ. ಆದ್ದರಿಂದ ಅವರು ತಾವು ಮಾಡುವದರ ಯುಕ್ತಾಯುಕ್ತತೆಯನ್ನು ವಿಚಾರಿಸುವದಕ್ಕೆ ಹೋಗುವದಿಲ್ಲ. ಆಸುರೀಸಂಪತ್ತಿನ ಮಾರೀಚ, ಸುಬಾಹು, ತಾಟಕಿ, ರಾವಣ-ಮುಂತಾದವರ ಕೃತ್ಯಗಳನ್ನು ನೋಡಿರಿ; ಅವರಲ್ಲಿ ಒಬ್ಬೊಬ್ಬರೂ ಒಂದೊಂದು ಬಗೆಯ ಕುಕೃತ್ಯಕ್ಕೆ ಕೈಹಾಕಿದ್ದರು. ಆದರೆ ಅವರಿಗೆಲ್ಲ ಪ್ರೋತ್ಸಾಹಕವಾಗಿದ್ದದ್ದು ಯಾವದು? ಕಾಮವೊಂದೇ. ಅವರು ಕಾಮಾಂಧರಾಗಿ ಮಾಡಬಾರದ್ದನ್ನು ಮಾಡಿದರು, ಆಗಬಾರದ ಫಲವನ್ನು ಅನುಭವಿಸಿದರು!

ಇಂದ್ರಿಯಗಳಲ್ಲಿ ಸ್ವಭಾವದಿಂದ ಆಸುರೀಸಂಪತ್ತೇ ಇರುತ್ತದೆ. ಪಳಗಿಸದ ಕುದುರೆಗಳಂತೆ ಎಲ್ಲೆಂದರೆ ಅಲ್ಲಿ ನುಗ್ಗಿ ಮನುಷ್ಯನನ್ನು ಗುಂಡಿಗೆ ಕೆಡಹುವದೇ ಇಂದ್ರಿಯಗಳ ಸ್ವಭಾವ. ಆದರೆ ಸರಿಯಾದ ಮನೋಬುದ್ಧಿಗಳಿಂದ ಆ ಇಂದ್ರಿಯಗಳನ್ನು ತಡೆಗಟ್ಟಿ ರಾಗದ್ವೇಷಗಳಿಗೆ ವಶರಾಗದೆ ಹಿತಮಿತವಾದ ರೀತಿಯಿಂದ ಧರ್ಮ್ಯವಾದ ರೀತಿಯ

ವಿಷಯಭೋಗವನ್ನು ಮಾಡುತ್ತಾ ಇರುವವರು ಇಹಲೋಕದ ಪರಲೋಕದ ಸುಖವನ್ನು ಸೂರೆಗೊಳ್ಳಬಹುದು. ಹಾಗಿಲ್ಲದೆ ಇದ್ದರೆ ಇಹಪರಗಳನ್ನು ಕೆಡಿಸಿಕೊಂಡು ಹಾಳಾಗಲೂಬಹುದು. ಅಲ್ಲವೆ? ಕಾಮದಿಂದ ಪ್ರೇರಿತವಾದ ಇಂದ್ರಿಯಗಳಿಗೂ ಶರೀರಕ್ಕೂ ತತ್ಕಾಲಕ್ಕೆ ಒಂದು ಹುಸಿಯ ಹುರುಪು ಬಂದಿರುತ್ತದೆ. ನಾವು ಅದರಿಂದ ಪ್ರೇರಿತರಾಗಿ ಅಕೃತ್ಯಕ್ಕೆ ಕೈಹಾಕುತ್ತೇವೆ. ಆದರೆ ಆ ಉತ್ಸಾಹವು ಬಹುಕಾಲ ನಿಲ್ಲುವದಿಲ್ಲ; ಅಷ್ಟೇ ಅಲ್ಲ, ಕಾರ್ಯವಾದ ಬಳಿಕ ನಮ್ಮನ್ನು ಕುಸಿದುಬೀಳುವಂತೆ ಮಾಡಿಬಿಡುತ್ತದೆ. ಕಾಮದಿಂದ ಪ್ರವರ್ತಿಸುವ ಆಸುರೀಸಂಪತ್ತಿನವರ ಬಲವು ನಿಜವಾದ ಬಲವಲ್ಲ; ಕಾಮರಾಗವಿವರ್ಜಿತವಾದ ಬಲವೇ ನಿಜವಾದ ಬಲ, ಕಾರ್ಯಕಾರಿಯಾದ ಬಲ. ಆದರೂ ಆಸುರಿಸಂಪತ್ತಿನವರಿಗೆ ಕಾಮದಲ್ಲಿಯೇ ವಿಶ್ವಾಸ. ಇಡೀ ಜಗತ್ತೇ ಕಾಮದಿಂದ ಉಂಟಾಗಿ ಅದರ ಆಧಾರದಮೇಲೆಯೇ ನಿಂತಿದೆ ಎಂದು ಆಸುರಸ್ವಭಾವದವರ ನಂಬಿಕೆ!

ನಮ್ಮ ದೇಶವು ಹಿಂದಿನ ಮಹರ್ಷಿಗಳ ತಪಃಪ್ರಭಾವದಿಂದ ಹೇಗೋ ದೈವಸಂಪತ್ತಿನಲ್ಲಿಯೇ ಹೆಚ್ಚು ವಿಶ್ವಾಸವುಳ್ಳ ಜನರ ಪ್ರಭಾವಕ್ಕೆ ಬಲುಮಟ್ಟಿಗೆ ಒಳಗಾಗಿತ್ತು. ಆದರೂ ಈ ದೇಶದಲ್ಲಿರುವವರೂ ಎಷ್ಟಾದರೂ ಮನುಷ್ಯರೇ; ಆದ್ದರಿಂದ ಇಲ್ಲಿನವರಿಗೂ ಕಾಮವು ತಪ್ಪಿದ್ದಲ್ಲ. ಋಷಿಗಳಿಗೆ ಮಾನವನ ಮನಸ್ಸಿನ ದೌರ್ಬಲ್ಯವು ಗೊತ್ತು. ಅವರು ಧರ್ಮವಿರುದ್ಧವಾಗಿ ಕಾಮವೆಂಬ ಪುರುಷಾರ್ಥವನ್ನು ಅನುಭವಿಸುವ ಬಗೆಯನ್ನು ತಿಳಿಸಿಕೊಟ್ಟಿರುತ್ತಾರೆ. ಪರಂಪರೆಯಿಂದ ವೈರಾಗ್ಯಾದಿಗಳನ್ನು ಉತ್ಪತ್ತಿಮಾಡಿ ಸನ್ಮಾರ್ಗಕ್ಕೆ ತಿರುಗುವದಕ್ಕೆ ಅನುಕೂಲಿಸುವಂತೆ ಅಧಿಕಾರಭೇದದ ದೃಷ್ಟಿಯನ್ನು ಅವಲಂಬಿಸಿ ವಾತ್ಸ್ಯಾಯನರೇ ಮುಂತಾದವರು ಕಾಮಶಾಸ್ತ್ರವನ್ನು ಕೂಡ ರಚಿಸಿದ್ದರು. ಆದರೆ ಈ ಕಾಲದ ಮಹಿಮೆಯಲ್ಲಿ ಒಂದು ವಿಶೇಷ. ಈಗಿನವರು ಕೂಡಿಹಾಕಿಕೊಂಡಿರುವ ಕಾಮೋಪಭೋಗ ಸಾಮಗ್ರಿಗಳನ್ನು ಆ ಋಷಿಗಳು ಮನಸ್ಸಿಗೆ ಕೂಡ ತಂದುಕೊಂಡಿರಲಿಲ್ಲವೆನ್ನಬೇಕಾಗುತ್ತದೆ! ನಮಗೆ ಪಾಶ್ಚಾತ್ಯರ ಸಂಪರ್ಕವಾದ ಬಳಿಕ ವಿಲಾಸದ ಜೀವನದಲ್ಲಿ ಹೆಚ್ಚಿನ ಅಭಿರುಚಿಯುಂಟಾಯಿತು ; ಮಿತಿಮೀರಿ ಕಾಮಪರವಶರಾದೆವು. ಈಗ ಬ್ರಿಟಿಷರ ಆಳ್ವಿಕೆಯು ಹೋದಮೇಲೆ ಕಾಲಪ್ರಭಾವದಿಂದಲೂ ಮಹಾತ್ಮಗಾಂಧಿಯಂಥ ನಾಯಕರ ಉದಾಹರಣೆಯಿಂದಲೂ ನಮ್ಮ ಉತ್ಸಾಹವು ಆ ಕಡೆಯಲ್ಲಿ ಸ್ವಲ್ಪ ತಗ್ಗಿರಬಹುದು. ಆದರೂ ನಾವು ಆ ಬಗೆಯ ಜಂಭವನ್ನು ಇನ್ನೂ ಬಿಟ್ಟಿಲ್ಲ.

ಕಾಮಪ್ರವಣತೆ ಎಂಬುದೊಂದು ಮನೋಧರ್ಮ. ಅದು ಪ್ರಬಲವಾಗಿರುವವರೆಲ್ಲರೂ ಆಸುರಸಂಪತ್ತಿನವರೇ. ಈ ಸಂಪತ್ತು ಎಲ್ಲೆಲ್ಲಿಯೂ ತನ್ನ ಪ್ರಭಾವವನ್ನು ಬೀರುತ್ತಿರುತ್ತದೆ. ಮನುಷ್ಯನ ಐಶ್ವರ್ಯದಲ್ಲಿ ಒಡತನದಲ್ಲಿ, ರಾಗದಲ್ಲಿ, ವೈರಾಗ್ಯದಲ್ಲಿ, ಅಧಿಕಾರದಲ್ಲಿ ಪರಾಧೀನಜೀವನದಲ್ಲಿ-ಎಲ್ಲಿಬೇಕಾದರೂ ಆಸುರಸಂಪತ್ತನ್ನು ಕಾಣಬಹುದು. ಬುಡದಲ್ಲಿ ಕಾಮವು ಯಾವಾಗಲೂ ಇದ್ದುಕೊಂಡೇ ಇರುತ್ತದೆ. ಭಗವಂತನು ಹೇಳಿದ "ಕಾಮ ಏಷಃ

ಕ್ರೋಧ ಏಷಃ" ಎಂಬ ಮಾತನ್ನು ನಾವು ನೆನಪಿನಲ್ಲಿಟ್ಟಿರಬೇಕು. ಕಾಮವೇ ಇಲ್ಲದಂತೆ ಮಾಡಿಕೊಂಡಿದ್ದ ಮಹರ್ಷಿಗಳು ಪರಮಾತ್ಮತುಲ್ಯರು. ಅಂಥ ಸ್ಥಿತಿಯನ್ನು ಪಡೆದುಕೊಳ್ಳುವದು ನಮಗೆ ಕಷ್ಟವಾಗಿರಬಹುದು; ಅದಾಗದಿದ್ದರೂ ನಾವು ಕಾಮಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಧರ್ಮಕ್ಕೆ ಅವಿರುದ್ಧವಾಗಿ ಕಾಮವನ್ನು ಉಪಭೋಗಿಸುವದನ್ನಾದರೂ ಕಲಿತುಕೊಂಡರೆ ಸಾಕಾಗಿರುತ್ತದೆ. ಆದರೆ ನಾವು ಸದ್ಯಕ್ಕೆ ಅರ್ಥದಾಸರಾಗಿರುತ್ತೇವೆ. ಭರ್ತೃಹರಿಯು ಹೇಳಿರುವಂತೆ:

**ಜಾತಿರ್ಯಾತು ರಸಾತಲಂ ಗುಣಗಣಸ್ತತ್ರಾಪ್ಯಧೋಃ ಗಚ್ಛತಾಂ ।**
**ಶೀಲಂ ಶೈಲತಲಾತ್ ಪತತ್ವಭಿಜನಃ ಸಂದಹ್ಯತಾಂ ವಹ್ನಿನಾ ॥**

**ಶೌರ್ಯೇ ವೈರಿಣಿ ವಜ್ರಮಾಶು ನಿಪತತ್ವರ್ಥೋಽಸ್ತು ನಃ ಕೇವಲಂ ।**
**ಯೇನೈಕೇನ ವಿನಾ ಗುಣಾಸ್ತೃಣಲವಪ್ರಾಯಾಃ ಸಮಸ್ತಾ ಇಮೇ ॥**

"ಜಾತಿಯು ರಸಾತಲಕ್ಕೆ ಹೋಗಲಿ, ಧೈರ್ಯಾದಿಸದ್ಗುಣಗಳು ಇನ್ನೂ ಕೆಳಕ್ಕಿಳಿಯಲಿ, ಶೀಲವು ಬೆಟ್ಟದಿಂದ ಬಿದ್ದು ಸಾಯಲಿ, ವಂಶವು ಬೆಂಕಿಬಿದ್ದು ಬೂದಿಯಾಗಲಿ, ವೈರಿಯಾದ ಶೌರ್ಯಕ್ಕೆ ಸಿಡಿಲು ಬಡಿದುಬಿಡಲಿ, ನಮಗೆ ಅರ್ಥವೊಂದೇ ಇರಲಿ! ಏಕೆಂದರೆ ಇದೊಂದಿಲ್ಲದಿದ್ದರೆ ಮಿಕ್ಕೆಲ್ಲ ಗುಣಗಳೂ ಹುಲ್ಲುಕಡ್ಡಿಗೆ ಸಮಾನವಾಗುವವು" ಎಂಬುದು ನಮ್ಮ ಮನೋಭಾವವಾಗಿಬಿಟ್ಟಿರುತ್ತದೆ. ಅರ್ಥವೊಂದಿದ್ದರೆ ಕಾಮವನ್ನು ಅನುಭವಿಸಬಹುದು. ಕಾಮವಿಲ್ಲದ ಜೀವನವು ಏತಕ್ಕೆ?- ಎಂದೇ ನಮ್ಮ ಮನಸ್ಸು ಹೇಳುತ್ತಿರುತ್ತದೆ. ಈಗ ಎಲ್ಲಾ ಹಬ್ಬಗಳಿಗಿಂತಲೂ ಕಾಮನ ಹಬ್ಬವು ಚೆನ್ನಾಗಿ ನಡೆದಿದೆ ಎನ್ನಬಹುದು. ಕಾಮನ ಹುಣ್ಣಿಮೆಯ ದಿನವೇ ಅವತರಿಸಿದ ಭಕ್ತವರ ಪ್ರಹ್ಲಾದನನ್ನು ಮನಸ್ಸಿಗೆ ತಂದುಕೊಳ್ಳುವವರಾದರೂ ಯಾರು? ತನ್ನ ಧ್ಯೇಯಕ್ಕಾಗಿ ಎಷ್ಟು ಕಷ್ಟಪಟ್ಟನು, ಆ ದೈವಸಂಪತ್ತಿನ ಬಾಲಕ! ಆದರೆ ನಮಗೆ ಧರ್ಮಾರ್ಥಕಾಮುಗಳೆಂಬ ತ್ರಿವರ್ಗದಲ್ಲಿ ಕಾಮವೇ ಪ್ರಧಾನವಾಗಿಬಿಟ್ಟಿದೆ. ಇದೇ ಆಸುರಸಂಪತ್ತಿನ ಮಹಿಮೆ. ಆಸುರಸಂಪತ್ತನ್ನು ಇಲ್ಲಿ ಭಗವಂತನು ವರ್ಣಿಸಿರುವದು ಅದನ್ನು ಬಿಟ್ಟು ಬದುಕಬೇಕೆಂದು ತಿಳಿಸುವದಕ್ಕೆ ಎಂಬುದನ್ನು ನಾವು ಮರೆಯದೆ ಇರಬೇಕು. ನಮ್ಮ ಬಾಳು ಆಸುರಸಂಪತ್ತಿನಲ್ಲಿಯೂ ಸಾಗಬಹುದು, ದೈವಸಂಪತ್ತಿನಲ್ಲಿಯೂ ಸಾಗಬಹುದು. ಇವೆರಡರಲ್ಲಿ ನಾವು ಯಾವದನ್ನು ಆರಿಸಿಕೊಳ್ಳುವದು? ಇದನ್ನು ನಾವು ಯೋಚಿಸಿಕೊಳ್ಳಬೇಕು.

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವನ್ತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥** **16-9**

ಆಸುರಸಂಪತ್ತಿನವರು ನಷ್ಟಾತ್ಮರು, ತಮ್ಮ ಆತ್ಮನನ್ನೇ ಕಳೆದುಕೊಂಡವರು, ಇಡೀ ಪ್ರಪಂಚವನ್ನೇ ಗೆದ್ದುಕೊಂಡರೂ ಆತ್ಮನನ್ನು ಕಳೆದುಕೊಂಡ ಮೇಲೆ ಅದಕ್ಕೇನು ಬೆಲೆ? ಅಂಧಂತಮಸ್ಸಿನ ಅವಿದ್ಯಾಮಯವಾದ ಜೀವನದಲ್ಲಿ ಯಾವ ಸ್ವಾರಸ್ಯವಿದೆ? ಆತ್ಮಲಾಭಕ್ಕಿಂತ ಹೆಚ್ಚಿನ ಲಾಭವುಂಟೆ? ಅದನ್ನು ಕಳೆದುಕೊಂಡು ಸ್ವೇಚ್ಛಾಚಾರದಿಂದ ಜೀವಿಸುವವನ ಬಾಳೂ

ಒಂದು ಬಾಳೆ? ಇಂಥ ಜನರು ಅಲ್ಪಬುದ್ಧಿಗಳು. ಅವರ ಬುದ್ಧಿಗೇನೂ ಕಡಿಮೆಯಿಲ್ಲ; ಏಕೆಂದರೆ ಅವರು ಬುದ್ಧಿಯನ್ನು ಸ್ವಲ್ಪಹೆಚ್ಚಾಗಿಯೇ ಉಪಯೋಗಿಸುತ್ತಿರುತ್ತಾರೆ. ಆದರೆ ಅದು ವಿನಾಶಕಾಲದ ವಿಪರೀತಬುದ್ಧಿ! ಬುದ್ಧಿಯ ಅಲ್ಪತ್ವವಾಗಲಿ ಮಹತ್ತ್ವವಾಗಲಿ ಅದರ ವಿಷಯವನ್ನು ಅವಲಂಬಿಸಿಕೊಂಡಿರುತ್ತದೆ. ವಿಷಯಲಾಭವು ಅತ್ಯಲ್ಪವಾದದ್ದು, ಆದರೆ ಅದಕ್ಕಾಗಿ ಮಾಡುವದು ಉಗ್ರಕರ್ಮ, ಬಹಳ ಶ್ರಮದ್ದು. ಆಯಾಸವು ಹೆಚ್ಚು, ಫಲವು ಕಡಿಮೆ. ಆದ್ದರಿಂದಲೇ ಇವರನ್ನು ಅಲ್ಪಬುದ್ಧಿಗಳೆನ್ನುವದು. ಕೆಲವು ಪಟ್ಟಣಗಳಲ್ಲಿಯೂ ನಗರಗಳಿಲ್ಲಿಯೂ ಭೋಗಿಜನರಲ್ಲಿ ಮನೆಮನೆಯ ಫಲಾಹಾರಸಮಾರಂಭದ ಪ್ರಬಂಧವು ಸತತವಾಗಿ ನಡೆದಿರುತ್ತದೆ. ನಿಮ್ಮ ಮನೆಯಲ್ಲಿ ಇಂದು ಫಲಾಹಾರ, ಊಟ, ಗಾನನರ್ತನಗಳು, ಆಟಪಾಟಗಳು ; ನಾಳೆ ನಮ್ಮ ಮನೆಯಲ್ಲಿ ಇಂಥ ತಿಂಡಿತೀರ್ಥಗಳನ್ನು ಮಾಡಿಸುವೆನು; ನಿಮ್ಮ ಮನೆಯಲ್ಲೇನು? ಎಂದು ಒಬ್ಬರನ್ನೊಬ್ಬರು ಹುರಿಯೆಬ್ಬಿಸಿ ವಿನೋದಕಾಲಕ್ಷೇಪದ ಕೂಟಗಳನ್ನು ಏರ್ಪಡಿಸುತ್ತಿರುವರು; ಅಲ್ಲಲ್ಲಿ ಸೋಷಿಯಲ್ ಕ್ಲಬ್ (Social Club) ಎಂಬ ವಿನೋದಾಗಾರಗಳನ್ನು ಏರ್ಪಡಿಸಿಕೊಂಡು ಇಸಪೀಟು, ಬಿಲಿಯರ್ಡ್ಸ್, ಟೆನಿಸ್- ಇವೇ ಮುಂತಾದ ಆಟಪಾಟಗಳಿಂದ ಕಾಲಕ್ಷೇಪವನ್ನು ಮಾಡುತ್ತಿರುತ್ತಾರೆ. ಇದು ಜನರನ್ನುಸೋಮಾರಿಗಳಾಗಿದ್ದು ದುಂದುವೆಚ್ಚವನ್ನು ಮಾಡುವದಕ್ಕೆ ಪ್ರೋತ್ಸಾಹಿಸುತ್ತದೆಯೇ ಹೊರತು ಎಂದಿಗೂ ಅಭ್ಯುದಯಕ್ಕೆ ಕಾರಣವಾಗಲಾರದು. ಇದು ಕಾಮಪ್ರಧಾನವಾದ ಆಸುರೀಸಂಪತ್ತನ್ನು ಬೆಳೆಯಿಸುವ ರೀತಿಯೇ ಹೊರತು ಸದ್ಗುಣಭರಿತವಾದ ಸಮಾಜವನ್ನು ಏರ್ಪಡಿಸುವ ಬಗೆಯಲ್ಲ. ಈಗ ಸರಕಾರದವರು ಅನೇಕ ಯೋಜನೆ (Scheme) ಗಳನ್ನು ಏರ್ಪಡಿಸಿ ಜನರನ್ನು ಉದ್ಯೋಗಶೀಲರನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದಾರೆ; ಆದರೆ ಜನಗಳು ಕೆಲಸವನ್ನೇ ಮಾಡದೆ ಕಾಲಹಾಕುತ್ತಾ ಸೋಮಾರಿಗಳಾದರೆ ಸರ್ಕಾರದವರ ಯಾವ ಯೋಜನೆ ತಾನೆ ಸಫಲವಾದೀತು? ಈಗ ಸೋಮಾರಿಗಳಾಗಿ ಖುಷಿಯಿಂದ ಕಾಲಹಾಕುವ ಕಾಲವಲ್ಲ; ಕಾಮವನ್ನು ಮುಂದುಮಾಡಿಕೊಂಡವರಿಂದ ಯಾವ ಕೆಲಸವೂ ಸಾಗಲಾರದು. ಕಾಮವನ್ನು ಮೂಲೆಗೊತ್ತಿ ತಪಸ್ಸುಮಾಡಬೇಕು. ನಮ್ಮ ಇಂದ್ರಿಯಾದಿಗಳನ್ನು ಹಿಡಿತದಲ್ಲಿಟ್ಟುಕೊಂಡು ನಾವು ನಾವು ಶೋಧನೆ ಮಾಡುತ್ತಿರುವ ತತ್ತ್ವದಮೇಲೆ ಮನಸ್ಸಿನ ಏಕಾಗ್ರೀಕರಣವನ್ನು ಮಾಡಬೇಕು. ಮನಸ್ಸನ್ನೂ ಇಂದ್ರಿಯಗಳನ್ನೂ ಏಕಾಗ್ರತೆಗೊಳಿಸುವದೇ ಹೆಚ್ಚಿನ ತಪಸ್ಸು.

ಅಸುರರು ಆಶ್ರಯಿಸುವ ಕಾಮವು ದುಷ್ಪೂರವು. ಅದಕ್ಕೆ ಒಂದು ಬಗೆಯ ಭಸ್ಮಕರೋಗವಿರುತ್ತದೆ; ಅದರ ಹೊಟ್ಟೆಗೆ ಎಷ್ಟು ಹಾಕಿದರೂ ಸಾಕಾಗುವದಿಲ್ಲ. ಕಾಮವನ್ನು ಉಪಭೋಗಿಸಿದಷ್ಟೂ ಮತ್ತಷ್ಟು ಕಾಮವು ಬೇಕು ಎನ್ನಿಸುತ್ತಲೇ ಇರುತ್ತದೆ. ಕಾಮಕ್ಕೆ ಪರಿವಾರದವರು ಯಾರೆಂದರೆ ದಂಭ, ಮಾನ, ಮದ-ಮುಂತಾದವರು. ಕಾಮಿಗಳು ಮೋಹದಿಂದ ಅಸದ್ಗ್ರಾಹಗಳನ್ನು ಪಟ್ಟುಹಿಡಿಯುವರು. ಮೋಹವು ತಮಸ್ಸಿನ ಕಾರ್ಯವು;

ಕತ್ತಲೆಯಲ್ಲಿ ಹಾವನ್ನೇ ಹಗ್ಗವೆಂದು ತಿಳಿದು ಕೈಹಾಚುವ ಮೂಢರಂತೆ ಅಸತ್ಪದಾರ್ಥಗಳನ್ನೇ ಅಸರರು ಮೋಹದಿಂದ ತೆಗೆದುಕೊಳ್ಳುತ್ತಿರುವರು. ಅದರಿಂದ ಅವರ ಆಚಾರಗಳೂ ಅಶುಚಿಯಾಗಿರುತ್ತವೆ. ನೀವು ಹಿಡಿಯುವ ತತ್ತ್ವಗಳೆಲ್ಲ ತಪ್ಪಾದರೆ, ನಿಮ್ಮ ಆಚಾರವು ಅದಕ್ಕೆ ತಕ್ಕಂತೆ ಅಶುಚಿಯಾದದ್ದೇ ಆಗಿರಬೇಕಲ್ಲವೆ? ಒಬ್ಬನಿಗೆ ಪರಸ್ಪರಸಹಾಯಕಸಂಘವನ್ನು ಏರ್ಪಡಿಸುವ ಹವ್ಯಾಸವಿದೆ ಎಂದಿಟ್ಟುಕೊಳ್ಳಿ. ಅಂಥವನು ಆಸುರಸಂಪತ್ತಿನ ಒಲವಿನವನಾದರೆ ಅವನ ಉದ್ದೇಶವು ಸ್ವಾರ್ಥಮಯವಾಗಿರುತ್ತದೆ. ಆದ್ದರಿಂದ ಅವನು ಆ ಸಂಘದ ನಿಯಮಗಳನ್ನು ಏರ್ಪಡಿಸುವಾಗ ತನ್ನ ಸ್ವಾರ್ಥತೆಗೆ ಅವಕಾಶವಿರುವಂತೆಯೇ ರಚಿಸುವ ಸೂಚನೆಗಳನ್ನು ಕೊಡುತ್ತಾನೆ. ಪ್ರಾರಂಭದಲ್ಲಿಯೇ ಹೇಗೆ ಮಾಡಿದರೆ ಧನವಂತರ ಷೇರು(ಪಾಲು)ಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಆಕರ್ಷಿಸಿ ಕೊನೆಗೆ ಅವರನ್ನೆಲ್ಲ ವಂಚಿಸಬಹುದೆಂಬುದನ್ನೇ ಅವನು ಯೋಚಿಸುತ್ತಿರುತ್ತಾನೆ. ತನ್ನ ಸಂಕಲ್ಪವು ನೆರವೇರುವದಕ್ಕೆ ವಕ್ರವಾದ ಮಾರ್ಗವನ್ನೇ ಅನುಸರಿಸುತ್ತಾನೆ. ಅಲ್ಲವೆ? ಅಸದ್ಗ್ರಾಹಗಳನ್ನು ಗ್ರಹಿಸಿ ಅಶುಚಿವ್ರತರಾಗುವದೆಂಬುದಕ್ಕೆ ಇದೊಂದು ಉದಾಹರಣೆ. ಇನ್ನು ಕೆಲವರು ಇದಕ್ಕಿಂತಲೂ ಕೆಳಗಿನ ಮಟ್ಟಕ್ಕೆ ಇಳಿದು, ಕಳವು, ದರೋಡೆ, ವ್ಯಭಿಚಾರ, ಮುಂತಾದವನ್ನೂ ತಾನಿರುವ ಉದ್ಯೋಗದಲ್ಲಿ ಕಂಪೆನಿಗೆ ಅಥವಾ ಸರ್ಕಾರಕ್ಕೆ ಮೋಸವನ್ನು ಮಾಡಿಯಾದರೂ ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುವದು-ಮುಂತಾದ ಹಾದಿಗಳನ್ನೂ ಹಿಡಿಯಬಹುದು. ಇದೆಲ್ಲ ಅಸದ್ಗ್ರಾಹವೇ, ಅಶುಚಿವ್ರತವೇ.

ಅಸುರರು ಅಳತೆಯಿಲ್ಲದೆ ಚಿಂತೆಗೆ ಗುರಿಯಾಗಿರುತ್ತಾರೆ, ಪ್ರಲಯಾಂತವಾಗಿಯೂ ಅವರ ಆಲೋಚನೆ ಬಗೆಹರಿಯುವಂತಿರುವದಿಲ್ಲ. ಒಬ್ಬ ಬ್ರಾಹ್ಮಣನು ತಾನು ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು ನಿಶ್ಚಯಿಸಿದ ಬಳಿಕವೂ "ಮಗನನ್ನು ಒಂಟಿಯಾಗಿ ಬಿಡುತ್ತೇನಲ್ಲ! ನಾನು ಕಷ್ಟಪಟ್ಟು ದುಡಿದಿರುವ ತೋಟದ ಸಂಪತ್ತನ್ನು ಇವನು ಕಳೆದುಕೊಂಡರೇನು ಗತಿ? ಎಂದು ಯೋಚಿಸಿ "ಅಪ್ಪ, ನಾನು ಸತ್ತಬಳಿಕ ತೋಟದಲ್ಲಿಯೇ ನನ್ನ ಸಮಾಧಿಯನ್ನು ಮಾಡಿಬಿಡು; ಸಮಾಧಿದರ್ಶನದ ನೆಪದಿಂದಲಾದರೂ ದಿನಕ್ಕೊಮ್ಮೆ ತೋಟಕ್ಕೆ ಹೋಗಿಬರುವ ಪದ್ಧತಿಯನ್ನು ಮಾಡಿಕೊ. ಇದರಿಂದ ನಿನಗೆ ಇಹಪರಗಳೆರಡೂ ದಕ್ಕುವವು" ಎಂದು ಮಗನಿಗೆ ಉಪದೇಶಿಸಿದನಂತೆ. ರಾವಣನು ಸೀತೆಯನ್ನು ಕದ್ದು ತಂದ ಮೇಲೆ ಅವಳನ್ನು ಭದ್ರವಾಗಿ ಒಂದು ವನದಲ್ಲಿಟ್ಟು ಸುತ್ತಲೂ ಕಾವಲಿಗೆ ರಾಕ್ಷಸಿಯರನ್ನು ನಿಯಮಿಸಿದನು. ಸೀತೆಗೆ ನಯಭಯಗಳಿಂದ ಬೋಧೆ ಮಾಡಿ ತನ್ನ ವಶಕ್ಕೆ ಅವಳು ಬರುವಂತೆ ಪ್ರೋತ್ಸಾಹಿಸುತ್ತಿದ್ದನು. ಆದರೂ ರಾಮನಿಗೆಲ್ಲಿಯಾದರೂ ತಿಳಿದರೆ ಹೇಗೆ? ಒಂದು ವೇಳೆ ಅವನೇನಾದರೂ ಜನಸಹಾಯದಿಂದ ಸಮುದ್ರವನ್ನು ದಾಟಿಬಂದು ನನ್ನೊಡನೆ ಯುದ್ಧಮಾಡಿದರೆ, ನಾನೇ ಯುದ್ಧದಲ್ಲಿ ಪರಾಜಿತನಾಗಿ ಅವನಿಂದ ಹತನಾದರೆ ಏನು ಗತಿ? ಆಗ ನನ್ನ ಆಶೆ ಹೇಗೆ ಈಡೇರೀತು? ಅಷ್ಟರೊಳಗೆ ಸೀತೆಯನ್ನು ಉಪಭೋಗಿಸಿಬಿಡಬೇಕು-

ಎಂದು ತನ್ನೊಳಗೇ ಯೋಚಿಸಿಕೊಳ್ಳುತ್ತಿದ್ದನಲ್ಲವೆ? ಹೀಗೆಯೇ ಅಸುರರ ಪ್ರಲಯಾಂತವಾದ ಚಿಂತೆ. ಅಸುರರು ರಾವಣಾದಿಗಳು ಮಾತ್ರವೆಂದು ತಿಳಿಯಬಾರದು. ಯಾರು ಯಾರು ಕಾಮಕ್ಕೆ ಒಳಗಾಗಿರುವರೋ ಯಾರು ಯಾರು ಹೀಗೆ ಮರಣಾಂತವಾದ ಸ್ವಾರ್ಥಸಾಧನಚಿಂತೆಯಲ್ಲಿಯೇ ಕಾಲವನ್ನು ಹಾಕುತ್ತಿರುವವರೋ ಅವರೆಲ್ಲರೂ ಅಸುರರೇ. ಅಸುರರು ಕಾಮೋಪಭೋಗಪರಮರು. ಆಸುರಸಂಪತ್ತಿನಲ್ಲಿ ಕಾಮದ ವರ್ಣನೆಯು ಹೆಚ್ಚಾಗಿದೆ ಎಂಬುದನ್ನು ನಾವು ಲಕ್ಷಿಸಬೇಕು. ಅವರಿಗೆ "ಕಾಮಗಳ ಉಪಭೋಗವೇ ಗುರಿ". "ಇಷ್ಟೇ ಪುರುಷಾರ್ಥವು, ಕಾಮದ ಉಪಭೋಗಕ್ಕಿಂತ ಮಿಗಿಲಾಗಿ ಪುರುಷಾರ್ಥವಿನ್ನಿಲ್ಲ" ಎಂಬ ನಿಶ್ಚಯವು ಅವರದು. "ಆಶಾಪಾಶಶತಗಳಿಂದ ಬದ್ಧರಾಗಿರುವವರು" ಅವರು ; "ನಮ್ಮನ್ನು ನೂರಾರು ಆಶೆಗಳು ಸೆಳೆಯುತ್ತಿವೆ, ನೂರಾರು ಕಾಮಗಳು ಎದುರಿಗೆ ಬಂದು ಮೋಹಗೊಳಿಸುತ್ತಿವೆ. ಇವುಗಳಲ್ಲಿ ಯಾವದನ್ನು ಮೊದಲು ಅನುಭವಿಸಬೇಕೋ ತಿಳಿಯದಾಗಿದೆ" ಎನ್ನುತ್ತಿರುತ್ತಾರೆ. ಬೇಗಬೇಗನೇ ಕಾಮಗಳನ್ನು ಮುಗಿಸಿಬಿಡಬೇಕು, ಇಲ್ಲದಿದ್ದರೆ ಪ್ರಾಯವು ಹೋಗಿ ಅನುಭವಿಸುವ ಶಕ್ತಿ ಕಡಿಮೆಯಾಗಿಬಿಡುತ್ತದೆ-ಎಂಬುದೇ ಅವರ ನೀತಿ. ಅವರು ಕಾಮಕ್ರೋಧಗಳಲ್ಲಿಯೇ ನಿಷ್ಠರಾಗಿರುತ್ತಾರೆ.

ಯಾರಿಗೆ ಭೋಗವೇ ಗುರಿಯೋ ಅವರಿಗೆ ಕಾಮಕ್ರೋಧಗಳು ಹೆಚ್ಚುವದು ಸ್ವಾಭಾವಿಕವಾಗಿರುತ್ತದೆ. ಅವರು ಅರ್ಥಗಳನ್ನು ಅನ್ಯಾಯದಿಂದಲಾದರೂ ಗುಡ್ಡೆಹಾಕಿಕೊಳ್ಳುವರು. ರಾವಣನ ಸಂಪತ್ತನ್ನು ನೋಡಿ. ಎಷ್ಟು ಹೆಚ್ಚಿನದು! ಕುಬೇರನು ಈಶ್ವರನಿಂದ ಪಡೆದುಕೊಂಡಿದ್ದ ಪುಷ್ಪಕ ವಿಮಾನವನ್ನು ಅವನು ಕಸಿದುಕೊಂಡುಬಿಟ್ಟಿದ್ದನು; ದೇವತೆಗಳನ್ನೆಲ್ಲ ಜಯಿಸಿ ದಿಕ್ಪಾಲಕರನ್ನೆಲ್ಲ ತನ್ನ ಪರಿಚಾರಕರನ್ನಾಗಿ ಮಾಡಿಕೊಂಡುಬಿಟ್ಟಿದ್ದನು; ಋಷಿಗಳ ಮಾಂಸವು ರುಚಿಯೆಂದು ಅವನೂ ಅವನ ಕಡೆಯ ರಾಕ್ಷಸರೂ ತಿನ್ನುವದಕ್ಕೆ ಪ್ರಾರಂಭಿಸಿದ್ದರು; ಇಷ್ಟಾದರೂ ಅವನಿಗೆ ತೃಪ್ತಿಯಿಲ್ಲದೆ ಹೋಯಿತು. ಕೊನೆಗೆ ಸೀತೆಯನ್ನೇ ಕದ್ದನು. ಅನ್ಯಾಯದಿಂದ ಅರ್ಥಸಂಚಯಮಾಡುವದು ಹೀಗೆ. `ಸಾತಾರೆಯ ಇತಿಹಾಸ'ಎಂಬ ಗ್ರಂಥವನ್ನು ಬರೆದ ಬಸು ಎಂಬಾತನು `ಆಂಗ್ಲರು ನಿರ್ಮಿಸಿರುವ ಲಂಡನ್‌ನಂಥ ನಗರವನ್ನು ಕಟ್ಟಿರುವದನ್ನು ಹೆಮ್ಮೆಯಿಂದ ತೋರಿಸಿರುತ್ತಾರೆ; ಆದರೆ ಇಂಥ ನಗರಗಳನ್ನು ನಿರ್ಮಿಸುವದಕ್ಕೆ ಎಷ್ಟು ಸಾತಾರೆಗಳನ್ನು ಹಾಳುಮಾಡಿರುತ್ತಾರೆಂಬುದನ್ನು ಕೇಳಬೇಕು - ಎಂದು ಗ್ರಂಥಾರಂಭದಲ್ಲಿ ಬರೆದಿರುತ್ತಾನೆ. ಇದೇ ಅಸುರರ ಸಂಪತ್ತು ಬೆಳೆಯುವ ಕ್ರಮ. ಹೀಗೆ ಹೋಗುತ್ತಾಹೋಗುತ್ತಾ ಅಸುರರು ಗುಂಡಿಗೆ ಬೀಳುವರು; ಆದ್ದರಿಂದ ಈ ನೀತಿಯನ್ನು ಬಿಟ್ಟುಬಿಡಬೇಕು ಎಂಬುದೇ ಈ ವರ್ಣನೆಯ ಉದ್ದೇಶವು.



# ೧೫೯. ಆಸುರಸಂಪತ್ತು 16 - (13-17)

**(27-1-50)**

ಆಸುರಸಂಪತ್ತಿನಲ್ಲಿ ಪ್ರಧಾನವಾದದ್ದು ಅಸುರರಿಗೆ ಪ್ರವರ್ತಕವಾದದ್ದು ಕಾಮವು ಎಂದು ಹಿಂದಿನ ದಿನ ತಿಳಿಸಿದ್ದಾಗಿದೆ. ಅಸುರರಿಗೆ ಭೋಗಸಾಮಗ್ರಿಗಳನ್ನು ಒದಗಿಸುವದೇ ಗುರಿಯಾಗಿರುತ್ತದೆ ಎಂದೂ ಹೇಳಿದ್ದಾಗಿದೆ.

(ಇಷ್ಟರಲ್ಲಿ ಸಭಿಕರಲ್ಲೊಬ್ಬರು ಈ ದಿನ ರಿಪಬ್ಲಿಕ್ ಡೇ ಆದ್ದರಿಂದ ಅದರ ವಿಷಯವಾಗಿ ಸ್ವಲ್ಪ ಹೇಳಬೇಕೆಂದು ಕೇಳಿಕೊಂಡರು).

ಮಹಾಶಯರ ಸೂಚನೆಯಂತೆ ಮೊದಲು ನಮ್ಮ ರಿಪಬ್ಲಿಕ್ ವಿಷಯದಲ್ಲಿ ಸ್ವಲ್ಪ ಮಾತನಾಡುತ್ತೇನೆ. ನಮ್ಮ ಭರತಖಂಡವು ಹಿಂದಿನಿಂದಲೂ ಸಂಪತ್ಸಂಮೃದ್ಧವಾಗಿದ್ದ ರಾಷ್ಟ್ರ. ಈ ದೇಶವನ್ನು ಪರದೇಶದವರು "ವರಹಗಳ ವೃಕ್ಷ" (Pagoda Tree) ವೆಂದೂ ಇದನ್ನು ಅಲುಗಾಡಿಸಿದ ಮಾತ್ರಕ್ಕೆ ಭಂಗಾರದ ವರಹಗಳು ಉದುರುವವೆಂದೂ ಭಾವಿಸಿದ್ದರು. ಪಾಶ್ಚಾತ್ಯರು ಒಬ್ಬೊಬ್ಬರಾಗಿ ಬಂದು ಈ ದೇಶದ ಐಶ್ವರ್ಯವನ್ನು ಕೊಳ್ಳೆಹೊಡೆಯಬೇಕೆಂದು ನಾನು ಮುಂದು ತಾನು ಮುಂದು ಎಂದು ನುಗ್ಗುತ್ತಿದ್ದರು. ಕೊನೆಗೆ ಈ ಕಾರ್ಯದಲ್ಲಿ ಜಯಶೀಲರಾಗಿ ನಿಂತವರು ಆಂಗ್ಲೇಯರು. ಪೋರ್ಚುಗೀಸರೂ ಫ್ರೆಂಚರೂ ಗಳಿಸಿದ ರಾಷ್ಟ್ರಗಳು ಇಲ್ಲಿ ನಾಮಾವಶಿಷ್ಟವಾಗಿ ಉಳಿದುಕೊಂಡಿವೆ; ಇಂಗ್ಲಿಷರು ಮಾತ್ರ ಈ ದೇಶವನ್ನೆಲ್ಲ ಜಯಿಸಿ ತಮ್ಮದೇ ಒಂದು ಚಕ್ರಾಧಿಪತ್ಯಮಾಡಿಕೊಂಡರು.

ಬ್ರಿಟಿಷ್‌ಚಕ್ರಾಧಿಪತ್ಯಕ್ಕೆ ಭರತಖಂಡದ ಬೇರೆ ಬೇರೆಯ ಭಾಗಗಳು ಸೇರಿದ ಬಗೆಯನ್ನು ಹಿಂದೂದೇಶದ ಇತಿಹಾಸದಿಂದ ತಿಳಿಯಬೇಕಾಗಿದೆ. ಇಲ್ಲಿ ತಮ್ಮ ಕೆಲವರು ಅಧಿಪತಿಗಳ (Governors) ಮೂಲಕವಾಗಿ ಅವರು ನೇರಾಗಿ ಆಳುತ್ತಿದ್ದದ್ದಲ್ಲದೆ ದೇಶೀಯ ರಾಜರುಗಳನ್ನೂ ಕೆಲವರನ್ನು ಸಬ್ಸಿಡಿಯರಿ ಸಿಸ್ಟಮ್ ಎಂಬ ಪೊಗದಿಪದ್ಧತಿಯಿಂದ ತಮ್ಮ ಆಶ್ರಿತರಾಜರನ್ನಾಗಿ ಮಾಡಿಕೊಂಡಿದ್ದರು. ಇಂಗ್ಲಿಷರು ಇಲ್ಲಿಗೆ ಬಂದದ್ದು ವ್ಯಾಪಾರಗಾರರಾಗಿ; ಈ ದೇಶವನ್ನು ಅವರು ಆಳುತ್ತಿದ್ದದ್ದೂ ವ್ಯಾಪಾರಗಾರರಾಗಿ. ಅವರಿಗೆ ಲಾಭವೇ ಮುಖ್ಯ. ನಮ್ಮ ದೇಶದ ಜನರು ವಿದ್ಯೆಯಲ್ಲಾಗಲಿ ಕಲಾಕೌಶಲದಲ್ಲಾಗಲಿ ಮಿಕ್ಕ ಉದ್ಯೋಗಗಳಲ್ಲಾಗಲಿ ಸ್ವತಂತ್ರರಾಗಿ ಬಾಳದಂತೆ ಎಲ್ಲರನ್ನೂ ದಾಸ್ಯವೃತ್ತಿಗೆ ಇಳಿಸಿಬಿಟ್ಟರು. ಈ ದೇಶದ ಸಂಪತ್ತು ಬರುಬರುತ್ತಾ ಮಾಯವಾಯಿತು; ದೇಶದಲ್ಲಿ ಕ್ಷಾಮ ಡಾಮರುಗಳು ಆಗಿಂದಾಗ್ಗೆ ಬರುತ್ತಲೇ ಇದ್ದವು.

ಇಂಗ್ಲಿಷರು ಈ ದೇಶದಲ್ಲಿ ಆಳಿದ್ದು ಬಹಳ ದೀರ್ಘಕಾಲವೇನೂ ಅಲ್ಲ; ಎರಡು ಶತಮಾನಗಳು ಕೂಡ ಪೂರ ಆಗಲಿಲ್ಲ. ಅಷ್ಟರೊಳಗೆ ನಮ್ಮ ಸತ್ತ್ವವನ್ನೆಲ್ಲ ಅವರು ಹೀರಿಬಿಟ್ಟರು, ಮುಖ್ಯವಾಗಿ ನಮ್ಮ ದೇಶದ ಸಂಸ್ಕೃತಿ ಹೊರತೋರದಂತೆ ಬೇರೆ ಬೇರೆಯ

ಅಡಚಣೆಗಳನ್ನು ತಂದೊಡ್ಡಿದರು. ಅವರಿಗೆ ಜನರು ಎದುರುಬೀಳಲೇ ಇಲ್ಲವೆಂದಲ್ಲ; ಆದರೆ ಜನರಲ್ಲಿ ಹಿಂದೂ, ಮುಸಲ್ಮಾನ್, ಬ್ರಾಹ್ಮಣ ಬ್ರಾಹ್ಮಣೇತರ-ಮುಂತಾದ ಪಂಗಡಗಳನ್ನು ಮಾಡಿ ಅವರನ್ನು ತಾರತಮ್ಯದಿಂದ ಕಾಣುತ್ತಾ ಆದಷ್ಟು ಮಟ್ಟಿಗೂ ಜನರು ಒಗ್ಗಟ್ಟಾಗುವದಕ್ಕೆ ಆಗದ ಹಾಗೆ ಎಚ್ಚರಿಕೆಯನ್ನು ತೆಗೆದುಕೊಂಡಿದ್ದರಿಂದ ಇಷ್ಟು ದೀರ್ಘಕಾಲ ಅವರ ಆಳ್ವಿಕೆಯು ಸಾಗಿತು. ಅಲ್ಲಲ್ಲಿಯೇ ದೇಶಾಭಿಮಾನಿಗಳು ಅವರ ದೋಷಗಳನ್ನು ಹೊರಗೆ ಹಾಕುತ್ತಲೂ ನಮ್ಮ ದೇಶದ ಹಿರಿಮೆಯನ್ನು ಎತ್ತಿಹಿಡಿಯುತ್ತಲೂ ಜನರಿಗೆ ಅಭ್ಯುದಯಮಾರ್ಗವನ್ನು ತಿಳಿಸುತ್ತಲೇ ಇದ್ದರು. ವಾಯುವ್ಯಪ್ರಾಂತದಲ್ಲಿ ಕೆಲವರು ಗುಡ್ಡಗಾಡಿನ ಪ್ರದೇಶದವರು, ಈ ರಾಜ್ಯಕ್ಕೆ ತಂಟೆಕೊಡುತ್ತಲೇ ಇದ್ದರು. ಈ ದೇಶದ ಜನರು ದಾಸ್ಯವೃತ್ತಿಯಲ್ಲಿ ಬಹುಕಾಲವಿರುವದಕ್ಕೆ ಒಪ್ಪಲಿಲ್ಲ; ನಮ್ಮ ನಮ್ಮಲ್ಲಿ ಎಷ್ಟು ಅಂತಃಕಲಹವಾದರೂ ಚಿಂತೆಯಿಲ್ಲ, ಹೇಗಾದರೂ ನಾವು ಸ್ವಾತಂತ್ರ್ಯವನ್ನು ಪಡೆಯಬೇಕು ಎಂದು ಬಹುಜನರು ನಿಶ್ಚಯಿಸಿಕೊಂಡರು. ಜನರಲ್ಲಿ ಸ್ವಾತಂತ್ರ್ಯದ ಭಾವನೆಯು ಮೈಗೂಡುವದಕ್ಕೂ ಇಂಗ್ಲಿಷಿನವರ ರಾಜ್ಯಭಾರದ ಬಿಗಿತವು ತಪ್ಪುವದಕ್ಕೂ ಎರಡು ಮುಖ್ಯಕಾರಣಗಳು ಕೆಲಸಮಾಡಿದವು. ಇಂಗ್ಲಿಷರು ಬಹು ಜಿಪುಣತನದಿಂದಾದರೂ ಸ್ವಾರ್ಥಕ್ಕಾಗಿ ನಮಗೆ ಕಲಿಯುವದಕ್ಕೆ ಅವಕಾಶಕೊಟ್ಟ ಇಂಗ್ಲಿಷು ಭಾಷೆಯ ಪ್ರಪಂಚದ ಇತಿಹಾಸವು ನಾವು ಎಲ್ಲರಂತೆ ಸ್ವತಂತ್ರರಾಗಬೇಕೆಂಬ ಆಸೆಯನ್ನು ಜನರ ಹೃದಯದಲ್ಲಿ ಬೇರುಬಿಡಿಸಿತು. ಭೂಮಂಡಲವನ್ನೆಲ್ಲ ಆವರಿಸಿದ ಎರಡು ಯುದ್ಧಗಳ ಸೆಕೆಯು ಇಂಗ್ಲಿಷರನ್ನು ದುರ್ಬಲರನ್ನಾಗಿ ಮಾಡಿದ್ದಲ್ಲದೆ ನಮ್ಮ ದೇಶಕ್ಕೂ ಅದರ ಸೆಕೆ ತಗಲಿದ್ದಲ್ಲದೆ ಈ ಸಮಯವನ್ನು ಸದುಪಯೋಗಮಾಡಿಕೊಳ್ಳುವ ಆಶಾಪ್ರತೀಕ್ಷೆಗಳನ್ನೂ ತಂದುಕೊಟ್ಟಿತು. "ಫ್ರೀ ಇಂಡಿಯಾ" ಸ್ವತಂತ್ರ ಇಂಡಿಯ ಎಂಬ ಭಾವನೆಯಿಂದ ಕೂಡಿದ ಕೆಲವರು ವೀರರು ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ಪ್ರಾಣಗಳನ್ನು ಬಲಿಯೊಪ್ಪಿಸಿದರು. ರಾಜಶಾಸನಕ್ಕೆ ಅನುಗುಣವಾಗಿಯೇ ಚಳುವಳಿಮಾಡುತ್ತಿದ್ದ ಕಾಂಗ್ರೆಸ್ಸು ಸಭೆಯು ತೀರ್ಮಾನಗಳಿಂದಲೂ ಅಹವಾಲು ಅರ್ಜಿಗಳಿಂದಲೂ ಪ್ರಯೋಜನವನ್ನು ಕಾಣದೆ ಕೊನಗೆ ಸತ್ಯಾಗ್ರಹವೇ ಮುಂತಾದ ರೀತಿಗಳಿಂದ ಆಳುವವರಿಗೆ ಅವಿಧೇಯತೆಯನ್ನು ತೋರಿಸುವದಕ್ಕೆ ಪ್ರಾರಂಭಿಸಿತು. ಈ ಪರಿಸ್ಥಿತಿಯನ್ನು ನೋಡಿ ಇನ್ನು ದೇಶಕ್ಕೆ ಸ್ವಾತಂತ್ರ್ಯವನ್ನು ಕೊಡದಿದ್ದರೆ ನಮಗೆ ಭರತಖಂಡದ ಸ್ನೇಹವೂ ಹೋಗಿ ಭಾರಿಯ ನಷ್ಟವಾದೀತೆಂಬ ಆರ್ಥಿಕದೃಷ್ಟಿಯಿಂದ ಇಂಗ್ಲಿಷರು ನಮಗೆ ಸ್ವಾತಂತ್ರ್ಯವನ್ನು ಕೊಟ್ಟುಬಿಟ್ಟರು. ಇಂಗ್ಲಿಷರ ರಾಜಕೀಯಪಂಗಡಗಳಲ್ಲಿ ಕೂಲಿಕಾರರ ಪಕ್ಷದವರ ಸರಕಾರವು (Labour Government) ಈ ಕಾಲಕ್ಕೆ ಸರಿಯಾಗಿ ಬಂದದ್ದು ನಮ್ಮ ಪುಣ್ಯ ; ಆಟ್ಲಿ ಮಹಾಶಯನು ಇಂಡಿಯದವರಿಗೆ ಪ್ರಜಾಸತ್ತೆಯ ತತ್ತ್ವಗಳನ್ನು ಕಲಿಸಿಕೊಟ್ಟ ಕೀರ್ತಿಯು ಇಂಗ್ಲೆಂಡಿಗೆ ಸಲ್ಲತಕ್ಕದ್ದೆಂದು ಹೇಳಿಕೊಂಡಿರುತ್ತಾನೆ. ಆಗಲಿ. ನಮ್ಮ ದೇಶವನ್ನು ನಮಗೇ ಕೊಡುವ ಉದಾರಭಾವವನ್ನು ಈಗಲಾದರೂ ಆಂಗ್ಲರು ತಾಳಿದರಲ್ಲ! ಇಷ್ಟಕ್ಕೆ ನಾವು ಅವರನ್ನು ಅಭಿನಂದಿಸಬೇಕು.

ಈಗ ನಮ್ಮ ದೇಶವು ರಿಪಬ್ಲಿಕ್ (ಸ್ವತಂತ್ರ್ಯರಾಷ್ಟ್ರವಾಗಿರುತ್ತದೆ), ಆದರೆ "ಬ್ರಿಟಿಷ್ ಕಾಮನ್‌ವೆಲ್ತ್" ಎಂಬ ಅನೇಕ ಬ್ರಿಟಿಷ್ ಮಿತ್ರರಾಷ್ಟ್ರಗಳ ಸಂಘದಲ್ಲಿ ಸದಸ್ಯತ್ವವನ್ನೂ ಹೊಂದಿದೆ. ಇದೊಂದು ನಮ್ಮ ದೇಶದ ಘನತೆಯು. ಕನ್ಸರ್ವೆಟಿವ್ ಪಂಗಡದ ನಾಯಕನಾಗಿರುವ ಚರ್ಚಿಲ್ ಮಹಾಶಯನು `ಇಂಡಿಯದೇಶದವರು ಈ ಸ್ಥಿತಿಯಲ್ಲಿಯೂ ಕಾಮನ್‌ವೆಲ್ತಿಗೆ ಸೇರಿದ್ದೊಂದು ದೊಡ್ಡ ಔದಾರ್ಯವೇ ಸರಿ! ಪಂಡಿತ ನೆಹ್ರು ಮಹಾಶಯನ ಔದಾರ್ಯವು ಆ ಸ್ಥಾನದಲ್ಲಿ ನಾನಿದ್ದರೆ ನನಗೂ ಬರುತ್ತಿತ್ತೆಂದು ಹೇಳಲಾಗುವದಿಲ್ಲ' ಎಂದು ಕೊಂಡಾಡಿರುತ್ತಾನೆ!

ಈ ಕೀರ್ತಿಗೆ ಮೂಲಕಾರಣನಾದವನು ಮಹಾತ್ಮಗಾಂಧಿ. `ಸತ್ಯಾಗ್ರಹ' ಎಂಬ ಪಾರಿಭಾಷಿಕಶಬ್ದವನ್ನು ರಾಜಕೀಯರಂಗಕ್ಕೆ ಇಳಿಸಿದ ಮಹಾತ್ಮನವನು. ಮಿಕ್ಕ ದೇಶಗಳಲ್ಲಿ ಸ್ವಾತಂತ್ರ್ಯಕ್ಕೆ ಹೋರಾಟವಾಗಿರಬಹುದು; ಅವರ ಇತಿಹಾಸದಿಂದ ನಾವೂ ಕೆಲವು ರೀತಿನೀತಿಗಳನ್ನು ಆರಿಸಿಕೊಂಡು ಅನುಕರಿಸಿರಬಹುದು. ಆದರೆ ಸತ್ಯಾಗ್ರಹವೆಂಬ ಶಬ್ದದಲ್ಲಿ ಅಡಗಿರುವ ಭಾವನೆಯು ಭೂಮಂಡಲದ ಇತಿಹಾಸದಲ್ಲಿ ಮತ್ತೆಲ್ಲಿಯೂ ಕಾಣುವದಿಲ್ಲ. ಸತ್ಯಾಗ್ರಹವೆಂದರೆ ಸತ್ಯವನ್ನೇ ಪಟ್ಟುಹಿಡಿದು ಎಷ್ಟು ಕಷ್ಟಗಳು ಬಂದರೂ ಸಹಿಸಿಕೊಂಡು ನಮ್ಮ ಧ್ಯೇಯವನ್ನು ಬದಲಾಯಿಸದೆ ಇರುವದು. ಇದರಲ್ಲಿ ಪ್ರಹ್ಲಾದನು ಪರಮಾಚಾರ್ಯನು. ಪ್ರಹ್ಲಾದನ ಮಾತನ್ನು ಸತ್ಯವಾಗಿ ಮಾಡುವದಕ್ಕಾಗಿ ಭಗವಂತನು ಕಂಬದಿಂದಲೇ ಹೊರಕ್ಕೆ ಬಂದು ಎಲ್ಲರಿಗೂ ದರ್ಶನವನ್ನು ಕೊಟ್ಟನು. ಭಗವಂತನು ಎಲ್ಲೆಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿಯೂ ಸಮನಾಗಿರುತ್ತಾನೆ ಎಂಬ ಸತ್ಯಕ್ಕಾಗಿಯೇ ಪ್ರಹ್ಲಾದನು ಹಿರಣ್ಯಕಶಿಪುವು ಕೊಟ್ಟ ಚಿತ್ರಹಿಂಸೆಗಳನ್ನೆಲ್ಲ ಸಹಿಸಿಕೊಂಡನು. ಸತ್ಯಕ್ಕಾಗಿ ಕಷ್ಟಪಟ್ಟ ಗಾಂಧಿಯವರು ಅವನನ್ನೇ ಅನುಕರಿಸಿ ನಮ್ಮ ಜನಾಂಗಕ್ಕೆ ಜನಕನು ಎನ್ನಿಸಿಕೊಂಡರು! ಲಕ್ಷ್ಮಣನು ಇಂದ್ರಜಿತುವನ್ನು ಹೊಡೆಯುವದಕ್ಕೆ ಬಾಣವನ್ನು ಅಭಿಮಂತ್ರಿಸಿ ಬಿಡುವಾಗ "ರಾಮನು ಧರ್ಮಾತ್ಮನೂ ಸತ್ಯಸಂಧನೂ ಆಗಿರುವದು ನಿಜವಾದರೆ, ಎಲೈ, ಬಾಣವೆ, ಈ ರಾವಣಕುಮಾರನನ್ನು ಹೊಡೆದುಕೊಲ್ಲು!" ಎಂದು ಕೇಳಿಕೊಂಡಿರುತ್ತಾನೆ. ಹೀಗೆ ಗಾಂಧಿಯವರು ಹಾಕಿಕೊಟ್ಟ ಸತ್ಯಾಹಿಂಸೆಗಳ ಮೇಲುಪಂಕ್ತಿಯನ್ನು ನಮ್ಮ ದೇಶದವರು ಹಿಡಿದುಕೊಂಡಿರುವವರೆಗೂ ನಮ್ಮ ದೇಶವು ಆದರ್ಶಪ್ರಾಯವಾಗಿರುತ್ತದೆ. ಸದ್ಯಕ್ಕೆ ನಮ್ಮ ದೇಶವು `ಲೌಕಿಕ ಸರ್ಕಾರ' (Secular Government) ಧರ್ಮನಿರಪೇಕ್ಷವಾಗಿದ್ದರೂ, ನಮ್ಮ ಜನರಲ್ಲಿ ಪ್ರಾಚೀನವಾದ ಸತ್ಯಧರ್ಮಗಳ ಸಂಸ್ಕಾರವಿದೆ. ಅದು ಇರುವರೆಗೂ ನಮಗೆ ಯಾವ ಕಷ್ಟವೂ ಒದಗಲಾರದು. ಪಂಡಿತ ನೆಹ್ರು ದೊಡ್ಡವನೇ ಸರಿ; ಆದರೆ ಸತ್ಯವು ಅವನಿಗಿಂತಲೂ ದೊಡ್ಡದು. ಪರಮೇಶ್ವರನು ಪಂಡಿತ ನೆಹರೂವಿಗೆ ರಾಷ್ಟ್ರದ ನಾಯಕತ್ವವನ್ನು ಒಪ್ಪಿಸಿರುವದರಿಂದ ಈ ದೇಶದ ಸತ್ಯಧರ್ಮಗಳನ್ನು ಕಾಪಾಡಿಕೊಂಡು ಬರುವದು ಆತನ ನೈತಿಕಕರ್ತವ್ಯವಾಗಿರುತ್ತದೆ. ರಿಪಬ್ಲಿಕ್ (ಸ್ವತಂತ್ರರಾಷ್ಟ್ರವೂ) ಆಗಿ ಕಾಮನ್ವೆಲ್ತಿಗೆ

ಸದಸ್ಯರಾಗಿರುವದು ನಮ್ಮ ದೇಶದ ಔದಾರ್ಯಕ್ಕೆ ಒಂದು ಚಿಹ್ನೆಯಾಗಿರುತ್ತದೆ. ಹೊರಗಿನ ಪರಿಸ್ಥಿತಿಯನ್ನು ನೋಡಿದರೆ ನಮ್ಮ ದೇಶದಲ್ಲಿ ಇಷ್ಟರಮಟ್ಟಿನ ಶಾಂತಿ ಇರುವದು ಒಂದು ದೊಡ್ಡ ಪವಾಡವೇ ಸರಿ. ಇದೆಲ್ಲವೂ ನಮ್ಮ ದೇಶದವರಲ್ಲಿ ಪ್ರಬಲವಾಗಿರುವ ದೈವಸಂಪತ್ತಿನ ಮಹತ್ತ್ವವು. ಈ ಸ್ವಾತಂತ್ರ್ಯವು ಬಂತೆಂಬ ಹರ್ಷದ ಉಬ್ಬಿನಲ್ಲಿ ಈ ತತ್ತ್ವವನ್ನು ನಾವು ಮರೆಯದಂತೆ ಭಗವಂತನು ಅನುಗ್ರಹಿಸಲಿ! ಏಕೆಂದರೆ ಇದನ್ನು ನಾವು ಮರೆತರೆ ನಮ್ಮ ದೇಶಕ್ಕೆ ಸ್ವಾತಂತ್ರ್ಯವು ಇಲ್ಲದಂತೆಯೇ ಸರಿ. ಆದ್ದರಿಂದ ನಮ್ಮ ದೇಶಕ್ಕೆ ಆಸುರಸಂಪತ್ತಿನ ಗಾಳಿಯು ಬೀಸದೆ ಇರಲಿ ಎಂದು ಭಗವಂತನನ್ನು ಪ್ರಾರ್ಥಿಸೋಣ!

ಈಗ ಗೀತೆಯ ಮುಂದಿನ ಭಾಗದ ವಿವರಣೆಗೆ ತೆರಳೋಣ. ಅಸುರರು ಯಾವಾಗಲೂ ಮನಸ್ಸಿನಲ್ಲಿ ಯಾವದಾದರೊಂದು ಯೋಚನೆಮಾಡುತ್ತಲೇ ಇರುತ್ತಾರೆ. `ಇಂದು ನನಗೆ ಇದು ದೊರಕಿದೆ; ಇನ್ನು ಈ ಮನೋರಥವನ್ನು ಪಡೆದುಕೊಳ್ಳುವೆನು. ಈ ಧನವೇಸೋ ನನ್ನಲ್ಲಿದೆ ; ಇನ್ನು ಈ ಧನವೂ ನನಗೆ ಉಂಟಾಗುತ್ತದೆ. ಈ ಶತ್ರುವನ್ನು ಕೊಂದೆನು; ಇನ್ನು ಮಿಕ್ಕವರೆಲ್ಲರನ್ನೂ ಕೊಂದುಹಾಕುವೆನು. ಅವರೇನು ಲೆಕ್ಕ? ನಾನು ಸ್ವತಂತ್ರನು, ನಾನು ಭೋಗಿಯು, ನಾನು ಸಿದ್ಧನು, ನಾನು ಬಲಿಷ್ಠನು, ಸುಖಿಯು, ಧನಾಢ್ಯನಾಗಿರುತ್ತೇನೆ, ಒಳ್ಳೆಯ ವಂಶದಲ್ಲಿ ಹುಟ್ಟಿರುತ್ತೇನೆ, ನನಗೆ ಇನ್ನು ಸಮನಾರು?"ಎಂದು ಮುಂತಾಗಿ ಅಸುರರು ಮನಸ್ಸಿನಲ್ಲಿಯೇ ಗುಣಿಸುತ್ತಿರುವರು. ಕುರಾನಿನಲ್ಲಿ ಹೇಳಿರುವ ಒಂದು ವಾಕ್ಯವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಮನುಷ್ಯನೂ ಯೋಚನೆಮಾಡುತ್ತಾನೆ, ಈಶ್ವರನೂ ಯೋಚನೆಮಾಡುತ್ತಾನೆ, ಆದರೆ ಈಶ್ವರನು ಮನುಷ್ಯನಿಗಿಂತ ಹೆಚ್ಚಿನ ತಂತ್ರಜ್ಞನಾಗಿರುತ್ತಾನೆ!" "ನರಚಿತ್ತವು ಲವಲೇಶವೂ ನಡೆಯದು, ಹರಿಚಿತ್ತವೇ ನಡೆಯುತ್ತದೆ" ಎಂಬ ದಾಸರ ಸದುಕ್ತಿಗಳಿಗೂ ಇದೇ ಅಭಿಪ್ರಾಯ. ಕ್ಷುದ್ರಮತಿಗಳಾದ ಮಾನವರು ಅಲ್ಪವಾದ ತಮ್ಮ ಬುದ್ಧಿಯಿಂದ ಮಾಡಿಕೊಂಡಿರುವ ಯೋಚನೆಗಳು ಎಷ್ಟರಮಟ್ಟಿಗೆ, ಎಷ್ಟು ದಿನಗಳವರೆಗೆ, ನಡೆದಾವು? ಆದರೂ ಅವರು ತಮ್ಮ ಸಂಕಲ್ಪವು ನೆರವೇರಿಯೇ ತೀರುವದೆಂದು ದುರಹಂಕಾರದಿಂದ ಮೆರೆಯುತ್ತಿರುವರು!

ಅಸುರರು ಏನು ಮಾಡಿದರೂ ದಂಭಾಹಂಕಾರಗಳಿಂದ ಕೂಡಿಯೇ ಮಾಡುವರು. ಅವರು ಮಾಡುವ ಯಜ್ಞವು ರಾಜಸವಾಗಿಯೇ ಇರುತ್ತದೆ, ಅವರು ಕೊಡುವ ದಾನವೂ ರಾಜಸವೇ. ಅವರ ಕರ್ಮಗಳಿಗೆಲ್ಲ ಅಜ್ಞಾನದಿಂದಾಗಿರುವ ಮೋಹವೇ ಮೂಲ. ಮೋಹದ ಬಲೆಯು ಅವರನ್ನು ಸುತ್ತುಗಟ್ಟಿಕೊಂಡಿರುತ್ತದೆ. ಅವರು ಯಾವದನ್ನು ತಿಳಿದುಕೊಂಡರೂ ತಪ್ಪಾಗಿಯೇ ತಿಳಿದುಕೊಳ್ಳುತ್ತಾರೆ, ಯಾವದನ್ನು ಮಾಡಿದರೂ ತಪ್ಪಾಗಿಯೇ ಮಾಡುತ್ತಾರೆ. ಅವರಿಗೆ ಒಂದು ನಿಯತವಾದ ಚಿತ್ತವಿರುವದಿಲ್ಲ. ಅವರಿಗೆ ಯಾವಾಗಲೂ ಕಾಮವೇ ಮುಖ್ಯಜೀವನಸೂತ್ರ. ಆದ ರಿಂದ ಅವರಿಗೆ ನರಕವೇ ಗತಿ!

ಅಸುರರೆಂದರೆ ಆತ್ಮಸಂಭಾವಿತರು, ತಮ್ಮನ್ನು ತಾವು ಗೌರವಿಸಿಕೊಂಡಿರುವವರು; ಅವರು ಸ್ತಬ್ಧರಾಗಿರುವರು, ಸೆಟೆದುಕೊಂಡು ಯಾರೊಬ್ಬರನ್ನೂ ಲೆಕ್ಕಿಸದೆ ಇರುವರು, ಧನಮಾನಮದಗಳು ಅವರ ಹಿಂಬದಿಯಲ್ಲಿಯೇ ಇರುವವು. ಯಾವನಿಗೆ ಧನವು ಹೆಚ್ಚಾಗಿದೆ ಎಂಬ ಹೆಮ್ಮೆಯಿರುವದೋ ಅವನಿಗೆ ತನ್ನ ವಿಷಯದಲ್ಲಿ ಹೆಚ್ಚಿನ ಅಭಿಮಾನವಿರುತ್ತದೆ. ಧನಮದ, ಕುಲಮದ, ರೂಪಮದ, ಯೌವ್ವನಮದ-ಮುಂತಾದ ಅನೇಕ ಪ್ರಕಾರದ ಮದದಿಂದ ಕೂಡಿರುವದೇ ಅವರ ಸ್ವಭಾವ. ಎಂಥ ದೈವಸಂಪತ್ತಿನವನು ಕೂಡ ಧನಮಾನಮದಗಳಿಂದ ಕೂಡಿದರೆ ಅಸುರರ ಸಾಲಿಗೆ ತಕ್ಕವನಾಗುವನು. ದೇವೇಂದ್ರನಿಗೆಕೂಡ ಒಮ್ಮೆ ಸ್ಥಾನಮಾನಗಳ ಅಭಿಮಾನದಿಂದ ಹೆಮ್ಮೆ ಬಂದಿತ್ತು. ಅವನು ದೂರ್ವಾಸರಂಥ ಋಷಿವರ್ಯರು ಅನುಗ್ರಹಿಸಿದ ಪುಷ್ಪಮಾಲಿಕೆಯನ್ನು ದರ್ಪದಿಂದ ತನ್ನ ಐರಾವತದ ಕೊರಳಿಗೆ ಹಾಕಿಬಿಟ್ಟನು! ಆ ಹಾರವು ಕಿತ್ತುಹರಿದುಹೋದ ಹಾಗೆಯೇ ಅವನ ಐಶ್ವರ್ಯವೂ ಭಿನ್ನಭಿನ್ನವಾದ ಕಥೆಯನ್ನು ನೀವು ಪುರಾಣದಲ್ಲಿ ಕೇಳಿಯೇ ಇರುತ್ತೀರಿ. ದುರ್ಯೋಧನನು ಮದದಿಂದ ಗುರುಹಿರಿಯರನ್ನು ಅನಾದರಮಾಡಿ ಶಾಪಗ್ರಸ್ಥನಾದದ್ದು ಸರ್ವವಿದಿತವಾದ ವಿಷಯ.

ಅಸುರರು ಮಾಡುವ ಕರ್ಮಗಳೂ ತೋರಿಕೆಗಾಗಿ ಎಂದು ಆಗಲೇ ಹೇಳಿದ್ದಾಗಿದೆ. ಅವರು ಯಜ್ಞವನ್ನು ಮಾಡಿದರೆ ದಂಭದಿಂದ, ವಿಧಿಯನ್ನು ಮೀರಿ, ಹೆಸರಿಗೆ ಮಾತ್ರ ಯಜ್ಞವೆನಿಸುವಂತೆ ಮಾಡುತ್ತಾರೆ. ಅವರಿಗೆ ಆಸುರವಾದ ಒಂದು ಮದವು ಮೈಮೇಲೆ ಇದ್ದುಕೊಂಡೇ ಇರುತ್ತದೆ. ಮನುಷ್ಯನಿಗೆ ಆಸುರಸಂಪತ್ತು ಯಾವಾಗ ಹೇಗೆ ಮೈಗೂಡಿಕೊಳ್ಳುವದೋ ತಿಳಿಯುವದಿಲ್ಲ. ಎಚ್ಚರಿಕೆಯಿಂದಿರಬೇಕು. ಬ್ರಿಟಿಷರು ತಮ್ಮ ಉದ್ಯೋಗಶೀಲತೆಯಿಂದ ಎಲ್ಲೆಲ್ಲಿಯೂ ಕೀರ್ತಿಯನ್ನು ಪಡೆದರು. ಅವರಿಗೂ ಗೊತ್ತಿಲ್ಲದಂತೆ ರಾಜ್ಯವಿಸ್ತರಣದ ದಾಹವು ಅವರಿಗೆ ತಗಲಿಕೊಂಡಿತು, ಕೆಟ್ಟರು. ಅವರ ಆರ್ಥಿಕಸ್ಥಿತಿ ಇನ್ನೂ ಸುಧಾರಿಸಿಕೊಳ್ಳವದರಲ್ಲಿಯೇ ಇದೆ. ಅಮೆರಿಕದವರು ಹಣದ ಮದವನ್ನು ತೋರಿಸುತ್ತಿದ್ದಾರೆ, ರಷ್ಯದವರಿಗೆ ಸಂಯುಕ್ತಜನಾಂಗಸಭೆಯಲ್ಲಿ ವಿಟೋ ಪವರ್-ಎಂಬ ಅಧಿಕಾರವನ್ನು ಚಲಾಯಿಸಿ ಕಾರ್ಯಕ್ರಮವನ್ನೆಲ್ಲ ತಟ್ಟನೆ ನಿಲ್ಲಿಸುವ ಹುಚ್ಚಿನ ಮದವೊಂದು ಬಂದಿದೆ. ದೊಡ್ಡದೊಡ್ಡ ರಾಷ್ಟ್ರಗಳೆಲ್ಲವೂ ಈಗ ಒಂದಲ್ಲ ಒಂದು ಪ್ರಕಾರದ ಮದದಿಂದ ಉಬ್ಬಿರುತ್ತವೆ. ಭಗವಂತನೇ ಆ ಜನಾಂಗದವರಿಗೆ ಸರಿಯಾದ ಮಾರ್ಗವನ್ನು ತೋರಿಸಿ ತಾವೂ ಬದುಕಿ ಮತ್ತೊಬ್ಬರನ್ನೂ ಬದುಕಿಸುವ ಕಲ್ಯಾಣಕರವಾದ ಪ್ರವೃತ್ತಿಯನ್ನು ಅನುಸರಿಸುವಂತೆ ಅನುಗ್ರಹಬೇಕಾಗಿದೆ.



# ೧೬೦. ಆಸುರಸಂಪತ್ತಿನ ಉಪಸಂಹಾರ 16 - (18-21)

**(5-2-50)**

ಆಸುರಸಂಪತ್ತಿನವರು ಮಾಡುವ ಕರ್ಮಗಳು ಬರಿಯ ತೋರಿಕೆಯವುಗಳಾಗಿ ರುವವೆಂಬುದನ್ನು ಹೇಳಿತ್ತಷ್ಟೆ. ಅದನ್ನೇ ಈಗ ವಿಸ್ತರಿಸುತ್ತಾರೆ:

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ |**
**ಮಾಮಾತ್ಮಪರದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ || 16-18**

ಅಸುರರು ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ-ಇವುಗಳನ್ನೇ ಆಶ್ರಯಿಸಿರುತ್ತಾರೆ. ಅಹಂಕಾರವೆಂದರೆ ನಾನೆಂದು ಹೆಮ್ಮೆಪಡುವದು. ನಾನು ಎಂದುಕೊಳ್ಳದೆ ಇರುವವನು ಯಾವನಿರುತ್ತಾನೆ? ನಾನು ಎಂದುಕೊಂಡವರೆಲ್ಲ ಅಸುರರೆಂದರೆ ಜಗತ್ತೇ ಅಸುರಮಯವೆಂದಾಗುವದಿಲ್ಲವೆ? ಎಂದು ಯಾರಾದರೂ ಕೇಳಬಹುದು. ಹೀಗೆಯೇ ಕಾಮಕ್ರೋಧಗಳೂ ಜಗತ್ತಿನ ಸ್ಥಿತಿಗೆ ಅವಶ್ಯವಾಗಬಹುದು. ಲೋಕದಲ್ಲಿ ಯಾರೊಬ್ಬರೂ ತಾವು ಮಾಡುವ ಕೆಲಸದ ಹೊಣೆಗಾರಿಕೆಯನ್ನು `ನಾನು' ಎಂದು ಹೊತ್ತುಕೊಳ್ಳುವವರೇ ಇಲ್ಲದಿದ್ದರೆ, ತನಗೂ ತನ್ನವರಿಗೂ ತನ್ನ ದೇಶದವರಿಗೂ ಬೇಕಾಗಿರುವ ಸುಖಸಾಮಗ್ರಿಗಳನ್ನು ಕಾಮಿಸುವವರೂ ತಮಗೆಲ್ಲರಿಗೂ ಸರ್ವಥಾ ಅನಿಷ್ಟವಾಗಿರುವ ಸನ್ನಿವೇಶಗಳನ್ನು ದ್ವೇಷಿಸುವವರೂ ಯಾರೊಬ್ಬರೂ ಇಲ್ಲದಿದ್ದರೆ, ಲೋಕಸ್ಥಿತಿಯು ಏರ್ಪಡುವದು ತಾನೆ ಹೇಗಾದೀತು? ಈಗಿನ ನಮ್ಮ ಜನನಾಯಕರುಗಳು ತಮ್ಮ ತಮ್ಮ ಸ್ವಾರ್ಥಪರಾರ್ಥಗಳನ್ನು ವಿವೇಚನೆಮಾಡುವದಕ್ಕೆ ಶಕ್ತಿಯಿಲ್ಲದ ಅನೇಕರು ತುಂಬಿರುವಲ್ಲಿ ತಾವೂ ಈ ಅಹಂಕಾರಾದಿಗಳನ್ನು ಪೂರ್ಣವಾಗಿ ಕೈಬಿಟ್ಟುಬಿಟ್ಟಿದ್ದರೆ ನಮ್ಮ ಗತಿ ಏನಾಗುತ್ತಿತ್ತು! ಎಂದು ನಿಮ್ಮಲ್ಲಿ ಕೆಲವರ ಮನಸ್ಸಿನಲ್ಲಿ ಒಂದು ಶಂಕೆಯು ಮೂಡಿಕೊಂಡಿರಬಹುದು.

ಆದರೆ ಗೀತಾಚಾರ್ಯನ ಪರಮೋಪದೇಶಕ್ಕೆ ಹೇಗೂ ಯಾವ ಅಡಚಣೆಯೂ ಇರುವದೇ ಇಲ್ಲ. ಏಕೆಂದರೆ ಲೋಕದಲ್ಲಿ ಯಾರೊಬ್ಬರಿಗೂ ಯಾವದೊಂದು ಬಗೆಯ ಅಹಂಕಾರವು ಮೂಡಿಕೊಳ್ಳದೆ ಇದ್ದಿದ್ದರೆ ಯಾವ "ಅನಾಹುತ"ವು ಬಂದೀತು? ಎಲ್ಲರೂ ಅಹಂಕಾರದ ಗ್ರಂಥಿಯನ್ನು ಕಳಚಿಕೊಂಡು ಎಲ್ಲರಿಗೂ ಆತ್ಮನಾಗಿರುವ ಭಗವಂತನಲ್ಲಿಯೇ ನೆಲೆನಿಂತುಬಿಟ್ಟಿದ್ದರೆ ಒಬ್ಬರಿಂದೊಬ್ಬರಿಗೆ ಭಯ, ಅನರ್ಥ, ಪೀಡೆ-ಮುಂತಾದವುಗಳನ್ನು ಶಂಕಿಸುವದಕ್ಕೆ ಕಾರಣವೇ ಇರುತ್ತಿರಲಿಲ್ಲ.

ಆದರೆ ಸರ್ವಥಾ ಅಹಂಕಾರವನ್ನು ತ್ಯಜಿಸುವದಕ್ಕೆ ಆಗುವದೇ ಇಲ್ಲವೆಂದಿಟ್ಟುಕೊಳ್ಳೋಣ. ಆಗಲೂ ರಾಜಸತಾಮಸ ಅಹಂಕಾರಗಳನ್ನು ಬಿಟ್ಟು ಸಾತ್ತ್ವಿಕ ಅಹಂಕಾರವನ್ನು ಇಟ್ಟುಕೊಳ್ಳುವದಕ್ಕೆ ಯಾವ ಅಡ್ಡಿಯೂ ಇರುವದೇ ಇಲ್ಲ. ತನ್ನಲ್ಲಿ ಇರುವ

ಅಥವಾ ಇಲ್ಲದ ಗುಣಗಳನ್ನು ಅಧ್ಯಾರೋಪಮಾಡಿಕೊಂಡು "ನಾನು ಇಂಥವನು"-ಎಂದು ಮೆರೆಯುವ ಹೆಮ್ಮೆಯು ಮನುಷ್ಯನನ್ನು ಅವಿವೇಕದ ಗುಂಡಿಯಲ್ಲಿ ಕೆಡಹುತ್ತವೆ. ಆದ್ದರಿಂದಲೇ ಕೋಶದಲ್ಲಿ ಅಹಂಮತಿಯೇ ಅವಿದ್ಯೆ ಎಂದು ಹೇಳಿದೆ. ಇದೇ ಸರ್ವಾನರ್ಥಕ್ಕೂ ಮೂಲವು. "ಅಹಂ" ನಾನು ಎಂಬುದು ತನ್ನನ್ನೂ ಕೆಡಿಸುತ್ತದೆ, ಇತರರೂ ನಮ್ಮನ್ನು ಕೆಂಗಣ್ಣಿನಿಂದ ನೋಡುವಂತೆ ಮಾಡುತ್ತದೆ. ಈಗಿನ ರಿಪಬ್ಲಿಕ್ಕಿನ ಅಧ್ಯಕ್ಷರು "ನನ್ನ ಸರಕಾರ" (My Government) ಎಂದು ಒಂದು ಸಲ ಪ್ರಯೋಗಮಾಡಿದಕ್ಕೆ ಅನೇಕರು ಆಕ್ಷೇಪಣೆಮಾಡಿದರಂತೆ. ನಾನು ಎಂಬ ಹೆಮ್ಮೆಯು ಮನುಷ್ಯನನ್ನು ಬೇಕಾದಂತೆ ಕುಣಿಸಿ ಕೆಳಗೆ ಕುಕ್ಕರಬಡಿಸುತ್ತದೆ. ಆದ್ದರಿಂದಲೇ ಶ್ರೀರಾಮಕೃಷ್ಣಪರಮಹಂಸರು "ಅಹಂಕಾರವು ಸಂಪೂರ್ಣವಾಗಿ ಹೋಗಿಬಿಡಬೇಕು; ಅದನ್ನು ಪೂರ್ಣವಾಗಿ ತ್ಯಜಿಸುವದು ಆಗದಿದ್ದರೆ ಪರಮೇಶ್ವರನ ದಾಸನು ನಾನು ಎಂಬ ಅಹಂಕಾರವನ್ನಿಟ್ಟುಕೊಳ್ಳಬಹುದು" ಎಂದಿದ್ದಾರೆ. ಅಸುರರಿಗೆ ಅಹಂಕಾರವಲ್ಲದೆ ಮತ್ತೊಬ್ಬರನ್ನು ತಿರಸ್ಕಾರಮಾಡುವ ಕಾಮರಾಗನಿಮಿತ್ತವಾದ ಬಲವು ಎದ್ದುಕೊಂಡಿರುವದು. ಇದರ ಜೊತೆಗೆ ಧರ್ಮವನ್ನು ಕೂಡ ಅತಿಕ್ರಮಿಸುವ ಕೊಬ್ಬಿನ ರೂಪವಾದ ದರ್ಪವು ಅವರಲ್ಲಿ ಆವಿಷ್ಟವಾಗಿರುವದು. ಸ್ತ್ರೀಮಾಲ್ಯಾದಿವಿಷಯಗಳಲ್ಲಿರುವ ಧರ್ಮವಿರುದ್ಧವಾದ ಕಾಮವು ಅವರನ್ನು ಹಿಡಿದುಕೊಂಡುಬಿಟ್ಟಿರುವದು. ದೇವರಿಗೆ ಬಿಟ್ಟ ಬಸವನಂತೆ ಸ್ವೇಚ್ಛಾವೃತ್ತಿಯಿಂದ ನಡೆಯುತ್ತಾ ಹುಡುಗರ ಕೈಯಲ್ಲಿರುವ ಕೊಳ್ಳಿಯಂತೆ ಬಲವನ್ನು ಹೇಗೆಂದರೆ ಹಾಗೆ ದುಷ್ಟಮಾರ್ಗದಲ್ಲಿ ಉಪಯೋಗಿಸುತ್ತಾ ಕ್ರೋಧಪರವಶರಾಗಿ ತಮ್ಮ ದೇಹದಲ್ಲಿಯಾಗಲಿ ಮತ್ತೊಬ್ಬರ ದೇಹದಲ್ಲಿಯಾಗಲಿ ಪರಮಾತ್ಮನೊಬ್ಬನಿದ್ದಾನೆಂಬುದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಈಶ್ವರಶಾಸನವಾದ ಶ್ರುತಿಸ್ಮೃತಿಗಳನ್ನು ಮೀರಿ ನಡೆಯುತ್ತಾ ಸನ್ಮಾರ್ಗದಲ್ಲಿ ನಡೆಯುವವರ ಗುಣವನ್ನು ಕೂಡ ಸಹಿಸದೆ ಮತ್ತರಾಗಿ ನಡೆಯುತ್ತಿರುವದು ಅಸುರರ ಧರ್ಮ. ಜನಗಳಿಗಾಗಲಿ ತನ್ನ ಕೈಕೆಳಗಿನ ಅಧಿಕಾರಿಗಳಿಗಾಗಲಿ ಆಗುವ ಹಿಂಸೆಯನ್ನು ಮನಸ್ಸಿಗೆ ತಾರದೆ ಎಲ್ಲರನ್ನೂ ಗೋಳುಗುಟ್ಟಿಸುತ್ತಿದ್ದ ಒಬ್ಬ ಮದೋನ್ಮತ್ತನಾದ ಅಧಿಕಾರಿಯು ಒಬ್ಬ. ತಂತ್ರಿಯಾದ ಗುಮಾಸ್ತೆಯು "ನನ್ನ ಕೆಲಸಕ್ಕೆ ರಾಜಿನಾಮೆಯನ್ನು ಈ ಮೂಲಕ ಕೊಟ್ಟಿರುತ್ತೇನೆ" ಎಂದು ಬರೆದ ಪತ್ರಕ್ಕೂ ಎತ್ತಲೋ ನೋಡುತ್ತಾ ರುಜುಹಾಕಿಬಿಟ್ಟನಂತೆ! ಇದೇ ಅಸುರರ ಅಹಂಕಾರ, ದರ್ಪ. ರಾವಣನಿಗೆ ಐಶ್ವರ್ಯವು ಹೆಚ್ಚಿದಹಾಗೆಲ್ಲ ಈ ದರ್ಪವು ಬಂದು ಸೇರಿಕೊಳ್ಳುತ್ತಿತ್ತು. ಆಗ ಅವನು ಕೃತ್ಯಾಕೃತ್ಯಗಳನ್ನು ಮನಸ್ಸಿಗೆ ತಂದುಕೊಳ್ಳದೆ ದೇವತೆಗಳನ್ನೂ ಋಷಿಗಳನ್ನೂ ಮನುಷ್ಯರನ್ನೂ ಮನಬಂದಂತೆ ಹಿಂಸಿಸಿದನು. ತನ್ನ ಅತ್ಯಾಚಾರಗಳಿಂದ ಎಲ್ಲರ ವಿಶ್ವಾಸವನ್ನೂ ಕಳೆದುಕೊಂಡನು. ಆ ಅವಸ್ಥೆಯಲ್ಲಿ ಎಲ್ಲರೂ ಇವನಿಗೆ ಹೆದರುತ್ತಿದ್ದರು. ಆದರೆ ಯಾರೊಬ್ಬರಿಗೂ ಇವನಲ್ಲಿ ಪ್ರೀತಿಯಿರಲಿಲ್ಲ. ಎಲ್ಲಾ ಪ್ರಾಣಿಗಳಿಗೂ ಹೊಂದಿಕೆಯಾಗಿದ್ದುಕೊಂಡು ಒಬ್ಬನಿಗೆ ಅಂಜದೆ ತನ್ನಿಂದ ಒಬ್ಬರಿಗೆ ಅಂಜಿಕೆಯಾಗದಂತೆ

ನಡೆದುಕೊಳ್ಳುವಾಗ ನಾವುಗಳು ಪರಮೇಶ್ವರನ ಸತ್ತೆಗೂ ನಿಯಮಕ್ಕೂ ಅನುಗುಣವಾಗಿ ನಡೆಯುತ್ತಿರುವೆವು. ಇದನ್ನು ಅನಾದರಮಾಡಿದೊಡನೆಯೇ ಇಂಥ ಆಸುರ ಸಂಪತ್ತುಮುಗಿಲುಮುಟ್ಟಿದ್ದರ ಫಲವನ್ನು ಪರಮಾತ್ಮನು ಹೀಗೆಂದು ಹೇಳಿರುತ್ತಾನೆ-

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ॥ 16-19**

"ಹೀಗೆ ನನ್ನನ್ನು ದ್ವೇಷಿಸುತ್ತಲೇ ಇರುವ ಕ್ರೂರರಾದ ಆ ಅಶುಭರಾದ ನರಾಧಮರನ್ನು ಯಾವಾಗಲೂ ಆಸುರಯೋನಿಗಳಲ್ಲಿಯೇ ಹಾಕುತ್ತಿರುವೆನು" ಎಂಬುದು ಶ್ಲೋಕದ ಅರ್ಥ. ಪರಮಾತ್ಮನು ಅಸುರರ ಮೇಲಿನ ದ್ವೇಷದಿಂದ ಅವರನ್ನು ಮತ್ತೆ ಮತ್ತೆ ಆಸುರಯೋನಿಗಳಲ್ಲಿ ಕೆಡಹುತ್ತಿರುವನೆಂದು ಇದಕ್ಕೆ ಅಭಿಪ್ರಾಯವಲ್ಲ. ಆಸುರರಾದವರು ತಮ್ಮ ಈ ಕ್ರೂರವಾದ ವರ್ತನೆಯ ಫಲವಾಗಿ ಮತ್ತೆ ಮತ್ತೆ ಕೆಟ್ಟಜನ್ಮಗಳನ್ನೇ ಪಡೆಯುತ್ತಿರುವರು. ಆಯಾ ಕರ್ಮಕ್ಕೆ ತಕ್ಕಂತೆ ಒಳ್ಳೆಯ, ಕೆಟ್ಟ, ಅಥವಾ ನಡುತರದ ಜನ್ಮವು ಉಂಟಾಗಿ ಆಯಾ ಕರ್ಮದ ಫಲವನ್ನು ಅವರವರು ಅನುಭವಿಸುವಂತೆ ಮಾಡಿರುವದು ಆ ಭಗವಂತನ ನಿಯಮವು. ಎಂಥ ಕೆಟ್ಟಜನ್ಮದಲ್ಲಿಯೂ ಒಳ್ಳೆಯ ಕರ್ಮಗಳನ್ನು ಮಾಡುವದಕ್ಕೆ ಜೀವರಿಗೆ ಅವಕಾಶವಿರುತ್ತದೆ, ಎಂಥ ಉತ್ತಮಯೋನಿಯಲ್ಲಿಯೂ ಕೆಟ್ಟ ಕೆಟ್ಟಕರ್ಮಗಳನ್ನು ಮಾಡುವದಕ್ಕೆ ಅವಕಾಶವಿರುತ್ತದೆ. ಜೀವರುಗಳು ಪುಣ್ಯಪಾಪಕರ್ಮಗಳನ್ನು ಮಾಡುವದಕ್ಕೆ ಸ್ವಾತಂತ್ರ್ಯವಿರುವದರಿಂದಲೇ ಶಾಸ್ತ್ರೋಪದೇಶವು ಸಾರ್ಥಕವೆನಿಸಿದೆ. ಜೀವರುಗಳು ಕಟ್ಟಿಗೆಗೊಂಬೆಗಳಂತೆ ಸರ್ವಥಾ ಪರತಂತ್ರರಾಗಿ ಈಶ್ವರನ ಪ್ರೇರಣೆಯಿಂದಲೇ ಎಲ್ಲಾ ಕರ್ಮಗಳನ್ನೂ ಮಾಡುವದಾಗಿದ್ದರೆ ಈಶ್ವರನಿಗೆ ವೈಷಮ್ಯವೂ ನೈರ್ಘೃಣ್ಯವೂ ಬಂದು ಗಂಟುಬೀಳುತ್ತಿತ್ತು. ಆದರೆ ವಸ್ತುಸ್ಥಿತಿ ಹೀಗಿರುವದಿಲ್ಲ. ಪಾಠವನ್ನು ಕಲಿಯುವ ವಿದ್ಯಾರ್ಥಿಗಳಿಗೆ ಬೋಧಿಸುವ ಉಪಾಧ್ಯಾಯನಂತೆ ಎಲ್ಲಾ ಜೀವರುಗಳಿಗೂ ಸಮಾನವಾಗಿ ಶಾಸ್ತ್ರವನ್ನು ಕಲ್ಪಿಸಿ ಆಯಾ ಕರ್ಮಗಳನ್ನು ಮಾಡುವದಕ್ಕೆ ದೇಹೇಂದ್ರಿಯಗಳನ್ನು ಉಪಯೋಗಿಸುವ ಸ್ವಾತಂತ್ರ್ಯವನ್ನು ಕೊಟ್ಟಿರುತ್ತಾನೆ. ಆಯಾ ಕರ್ಮಗಳಿಗೆ ಅವರವರೇ ಹೊಣೆಯಾಗಿರುತ್ತಾರೆ. ಆ ಕರ್ಮಗಳಿಗೆ ಅನುಗುಣವಾಗಿ ಫಲವು ಬರಲಿ - ಎಂಬ ನಿಯಮವು ಮಾತ್ರ ಈಶ್ವರನದಾಗಿರುತ್ತದೆ. ಆಸುರವಾಸನೆಯು ಪ್ರಬಲವಾಗಿರುವವರು ತಮಗೆ ಎಂಥ ಸದವಕಾಶಗಳು ದೊರೆತರೂ ಅವುಗಳನ್ನು ಉಪಯೋಗಿಸಿಕೊಳ್ಳದೆ ದುರ್ಮಾರ್ಗದಲ್ಲಿಯೇ ನಡೆಯುತ್ತಾರೆ.- ಎಂಬುದಿಷ್ಟೇ ಇಲ್ಲಿ ತಿಳಿಯಬೇಕಾದದ್ದು. ನನಗೆ ತಿಳಿದಂತೆ ಬಾಲ್ಯದಲ್ಲಿ ದುಃಸ್ಸಹವಾಸದಿಂದ ಇಸಪೀಟು ಮೊದಲಾದ ಕೆಟ್ಟ ಅಭ್ಯಾಸಗಳನ್ನು ಅವಲಂಬಿಸಿದ್ದ ಒಬ್ಬ ಹುಡುಗನು ಕಾಲದಲ್ಲಿ ಅವನಿಗೆ ಮಾಡಿದ ಶಿಕ್ಷೆಯ ಫಲವಾಗಿ ಮುಂದಕ್ಕೆ ಒಳ್ಳೆಯ ಮಾರ್ಗವನ್ನವಲಂಬಿಸಿ ಮುಂದೆ ಅಭಿವೃದ್ಧಿಗೆ ಬಂದು ತನ್ನನ್ನು ಸನ್ಮಾರ್ಗಕ್ಕೆ ತಿರುಗಿಸಿದ

ಉಪಾಧ್ಯಾಯರಲ್ಲಿ ಕೃತಜ್ಞತೆಯನ್ನು ತೋರಿಸಿದ್ದು ನೆನಪಿಗೆ ಬರುತ್ತಿದೆ. ತಪ್ಪನ್ನು ಮಾಡದೆ ಇರುವವರು ಯಾರಿದ್ದಾರೆ? ಮನಸ್ಸು ದುರ್ಬಲವಾಗಿರುವದರಿಂದ ಅದು ತಪ್ಪುಹಾದಿಗೆ ಒಲಿಯುವದು ಆಶ್ಚರ್ಯವೇನೂ ಅಲ್ಲ. ಆದರೆ ಗುರುಹಿರಿಯರು, ಶಾಸ್ತ್ರ-ಇವುಗಳ ಉಪದೇಶವನ್ನು ಉಪಯೋಗಿಸಿಕೊಂಡು ಸನ್ಮಾರ್ಗಕ್ಕೆ ತಿರುಗುವದಕ್ಕೆ ಎಲ್ಲರಿಗೂ ಅವಕಾಶವಿದೆ. ಆದ್ದರಿಂದ ಯಾರೊಬ್ಬರೂ ನಾವು ಕೆಟ್ಟುಹೋಗುತ್ತೇವೆ, ನಮಗೆ ಉದ್ಧಾರಕ್ಕೆ ಮಾರ್ಗವೇ ಇಲ್ಲ-ಎಂದು ನಿರಾಶರಾಗಬೇಕಾದದ್ದಿಲ್ಲ.

ಆಸುರೀಯೋನಿಯನ್ನು ಪಡೆದ ಮೂಢರು ತಮಗೆ ಎಷ್ಟೇ ಸದವಕಾಶಗಳು ದೊರೆತರೂ ಅವುಗಳನ್ನು ಉಪಯೋಗಿಸದೆ ತಾವೇ ಹಾಳಾಗುವರು. ಅವರಿಗೆ ಪರಮಾತ್ಮಪ್ರಾಪ್ತಿ-ಎಂಬುದು ಅತಿದೂರವಾಗಿರುವದು. ಪರಮಾತ್ಮಪ್ರಾಪ್ತಿಯ ಮಾತು ಹಾಗಿರಲಿ, ಪರಮಾತ್ಮನು ಉಪದೇಶಿಸಿರುವ ಸಾಧುಮಾರ್ಗವನ್ನು ಕೂಡ ಹೊಂದದೆ ಅಧೋಗತಿಯನ್ನೇ ಹೊಂದುವರು. ಇದಕ್ಕೆ ಅವರೇ ಹೊಣೆಗಾರರೇ ಹೊರತು ಮತ್ತೆ ಯಾರೂ ಇಲ್ಲ. ಬಲ್ಲವರಾದವರು ಇಂಥವರನ್ನು ಕೂಡ ಉಪೇಕ್ಷೆಮಾಡಬಾರದು. ಅವರಿಗೆ ತಮ್ಮ ನಡತೆಯಿಂದಲೂ ಉಪದೇಶದಿಂದಲೂ ಸನ್ಮಾರ್ಗವನ್ನು ತಿಳಿಸಿಕೊಡಬೇಕು. ಜನ್ಮಾಂತರಪುಣ್ಯವಿಶೇಷದಿಂದ ಅವರೂ ಹೇಗೋ ಸನ್ಮಾರ್ಗವನ್ನು ಅವಲಂಬಿಸಿದರೂ ಅವಲಂಬಿಸಬಹುದು.

ಭಗವಂತನು ಇದುವರೆಗೆ ವರ್ಣಿಸಿರುವ ಆಸುರಸಂಪತ್ತನ್ನು ಸಂಕ್ಷೇಪವಾಗಿ ತಿಳಿಸಿ ಇಷ್ಟನ್ನು ಬಿಟ್ಟರೆ ಆಸುರಸಂಪತ್ತನ್ನು ಬಿಟ್ಟಂತೆ ಆಯಿತು-ಎಂದು ತಿಳಿಸುವದಕ್ಕೋಸ್ಕರ ಸಂಗ್ರಹವಾಗಿ ಹೇಳುತ್ತಿದ್ದಾನೆ:

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಃ ತಸ್ಮಾದೇತತ್ತ್ರಯಂ ತ್ಯಜೇತ್ ॥ 16-21**

"ಕಾಮ, ಕ್ರೋಧ, ಲೋಭ-ಇವು ಮೂರೂ ನರಕಕ್ಕೆ ಹೆಬ್ಬಾಗಿಲುಗಳು. ಇವುಗಳಿದ್ದರೆ ಯಾವ ಪುರುಷಾರ್ಥವೂ ದಕ್ಕುವಂತಿಲ್ಲ, ಇವುಗಳಿಂದಲೇ ಪುರುಷನು ಹಾಳಾಗುವದು, ಆದ್ದರಿಂದ ಇವು ಮೂರನ್ನು ಬಿಡಬೇಕು"-ಎಂದು ಭಗವಂತನು ಉಪದೇಶಿಸಿರುತ್ತಾನೆ. ಕಾಮಕ್ರೋಧಲೋಭಗಳು ಮೊದಮೊದಲು ಜೀವನಿಗೆ ಅರಿಯದಂತೆಯೇ ಇಷ್ಟಿಷ್ಟಾಗಿ ಅವನನ್ನು ಆವರಿಸಿಕೊಳ್ಳುತ್ತವೆ. `ಈಗ ನನಗೆ ಕಾಮವು ಬಂದಿದೆ, ಈಗ ಕ್ರೋಧವು ಬಂದಿದೆ, ಈಗ ಲೋಭವು ಬಂದಿದೆ'-ಎಂದು ಯಾರಿಗೂ ಮೊದಲು ಗೊತ್ತಾಗುವದೇ ಇಲ್ಲ. ಅವು ಒಂದೊಂದೇ ಹೆಜ್ಜೆಯನ್ನು ಇಟ್ಟಾಗ "ಸರಿ ಹೀಗೆಯೇ ಇರಬೇಕಾದದ್ದು"-ಎಂದು ಅವನ್ನು ನಾವು ಸ್ವಾಗತಿಸುತ್ತೇವೆ. ಯಾರಾದರೂ `ನಿಮ್ಮಲ್ಲಿ ಕಾಮಕ್ರೋಧಲೋಭಗಳು ಕಾಣಿಸಿಕೊಳ್ಳುತ್ತಿವೆ'-ಎಂದು ಸೂಚನೆಕೊಟ್ಟರೆ ಅದು ನಮಗೆ ಸಹಿಸುವದಿಲ್ಲ. ಆಗ ನಮ್ಮ ನಡತೆಯೇ ಸರಿ-ಎಂದು ತೋರಿಸುವದಕ್ಕೆ ತರ್ಕವನ್ನು ಉಪಯೋಗಿಸುವೆವು. ಬರುಬರುತ್ತಾ

ಹಿರಿಯರಾದವರು ನಮ್ಮನ್ನು ಶಾಸನಮಾಡಿ ಹೇಳಿದರೂ ಅವರ ಮಾತನ್ನು ಅನಾದರಿಸುವಷ್ಟು ಇವು ಬಲಿತುಕೊಳ್ಳುವವು. ಆಮೇಲೆ ಎಲ್ಲೆಲ್ಲಿಯೂ ಈ ಕಾಮಕ್ರೋಧಲೋಭಗಳ ಪ್ರದರ್ಶನವನ್ನು ಮಾಡುತ್ತಾ ಇವೇ ನಮಗೆ ಭೂಷಣವೆಂದು ಹೆಮ್ಮೆಪಡುವೆವು. ಇನ್ನುಮುಂದೆ ನಾವು ಕೊಸರಿಕೊಂಡರೂ ಇವು ನಮ್ಮನ್ನು ಬಿಡುವದಿಲ್ಲ; ಕೊಸರಿಕೊಳ್ಳಬೇಕೆಂಬ ಬುದ್ಧಿಯೂ ನಮಗೆ ಆಗ ತೋರಿಕೊಳ್ಳಲಾರದು. ಆದ್ದರಿಂದ ಇವುಗಳನ್ನು ಮೊದಲಿನ ಸ್ಥಿತಿಯಲ್ಲಿಯೇ ನಮ್ಮೊಳಕ್ಕೆ ಬಿಟ್ಟುಕೊಳ್ಳದೆ ದೂರವಾಗಿರಿಸುವದಕ್ಕೆ ಪ್ರಯತ್ನವನ್ನು ಮಾಡುತ್ತಿರಬೇಕು. ಇದನ್ನೇ ಭಗವಂತನು "ಈ ಮೂರನ್ನೂ ಬಿಡಬೇಕು"-ಎಂಬ ವಾಕ್ಯದಿಂದ ಹೇಳಿರುವದು. ಅಂಧಂತಮಸ್ಸಿಗೆ ದ್ವಾರವಾಗಿರುವ ಈ ಮೂರನ್ನು ತೊಲಗಿಸಿಕೊಂಡವನು ತನಗೆ ಶ್ರೇಯಃಸ್ಸಾಧನವನ್ನಾಚರಿಸುವದಕ್ಕೆ ಶಕ್ತನಾಗುವನು. ಅವನೇ ಪರಗತಿಯನ್ನು ಪಡೆಯುವದಕ್ಕೆ ಅರ್ಹನಾಗುವನು. ಆದ್ದರಿಂದ ಪ್ರತಿಯೊಬ್ಬನೂ ತನ್ನ ಮನಃಸ್ಥಿತಿಯನ್ನು ಆಗಾಗ್ಗೆ ಪರೀಕ್ಷಿಸಿಕೊಳ್ಳುತ್ತಲೇ ಇದ್ದು ಈ ಅನರ್ಥಕಾರಿಗಳಾದ ಕಾಮಾದಿಗಳನ್ನು ದೂರವಾಗಿ ಅಟ್ಟಿ ಶ್ರೇಯಃಸ್ಸಾಧನಗಳನ್ನು ಕೈಗೊಳ್ಳಬೇಕು.

## ೧೬೧. ಮನುಷ್ಯನ ನಡತೆಗೆ ಶಾಸ್ತ್ರವೇ ಮಾರ್ಗದರ್ಶಿ 16-(23-24) (12-2-50)

ಆಸುರಸಂಪತ್ತನ್ನು ಉಪಸಂಹಾರಮಾಡಿದ್ದಾಯಿತು. ಕಾಮಕ್ರೋಧಲೋಭಗಳು ಆಸುರಸಂಪತ್ತಿನ ಸಂಗ್ರಹವೆಂದು ತಿಳಿಸಿ ಅವು ನರಕಕ್ಕೆ ಹೆಬ್ಬಾಗಿಲಾದ್ದರಿಂದ ಅವುಗಳನ್ನು ಬಿಡಬೇಕು ಎಂದು ನಿಷೇಧರೂಪವಾದ ಉಪದೇಶವನ್ನು ಕೊನೆಯಲ್ಲಿ ಭಗವಂತನು ಮಾಡಿರುತ್ತಾನೆ. ಇದನ್ನು ಮಾಡಬಾರದು ಎಂದು ನಾವು ಪ್ರಯತ್ನಪಟ್ಟರೂ ಕೆಟ್ಟ ಅಭ್ಯಾಸವು ನಮ್ಮನ್ನು ಬಿಡುವದಿಲ್ಲ. ಅದನ್ನು ಬಿಡಬೇಕೆಂದು ಪ್ರಯತ್ನಮಾಡಿದಷ್ಟೂ ಅದು ಮತ್ತಷ್ಟು ಬಲವಾಗುತ್ತದೆ. ಮಕ್ಕಳಿಗೆ "ಈ ತಪ್ಪನ್ನು ಮಾಡಬೇಡಿರಿ", ಎಂದು ನಿಷೇಧರೂಪವಾಗಿ ಉಪದೇಶಮಾಡಬಾರದೆಂದು ಬೋಧನಕ್ರಮದಲ್ಲಿ ಹೇಳಿಕೊಡುತ್ತಾರೆ. ಅದಕ್ಕೂ ಇದೇ ಕಾರಣ. ಹುಡುಗರಿಗೆ ಯಾವದನ್ನು ಮಾಡಬೇಡವೆಂದು ಉಪದೇಶಿಸುವೆವೋ ಅವರಿಗೆ ಅದನ್ನು ಮಾಡುವದರಲ್ಲಿಯೇ ಪ್ರವೃತ್ತಿಯಾಗುವದು. ಇದನ್ನು ತಿಳಿದು ಅಧ್ಯಾತ್ಮಶಾಸ್ತ್ರದವರು "ಹೀಗೆ ಮಾಡಿರಿ"- ಎಂದು ವಿಧಿಮುಖವಾಗಿಯೇ ಬಹಳ ಮಟ್ಟಿಗೆ ಉಪದೇಶಮಾಡುತ್ತಾರೆ.

ಯಾವ ದುರ್ವ್ಯಸನವನ್ನು ಬಿಡಬೇಕೆಂದು ನಾವು ಪ್ರಯತ್ನಮಾಡುತ್ತೇವೆಯೋ ಆ ಪ್ರಯತ್ನದಿಂದ ಅದಕ್ಕೆ ಹೆಚ್ಚಿನ ಬಲವನ್ನು ಕೊಟ್ಟಂತೆ ಆಗುತ್ತದೆ. ಈ ದುಷ್ಟವಾದ ಅಭ್ಯಾಸವನ್ನು ಬಿಡುತ್ತೇನೆ - ಎಂದು ನಾವು ಸಂಕಲ್ಪಮಾಡಿದ ಹಾಗೆಲ್ಲ ಆ ಅಭ್ಯಾಸಕ್ಕೆ ಅಷ್ಟಷ್ಟು

ಬಲವು ಹೆಚ್ಚುವದು. ಪುರಾಣಗಳಲ್ಲಿ ರಾಕ್ಷಸರ ಹಾವಳಿಯನ್ನು ವರ್ಣಿಸಿದೆಯಷ್ಟೆ, ಅವರು ಮೊದಮೊದಲು ತಪಸ್ಸುಮಾಡಿ ಆ ಬಳಿಕ ಈ ಹಾವಳಿಗೆ ಪ್ರಾರಂಭಮಾಡಿದರೆಂದು ಅಲ್ಲಿ ವರ್ಣಿಸಿದೆ. ಅವರು ಬಲವಂತದಿಂದ ಮೊದಲುಮಾಡಿದ ಇಂದ್ರಿಯನಿಗ್ರಹವು ಅವರ ರಾಕ್ಷಸೀಸಂಪತ್ತು ಪುಷ್ಟವಾಗುವದಕ್ಕೆ ಮತ್ತಷ್ಟು ಸಹಾಯವಾಯಿತು. ಆದ್ದರಿಂದ ಕಾಮಕ್ರೋಧಾದಿಗಳನ್ನು ಬಿಡಬೇಕೆನ್ನುವವರು ಅವುಗಳ ಪ್ರತಿಪಕ್ಷವನ್ನು ಭಾವಿಸುವದಕ್ಕೆ ಪ್ರಾರಂಭಿಸಬೇಕು. ಸುಮ್ಮನೆ ಕಾಮಾದಿಗಳನ್ನು ಬಿಟ್ಟರೆ ಆ ಖಾಲಿಜಾಗಕ್ಕೆ ಮತ್ತೆ ಯಾವದಾದರೊಂದು ಹವ್ಯಾಸವು ಬಂದು ಆಕ್ರಮಿಸಿಕೊಂಡುಬಿಡುವದು. ಆದ್ದರಿಂದ ಆಸುರಸಂಪತ್ತಿನಿಂದ ಬಿಡಿಸಿಕೊಳ್ಳಬೇಕೆನ್ನುವವನು ಶಾಸ್ತ್ರದಲ್ಲಿ ಹೇಳಿರುವಂತೆ ವಿಹಿತಾಚರಣವನ್ನು ಮೊದಲು ಕೈಗೊಳ್ಳಬೇಕು.

ಶಾಸ್ತ್ರದ ಅವಶ್ಯಕತೆಯೂ ಸಾಮಾನ್ಯರಿಗೆ ಮೊದಮೊದಲು ಹೊಳೆಯುವದಿಲ್ಲ. ಹೀಗೆ ಮಾಡಬೇಕು, ಹಾಗೆ ಮಾಡಬೇಕು - ಎಂದು ಶಾಸ್ತ್ರದಲ್ಲಿ ಹೇಳಿರುವದು ಸಾಮಾನ್ಯರಿಗೆ ಒಂದು ನಿರ್ಬಂಧವಾಗಿ ಕಾಣಿಸುತ್ತದೆ. ಸ್ಕೂಲುಗಳಲ್ಲಿ ದೊಡ್ಡದೊಡ್ಡ ತರಗತಿಗಳು ಇರುವ ಕಡೆಗಳಲ್ಲಿ ಹುಡುಗರಿಗೆ ಒಂದೇಸಮನೆ ಕ್ರಮದಿಂದ ಪಾಠವು ನಡೆಯುತ್ತಿರುವದು ಏನೋ ಒಂದು ಕಿರಿಕಿರಿಯಾಗಿ ಕಾಣುವದುಂಟು. ಅಂಥ ಸಂದರ್ಭಗಳಲ್ಲಿ ಅವರು ಪಾಠವು ಸಾಗುವದಕ್ಕೆ ಅಡಚಣೆಗಳನ್ನು ತಂದೊಡ್ಡುತ್ತಾರೆ. ಆ ಅಡಚಣೆಗಳನ್ನು ತಪ್ಪಿಸಿಕೊಂಡು ಪಾಠವನ್ನು ಮುಂದುವರಿಸುವದಕ್ಕೆ ಬೋಧಕರು ಎಷ್ಟು ಕಷ್ಟಪಟ್ಟರೂ ಅವರ ಉಪಾಯಗಳೆಲ್ಲ ನಿಷ್ಫಲವಾಗುವ ಸಂದರ್ಭವೂ ಉಂಟು. ಅಂಥ ಸಮಯಗಳಲ್ಲಿ ಉಪಾಧ್ಯಾಯರು ಏನೂ ತಿಳಿಯದೆ ಮೌನವನ್ನು ವಹಿಸಿ ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಬಿಡುತ್ತಾರೆ. ಆದರೆ ಬಹುಸಂಖ್ಯೆಯ ವಿದ್ಯಾರ್ಥಿಗಳಿರುವ ಅಂಥ ತರಗತಿಗಳಲ್ಲಿ ಪಾಠವೇ ಇಲ್ಲದಿರುವಾಗ ಆಗುವ ಗಲಾಟೆಯು ಹುಡುಗರಿಗೂ ಸಹಿಸುವದಕ್ಕೆ ಕಷ್ಟವಾಗಿ ಬಿಡುತ್ತದೆ. ಆಗ ಅವರು "ಪಾಠವನ್ನು ಮಾಡಿ ಸಾರ್" - ಎಂತ ಒತ್ತಿ ಪ್ರಾರ್ಥಿಸಿಕೊಳ್ಳುವದುಂಟು. ರಾಜ್ಯವು ಹೇಳುವ ಕೇಳುವ ನಾಯಕರಾರೂ ಇಲ್ಲದಿರುವಾಗ ಆಗುವ ಅವ್ಯವಸ್ಥೆಯನ್ನು ತಡೆಯಲಾರದೆ ಪ್ರಜೆಗಳು ದಕ್ಷರಾದವರನ್ನು ಹುಡುಕಿಕೊಂಡು ಹೋಗಿ ನೀವು ರಾಜರಾಗಿ, ನೀವು ರಾಜರಾಗಿ - ಎಂದು ಪ್ರಾರ್ಥಿಸಿಕೊಂಡ ಸಂದರ್ಭಗಳನ್ನು ಪುರಾಣಗಳಲ್ಲಿ ವರ್ಣಿಸಿರುತ್ತಾರೆ. ಇದರಂತೆಯೇ ಶಾಸ್ತ್ರವನ್ನು ಧಿಕ್ಕರಿಸಿ ಆಸುರಸಂಪತ್ತನ್ನು ಬೆಳೆಯಿಸಿಕೊಂಡವರು ಯಾವ ಪುರುಷಾರ್ಥವನ್ನೂ ಹೊಂದುವ ಯೋಗ್ಯತೆಯನ್ನು ಸಂಪಾದಿಸಿಕೊಳ್ಳಲಾರರು. ಅವರಿಗೆ ಇಹದಲ್ಲಿ ಸುಖವಿಲ್ಲ, ಪರದಲ್ಲಿಗತಿಯಿಲ್ಲ - ಹೀಗಾಗಿ ಯಾವದಾದರೊಂದು ದಿಕ್ಪ್ರದರ್ಶಕವಾದ ಸಾಧನವು ಬೇಕೆನ್ನಿಸುವದು. ಮನುಷ್ಯನಿಗೆ ಸ್ವಾತಂತ್ರ್ಯವು ಬೇಕೆಂಬುದು ನಿಜ. ಆದರೆ ತಿಳಿವಳಿಕೆಯಿಲ್ಲದಾಗ ಸ್ವಾತಂತ್ರ್ಯವು ಯಾವ ಪ್ರಯೋಜನವನ್ನೂ ತಂದುಕೊಡಲಾರದು. ಆದ್ದರಿಂದಲೇ ಅಸುರರ ಸ್ವಾತಂತ್ರ್ಯವು ಯಾವ ಸುಖವನ್ನೂ ಅವರಿಗೆ ತಂದುಕೊಡಲಾರದೆ ಇರುವದು.

ಶಾಸ್ತ್ರಕ್ಕೆ ಕಟ್ಟುಬೀಳುವವರು ದೈವೀಸಂಪತ್ತಿನವರು. ಶಾಸ್ತ್ರವನ್ನು ಉಲ್ಲಂಘಿಸಿ ಸ್ವೇಚ್ಛೆಯಿಂದ ವರ್ತಿಸುವವರು ಅಸುರರು. ಜನಗಳಿಗೆ ಸ್ವೇಚ್ಛಾಚಾರದ ಸ್ವಾತಂತ್ರ್ಯವು ಬೇಕೆನಿಸಿದಾಗ ತಮ್ಮ ನಡತೆಯನ್ನು ಹೀಗಿರಬೇಕೆಂದು ಕಟ್ಟುಮಾಡುವ ಶಾಸ್ತ್ರವೂ ಶತ್ರುವಾಗಿಯೇ ಕಾಣುವದು. ಹಿಂದೆ ಬ್ರಾಹ್ಮಣ, ಅಬ್ರಾಹ್ಮಣ - ಎಂಬ ಪಂಗಡಗಳನ್ನು ಮಾಡಿಕೊಂಡು ರಾಜಕೀಯರಂಗದಲ್ಲಿ ಜನರು ಹೊಡೆದಾಡುತ್ತಿದ್ದಾಗ "ಜಸ್ಟಿಸ್ ಪಾರ್ಟಿ" ಎಂಬ ಪಂಗಡದವರು ಬ್ರಾಹ್ಮಣರನ್ನು ಹೊಗಳುವ ಶಾಸ್ತ್ರಗಳು ಯಾವವೂ ಇರಬಾರದು, ಬ್ರಾಹ್ಮಣರಿಗೆ ಯಾವ ಗೌರವವನ್ನೂ ತೋರಿಸಬಾರದು - ಎಂಬ ಕೂಗನ್ನೆಬ್ಬಿಸಿ ಮನುಧರ್ಮಶಾಸ್ತ್ರವನ್ನು ಸುಟ್ಟು ಬಂಗಾಳಕೊಲ್ಲಿಯಲ್ಲಿ ಕದಡಬೇಕು - ಎಂಬ ಗಲಾಟೆ ಎಬ್ಬಿಸಿದರಂತೆ. ಆ ಗಲಭೆಯ ಸ್ಥಿತಿಯಲ್ಲಿ ಅವರಿಗೆ ಮನುಚಕ್ರವರ್ತಿಯೂ ಕೂಡ ಕ್ಷತ್ರಿಯನೇ ಎಂಬುದು ತಿಳಿಯದೆಹೋಯಿತು. ಇದಂತಿರಲಿ, ಯುಕ್ತಾಯುಕ್ತವನ್ನು ತಿಳಿಸುವ ಶಾಸ್ತ್ರವನ್ನು ದ್ವೇಷಮಾಡುವದರಿಂದ ನಮಗೆ ಯಾವ ಪ್ರಯೋಜನವು ತಾನೆ ಸಿಕ್ಕೀತು? ಶಾಸ್ತ್ರವು ಬಲಾತ್ಕಾರದಿಂದ ಯಾರೊಬ್ಬರನ್ನೂ ಒಂದು ಕರ್ಮದಲ್ಲಿ ಪ್ರವರ್ತಿಸುವಂತೆ ಮಾಡುವದಿಲ್ಲ. ಒಂದು ಕರ್ಮದಿಂದ ನಿವೃತ್ತವಾಗುವಂತೆಯೂ ಮಾಡುವದಿಲ್ಲ. ಹೀಗಿರುವಲ್ಲಿ ಶಾಸ್ತ್ರವು ನಮ್ಮ ಸ್ವೇಚ್ಛಾಪ್ರವರ್ತನೆಗೆ ಅಡ್ಡಿಯಾಗುವದೆಂದು ದ್ವೇಷಿಸುವದರಿಂದ ಯಾವ ಲಾಭವುತಾನೆ ಆದೀತು? ಮನುಷ್ಯನು ಪುರುಷಾರ್ಥವನ್ನು ಹೊಂದಬೇಕಾದರೆ ಶಾಸ್ತ್ರವನ್ನು ಅನುಸರಿಸಬೇಕು. ಅನರ್ಥವನ್ನೇ ಹೊಂದುವ ದೃಢಸಂಕಲ್ಪವಿರುವವನು ಶಾಸ್ತ್ರವನ್ನು ಲೆಕ್ಕಿಸದೆ ಮನಬಂದಂತೆ ನಡೆದರಾಯಿತು. ವಿದ್ಯಾಭ್ಯಾಸದಲ್ಲಿ ನಮ್ಮ ಪೂರ್ವಜರು ಮೂರ್ಖರು ಎಂಬ ತಿಳಿವಳಿಕೆಯನ್ನು ಬಾಲಕರಿಗೆ ಮಾಡಿಕೊಟ್ಟರೆ ಅದರಿಂದ ಯಾವ ಲಾಭವಾದೀತು ? ಪೂರ್ವಾಚಾರಗಳನ್ನೂ ಸಂಪ್ರದಾಯಗಳನ್ನೂ ಹಳಿಯುವದೇ ಈಗಿನ ವಿದ್ಯಾಭ್ಯಾಸದ ದೋಷವು ಎಂದು ಸ್ವಾಮಿ ವಿವೇಕಾನಂದರು ಆಗಾಗ್ಗೆ ಹೇಳುತ್ತಿದ್ದರು. ಶಾಸ್ತ್ರವನ್ನು ಧಿಕ್ಕರಿಸಿ ಕಾಮವನ್ನು ಮಾರ್ಗದರ್ಶಿಯಾಗಿ ಮಾಡಿಕೊಂಡವರಿಗೆ ನರಕವೇ ಗತಿ. ಶಾಸ್ತ್ರವನ್ನನುಸರಿಸುವದು ಕಷ್ಟವಾಗಿ ಕಾಣಬಹುದು. ಆದರೆ ಅದರ ಅನುವರ್ತನೆಯಿಂದ ಮನುಷ್ಯನಿಗೆ ಇಹದಲ್ಲಿ ಸುಖವೂ ಪರದಲ್ಲಿ ಗತಿಯೂ ಉಂಟಾಗುವವು. ಆದ್ದರಿಂದ ಶಾಸ್ತ್ರವನ್ನು ಅನುಸರಿಸಿ ಮೆಲ್ಲಮೆಲ್ಲಗೆ ದೈವಸಂಪತ್ತನ್ನು ಸಂಪಾದಿಸಬೇಕು - ಎಂದು ಭಗವಂತನು ಉಪದೇಶಿಸಿರುತ್ತಾನೆ.

ಈಗ ಶಾಸ್ತ್ರ ಎಂದರೆ ಏನು ? ಅದು ನಮ್ಮನ್ನು ಹೇಗೆ ಆಸುರೀಸಂಪತ್ತಿನಿಂದ ಬಿಡುಗಡೆಮಾಡುತ್ತದೆ -ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ. ಶಾಸ್ತ್ರವು ಎಂದರೆ ಮೂಲತಃ ವೇದವು. ಅದಕ್ಕನುಸಾರವಾಗಿರುವ ಸ್ಮೃತಿಗಳೂ ಗೌಣ ವೃತ್ತಿಯಿಂದ ಶಾಸ್ತ್ರವೆನಿಸಿರುವವು. ಶಾಸ್ತ್ರದ ಉದ್ದೇಶವು ಮನುಷ್ಯನನ್ನು ಕಾಮಾದಿಗಳ ಪರವಶನಾಗದೆ ಕರ್ತವ್ಯದಲ್ಲಿ ಪ್ರವೃತ್ತನಾಗುವ ರೀತಿಯನ್ನು ತಿಳಿಸಿಕೊಡುವದು. ಇಂಥ ಕಾಮವಿರುವವನು ಇಂಥ ಫಲವು

ದೊರಕಬೇಕಾದರೆ ಇಂಥ ಕರ್ಮವನ್ನು ಮಾಡಬೇಕು- ಎಂದು ಹೇಳುವ ಕಾಮ್ಯಕರ್ಮಗಳನ್ನಲ್ಲದೆ ವರ್ಣಾಶ್ರಮವಿವೇಕವನ್ನು ಅನುಸರಿಸಿ ಇಂಥಿಂಥ ಕರ್ಮವನ್ನು ಅವಶ್ಯವಾಗಿ ಮಾಡಬೇಕು, ಮನುಷ್ಯನಾದವನು ಇಂಥ ಸತ್ಯ, ಧರ್ಮ, ಅಹಿಂಸೆ ಮುಂತಾದವುಗಳನ್ನು ತಪ್ಪದೆ ಅನುಸರಿಸಬೇಕು ಎಂದೂ ನಿತ್ಯಕರ್ಮಗಳನ್ನು ಶಾಸ್ತ್ರದಲ್ಲಿ ಬೋಧಿಸಿರುತ್ತದೆ. ಯಾವಾಗ ಯಾವ ಕರ್ಮವನ್ನು ಮಾಡುವದು ಸರಿಯಲ್ಲ ಎಂಬ ನಿಷೇಧವೂ ಶಾಸ್ತ್ರದಲ್ಲಿ ದೊರಕುತ್ತದೆ. ಸ್ವಾರ್ಥವನ್ನು ಬಿಟ್ಟು ವರ್ತಿಸುವ ಹಾದಿಯನ್ನೇ ಮುಖ್ಯವಾಗಿ ಶಾಸ್ತ್ರವು ತಿಳಿಸುವದರಿಂದ ಶಾಸ್ತ್ರವು ಆಸುರಸಂಪತ್ತಿನ ಹಿಡಿತದಿಂದ ಪುರುಷನನ್ನು ಬಿಡಿಸುವದು. ಮನುಷ್ಯನಿಗೆ ಸ್ವೇಚ್ಛಾಚಾರದಿಂದಾಗುವ ಅನರ್ಥವು ಮೊದಲು ತಿಳಿಯುವದೇ ಇಲ್ಲ. ಅದರಲ್ಲಿಯೂ ಬಾಲ್ಯದಲ್ಲಿ ಗುರುಹಿರಿಯರ ಶಿಕ್ಷೆಗೆ ಒಳಪಡದವನು ಮುಂದೆ ಯಾವ ಬಗೆಯ ಜೀವನವನ್ನು ಅನುಸರಿಸುವನೆಂಬುದನ್ನು ಹೇಳುವದು ಕಷ್ಟ. ಹಿಂದೆ ಮೊಳಕಾಲ್ಮೂರುವಿನಲ್ಲಿ ಮನೆಯಲ್ಲಿ ತಂದೆತಾಯಿಗಳ ಶಿಕ್ಷೆಯು ಸರಿಯಾಗಿಲ್ಲದೆ ಸ್ಕೂಲಿನಲ್ಲಿಯೂ ಕಾರಣಾಂತರದಿಂದ ಉಪಾಧ್ಯಾಯರುಗಳ ಮೇಲೆ ತಿರುಗಿಬಿದ್ದ ಒಬ್ಬ ಹುಡುಗನನ್ನು ಸ್ಕೂಲಿನಿಂದ ಹೆಸರುತೆಗೆದುಹಾಕುವದರಲ್ಲಿದ್ದರು. ಈ ಸಂದರ್ಭಕ್ಕೆ ದೈವವಶದಿಂದ ಮನೆಯವರು ಆ ಹುಡುಗನನ್ನು ನನ್ನ ವಶಕ್ಕೆ ಕೊಟ್ಟರು. ಅವನು ಹೇಗೋ ನಾನು ಹೇಳಿದಂತೆ ನಡೆಯುವದಕ್ಕೆ ಪ್ರಾರಂಭಿಸಿದ್ದರಿಂದ ಮೆಲ್ಲಮೆಲ್ಲಗೆ ಸ್ಕೂಲ್ ವಿದ್ಯಾಭ್ಯಾಸವನ್ನು ಮುಂದುಸಾಗಿಸಿ ಮುಂದಕ್ಕೆ ದೊಡ್ಡ ಥಿಯಾಸಫಿಸ್ಟ್ ಆದನು. ಅವನು ಇತರರನ್ನೂ ಸನ್ಮಾರ್ಗಕ್ಕೆ ಎಳೆಯುವದಕ್ಕೂ ಸಾಧನವಾದನು. ಶಾಸ್ತ್ರಾಚಾರ್ಯರ ವಿನಯಾಧಾನಕ್ಕೆ ವಶನಾದ ಲೌಕಿಕನು ಮೆಲ್ಲಮೆಲ್ಲಗೆ ಸ್ವೇಚ್ಛಾಚಾರವನ್ನು ಬಿಟ್ಟು ಅಧ್ಯಾತ್ಮಮಾರ್ಗಕ್ಕೆ ತಿರುಗುವನು.

ಕಾಮಾದಿತ್ಯಾಗವು ಅಧ್ಯಾತ್ಮಮಾರ್ಗವನ್ನು ಪ್ರವೇಶಿಸುವ ಮುಂಚೆಯೇ ಆಗಿರಬೇಕಾದ್ದು. ಶಾಸ್ತ್ರದಲ್ಲಿ ವಿಹಿತವಾದದ್ದನ್ನು ಮಾಡದಿದ್ದರೂ ಕಾಮಾದಿವಶನಾಗಿ ನಿಷಿದ್ಧಕರ್ಮವನ್ನು ಮಾಡುವದನ್ನು ಮೊದಲು ಬಿಡಬೇಕು. ಯಾವನು ಶಾಸ್ತ್ರಕ್ಕೆ ಕಟ್ಟುಬಿದ್ದು ತನ್ನ ನಡತೆಯನ್ನು ತಿದ್ದಿಕೊಳ್ಳುತ್ತಾಹೋಗುವನೋ ಅವನೇ ಈ ಲೋಕದಲ್ಲಿ ಸುಖವನ್ನೂ ಪರಲೋಕದಲ್ಲಿ ಗತಿಯನ್ನೂ ಪಡೆಯುವನು.



# ೧೬೨. ಶ್ರದ್ಧೆಯ ಪ್ರಭಾವ 17 - (1-4)

**(19-2-50)**

ಶಾಸ್ತ್ರವನ್ನು ಬಿಟ್ಟವರಿಗೆ ಇಹಪರಗಳಿಲ್ಲವೆಂದು ಭಗವಂತನು ಹೇಳಿದ್ದನ್ನು ಕೇಳಿ ಅರ್ಜುನನು ಒಂದು ಪ್ರಶ್ನೆಯನ್ನು ಮಾಡಿರುತ್ತಾನೆ. "ಯಾರು ಶಾಸ್ತ್ರವಿಧಿಯನ್ನು ಬಿಟ್ಟು ಶ್ರದ್ಧೆಯಿಂದ ಕೂಡಿ ಪೂಜಿಸುವರೋ ಅವರ ನಿಷ್ಠೆಯನ್ನು ಸಾತ್ತ್ವಿಕ, ರಾಜಸ, ತಾಮಸ ಈ ಮೂರರಲ್ಲಿ ಯಾವದೆಂದು ನಿಶ್ಚಯಸಬೇಕು"? ಶಾಸ್ತ್ರಾರ್ಥವನ್ನು ನಿರ್ಣಯಿಸಲಾರದೆ ಅದರಲ್ಲಿ ಹೇಳಿರುವ ಕರ್ಮಗಳನ್ನು ಮಾಡಲು ಅಸಮರ್ಥರಾದವರು ಈಗಲೂ ಅನೇಕರು ಇರುತ್ತಾರೆ. ಆದರೆ ಅವರಿಗೆ ಸರಿಯಾದ ಮಾರ್ಗದಲ್ಲಿ ನಡೆಯುವದಕ್ಕೆ ಇಚ್ಛೆಯೇನೋ ಇರುತ್ತದೆ. ಇಂಥ ಜನಗಳೇ ಲೋಕದಲ್ಲಿ ಹೆಚ್ಚಾಗಿರುವದರಿಂದ ಅರ್ಜುನನ ಈ ಪ್ರಶ್ನೆಯು ಸ್ವಾರಸ್ಯಯುಕ್ತವಾಗಿದೆ. ವೇದೋಕ್ತವಾಗಿರುವದನ್ನು ಮಾಡುವದಕ್ಕಾಗಿಯೇ ಯಾರು ತಮ್ಮ ತನುಮನಧನಗಳನ್ನು ಅರ್ಪಿಸುತ್ತಾರೆಯೋ ಅವರಂತೂ ಶಾಸ್ತ್ರವನ್ನು ಚಾಚೂ ತಪ್ಪದೆ ನಡೆಸಿಯೇತೀರುತ್ತಾರೆ. ಆದರೆ ಅದರ ಒಳ ಅರ್ಥವನ್ನು ತಿಳಿಯದೆ ಶ್ರದ್ಧೆಯಿಂದ ಕೂಡಿರುವವರ ಗತಿ ಏನು? ಎಂಬುದೀಗ ಪ್ರಶ್ನೆ.

ಈಗ ಶಾಸ್ತ್ರಗಳು ಪರಸ್ಪರವಾಗಿ ಕಚ್ಚಾಡುವಂತೆ ತೋರುತ್ತಿದೆ. ಭಾರತದಲ್ಲಿಸದ್ಯಕ್ಕೆ ಹತ್ತಾರು ಮತಗಳು ಬೆರೆತು ಒಂದರ ಶಾಸ್ತ್ರವು ಮತ್ತೊಂದಕ್ಕೆ ವಿರೋಧವೆಂದು ಅನೇಕರು ಹೇಳುವದಕ್ಕೆ ಆರಂಭಿಸಿರುತ್ತಾರೆ. ಸರ್ಕಾರದ ಕಾನೂನುಗಳು ಬದಲಾಗುವಂತೆ ಶಾಸ್ತ್ರಗಳು ಕಾಲಕ್ಕೆ ತಕ್ಕಂತೆ ಬದಲಾಗತಕ್ಕದ್ದು ಯುಕ್ತ ಆದ್ದರಿಂದ ಈ ಕಾಲಕ್ಕೆ ಹೊಂದದೆ ಇರುವ ಶಾಸ್ತ್ರವನ್ನು ಕಡೆಗಣಿಸುವದು ಯುಕ್ತ ಎಂದು ಶಾಸ್ತ್ರವನ್ನು ಕೈ ಬಿಡುವದಕ್ಕೆ ಸಿದ್ಧರಾಗಿರುವವರೂ ಹಲವರಿದ್ದಾರೆ. ಮತ್ತೆ ಕೆಲವರು ಶಾಸ್ತ್ರವನ್ನು ಅಕ್ಷರಶಃ ನಂಬಿ ಅಂಧಶ್ರದ್ಧೆಯಿಂದ ಹೇಗೆಹೇಗೋ ಅರ್ಥವನ್ನು ಮಾಡಿಕೊಂಡು ನಡೆಯುವದು ಕಂಡುಬರುತ್ತಿದೆ. ಶಾಸ್ತ್ರಾರ್ಥವು ತಮ್ಮ ಮನಸ್ಸಿನ ಒಲವಿಗೆ ಹೊಂದದಿದ್ದರೆ ಅದನ್ನು ಅನಾದರಿಸಿ ಹೇಗೋ ಆಚಾರಗಳನ್ನು ಮಾರ್ಪಡಿಸಿಕೊಳ್ಳುವ ಒಲವು ಮನುಷ್ಯನ ಮನಸ್ಸಿನಲ್ಲಿ ಇರುತ್ತದೆ. ಬೆಂಟಿಂಕನ ಕಾಲದಿಂದೀಚೆಗೆ ಸಹಗಮನದ ಪದ್ಧತಿಯು ಕಾನೂನಿನ ನಿರ್ಬಂಧದಿಂದ ನಿಂತುಹೋಯಿತೆಂದು ಹೇಳುತ್ತಾರಷ್ಟೆ ಆದರೆ ಈ ಆಚಾರದ ಮಾರ್ಪಾಡು ಆದ ಕಾಲವಿಶೇಷವನ್ನು ಮನಸ್ಸಿಗೆ ತಂದುಕೊಳ್ಳುವದರಿಂದ ಪ್ರಯೋಜನವುಂಟು. ನಿಜವಾದ ಪತಿವ್ರತೆಯರೇ ಅಲ್ಲದ ಶ್ರದ್ಧಾರಹಿತರಾದ ಹೆಂಗಸರನ್ನೂ ಬಲಾತ್ಕಾರದಿಂದ ಅರಿಶಿನ ಕುಂಕುಮಗಳಿಂದಲಂಕರಿಸಿ ಬಾಹ್ಯವಾದ್ಯಾಡಂಬರಗಳಿಂದ ಸ್ಮಶಾನಕ್ಕೆ ಒಯ್ದು ಚಿತೆಯನ್ನೇರಿಸುವವರೆಗೂ ಶಾಸ್ತ್ರದ ಅಂಧ ಶ್ರದ್ಧಾಳುಗಳ ಅತ್ಯಾಚಾರವು ಏರಿತ್ತು. ಇಂಥ ಕಾಲದಲ್ಲಿ ಒಂದು ದಿನ ಬೆಂಟಿಂಕನು ಸಂಚಾರಕ್ಕೆ

ಹೊರಟು ದಾರಿಯಲ್ಲಿ ಸಹಗಮನಕ್ಕೆಂದು ತೆಗೆದುಕೊಂಡು ಹೋಗುತ್ತಿದ್ದ ಒಬ್ಬ ಸುಂದರಿಯಾದ ಹುಡುಗಿಯನ್ನು ಕಂಡು ಮೋಹಿಸಿ ಅವಳನ್ನು ಹಿಡಿತರಿಸಿ ಮದುವೆಯಾದನೆಂದೂ ಈ ಸಹಗಮನವಿರೋಧದ ಕಾನೂನನ್ನೂ ಜಾರಿಗೆ ತಂದನೆಂದೂ ನಾನು ಒಂದಾನೊಂದು ವೃತ್ತ ಪತ್ರಿಕೆಯಲ್ಲಿ ಓದಿದ್ದೆನು. ಇದರ ನಿಜವು ಹೇಗಾದರೂ ಇರಲಿ. ವೇದದಲ್ಲಿ ಹೇಳಿರುವ ಕೆಲವು ಕರ್ಮಾಚರಣೆಗಳೂ ಈಗ ಹೊರಗಿನ ಆನುಕೂಲ್ಯವು ಕಡಿಮೆಯಾಗಿರುವದರಿಂದ ತಮಗೆ ತಾವೇ ನಿಂತುಹೋಗಿರುವದು ಅನುಭವದಲ್ಲಿದೆ. ವೇದದಲ್ಲಿ ಹೇಳಿರುವ ಅಥವಾ ಮನುಷ್ಯನು ತನ್ನ ಸ್ವಾರ್ಥದಿಂದ ಮಾರ್ಪಡಿಸಿಕೊಂಡಿರುವ ಕರ್ಮಗಳೂ ಆಚರಣೆಗಳೂ ದೇಶಕಾಲಸನ್ನಿವೇಶಗಳ ಮಾರ್ಪಾಡುಗಳಿಂದ ಆಚರಣೆಗೆ ಬರುವದೂ ನಿಲ್ಲುವದೂ ಆಗಬಹುದು. ಆದರೆ ಸತ್ಯವನ್ನೇ ನುಡಿಯಬೇಕು, ಧರ್ಮವನ್ನೇ ಆಚರಿಸಬೇಕು, ಅಹಿಂಸೆಯನ್ನು ಅನುಸರಿಸಬೇಕು ಎಂದು ಮುಂತಾಗಿ ಹೇಳುವ ಸಾರ್ವತ್ರಿಕವಾದ ಶಾಸ್ತ್ರೋಪದೇಶವನ್ನು ಈ ತರಗತಿಗೆ ಸೇರಿಸುವದಕ್ಕೆ ಎಂದಿಗೂ ಬರುವದಿಲ್ಲ.

ಕಾನೂನನ್ನು ಮಾಡುವವರು ತಮ್ಮ ಸ್ವಾಭಿಪ್ರಾಯಕ್ಕೆ ಅನುಗುಣವಾಗಿ ತಮ್ಮ ತಮ್ಮ ನಡತೆಯನ್ನು ಸಾಧಿಸಿಕೊಳ್ಳುವ ತರ್ಕವನ್ನು ಮುಂದೊಡ್ಡಬಹುದು. ಉದಾಹರಣೆಗೆ ಒಂದು ಸಲ ಒಂದಾನೊಂದು ನಿವೇಶನವನ್ನು ಹರಾಜುಮಾಡಬೇಕಾಗಿದ್ದ ಸಂದರ್ಭದಲ್ಲಿ ಅದನ್ನು ತನಗೆ ನ್ಯಾಯಯುತವಾದ ಬೆಲೆಗೆ ಕೊಡಿಸಿಕೊಡಬೇಕೆಂದು ಕೇಳಿಕೊಂಡಿದ್ದ ಒಬ್ಬಾನೊಬ್ಬ ಅರ್ಜಿದಾರನ ಮನವಿಯನ್ನು ಸಮಾಲೋಚನೆಗೆ ತಂದುಕೊಂಡಾಗ ಮುನಿಸಿಪಾಲಿಟಿಯ ಸದಸ್ಯರಲ್ಲೊಬ್ಬನು ಥಿಯಾಸಫಿಸ್ಟಾಗಿರುವವರಿಗೆ ಏತಕ್ಕೆ ನಿವೇಶನ? ಎಂದನಂತೆ. ಮತ್ತೊಬ್ಬನು ಮೆಂಬರುಗಳಾದ ನಮ್ಮಲ್ಲಿ ಒಬ್ಬನಿಗಾದರೂ ಒಂದು ಸಲವಾದರೂ ಇವನು ಸಲಾಂ ಮಾಡಿದ್ದುಂಟೆ? ಎಂದನಂತೆ. ಇದು ಕರ್ತವ್ಯಾಕರ್ತವ್ಯವನ್ನು ವಿಭಾಗಿಸುವದಕ್ಕೆ ತಳಹದಿಯಾದ ಶಾಸ್ತ್ರದ ಪದ್ಧತಿಯಾದೀತೇನು? ಬೀದಿಯಲ್ಲಿ ಉಚಿತವಾಗಿ ಕೊಡುವ ಟೀಯನ್ನು ಕುಡಿಯುವವನೊಬ್ಬನು ಆಪತ್ಕಾಲದಲ್ಲಿ ಆಹಾರನಿಯಮವನ್ನು ಉಲ್ಲಂಘಿಸಬಹುದು ಎಂಬ ಶಾಸ್ತ್ರವನ್ನು ಉದಾಹರಿಸಿದರೆ ಅವನ ನಡತೆಯು ಶಾಸ್ತ್ರಮೂಲವೆನಿಸೀತೆ? ಒಂದು ಸಲ ಇಂಗ್ಲೆಂಡಿನಲ್ಲಿ ಶ್ರೀ ಚರ್ಚಿಲ್‌ರವರ ಎದುರು ಪಕ್ಷದವರು ಅವರು ಸತ್ತರೆಂದು ಅಪಪ್ರಚಾರಮಾಡಿದರಂತೆ, ಅವರು ತಮ್ಮ ಮನೆಗೆ ಬಂದವರೊಡನೆ ಸಂಭಾಷಣೆ ಮಾಡುವಾಗ "ಇದನ್ನು ಚುನಾವಣೆ ಕಾಲದಲ್ಲಿ ಮಾಡಬೇಕಾಗಿತ್ತು" ಎಂದರಂತೆ. ಇಂಥ ನೀತಿಯು ಶಾಸ್ತ್ರೀಯವೆಂದು ನಮ್ಮಲ್ಲಿ ಯಾರಾದರೂ ನಂಬಿಯಾರೇನು?

ಬಹುಮತಕ್ಕೆ ಅನುಗುಣವಾದ ಮಾತ್ರದಿಂದ ಒಂದಾನೊಂದು ವರ್ತನೆಯು ಶಾಸ್ತ್ರೀಯವೆಂದು ನಿರ್ಣಯಿಸುವದಕ್ಕಾಗುವದಿಲ್ಲ. ಈಗ ಹಿಂದೂ ಕೋಡ್ ಜಾರಿಗೆ ಬಾರದಂತೆ ತಡೆಯಲು ಬಹುಕಡೆಯಿಂದ ಪ್ರತಿಭಟನೆಯು ಬರುತ್ತಿದೆಯಲ್ಲವೇ ಆದರೆ ಷೋಲಾಪುರದಲ್ಲಿ

ಮಹಿಳೆಯರೆಲ್ಲ ಸೇರಿ ಇದು ಕೂಡಲೆ ಜಾರಿಗೆ ಬರುವದು ಅತ್ಯವಶ್ಯಕವೆಂದು ವಾದಿಸಿದರೆಂದು ಪತ್ರಿಕೆಗಳಲ್ಲಿ ಬರೆದಿತ್ತು! ಗುಂಪಿನ ಕೂಗಾದರೆ ಮಾತ್ರ ಸಾರ್ವತ್ರಿಕವೆಂದೂ ನ್ಯಾಯವೆಂದೂ ಒಪ್ಪುವದಕ್ಕಾಗುವದಿಲ್ಲ.

ಆಳತಕ್ಕವರು ಕಾನೂನನ್ನು ನಡೆಸುವವರೇ ಹೊರತು ಕಾನೂನನ್ನು ಮಾಡುವವರಲ್ಲ ಎಂದು ಭಾರತದಲ್ಲಿ ಹೇಳಿದೆ. ಈಗಿನ ಸರ್ಕಾರದಲ್ಲಿರುವ ಸದಸ್ಯರುಗಳೇನೂ ಆಚಾರ್ಯಪುರುಷರುಗಳಲ್ಲ. ಹಿಂದುಗಳಾಗಲಿ ಮಹಮ್ಮದೀಯರಾಗಲಿ ಅಥವಾ ಬೇರೆ ಮತದವರಾಗಲಿ ಅವರಿಗೆ ಧರ್ಮವಿಚಾರದಲ್ಲಿಅಧಿಕಾರವನ್ನು ವಹಿಸಿರುವದಿಲ್ಲ. ಹೀಗಿದ್ದರೂ ಇವರು ತಾವು ಲೌಕಿಕಸರಕಾರ (Secular State) ವನ್ನು ನಡೆಸುವವರೆಂದುಕೊಂಡು ಈ ಧರ್ಮಸಂಬಂಧವಾದ ಕಾನೂನಿಗೆ ಏಕೆ ಕೈಹಾಕಿರುವರೋ ಈಶ್ವರನೇ ಬಲ್ಲ. ಈಗ ಇಬ್ಬರು ಹೆಂಡಿರನ್ನು ಮದುವೆಮಾಡಿಕೊಳ್ಳಕೂಡದೆಂಬ ಕಾನೂನು ಮುಂದಕ್ಕೆ ಬಂದಿದೆಯಷ್ಟೆ. ಇದು ಯಾವ ದೋಷವನ್ನು ಪರಿಹಾರಮಾಡುವದಕ್ಕೆ ಬಂದದ್ದು? ಇಬ್ಬರು ಹೆಂಡಿರನ್ನು ಮದುವೆಮಾಡಿಕೊಂಡಿರುವವರು ಈಗ ಸಮಾಜದಲ್ಲಿ ಎಷ್ಟು ಜನರಿದ್ದಾರೆ? ಈ ಕಾನೂನನ್ನು ತಲೆಯಲ್ಲಿಟ್ಟುಕೊಂಡಿರುವವನು ಯುಗಾಂತರದಲ್ಲಿ ಕಾರಣವಿಶೇಷಗಳಿಂದ ಇಬ್ಬರು ಮೂವರನ್ನು ಮದುವೆಯಾಗಿದ್ದ ಯಾಜ್ಞವಲ್ಕ್ಯ, ಕಶ್ಯಪ, ದಶರಥ ಮುಂತಾದವರನ್ನೂ ಅಸಡ್ಡೆಯಿಂದ ಕಾಣುವದಕ್ಕೆ ಒಂದಿಷ್ಟು ಅವಕಾಶವಾದೀತು, ಅಷ್ಟೆ. ರಾಜನು ಯಾವ ಜನರನ್ನು ಆಳುತ್ತಾನೋ ಆ ಜನರ ಧರ್ಮವನ್ನು ಕಾಪಾಡಿಕೊಡಬೇಕು. ಯಾವ ಧರ್ಮವೂ ಇಲ್ಲದ ಅನಾಗರಿಕರಿಗೆ ತನ್ನ ಧರ್ಮವನ್ನು ಕೊಡಬಹುದು ಎಂದು ನಮ್ಮ ದೇಶದ ಶಾಸ್ತ್ರಗಳಲ್ಲಿದೆ.

ಶಾಸ್ತ್ರವೆಲ್ಲವೂ ಐಹಿಕಫಲವನ್ನೇ ದೃಷ್ಟಿಯಲ್ಲಿಟ್ಟುಕೊಂಡಿರುವದಿಲ್ಲ, ಆಮುಷ್ಮಿಕ ಸುಖವು ಮುಖ್ಯವಾಗಿ ಅದರ ದೃಷ್ಟಿಯಲ್ಲಿದೆ. ಎಂಜಲು ತಿಂದರೆ ಆಗುವ ಅನರ್ಥವೇನು? ಎಂಬ ಆಕ್ಷೇಪಕ್ಕೆ ಐಹಿಕದೃಷ್ಟಿಯಿಂದ ನಾವು ಯಾವ ಪರಿಹಾರವನ್ನೂ ಸುಲಭವಾಗಿ ಹೇಳುವದು ಆಗಲಾರದು. ಆದರೂ ಅದು ನಿಷಿದ್ಧಾಚಾರ ಎಂಬುದರಲ್ಲಿ ಸಂಶಯವಿಲ್ಲ. ಪಾಶ್ಚಾತ್ಯರಲ್ಲಿಹುಟ್ಟಿದ ಬಹುಜನಾನುಕೂಲವಾದ ಯುಟಿಲಿಟೇರಿಯನ್ ಥಿಯರಿ (Utilitarian Theory) ಎಂಬ ವಾದವನ್ನು ಪಾಶ್ಚಾತ್ಯರೇ ಖಂಡಿಸಿರುತ್ತಾರೆ. ಆದರೂ ಈ ಕಲ್ಪನೆಯು ಈಗ ಅದೇಕೋ ಬಹುಜನರ ಆಚರಣೆಯೊಳಗೆ ಬರುವಂತೆ ತೋರುತ್ತದೆ. ಶಾಸ್ತ್ರವು ಸಾರ್ವತ್ರಿಕವಾದದ್ದನ್ನೂ ಅಸ್ವಾರ್ಥವಾದದ್ದನ್ನೂ ತಿಳಿಸುತ್ತದೆ. ಇದು ಕಾಮದ ಮುಂದೋಟವನ್ನು ತಡೆಯುತ್ತದೆ. ದೂರದೃಷ್ಟಿಯಿಂದ ಪುರುಷನ ಹಿತಾಹಿತಗಳನ್ನು ನಿಶ್ಚಯಿಸುವದೇ ಶಾಸ್ತ್ರದ ಗುರಿಯು. ಅದಕ್ಕೂ ಸ್ವಾರ್ಥದಿಂದ ಮನುಷ್ಯರು ಆಗಾಗ್ಗೆ ಏರ್ಪಡಿಸಿಕೊಳ್ಳುವ ನಿಯಮನಿಬಂಧನೆಗಳಿಗೂ ಯಾವ ಸಂಬಂಧವೂ ಇರುವದಿಲ್ಲ. ಮನುಷ್ಯಕೃತನಿಯಮವು ಕೃತಕವಾಗಿದ್ದು ಸ್ವಲ್ಪಕಾಲದಲ್ಲಿಯೇ ತನ್ನೊಳಗಡಗಿರುವ

ದೋಷವನ್ನು ಹೊರಗೆಡಹುವದು. ಶಾಸ್ತ್ರವು ಯಾವಾಗಲೂ ಪುರುಷನ ಹಿತವನ್ನೇ ತೋರಿಸುತ್ತಾ ಅವನ ಪ್ರವೃತ್ತಿ ನಿವೃತ್ತಿಗಳಲ್ಲಿ ತಾನೂ ಉದಾಸೀನವಾಗಿರುವದು.

ಸನ್ಮಾರ್ಗದಲ್ಲಿ ನಡೆಯಬೇಕೆಂಬ ಶ್ರದ್ಧೆಯೇನೋ ಇರುತ್ತದೆ. ಆದರೆ ಶಾಸ್ತ್ರದ ವಿಧಿಯು ತಮಗೆ ತೋರಿರುವದಿಲ್ಲ. ಅಂಥವರು ವೃದ್ಧವ್ಯವಹಾರವನ್ನು ಕಂಡು ತಮಗೆ ತಿಳಿದಂತೆ ಪೂಜಾದಿಗಳನ್ನು ಮಾಡುತ್ತಿರುತ್ತಾರೆ. ಈ ಗುಂಪಿನ ಜನರನ್ನು ಸಾತ್ತ್ವಿಕರೆನ್ನಬೇಕೊ ? ರಾಜಸರೆನ್ನ ಬೇಕೊ? ತಾಮಸರೆನ್ನಬೇಕೊ? ಎಂಬ ಅರ್ಜುನನ ಪ್ರಶ್ನೆಗೆ ಭಗವಂತನು ಶ್ರದ್ಧೆಯು ಮೂರು ಬಗೆಯಾಗಿರುತ್ತದೆ. ಅವರವರ ಶ್ರದ್ಧೆಯ ಮಟ್ಟವನ್ನು ಅರಿತು ಅವರವರನ್ನು ಸಾತ್ತ್ವಿಕಾದಿಗಳಲ್ಲಿ ಯಾವ ನಿಷ್ಠೆಯವರೆಂಬುದನ್ನು ನಿರ್ಧರಿಸಬೇಕು ಎಂದಿದ್ದಾನೆ. ಒಬ್ಬನಿಗೆ ಶಾಸ್ತ್ರವು ತಿಳಿಯದೆನ್ನೋಣ; " ನೀನು ಮಾಡಿದ್ದು ಸರಿಯಲ್ಲ" - ಎಂದು ಯಾರಾದರೂ ಬಲ್ಲವರು ಹೇಳಿದರೆ " ಹಾಗೆಯೆ? " ತಿಳಿಯದೆ ಹಾಗೆ ಮಾಡಿದೆ, "ಇನ್ನು ಮೇಲೆ ಮಾಡುವದಿಲ್ಲ" ಎಂದು ಹೇಳುತ್ತಾನೆ. ಅವನು ಸಾತ್ತ್ವಿಕನು. ರಾಜಸನಾದವನು 'ಏಕೆ ಮಾಡಬಾರದು?' ಎಂದು ಆಕ್ಷೇಪವನ್ನು ಮಾಡುತ್ತಾನೆ. ತಾಮಸನು ಯಾರ ಮಾತನ್ನೂ ಮನಸ್ಸಿಗೇ ಹತ್ತಿಸಿಕೊಳ್ಳುವದಿಲ್ಲ.

ಸ್ವಭಾವವೆಂಬುದು ಹುಟ್ಟುಗುಣವೆಂಬುದನ್ನು ನಾವು ಕೇಳಿರುತ್ತೇವೆ. ಬೇವಿನ ಬೀಜದಿಂದ ಮಾವಿನಗಿಡವು ಹುಟ್ಟೀತೆ ? ಮನಸ್ಸಿನ ಸ್ವಭಾವವೂ ಹೀಗೆಯೇ ಬದಲಾಗದ್ದು ಎಂಬುದು ಜನರ ಅಭಿಪ್ರಾಯ. ಈ ಸ್ವಭಾವವು ಹಿಂದಿನ ಜನ್ಮದ ಸಂಸ್ಕಾರಮೂಲಕವಾದದ್ದೆಂದು ಶಾಸ್ತ್ರದಲ್ಲಿ ಹೇಳಿದೆ. ಇದನ್ನು ಸ್ವಭಾವವೆಂದರೂ ಇದು ಎಂದಿಗೂ ಬದಲಾಗುವದೇ ಇಲ್ಲವೆಂದು ತಿಳಿಯಬಾರದು. ಶಾಸ್ತ್ರವು ಮನಃಸ್ವಭಾವವನ್ನು ಉತ್ತಮಗೊಳಿಸುವದಕ್ಕಾಗಿಯೇ ಬಂದಿರುತ್ತದೆ. ಅಂತಃಕರಣದ ಸ್ವಭಾವವು ಹಿಂದೆ ಹೇಗಿತ್ತು?, ಈಗ ಹೇಗಿದೆ ?, ಎಂಬುದನ್ನು ನೋಡಿ ಮುಂದೆ ಎತ್ತ ತಿರುಗಬಹುದೆಂಬುದನ್ನು ಗೊತ್ತುಪಡಿಸಬಹುದು. ವಿಭೀಷಣನು ರಾಮನಲ್ಲಿಗೆ ಶರಣುಬಂದಾಗ ಅವನನ್ನು ಸ್ವೀಕರಿಸಬೇಕೆ? ಬಾರದೆ ? ಎಂಬ ವಿಷಯಕ್ಕೆ ರಾಮನ ಸಭೆಯಲ್ಲಿ ಭಿನ್ನಾಭಿಪ್ರಾಯಗಳು ಬಂದವು. ಕೆಲವರು ಶತ್ರುಪಕ್ಷದಿಂದ ಬಂದಿರುವ ಅವನನ್ನು ಸ್ವೀಕರಿಸುವದು ಅಪಾಯಕರವೆಂದು ಅಭಿಪ್ರಾಯಪಟ್ಟರು. ಮತ್ತೆ ಕೆಲವರು ಇವನನ್ನು ಪರೀಕ್ಷಿಸಿ ಸೇರಿಸಿಕೊಳ್ಳಬಹುದೆಂದು ಅಭಿಪ್ರಾಯಪಟ್ಟರು. ವಿಭೀಷಣನ ಹಿಂದಿನ ವರ್ತನೆಯನ್ನು ಪರೀಕ್ಷಿಸಿದ್ದ ಹನುಮಂತನು ಮಾತ್ರ ಅವನನ್ನು ಯಾವ ಅಡ್ಡಿಯೂ ಇಲ್ಲದೆ ಸೇರಿಸಿಕೊಳ್ಳಬಹುದೆಂದು ಅಭಿಪ್ರಾಯಪಟ್ಟನು.

ಶ್ರದ್ಧೆಯೆಂದರೆ ಒಲವು. ಮಕ್ಕಳನ್ನು ಅವರವರ ಇಚ್ಛೆಯಂತೆ ಹರಿಯ ಬಿಟ್ಟು ಅವರವರ ಮನಸ್ಸಿನ ಒಲವನ್ನು ಕಂಡುಹಿಡಿದು ಅವರನ್ನು ಮುಂದೆ ನಡೆಯಿಸಬೇಕು ಎಂದು ಕೆಲವು ಮನಃಶ್ಯಾಸ್ತ್ರಜ್ಞರು ಬೋಧಿಸಿರುತ್ತಾರೆ. ಖಾಡಾ ಖಾಡಿಯ ಯುದ್ಧವು ನಡೆದು ಸೋತ ಪಟ್ಟಣವನ್ನು ನುಗ್ಗಿ ಬಂದ ಸೈನ್ಯದವರ ಮನಸ್ಸೆಲ್ಲ ಒಂದೇ ಬಗೆಯದಾಗಿರುತ್ತದೆಯೆ ? ಕೆಲವು ಸೈನಿಕರಿಗೆ ಒಳಹೊಕ್ಕು ಲೂಟಿಮಾಡಿಬಿಡೋಣವೆನ್ನಿಸಿಬಿಡುತ್ತದೆ. ಇನ್ನು ಕೆಲವರಿಗೆ ತಮ್ಮ ರಾಷ್ಟ್ರದ ಗೌರವಕ್ಕೆ ಕುಂದುಬಾರದಂತೆ ನಡೆದುಕೊಳ್ಳಬೇಕೆಂಬ ಮನಸ್ಸಿರುತ್ತದೆ. ಇಂಥ ಸಂದರ್ಭದಲ್ಲಿ ಸೇನಾಪತಿಯ ಮನಸ್ಸಿನ ಒಲವು ಸೇನೆಯ ವರ್ತನೆಯನ್ನು ಗೊತ್ತು ಪಡಿಸುತ್ತದೆಯಲ್ಲವೆ ? ನಮ್ಮ ಅಂತಃಕರಣವು ಹೇಗಿರುತ್ತದೆಯೋ ನಮ್ಮ ಶ್ರದ್ಧೆಯೂ ನಮ್ಮ ವರ್ತನೆಯೂ ಅದಕ್ಕನುಗುಣವಾಗಿಯೇ ಇರುವದೆಂಬುದನ್ನು ಹೀಗೆಯೇ ತಿಳಿಯಬೇಕು. ಬ್ಯಾರಿಸ್ಟರಾಗಿದ್ದ ಗಾಂಧಿಯು ದಕ್ಷಿಣಆಫ್ರಿಕದಲ್ಲಿ ಸತ್ಯಾಗ್ರಹಿಯಾಗಿ ಪರಿಣಮಿಸಿದನಷ್ಟೆ ; ಇದು ಶ್ರದ್ಧೆಯ ಫಲವಲ್ಲದೆ ಮತ್ತೇನು ? ಶಾಸ್ತ್ರವನ್ನು ತಿಳಿಯದವನೂ ತನ್ನ ಮನಸ್ಸಿನ ಒಲವನ್ನು ಸಾತ್ತ್ವಿಕಮಾರ್ಗದಲ್ಲಿಯೇ ಮುನ್ನಡೆಯಿಸಿಕೊಂಡರೆ ಅವನು ಶಾಸ್ತ್ರದಂತೆ ನಡೆದಂತೆಯೇ ಎಂದು ಭಾವಿಸಬೇಕು. ಚಿಕ್ಕವಯಸ್ಸಿನಲ್ಲಿಯೇ ಕೆಲವರಿಗೆ ಸನ್ಮಾರ್ಗದಲ್ಲಿ ಪ್ರವೃತ್ತಿ ಉಂಟಾಗುತ್ತದೆ. ಮತ್ತೆ ಕೆಲವರಿಗೆ ಯಾರೂ ಹೇಳಿಕೊಡದೆಯೇ ಕಳ್ಳತನವೇ ಮುಂತಾದದ್ದರಲ್ಲಿ ಪ್ರವೃತ್ತಿಯುಂಟಾಗುತ್ತದೆ. ಆಂಧ್ರದೇಶದಲ್ಲಿ ಆದಿದ್ರಾವಿಡ ಬಾಲಕನೊಬ್ಬನು ಮೌನಿಯಾಗಿ ಬಾಲಯೋಗಿಯಾಗಿರುತ್ತಾನೆಂದು ಪತ್ರಿಕೆಗಳಲ್ಲಿ ಪ್ರಕಟಿಸಿದೆ. ಆ ಜಾತಿಯವರಲ್ಲಿ ಮಿಕ್ಕ ಯಾರೂ ಹೀಗಿಲ್ಲದಿದ್ದರೂ ಈ ಹುಡುಗನಿಗೆ ಮಾತ್ರ ಹೀಗೆ ಮನಸ್ಸಿನ ಒಲವು ಇರುವದಕ್ಕೆ ಜನ್ಮಾಂತರಸಂಸ್ಕಾರವಿಶೇಷದಿಂದುಂಟಾದ ಶ್ರದ್ಧೆಯಲ್ಲದೆ ಮತ್ತೆ ಯಾವ ಕಾರಣವನ್ನು ಹೇಳಲಾದೀತು? ಶಾಸ್ತ್ರದಲ್ಲಿ ಜಾತಿಬ್ರಾಹ್ಮಣ, ಗುಣಬ್ರಾಹ್ಮಣ - ಎಂದು ವಿಂಗಡಿಸಿರುವದು ಈ ಸ್ವಾಭಾವಿಕ ಶ್ರದ್ಧೆಯನ್ನನುಸರಿಸಿಯೇ.

ಶ್ರದ್ಧೆಯನ್ನು ಆಯಾ ಪ್ರವೃತ್ತಿಯಿಂದ ಗುರುತಿಸಿಕೊಳ್ಳಬೇಕಾಗುವದು. ಯಾವನು ಯಾವ ಬಗೆಯ ಶ್ರದ್ಧೆಯಿಂದ ಪ್ರವರ್ತಿಸುತ್ತಾನೋ ಅದಕ್ಕನುಗುಣವಾಗಿ ಅವನ ಪ್ರವೃತ್ತಿಯುಂಟಾಗುತ್ತದೆ. ಸಾತ್ತ್ವಿಕರು ದೇವತೆಗಳನ್ನು ಪೂಜಿಸುತ್ತಾರೆ; ರಾಜಸರು ಯಕ್ಷರಾಕ್ಷಸರನ್ನು ಪೂಜಿಸುತ್ತಾರೆ; ಇನ್ನು ತಾಮಸರು ಪ್ರೇತಗಣಗಳನ್ನೂ ಭೂತಗಣಗಳನ್ನೂ ಪೂಜಿಸುತ್ತಾರೆ. ದೇವತೆಗಳನ್ನು ಪೂಜೆ ಮಾಡುವವರು ಎಲ್ಲರೂ ಸಾತ್ತ್ವಿಕರೆಂದು ಇಲ್ಲಿ ಹೇಳಿರುವದು ಒಟ್ಟಿನ ದೃಷ್ಟಿಯಿಂದ. ಹಿತವಾದದ್ದು ಆಗಬೇಕು - ಅಹಿತವಾದದ್ದು ಆಗಬಾರದು; ಎಂದು ಪೂಜೆಮಾಡುವವರೂ ಉಂಟು. ಒಬ್ಬನಿಗೆ ಕೋರ್ಟಿನಲ್ಲಿ ಜಯವಾಗಬೇಕು. ಏನಾದರೂ ಮಾಡಿ ಪ್ರತಿವಾದಿಗೆ ವಿರೋಧವಾಗುವಂತೆ ಸಾಕ್ಷಿಯಿಂದ ಆಡಿಸಬೇಕು - ಎಂದು ಈಶ್ವರನ ಅನುಗ್ರಹವನ್ನು ಅಪೇಕ್ಷಿಸಿ ಪೂಜೆಮಾಡುವವರೂ ಉಂಟು. ಅಷ್ಟಮಿಯ ದಿನ ದೇವಿಯ ಅನುಗ್ರಹಾರ್ಥವಾಗಿ ಒಬ್ಬರು ಬ್ರಾಹ್ಮಣನಿಗೆ ಹಸ್ತೋದಕವನ್ನು ಹಾಕಿಸುತ್ತಿದ್ದರು. ಅವರು ಆ ದಿನ ಹಸಿ ಈರುಳ್ಳಿ ಗೊಜ್ಜು ಮಾಡಿಸಿಯೇ ತೀರಬೇಕೆಂಬುದು

ಆಚಾರವೆಂದಿಟ್ಟುಕೊಂಡಿದ್ದರು. ಆ ಆಚಾರಕ್ಕೆ ಧಕ್ಕೆ ಬಂದರೆ ದೇವಿಗೆ ಅಪ್ರೀತಿಯಾಗುವದೆಂದು ಅವರ ಅಭಿಪ್ರಾಯ. ಹೀಗೆಲ್ಲ ಇರುವದಕ್ಕೆ ಅವರವರ ಮನಸ್ಸಿನ ಒಲವೇ ಕಾರಣ. ಮಾರಿಮಸಣಿಗಳಿಗೆ ಜೀವಕ್ಕೆ ಜೀವ ಕೊಟ್ಟು ಬದುಕುತ್ತೇವೆಂದು ಆಶೆಯಿಟ್ಟುಕೊಂಡಿರುವವರೂ ಉಂಟು.

ಈ ಮೂರು ವಿಧದ ಶ್ರದ್ಧೆಗಳಲ್ಲಿಯೂ ಜನರು ದೇವರ ಪೂಜೆಯಲ್ಲಿಯೇ ನಿರತರಾಗಿರುವರೆಂಬುದನ್ನು ಲಕ್ಷ್ಯದಲ್ಲಿಡಬೇಕು. ಸಾತ್ತ್ವಿಕರೂ ರಾಜಸರೂ ತಾಮಸರೂ ಅವರವರ ಮನಸ್ಸಿಗೆ ಅನುಗುಣವಾಗಿ ಪೂಜೆಯನ್ನು ಮಾಡುವರು. ಮಾಂಸಾಹಾರಿಗಳು ದೇವರಿಗೆ ಪ್ರಾಣಿಬಲಿಯನ್ನು ಕೊಡುವ ಪದ್ಧತಿಯು ರಾಜಸವೇ ಸರಿ. ಅಥವಾ ಅದರಲ್ಲಿ ತಾಮಸಶ್ರದ್ಧೆಯ ಅಂಶವೂ ಇರಬಹುದು. ಆದರೆ ಈ ಪೂಜಾಕ್ರಮದಲ್ಲಿ ಬಲಿಯನ್ನು ಕೊಡುವದು ತಪ್ಪೆಂದು ಕೂಗಾಡುತ್ತಿರುವ ಈಗಿನ ಸುಧಾರಕರು ಸುಧಾರಣೆಯ ಗುರಿಯನ್ನು ತಪ್ಪಿರುತ್ತಾರೆ. ಮಾಂಸಾಹಾರಿಯಾದವನು ಸಸ್ಯಾಹಾರಿಯಂತೆಯೇ ತನ್ನ ಆಹಾರವನ್ನು ದೇವರಿಗೆ ಅರ್ಪಿಸಿ ಪ್ರಸಾದವನ್ನಾಗಿ ಮಾಡಿಕೊಂಡು ತಿನ್ನುವ ಪದ್ಧತಿಯು ಪದಾರ್ಥದ ದೃಷ್ಟಿಯಿಂದ ಪ್ರಶಸ್ತ್ಯವಾಗಿರುತ್ತದೆ. ಅವನನ್ನು ಮಾಂಸಾಹಾರ ಪದ್ಧತಿಯಿಂದ ಹಿಂತಿರುಗಿಸಿ ಸಸ್ಯಾಹಾರದಲ್ಲಿ ಪ್ರವರ್ತಿಸುವಂತೆ ಮಾಡುವದು ಒಳ್ಳೆಯದೇ ಸರಿ; ಆದರೆ ಅವನ ಆಹಾರ ಕ್ರಮವು ಬದಲಿಸದೆ ಇರುವಾಗ ಬಲಿಯ ಪದ್ಧತಿಯನ್ನು ಮಾತ್ರ ನಿಲ್ಲಿಸುವದಕ್ಕೆ ಹೋಗುವದು ಅವನಲ್ಲಿರುವ ಅಲ್ಪಸ್ವಲ್ಪ ದೈವಶ್ರದ್ಧೆಯನ್ನೂ ತಪ್ಪಿಸಿದಂತೆ ಆಗುತ್ತದೆ. ಬುದ್ಧನ ಕಾಲದಲ್ಲಿ ಯಜ್ಞಯಾಗಾದಿಗಳ ಆಡಂಬರವು ಹೆಚ್ಚಾಗಿ ಅವುಗಳ ನಿಜವಾದ ಮರ್ಮವು ಜನರ ಕೈಬಿಟ್ಟು ಹೋಗುತ್ತಿತ್ತು. ಅಂತಹ ಸಂದರ್ಭದಲ್ಲಿ ಬುದ್ಧನು ಯಜ್ಞಶಾಲೆಗಳಿಗೇ ಬಂದು " ಪ್ರಾಣಿಗಳಿಗೆ ಪ್ರಾಣವನ್ನು ಕೊಡುವ ಶಕ್ತಿಯು ನಮಗೇನೂ ಇಲ್ಲದಿರುವಾಗ ಅವುಗಳನ್ನು ಕೊಂದುಹಾಕುವದು ಯಾವ ನ್ಯಾಯ?"- ಎಂದು ಮುಂತಾಗಿ ಬೋಧಿಸಿದ್ದಲ್ಲದೆ " ನಿಮ್ಮ ಯಜ್ಞಕ್ಕೆ ಒಂದು ಪ್ರಾಣಿಯ ವಧೆಯು ಅತ್ಯವಶ್ಯಕವಾಗಿದ್ದರೆ ಈ ಮೂಗುಪ್ರಾಣಿಗಳ ಬದಲು ನನ್ನನ್ನೇ ಬಲಿಯಾಗಿ ಕೊಡಿ" - ಎಂದು ಅಂಗಲಾಚಿ ಬೇಡಿಕೊಂಡನಂತೆ. ಬೌದ್ಧರ ನಿರೀಶ್ವರವಾದವು ವೈದಿಕರಿಗೆ ಒಪ್ಪಾಗದೆ ಹೋದರೂ ಬುದ್ಧನ ಈ ದಯಾಪೂರಿತವಾದ ವರ್ತನೆಯಿಂದ ಅಹಿಂಸಾವಾದವು ಅವರಲ್ಲಿ ಚೆನ್ನಾಗಿ ಬೇರೂರಿತು. ಅವರಲ್ಲಿ ಅನೇಕರು ಮಾಂಸಾಹಾರವನ್ನು ತೊರೆದು ಸಸ್ಯಾಹಾರಿಗಳೇ ಆಗಿಬಿಟ್ಟರು.

ಒಬ್ಬ ಪರಮಾತ್ಮನೇ ಸಾತ್ತ್ವಿಕರ ದೃಷ್ಟಿಯಿಂದ ದೇವತೆಗಳಾಗಿಯೂ ರಾಜಸರ ದೃಷ್ಟಿಯಿಂದ ಯಕ್ಷರಾಕ್ಷಸರುಗಳಾಗಿಯೂ ತಾಮಸರ ದೃಷ್ಟಿಯಿಂದ ಭೂತಪ್ರೇತಗಳಾಗಿಯೂ ಪೂಜ್ಯನಾಗಿರುತ್ತಾನೆ. ಅವರವರ ಶ್ರದ್ಧೆಯಿಂದ ಆಯಾ ಬಗೆಯ ಪೂಜಾಕ್ರಮದಲ್ಲಿ ಪ್ರವೃತ್ತಿಯುಂಟಾಗಿರುತ್ತದೆ. ತಿಳಿವಳಿಕೆಯುಳ್ಳವರು ಶ್ರದ್ಧೆಯ ಮಟ್ಟವನ್ನೇ ಮೇಲಕ್ಕೇರಿಸುವ ಪ್ರಯತ್ನವನ್ನು ಮಾಡಬೇಕಲ್ಲದೆ ಆಚಾರಮಾತ್ರವನ್ನು ತಪ್ಪಿಸುವದಕ್ಕೆ ಹೋಗಬಾರದು.



# ೧೬೩. ಆಹಾರಾದಿಗಳಲ್ಲಿ ಸಾತ್ತ್ವಿಕಾದಿಭೇದ 17 - (5-8)

**(26-2-50)**

ಯಾರು ಶಾಸ್ತ್ರದ ತಿಳಿವಳಿಕೆಯು ಸಾಕ್ಷಾತ್ತಾಗಿಲ್ಲದೆ ಶ್ರದ್ಧೆಯಿಂದ ಕೂಡಿ ಪೂಜಿಸುವರೋ ಅವರ ನಿಷ್ಠೆಯು ಸಾತ್ತ್ವಿಕಾದಿಗಳಲ್ಲಿ ಯಾವದು?- ಎಂಬುದು ಅರ್ಜುನನ ಪ್ರಶ್ನೆ. ಇದಕ್ಕೆ ಉತ್ತರವಾಗಿ ಭಗವಂತನು ಶ್ರದ್ಧೆಯು ಸಾತ್ತ್ವಿಕಾದಿ ಪ್ರಭೇದಗಳಲ್ಲಿ ಯಾವದಾಗಿರುವದೋ ಅದರಿಂದಾದ ಪ್ರವೃತ್ತಿಯು ಅದಕ್ಕನುಗುಣವಾಗಿ ಸಾತ್ತ್ವಿಕಾದಿಪ್ರಭೇದಗಳುಳ್ಳದ್ದಾಗಿ ಕಾಣಿಸಿಕೊಳ್ಳುವದು - ಎಂದು ಹೇಳಿರುತ್ತಾನೆ. ಮನುಷ್ಯನ ಶ್ರದ್ಧೆಯನ್ನು ಮಾರ್ಪಡಿಸುವದರಿಂದ ಅವನ ಪೂಜಾದಿಪ್ರವೃತ್ತಿಯನ್ನು ತಾಮಸದಿಂದ ರಾಜಸಕ್ಕೂ ರಾಜಸದಿಂದ ಸಾತ್ತ್ವಿಕಕ್ಕೂ ಏರಿಸಬಹುದು. ಬರಿಯ ಆಚಾರವನ್ನು ತಪ್ಪಿಸುವದಕ್ಕೆ ಮಾಡುವ ಪ್ರಯತ್ನವು ನಿಜವಾಗಿ ಫಲಕಾರಿಯಾಗಲಾರದು. ಮನುಷ್ಯನು ಎಂಥ ಮನಸ್ಸಿನ ಒಲವುಳ್ಳವನಾಗಿರುತ್ತಾನೋ ಅವನ ಪ್ರವೃತ್ತಿಯೂ ಹಾಗೆಯೇ ಇರುತ್ತದೆ. ಒಬ್ಬಾನೊಬ್ಬ ಮನುಷ್ಯನು ಈಚೆಗೆ ಕಾಳಿಕಾದೇವಿಗೆ ನೈವೇದ್ಯಸಮರ್ಪಣೆ ಮುಂತಾದದ್ದನ್ನು ಮಾಡುವದು ಕಡಿಮೆಮಾಡಿರುತ್ತಾನೆ. ಇದೇಕೆ ? ಎಂದು ಒಬ್ಬರು ಪ್ರಶ್ನೆಮಾಡಿದ್ದಕ್ಕೆ ಅವನಿಗೆ ಹಲ್ಲು ಬಿದ್ದುಹೋಗಿರುವದರಿಂದ ಈಚೆಗೆ ಅಷ್ಟು ಚಟುವಟಿಕೆ ಇಲ್ಲ- ಎಂದು ಒಬ್ಬರು ಉತ್ತರಕೊಟ್ಟರಂತೆ - ಎಂದು ಶ್ರೀರಾಮಕೃಷ್ಣಪರಮಹಂಸರು ಹೇಳಿರುತ್ತಾರೆ.

ತೆಂಗಿನಕಾಯಿಯನ್ನು ದೇವರಿಗೆ ನೈವೇದ್ಯಮಾಡಿ ಚಟ್ನಿ ಮೊದಲಾದವುಗಳಿಗೆ ಉಪಯೋಗಿಸಿಕೊಳ್ಳುವ ಮನುಷ್ಯನು ಸ್ವಾರ್ಥದಿಂದಲೇ ಪ್ರವರ್ತಿಸುತ್ತಿದ್ದರೂ ಈಶ್ವರನ ಹೆಸರು ಹೇಳುವ ಅವನು ಕೇವಲ ನಾಸ್ತಿಕನಿಗಿಂತ ಎಷ್ಟೋ ಉತ್ತಮನೆಂದು ಹೇಳಬೇಕು. ತಿಳಿವಳಿಕೆಯುಳ್ಳವರು ಅವನ ಒಲವನ್ನು ಹಾಗೆಯೇ ತಿದ್ದಿ ಈಶ್ವರನ ಭಕ್ತಿಯಾಗಿ ಮಾರ್ಪಡಿಸುವದಕ್ಕೆ ಅದೂ ಒಂದು ಸಾಧಕವಾಗಬಹುದು. ಆದರೆ ಬಲಾತ್ಕಾರದಿಂದ ರಾಜಸ ತಾಮಸಪದ್ಧತಿಗಳನ್ನು ನಿಲ್ಲಿಸುವದಕ್ಕೆ ಮಾಡುವ ಪ್ರಯತ್ನವು ಯಾವ ನಿಜವಾದ ಪರಿಣಾಮವನ್ನೂ ಕೊಡುವದಿಲ್ಲ. ಜಾತ್ರೆಯಲ್ಲಿ ದೇವರಿಗೆ ಬಲಿಯಾಗಿ ಕುರಿಕೋಣಗಳ ಕೊಲೆಯನ್ನು ಮಾಡಕೂಡದೆಂದು ಕಾನೂನುಮಾಡಿಸಿ ಅದನ್ನು ಜಾರಿಗೆ ತರಿಸುವ ಪ್ರಯತ್ನವನ್ನು ಮಾಡುವದು ಈಚೆಗೆ ಬಲವಾಗಿದೆ. ಇದರಿಂದ ಬಹಿರಂಗವಾಗಿ ಬಲಿಕೊಡುವದು ಸ್ವಲ್ಪಮಟ್ಟಿಗೆ ನಿಂತಿರಬಹುದು. ಆದರೆ ಪ್ರಾಣಿವಧೆಯೇನೂ ಕಡಿಮೆಯಾಯಿತೆಂದು ಹೇಳುವದಕ್ಕೆ ಬರುವದಿಲ್ಲ ; ಆಯಾ ಜನರ ತಾಮಸಶ್ರದ್ಧೆಯನ್ನು ತಪ್ಪಿಸಿದಂತೆ ಆಗಲಿಲ್ಲ. ಯಜ್ಞಯಾಗಾದಿಗಳು ಈಗ ಅಷ್ಟು ಪ್ರಚಾರದಲ್ಲಿಲ್ಲದಿದ್ದರೂ ಅಲ್ಲೊಂದು ಇಲ್ಲೊಂದು ಯಾವಾಗಲಾದರೂ ಆಗುವ ಸಣ್ಣಪುಟ್ಟಯಾಗಗಳಲ್ಲಿ ಅಹಿಂಸಾವಾದಿಗಳೆಂಬುವರು ಕಾನೂನಿನ

ಬೆಂಬಲವನ್ನು ಪಡೆದುಕೊಂಡು ಅವುಗಳನ್ನು ನಿಲ್ಲಿಸುವದಕ್ಕಾಗಿ ಕೋಲಾಹಲವನ್ನೆಬ್ಬಿಸುತ್ತಾರೆ. ಈಗಿನ ಕಾಲದ ಜನರಿಗೆ ಕಾನೂನಿನ ಒಂದು ಹುಚ್ಚು ಹಿಡಿದುಬಿಟ್ಟಿದೆ. ಮನುಷ್ಯನು ಕಾನೂನಿನ ನೆಪದಿಂದ ಬಹುಜನರ ಮತದ ಬೆಂಬಲವನ್ನುಪಯೋಗಿಸಿಕೊಂಡು ತನ್ನ ಸ್ವಾರ್ಥವನ್ನು ಸಾಧಿಸುವದಕ್ಕೆ ಪ್ರಯತ್ನಿಸಿದರೆ ರಾಜಸತಾಮಸಪ್ರವೃತ್ತಿಗಳನ್ನು ನಿಲ್ಲಿಸುವ ನೆಪದಲ್ಲಿ ಅನರ್ಥವನ್ನೇ ಮಾಡಿದಂತಾಗುವದು. ತಾಮಸಪೂಜೆಯಾದರೂ ದೇವರ ಸಂಬಂಧದಿಂದ ಮಾಡುವ ಪೂಜೆಯಾದ್ದರಿಂದ ಪೂಜೆಯೇ ಆಗಿರುತ್ತದೆ. ತಾಮಸರೂ ಪ್ರಾಣಿಗಳನ್ನು ಬಲಿಕೊಡುವಾಗ ಮಡಿ, ನಿಯಮಗಳು, ಉಪವಾಸಾದಿಗಳು - ಇವುಗಳನ್ನು ಅನುಸರಿಸುತ್ತಿದ್ದರು. ಅವರಿಗೆ ತಿಳಿವಳಿಕೆಯನ್ನು ಕೊಟ್ಟು ಆ ಪೂಜೆಯನ್ನು ಸಾತ್ತ್ವಿಕಕ್ರಮಕ್ಕೆ ತಿರುಗಿಸುವ ಅವಕಾಶವೂ ಇತ್ತು. ಇದು ಕೆಟ್ಟ ಆಚಾರವಾದ್ದರಿಂದ ಮಾಡಕೂಡದು - ಎಂದು ಆಚಾರವನ್ನು ತಪ್ಪಿಸುವದು ಸುಲಭ. ಆದರೆ ಏನು ಮಾಡಬೇಕು - ಎಂಬುದರ ತಿಳಿವಳಿಕೆಯನ್ನು ಕೊಟ್ಟು ತನ್ನ ಆಚಾರವನ್ನು ಜನರಿಗೆ ಆದರ್ಶವಾಗಿ ಹಿಡಿಯುವದು ಕಷ್ಟ. ತಾಮಸನು ಎಂದಾದರೂ ರಾಜಸನಾಗಬಹುದು ; ರಾಜಸನು ಸಾತ್ತ್ವಿಕನೂ ಆಗಬಹುದು. - ಎಂಬ ಉದಾರದೃಷ್ಟಿಯಿಂದ ಗೀತಾಚಾರ್ಯನು ಯಾಜಕರಲ್ಲಿ ಶ್ರದ್ಧಾತ್ರಯವನ್ನು ವಿಂಗಡಿಸಿರುತ್ತಾನೆ. ಬಲಾತ್ಕಾರವಾಗಿ ಮನುಷ್ಯನ ಪ್ರವೃತ್ತಿಯನ್ನು ನಿಲ್ಲಿಸಿಬಿಡುವದಕ್ಕಿಂತಲೂ ಕ್ರಮಕ್ರಮವಾಗಿ ಮೇಲಕ್ಕೆ ಏರಿಸುವದು ಉತ್ತಮ - ಎಂಬುದೇ ಶಾಸ್ತ್ರದ ಉದಾರದೃಷ್ಟಿ.

**ಅಶಾಸ್ತ್ರವಿಹಿತಂ ಘೋರಂ ತಪ್ಯನ್ತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ 17-5**

**ಕರ್ಶಯನ್ತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾನ್ತಃಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥ 17-6**

ಶಾಸ್ತ್ರವಿಷಯವು ತಿಳಿಯದಿದ್ದರೂ ಯಾರು ಪೂಜಾದಿಗಳನ್ನು ಶ್ರದ್ಧೆಯಿಂದ ಮಾಡುವರೋ ಅವರ ಶ್ರದ್ಧೆಗೆ ಅನುಗುಣವಾಗಿ ಅವರ ನಿಷ್ಠೆಯು ಸಾತ್ತ್ವಿಕಾದಿಗಳಲ್ಲಿ ಒಂದಾಗಿರುವದು ಎಂದು ಹೇಳಿದ್ದಾಯಿತು. ಆದರೆ ಕೆಲವರು ಶಾಸ್ತ್ರದಲ್ಲಿ ವಿಧಿಸದೆ ಇದ್ದರೂ ಬಹಳ ಕ್ರೂರವಾಗಿರುವ ಉಪವಾಸಾದಿಗಳನ್ನು ಜನಗಳಿಗೆ ತೋರ್ಪಡಿಸಿಕೊಳ್ಳುವದಕ್ಕಾಗಿ ಸಾಹಂಕಾರವಾಗಿ ಮಾಡುತ್ತಿರುವದುಂಟು. ಅವರಿಗೆ ಬಲ್ಲವರು ಇದು ಸರಿಯಲ್ಲವೆಂದು ಹೇಳಿದರೂ ಅವರು ಕೇಳುವದಕ್ಕೆ ಸಿದ್ಧರಾಗಿರುವದಿಲ್ಲ. ಶಾಸ್ತ್ರದಲ್ಲಿ ಉಪವಾಸಾದಿಗಳನ್ನು ಹೇಳಿರುವದು ನಿಜ. ಆದರೆ ಅಂಥ ಕಠಿನವಾದ ತಪಸ್ಸನ್ನು ಎಲ್ಲರೂ ಒಂದೇ ವಿಧವಾಗಿ ಮಾಡಬೇಕೆಂದು ಬಲಾತ್ಕಾರವಾಗಿ ಎಲ್ಲಿಯೂ ವಿಧಿಸಿರುವದಿಲ್ಲ. ಆಗಾಗ್ಗೆ ಉಪವಾಸವನ್ನು ಮಾಡುವದು ಆರೋಗ್ಯಶಾಸ್ತ್ರದೃಷ್ಟಿಯಿಂದಲೂ ಒಳ್ಳೆಯದು. ಅನಶನಕ್ಕಿನಂತ ಹೆಚ್ಚಿನ ತಪಸ್ಸು ಇಲ್ಲ ಎಂದು ವೇದದಲ್ಲಿ ಹೇಳಿದೆ. ಉಪವಾಸದಿಂದ ಅನೇಕ ಪಾಪಗಳು ನಾಶವಾಗುತ್ತವೆ. ಮನುಷ್ಯರ ಪಾಪವು ಅನ್ನವನ್ನಾಶ್ರಯಿಸಿರುತ್ತದೆ ಎಂದು ಸ್ಮೃತಿ ಉಂಟು. ಹೀಗಿರುವದರಿಂದ

ಉಪವಾಸದಿಂದ ಎರಡು ಬಗೆಯ ಪ್ರಯೋಜನವಿದೆ ಎಂದಾಯಿತು. ನಮ್ಮ ಉಪವಾಸದಿಂದ ಹಸಿದಿರುವ ಮಿಕ್ಕ ಪ್ರಾಣಿಗಳಿಗೆ ಆಹಾರಲಾಭದ ಅವಕಾಶವು ದೊರಕುವದು; ನಮ್ಮ ಪಾಪವು ಕರಗುತ್ತಾ ಬರುವದು. ಪಾಪದ ಶರೀರವು ಕರಗುತ್ತಾ ಕರಗುತ್ತಾ ನಮ್ಮ ಶರೀರಕ್ಕೆ ಉತ್ತಮ ಸಂಸ್ಕಾರವುಂಟಾಗುವದು. ಹೀಗೆ ಅನೇಕ ದೃಷ್ಟಿಗಳಿಂದ ಶಾಸ್ತ್ರವಿಹಿತವಾದಂತೆ ಆಗಾಗ್ಗೆ ಉಪವಾಸಮಾಡುವದು ಇಹಪರಶ್ರೇಯಸ್ಸುಗಳಿಗೆ ಒಳ್ಳೆಯದೇ ಸರಿ.

ಆದರೆ ಶಾಸ್ತ್ರದಲ್ಲಿ ವಿಹಿತವಿಲ್ಲದೆ ಇರುವ ಘೋರವಾದ ಉಪವಾಸಾದಿ ತಪಸ್ಸುಗಳನ್ನು ಮಾಡುತ್ತಾ ಅವುಗಳನ್ನು ದಂಭಾಹಂಕಾರಗಳಿಂಧ ಮೆರೆಯಿಸಿ ಕೊಳ್ಳುವದು ಇದಕ್ಕೆ ವಿರುದ್ಧವಾದ ಫಲವನ್ನೇ ಕೊಡುತ್ತದೆ. ತಾನು ಮಾಡಿದ ಉಪವಾಸಾದಿಗಳನ್ನು ವಿಸ್ಮಯಕಾರಕವಾಗಿ ಭಾವಿಸುವದರಿಂದಲೂ ಇತರರಿಗೆ ಹೇಳುವದರಿಂದಲೂ ಧರ್ಮವು ನಾಶವಾಗುತ್ತಾ ಬರುವದು. ಯಯಾತಿಯು ತನ್ನ ಧರ್ಮವನ್ನು ಸ್ವರ್ಗದಲ್ಲಿ ಕೊಚ್ಚಿಕೊಂಡ ಅತ್ಯಲ್ಪಕಾಲದಲ್ಲಿಯೇ ಸ್ವರ್ಗ ಚ್ಯುತನಾದದ್ದು ಪುರಾಣಪ್ರಸಿದ್ಧವಾದ ಕಥೆ. ರಾವಣಾದಿಗಳು ತಮ್ಮ ತಲೆಯನ್ನು ಬಲಿಕೊಟ್ಟ ಘೋರತಪಸ್ಸು ಪ್ರಸಿದ್ಧವಾಗಿದೆ. ರಕ್ತದಿಂದ ನೆನೆಯಿಸಿದ ಅಕ್ಷತೆಗಳಿಂದ ಪೂಜೆಮಾಡುವ ಘೋರತಪಸ್ಸನ್ನು ಕೆಲವರು ಮಾಡುವದುಂಟು. ಕಾಮರಾಗಾದಿಗಳಿಂದ ಕೂಡಿಕೊಂಡು ಇಂಥ ತಪಸ್ಸನ್ನು ಮಾಡುವವರು ಸ್ವಾಭಾವಿಕವಾಗಿಯೇ ರಾಜಸತಾಮಸರಾಗಿ ಪರಿಣಮಿಸುತ್ತಾರೆ. ಕಾಮ, ರಾಗ, ಭಯ, - ಮುಂತಾದ ಯಾವ ನಿಮಿತ್ತದಿಂದಲೇ ಆಗಲಿ ಇಂಥ ಅಶಾಸ್ತ್ರವಿಹಿತವಾದ ಘೋರತಪಸ್ಸುಗಳು ಉಂಟಾಗುತ್ತವೆ. ಪಟ್ಟುಹಿಡಿದು ಮಾಡುವ ಈ ಬಗೆಯ ತಪಸ್ಸುಗಳು ಸತ್ಫಲವನ್ನು ಕೊಡುವದಿಲ್ಲವೆಂಬುದಿಷ್ಟೇ ಅಲ್ಲ. ಪರಿಣಾಮದಲ್ಲಿ ದುಷ್ಟವಾದ ಫಲವನ್ನು ಕೊಡುವದಕ್ಕೆ ಸಹಕಾರಿಯಾಗುತ್ತವೆ. ಶರೀರದಲ್ಲಿ ಕೆಲವು ಸೂಕ್ಷ್ಮ ಪ್ರಾಣಿಗಳಿರುವವಂತೆ, ಅವುಗಳು ನಮ್ಮ ಆರೋಗ್ಯಕ್ಕೆ ಅತ್ಯವಶ್ಯ. ಸ್ವೇಚ್ಛೆಯಿಂದ ಮಾಡುವ ಘೋರವಾದ ಉಪವಾಸಗಳಿಂದ ಆ ಪ್ರಾಣಿಗಳೂ ನಮ್ಮ ಕರಣಗ್ರಾಮವೂ ಸೊರಗುವವು, ಇಷ್ಟೇ ಅಲ್ಲ. ಅವರು ಇಂಥ ಉಪವಾಸದಿಂದ ಪರಮಾತ್ಮನನ್ನು ಸೊರಗಿಸಿದವರಾಗುತ್ತಾರೆ. ಪರಮಾತ್ಮನ ಅಪ್ಪಣೆಯನ್ನು ಮೀರಿ ಅವನಿಗೆ ಅತೃಪ್ತಿಯನ್ನುಂಟುಮಾಡುವದೇ ಅವನನ್ನು ಸೊರಗಿಸಿದಂತೆ. ಹೀಗೆ ತಮ್ಮನ್ನೂ ಇತರರನ್ನೂ ಸೊರಗಿಸುವ ತಪಸ್ಸು ಎಂದಿಗೂ ಸಾತ್ತ್ವಿಕವಾಗಲಾರದು. ಅದು ಆಸುರತಪಸ್ಸೇ ಸರಿ. ಆದ್ದರಿಂದಲೇ ಶಾಸ್ತ್ರದಲ್ಲಿ ಉಪವಾಸಾದಿಗಳಿಗೆ ಅನುಕಲ್ಪವನ್ನು ಹೇಳಿರುತ್ತದೆ. ನಕ್ತ, ಹವಿಷ್ಯಾನ್ನ, ಅನೌದನ- ಮುಂತಾಗಿ ಕೇವಲ ವಾಯುಭಕ್ಷಣದವರೆಗೂ ತನ್ನ ತನ್ನ ಯೋಗ್ಯತೆಗೆ ಅನುಗುಣವಾದ ಅನುಕಲ್ಪವನ್ನು ಆಶ್ರಯಿಸಿ ಶಾಸ್ತ್ರವಿಹಿತವಾದ ಉಪವಾಸವನ್ನು ಮಾಡಬಹುದು. ಆತ್ಯಂತಿಕವಾದ ನಿರಾಹಾರವನ್ನೇ ಮಾಡುವೆನೆಂಬ ಹಠವು ರಾಜಸವಾದ ಆಸುರತಪಸ್ಸಾಗುತ್ತದೆ. ಆಸುರ ತಪಸ್ಸಿನಲ್ಲಿಯೂ ಗುಣಲೇಶವುಂಟು. ಆ ಗುಣವನ್ನು ಶಾಸ್ತ್ರದಿಂದ ತಿದ್ದಿಕೊಂಡು ಉಪಯೋಗಿಸಿಕೊಳ್ಳುವವನಿಗೆ ಒಳ್ಳೆಯದಾಗುವದು.

ಈಶ್ವರನು ನಮ್ಮ ಪ್ರವೃತ್ತ್ಯಾದಿಗಳಲ್ಲಿ ಕೈಹಾಕುವದಿಲ್ಲ. ನಾವು ಹೇಗೆ ಹೇಗೆ ವರ್ತಿಸಿದರೆ ಹಾಗೆ ಹಾಗೆ ಅವನ ಸನ್ನಿಧಿಯು ಪ್ರವರ್ತಕವಾಗುವದು ; ಫಲದಾಯಕವಾಗುವದು. ದೇವತೆಗಳು ಕೋರ್ಟಿನಲ್ಲಿ ಅರ್ಜಿಬರೆಯುವವರಂತೆ ಇರುತ್ತಾರೆ. ಈ ಅರ್ಜಿ ಬರೆಯುವವರೆನ್ನುವರು ಯಾರು ಯಾರಿಗೆ ಎಂಥ ದಸ್ತಾವೇಜು ಬರೆದುಕೊಡಬೇಕು ? ಯಾರು ಯಾರ ಮೇಲೆ ಫಿರ್ಯಾದು ಮಾಡಬೇಕು? ಯಾರು ಕೋರ್ಟಿನಲ್ಲಿ ಯಾವ ದೂರು ಹೇಳಿಕೊಳ್ಳಬೇಕು - ಇತ್ಯಾದಿ ವಿಚಾರಗಳನ್ನು ಮನಸ್ಸಿಗೆ ಹತ್ತಿಸಿಕೊಳ್ಳುವದಿಲ್ಲ. ಯಾವದನ್ನು ತಾವು ಬರೆದುಕೊಡಬೇಕು ? ಅದಕ್ಕೆ ಎಷ್ಟು ರುಸುಂ ಬರಬೇಕು? ಇವೆರಡೇ ಅವರ ಮನಸ್ಸಿನಲ್ಲಿ ಓಡಾಡುತ್ತಿರುತ್ತದೆ. ಹೀಗೆಯೇ ಪೂಜ್ಯವಾದ ದೇವತೆಯು ತನ್ನನ್ನು ಪೂಜಿಸುವವರ ಪ್ರವೃತ್ತಿಯು ಸಾತ್ತ್ವಿಕವೋ ರಾಜಸವೋ ತಾಮಸವೋ ನೋಡದೆ ಆಯಾ ಪೂಜೆಗೆ ತಕ್ಕ ಫಲವನ್ನು ಕೊಡುತ್ತಾ ಹೋಗುತ್ತದೆ. ಆರಾಧಕರು ದುರ್ಮಾರ್ಗಕ್ಕೆ ಹೋದರೆ ದೇವತೆಯ ಮನಸ್ಸಿನಲ್ಲಿ ಅನುಕಂಪೆಯೂ ಹುಟ್ಟಬಹುದು. ಆದರೇನು ? ಆರಾಧನೆಗೆ ಅನುಗುಣವಾದ ಫಲವನ್ನು ಕೊಡುವದು ಅದರ ಸ್ವಭಾವವಾಗಿಬಿಟ್ಟಿರುತ್ತದೆ. ಇದರಂತೆಯೇ ನಮ್ಮ ಆಹಾರ, ಯಜ್ಞದಾನಾದಿಗಳೆಲ್ಲವೂ ನಮ್ಮ ನಮ್ಮ ಮನಸ್ಸಿನ ಒಲವಿಗೆ ತಕ್ಕಂತೆ ನಮ್ಮಲ್ಲಿ ಸಾತ್ತ್ವಿಕ, ರಾಜಸ ಅಥವಾ ತಾಮಸಸ್ವಭಾವವಿಶೇಷಗಳನ್ನು ಅಂತಃಕರಣದಲ್ಲಿ ಉಂಟುಮಾಡುತ್ತವೆ. ನಿಯತವಾಗಿ ಇಂತಿಂಥ ಆಹಾರಾದಿಗಳಿಂದ ಇಂತಿಂಥ ಮನಸ್ಸಿನ ಸ್ವಭಾವವಿಶೇಷಕ್ಕೆ ಪ್ರೋತ್ಸಾಹವುಂಟಾಗುತ್ತದೆ ಎಂದು ತಿಳಿಸುವದಕ್ಕಾಗಿ ಇಲ್ಲಿ ಪ್ರಾಸಂಗಿಕವಾಗಿ ಆಹಾರಾದಿಗಳನ್ನೂ ಸಾತ್ತ್ವಿಕ ರಾಜಸ ತಾಮಸಗಳೆಂದು ವಿಂಗಡಿಸಲಾಗಿದೆ.

ಇಲ್ಲಿ ನೆನಪಿನಲ್ಲಿಡಬೇಕಾದ ಒಂದು ವಿಷಯವಿದೆ. ಆಹಾರಾದಿಗಳನ್ನು ಸಾತ್ತ್ವಿಕ ರಾಜಸ ತಾಮಸಗಳೆಂದು ಮೂರು ಮೂರಾಗಿಯೇ ವಿಂಗಡಿಸಿ ಹೇಳಿದ್ದರೂ ನಿಜವಾಗಿ ಇವು ಮೂರು ಮೂರು ಪ್ರಕಾರವಾಗಿಯೇ ಇರುವವೆಂದು ತಿಳಿಯಬಾರದು. ಇವುಗಳ ವಿಧವಿಧವಾದ ಬೆರಕೆಯಿಂದ ಅನೇಕ ಒಳಭೇದಗಳೂ ಇವುಗಳಲ್ಲಿ ಉಂಟಾಗುತ್ತವೆ. ಸತ್ತ್ವದಲ್ಲಿ ರಜಸ್ತಮಸ್ಸುಗಳ ಬೆರಕೆಯಿಂದಲೂ ತಮಸ್ಸಿನಲ್ಲಿ ಸತ್ತ್ವರಜಸ್ಸುಗಳ ಬೆರಕೆಯಿಂದಲೂ ಪ್ರಭೇದಗಳು ಉಂಟಾಗುತ್ತವೆ. ಆದ್ದರಿಂದ ಸೂಕ್ಷ್ಮ ದೃಷ್ಟಿಯುಳ್ಳವನು ಶಾಸ್ತ್ರಗಳಲ್ಲಿ ತಿಳಿಸಿರುವದು ದಿಗ್ದರ್ಶನಮಾತ್ರವೆಂದು ಬಗೆದು ರಜಸ್ತಮಸ್ಸುಗಳನ್ನು ದೂರವಾಗಿಟ್ಟು ಆದಷ್ಟು ಮಟ್ಟಿಗೂ ಸಾತ್ತ್ವಿಕವಾದದ್ದನ್ನೇ ಅನುಸರಿಸಬೇಕು.

**ಆಯುಸ್ಸತ್ತ್ವ ಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ 17-8**

ಈ ಶ್ಲೋಕದಲ್ಲಿ ವರ್ಣಿಸಿರುವಂತೆ ಆಯುಸ್ಸನ್ನೂ ಅಂತಃಕರಣದ ಸಾತ್ತ್ವಿಕ ಭಾವವನ್ನೂ ಬಲವನ್ನೂ ಆರೋಗ್ಯವನ್ನೂ ಸಂತೋಷವನ್ನೂ ಪ್ರೀತಿಯನ್ನೂ ಬೆಳೆಯಿಸುವ ರಸೋಪೇತವಾದ ಜಿಡ್ಡಿನ ಗಟ್ಟಿಯಾದ ಮನೋಹರವಾದ ಆಹಾರಗಳು ಸಾತ್ತ್ವಿಕರಿಗೆ

ಮೆಚ್ಚಾಗಿರುತ್ತವೆ. ಅಂದರೆ ಯಾರಿಗೆ ಇಂಥ ಆಹಾರಗಳೇ ಮೆಚ್ಚಾಗಿರುವವೋ ಅವರ ಮನಸ್ಸಿನ ಒಲವು ಸಾತ್ತ್ವಿಕವು - ಎಂದು ತಿಳಿಯಬೇಕು. ಆಹಾರವು ಉತ್ತಮವಾದದ್ದು ಸಿಕ್ಕುವದು ಹಾಗಿರಲಿ, ಜೀವನಕ್ಕೆ ಬೇಕಾಗುವಷ್ಟು ಎಂಥ ಆಹಾರವಾದರೂ ಸಿಕ್ಕುವದು ಹೇಗೆ ? ಎಂಬ ನಮ್ಮ ಕಾಲಕ್ಕೆ ಆಹಾರದ ಈ ಸಾತ್ತ್ವಿಕಾದಿಪ್ರಭೇದವು ಏತಕ್ಕೆ ಬರುವದು ?- ಎಂದು ಯಾರಾದರೂ ಶಂಕಿಸಬಹುದು. ಇಂಥ ಕಾಲದಲ್ಲಿ ಆಪದ್ಧರ್ಮವನ್ನು ಅನುಸರಿಸಿದರೆ ದೋಷವಿಲ್ಲ. ಅತ್ಯಂತವಾಗಿ ಜೀವನಕ್ಕೆ ಬೇಕಾಗುವಷ್ಟು ಆಹಾರವು ಕೂಡ ಸಿಕ್ಕದೆ ಇರುವ ಕಾಲದಲ್ಲಿ ನಾವು ತಕ್ಕಷ್ಟುಮಟ್ಟಿಗೆ ಕೆಳಕ್ಕೆ ಇಳಿದರೂ ಚಿಂತೆಯಿಲ್ಲ. ಆದರೆ ಕೆಳಗಿನ ಅಂತಸ್ತಿನ ಆಹಾರಾದಿಗಳನ್ನೇ ಪ್ರೀತಿಯಿಂದ ಸೇವನೆ ಮಾಡುವದಕ್ಕೆ ನಿಂತುಬಿಡಬಾರದು. ಉಪನಿಷತ್ತಿನಲ್ಲಿ ಒಂದು ಸಣ್ಣ ಕಥೆಯಿದೆ. ಚಾಕ್ರಾಯಣನೆಂಬ ಒಬ್ಬ ಋಷಿಯು ವೇದಶಾಸ್ತ್ರಪಾರಾಂಗತನಾಗಿ ಕರ್ಮೋಪಾಸನೆಗಳಲ್ಲಿ ನಿಷ್ಠನಾಗಿದ್ದನು. ಅವನ ಕೀರ್ತಿಯು ಬಹು ದೂರದೇಶಕ್ಕೂ ಹರಡಿತ್ತು. ಆದರೂ ಅವನಿದ್ದ ಪ್ರಾಂತ್ಯದಲ್ಲಿ ದುರ್ಭಿಕ್ಷವು ಪ್ರಾಪ್ತವಾಗಿ ಆಯಾ ದಿನಕ್ಕೆ ತಕ್ಕಷ್ಟು ಆಹಾರವು ದೊರೆಯುವದು ಕೂಡ ಕಷ್ಟವಾಯಿತು. ಅವನು ಆಹಾರಾರ್ಥವಾಗಿ ಸಕುಟುಂಬನಾಗಿ ಅಲ್ಲಲ್ಲಿ ಅಲೆಯುತ್ತಾ ಒಂದುಕಡೆಯಲ್ಲಿ ಒಬ್ಬ ಮಾವಟಿಗನು ಊಟಮಾಡುವದಕ್ಕೆ ಬಡಿಸಿಕೊಂಡಿದ್ದ ಬೇಯಿಸಿದ ಹುರುಳಿಕಾಳನ್ನೇ ಯಾಚಿಸಿ ಅದನ್ನೇ ಒಂದು ದಿನ ತಿಂದು ತನ್ನ ಹಸಿವನ್ನು ಅಡಗಿಸಿಕೊಳ್ಳಬೇಕಾಯಿತು. ಇಂಥ ಸಂಕಟಕಾಲದಲ್ಲಿಯೂ ಆ ಮಾವಟಿಗನು ಕೊಡುವದಕ್ಕೆ ಬಂದ ಕುಡಿಯುವ ನೀರನ್ನು "ಇದು ಎಂಜಲು, ನನಗೆ ಬೇಡ"- ಎಂದು ಚಾಕ್ರಾಯಣನು ತಿರಸ್ಕರಿಸಿದನು. "ಈ ಹುರುಳಿಕಾಳು ಎಂಜಲಲ್ಲವೊ ?" ಎಂದು ಮಾವಟಿಗನು ಕೇಳಿದ್ದಕ್ಕೆ ಋಷಿಯು ಇಂತೆಂದನು: "ಹುರುಳಿಕಾಳನ್ನು ತಿನ್ನದೆ ಇದ್ದರೆ ನನ್ನ ಪ್ರಾಣವೇ ಹೋಗಿಬಿಡುತ್ತಿತ್ತು. ಕುಡಿಯುವ ನೀರು ಸ್ವಲ್ಪ ದೂರ ಹೋದರೆ ಎಲ್ಲಿಯಾದರೂ ಸಿಕ್ಕೇಸಿಕ್ಕುತ್ತೆ. ಆದ್ದರಿಂದ ಎಂಜಲು ನೀರು ಬೇಡ", ಇದೇ ಋಷಿಯು ಮುಂದೆ ಆ ದೇಶದ ರಾಜನು ಮಾಡುತ್ತಿದ್ದ ಯಜ್ಞದಲ್ಲಿ ತನ್ನ ವಿದ್ಯಾಪ್ರತಿಭೆಯನ್ನು ತೋರಿಸಿ ರಾಜನಿಂದ ಸನ್ಮಾನಿತನಾದನೆಂಬ ವೃತ್ತಾಂತವು ಉಪನಿಷತ್ತಿನಲ್ಲಿ ಕಂಡುಬರುತ್ತದೆ. ಈ ದೃಷ್ಟಾಂತವು ಮನುಷ್ಯನು ಆಹಾರಾದಿಗಳ ವಿಷಯಕ್ಕೆ ಹೇಗೆ ವರ್ತಿಸಬೇಕೆಂಬುದನ್ನು ತಿಳಿಸುವದಕ್ಕೆ ಒಂದು ಸೂತ್ರವಾಗಿದೆ ಎನ್ನಬಹುದು. ಆದಷ್ಟು ಮಟ್ಟಿಗೂ ವಿವೇಕಿಯಾದವನು ಸಾತ್ತ್ವಿಕವಾದ ಆಹಾರವನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಅದನ್ನೇ ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಆಪತ್ಕಾಲದಲ್ಲಿ ಮಾತ್ರವೇ ಹೊರಗಿನ ಸನ್ನಿವೇಶವು ತನಗೆ ವಿರುದ್ಧವಾಗಿರುವ ಸಂದರ್ಭದಲ್ಲಿ ಮಾತ್ರ ರಾಜಸಾದ್ಯಾಹಾರಗಳನ್ನು ಸ್ವೀಕರಿಸುವದು ದೋಷವಾಗಲಾರದು. ಆದರೆ ಪ್ರಕೃತದಲ್ಲಿ ನಾವು ವಿಚಾರಿಸುತ್ತಿರುವದು ಇಂಥ ಆಪತ್ಕಾಲದ ವಿಚಾರವಲ್ಲ; ನಿಜವಾಗಿ ಸಾತ್ತ್ವಿಕವಾದ ಆಹಾರಾದಿಗಳ ಸ್ವರೂಪವು ಏನು? ಎಂಬುದೇ ಈಗಿನ ವಿಷಯ. ಮೇಲಿನ ಶ್ಲೋಕದ ಅಭಿಪ್ರಾಯವನ್ನು ಮುಂದಿನ ದಿನ ವಿಚಾರಕ್ಕೆ ತೆಗೆದುಕೊಳ್ಳೋಣ.



# ೧೬೪. ಆಹಾರಾದಿಗಳಲ್ಲಿ ಸಾತ್ತ್ವಿಕಾದಿಭೇದ 17 - (8-12)

**(27-1-50)**

ಶ್ರದ್ಧಾದಿಗಳು ಮೂರು ವಿಧವಾಗಿರುವಂತೆ ಆಹಾರಾದಿಗಳೂ ಮೂರು ವಿಧ ಎಂದು ಹೇಳಿದೆ. ಶ್ರದ್ಧಾದಿಗಳು ಒಳಗಿನವು, ಆಹಾರಾದಿಗಳು ಹೊರಗಿನವು. ಶ್ರದ್ಧಾದಿಗಳನ್ನು ಕೂಡ ಹೊರಗಿನ ಕಾರ್ಯವಿಶೇಷದಿಂದ ಊಹಿಸಬೇಕಾಗುತ್ತದೆ ಎಂದು ಹೇಳಿತ್ತು. ಕಾರ್ಯವು ನಿಜವಾದದ್ದಾಗಿರಬೇಕು. ಆಗಲೇ ಅದರಿಂದ ಮೂಲವಾದ ಶ್ರದ್ಧೆಯನ್ನು ಊಹಿಸಬಹುದಾಗುತ್ತದೆ. ನಾಟಕಾದಿಗಳಲ್ಲಿ ಅಭಿನಯದಿಂದ ತೋರಿಸುವ ಕೋಪಾಭಾಸವೇ ಮುಂತಾದವುಗಳಿಂದ ಮನಸ್ಸಿನ ಸ್ಥಿತಿಗಳನ್ನು ಊಹಿಸುವದಕ್ಕೆ ಆಗುವದಿಲ್ಲ. ನಿಜವಾಗಿ ಉಂಟಾಗಿರುವ ಹೊರಗಿನ ಮನಃಪ್ರವೃತ್ತಿಯಿಂದ ಅವರವರ ಶ್ರದ್ಧೆಯನ್ನು ಅನುಮಾನಿಸಿ ತಿಳಿಯಬಹುದು. ಇಂಥಿಂಥ ಆಹಾರವು ಸಾತ್ತ್ವಿಕರಿಗೆ ಪ್ರಿಯವಾಗಿರುತ್ತದೆ - ಎಂದರೂ ಹೀಗೆಯೇ. ಹೀಗೆ ಸಾತ್ತ್ವಿಕವಾದ ಆಹಾರದಲ್ಲಿ ಮನಸ್ಸಿನ ಒಲವಿದ್ದರೆ ನಾವು ಸತ್ತ್ವದ ಕಡೆಗೆ ತಿರುಗುತ್ತಿದ್ದೇವೆ - ಎಂದು ಊಹಿಸಿಕೊಳ್ಳಬಹುದು. ಆದರೆ ಇಂಥ ಆಹಾರವನ್ನು ತಿನ್ನುವವರೆಲ್ಲ ಸಾತ್ತ್ವಿಕರು - ಎಂದು ತಿಳಿಯುವದಕ್ಕೆ ಬರುವದಿಲ್ಲ. ವರ್ತಮಾನಪತ್ರಿಕೆಗಳಲ್ಲಿ ಕೆಲಕೆಲವು ವ್ಯಕ್ತಿಗಳ ಭಾವಚಿತ್ರವನ್ನು ಪ್ರಕಟಿಸಿರುವದುಂಟು. ಅವು ಪ್ರಕಟಣೆಗೋಸ್ಕರವಾಗಿಯೇ ತೆಗೆಯಿಸಿಕೊಂಡ ಭಾವಚಿತ್ರವಾಗಿರುವದರಿಂದಲೂ ಯಾವಾಗಲೋ ತೆಗೆಯಿಸಿಕೊಂಡ ಚಿತ್ರಗಳನ್ನು ಈಗಲೂ ಪ್ರಕಟಿಸುತ್ತಿರುವದರಿಂದಲೂ ಅವುಗಳಿಂದ ಮೂಲವ್ಯಕ್ತಿಯನ್ನು ಯಾವಾಗಲೂ ಸರಿಯಾಗಿ ಊಹಿಸುವದಕ್ಕೆ ಬರುವದಿಲ್ಲ. ಕೋಪ, ಪ್ರೇಮ - ಮುಂತಾದವುಗಳು ನಮ್ಮ ಅಂತಃಕರಣದಲ್ಲಿ ಇರುವ ಧರ್ಮಗಳಾಗಿರುವದರಿಂದ ಅವುಗಳನ್ನು ಕೆಲವು ಬಾಹ್ಯ ಚಿಹ್ನೆಗಳಿಂದ ಗುರುತಿಸಿಕೊಳ್ಳಬೇಕೆಂದು ಶಾಸ್ತ್ರದಲ್ಲಿ ಹೇಳಿದ್ದರೂ ಎಲ್ಲೆಲ್ಲಿ ಈ ಚಿಹ್ನೆಗಳು ತೋರುವವೋ ಅಲ್ಲೆಲ್ಲ ಈ ಕೋಪಾದಿಗಳು ಇರುವವೆಂದು ಹೇಳುವದಕ್ಕೆ ಬರುವದಿಲ್ಲ.

ಸಾಂಖ್ಯರು ಹೊರಗಿನ ಪದಾರ್ಥಗಳಲ್ಲಿಯೇ ಆಯಾ ಗುಣಗಳು ಅಂಟಿಕೊಂಡಿರುತ್ತವೆ ಎಂದು ಹೇಳುತ್ತಾರೆ. ಯೋಗಿಗಳೂ ವೈದ್ಯರೂ ಹೀಗೆಯೇ ಪದಾರ್ಥಗಳಲ್ಲಿ ಸಾತ್ತ್ವಿಕಾದಿ ಪ್ರಭೇದಗಳನ್ನು ಕಲ್ಪಿಸುತ್ತಾರೆ. ಆದರೆ ಕೆಲವರಿಗೆ ಆಯಾ ಪದಾರ್ಥಗಳು ಆಯಾ ಪರಿಣಾಮವನ್ನು ಮಾಡುವದೇ ಇಲ್ಲ. ಉದಾಹರಣೆಗೆ ಕೆಲವರಿಗೆ ಅಡಿಗೆಗೆ ಎಷ್ಟು ಹುಳಿಯಾದರೂ ಹುಳಿ ಸಾಲದೆ ಇರುತ್ತದೆ. ಹೀಗೆಯೆ ಇನ್ನು ಕೆಲವರಿಗೆ ಹೆಚ್ಚು ಉಪ್ಪು ಬೇಕು. ಮತ್ತೆ ಕೆಲವರಿಗೆ ಹೆಚ್ಚು ಖಾರ ಬೇಕು ಇತ್ಯಾದಿ. ಆದ್ದರಿಂದ ಮನಸ್ಸಿನ ಪ್ರತಿಕ್ರಿಯೆ ಇಲ್ಲದವರಿಗೆ ಆಯಾ ಪದಾರ್ಥಗಳು ಈ ಗುಣಗಳನ್ನು ಉಂಟುಮಾಡುವವು ಎಂದಾಯಿತು. ಆದ್ದರಿಂದಲೇ ವೇದಾಂತಿಗಳು ಈ ಗುಣತ್ರಯವು ಮುಖ್ಯವಾಗಿ ಮನಸ್ಸಿನ ಧರ್ಮವೆಂದು ನಿರ್ಣಯಿಸಿರುತ್ತಾರೆ. ಇದರ ಫಲಿತವೇನೆಂದರೆ ಶುದ್ಧವಾಗಿ ಸತ್ತ್ವದಲ್ಲಿಯೇ ನಿಂತಿರುವವನಿಗೆ

ನೈಮಿತ್ತಿಕವಾಗಿ ರಾಜಸಾಹಾರವನ್ನು ಕೊಟ್ಟರೂ ಅವನ ಮನಸ್ಸು ರಾಜಸವಾಗಿ ತಿರುಗುವದಿಲ್ಲ. ಅಗಸ್ತ್ಯರು ವಾತಾಪಿಯನ್ನು ತಿಂದು ಜೀರ್ಣಮಾಡಿಕೊಂಡರೆಂಬ ಕಥೆಯನ್ನು ಇಲ್ಲಿ ಮನಸ್ಸಿಗೆ ತಂದುಕೊಳ್ಳಬಹುದು. ಆ ಕಥೆಯಿಂದ ಅಗಸ್ತ್ಯರು ಯಾವಾಗಲೂ ಮಾಂಸಾಹಾರಿಗಳಾಗಿಯೇ ಇರುತ್ತಿದ್ದರೆಂದು ಊಹಿಸುವದಕ್ಕೆ ಬರುವದಿಲ್ಲವಷ್ಟೆ! ಮಹಾಪ್ರಭಾವರಾದ್ದರಿಂದ ಅವರು ಹೊರಗಿನ ಯಾವ ಆಹಾರದ ಪ್ರಭಾವಕ್ಕೂ ಒಳಗಾಗದೆ ತಮ್ಮ ಉನ್ನತ ಸ್ಥಿತಿಯಲ್ಲಿರುತ್ತಿದ್ದರು - ಎಂದಿಷ್ಟೇ ಹೇಳಬಹುದು.

ಅಂತೂ ಸಾತ್ತ್ವಿಕರಿಗೆ ಇಂಥ ಆಹಾರವು ಪ್ರಿಯವಾಗುತ್ತದೆ ಎಂಬುದರಿಂದ ನಮ್ಮ ನಮ್ಮ ಮನಸ್ಸಿನ ಒಲವನ್ನು ತಿಳಿದುಕೊಳ್ಳುವದಕ್ಕಷ್ಟೆ ಈ ಗುರುತನ್ನು ಉಪಯೋಗಿಸುವದೊಳ್ಳೆಯದು. ಹಿಂದೆ ಒಬ್ಬರು ಸಾತ್ತ್ವಿಕಾಹಾರಗಳ ಪಟ್ಟಿಯೊಂದನ್ನು ದಯವಿಟ್ಟು ತಯಾರಿಸಿ ಕಳುಹಿಸಿಕೊಡಬೇಕೆಂದು ಕೇಳಿದ್ದರು. ಅವರು ಪದಾರ್ಥಗಳಿಗೆ ನಿಯತವಾಗಿ ಸಾತ್ತ್ವಿಕಾದಿ ಪರಿಣಾಮವನ್ನುಂಟುಮಾಡುವ ಸ್ವಭಾವವು ನೈಸರ್ಗಿಕವಾಗಿರುತ್ತದೆ ಎಂದು ನಂಬಿರಬೇಕು. ಕೆಲವು ಧೂರ್ತರು ಸಾತ್ತ್ವಿಕಾಹಾರವನ್ನು ತಿನ್ನುವವರಾದ್ದರಿಂದ ತಾವು ದೊಡ್ಡವರು ಎಂದು ನಟಿಸುತ್ತಾ ಜನರನ್ನು ಮರಳುಮಾಡುವದುಂಟು. ಅಧ್ಯಾತ್ಮಸಾಧನವು ತನ್ನ ಮನಸ್ಸನ್ನು ಸರಿಮಾಡಿಕೊಳ್ಳುವದಕ್ಕೇ ಹೊರತು ಹೀಗೆ ಬಾಹ್ಯಚಿಹ್ನೆಗಳಿಂದ ಜನರನ್ನು ಸೆನ್ಸಸ್‌ಮಾಡಿ ರಾಜಸ, ತಾಮಸ - ಎಂದು ಮುಂತಾಗಿ ಲೆಕ್ಕಹಾಕಿ ಇಡುವದಕ್ಕೆ ಉಪಯೋಗಿಸಿಕೊಳ್ಳುವದಕ್ಕಲ್ಲ.

ಆಯುಸ್ಸು, ಸತ್ತ್ವ, ಬಲ - ಮುಂತಾದದ್ದನ್ನು ಅಭಿವೃದ್ಧಿಗೊಳಿಸುವದು ಸಾತ್ತ್ವಿಕಾಹಾರವು. ಸಾಧ್ಯವಾದ ಮಟ್ಟಿಗೂ ಇಂಥವುಗಳನ್ನು ಸಂಪಾದಿಸಿಕೊಂಡು ಜೀವಿಸುವದಕ್ಕೆ ಮುಮುಕ್ಷುಗಳು ಪ್ರಯತ್ನಮಾಡಬೇಕು. ನಮ್ಮ ಶರೀರಾದಿಗಳು ಕುದುರೆಯೇ ಮುಂತಾದ ಪ್ರಾಣಿಗಳಂತೆ ಇರುತ್ತವೆ. ಆ ಪ್ರಾಣಿಗಳಿಗೆ ಒಗ್ಗುವ ಆಯಾ ಆಹಾರವನ್ನು ಹಾಕಿ ಮಾಲೀಷ್,ಮಾಡಿ ಸರಿಯಾಗಿ ಸವಾರಿಗೆ ಉಪಯೋಗಿಸಿಕೊಳ್ಳಬೇಕು. ಅವುಗಳಿಗೆ ತಕ್ಕಷ್ಟು ಆಹಾರಾದಿಗಳು ಇಲ್ಲದಿದ್ದರೂ ಅಥವಾ ಅವುಗಳಿಗೆ ತಕ್ಕಷ್ಟು ಯೋಗ್ಯವಾದ ಕೆಲಸವನ್ನು ಕೊಡದೆ ಇದ್ದರೂ ಅವು ವೃಥಾ ಕೊಬ್ಬಿ ನಿಷ್ಪ್ರಯೋಜನವಾಗುತ್ತವೆ ; ಅಥವಾ ಸೊರಗಿ ಹೋಗುತ್ತವೆ. ನಮ್ಮಲ್ಲಿ ಬೇರೆ ಬೇರೆ ಪ್ರಾಂತ್ಯದವರಿಗೆ ಬೇರೆ ಬೇರೆಯ ರಾಗಿ, ಜೋಳ, ಗೋಧಿ, ಅಕ್ಕಿ - ಮುಂತಾದ ಆಹಾರವು ಹಲವು ಶತಮಾನಗಳಿಂದ ಒಗ್ಗಿಕೊಂಡುಬಂದಿರುತ್ತದೆ. ಆಹಾರಸಮಸ್ಯೆಯ ಈಗಿನ ದಿವಸಗಳಲ್ಲಿ ಅಕ್ಕಿ ಬದಲು ರಾಗಿ, ರಾಗಿ ಬದಲು ಗೋಧಿ - ಎಂದು ಆಯಾ ಕಾಲಕ್ಕೆ ತಕ್ಕಂತೆ ಆಹಾರವನ್ನೇ ಬದಲಾಯಿಸುತ್ತಾ ಇರುವದರಿಂದ ಜನರಿಗೆ ಆಯುಸ್ಸತ್ತ್ವಬಲಾರೋಗ್ಯಾದಿಗಳು ಅಭಿವೃದ್ಧಿಯಾಗುವದಕ್ಕೆ ಒಂದು ದೊಡ್ಡ ಕುಂದಕವಾಗಿಬಿಟ್ಟಿರುತ್ತದೆ. ಈಗ ನಿಜವಾಗಿ ನಮಗೆ ತಕ್ಕಷ್ಟು ಆಹಾರವು ಇದೆಯೋ, ಇಲ್ಲವೋ, ಸರಿಯಾದ ಆಹಾರವು ಸಿಕ್ಕುವ ಸಂಭವವು ಇದೆಯೋ, ಇಲ್ಲವೋ, ಯಾವ ಆಹಾರಕ್ರಮವನ್ನು

ನಾವು ಕೈಗೊಂಡರೆ ನಮಗೆ ಜೀವನದ ಹೋರಾಟವು ತಪ್ಪಿ ಮನಸ್ಸಿಗೆ ನೆಮ್ಮದಿಯಾದೀತು ? ಎಂಬುದನ್ನು ಎಷ್ಟು ಯೋಚನೆಮಾಡಿದರೂ ಬಗೆಹರಿಯುವ ಹಾಗಿಲ್ಲ. ಈಗಿನ ಸ್ಥಿತಿಯಲ್ಲಿ ಮುಮುಕ್ಷುಗಳಾದವರು ಆಹಾರದ ತೊಡಕನ್ನು ಬಿಡಿಸಿಕೊಳ್ಳುವದು ಬಹಳ ಕಷ್ಟ. ಸಾತ್ತ್ವಿಕಾಹಾರವು ಸತ್ತ್ವಶುದ್ಧಿಗೂ ತನ್ಮೂಲಕ ಜ್ಞಾನೋತ್ಪತ್ತಿಗೂ ಕಾರಣವಾಗಿರುವದರಿಂದ ಆದಷ್ಟು ಮಟ್ಟಿಗೂ ಅಂಥ ಆಹಾರವನ್ನು ಹುಡುಕಿ ಉಪಯೋಗಿಸುವದಕ್ಕೆ ಪ್ರಯತ್ನಿಸಬೇಕು - ಎಂದಿಷ್ಟೇ ಹೇಳಿ ಈ ಪ್ರಕರಣವನ್ನು ಮುಗಿಸಬೇಕಾಗಿದೆ. ಎಲ್ಲರೂ ಸಾತ್ತ್ವಿಕಾಹಾರವನ್ನೇ ತಿನ್ನಬೇಕು - ಎಂದು ನಿಯಮಿಸುವದಕ್ಕೆ ಬರುವದಿಲ್ಲ. ಅದು ಸಾಧ್ಯವೂ ಇಲ್ಲ. ಆದರೂ ಮುಮುಕ್ಷುವಾದವನು ಅವಶ್ಯವಾಗಿ ಕೈಯಲ್ಲಾದ ಮಟ್ಟಿಗೂ ಸಾತ್ತ್ವಿಕಾಹಾರದ ಕಡೆಗೇ ಒಲಿಯುತ್ತಿರಬೇಕು.

ಸಾತ್ತ್ವಿಕ ಪದಾರ್ಥವು ರಸ್ಯವಾಗಿರುವದು, ರಸಯುಕ್ತವಾಗಿ ಸವಿಯುಳ್ಳದ್ದಾಗಿರುವದು; ಸ್ನಿಗ್ಧವಾಗಿರುವದು, ಜಿಡ್ಡುಳ್ಳದ್ದಾಗಿರುವದು ; ಸ್ಥಿರವಾಗಿರುವದು ಎಂದರೆ ಸಾರಾಂಶವುಳ್ಳದ್ದಾಗಿರುವದು, ಹೃದ್ಯವಾಗಿರುವದು ಎಂದರೆ ಮನಸ್ಸಿಗೆ ಮೆಚ್ಚಾಗುವಂತೆ ಇರುವದು. ಕೃತಕರೀತಿಯಿಂದ ಅಭ್ಯಾಸಮಾಡಿಕೊಂಡ ಪದಾರ್ಥಗಳು ಮೊದ ಮೊದಲು ಒಗ್ಗದೇ ಇದ್ದರೂ ಆಮೇಲೆ ಹೃದ್ಯವಾಗುವದುಂಟು. ಹಾಗೆ ಪ್ರಯತ್ನಪೂರ್ವಕವಾಗಿ ಮನಸ್ಸಿಗೆ ಮೆಚ್ಚಾಗುವ ಪದಾರ್ಥವನ್ನಲ್ಲ - ಇಲ್ಲಿ ಹೃದ್ಯವೆಂದಿರುವುದು. ಯಾವ ಅಭ್ಯಾಸವನ್ನಾಗಲಿ ಕೃತಕ ಪ್ರೋತ್ಸಾಹವನ್ನಾಗಲಿ ಬಯಸದೆ ನೈಜವಾಗಿಯೇ ಸಾರ್ವತ್ರಿಕವಾಗಿ ಮನಮೆಚ್ಚಾಗಿರುವದೇ ಇಲ್ಲಿ ಹೃದ್ಯಶಬ್ದದಿಂದ ತಿಳಿಯತಕ್ಕದ್ದು.

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ 17-9**

ಕಹಿ, ಹುಳಿ, ಉಪ್ಪು, ಅತಿಬಿಸಿ, ಹೀಗೆಲ್ಲ ಇರುವ ಆಹಾರಗಳು ರಾಜಸರಿಗೆ ಇಷ್ಟವಾಗಿರುತ್ತವೆ. ರಾಜಸಾಹಾರವು ಯಾರಿಗೂ ಕೂಡದೇ ಕೂಡದೆಂದು ನಿಯಮಿಸುವದಕ್ಕೆ ಬರುವದಿಲ್ಲ. ಉದಾರಹಣೆಗೆ ಜ್ವರ ಬಂದಾಗ ಕಹಿ ಪದಾರ್ಥವು ಪಥ್ಯವಾಗುತ್ತದೆ. ಕೂತು ಕೆಲಸ ಮಾಡುವವನಿಗೂ ಹೆಚ್ಚಾಗಿ ಶರೀರವನ್ನುಪಯೋಗಿಸಿ ಕಷ್ಟಪಡುವವನಿಗೂ ಒಂದೇ ಬಗೆಯ ಆಹಾರವನ್ನು ನಿಯಮಿಸುವದಕ್ಕೆ ಬರುವದಿಲ್ಲ. ಹೀಗೆ ರಾಜಸಪದಾರ್ಥಗಳಿಗೂ ಪ್ರಯೋಜನವನ್ನು ತೋರಿಸುವದಕ್ಕೆ ಬರುತ್ತದೆ. ರಜೋಗುಣಪ್ರಧಾನರಾಗಿರುವವರು ರಾಜಸಪದಾರ್ಥಗಳನ್ನೇ ಪರಮಪುರುಷಾರ್ಥಸಾಧನವೆಂಬಂತೆ ಪಟ್ಟುಹಿಡಿದು ಪ್ರೀತಿಸುತ್ತಾರೆ. ಮುಮುಕ್ಷುವಾದವನು ಅವರಂತೆ ಕೇವಲ ರಾಜಸಾಹಾರ, ರಾಜಸವಾಕ್ಕುಗಳು, ರಾಜಸಕರ್ಮ, ರಾಜಸಚಿಂತನೆ - ಇವುಗಳಲ್ಲಿಯೇ ಮುಳುಗಿರಬಾರದು ; ರಜಃ ಪ್ರಧಾನನಾದವನಿಗೆ ತತ್ತ್ವವನ್ನು ಮನಗಾಣಿಸುವದು ಸಾಧ್ಯವಿಲ್ಲ. ಏಕೆಂದರೆ ಅವನಿಗೆ ಒಂದೇ ಕಡೆಯಲ್ಲಿ ಮನಸ್ಸನ್ನು

ನಿಲ್ಲಿಸಿಕೊಳ್ಳುವದು ಸಾಧ್ಯವೇ ಇಲ್ಲ. ಕಿರಾತಾರ್ಜುನೀಯಕಾವ್ಯದಲ್ಲಿ ದ್ರೌಪದಿಯು ಧರ್ಮರಾಯನನ್ನು ಕುರಿತು ಮಾತನಾಡುವಾಗ ರಾಜನಾದವನು ಸೂರ್ಯನಂತೆ ಸಮಯ ಬಂದಾಗ ತೀಕ್ಷ್ಣನೂ ಸಮಯ ಬಂದಾಗ ಶಾಂತನೂ ಆಗಿರಬೇಕೆಂದು ಹೇಳಿರುತ್ತಾಳೆ. ಇದರಂತೆಯೇ ಮನುಷ್ಯನು ಸಮಯಕ್ಕೆ ತಕ್ಕಂತೆ ರಾಜಸಸಾತ್ತ್ವಿಕ ಪ್ರಕೃತಿಗಳನ್ನು ಸ್ವೀಕರಿಸುತ್ತಾ ಜೀವನವನ್ನು ಸಾಗಿಸಬೇಕಾಗುತ್ತದೆ. ಸತ್ತ್ವಾದಿಗಳನ್ನು ನಮ್ಮ ಅಧೀನದಲ್ಲಿಟ್ಟುಕೊಂಡೇ ಉಪಯೋಗಿಸಬೇಕೇ ಹೊರೆತು ಅವುಗಳಿಗೆ ನಾವು ವಶರಾಗಿರಬಾರದು, ಅಷ್ಟೆ.

"ದುಃಖಶೋಕಾಮಯಪ್ರದಾಃ" ಎಂದಿದ್ದರೂ ರಾಜಸನಿಮಿತ್ತಗಳು ಯಾವಾಗಲೂ ದುಃಖಾದಿಗಳಲ್ಲಿಯೇ ಪರ್ಯವಸಾನವಾಗುವವೆಂದು ತಿಳಿಯಬಾರದು. ಅಶೋಕನಿಗೆ ಕಳಿಂಗ ಯುದ್ಧದಿಂದ ದುಃಖವು ಬಂದು ಮುಂದೆ ಅವನು ಧರ್ಮಿಷ್ಠನಾಗುವಂತೆ ಮಾಡಿತು. ಆದ್ದರಿಂದ ರಾಜಸನಿಮಿತ್ತಗಳೂ ಕಾರಣಾಂತರದಿಂದ ಶುಭಪರಿಣಾಮವನ್ನುಂಟುಮಾಡುವವು. ಆದರೆ ಅವುಗಳಿಂದ ಸಾಕ್ಷಾತ್ತಾಗಿ ದುಃಖಶೋಕರೋಗಾದಿಗಳೇ ಆಗುವವೆಂದು ಶ್ಲೋಕಕ್ಕೆ ಅರ್ಥಮಾಡಿಕೊಳ್ಳಬೇಕು.

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥ 17-10**

ಸರಿಯಾಗಿ ಪಕ್ವವಾಗದೆ ಇರುವದು, ಯಾವ ಸಾರಾಂಶವೂ ಇಲ್ಲದೆ ನಿರ್ವೀರ್ಯವಾಗಿರುವದು, ದುರ್ಗಂಧದಿಂದ ಕೂಡಿರುವದು, ತಂಗಳಾಗಿರುವದು, ಎಂಜಲಾಗಿರುವದು, ಯಜ್ಞಾರ್ಹವಲ್ಲದಿರುವದು - ಇಂಥದ್ದು ತಾಮಸರಿಗೆ ಇಷ್ಟವಾದ ಆಹಾರವು. ತಮೋಗುಣದಿಂದ ಮನಸ್ಸು ಆವೃತ್ತವಾಗಿರುವದರಿಂದ ದೋಷ ಭೂಯಿಷ್ಠವಾಗಿರುವ ಆಹಾರದಲ್ಲಿಯೇ ಅದು ಗುಣವುಳ್ಳದ್ದೆಂಬ ಅಧ್ಯಾಸವುಂಟಾಗುತ್ತಿರುವದು. ಉಳಿದವರೆಲ್ಲರೂ ಅಸಹ್ಯಪಡುತ್ತಿದ್ದರೂ ಅದನ್ನು ಲೆಕ್ಕಕ್ಕೆ ತಾರದೆ ಅಂಥ ಆಹಾರವನ್ನೇ ಹುಡುಕಿಕೊಂಡು ಹೋಗುವ ಮನಸ್ಸು ತಾಮಸವು, ಆಹಾರವನ್ನು ಇಲ್ಲಿ ಉಪಲಕ್ಷಣವಾಗಿ ತೆಗೆದುಕೊಂಡರೆ ತಾಮಸವಾದ ಪದಾರ್ಥಗಳಲ್ಲಿಯೇ ಮೆಚ್ಚಿಕೆ ಇರುವ ಮನಸ್ಸು ತನ್ನ ನಾಶಕ್ಕೇ ತಾನು ಪ್ರಯತ್ನಪಡುವದೆಂದು ನಿಶ್ಚಯಿಸಬಹುದು.

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ 17-11**

ಆಹಾರದಲ್ಲಿ ಸಾತ್ತ್ವಿಕಾದಿಭೇದಗಳನ್ನು ಹೇಳಿದ್ದಾಯಿತು. ಈಗ ಯಜ್ಞವನ್ನು ಪ್ರಾರಂಭಿಸಿದೆ. ತನಗೆ ಇಷ್ಟವೂ ಸಂತೋಷಕರವೂ ಆದ ಶಾಸ್ತ್ರೀಯಕರ್ತವ್ಯವನ್ನು ಇಲ್ಲಿ ಯಜ್ಞ ಶಬ್ದದಿಂದ ತಿಳಿಸಿದೆ ಎಂದು ಕಲ್ಪಿಸಬಹುದು. ಇದು ಮಾಡತಕ್ಕದ್ದು ಎಂಬಿಷ್ಟೇ

ಕಾರಣದಿಂದ ಯಾವ ಫಲವನ್ನೂ ಬಯಸದೆ ಚಿತ್ತವಿಟ್ಟು ನಡೆಸುವ ಪೂಜಾದಿಗಳು ಸಾತ್ತ್ವಿಕ ಯಜ್ಞವು. ಸಾತ್ತ್ವಿಕವಾದ ಯಜ್ಞಾದಿಗಳು ತಮ್ಮದೇ ಒಂದು ವಿಲಕ್ಷಣವಾದ ಆನಂದವನ್ನು ಕೊಟ್ಟು ಮನಸ್ಸಿಗೆ ಸಂಸ್ಕಾರವನ್ನುಂಟುಮಾಡುತ್ತಿರುವವು. ಲೋಕದಲ್ಲಿಯೂ ಕೆಲವು ಕೆಲಸಗಳು ತತ್ಕಾಲಕ್ಕೆ ಸುಖವನ್ನು ಕೊಟ್ಟರೂ ಅವುಗಳಿಂದ ಮತ್ತೊಬ್ಬರಿಗೆ ಯಾವಾಗಲೂ ಹಿತವೇ ಆಗುತ್ತಿರುವದೆಂದು ಹೇಳುವದಕ್ಕೆ ಬರುವದಿಲ್ಲ. ಗಣಿತಶಾಸ್ತ್ರ, ಜ್ಯೋತಿಃಶಾಸ್ತ್ರ - ಮುಂತಾದವುಗಳನ್ನು ಅಭ್ಯಾಸಮಾಡುವದರಿಂದ ಒಂದು ಬಗೆಯ ವಿದ್ಯಾನಂದವು ಉಂಟಾಗುತ್ತದೆ. ಆ ಶಾಸ್ತ್ರಗಳು ಕೂಡಲೆ ಜೀವನದಲ್ಲಿ ಅನುಭವಕ್ಕೆ ಯೋಗ್ಯವಾದ ಅನುಕೂಲ್ಯಗಳನ್ನುಂಟುಮಾಡಿಕೊಡಲಿ ಬಿಡಲಿ, ಆ ಅಭ್ಯಾಸಮಾತ್ರದಿಂದಲೇ ಆಗುವ ಅಸಾಧಾರಣವಾದ ಆನಂದವು ಆಗುವದಿಲ್ಲವೆಂದು ಹೇಳುವದು ಯಾರಿಗೂ ಶಕ್ಯವಲ್ಲ. ಉದ್ವಗಟ್ಟಿಯಲ್ಲಿ ಒಂದಾನೊಂದು ನಿಮಿತ್ತದಿಂದ ನಾನು ನನ್ನ ಸ್ನೇಹಿತರೊಬ್ಬರೊಡನೆ ಇರಬೇಕಾದ ಸಂಭವ ಬಂದಿತ್ತು. ಅಲ್ಲಿ ಆ ಮಠದಲ್ಲಿ ಏಕಾಂತವಾಗಿ ವಾಸಮಾಡುವದು, ಕಾಲಕಾಲಕ್ಕೆ ನದಿಯಲ್ಲಿ ಸ್ನಾನಸಂಧ್ಯಾದಿಗಳನ್ನು ಮಾಡುವದು, ಉಪನಿಷದ್ಭಾಷ್ಯವನ್ನು ಅಭ್ಯಾಸಮಾಡುವದು - ಇಷ್ಟರಿಂದಲೇ ಹಗಲಿನ ಮುಕ್ಕಾಲು ಭಾಗವು ಕಳೆದುಹೋಗುತ್ತಿತ್ತು. ಅಲ್ಲಿ ನಾನಿದ್ದ ಹದಿನೈದು ಇಪ್ಪತ್ತು ದಿನಗಳು ಏಕಾಂತವಾಸದಿಂದ ಯಾವದೋ ಒಂದು ಬಗೆಯ ವಿಲಕ್ಷಣ ಶಕ್ತಿ ವಿಶೇಷವು ನಮಗೆ ಬಂದು ಕೂಡಿಕೊಂಡಂತೆಯೂ ನಾನು ಯಾವದೋ ಒಂದು ಪರಮಸಾತ್ತ್ವಿಕವಾದ ಲೋಕದಲ್ಲಿ ಇದ್ದಂತೆಯೂ ಭಾಸವಾಗುತ್ತಿತ್ತು. ಆ ಊರನ್ನು ಬಿಟ್ಟು ನಾನು ದಾವಣಗೆರೆಗೆ ಬಂದಾಗ ಅಲ್ಪ ಜನಸಂಖ್ಯೆಯ ಊರಿನಿಂದ ಜನಗಳ ಕೋಲಾಹಲವಿರುವ ಸಂತೆಯೊಂದಕ್ಕೆ ಹೋದಂತೆ ಭಾಸವಾಯಿತು. ಸಾತ್ತ್ವಿಕವ್ಯಾಪಾರಗಳಿಂದ ಮತ್ತೆ ಯಾವ ಲೌಕಿಕ ಪ್ರಯೋಜನವೂ ಆಗದಿದ್ದರೂ ಇಂಥ ವಿಲಕ್ಷಣವಾದ ಆನಂದವು ಕಟ್ಟಿಟ್ಟ ಬುತ್ತಿಯಾಗಿರುತ್ತದೆ. ಪರಮೇಶ್ವರನ ಭಕ್ತಿಯನ್ನು ಮಾಡುವವರು ಮತ್ತೆ ಯಾವ ಪ್ರಯೋಜನವನ್ನೂ ಬಯಸದೆ ಅದರಲ್ಲಿಯೇ ರತರಾಗಿರುವದಕ್ಕೆ ಇದೇ ಕಾರಣ. ಕಾಂಗ್ರೆಸ್ಸಿನ ಚಳುವಳಿಯಲ್ಲಿ ನಿಜವಾಗಿ ಸತ್ಯಾಗ್ರಹವನ್ನು ಆಸಕ್ತಿಪೂರ್ವಕವಾಗಿ ಕೈಕೊಂಡಿದ್ದವರು ಜೈಲಿಗೆ ಹೋಗುವಾಗ ದೇವಾಲಯಕ್ಕೆ ಹೋಗುವಷ್ಟು ಔತ್ಸುಕ್ಯವನ್ನು ತೋರಿಸಿದ್ದಕ್ಕೆ ಇದೇ ಕಾರಣ. ಇದು ಕರ್ತವ್ಯವು - ಎಂದು ಕರ್ತವ್ಯಕ್ಕೆ ಕಟ್ಟುಬಿದ್ದು ಕೆಲಸವನ್ನು ಮಾಡುತ್ತಿರುವವರು ಕರ್ತವ್ಯಪಿಶಾಚಿಯಿಂದ ಬಿಡಗಡೆಯನ್ನು ಹೊಂದುವದಕ್ಕೆ ತಮ್ಮ ಕೈಯಲ್ಲಾದ ಪ್ರಯತ್ನವನ್ನು ಮಾಡುತ್ತಿರುವವರು. ಆದರೆ ಸಾತ್ತ್ವಿಕ ಕಾರ್ಯದಿಂದಾಗುವ ಆನಂದದಿಂದ ಪ್ರಚೋದಿತರಾಗಿರುವವರು ಏನು ಮಾಡಿದರೂ ಅಂಥ ಕರ್ಮಗಳನ್ನು ಬಿಡಲೊಲ್ಲದೆ ಇರುವರು.

ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ 17-12

ಫಲವನ್ನು ಮನಸ್ಸಿನಲ್ಲಿಟ್ಟುಕೊಂಡು ದಂಭಾರ್ಥವಾಗಿ ಯಾವದನ್ನು ಮಾಡುವರೋ ಆ ಯಜ್ಞವನ್ನು ರಾಸಜವೆಂದು ತಿಳಿ ಎಂದು ಭಗವಂತನು ಅಪ್ಪಣೆಕೊಡಿಸಿರುತ್ತಾನೆ. ಕರ್ಮವನ್ನು ಮಾಡಿದ ಮಾತ್ರದಿಂದಲೇ ಒಂದು ಬಗೆಯ ವಿಲಕ್ಷಣವಾದ ಆನಂದವು ದೊರೆಯುವದೆಂದು ಮೇಲೆ ಹೇಳಿರುತ್ತೇನೆ. ಇಂಥ ಆನಂದವು ನಿರುಪಾಧಿಕವಾಗಿರುತ್ತದೆ. ಆದರೆ ಪರಿಚ್ಛಿನ್ನ ಬುದ್ಧಿಗಳಾದವರಿಗೆ ತಾವು ಮಾಡುವ ಕರ್ಮದಿಂದ ಯಾವದಾದರೊಂದು ಫಲವು ಗೊತ್ತಾಗದೆ ಇದ್ದರೆ ತೃಪ್ತಿಯಾಗುವದಿಲ್ಲ. ಒಬ್ಬ ಮಹಾಶಯರು "ನಾನು ನಿತ್ಯವೂ ಸಹಸ್ರ ಗಾಯತ್ರಿಯನ್ನು ಮಾಡುತ್ತೇನೆ. ಅದಕ್ಕೆ ವರ್ಷದೊಳಗಾಗಿ ಫಲವು ಆಗದೆ ಹೋಗುವದೇ ಇಲ್ಲ. ನನಗೆ ಅಪ್ರಾರ್ಥಿತವಾಗಿ ಒಂದು ಮೃಷ್ಟಾನ್ನ ಭೋಜನವು ಸಿಕ್ಕೇಸಿಕ್ಕುತ್ತದೆ"- ಎಂದು ಹೇಳಿದ್ದರು. ಮಾಡಿದ ಕರ್ಮಕ್ಕೆ ಫಲವನ್ನು ಬಯಸುವದು ತಪ್ಪಲ್ಲ, ಉತ್ತಮವಾದ ಫಲವನ್ನು ಕೊಡಬಲ್ಲ ಈಶ್ವರನಿಗೆ ನಾವು ಮಾಡಿದ ಸತ್ಕರ್ಮಕ್ಕೆ ನಾವು ಇಚ್ಛಿಸುವ ಅಲ್ಪಫಲವನ್ನು ಕೊಡುವದು ಕಷ್ಟವೇನೂ ಅಲ್ಲ; ಆದರೆ ಉತ್ಕೃಷ್ಟವಾದ ಫಲವು ತಾನೇ ಸನ್ನಿಹಿತವಾಗಿರುವಾಗ ಅದರ ಸ್ಥಾನದಲ್ಲಿ ಅಲ್ಪಫಲವನ್ನು ಬಯಸುವದರಿಂದ ನಮಗೆ ನಾವೇ ಅನ್ಯಾಯ ಮಾಡಿಕೊಂಡಂತಾಗುತ್ತದೆ. ಫಲವನ್ನು ಕೇಳದೆ ಒಂದೇ ಸಮನೆ ದುಡಿಯುತ್ತಿರುವ ಒಬ್ಬ ಆಳಿನ ಋಣವನ್ನು ಹೇಗೆ ತೀರಿಸಲಿ ?- ಎಂದು ಯಜಮಾನನಿಗೆ ಚಿಂತೆಯುಂಟಾಗುವದು ; ಇಂಥದ್ದೊಂದು ಫಲವನ್ನು ಕೊಡೆಂದು ಕೇಳಿದರೆ ಅವನಿಗೆ ಹಗುರ. ರಾಜಸಯಜ್ಞವು ಫಲಾಭಿಸಂಧಿಪೂರ್ವಕವಾಗಿರುವದೆಂಬುದಿಷ್ಟೇ ಅಲ್ಲ, ಅದು ದಂಭಕ್ಕಾಗಿಯೂ ಮಾಡಿದ್ದಾಗಿರುತ್ತದೆ. ನಾನು ಇಂಥ ಯಜ್ಞವನ್ನು ಮಾಡಿದ್ದರಿಂದ ದೊಡ್ಡ ದೀಕ್ಷಿತನಾಗಿರುವೆನು ಎಂದು ಕುಂಡಲಗಳನ್ನು ಅತ್ತಿತ್ತ ಅಲುಗಾಡಿಸುತ್ತಾ ಮೆರೆಯುವ ದಂಭವು ಯಜ್ಞಕ್ಕೆ ಸೂಚಕವಾಗಿರುವದಕ್ಕಿಂತಲೂ ಯಜ್ಞವನ್ನು ಮಾಡಿದವನ ಅಹಂಭಾವಕ್ಕೆ ಹೆಚ್ಚು ಸೂಚಕವಾಗಿರುತ್ತದೆ. "ಧರ್ಮಃ ಕ್ಷರತಿ ಕೀರ್ತನಾತ್" ಎಂಬ ಮನ್ವಾದಿಗಳ ವಾಕ್ಯದಂತೆ ಮನುಷ್ಯನು ಮಾಡುವ ದಂಭದಿಂದ ಅವನು ಮಾಡುವ ಅಷ್ಟಿಷ್ಟು ಧರ್ಮವೂ ಲೋಪವಾಗಿ ಅದಕ್ಕೆ ಬೆಲೆಯೇ ಇಲ್ಲದಂತೆ ಮಾಡುವದು. ಈಶ್ವರನೆಂದರೇನು ? ಅವನ ಪೂಜೆಮಾಡುವದೆಂದರೇನು ? ಅವನು ದಯವಿಟ್ಟು ನಾವು ಮಾಡುವ ಪೂಜೆಯನ್ನು ಪೂಜೆಯಾಗಲಿ ಎಂದು ಅನುಗ್ರಹಿಸಿದರೆ ಅದು ಪೂಜೆಯಾಗುವದು. ಎಷ್ಟೇ ಪ್ರಯತ್ನಪೂರ್ವಕವಾಗಿ ಮಾಡಿದರೂ ಕರ್ಮವು ವಿಧಿವತ್ತಾಗಿದೆ - ಎಂದು ಹೇಳುವದಕ್ಕೆ ಯಾವನಿಗೂ ಎದೆ ಬರುವದಿಲ್ಲ. ನಾನು ಈಶ್ವರನ ಮುಂದೆ ಒಂದು ಹುಳುವು ಕೂಡ ಆಗಲಾರೆನು ; ನಾನು ಮಾಡುವ ಕರ್ಮವನ್ನು ಇಂಥದ್ದು ಮಾಡಿದ್ದೇನೆ - ಎಂದು ಕೊಚ್ಚಿಕೊಳ್ಳುವದಕ್ಕೆ ಆತನ ಎದುರಿಗೆ ನನಗೆ ಹೇಗೆ ಬಾಯಿ ಬರಬೇಕು ? "ಭಗವಂತ, ಮಂತ್ರಹೀನವಾಗಿ ಕ್ರಿಯಾಹೀನವಾಗಿ ಭಕ್ತಿಹೀನವಾಗಿ ನಾನು ಏನೇನು ಮಾಡುವೆನೋ ಅದು ಪರಿಪೂರ್ಣವಾಗಲೆಂದು ಹರಸು" ಎಂದು ಆತನನ್ನು ವಿನಯದಿಂದ ಬೇಡಿಕೊಳ್ಳಬೇಕು. ಆಗ ನಾವು ಮಾಡಿರುವ ಕರ್ಮದ ರಾಜಸತ್ವವು ತೊಲಗಿ ಅದಕ್ಕೆ ಬೆಲೆಯುಂಟಾಗುವದು.



# ೧೬೫. ಕರ್ಮದಲ್ಲಿ ವಿಧ್ಯಾದಿಗಳ ಆವಶ್ಯಕತೆ 17-(13)

**(12-3-50)**

ಯಜ್ಞಗಳ ರಾಜಸಾದಿ ವಿಭಾಗಗಳನ್ನು ಹೇಳುತ್ತಾ ಇದೆ. ಸಾತ್ತ್ವಿಕ ರಾಜಸ ಯಜ್ಞಗಳನ್ನು ವರ್ಣಿಸಿದ್ದಾಯಿತು. ತಾಮಸಯಜ್ಞವು ಹೇಗಿರುವದೆಂದರೆ :-

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ 17-13**

ವಿಧಿಹೀನವಾಗಿ ಇರುವದು ಎಂದರೆ ಶಾಸ್ತ್ರದಲ್ಲಿ ಏನಾದರೂ ಹೇಳಿರಲಿ, ಹೀಗೆ ಮಾಡಿ ಬಿಡುವೆನು - ಎಂದು ಶಾಸ್ತ್ರವಿಧಿಯನ್ನು ಧಿಕ್ಕರಿಸುವದು. ಅಸೃಷ್ಟಾನ್ನವು ಎಂದರೆ ಬ್ರಾಹ್ಮಣಾದಿಗಳಿಗೆ ವಿಧ್ಯುಕ್ತವಾಗಿ ಅನ್ನವನ್ನು ಹಾಕದೆ ಇರುವದು. ಬ್ರಾಹ್ಮಣರೆಂದರೆ ತಮ್ಮನ್ನೂ ಲೋಕವನ್ನೂ ಒಂದುಮಾಡಿಕೊಂಡು ನಡೆಯುವ ನಿಃಸ್ವಾರ್ಥಪರರು. ಅವರಿಗೆ ಕೊಟ್ಟ ಒಂದು ಗುಕ್ಕು ಅನ್ನವು ಕೂಡ ಎಷ್ಟೋ ಕಲ್ಯಾಣಕರವಾಗಿರುವದು. ಈಗಿನ ಕಾಲದಲ್ಲಿ ಬ್ರಾಹ್ಮಣರಿಗೆ ಅನ್ನದಾನವೆಂಬುದು ಒಂದು ದುಂದುವೆಚ್ಚವಾಗಿ ಭಾವಿಸಲ್ಪಟ್ಟಿದೆ. ಬ್ರಾಹ್ಮಣರಿಗೆ ಅನ್ನವನ್ನು ಕೊಡುವ ಸಂದರ್ಭದಲ್ಲಿ ಎಷ್ಟೋ ಆಹಾರವು ದುರ್ವ್ಯಯವಾಗುವದೆಂದೂ ಆದ್ದರಿಂದ ಆ ಸಂಪ್ರದಾಯವನ್ನು ನಿಲ್ಲಿಸಿಬಿಡುವದು ಈಗ್ಗೆ ಕ್ಷೇಮಕರವೆಂದೂ ಕೆಲವರ ಭಾವನೆ. ಆದರೆ ಉತ್ತಮರಾದವರಿಗೆ ದಾನಮಾಡುವಾಗ ಹೀಗೆ ಅವರ ಪರಿವಾರ ಸಂಬಂಧದಿಂದ ಸ್ವಲ್ಪ ಅನವಶ್ಯಕವಾಗಿ ವ್ಯಯವಾಗುವದು ಅನಿವಾರಣೀಯವಾಗಿದೆ. ಮಹಾತ್ಮಾ ಗಾಂಧಿಯವರಿಗೆ ಒಬ್ಬ ವ್ಯಕ್ತಿಯಾಗಿ ನೋಡಿದರೆ ಆತಿಥ್ಯವನ್ನು ಮಾಡುವದಕ್ಕೆ ಅಷ್ಟೇನೂ ವೆಚ್ಚವಾಗುವಂತಿರಲಿಲ್ಲ. ಆದರೂ ಅವರ ಪರಿವಾರದವರ ನಿಮಿತ್ತದಿಂದ ಅನವಶ್ಯವಾದ ಎಷ್ಟೋ ಖರ್ಚುಗಳು ಏಳುತ್ತಿದ್ದವು. ಆದರೂ ಮಹಾತ್ಮರಲ್ಲಿ ಪ್ರೇಮವಿರುವವರು ಯಾರೂ ಇದನ್ನು ದುಂದುವೆಚ್ಚವೆಂದು ಭಾವಿಸುತ್ತಿರಲಿಲ್ಲ. ಈ ದುಂದವೆಚ್ಚವೆಂಬ ಕುಂಟುನಿಮಿತ್ತದಿಂದ ಯೋಗ್ಯರಿಗೂ ದಾನವನ್ನು ಮಾಡುವದನ್ನು ನಿಲ್ಲಿಸುವದು ಎಂದಿಗೂ ಸರಿಯಲ್ಲ. ಯೋಗ್ಯರಿಗೆ ಮಾತ್ರವೇ ಅಲ್ಲ. ಅಯೋಗ್ಯರಿಗೂ ಅವಶ್ಯವಾಗಿ ಅನ್ನದಾನಾದಿಗಳನ್ನು ಮಾಡಬೇಕಾಗುತ್ತದೆ. ಯೋಗ್ಯರಿಗೆ ಹಾಕಿದ ಅನ್ನವಂತೂ ನಮಗೂ ಲೋಕಕ್ಕೂ ಕಲ್ಯಾಣವನ್ನುಂಟುಮಾಡುತ್ತದೆ. ಅಯೋಗ್ಯರಿಗಾದರೂ ಭೂತಮಾತ್ರಕ್ಕೆ ತೃಪ್ತಿಯನ್ನುಂಟುಮಾಡಿದ ಫಲವು ಬರುತ್ತದೆ. ಯೋಗ್ಯರಾದವರಿಗೆ ನಾವು ಹಾಕುವ ಅನ್ನಕ್ಕೆ ಒಂದೊಂದು ಅಗುಳಿಗೂ ಪ್ರತಿಯಾಗಿ ಹತ್ತರಷ್ಟು, ನೂರರಷ್ಟು ಫಲವು ನಮಗೆ ದೊರಕುತ್ತದೆ. ಕೆಲವು ವರ್ಷಗಳ ಹಿಂದೆ ಒಬ್ಬಾನೊಬ್ಬ ಸಂನ್ಯಾಸಿಗಳನ್ನು ಅನಿರೀಕ್ಷಿತವಾಗಿ ನಮ್ಮ ಸ್ನೇಹಿತರೊಬ್ಬರು ಕರೆದು ಆತಿಥ್ಯವನ್ನು ಮಾಡಿದರು. ಮನೆಯಲ್ಲಿ ಹೆಂಗಸರು ಯಾರೂ ಇರಲಿಲ್ಲ. ಬಂದ ಸಂನ್ಯಾಸಿಗಳಿಗೆ ಭೋಜನದಲ್ಲಿ ಯಾವ

ಭಾಗವು ಇಷ್ಟವೆಂಬುದು ಮೊದಲು ತಿಳಿದೂ ಇರಲಿಲ್ಲ. ತಾವೇ ಮಾಡಿದ್ದ ಬಹುಸಾಧಾರಣವಾದ ಅನ್ನಾದಿಗಳನ್ನು ಅವರಿಗೆ ಉಣಬಡಿಸಿದರು. ಸಂನ್ಯಾಸಿಗಳು ಸಂತೋಷದಿಂದ ಊಟಮಾಡಿದ್ದಲ್ಲದೆ ಊಟವಾದ ಬಳಿಕ ನಮ್ಮಿಬ್ಬರಿಗೂ ತತ್ತ್ವೋಪದೇಶವನ್ನು ಮಾಡಿ ವೇದಾಂತದಲ್ಲಿ ಅಭಿರುಚಿಯನ್ನುಂಟುಮಾಡುವ ಕೆಲವು ಹಿತೋಕ್ತಿಗಳನ್ನು ಹೇಳಿ ಎಲ್ಲಿಗೋ ಹೊರಟುಹೋದರು. ಅವರ ವೃತ್ತಾಂತವು ನಮಗೆ ಈಗಲೂ ಸ್ವಲ್ಪವೂ ತಿಳಿಯುವ ಹಾಗಿಲ್ಲ ; ಆದರೆ ಅವರು ಮಾಡಿದ ಉಪದೇಶದಿಂದ ನಮ್ಮಿಬ್ಬರ ಜೀವನಕ್ರಮವೂ ಅಂದಿನಿಂದಲೇ ಬದಲಾಯಿಸಿತು - ಎಂದು ಹೇಳಬಹುದು. ಇಂಥ ಸತ್ಪಾತ್ರರಾದವರು ಲೋಕಸಂಚಾರವನ್ನು ಮಾಡುತ್ತಾ ಜನರಿಗೆ ಅನಿಮಿತ್ತಬಂಧುಗಳಾಗಿ ಮಹೋಪಕಾರವನ್ನು ಮಾಡುತ್ತಿರುತ್ತಾರೆ. ಸತ್ಪುರುಷರಿಗೆ ಸಂತೋಷವನ್ನು ಉಂಟುಮಾಡುವದೇ ಈಶ್ವರನ ಪೂಜೆಯು. ಆದ್ದರಿಂದ ಇಂಥ ಮಹಾತ್ಮರಿಗೆ ಹಾಕಿದ ಅನ್ನವು ಮಹಾಫಲದಾಯಕವಾಗಿರುತ್ತದೆ. ಉತ್ತಮಯಜ್ಞದಲ್ಲಿ ಇಂಥ ಅನೇಕಮಹಾತ್ಮರಿಗೆ ಭಕ್ತಿಯಿಂದ ಅನ್ನದಾನಮಾಡುತ್ತಿರುತ್ತಾರೆ. ಆದರೆ ತಾಮಸಯಜ್ಞದಲ್ಲಿ ಅನ್ನದಾನದ ಸುದ್ದಿಯು ಎಲ್ಲಿರುತ್ತದೆಯೋ ಎನ್ನುವಂತೆ ಇರುತ್ತದೆ.

ತಾಮಸಯಜ್ಞವು ಮಂತ್ರಹೀನವಾಗಿರುತ್ತದೆ ; ಎಂದರೆ ಸ್ವರ, ವರ್ಣ ಮುಂತಾದ ವಿಶೇಷಗಳೇನೂ ಇಲ್ಲದೆ ಹೇಗೆಂದರೆ ಹಾಗೆ ಉಚ್ಚರಿಸಿದ ಒಂದೆರಡು ವೇದಮಂತ್ರಗಳಿಂದ ಕೂಡಿರಬಹುದು. ವೇದಮಂತ್ರಗಳು ಅರ್ಥದಿಂದ ಮಾತ್ರವೇ ಅಲ್ಲ, ಶಬ್ದೋಚ್ಚಾರಣೆಯಿಂದಲೂ ಫಲವನ್ನು ಕೊಡತಕ್ಕವುಗಳಾಗಿರುತ್ತವೆ. ವೇದಭಾಷೆಯಲ್ಲಿ ಪರ್ಯಾಯಶಬ್ದಗಳು ಪ್ರಾಯಶಃ ಇರುವದೇ ಇಲ್ಲ. ಒಂದೊಂದು ಶಬ್ದಕ್ಕೂ ಒಂದೊಂದು ವಿಶಿಷ್ಟವಾದ ಅರ್ಥವಿರುತ್ತದೆ. ಹೀಗಿರುವದರಿಂದ ವೇದದ ಮಂತ್ರಗಳನ್ನು ಆಯಾ ಶಬ್ದಗಳ ಸರಿಯಾದ ಉಚ್ಚಾರಣೆಯ ಪೂರ್ವಕವಾಗಿಯೇ ಅರ್ಥಾನುಸಂಧಾನಪೂರ್ವಕವಾಗಿ ಪ್ರಯೋಗಮಾಡಿದರೆ ಆಯಾ ಮಂತ್ರದ ಪೂರ್ಣವಾದ ಅಭಿಪ್ರಾಯವನ್ನು ನಾವು ಅನುಸಂಧಾನಮಾಡಿದಂತೆ ಆಗುವದು. ತೆಲುಗುಭಾಷೆಯನ್ನು ಅರಿಯದವರೂ ತ್ಯಾಗರಾಜಕೀರ್ತನೆಯನ್ನು ಹಾಡುತ್ತಿರುತ್ತಾರೆ. ಆದರೆ ಭಾಷಾಜ್ಞಾನಪೂರ್ವಕವಾಗಿ ಅರ್ಥಾನುಸಂಧಾನಪೂರ್ವಕವಾಗಿ ಪ್ರೇಮಪರವಶರಾಗಿ ಯಾರು ಆ ಕೀರ್ತನೆಗಳನ್ನು ಹಾಡುವರೋ ಅವರೇ ತ್ಯಾಗರಾಜರ ಮನಸ್ಸಿನ ಮಟ್ಟಕ್ಕೆ ಏರಿ ತಾವೂ ಆನಂದಪರವಶರಾಗಿ ತಮ್ಮ ಸುತ್ತಮುತ್ತಲಿನವರನ್ನೂ ಆನಂದದಲ್ಲಿ ಮುಳುಗಿಸುವರು. ಹೀಗೆಯೇ ಪೂರ್ವಕಾಲದ ಋಷಿಗಳು ಪರಮಾರ್ಥವನ್ನು ಚಿಂತಿಸುತ್ತಿರುವಾಗ ಅವರ ಮನಸ್ಸು ಬಹಳ ಪಾರಿಶುದ್ಧ್ಯವನ್ನು ಪಡೆದು ತತ್ತ್ವವನ್ನು ಕಂಡುಕೊಂಡದ್ದಲ್ಲದೆ ಅದನ್ನು ಉತ್ತಮ ರೀತಿಯಿಂದ ಹೊರಗಿನವರಿಗೆ ತಿಳಿಸುವ ಅನುಗುಣವಾದ ಶಬ್ದಗಳ ಜೋಡಣೆಯಿಂದ ಕೂಡಿದ ಮಂತ್ರವಾಕ್ಯಗಳಾಗಿ ಅವರ ಬಾಯಿಂದ ಹೊರಬಿತ್ತು. ನಮ್ಮ ಚಿತ್ತವನ್ನು ಆ ಋಷಿಗಳ ಚಿತ್ತದ ಮಟ್ಟಕ್ಕೆ ಏರಿಸುವದು

ಸಾಧ್ಯವಿಲ್ಲದಿದ್ದರೂ ಆ ಋಷಿಗಳ ವಾಕ್ಯದ ಶಬ್ದದ ಜೋಡಣೆಯನ್ನು ಎಂದಿಗೂ ಹೊಲಗೆಡಿಸಬಾರದು. ಕುರಾನ್ ಗ್ರಂಥಗಳನ್ನೆಲ್ಲ ಸಂಪೂರ್ಣವಾಗಿ ನಾಶಪಡಿಸಿದರೂ ಅದರಲ್ಲಿ ಇರುವ ಒಂದು ಚಕಾರತುಕಾರವೂ ಹೆಚ್ಚು ಕಡಿಮೆಯಾಗದಂತೆ ಮತ್ತೆ ಹೇಳಬಲ್ಲ ಅಧ್ಯಾಪಕರು ಇರುತ್ತಾರೆಂದು ಒಬ್ಬ ಮೌಲ್ವಿಯು ಒಂದಾನೊಂದು ಕಾಲದಲ್ಲಿ ಹೇಳಿದ್ದು ನೆನಪಿದೆ. ಈ ಮಾತು ನಮ್ಮ ವೇದಕ್ಕೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಅನ್ವಯಿಸುತ್ತದೆ. ವೇದವಾಕ್ಯವನ್ನು ಪದಕ್ರಮಾದಿಗಳ ಸಹಾಯದಿಂದ ಅಧ್ಯಾಪಕರು ರಕ್ಷಿಸಿಕೊಂಡು ಬಂದಿರುವ ಕ್ರಮವು ಲೋಕಕ್ಕೇ ವಿಸ್ಮಯಕಾರಕವಾಗಿರುತ್ತದೆ. ವೇದವು ಹಾಗೆ ರಕ್ಷಿಸುವದಕ್ಕೆ ಅರ್ಹವಾದದ್ದೂ ಆಗಿದೆ. ಇಂಥ ಮಂತ್ರಕ್ಕೆ ಇಂಥವನೊಬ್ಬ ಋಷಿ, ಇಂಥದ್ದು ಛಂದಸ್ಸು, ಅದಕ್ಕೆ ಹೀಗೆ ವಿನಿಯೋಗ - ಎಂದು ನಮ್ಮವರು ಈಗಲೂ ಶ್ರದ್ಧೆಯಿಂದ ನೆನಪಿಟ್ಟುಕೊಂಡು ಉಚ್ಚರಿಸುತ್ತಾರೆ. "ಮಹಾರಾಜರ ಸಂದೇಶ" ಎಂದು ಅವರ ಶಬ್ದಶೈಲಿಯನ್ನೇ ಅನುಸರಿಸಿ ಒಬ್ಬಾನೊಬ್ಬ ಪ್ರತಿನಿಧಿಯು ಹೇಳುತ್ತಿರುವಾಗ ಮಿಕ್ಕವರೆಲ್ಲರೂ ರಾಜ ಭಕ್ತಿಯಿಂದ ಅದನ್ನು ಕೇಳುತ್ತಿರುವಂತೆ ಇದು ಇಂಥ ಋಷಿಗಳ ವಾಕ್ಯ - ಎಂದು ಉಚ್ಚರಿಸುವ ವೇದಮಂತ್ರವು ಆಸ್ತಿಕರ ಹೃದಯದಲ್ಲಿ ಹೆಚ್ಚಿನ ಶ್ರದ್ಧಾಭಕ್ತಿಗಳನ್ನು ಎಬ್ಬಿಸುವದರಲ್ಲಿ ಏನಾಶ್ಚರ್ಯ? ಆದರೆ ತಾಮಸಯಜ್ಞದಲ್ಲಿ ಇಂಥ ಮಂತ್ರದ ಸುದ್ದಿ ಇರುವದಿಲ್ಲ.

ತಾಮಸಯಜ್ಞವು ಅದಕ್ಷಿಣವಾಗಿರುವದು. ದಕ್ಷಿಣೆ ಎಂಬುದು ಈಗಿನ ಲಾಯರ್ ಫೀ - ಮುಂತಾದವುಗಳಂತೆ ಕೊಡತಕ್ಕ ಪ್ರತಿಫಲಧವೆಂದು ಭಾವಿಸಕೂಡದು. ಅದು ಯಜ್ಞವನ್ನು ಮಾಡುವವನು ಋತ್ವಿಜನನ್ನು ದಯವಿಟ್ಟು ಈ ಕಾರ್ಯವನ್ನು ಮಾಡಿಕೊಡಬೇಕು - ಎಂದುಹೇಳಿ ವಿಧ್ಯುಕ್ತವಾದಷ್ಟು ದಕ್ಷಿಣೆಯನ್ನು, ಹಾಗೆ ಸಂಭವವಿಲ್ಲದಿದ್ದರೆ ಯಥಾಶಕ್ತಿ ದಕ್ಷಿಣೆಯನ್ನು, ದಯವಿಟ್ಟು ಸ್ವೀಕರಿಸಬೇಕೆಂದು ಪ್ರಾರ್ಥನಾಪೂರ್ವಕವಾಗಿ ಕೊಡುವ ಧನವು. ದಕ್ಷಿಣೆಯನ್ನು ಸ್ವೀಕರಿಸುವವನು ಅದರ ಸ್ವೀಕಾರದಿಂದ ಯಜಮಾನನು ಮಾಡಿದ ಯಜ್ಞಕ್ಕೆ ಪರಿಪೂರ್ಣಫಲವು ಬರಲೆಂದು ಅನುಗ್ರಹಿಸುವನು. ಆದ್ದರಿಂದ ಇಂತಿಷ್ಟು ಕೆಲಸ ಮಾಡಿಕೊಟ್ಟರೆ ಇಂತಿಷ್ಟು ಕೊಡಬೇಕೆಂದು ಮೊದಲೇ ಗೊತ್ತು ಮಾಡಿಕೊಂಡು ಮಾಡುವ ಲೌಕಿಕ ಪ್ರತಿಫಲಧನಕ್ಕೂ ಈ ದಕ್ಷಿಣೆಗೂ ಬಹಳ ಭೇದವಿದೆ.

ಇದರಂತೆ ಕರ್ಮಕ್ಕೆ ಶ್ರದ್ಧೆಯೂ ಅತ್ಯವಶ್ಯವಾಗಿರುತ್ತದೆ. ಶ್ರದ್ಧೆಯಿಲ್ಲದೆ ಮಾಡಿದ ಕರ್ಮವು ಕರ್ಮವೇ ಆಗುವದಿಲ್ಲ. ದಶರಥರಾಜನು ಯಜ್ಞವನ್ನು ಮಾಡುವಾಗ ಋತ್ವಿಜರಿಗೆಲ್ಲ ಕರ್ಮದಲ್ಲಿ ಯಾವ ಛಿದ್ರವೂ ಬರದಂತೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡನು. ಕರ್ಮದಲ್ಲಿ ಮಂತ್ರಾದಿಲೋಪಗಳು ಉಂಟಾದರೆ ಆ ಮರ್ಮವನ್ನು ಹಿಡಿದು ಬ್ರಹ್ಮರಾಕ್ಷಸರು ವಿಪರೀತಫಲವನ್ನು ತಂದೊಡ್ಡುವರೆಂದು ಆ ಸಂದರ್ಭದಲ್ಲಿ ದಶರಥನ ಮುಖದಿಂದ ವಾಲ್ಮೀಕರು ಹೇಳಿಸಿರುತ್ತಾರೆ. ತಾಮಸಯಜ್ಞವು ವಿಧ್ಯಾದಿಗಳಿಗೆ ವಿಪರೀತವಾಗಿಯೇ ನಡೆದಿರುವದರಿಂದ ಅದು ತೀರ ಅಧಮಕರ್ಮವೆನಿಸಿರುತ್ತದೆ.

ಈಗಿನ ಕಾಲದಲ್ಲಿ ಯಾವ ಯಜ್ಞವಾಗಲಿ ಅಧ್ಯಯನವಾಗಲಿ ಇರುವದೇ ಇಲ್ಲ. ಅವುಗಳಲ್ಲಿರುವ ಸಾತ್ತ್ವಿಕರಾಜಸತಾಮಸಪ್ರಭೇದಗಳ ಜ್ಞಾನದಿಂದ ನಮಗೆ ಆಗುವ ಪ್ರಯೋಜನವು ಬಹಳ ಕಡಿಮೆಯಲ್ಲವೆ ?- ಎಂದು ಯಾರಾದರೂ ಕೇಳಬಹುದು. ಕಲಿಯುಗದವರಿಗೆ ಶಾಸ್ತ್ರದಲ್ಲಿ ವಿಧಿಸಿರುಫ಼ ಕರ್ಮವು ಅತ್ಯಲ್ಪವಾಗಿರುತ್ತದೆ. ಆದರೆ ಈ ಅಲ್ಪಭಾಗವನ್ನು ಮಾಡುವವರು ಸಿಕ್ಕುವದೂ ಕಷ್ಟವಾಗಿದೆ. ಹೀಗಿರುವಲ್ಲಿ ನಾವು ಯಾವ ರೀತಿಯಿಂದ ಕೃತಕೃತ್ಯರಾಗಬೇಕು ?- ಎಂಬುದೊಂದು ಸಹಜವಾದ ಶಂಕೆ. ಇದಕ್ಕೆ ಶಾಸ್ತ್ರಕಾರರು ಹೇಳುವದೇನೆಂದರೆ ಯುಗಧರ್ಮಕ್ಕನುಗುಣವಾಗಿ ಅಧಿಕಾರಿಗಳ ಶ್ರದ್ಧಾದಿಗಳೂ ಅಧಿಕಾರಸಂಪತ್ತೂ ವೃದ್ಧಿಹ್ರಾಸವನ್ನು ಅನುಭವಿಸುವವು. ಕಲಿಯುಗದಲ್ಲಿ ಧರ್ಮದಿಂದ ಧನಸಂಪಾದನೆ ಮಾಡುವದಾಗಲಿ ವಿಧಿವಿಹಿತವಾಗಿರುವ ಯಜ್ಞಾದಿಕ್ರಿಯೆಗಳನ್ನು ಮಾಡುವದಾಗಲಿ ಬಹುಜನರಿಗೆ ಸಾಧ್ಯವಿರುವದೇ ಇಲ್ಲ. ಜನರಿಗೆ ಚಿತ್ತಶುದ್ಧಿಯೂ ಬಹಳ ಕಡಿಮೆ. ಆದರೂ ವಿಷ್ಣುಪುರಾಣದಲ್ಲಿ ಪರಾಶರರು ಹೇಳಿರುವಂತೆ ಕಲಿಯುಗದವರು ಧನ್ಯರು; ಏಕೆಂದರೆ ಅವರಿಗೆ ಯಜ್ಞಾದಿಕರ್ಮಗಳಿಲ್ಲದ್ದರಿಂದ ಅಹಂಕಾರವು ಹೆಚ್ಚಾಗುವ ಸಂಭವವೂ ಕಡಿಮೆ. ಈ ಸಂದರ್ಭದಲ್ಲಿ ಜನರು ಭಗವಂತನನ್ನು ಶರಣುಹೊಕ್ಕರೆ ಸಾಕು. ತಾವು ಮಾಡಿದಷ್ಟು ಅಲ್ಪಕರ್ಮದಿಂದಲೇ ಭಗವಂತನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳಬಹುದು. ಶ್ರದ್ಧೆಯೊಂದನ್ನು ಮಾತ್ರ ಬಿಡದೆ ಸಾಧ್ಯವಾದಮಟ್ಟಿಗೂ ಸಾತ್ತ್ವಿಕ ಧರ್ಮವನ್ನಾರಿಸಿಕೊಂಡು ಕರ್ಮವನ್ನು ಮಾಡಿದರೆ ಅದು ಉತ್ತಮಫಲವನ್ನು ಕೊಡುವದು. ಅಧ್ಯಯನಕ್ಕೆ ಅಧಿಕಾರವಿರುವವರು ತಾವೇ ಮಂತ್ರವನ್ನು ಕಲಿತು ಶ್ರದ್ಧೆಯಿಂದ ಕರ್ಮವನ್ನು ಮಾಡುವದು ಕರ್ಮಕ್ಕೆ ವೀರ್ಯವನ್ನು ಕೊಡುವದು. ಲೌಕಿಕರೆಂದು ಕರೆದುಕೊಳ್ಳುವವರು ಯಾವ ಮಂತ್ರವನ್ನೂ ಉಚ್ಚರಿಸದೆ ತಮಗಾಗಿ ಮಂತ್ರೋಚ್ಚಾರಣೆಯನ್ನು ಮಾಡಿ ಕರ್ಮವನ್ನು ಮಾಡಿಸುವ ಬ್ರಾಹ್ಮಣನನ್ನು ಅಸಡ್ಡೆ ಮಾಡಿ ಕರ್ಮಾಭಾಸವನ್ನು ಮಾಡುವದು ಅಕ್ಷಮ್ಯವಾದ ಅಪರಾಧವು. ಕರ್ಮಕ್ಕೆ ಶ್ರದ್ಧೆಯು ಬಹಳ ಪ್ರಧಾನವಾದದ್ದು. ಪುರಾಣೋಕ್ತವಾಗಿ ಮಾಡಿದರೂ ಶ್ರದ್ಧೆಯಿಂದ ಮಾಡಿದ್ದು ವೇದೋಕ್ತಕ್ಕೆ ಸಮಾನವಾದೀತು. ಧರ್ಮರಾಯನ ರಾಜಸೂಯಯಾಗದಲ್ಲಿರುವ ನಕುಲೋಪಾಖ್ಯಾನವನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ದರಿದ್ರನಾದ ಬ್ರಾಹ್ಮಣನೊಬ್ಬನು ಶ್ರದ್ಧೆಯಿಂದ ಮಾಡಿದ ಹಿಟ್ಟಿನ ದಾನದ ಫಲವನ್ನು ಅಲ್ಲಿ ವರ್ಣನೆಮಾಡಿದೆ. ಅಹಂಭಾವವನ್ನು ಬಿಟ್ಟು ಮಾಡಿದ ಕರ್ಮವು ಈಶ್ವರನ ಸ್ವೀಕಾರಕ್ಕೆ ಯೋಗ್ಯವಾಗಿರುತ್ತದೆ. ಎಲ್ಲಿ ಶ್ರದ್ಧೆಯಿರುವದೋ ಅಲ್ಲಿ ಪರಮೇಶ್ವರನ ಸನ್ನಿಧಿಯು ಅವಶ್ಯವಾಗಿರುತ್ತದೆ. "ಅಶ್ಮಾಪಿ ಯಾತಿ ದೇವತ್ವಂ ಮಹದ್ಭಿಃ ಸುಪ್ರತಿಷ್ಠಿತಃ" ಎಂಬಂತೆ ಶ್ರದ್ಧೆಯುಳ್ಳ ಮಹಾಜನರು ಪ್ರತಿಷ್ಠೆಮಾಡಿಸಿದ ಒಂದು ಕಲ್ಲಿನಲ್ಲಿಯೂ ಪರಮೇಶ್ವರನು ಸದಾ ಸನ್ನಿಹಿತನಾಗಿರುವನು. ಈಗ ಕಾರ್ಯಾಲಯದಲ್ಲಿ ಆಗಿರುವ ರಾಮಪ್ರತಿಷ್ಠೆಯಿಂದ ಯಾವಾಗಲೂ ಶ್ರೀರಘುರಾಮನು ಇಲ್ಲಿಯೇ ಸನ್ನಿಹಿತನಾಗಿರುವಂತೆ ನಾವುಗಳೆಲ್ಲರೂ

ಶ್ರದ್ಧೆಯಿಂದ ಬೇಡಿಕೊಳ್ಳೋಣ. ಆತನ ಅನುಗ್ರಹ ಆಗುವದೂ ಬಿಡುವದೂ - ನಮ್ಮಗಳ ಹೃದಯದಲ್ಲಿರುವ ಶ್ರದ್ಧೆಯನ್ನವಲಂಬಿಸಿರುತ್ತದೆ.. ಯಾವ ಪದಾರ್ಥವು ಸಾಕಾಗಲಿ ಬಿಡಲಿ ಶ್ರದ್ಧೆಯು ಸಾಕಾಯಿತೆ ? ಇಲ್ಲವೆ ? ಎಂಬುದನ್ನು ಪರಮೇಶ್ವರನು ನೋಡುತ್ತಿರುತ್ತಾನೆ. ನಮಗೆ ಯಾವ ಹೆಮ್ಮೆಯೂ ಬೇಡ. ಶ್ರೀ ದಿಗ್ವಿಜಯರಾಮನನ್ನು ಪ್ರತಿಷ್ಠಿಸಲು ನಮ್ಮ ಕೈಯಲ್ಲಾದ ಪ್ರಯತ್ನವನ್ನು ಮಾಡಿದ್ದೇವೆ. ಇದೊಂದು ಸಾತ್ತ್ವಿಕಕರ್ಮವಾಗಲೆಂದು ನಮ್ಮೆಲ್ಲರ ಹೃದಯದಲ್ಲೂ ಬಂದಿದೆ. ಯಾವ ಕರ್ಮವನ್ನು ಮಾಡಿದರೂ ಅದರಿಂದ ಪರಮೇಶ್ವರನ ಪ್ರೀತಿ ಆಗಬೇಕಾದರೆ ಶ್ರದ್ಧೆಯು ಸ್ವಲ್ಪವೂ ಕಡಿಮೆಯಾಗಬಾರದು. ಶ್ರದ್ಧೆಯಿಂದ ಪೂಜೆಮಾಡಿದ ಅರ್ಚಕನ ತಪಸ್ಸಿನ ಬಲದಿಂದ ಕಲ್ಲೂ ದೇವರಾಗುತ್ತದೆ. ದೇವರ ಪಾದದಲ್ಲಿ ಶ್ರದ್ಧೆಯಿಂದ ಹಾಕಿದ ಒಂದು ಉದ್ಧರಣೆ ನೀರೂ ನಮ್ಮ ಚಿತ್ತದ ಕಲ್ಮಷವನ್ನು ತೊಳೆಯುತ್ತದೆ. ನಾವು ಸಾಮಾನ್ಯವಾಗಿ ಲೌಕಿಕವಿಷಯಗಳಲ್ಲಿಟ್ಟಿರುವ ಶ್ರದ್ಧೆಯನ್ನು ಪರಮೇಶ್ವರನಲ್ಲಿಟ್ಟರೆ ಬದುಕಿಬಿಡುತ್ತೇವೆ. ನಮ್ಮ ಬುದ್ಧಿವೃತ್ತಿಯನ್ನೆಲ್ಲ ಪರಮಾತ್ಮನ ಕಡೆಗೆ ತಿರುಗಿಸುವ ಶ್ರದ್ಧೆಯೊಂದನ್ನು ನಾವು ಸಂಪಾದಿಸಿದರೆ ಎಲ್ಲವನ್ನೂ ನಾವು ಸಂಪಾದಿಸಿದಂತಾಯಿತು.

## ೧೬೬. ತಪಸ್ಸಿನ ಪ್ರಭೇದಗಳು 17 - (14)

**(9-4-50)**

ಆಹಾರಾದಿಗಳಲ್ಲಿ ಸಾತ್ತ್ವಿಕಾದಿಪ್ರಭೇದಗಳನ್ನು ಹೇಳಿದ್ದಾಯಿತು. ಯಜ್ಞದ ಮೂರು ವಿಧವನ್ನು ವಿವರಿಸಿದ್ದಾಗಿದೆ. ಈಗ ತಪಸ್ಸಿನ ವಿಷಯವನ್ನು ವಿಚಾರಮಾಡಬೇಕು. ತಪಸ್ಸೆಂದರೇನೆಂಬುದು ನಮ್ಮಲ್ಲಿ ಬಹುಜನರಿಗೆ ಗೊತ್ತೇಇಲ್ಲ. ತಪಸ್ಸನ್ನು ಪುರಾಣಗಳಲ್ಲಿ ಅಲ್ಲಲ್ಲಿ ವರ್ಣನೆಮಾಡಿದೆ. ತಪಶ್ಶಬ್ದವು ಅಲ್ಲಿಮುಖ್ಯವಾಗಿ ಕಾಯಕ್ಲೇಶಪ್ರಧಾನವಾಗಿ ಮಾಡುವ ಧ್ಯಾನವಾಗಿ ವರ್ಣಿತವಾಗಿರುತ್ತದೆ. ಪಂಚಾಗ್ನಿಮಧ್ಯೆಯಲ್ಲಿ ನಿಂತು ತಪಸ್ಸು ಮಾಡುತ್ತಿದ್ದರು, ಅಬ್ಭಕ್ಷರಾಗಿದ್ದರು, ವಾಯುಭಕ್ಷರಾಗಿದ್ದರು - ಎಂದು ಮುಂತಾಗಿ ಹೇಳಿರುವದನ್ನು ಕೇಳಿದವರಿಗೆ ಶರೀರವನ್ನು ದಂಡಿಸುವದೇ ತಪಸ್ಸೆಂಬ ಭಾವನೆ ಬರುವದು ಸಹಜವಾಗಿದೆ. ಆದರೂ ತಪಸ್ಸೆಂಬ ಶಬ್ದವನ್ನು ಮನಃಪ್ರಧಾನವಾದ ಯಮನಿಯಮಗಳೆಂಬರ್ಥದಲ್ಲಿಯೂ ಉಪಯೋಗಿಸುವದುಂಟು. ಮುಮುಕ್ಷುಗಳಿಗೆ ಈ ಅರ್ಥದ ತಪಸ್ಸೇ ಮುಖ್ಯವಾದದ್ದು.

ತಪಸ್ಸನ್ನು ಶಾರೀರಕ, ವಾಚಕ, ಮಾನಸಿಕ - ಎಂದು ಮೂರು ಬಗೆಯಾಗಿ ವಿಂಗಡಿಸುವದರ ಔಚಿತ್ಯವೇನೆಂದರೆ ಶರೀರವೇ ಮುಂತಾದವುಗಳಿಂದ ಪ್ರಧಾನವಾಗಿ ಮಾಡುವ

ತಪಸ್ಸಿಗೆ ಆಯಾ ಹೆಸರು ಬರುತ್ತದೆ. ಶರೀರವು ಪ್ರಧಾನವಾಗಿದ್ದು ಮಾಡುವ ಕೃಚ್ಛ್ರ, ಚಾಂದ್ರಾಯಣ - ಮುಂತಾದದ್ದು ವಾನಪ್ರಸ್ಥಾಶ್ರಮವೇ ಮುಂತಾದವರಿಗೆ ಸೇರಿದ್ದು. ಗೃಹಸ್ಥರಾದವರೂ ಪ್ರಾಯಶ್ಚಿತ್ತರೂಪವಾಗಿ ಕೆಲವು ಕಾಯಕ್ಲೇಶಪ್ರಧಾನವಾದ ತಪಸ್ಸನ್ನು ಮಾಡಬೇಕೆಂದು ಶಾಸ್ತ್ರದಲ್ಲಿ ತಿಳಿಸಿದೆ. ಆದರೆ ಮೇಲೆ ಹೇಳಿದಂತೆ ಗೀತೆಯಲ್ಲಿ ವರ್ಣಿತವಾಗಿರುವ ತಪಸ್ಸೆಂಬುದು ಮುಮುಕ್ಷುಗಳಿಗೆ ಬೇಕಾದದ್ದು, ತ್ರಿಕರಣಗಳಿಂದ ಮಾಡುವ ಕಾರಣ, ಶಾರೀರಕಾದಿನಾಮಗಳಿಂದ ಅದು ಪ್ರಸಿದ್ಧವಾಗಿದೆಯಾದರೂ ಎಲ್ಲಾ ತಪಸ್ಸಿಗೂ ಮನಸ್ಸು ಸಂಬಂಧಿಸಿಯೇ ಇರುತ್ತದೆ. ಶಾರೀರಕತಪಸ್ಸೆಂಬುದು ಯಾವದೆಂದರೆ :-

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ 17-14**

ಇಲ್ಲಿ ಪೂಜೆಯೆಂದರೆ ಹೂ, ಮಂತ್ರಾಕ್ಷತೆ - ಮುಂತಾದವುಗಳನ್ನು ಏರಿಸುವದೆಂದು ಅರ್ಥಮಾಡಬಾರದು. ದೇವತೆಗಳು, ದ್ವಿಜರು, ಗುರುಗಳು, ತಿಳಿದ ಹಿರಿಯರು - ಇವರನ್ನು ಯಥಾಯೋಗ್ಯವಾಗಿ ಗೌರವಿಸುವದೇ ಪೂಜೆಯು. ದೇವತೆಗಳನ್ನು ಗೌರವಿಸುವದೆಂದರೆ ಪರಮೇಶ್ವರನ ಶಕ್ತಿವಿಶೇಷಗಳನ್ನು ಗೌರವಿಸುವದು. ದೇವತೆಗಳು ಈಗಲೂ ಎಲ್ಲೆಲ್ಲಿಯೂ ಇದ್ದರೂ ಅವರು ಇಲ್ಲದೆ ಇದ್ದರೆ ಹೇಗೋ ಹಾಗೆ ನಾವು ಅಸಡ್ಡೆಯಿಂದ ನಡೆಯುತ್ತಿದ್ದೇವೆ; ದೇವತೆಗಳ ಉಪಾಸನೆಯಿಂದಾಗುವ ಫಲವು ಈಗಲೂ ಶ್ರದ್ಧಾವಂತರಿಗೆ ಆಗಿಯೇತೀರುತ್ತದೆ. ದೇವತೆಗಳು ನಿಜವಾಗಿಯೂ ಇದ್ದಾರೆ, ಅವರ ಆಳ್ವಿಕೆಗೆ ಒಳಪಟ್ಟು ವ್ಯಾಪಾರಗಳು ಈಗಲೂ ಪ್ರಪಂಚದಲ್ಲಿ ನಡೆಯುತ್ತಿವೆ. ನಮ್ಮ ಶರೀರೇಂದ್ರಿಯಾದಿಗಳ ವ್ಯಾಪಾರಕ್ಕೆ ಅಧಿಷ್ಠಾತೃಗಳು ಅವರು ಎಂಬುದನ್ನು ಮನದಂದುಕೊಳ್ಳುವದು ದೇವತಾಪೂಜನವು. ಪ್ಲೇಗು ಅಥವಾ ಕಾಲರಾ ಮುಂತಾದ ಸಾಂಕ್ರಾಮಿಕ ರೋಗಗಳು ಊರಲ್ಲಿ ಬಂದಿದೆ ಎಂಬ ಸುದ್ದಿಯು ಬೆಳೆದೊಡನೆ ನಾವು ನಂಬಿಕೆಯಿಂದ ಆಯಾಕಾಲಕ್ಕೆ ಆರೋಗ್ಯನಿಯಮ ನಿಬಂಧನೆಗಳನ್ನು ಅನುಸರಿಸುವಂತೆ ದೇವತೆಗಳು ಎಲ್ಲೆಲ್ಲಿಯೂ ಇದ್ದಾರೆ - ಎಂಬುದನ್ನು ಶಾಸ್ತ್ರಪ್ರಮಾಣದಿಂದಲೂ ಆಪ್ತೋಕ್ತಿಯಿಂದಲೂ ಅರಿತುಕೊಂಡು ಭಾವಭಕ್ತಿಯಿಂದ ಅವರನ್ನು ಭಜಿಸಬೇಕು. ಸಂಧ್ಯಾವಂದನೆ ಮಾಡುವವರು "ನಮಃ ಪ್ರಾಚ್ಯೈ ದಿಶೇ........." ಎಂದು ಮುಂತಾಗಿ ಒಂದೊಂದು ದಿಕ್ಕಿನಲ್ಲಿಯೂ ಯಾವ ಯಾವ ದೇವತೆಗಳಿದ್ದಾರೆಯೋ ಅವರಿಗೆ ನಮಸ್ಕಾರ ಎಂಬರ್ಥದ ಮಂತ್ರವನ್ನು ಹೇಳಿಕೊಂಡು ನಮಸ್ಕರಿಸುವದುಂಟು. ಭಾವಭಕ್ತಿಯಿಂದ ದೇವತೆಗಳ ಈ ಸತ್ತೆಯನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಮನುಷ್ಯನ ಸ್ವೇಚ್ಛಾಚಾರಕ್ಕೆ ತಡೆಯುಂಟಾಗುವದು. ಇದರಿಂದ ಒಂದು ಬಗೆಯ ಶಾರೀರತಪಸ್ಸು ಆದಂತೆ ಆಗುವದು.

ಇದರಂತೆ ಬ್ರಾಹ್ಮಣರನ್ನು ಗೌರವಿಸುವದೂ ಒಂದು ಬಗೆಯ ತಪಸ್ಸು. ಬ್ರಾಹ್ಮಣರೆಂದರೆ ಶಾಸ್ತ್ರೋಕ್ತ ಕರ್ಮವನ್ನು ಯಥಾವಿಧಿಯಾಗಿ ಮಾಡಿಕೊಂಡು ಸ್ವಾರ್ಥವನ್ನು

ತ್ಯಜಿಸಿ ಪರೋಪಕಾರವನ್ನು ಮಾಡುವವರು. ಲೋಕಕಲ್ಯಾಣಕ್ಕಾಗಿಯೇ ಜೀವಿಸಿರುವ ಇಂಥ ಬ್ರಾಹ್ಮಣರನ್ನು ಸೇವಿಸುವದು ಒಂದು ಬಗೆಯ ಶಾರೀರಕತಪಸ್ಸು. ಪುರಾಣಕಾಲದಲ್ಲಿ ವೇನನೆಂಬ ರಾಜನು ದೇವಬ್ರಾಹ್ಮಣರನ್ನು ತಿರಸ್ಕರಿಸಿ ತನ್ನ ಪ್ರತಿಮೆಯನ್ನೇ ಇಟ್ಟು ಪೂಜಿಸಬೇಕೆಂದು ಪ್ರಜೆಗಳನ್ನು ನಿರ್ಬಂಧಿಸಿ ಪೀಡಿಸಿದನಂತೆ. ಪ್ರಜೆಗಳು ಯಾವ ಕರ್ಮವನ್ನೂ ಮಾಡದಂತೆ ಅಡ್ಡಿ ಮಾಡುತ್ತಿದ್ದನಂತೆ. ಅವನಿಂದಾಗುತ್ತಿದ್ದ ಪೀಡೆಯನ್ನು ತಡೆಯಲಾರದೆ ಜನರು ಸಪ್ತರ್ಷಿಗಳನ್ನು ಬೇಡಿಕೊಂಡರು. ಆ ಋಷಿಗಳು ಬಂದು ರಾಜನಿಗೆ ತಿಳಿವಳಿಕೆಯನ್ನು ಹೇಳುವದಕ್ಕೆ ಪ್ರಾರಂಭಿಸಿದಾಗ ಅವನು ಹೆಮ್ಮೆಯಿಂದ "ಎಲಾ, ನೀವು ಇನ್ನೂ ಹುಡುಗರು, ನಿಮಗೆ ತತ್ತ್ವವು ತಿಳಿಯದು, ರಾಜನು ವಿಷ್ಣುವಿನ ಅಂಶದಿಂದಲೂ ಅಷ್ಟದಿಕ್ಪಾಲಕರ ಅಂಶದಿಂದಲೂ ಕೂಡಿರುತ್ತಾನೆ. ಆದ್ದರಿಂದ ರಾಜನನ್ನು ಪೂಜಿಸುವದು ಧರ್ಮವಲ್ಲವೆ ?" ಎಂದು ಆ ಋಷಿವರ್ಯರನ್ನು ತಿರಸ್ಕರಿಸಿ ಮಾತನಾಡಿದನು. ಆಗ ಋಷಿಗಳು ಇವನು ಇನ್ನು ಸಿಂಹಾಸನವನ್ನು ಏರುವದಕ್ಕೆ ಅರ್ಹನಲ್ಲವೆಂಬುದನ್ನು ನಿಶ್ಚಯಿಸಿ ಹುಂಕಾರಮಾತ್ರದಿಂದ ಅವನನ್ನು ಕೊಂದುಹಾಕಿ ಅವನ ತೊಡೆಯನ್ನು ಕಡೆದು ಪೃಥು ಎಂಬ ರಾಜನನ್ನು ತಮ್ಮ ತಪಃಶ್ಶಕ್ತಿಯಿಂದ ಸೃಜಿಸಿದರೆಂದು ಕಥೆ. ಬ್ರಾಹ್ಮಣರ ತಿರಸ್ಕಾರವೇ ಅನರ್ಥಕ್ಕೆ ಕಾರಣವು. ಅವರ ಪೂಜೆಯೇ ಶ್ರೇಯಸ್ಕರವು - ಎಂಬುದನ್ನು ಮುಮುಕ್ಷುವಾದವನು ಮನಸ್ಸಿನಲ್ಲಿಟ್ಟಿರಬೇಕು.

ಇದರಂತೆ ಗುರುಪೂಜೆಯೆಂಬುದೂ ಒಂದು ವಿಧವಾದ ಶಾರೀರಕತಪಸ್ಸು. ಗುರುಸೇವೆಯೂ ಗುರುನಮಸ್ಕಾರವೂ ಗುರುಭಕ್ತಿಯೂ ಸೇರಿದರೆ ಎಂಥ ಘೋರವಾದ ಪಾಪವಾದರೂ ನಾಶವಾಗುವದು. ಆದ್ದರಿಂದಲೇ 'ಶಿವೇ ರುಷ್ಟೇ ಗುರುಸ್ತ್ರಾತಾ ಗುರೌ ರುಷ್ಟೇ ನ ಕಶ್ಚನ`, ಮನುಷ್ಯನು ಮಾಡಿದ ಪಾಪದಿಂದ ಈಶ್ವರನು ರುಷ್ಟನಾಗಿದ್ದರೂ ಗುರುವು ಅವನನ್ನು ಕಾಪಾಡುತ್ತಾನೆ. ಆದರೆ ಗುರುವು ರುಷ್ಟನಾದರೆ ಅದಕ್ಕೆ ಪಾತ್ರನಾದವನನ್ನು ಯಾರೂ ಕಾಪಾಡಲಾರರು - ಎಂದು ದೊಡ್ಡವರು ಹೇಳುತ್ತಾರೆ. ಗುರುಗಳಾದವರು ತಾವು ಗುರುಗಳು ಎಂದು ಹೇಳಿಕೊಳ್ಳುವದಿಲ್ಲ, ಗೌರವವನ್ನೂ ಬಯಸುವದಿಲ್ಲ. ಕೀರ್ತಿವಂತರಾಗಬೇಕೆಂಬ ಆಶೆ ಅವರಲ್ಲಿರುವದಿಲ್ಲ. ಯಾವಾಗಲೂ ಪರಮೇಶ್ವರನನ್ನು ತಮ್ಮ ಚಿತ್ತದಲ್ಲಿಯೇ ಇಟ್ಟುಕೊಂಡು ತನ್ನಿಷ್ಠರಾಗಿರುವರು. ಇಂಥವರ ಪೂಜೆಯೆಂದರೆ ಪರಮೇಶ್ವರನ ಪೂಜೆಗಿಂತಲೂ ಅಧಿಕವಾಗುವದು. ಯಾವನು ಗುರುವಿಗೆ ಶರಣುಬಂದಿರುವನೋ ಅವನು ಅಧ್ಯಾತ್ಮಸಾಧನದಲ್ಲಿ ಗೆದ್ದನೆಂದು ತಿಳಿಯಬೇಕು.

ಇದರಂತೆಯೇ ಪ್ರಾಜ್ಞರ ಪೂಜೆಯನ್ನು ಭಾವಿಸಬೇಕು. ಪ್ರಾಜ್ಞರು ಎಂಬ ಶಬ್ದವನ್ನು ಇಂಗ್ಲಿಷಿನಲ್ಲಿರುವ Experts ಎಂಬ ಶಬ್ದಕ್ಕೆ ಪರ್ಯಾಯವೆಂದು ಭಾವಿಸಬಹುದು. ಯಾವ ಯಾವ ವಿಷಯದಲ್ಲಿ ಯಾರು ಯಾರು ಮಿಗಿಲಿಲ್ಲದ ತಿಳಿವಳಿಕೆಯನ್ನು ಸಂಪಾದಿಸಿರುವರೋ ಅವರು ಆಯಾ ವಿಷಯದಲ್ಲಿ ಪ್ರಾಜ್ಞರೆಂದು ಭಾವಿಸಬಹುದು. ಸರ್. ಎಂ.

ವಿಶ್ವೇಶ್ವರಯ್ಯನವರನ್ನು ಅವರಲ್ಲಿ ಇರುವ ಶಿಲ್ಪವಿದ್ಯೆಯ ತಿಳಿವಳಿಕೆಗಾಗಿ ಎಲ್ಲರೂ ಗೌರವಿಸುತ್ತಾರೆ. ವಿಶೇಷವಾಗಿ ಅವರ ತಿಳಿವಳಿಕೆಯನ್ನು ಉಪಯೋಗಿಸಿಕೊಳ್ಳಬೇಕೆನ್ನುವವರು ಅವರಲ್ಲಿ ಹೆಚ್ಚಿನ ಗೌರವನ್ನಿಟ್ಟುಕೊಂಡಿರುತ್ತಾರೆ. ಭೀಷ್ಮರು ಪಾಂಡವಪಕ್ಷಪಾತಿಗಳೆಂಬ ತಪ್ಪು ತಿಳಿವಳಿಕೆಯು ದುರ್ಯೋಧನನನ್ನು ಬಾಧಿಸುತ್ತಿದ್ದರೂ ಅವರು ಪ್ರಾಜ್ಞರೆಂಬ ಕಾರಣದಿಂದ ಮತ್ತೆಮತ್ತೆ ಅವರನ್ನು ಗೌರವಬುದ್ಧಿಯಿಂದ ಕಂಡು ತನಗೆ ಬೇಕಾದ ವಿಷಯಗಳನ್ನು ಕೇಳಿಕೊಳ್ಳುತ್ತಿದ್ದನು. ಹೀಗೆ ಸ್ವಾರ್ಥಕ್ಕಾಗಿ ಪ್ರಾಜ್ಞರನ್ನು ಗೌರವಿಸುವದು ಜನರಲ್ಲಿ ಅಲ್ಲಲ್ಲಿ ಕಂಡುಬರಬಹುದು. ಆದರೆ ಮುಮುಕ್ಷುವಾದವನು ಅಧ್ಯಾತ್ಮವಿದ್ಯೆಯಲ್ಲಿ ಪ್ರಾಜ್ಞರಾದವರನ್ನು ತನ್ನ ಗುರುವಿನಂತೆಯೇ ಗೌರವಿಸುವದು ಒಂದು ಬಗೆಯ ಶಾರೀರತಪಸ್ಸಾಗುವದು. ಸಂನ್ಯಾಸಿಗೆ ಯಾವ ಕರ್ಮವೂ ವಿಹಿತವಾಗಿರುವದಿಲ್ಲ. ಆದರೂ ಗುರುಗಳನ್ನೂ ಪ್ರಾಜ್ಞರನ್ನೂ ಗೌರವಿಸುವದು ಅವನಿಗೆ ಶ್ರೇಯಸ್ಕರವಾಗುತ್ತದೆ. ಕಾಲೇಜುಗಳಲ್ಲಿ ಪ್ರೊಫೆಸರ್ ಎಂಬ ವಿದ್ವಾಂಸರನ್ನು ಪರೀಕ್ಷಾದಿಗಳಲ್ಲಿ ಆಗುವ ಫಲಿತಾಂಶದ ಭಯದಿಂದ ಕೆಲವು ವಿದ್ಯಾರ್ಥಿಗಳು ಗೌರವಿಸುವಂತೆ ನಟಿಸುವದು ಪ್ರಾಜ್ಞಪೂಜನವಲ್ಲ. ಅವರ ತಿಳಿವಳಿಕೆಯ ಮಟ್ಟವನ್ನರಿತುಕೊಂಡು ಅವರನ್ನು ಶ್ರದ್ಧೆಯಿಂದ ಕಾಣುವದು ನಿಜವಾದ ಪೂಜೆಯಾಗುವದು. ಅಧ್ಯಾತ್ಮಸಾಧನದಲ್ಲಿ ಈ ಪ್ರಾಜ್ಞಪೂಜನೆಯು ಒಂದು ದೊಡ್ಡ ತಪಸ್ಸು.

ಶೌಚ, ಆರ್ಜವ - ಇವುಗಳ ವಿಷಯವಾಗಿ ಹಿಂದೆ ಬೇರೆ ಸಂದರ್ಭದಲ್ಲಿ ಹೇಳಿದ್ದಾಗಿದೆ. ಬ್ರಹ್ಮಚರ್ಯವೂ ಹಿಂದೆ ಬಂದಿದೆ. ಶರೀರಪ್ರಧಾನವಾದ ಬ್ರಹ್ಮಚರ್ಯವೆಂದರೆ ಮನಆದಿಗಳಲ್ಲಿ ಸ್ತ್ರೀಸಂಬಂಧವಿಲ್ಲದೆ ಇರುವದು ಎಂಬ ಅರ್ಥವು ರೂಢಿಯಲ್ಲಿ ತೋರುತ್ತದೆ. ಆದರೆ ಮುಮುಕ್ಷುವಾದವನು ತನಗೂ ಬಾಹ್ಯವಿಷಯಗಳಿಗೂ ಆಗುವ ಯಾವ ಸಂಬಂಧವಾದರೂ ಬ್ರಹ್ಮಚರ್ಯಕ್ಕೆ ವಿಘಾತಕವೆಂದು ಭಾವಿಸಬೇಕು. ಪರಮಾತ್ಮನಲ್ಲಿಯೇ ಮನಸ್ಸಿಟ್ಟು ನಡೆಯುವದು ನಿಜವಾದ ಬ್ರಹ್ಮಚರ್ಯವು. ಈ ದೇಹವು ದೇವಾಲಯವು, ಪರಮಾತ್ಮನು ಇದರಲ್ಲಿ ಪ್ರತಿಷ್ಠಿತನಾಗಿರುತ್ತಾನೆ - ಎಂಬ ನಂಬಿಕೆಯಿಂದ ಅದನ್ನು ಎಲ್ಲಾ ಬಗೆಯಿಂದಲೂ ಶುಚಿಯಾ ಗಿಟ್ಟುಕೊಳ್ಳುವದೇ ನಿಜವಾದ ಬ್ರಹ್ಮಚರ್ಯವು.

ಅಹಿಂಸೆಯ ವಿಚಾರವೂ ಆಗಲೆ ಹಿಂದೆ ಬಂದಿದೆ. ದೇವಾದಿಗಳ ಪೂಜನೆಯಿಂದ ಹಿಡಿದು ಅಹಿಂಸೆಯವರೆಗೆ ಹೇಳಿರುವ ಈ ನಡತೆಯೆಲ್ಲ ಶಾರೀರವಾದ ತಪಸ್ಸೆನಿಸುವದು. ಈ ತಪಸ್ಸಿನಲ್ಲಿ ವಾಕ್ಕೂ ಮನಸ್ಸೂ ಭಾಗವನ್ನು ವಹಿಸಿಯೇ ಇರುತ್ತವೆಯಾದರೂ ಇವುಗಳನ್ನು ಶರೀರಕ್ಕೂ ಸಂಬಂಧಿಸಿರಬೇಕೆಂಬ ಕಾರಣದಿಂದ ಇವನ್ನು ಶಾರೀರತಪಸ್ಸು ಎಂದಿದೆ. ಮುಮುಕ್ಷುವಾದವನು ಈ ಎಲ್ಲಕ್ಕೂ ತನ್ನ ಶರೀರವನ್ನು ಮುಡುಪಾಗಿಟ್ಟುಕೊಳ್ಳಬೇಕು. "ದೇವ, ಈ ನನ್ನ ಶರೀರವನ್ನು ಒಂದು ಉತ್ತಮ ತಂಬೂರಿಯಾಗಿ ಮಾಡಿ ದೇವಪೂಜಾದಿಗಳೆಂಬ ಇಂಪಾದ ಧ್ವನಿಯು ಬರುವಂತೆ ನುಡಿಸು" ಎಂದು ಅಡಿಗಡಿಗೂ ಆ ಭಗವಂತನನ್ನು ಪ್ರಾರ್ಥಿಸುತ್ತಿರಬೇಕು.



## ೧೬೭. ವಾಙ್ಮಯ ತಪಸ್ಸು 17 - (15)

(7-5-50)

ಈ ದಿನ ವಾಙ್ಮಯತಪಸ್ಸಿನ ವಿಚಾರ :-

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ 17-15**

ಯಜ್ಞದಾನತಪಸ್ಸುಗಳಿಂದ ಮನುಷ್ಯನು ಆತ್ಮತತ್ತ್ವವನ್ನು ತಿಳಿಯುವ ಅರ್ಹತೆಯನ್ನು ಪಡೆದುಕೊಂಡು ಆಮೇಲೆ ಶ್ರವಣಾದಿಗಳನ್ನು ಅಭ್ಯಾಸಮಾಡಬೇಕು. ಶರೀರಾದಿಗಳನ್ನು ತಪ್ಪುದಾರಿಯಲ್ಲಿ ಹೋಗುವದಕ್ಕೂ ಉಪಯೋಗಿಸಬಹುದು, ಒಳ್ಳೆಯ ಮಾರ್ಗದಲ್ಲಿ ಹೋಗುವದಕ್ಕೂ ಉಪಯೋಗಿಸಿಕೊಳ್ಳಬಹುದು. ತಪ್ಪುಮಾರ್ಗಕ್ಕೆ ಕರಣತ್ರಯವು ತಾನಾಗಿಯೇ ಹರಿಯುತ್ತಿರುತ್ತದೆ. ಆದರೆ ಒಳ್ಳೆಯ ಮಾರ್ಗಕ್ಕೆ ಮಾತ್ರ ಪ್ರಯತ್ನಪೂರ್ವಕವಾಗಿ ತಂದುಬಿಡಬೇಕಾಗುತ್ತದೆ. ಮನುಷ್ಯನಿಗೆ ಸುಖಹಿತಗಳೆರಡಕ್ಕೂ ಸಂಬಂಧವುಂಟು, ಮೊದಲು ಸುಖವೇ ಹಿತವಾಗಿರುತ್ತದೆ. ಹಿತವೇ ಸುಖವಾಗಿರುತ್ತದೆ. ಆದರೆ ಬರುಬರುತ್ತಾ ವ್ಯವಹಾರವು ಪ್ರಬಲವಾದಂತೆ ಸುಖಕ್ಕೂ ಹಿತಕ್ಕೂ ಸಂಬಂಧವು ತಪ್ಪಿಹೋಗುತ್ತದೆ. ಸೇವಕನಾದವನು ಮೊದಲು ಸಹಜವಾಗಿ ಯಜಮಾನನ ಕೆಲಸವನ್ನು ಮಾಡುತ್ತಿರುತ್ತಾನೆ; ಆದರೆ ಯಜಮಾನನು ಅವನನ್ನು ಎಚ್ಚರಿಕೆಯಿಂದ ನೋಡಿಕೊಂಡು ಸರಿಯಾಗಿ ಕೆಲಸವನ್ನು ತೆಗೆದುಕೊಳ್ಳದೆ ಇದ್ದರೆ ಆಗಾಗ್ಗೆ ಅವನ ಸ್ವಾರ್ಥವು ತಲೆಹಾಕಿಕೊಳ್ಳುತ್ತದೆ. ಕೆಲವು ವೇಳೆ ನಮಗೆ ಹಿತವು ಪೂರ ಕೈಬಿಟ್ಟುಹೋಗಿ ಸುಖವೊಂದರ ಕಡೆಗೆ ಒಲವು ಆಗಿಬಿಡುತ್ತದೆ. ಇಂದ್ರಿಯಗಳನ್ನು ಸುಖದ ಕಡೆಗೆ ಸ್ವಲ್ಪಕಾಲ ಧಾವಿಸುದವಕ್ಕೆ ಬಿಟ್ಟಮೇಲೆ ಅವು ನಮ್ಮ ಹಿತವನ್ನು ನೋಡುವದೇ ಇಲ್ಲ. ಅಲ್ಲಿಂದ ಮುಂದಕ್ಕೆ ನಾವು ಸುಖವನ್ನೇ ಪ್ರಧಾನವಾಗಿ ಮಾಡಿಕೊಂಡು ಹಿತವನ್ನು ಅಲಕ್ಷ್ಯಮಾಡಿಬಿಡುತ್ತೇವೆ. ಶಾಸ್ತ್ರವು "ನಿನಗೆ ಸುಖವು ಕಡಿಮೆಯಾದರೂ ಚಿಂತಿಯಿಲ್ಲ, ಹಿತವಾದದ್ದನ್ನೇ ಮಾಡು" ಎಂದು ಬೋಧಿಸುತ್ತದೆ. ಇದಕ್ಕೆ ಶರೀರವಾಙ್ಮನಸ್ಸುಗಳನ್ನು ಹಿಡಿತಲ್ಲಿಟ್ಟುಕೊಂಡು ಅವನ್ನು ನಾವು ಹೇಳಿದಂತೆ ನಡೆಯುವ ಹಾಗೆ ತಯಾರುಮಾಡಬೇಕಾಗುತ್ತದೆ. ಇದೇ ಶರೀರಾದಿಗಳ ತಪಸ್ಸು.

ಶಾರೀರತಪಸ್ಸನ್ನು ಕುರಿತು ಹೇಳಿದ್ದಾಗಿದೆಯಷ್ಟೆ. ಈ ದಿನ ವಾಙ್ಮಯತಪಸ್ಸನ್ನು ಕುರಿತು ಮಾತನಾಡತಕ್ಕದ್ದಿದೆ. ಮಾತನ್ನು ಯಾವಾಗ ಎಷ್ಟು ಮಟ್ಟಿಗೆ ಆಡಬೇಕೋ ಅಷ್ಟುಮಟ್ಟಿಗೆ ಆಡುವಂತೆ ನಾಲಗೆಯನ್ನು ಬಿಗಿಹಿಡಿಯುವ ತಪಸ್ಸು ಎಲ್ಲರಿಗೂ ದಕ್ಕಲಾರದು. ಸುಮ್ಮನೆ ಇರಬೇಕಾದಾಗ ಮಾತನಾಡಬೇಕೆನಿಸುತ್ತದೆ; ಮಾತನಾಡಬೇಕಾಗಿರುವಾಗ ಕೂಡಲೆ ಸರಿಯಾದ ವಾಕ್ಯವು ಬಾಯಿಂದ ಹೊರಡುವದಿಲ್ಲ. ಇದೆಲ್ಲ ವಾಕ್ತಪಸ್ಸಿಲ್ಲದ್ದರ ಗುರುತು. ಮತ್ತೊಬ್ಬರಿಗೆ

ನೋವು ಆಗದಿರುವಂತೆ ನಿಧಾನವಾಗಿ ಶಾಂತರೀತಿಯಿಂದ ಮಾತನಾಡುವದು ಕಷ್ಟ. ಮಾತನಾಡುವ ಅಭ್ಯಾಸವು ಬಲವಾಗಿದ್ದರೆ ಹಿರಿಯರನ್ನು ಕೂಡ ಲಕ್ಷಿಸದೆ ಏನಾದರೂ ಒಂದು ಮಾತನ್ನು ಆಡಿಬಿಡುತ್ತೇವೆ. ನಮ್ಮ ಕೆಲಸವು ಆಗಬೇಕಾದಾಗ ಸ್ವಲ್ಪ ಬಿರುಸಾಗಿ ಮಾತನಾಡಬೇಕು ಎನಿಸಬಹುದು. ಆದರೆ ಆಗಲೂ ಅದು ಅವಶ್ಯವೆ ?- ಎಂಬುದನ್ನು ವಿಚಾರಮಾಡಬೇಕು. ನನಗೆ ತಿಳಿದಿದ್ದಂತೆ ವೆಂಕಟಸ್ವಾಮಿನಾಯಿಡು ಎಂಬ ಒಬ್ಬ ವಿದ್ಯಾಭ್ಯಾಸದ ಸರ್ಕಲ್ ಇನ್‌ಸ್ಪೆಕ್ಟರ್ ಬಹಳ ಶಾಂತರೀತಿಯಿಂದ ಮಾತನಾಡುವ ಅಭ್ಯಾಸವನ್ನಿಟ್ಟುಕೊಂಡಿದ್ದರು. ಅವರು ತಮ್ಮ ಕೈಕೆಳಗೆ ಕೆಲಸಮಾಡುತ್ತಿದ್ದ ಯಾವನೊಬ್ಬನಿಗೂ ಅನವಶ್ಯವಾಗಿ ಕಿರುಕುಳವನ್ನು ಕೊಡುತ್ತಿರಲಿಲ್ಲ. ಒಬ್ಬ ಜವಾನನ ವಿಷಯದಲ್ಲಿ ಕೂಡ ಶಿಕ್ಷೆಗೆ ಮಾಡಿದ ಶಿಫಾರಸನ್ನು ಅವನ ಹೇಳಿಕೆಯಿಲ್ಲದೆ ಮನ್ನಿಸುತ್ತಿರಲಿಲ್ಲ. ಎಂಥ ತಪ್ಪುಮಾಡಿದವರ ವಿಷಯದಲ್ಲಿಯೂ ಕೋಪದ ಮುಖಮುದ್ರೆಯನ್ನಾಗಲಿ ವಾಕ್ಯಸರಣಿಯನ್ನಾಗಲಿ ಉಪಯೋಗಿಸದೆ ಅವರವರು ತಮ್ಮ ವಿಷಯದಲ್ಲಿ ಹೇಳಿಕೊಳ್ಳಬೇಕಾಗಿರುವದನ್ನು ಸಾವಧಾನವಾಗಿ ಕೇಳಿ ಕೊನೆಗೂ ಸರ್ಕಾರದ ನಿಯಮದ ಪ್ರಕಾರ ಅವರನ್ನು ದಂಡಿಸಬೇಕಾದ ಅವಶ್ಯಕತೆ ಬಿದ್ದರೆ ಅವರ ವಿಷಯದಲ್ಲಿ ಹೆಚ್ಚಿನ ಉಗ್ರವಾಕ್ಯಗಳನ್ನು ಉಪಯೋಗಿಸದೆ ಎಷ್ಟು ಅವಶ್ಯಕವೋ ಅಷ್ಟೇ ದಂಡನೆಯನ್ನು ಮಾಡುತ್ತಿದ್ದರು. ಅವರಿಂದ ಈ ರೀತಿಯಲ್ಲಿ ದಂಡನೆಯನ್ನು ಹೊಂದಿದವರು ಕೂಡ ಅವರ ವಿಷಯಕ್ಕೆ ಅಸಮಾಧಾನವನ್ನು ತೋರಿಸುವದರ ಬದಲಾಗಿ "ಅವರು ಹೀಗೆ ನಡೆದುಕೊಳ್ಳುವದು ಅವಶ್ಯವಾಗಿತ್ತು, ನಾನು ತಪ್ಪೇ ಮಾಡಿದ್ದೆನು" ಎಂದು ಸಮಾಧಾನವನ್ನೇ ಮಾಡಿಕೊಳ್ಳುತ್ತಿದ್ದರು. ವ್ಯವಹಾರದಲ್ಲಿ ಕೂಡ ಮತ್ತೊಬ್ಬರಿಗೆ ಉದ್ವೇಗವನ್ನುಂಟುಮಾಡದೆ ವಾಕ್ಯಪ್ರಯೋಗವನ್ನು ಮಾಡಿಕೊಂಡೇ ಕೆಲಸವನ್ನು ಸಾಗಿಸುವದು ಸಾಧ್ಯವೆಂಬುದಕ್ಕೆ ಇದೊಂದು ಒಳ್ಳೆಯ ಉದಾಹರಣೆಯೆನ್ನಬಹುದು. ಇನ್ನು ಅಧ್ಯಾತ್ಮಸಾಧಕರಿಗಂತೂ ಅನುದ್ವೇಗಕರವಾಕ್ಯವೆಂಬುದು ಅತ್ಯವಶ್ಯವಾಗಿರುವದು. ವಾಗಾದೀಂದ್ರಿಯಗಳು ನಾವು ಹೇಳಿದಂತೆ ಕೇಳಬೇಕೇ ಹೊರತು ಅವುಗಳ ವಶದಲ್ಲಿ ನಾವು ಇರಕೂಡದು - ಎಂಬುದು ಪ್ರತ್ಯಕ್ಪ್ರವಣತೆಗೆ ಅತ್ಯವಶ್ಯವಾದ ಸಾಧನವಾಗಿದೆ.

ವಾಕ್ಯವು ಅನುದ್ವೇಗಕರವಾಗಿರುವದಲ್ಲದೆ ಸತ್ಯವಾಗಿಯೂ ಇರಬೇಕು. ಇದು ವ್ಯವಹಾರದಲ್ಲಿ ಸಾಧ್ಯವೆ ? ಯಾವಾಗಲೂ ನಿಜವನ್ನೇ ಹೇಳುವದು ಆಗುತ್ತದೆಯೆ ? ಎಂದು ಕೆಲವರು ಕೇಳುತ್ತಾರೆ. ನಮ್ಮ ವ್ಯವಹಾರದಲ್ಲಿ ಅನೇಕಸಂದರ್ಭಗಳಲ್ಲಿ ಸುಳ್ಳಾಡುವದು ಅವಶ್ಯವಾಗುತ್ತದೆ. ಅದರಲ್ಲಿಯೂ ಸರ್ಕಾರದ ವ್ಯವಹಾರದಲ್ಲಿ ಎಷ್ಟೋ ಸುಳ್ಳುಗಳು ನಾವು ಬೇಡವೆಂದರೂ ಬೆರೆತುಕೊಳ್ಳುತ್ತವೆ. ಕೋರ್ಟುಕಚೇರಿಗಳಲ್ಲಿ ಸುಳ್ಳು ಹೇಳುವದೆಂಬುದು ಎಷ್ಟೋ ಜನರಿಗೆ ನೀರುಕುಡಿದಂತಾಗಿಬಿಟ್ಟಿರುತ್ತದೆ. ಸಾಕ್ಷಿಯಿಲ್ಲದೆ ಯಾವದನ್ನೂ ನಂಬುವದಿಲ್ಲ ಎಂಬ ಕೋರ್ಟಿನಲ್ಲಿ ತನ್ನ ಕೆಲಸವನ್ನು ಸಾಧಿಸಿಕೊಳ್ಳಬೇಕೆಂಬುವವನು ಒಂದು

ಸಾಕ್ಷಿಯನ್ನು ಕಲ್ಪಿಸಬೇಕಾಗುವದಷ್ಟೆ? ಇಂಥ ಸಂದರ್ಭದಲ್ಲಿ ಸುಳ್ಳು ಹೇಳದೆ ಇದ್ದರೆ ಜನರು ಏನಾದರೂ ಅಂದಾರು - ಎಂಬ ಅಂಜಿಕೆಯಿಂದ ಸುಳ್ಳುಹೇಳುವದು ಉಂಟು. ಇದೆಲ್ಲ ಸತ್ಯವಚನದ ಮರ್ಮವನ್ನು ತಿಳಿಯದೆ ಇದ್ದದ್ದರ ಫಲವು. ಯಾವಾಗಲೂ ಸತ್ಯವಾದದ್ದನ್ನು ಹೇಳಲೇಬೇಕು ಎಂಬ ನಿರ್ಬಂಧವಿಲ್ಲ. ಹೇಳಿದರೆ ಸತ್ಯವನ್ನೇ ಹೇಳಬೇಕು - ಎಂಬುದು ಶಾಸ್ತ್ರಾಶಯ. ಸತ್ಯವೂ ಪ್ರಿಯವೂ ಆಗಿರುವದನ್ನು ಅವಶ್ಯವಾಗಿ ಹೇಳಬೇಕು; ಅಸತ್ಯವಾದ ಪ್ರಿಯವನ್ನು ಹೇಳಬಾರದು. ಪ್ರಿಯವು ಅನೃತವಾದರೂ ಹೇಳಬಾರದು. ಅಪ್ರಿಯವಾದ ಸತ್ಯವನ್ನು ಅನವಶ್ಯವಾಗಿ ಹೇಳಬಾರದು, ಸತ್ಯವಚನವೆಂಬುದು ಬಾಯಿಬಿಟ್ಟು ಆಡಿದ ಮಾತಿಗೇ ಸೇರತಕ್ಕದ್ದೆಂದು ತಿಳಿಯತಕ್ಕದ್ದಲ್ಲ. ಅಭಿನಯಾದಿಗಳಿಂದಲೂ ಸತ್ಯವನ್ನು ಅನೃತವನ್ನೂ ಸೂಚಿಸುವದಕ್ಕೆ ಬರುತ್ತದೆ. ಮತ್ತೊಬ್ಬರಿಗೆ ತಿಳಿಯಲೆಂದು ಹೇಳಿದ ಮಾತು ಅಥವಾ ಸೂಚಕವಾದ ಮತ್ತೆ ಯಾವದಾದರೊಂದು ಅಭಿನಯವು ಸತ್ಯವಾಗಿಯೂ ಪ್ರಿಯವಾಗಿಯೂ ಅನುದ್ವೇಗಕರವಾಗಿಯೂ ಇದ್ದರೇ ವಾಙ್ಮಯತಪಸ್ಸಾಗುವದು. ವಾಕ್ಯವು ಸತ್ಯವಾದರೂ ಮಿಕ್ಕ ಎರಡು ವಿಶೇಷಣಗಳಿಲ್ಲದಿದ್ದರೆ, ಹೀಗೆಯೇ ಹಿತವಾದರೂ ಸತ್ಯವು ಪ್ರಿಯವೂ ಆಗದಿದ್ದರೆ, ಮತ್ತು ಪ್ರಿಯವಾದರೂ ಸತ್ಯಹಿತಗಳಿಲ್ಲದಿದ್ದರೆ ಅದು ತಪಸ್ಸಲ್ಲ. ಈ ಎಲ್ಲಾ ಸಂದರ್ಭಗಳಲ್ಲಿಯೂ ವಾಕ್ಯವು ಅನುದ್ವೇಗಕರವಾಗಿರಬೇಕೆಂಬುದು ಅವಶ್ಯ. ಶ್ರೀಶಂಕರಾಚಾರ್ಯರವರು ಇಂಥ ಒಂದು ವಾಕ್ಯವನ್ನು ತಮ್ಮ ಭಾಷ್ಯದಲ್ಲಿ ಉದಾಹರಿಸಿರುತ್ತಾರೆ. "ಅಪ್ಪಾ, ಶಾಂತನಾಗಿರು, ಸ್ವಾಧ್ಯಾಯವನ್ನೂ ಯೋಗವನ್ನೂ ಅನುಷ್ಠಾನಮಾಡುತ್ತಿರು ಅದರಿಂದ ನಿನಗೆ ಶ್ರೇಯಸ್ಸಾಗುವದು" ಎಂಬ ಬಗೆಯ ವಾಕ್ಯವು ಈ ತಪಸ್ಸಿಗೆ ಉದಾಹರಣೆಯೆಂದು ಅವರು ಹೇಳಿರುತ್ತಾರೆ.

ಸ್ವಾಧ್ಯಾಯಾಭ್ಯಾಸವೆಂದರೆ ವೇದಾಧ್ಯಯನವು. ಅದನ್ನು ಯಥಾವಿಧಿಯಾಗಿ ಮಾಡುವದು ಒಂದು ಬಗೆಯ ವಾಙ್ಮಯತಪಸ್ಸು. ವೇದಮೂರ್ತಿ ಎಂಬ ಹೆಸರನ್ನು ಪಡೆದುಕೊಳ್ಳಬೇಕೆಂಬ ಆಶೆಯಿಂದಾಗಲಿ ಮತ್ತೊಬ್ಬರಿಂದ ದಕ್ಷಿಣೆಯೇ ಮೊದಲಾದುವನ್ನು ಸಂಪಾದಿಸುವ ಇಚ್ಛೆಯಿಂದಾಗಲಿ ಮಾಡುವ ಅಧ್ಯಯನವು ಈ ತಪಸ್ಸಿಗೆ ಸೇರಿದ್ದಲ್ಲ. ವೇದವು ಪರಮಾರ್ಥವನ್ನು ತಿಳಿಸುವ ವಾಗ್ವಿಶೇಷವು, ಪರಮಾತ್ಮಸ್ವರೂಪವೇ ಅದು - ಎಂಬ ಭಾವನೆಯಿಂದ ಶ್ರದ್ಧಾಭಕ್ತಿಪೂರ್ವಕವಾಗಿ ಯಥಾವಿಹಿತವಾಗಿ ವೇದಸ್ವೀಕಾರವನ್ನು ಮಾಡುವದು ವಾಙ್ಮಯತಪಸ್ಸು.

ಮನುಷ್ಯನ ಯಾವ ಮಾತನ್ನಾಡಲಿ ಅವನ ಮನಸ್ಸಿನಲ್ಲಿ ಅದಕ್ಕನುಗುಣವಾಗಿ ಒಂದು ಅಲೆ ಎದ್ದಿರುತ್ತದೆ. ಶಾಸ್ತ್ರವು ಮಂಗಳಕರವಾದ ಭಾವನೆಯನ್ನೇ ತಿಳಿಸುವ ವಾಕ್ಯವಾದ್ದರಿಂದ ಶಾಸ್ತ್ರೋಕ್ತರೀತಿಯಿಂದ ಆಡಿದ ಮಾತು ಮಂಗಳಕರವಾದ ವೃತ್ತಿಯನ್ನೇ ಮನಸ್ಸಿನಲ್ಲಿ ಎಬ್ಬಿಸುತ್ತದೆ. ಯಾವದಾದರೊಂದು ಉತ್ತಮಕರ್ಮವನ್ನು ಪ್ರಾರಂಭಿಸುವಾಗ

ಪುಣ್ಯಾಹವಾಚನವನ್ನು ಮಾಡಿಸುವ ರೂಢಿ ಇದೆಯಷ್ಟೆ. "ಇಂದು ಇಂಥ ಕರ್ಮವನ್ನು ಮಾಡುತ್ತೇನೆ ; ಇದು ಪುಣ್ಯಾಹವು ಎಂದರೆ ಶುಭದಿನವು - ಎಂದು ಹೇಳಬೇಕು"- ಎಂದು ಯಜಮಾನನು ಆ ಸಂದರ್ಭದಲ್ಲಿಪ್ರಾರ್ಥನೆಮಾಡುತ್ತಾನೆ. ಆತನಿಂದ ಸತ್ಕೃತರಾಗಿ ತೃಪ್ತರಾಗಿರುವ ಬ್ರಾಹ್ಮಣರು "ಪುಣ್ಯಾಹವಾಗಲಿ. ನಿನಗೆ ಒಳ್ಳೆಯದಾಗಲಿ" ಎಂದು ಮನಃ ಪೂರ್ವಕವಾಗಿ ಹೇಳುವ ವಚನದಿಂದ ಅವನ ಮನಸ್ಸಿನಲ್ಲಿ ಮಂಗಳಕರವಾದ ಭಾವನೆಯ ಅಲೆಯು ಎದ್ದುಕೊಳ್ಳುವದು - ಎಂಬ ಅಭಿಪ್ರಾಯವು ಈ ಪದ್ಧತಿಯಲ್ಲಿ ಅಡಗಿರುತ್ತದೆ. ಲೋಕದಲ್ಲಿ ವಾಙ್ಮಯತಪಸ್ಸುಳ್ಳ ಜನರು ಹೆಚ್ಚಿದರೆ ಜನರಿಗೆಲ್ಲ ಕಲ್ಯಾಣವೇ ಆದೀತು. ಇಂಥವರ ಮಾತಿಗೆ ಎಲ್ಲರೂ ಬೆಲೆಕೊಡುತ್ತಾರೆ. ವಾಙ್ಮಯತಪಸ್ಸು ಉಳ್ಳವರ ಬಾಯಲ್ಲಿ ಯಾವ ವಾಕ್ಯವು ಬಂದರೂ ಅದರಂತೆ ಅವಶ್ಯವಾಗಿ ಆಗುವದು ಎಂದು ಆಸ್ತಿಕರ ನಂಬಿಕೆ. ಉತ್ತರರಾಮಚರಿತ್ರೆಯಲ್ಲಿಸೀತಾಸಮೇತನಾದ ಶ್ರೀರಾಮಚಂದ್ರನಿಗೆ ವಸಿಷ್ಠರು ಹೇಳಿಕಳುಹಿಸಿದ ವಾಕ್ಯದಲ್ಲಿ ಸೀತೆಗೆ ಇಬ್ಬರು ಮಕ್ಕಳಾಗಲಿ - ಎಂಬ ಅಭಿಪ್ರಾಯವಿತ್ತು. ಇದನ್ನು ಕೇಳಿದ ರಾಮಚಂದ್ರನು "ಲೌಕಿಕರು ಆಡಿದ ಮಾತು ಅರ್ಥವನ್ನನುಸರಿಸಿರುತ್ತದೆ. ಆದರೆ ಆದ್ಯಋಷಿಗಳು ಆಡಿದ ಮಾತನ್ನು ಅರ್ಥವೇ ಹಿಂಬಾಲಿಸುತ್ತದೆ" ಎಂದಿರುತ್ತಾನೆ. ಇದು ವಾಙ್ಮಯತಪಸ್ಸಿನ ಫಲಕ್ಕೆ ಒಂದು ಉದಾಹರಣೆ. ವಾಕ್ಯವೆಂಬುದು ಒಂದು ದೊಡ್ಡ ಅಸ್ತ್ರವು. ಅದನ್ನು ಸಮಯವರಿತು ಉಪಯೋಗಿಸಬೇಕು. ಬಾಯಿ ಇದೆ ಎಂದು ತಿಳಿದದ್ದನ್ನೆಲ್ಲ ಆಡುವದಕ್ಕೆ ದೇವರು ವಾಗಿಂದ್ರಿಯವನ್ನು ಅನುಗ್ರಹಿಸಿಲ್ಲ. ಅವಶ್ಯವಾದಾಗ ಬೇಕಾದಷ್ಟನ್ನು ಕ್ರಮವಾಗಿ ಆಡುವ ವಾಕ್ಯವೇ ತಪಸ್ಸೆನಿಸುವದು. ಈಗಿನ ಜನರಲ್ಲಿ ವಾಕ್ಕೆಂಬುದು ಹಸಗೆಟ್ಟ ಹಾರ್ಮೋನಿಯಂನಂತೆ ಇರುತ್ತದೆ. ಆ ವಾದ್ಯವನ್ನು ನುಡಿಸಿದಾಗ ಏನೇನೋ ಅಪಸ್ವರಗಳು ಹೊರಡುವಂತೆ ಜನರು ಮಾತನಾಡುವದಕ್ಕೆ ಪ್ರಾರಂಭಿಸಿದರೆ ಬರಬಾರದ ಮಾತುಗಳೆಲ್ಲ ಹೊರಟುಬಿಡುತ್ತವೆ. ಕೆಲವರು ಅತ್ಯಂತ ಅವಶ್ಯವಾಗಿರುವಾಗಲೂ ಸುಮ್ಮನಿದ್ದುಬಿಡುತ್ತಾರೆ; ಎಷ್ಟೋ ಜನರು ಸಭಾಧ್ಯಕ್ಷರಾಗಿ ಬಾಯಿಬಿಡದೆ ಸುಮ್ಮನೆ ಕುಳಿತಿರುವದುಂಟು. ಸರಿಯಾಗಿ ಮಾತನ್ನಾಡುವದಕ್ಕೆ ಬರುವದಿಲ್ಲವೆಂಬದೊಂದೇ ಕಾರಣವಲ್ಲ, ಮಾತನ್ನಾಡಿದರೆ ಯಾರಿಗಾದರೂ ನೋವಾಗಬಹುದೆಂಬ ಅಂಜಿಕೆಯೂ ಕೆಲವು ವೇಳೆಗಳಲ್ಲಿ ಈ ಬಗೆಯ ಮೌನಕ್ಕೆ ಕಾರಣವಾಗಿರುತ್ತದೆ. ಆದರೆ ಮಾತನ್ನು ಆಡಿಯೂ ಒಬ್ಬರಿಗೆ ಉದ್ವೇಗಕರವಾಗದಂತೆ ಪ್ರಿಯವೂ ಹಿತವೂ ಸತ್ಯವೂ ಆಗಿರುವಂತೆ ಮಾತನಾಡುವದು ಒಂದಾನೊಂದು ತಪಸ್ಸಿನ ಫಲವೇ ಸರಿ.

ವೇದಾಧ್ಯಯನವೆಂಬುದೊಂದು ದೊಡ್ಡ ವಾಙ್ಮಯತಪಸ್ಸು. ಇದನ್ನೇ ಇಲ್ಲಿ ಸ್ವಾಧ್ಯಾಯಾಭ್ಯಸನ ಎಂದು ಕರೆದಿರುತ್ತದೆ. ವೇದದಲ್ಲಿ ಪರಮೇಶ್ವರನ ವರ್ಣನೆಯಿದೆ ; ಅಥವಾ ಪರಮೇಶ್ವರಾರ್ಥವಾದ ಕರ್ಮದ ವರ್ಣನೆಯಿದೆ. ನೇರಾಗಿ ನಾವೇ ಸ್ವತಂತ್ರವಾಗಿ ಪ್ರಾರ್ಥನೆ ಮಾಡುವದಕ್ಕೆ ಮೊದಲು ಇಂಥ ಋಷಿವಾಕ್ಯವನ್ನು ಅರ್ಥಾನುಸಂಧಾನಪೂರ್ವಕವಾಗಿ

ಹೇಳುವದನ್ನು ಕಲಿಯಬೇಕು. ಹಿಂದಿನವರು ಸ್ತೋತ್ರಾದಿಗಳನ್ನು ಗಟ್ಟಿಮಾಡಿಕೊಂಡು ಹಾಡುವದಕ್ಕೂ ಇದೇ ಉದ್ದೇಶ. ನಾಟಕದಲ್ಲಿ ಸೀತೆಯ ವೇಷವನ್ನು ಹಾಕಿದವನು ಆಕೆಯ ಮಾತನ್ನು ಗಟ್ಟಿಮಾಡಿ ಒಪ್ಪಿಸುವಾಗಲೂ ಸಹಜವಾಗಿ ತಾನೇ ಮಾತನಾಡುವಷ್ಟು ಭಾವವನ್ನು ಸೂಚಿಸಿ ಮಾತನಾಡಬೇಕಾದರೆ ಅದಕ್ಕೂ ಒಂದಾನೊಂದು ಬಗೆಯ ಅಭ್ಯಾಸಮಾಡಬೇಕಾಗುವದಲ್ಲವೆ ? ಇದರಂತೆ ಶಾಸ್ತ್ರದಲ್ಲಿ ಹೇಳಿದ್ದು ನಮ್ಮ ಹೃದಯದ ಭಾವಕ್ಕೆ ಹೊಂದಿಕೊಳ್ಳುವಂತೆ ಮಾಡಬೇಕಾದರೆ ಒಂದಾನೊಂದು ತಪಸ್ಸು ಬೇಕಾಗುವದು. ವೇದದಲ್ಲಿರುವ ಸ್ವರವರ್ಣಾದಿಗಳ ಉಚ್ಚಾರಣೆಯು ಒಂದಿಷ್ಟು ತಪ್ಪಿದರೂ ಅರ್ಥವು ಬೇರೆಯಾಗಿಬಿಡುತ್ತದೆ. ಅದನ್ನು ಇದ್ದದ್ದು ಇದ್ದಂತೆ ಉಚ್ಚರಿಸಿ ಪಠಿಸುವದು ಒಂದು ತಪಸ್ಸಾಗುವದು; ತಪ್ಪಿದರೆ ಒಂದು ಮಹಾಪರಾಧವಾಗುವದು - ಎಂಬ ಭಾವನೆಯಿಂದ ವೇದವನ್ನು ಅಭ್ಯಾಸಮಾಡಬೇಕು. ಈ ಬಗೆಯ ವಾಙ್ಮಯವು ವಾಙ್ಮಯತಪಸ್ಸೆನಿಸುತ್ತದೆ.

## ೧೬೮. ಮಾನಸತಪಸ್ಸು 17 - (16)

**(14-5-50)**

ತಪಸ್ಸು ಎಂಬ ಶಬ್ದಕ್ಕೆ ಯಾವದೋ ಒಂದು ರಹಸ್ಯಾರ್ಥವಿದೆ ಎಂದು ಭಾವಿಸಬಾರದು. ಶರೀರವಾಙ್ಮನಸ್ಸುಗಳು ನಮ್ಮ ಅಧೀನವಾಗಿದ್ದು ಸರಿಯಾದ ಮಾರ್ಗದಲ್ಲಿ ಮಾತ್ರ ನಡೆಯುತ್ತಿದ್ದರೆ ತಪಸ್ಸಾಯಿತು. ಮನಸ್ಸೇ ಮುಂತಾದವುಗಳು ಯಾವದಾದರೂ ಕಟ್ಟಿಗೆ ಸಿಕ್ಕಿಕೊಂಡರೆ ಅವಕ್ಕೆ ತಾಪವಾಗುತ್ತದೆ. ಶರೀರವನ್ನೂ ವಾಕ್ಕನ್ನೂ ಮನಸ್ಸನ್ನೂ ಸರಿಯಾದ ಹಾದಿಗೇ ಬಿಡುವದಕ್ಕೆ ಅವನ್ನು ನಿರ್ಬಂಧದಲ್ಲಿಟ್ಟು ಅವಕ್ಕೆ ತಾಪವನ್ನುಂಟುಮಾಡಬೇಕಾಗುತ್ತದೆ; ಆಗ ಆಯಾ ತಪಸ್ಸಾಗುವದು. ಶರೀರವಾಙ್ಮನಸ್ಸುಗಳನ್ನು ನಾವು ಯಾವ ಅಭ್ಯಾಸಕ್ಕೆ ಒಳಪಡಿಸುವೆವೋ ಆಯಾ ರೀತಿಯಲ್ಲಿಯೇ ಅವು ಸ್ವಲ್ಪ ಕಾಲದಮೇಲೆ ಸ್ವಭಾವದಿಂದಲೇ ನಡೆಯುವದಕ್ಕೆ ಪ್ರಾರಂಭಿಸುತ್ತವೆ. ಹೀಗೆ ಅವುಗಳನ್ನು ಅಭ್ಯಾಸದಿಂದ ತಿದ್ದುವದೇ ತಪಸ್ಸು.

ಹಿಂದೆ ಶರೀರವನ್ನೂ ವಾಕ್ಕನ್ನೂ ಯಾವ ಅಭ್ಯಾಸಕ್ಕೆ ಒಳಪಡಿಸಿದರೆ ಅವುಗಳ ತಪಸ್ಸಾಗುವವೆಂಬುದನ್ನು ತಿಳಿಸಿದ್ದಾಯಿತು. ಈ ದಿನ ಮಾನಸತಪಸ್ಸನ್ನು ವಿವರಿಸಬೇಕಾಗಿದೆ.

ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ 17-16

ಮನಃಪ್ರಸಾದವೆಂದರೆ ಮನಸ್ಸು ತಿಳಿಯಾಗುವದು. ನಮ್ಮ ಮನಸ್ಸಿಗೆ ಆಗಾಗ್ಗೆ ಬಗೆಬಗೆಯ ಕಲ್ಮಷಗಳು ಬಂದು ಸೇರಿಕೊಳ್ಳುತ್ತಿರುವವು. ನೀರು ಶುದ್ಧವಾಗಬೇಕಾದರೆ ಎರಡು ಬಗೆಯುಂಟು. ಕಲ್ಮಷವು ಕೆಳಕ್ಕೆ ಇಳಿದು ನಿಂತಮೇಲೆ ಶುದ್ಧವಾಗುವದು ಒಂದು ಬಗೆ ; ಅದನ್ನು ಶೋಧಿಸಿ ಅಥವಾ ಪತಂಗಿಸಿ ಕಲ್ಮಷವನ್ನೆಲ್ಲ ತೆಗೆದುಹಾಕಿದರೆ ಶುದ್ಧವಾಗುವದು ಮತ್ತೊಂದು ಬಗೆ. ಹೀಗೆಯೇ ನಾವು ಮಾಡುತ್ತಿರುವ ವ್ಯವಹಾರದಿಂದ ಕೆಲವು ಸಂಸ್ಕಾರಗಳಾಗಿ ನಮ್ಮ ಮನಸ್ಸಿನಲ್ಲಿ ಅವ್ಯಕ್ತವಾಗಿರುವಾಗ ತೋರುವ ಪ್ರಸನ್ನತೆಯು ಒಂದು ಬಗೆ. ಪೂರ್ಣವಾಗಿ ಎಲ್ಲಾ ಕಲ್ಮಷದ ಸಂಸ್ಕಾರವೂ ಹೋಗಿ ಆಗುವ ಪ್ರಸನ್ನತೆಯು ಮತ್ತೊಂದು ಬಗೆ. ಅವ್ಯಕ್ತವಾಗಿರುವ ಸಂಸ್ಕಾರಗಳು ನಿಮಿತ್ತವಿಶೇಷದಿಂದ ತಟ್ಟನೆ ಎದ್ದುಕೊಳ್ಳುವವು. ವರ್ತಮಾನಪತ್ರಿಕೆಗಳಲ್ಲಿ ಛೂಬಾಣ, ಕೋಸುಂಬರಿ - ಎಂದು ಮುಂತಾಗಿ ಹಾಸ್ಯಗರ್ಭಿತವಾಗಿ ಬರೆಯುವ ಮರ್ಮೋದ್ಘಾಟನೆಯ ವಾಕ್ಯಗಳಿಂದ ಮೊದಲು ಮನಸ್ಸು ಪ್ರಸನ್ನವಾಗಿದ್ದಂತೆ ತೋರುತ್ತಿದ್ದವರಿಗೂ ತಟ್ಟನೆ ಕೋಪಾದಿಗಳು ಉದ್ರಿಕ್ತವಾಗುವದು ನಮ್ಮಗಳ ಅನುಭವದಲ್ಲಿದೆ ; ಇದಕ್ಕೆ ಕಾರಣ ಅವರ ಮನಸ್ಸಿನಲ್ಲಿ ಕೋಪಾದಿಗಳ ಸಂಸ್ಕಾರಗಳು ಅವ್ಯಕ್ತವಾಗಿದ್ದುಕೊಂಡಿದ್ದದ್ದೇ ಆಗಿರುತ್ತದೆ. ನಮ್ಮ ಮನಸ್ಸಿನಲ್ಲಿ ಅವ್ಯಕ್ತವಾಗಿರುವ ಕಲ್ಮಷವು ಎಂದಿಗೂ ಆತ್ಯಂತಿಕವಾಗಿ ನಾಶವಾಗಿರುವದಿಲ್ಲ ; ತಳದಲ್ಲಿ ಕೆಸರಿರುವ ಕೆರೆಯ ನೀರಿನಂತೆ ಮನಸ್ಸು ಪ್ರಸನ್ನವಾಗಿ ತೋರಿದರೆ ಸಾಲದು ; ನಿಜವಾದ ಪ್ರಸನ್ನತೆಯಿರಬೇಕಾದರೆ ಕಲ್ಮಷವು ಅತ್ಯಂತವಾಗಿ ಹೋಗಿರಬೇಕು. ಮನಸ್ಸಿನ ಪ್ರಸನ್ನತೆಯು ನಮಗೆ ವಶವಾಗಬೇಕಾದರೆ "ಏನೇ ಆಗಲಿ, ನನ್ನ ಮನಸ್ಸನ್ನು ನಾನು ಕೆಡಿಸಿಕೊಳ್ಳುವದಿಲ್ಲ" ಎಂದು ಸಂಕಲ್ಪವನ್ನು ಮಾಡಿಕೊಳ್ಳಬೇಕು. ಹಾಗಾದರೆ ಮನಸ್ಸಿನಲ್ಲಿ ರಜಸ್ತಮೋಗುಣಗಳಿಗೆ ಅವಕಾಶವಿಲ್ಲದಂತೆ ಆಗಿ ಅದು ಪ್ರಸನ್ನವಾಗುತ್ತದೆ. ಯಾರು ಪರಮೇಶ್ವರನನ್ನೇ ಮನಸ್ಸಿನಲ್ಲಿಟ್ಟುಕೊಂಡಿರುತ್ತಾರೋ ಅವರಿಗೆ ಎಂದೆಂದಿಗೂ ಚಿತ್ತಕಾಲುಷ್ಯವುಂಟಾಗುವದೇ ಇಲ್ಲ. ತಾನು ಪ್ರಸನ್ನನಾಗಿದ್ದರೆ ತನ್ನ ಸುತ್ತುವಳೆಯವೆಲ್ಲವೂ ಪ್ರಸನ್ನವಾಗಿರುತ್ತದೆ. ಮನಃಪ್ರಸನ್ನತೆಯೆಂಬುದು ಪ್ರಪಂಚಕ್ಕೇ ಒಂದು ದೊಡ್ಡ ಉಪಕಾರವಾಗಿರುತ್ತದೆ. ನಮ್ಮ ಮನಸ್ಸಿನ ಅಪ್ರಸನ್ನತೆಯಿಂದ ನಮ್ಮ ಸುತ್ತಲಿನ ಪ್ರಪಂಚವನ್ನೆಲ್ಲ ಕಲುಷಿತವಾಗಿ ಮಾಡುವದು ಎಂದಿಗೂ ಸರಿಯಲ್ಲ. ಆದ್ದರಿಂದ ಮನಃ ಪ್ರಸನ್ನತೆ ಎಂಬುದು ಒಂದು ದೊಡ್ಡ ತಪಸ್ಸಾಗಿರುತ್ತದೆ.

ಸೌಮ್ಯತ್ವವು : ಮನಃಪ್ರಸಾದವು ಹೊರಸೂಸಿದರೆ ಕಾಣಿಸಿಕೊಳ್ಳುವದೇ ಸೌಮ್ಯತ್ವವು. ಮುಖದಲ್ಲಿರುವ ಪ್ರಸನ್ನತೆಯೇ ಮುಂತಾದ ಕಾರ್ಯದಿಂದ ಊಹಿಸಬಹುದಾಗಿರುವ ಸೌಮನಸ್ಯವೆಂಬ ವೃತ್ತಿವಿಶೇಷವಿದು. ಹಿಂದೆ ಒಬ್ಬ ಉಪಾಧ್ಯಾಯರು ಯತ್ನವಿಲ್ಲದೆ ವಿದ್ಯಾರ್ಥಿಗಳನ್ನು ಬೆತ್ತದಿಂದ ಹೊಡೆದು ಶಿಕ್ಷಿಸಬೇಕಾಗಿಬಂದಾಗ ಅವರನ್ನು ರಹಸ್ಯವಾದ ಸ್ಥಳಕ್ಕೆ ಕರೆದು ದಂಡಿಸಿ, ಅವರಿಗಾಗಿರುವ ವ್ಯಥೆಯು ಮುಖಭಾವದಿಂದ ಹೊರಗಿನವರಿಗೆ ತಿಳಿಯದಂತೆ ಆಗುವವರೆಗೂ ಅಲ್ಲಿಯೇ ಕುಳ್ಳಿರಿಸಿಕೊಂಡಿದ್ದು ಬುದ್ಧಿವಾದವನ್ನು ಹೇಳಿ

ಹೊರಕ್ಕೆ ಕಳುಹಿಸಿಕೊಡುತ್ತಿದ್ದದ್ದು ನನ್ನ ನೆನಪಿನಲ್ಲಿದೆ. ಇಂಥ ಸಂದರ್ಭದಲ್ಲಿ ಆ ವಿದ್ಯಾರ್ಥಿಗಳು ತಮ್ಮ ಸೌಮನಸ್ಯವನ್ನು ಸ್ವಲ್ಪಹೊತ್ತು ಕಳೆದುಕೊಂಡಿದ್ದರೆಂಬುದು ಯಾವ ಹೊರಗಿನ ಚಿಹ್ನೆಯಿಂದಲೂ ಗೊತ್ತಾಗುತ್ತಿರಲಿಲ್ಲ. ಮನುಷ್ಯನು ಪ್ರಯತ್ನವಿಶೇಷದಿಂದ ತನ್ನ ಮುಖಮುದ್ರೆಯಲ್ಲಿ ಯಾವ ಮಾರ್ಪಾಡೂ ತೋರದಂತೆ ಮಾಡಿಕೊಳ್ಳಬಹುದು ; ಅಂಥ ಸಂದರ್ಭಗಳಲ್ಲಿ ಒಳಗಿನ ಮನಸ್ಸಿನಲ್ಲಿ ಸೌಮನಸ್ಯವಿಲ್ಲದಿದ್ದರೂ ಅದು ಇದೆ ಎಂಬ ಭ್ರಾಂತಿಯು ಹೊರಗಿನವರಿಗೆ ಉಂಟಾಗಬಹುದು. ಆದರೆ ತನ್ನ ಮನಸ್ಸಿನಲ್ಲಿ ಸೌಮ್ಯತ್ವವಿದೆಯೊ, ಇಲ್ಲವೋ - ಎಂಬುದನ್ನು ತಾನು ತಾನು ಸಂಶಯಪಡುವದಕ್ಕೆ ಎಂದಿಗೂ ಕಾರಣವಿರುವದಿಲ್ಲ; ಏಕೆಂದರೆ ಹೊರಗಿನವರು ಅರಿಯಲಿ, ಬಿಡಲಿ, ಮನಸ್ಸಿನಲ್ಲಿ ಆಗುವ ಏರುಪೇರುಗಳು ಆಗಿಂದಾಗ್ಗೆ ತನ್ನ ಅನುಭವಕ್ಕೆ ಬಂದೇಬರುತ್ತವೆ. ಹಾಗೆ ಸ್ವಸಂವೇದ್ಯವಾದ ಸೌಮ್ಯತ್ವವನ್ನು ಸಂಪಾದಿಸಿಕೊಳ್ಳುವದನ್ನೇ ಇಲ್ಲಿ ಮಾನಸತಪಸ್ಸೆಂದು ಕರೆದಿರುವದು.

**ಮೌನ :** ಇದು ವಾಙ್ಮಯತಪಸ್ಸಿಗೆ ಸೇರಬೇಕಲ್ಲವೆ? ಎಂದು ಕೆಲವರು ಶಂಕಿಸಬಹುದು. ಆದರೆ ಇಲ್ಲಿ ಹೇಳಿರುವದು ಕೇವಲ ಮಾತನಾಡದೆ ಇರುವ ಮೌನವಲ್ಲ; ತತ್ತ್ವದ ಮನನರೂಪವಾದ ಮೌನವೇ ಇಲ್ಲಿ ವಿವಕ್ಷಿತವಾಗಿರುತ್ತದೆ. ವಿದ್ವಾಂಸರಿರುವಲ್ಲಿ ನಾಚಿಕೆಯಿಂದಲೊ, ಅಂಜಿಕೆಯಿಂದಲೊ - ಪಂಡಿತರಲ್ಲದವರು ಮೌನದಿಂದಿರಬಹುದು. ವಾಙ್ಮೌನವನ್ನು ಕೂಡ ಯಾವದೋ ಒಂದು ಸಂಕಲ್ಪದಿಂದಲೇ ಮಾಡುತ್ತಾರೆ. ಆದ್ದರಿಂದ ಮೌನಕ್ಕೆ ಮನಸ್ಸು ಪ್ರಧಾನವು. ಬೆಂಕಿಯಲ್ಲಿ ಬೀಳುವಾಗ ಮನಸ್ಸಿನಲ್ಲಿ ವ್ಯಥೆಯಿಂದ ಚಡಪಡಿಸುತ್ತಿದ್ದರೂ ಮಾತನಾಡದೆ ಸುಮ್ಮನಿರುವದು ಮೌನವಾಗಲಾರದು. ಆದ್ದರಿಂದ ವಾಙ್ಮೌನವಿದ್ದರೂ ಅಮೌನಿಯಾಗಿರಬಹುದು. ಹೀಗೆಯೇ ಪರಮಾತ್ಮನ ನಾಮೋಚ್ಚಾರಣೆಯೇ ಮುಂತಾದವುಗಳಿಂದ ಮೌನಕ್ಕೆ ಯಾವ ಭಂಗವೂ ಬಾರದಿರುವದಾದರೆ ಆಗಲೂ ಮೌನಿಯೇ ಎನಿಸಿರಬಹುದು. ಒಂದೂರಿನಲ್ಲಿ ಒಬ್ಬರು ತಾವು ಮೌನವಾಗಿದ್ದೇವೆಂದು ತಿಳಿಸುವದಕ್ಕಾಗಿ "ರಾಮ" ರಾಮ ಎಂದೇ ಬೇರೆ ಬೇರೆಯ ಧ್ವನಿಯಿಂದಲೂ ಅಭಿನಯಗಳಿಂದಲೂ ತಮ್ಮ ಮನೋಭಾವಗಳನ್ನು ತಿಳಿಸುತ್ತಿದ್ದರು. ಅದೊಂದು ಬಗೆಯ ಅಮೌನವೇ. ಆದ್ದರಿಂದ ಇಲ್ಲಿ ತತ್ತ್ವಮನನರೂಪವಾದ ಮೌನವನ್ನೇ ಮೌನವೆಂದು ಕರೆದಿದೆಯಾದ್ದರಿಂದ ಅದನ್ನು ಮಾನಸವೆಂದು ಕರೆಯುವದರಲ್ಲಿ ಯಾವ ದೋಷವೂ ಇರುವದಿಲ್ಲ.

**ಆತ್ಮವಿನಿಗ್ರಹ**ವೆಂದರೆ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡಿರುವದು. ಶರೀರ, ಇಂದ್ರಿಯ, ಮನಸ್ಸು - ಇವುಗಳಿಗೂ ಆತ್ಮಶಬ್ದವನ್ನು ಸಂಸ್ಕೃತದಲ್ಲಿ ಉಪಯೋಗಿಸುತ್ತಾರೆ. ಮನಸ್ಸು ನಮ್ಮದೇ ಆದರೂ ಅದು ಯಾವ ಯಾವಾಗ ಏನೇನು ಮಾಡುತ್ತದೆ ಎಂಬುದು ನಮ್ಮೆಲ್ಲನೇಕರಿಗೆ ತಿಳಿದಿರುವದಿಲ್ಲ. ಎಷ್ಟೋ ವೇಳೆ ನಮ್ಮ ಮನಸ್ಸು ನಮಗೂ

ಅರಿವಿಲ್ಲದೆಯೇ ವಿಷಯಗಳ ಕಡೆಗೆ ಓಡಿಬಿಡುತ್ತದೆ. ಚಿಕ್ಕಮಕ್ಕಳ ಸ್ಕೂಲಿನಲ್ಲಿ ಹುಡುಗರು ಉಪಾಧ್ಯಾಯರ ಕಡೆಗೆ ಲಕ್ಷ್ಯವಿಟ್ಟಿದ್ದರೂ ಹೊರಗಡೆಯಲ್ಲಿ ಯಾವದಾದರೂ ದೋಣು, ಓಲಗ - ಮುಂತಾದ ವಾದ್ಯಗಳ ಧ್ವನಿಯನ್ನು ಕೇಳಿ ತಮಗೂ ಗೊತ್ತಿಲ್ಲದೆಯೇ ಆ ಕಡೆಗೆ ಓಡಿಹೋಗುವದುಂಟು. ಅದರಂತೆಯೇ ನಾವು ನಮ್ಮ ಮನಸ್ಸಿಗೆ ಪರವಶರಾಗಿ ಅನೇಕ ವೇಳೆಗಳಲ್ಲಿ ಚಾಂಚಲ್ಯವನ್ನು ತೋರಿಸುವೆವು. ಕೆಲವರು ವರ್ತಮಾನಪತ್ರಿಕೆಗಳಿಂದ ಆಕೃಷ್ಟರಾಗಿ ಅವನ್ನು ಓದುವ ಚಟಕ್ಕೆ ಮನಸ್ಸನ್ನು ಹರಿಯಬಿಟ್ಟುಕೊಂಡಿರುತ್ತಾರೆ ; ಮತ್ತೆ ಕೆಲವರು ಹೋಟಲುತಿಂಡಿಯ ರುಚಿಗೆ ಅಥವಾ ಜೂಜಿಗೆ ತಮ್ಮ ಮನಸ್ಸನ್ನು ಮಾರಿಕೊಂಡು ಬಿಟ್ಟಿರುತ್ತಾರೆ. ಇಂಥ ಸಂದರ್ಭಗಳಲ್ಲಿ ಅವರಿಗೆ ಆತ್ಮವಿನಿಗ್ರಹವಿರುವದಿಲ್ಲ. ನಮ್ಮ ಮನಸ್ಸು ಯಾವಾಗ ಯಾವ ಕಡೆಗೆ ತಿರುಗಬೇಕೆಂದು ನಾವು ಇಚ್ಛಿಸುತ್ತೇವೋ ಆಯಾ ಕಡೆಗೇ ಅದು ನಮ್ಮ ವಶದಲ್ಲಿದ್ದುಕೊಂಡು ತಿರುಗುವ ಹಾಗಿದ್ದರೆ, ನಮಗೆ ಆತ್ಮವಿನಿಗ್ರಹವು ಅಳವಟ್ಟಿದೆ ಎನ್ನಬಹುದು. ಸಾಧನಗಳ ವಿಷಯವಾಗಿ ಓದುವದೂ ಮಾತನಾಡುವದೂ ಸುಲಭ; ಆದರೆ ಅವುಗಳು ನಿಜವಾಗಿ ನಮಗೆ ಅಳವಡುವದು ಅಭ್ಯಾಸದಿಂದ ಆಗಬೇಕು. ಇದರಂತೆಯೇ ಆತ್ಮವಿನಿಗ್ರಹವನ್ನೂ ಅರಿಯಬೇಕು. ಆತ್ಮವಿನಿಗ್ರಹವು ನಮಗೆ ನಿಜವಾಗಿ ಅಳವಟ್ಟಿದ್ದರೆ ಅದೊಂದು ಬಗೆಯ ಮಾನಸತಪಸ್ಸಾಗುವದು.

**ಭಾವಸಂಶುದ್ಧಿ** : ಮತ್ತೊಬ್ಬರೊಡನೆ ವ್ಯವಹಾರಮಾಡುತ್ತಿರುವಾಗ ಒಳಗೊಂದು ಹೊರಗೊಂದು ಇಲ್ಲದಂತೆ ಅಮಾಯಿತ್ವವುಳ್ಳವನಾಗಿರುವದೇ ಭಾವಸಂಶುದ್ಧಿಯೆಂಬ ಗುಣವು. ಉಪನ್ಯಾಸಮಾಡಿದವರನ್ನು ಭಾಷಣದಲ್ಲಿ ಯಾವ ಗುಣವನ್ನೂ ಕಾಣದಿದ್ದರೂ ಹೊಗಳುವದು, ಒಬ್ಬರ ವಿಷಯದಲ್ಲಿ ನಮಗೆ ಪ್ರೀತಿ ಇಲ್ಲದಿದ್ದರೂ ಪ್ರೀತಿಯನ್ನು ತೋರಿಸುವದು - ಇವೆಲ್ಲ ಭಾವಸಂಶುದ್ಧಿಯಿಲ್ಲದ್ದರ ಫಲವು. ಯಾರಿಗಾದರೂ ಸರಳತೆಯಿಂದ ಕಾಣುವ ಮಕ್ಕಳ ಮನಸ್ಸಿನಲ್ಲಿ ಭಾವಸಂಶುದ್ಧಿಯಿರುತ್ತದೆ. ಭಾವಸಂಶುದ್ಧಿಯಿಂದಲೇ ವ್ಯವಹಾರವನ್ನೆಲ್ಲ ಜಯಿಸುವದು ಕಷ್ಟ ; ಏಕೆಂದರೆ ನಾವು ವ್ಯವಹರಿಸುವ ಸಂದರ್ಭದಲ್ಲಿ ನಿಯತವಾಗಿ ಮನಃ ಶುದ್ಧಿಯಿಂದಿರುವ ಜನರೇ ನಮಗೆ ಸಿಕ್ಕುವದಿಲ್ಲ. ಆದರೂ ಕೊನೆಗೂ ಭಾವಶುದ್ಧಿ ಇರುವವನಿಗೇ ಒಟ್ಟಿನಲ್ಲಿ ಹೆಚ್ಚಿನ ಲಾಭವಾಗುತ್ತದೆ. ಮಾಯಾವಿಯಾಗಿ ವ್ಯವಹಾರಮಾಡುವವನು ಒಂದೆರಡು ಸಲ ಗೆದ್ದರೂ ಕೊನೆಗೆ ಅವನ ಯೋಗ್ಯತೆ ಜನರಿಗೆ ಗೊತ್ತಾಗಿಬಿಡುತ್ತದೆ. ಮುಂದೆ ಅವನೊಡನೆ ವ್ಯವಹರಿಸುವದಕ್ಕೆ ಎಲ್ಲರೂ ಅಂಜುತ್ತಿರುತ್ತಾರೆ. ಸ್ವಲ್ಪಹೊತ್ತು ಪೂಜೆ, ಜಪ, ಪಾರಾಯಣ - ಮುಂತಾದವುಗಳನ್ನು ಮಾಡಿ ಬಳಿಕ ವ್ಯವಹಾರದಲ್ಲಿ ಭಾವಸಂಶುದ್ಧಿಯಿಲ್ಲದೆ ನಡೆದರೂ ತಮ್ಮ ಸಾಧನಕ್ಕೆ ಉತ್ತಮಫಲವಾಗುವದೆಂದು ನಂಬುವ ಮೂಢರೂ ಉಂಟು. ಮಾಡಿದ ಉತ್ತಮಸಾಧನಕ್ಕೆ ಫಲವೇನೋ ಉಂಟಾದರೂ ಹೀಗೆ ಆತ್ಮವಂಚನೆಮಾಡಿಕೊಂಡು ನಡೆಯುತ್ತಿರುವವರಿಗೆ ಅದರಿಂದಾಗುವ ಫಲವು ಬಹುಸ್ವಲ್ಪವಾಗಿರುವದು.

ಮಾನಸಿಕ ತಪಸ್ಸಿನಲ್ಲಿ ಭಾವಸಂಶುದ್ಧಿ ಎಂಬುದು ಎಲ್ಲಕ್ಕೂ ಹೆಚ್ಚಿನದು. ನಾಸ್ತಿಕನು ಕೂಡ ಸಕಾರಣವಾಗಿ ನಾಸ್ತಿಕನಾಗಿದ್ದುಕೊಂಡು ತನ್ನ ಮನಸ್ಸಿನ ನಿಶ್ಚಯದಂತೆ ನಡೆಯುತ್ತಿದ್ದರೆ ಒಂದಲ್ಲ ಒಂದು ದಿನ ಸತ್ಸಂಗದಿಂದ ಸರಿಯಾದ ಮಾರ್ಗಕ್ಕೆ ಬರಬಹುದು. ಆದರೆ ಕಪಟಿಯಾದವನು ಹೊರಗೆ ಈಶ್ವರನಿದ್ದಾನೆಂದು ಕೂಗುತ್ತಾ ಭಾವಶುದ್ಧಿಯಿಲ್ಲದೆ ಒಳಗೆ ನಂಬಿಕೆಯಿಲ್ಲದವನಾಗಿದ್ದರೆ ಕೆಟ್ಟುಹೋಗುತ್ತಾನೆ. ಭಾವಸಂಶುದ್ಧಿಯಿಂದೊಡಗೂಡಿ ಮಾಡುವ ಸಾಧನವು ಅತ್ಯಲ್ಪವಾದರೂ ಅದು ನಮ್ಮ ಇಡೀ ಜೀವನವನ್ನೇ ವ್ಯಾಪಿಸಿಕೊಂಡು ನಮ್ಮನ್ನು ಬದುಕಿಸುತ್ತದೆ. ಆದ್ದರಿಂದ ಭಾವಸಂಶುದ್ಧಿಯಿಂದೊಡಗೂಡಿಯೇ ನಮ್ಮ ಎಲ್ಲಾ ಸಾಧನಗಳನ್ನೂ ಮಾಡುತ್ತಿರುವದು ಉತ್ತಮವಾದ ಮಾನಸತಪಸ್ಸಾಗುವದು.

## ೧೬೯. ತಪಸ್ಸಿನಲ್ಲಿ ಸಾತ್ತ್ವಿಕಾದಿಪ್ರಭೇದಗಳು 17 - (17-19)

(21-5-50)

ಶರೀರಾದಿತಪಸ್ಸುಗಳನ್ನು ಈವರೆಗೆ ತಿಳಿಸಿದ್ದಾಗಿದೆ. ಅವು ಮೂರರಲ್ಲಿಯೂ ಒಂದಕ್ಕೊಂದರ ಸಂಬಂಧವು ಇರುತ್ತದೆ. ಶರೀರಾದಿತ್ರಿಕರಣಗಳನ್ನು ಜ್ಞಾನಕ್ಕೆ ಸಿದ್ಧಗೊಳಿಸುವದೇ ತಪಸ್ಸು. ಮನಸ್ಸನ್ನು ಹೀಗೆ ಸಜ್ಜುಗೊಳಿಸುವಾಗ ಅದನ್ನು ಒಂದಾನೊಂದು ಕಟ್ಟಿಗೆ ಒಳಪಡಿಸಿ ಅದಕ್ಕೆ ತಾಪವನ್ನುಂಟುಮಾಡುವದರಿಂದ ಈ ಸಾಧನಕ್ಕೆ ತಪಸ್ಸು ಎಂಬ ಹೆಸರಾಗುತ್ತದೆ. ವಿಷಯಗಳಿಂದಲೂ ಮನಸ್ಸಿಗೆ ಒಂದು ಬಗೆಯ ತಾಪವಾಗುತ್ತದೆ ; ಆದರೆ ಅವುಗಳಿಂದಾಗುವ ತಾಪತ್ರಯದಿಂದ ನಮ್ಮಲ್ಲಿದ್ದ ಕಳೆಯು ಕುಂದಿಹೋಗುತ್ತದೆ. ಆದ್ದರಿಂದ ಅದನ್ನು ನಾವು ತಪಸ್ಸೆಂದು ಕರೆಯುವದಿಲ್ಲ. ಜ್ಞಾನಕ್ಕೆ ಮನಸ್ಸನ್ನು ಸಜ್ಜುಗೊಳಿಸುವದಕ್ಕಾಗಿ ಮಾಡುವ ಅಭ್ಯಾಸ ವಿಶೇಷವನ್ನೇ ನಾವು ತಪಸ್ಸು ಎಂದು ಕರೆಯುತ್ತೇವೆ.

ತಪಸ್ಸು ಶಾರೀರಕವಾಗಲಿ ವಾಚಿಕವಾಗಲಿ ಮಾನಸಿಕವಾಗಲಿ ಅದನ್ನು ಮಾಡುವ ಕ್ರಮದಿಂದ ಅದರಲ್ಲಿ ಸಾತ್ತ್ವಿಕ, ರಾಜಸ, ತಾಮಸ - ಎಂಬ ಪ್ರಭೇದಗಳುಂಟಾಗುವವು. ಹೇಗೆಂದರೆ :

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥** 17-17

ಹೆಚ್ಚಿನ ಶ್ರದ್ಧೆಯಿಂದ ಕೂಡಿದ ತಪಸ್ಸು ಸಾತ್ತ್ವಿಕವು. ಶ್ರದ್ಧೆಯಿಂದ ಮಾಡಿದ ಕಾರ್ಯವೆಲ್ಲವೂ ಹೆಚ್ಚಿನ ತರಗತಿಯದಾಗಿರುತ್ತದೆ. ಹುಡುಗರನ್ನು ತನ್ನ ಕರ್ತವ್ಯವೆಂಬ

ಬುದ್ಧಿಯಿಂದ ಕ್ರಿಕೆಟ್ ಮುಂತಾದವನ್ನು ಆಡಿಸುವ ಉಪಾಧ್ಯಾಯನಿಗೂ ಅದರಿಂದ ತನಗೂ ಆನಂದವಾಗುತ್ತದೆಯಾದ್ದರಿಂದ ಹುಡುಗರನ್ನು ಅದರಲ್ಲಿ ಭಾಗಿಗಳನ್ನಾಗಿ ಮಾಡಬೇಕೆಂಬ ಬುದ್ಧಿಯಿಂದ ಆಡಿಸುವವನಿಗೂ ವ್ಯತ್ಯಾಸವೇನು ? ಎರಡನೆಯವನಿಗೆ ಆಟದಲ್ಲಿ ಹೆಚ್ಚಿನ ಶ್ರದ್ಧೆಯಿರುತ್ತದೆಯಲ್ಲವೆ ? ಇದರಂತೆ ದೊಡ್ಡವರನ್ನು ಕೇಳಿ ತನಗೆ ಆಗಿರುವ ದುಃಖವನ್ನು ತಪ್ಪಿಸಿಕೊಳ್ಳುವದಕ್ಕೊ, ಅಥವಾ ತನ್ನ ಕಾಮನೆಯನ್ನು ಪೂರೈಸಿಕೊಳ್ಳುವದಕ್ಕೊ - ಮಾಡುವ ಅಧ್ಯಾತ್ಮಸಾಧನಕ್ಕೂ ಸಾಧನಕ್ಕಾಗಿ ಸಾಧನವೆಂಬ ಬುದ್ಧಿಯಿಂದ ಮಾಡುವ ಸಾಧನಕ್ಕೂ ಇದೇ ವ್ಯತ್ಯಾಸವಿರುತ್ತದೆ. ಶ್ರದ್ಧೆಯಿಂದ ಮಾಡಿದ್ದಕ್ಕೂ ಶ್ರದ್ಧೆಯಿಲ್ಲದೆ ಮಾಡಿದ್ದಕ್ಕೂ ಇರುವ ಹೆಚ್ಚುಕಡಿಮೆಯು ನಮಗೆ ದಿನದಿನವೂ ಅನುಭವದಲ್ಲಿ ಕಂಡುಬರುತ್ತಿರುತ್ತದೆ. ಯಾವದನ್ನು ಶ್ರದ್ಧೆಯಿಂದಲೂ ತಿಳಿವಳಿಕೆಯಿಂದಲೂ ಮಾಡುವರೋ ಅದೇ ವೀರ್ಯವತ್ತರವಾಗುತ್ತದೆ. ಆದ್ದರಿಂದ ಹೆಚ್ಚಿನ ಶ್ರದ್ಧೆಯಿಂದ ಮಾಡಿದ್ದೇ ಸಾತ್ತ್ವಿಕತಪಸ್ಸು ಆಗುತ್ತದೆ ; ಶ್ರದ್ಧೆಯ ಹೆಚ್ಚು ಕಡಿಮೆಯಿಂದ ಅದರ ಸಾತ್ತ್ವಿಕತೆಯೂ ಹೆಚ್ಚುಕಡಿಮೆಯಾಗುತ್ತದೆ.

ತಪಸ್ಸು ಫಲಾಕಾಂಕ್ಷೆಯಿಲ್ಲದೆ ಮಾಡಿದ್ದಾದರೆ ಹೆಚ್ಚು ಸಾತ್ತ್ವಿಕವಾಗಿರುತ್ತದೆ. "ಉಸಿರಾಡುವದರಿಂದ ನಿಮಗೇನು ಪ್ರಯೋಜನ ? ಏಕೆ ಹೀಗೆ ಉಸಿರು ಬಿಡುತ್ತಿದ್ದೀರಿ ?" ಎಂದು ನಮ್ಮನ್ನು ಯಾರೂ ಕೇಳುವದಿಲ್ಲ. ಉಸಿರಾಡುವದೇ ನಮ್ಮ ಸ್ವಭಾವವು ; ಇದೇ ನಮ್ಮ ಜೀವನದ ಗುರುತು ; ಆದ್ದರಿಂದ ನಾವು ಉಸಿರಾಡುತ್ತಿರುತ್ತೇವೆ. ಅಲ್ಲವೆ ? ಸಾತ್ತ್ವಿಕವಾದ ತಪಸ್ಸನ್ನು ಮಾಡುತ್ತಿರುವವರಿಗೂ ಹೀಗೆಯೇ ; ಅವರಿಗೆ ತಪಸ್ಸು ಮಾಡುತ್ತಿರುವದೇ ಸ್ವಾಭಾವಿಕ. ಮತ್ತೆ ಯಾವ ಪ್ರತಿಬಂಧಕವೂ ಇಲ್ಲದೆ ತ್ರಿವಿಧವಾದ ತಪಸ್ಸನ್ನು ಮಾಡುತ್ತಿರುವದೇ ನಮಗೆ ಸಹಜವಾದ ಜೀವನವು ಎಂದು ಅವರು ಭಾವಿಸಿರುತ್ತಾರೆ. ನಮಗೆ ಮತ್ತೇನೂ ಬೇಕಿರುವದಿಲ್ಲ ಎಂದು ಬಾಯಲ್ಲಿ ಮಾತ್ರ ಹೇಳಿಕೊಳ್ಳುತ್ತಾ "ಫಲಾಕಾಂಕ್ಷೆಯಿಲ್ಲದೆ ಮಾಡಿದ ತಪಸ್ಸಿಗೆ ಹೆಚ್ಚಿನ ಫಲವುಂಟೆಂದು ಶಾಸ್ತ್ರದಲ್ಲಿ ಹೇಳಿದೆ : ಆದ್ದರಿಂದ ನಾವು ಯಾವ ಫಲವನ್ನೂ ಬಯಸಬಾರದು" ಎಂದುಕೊಳ್ಳುತ್ತಿರುವದು ಆತ್ಮವಂಚನೆಯು. ಅದು ಎಂದಿಗೂ ಫಲತ್ಯಾಗವಲ್ಲ. ಫಲದಾಸೆಯಿಲ್ಲದೆ ತಪಸ್ಸನ್ನು ಮಾಡುವವರನ್ನೇ ತಪೋಧನರು ಎಂದು ಕರೆಯುತ್ತಾರೆ. ಪ್ರಾಕೃತಜನರಿಗೆ ಧನವು ಹೇಗೆ ಜೀವನಕ್ಕೆ ಅತ್ಯವಶ್ಯವಾಗಿರುತ್ತದೆಯೋ ಹಾಗೆಯೇ ಆ ಜನರಿಗೂ ತಪಸ್ಸು ಅತ್ಯಂತ ಅವಶ್ಯವಾಗಿರುವ ಜೀವನಸಾಧನವಾಗಿರುತ್ತದೆ. ಒಂದು ವೇಳೆ ಈಶ್ವರನೇ ಪ್ರತ್ಯಕ್ಷನಾಗಿ 'ನಿಮಗೆ ಏನು ಬೇಕು' ಎಂದು ಕೇಳಿದರೂ ಅವರು `ಈ ನಮ್ಮ ತಪಸ್ಸನ್ನು ನಡೆಯಿಸಿಕೊಡಬೇಕು' ಎಂದೇ ಕೇಳಿಕೊಂಡಾರು. ತಪಸ್ಸಿಗೆ ಇಂಥ ಗೊತ್ತಾದ ಫಲವೆಂಬುವೇನೂ ಇಲ್ಲ ; ಅವರಿಗೆ ತಪಸ್ಸೇ ಕಾಮಧೇನು. ಅದಕ್ಕೆ ಬೆಲೆ ಇಷ್ಟೆಂದು ಅವರು ಎಂದಿಗೂ ಗೊತ್ತುಪಡಿಸುವದಕ್ಕೆ ಒಪ್ಪುವದಿಲ್ಲ, ಇದೇ ಸಾತ್ತ್ವಿಕತಪಸ್ಸು.

ಇನ್ನು ರಾಜಸತಪಸ್ಸು ಹೇಗಿರುವದು ? ಎಂದರೆ

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥** 17-18

ಸಾತ್ತ್ವಿಕತಪಸ್ಸನ್ನು ವರ್ಣಿಸಿರುವದು ಅದನ್ನು ಮಾಡಬೇಕೆಂದು ತಿಳಿಸುವದಕ್ಕೆ, ರಾಜಸತಾಮಸಗಳನ್ನು ಹೇಳಿರುವದು ಅವುಗಳನ್ನು ಬಿಡಬೇಕೆಂದು ಹೇಳುವದಕ್ಕೆ. ಈ ರಾಜಸತಾಮಸತಪಸ್ಸುಗಳು ಪೂರ್ಣಾರ್ಥದಲ್ಲಿ ತಪಸ್ಸುಗಳಲ್ಲ, ತಪಸ್ಸಿನ ಆಭಾಸಗಳು. ಇವುಗಳಲ್ಲಿ ಅಹಂಕಾರವನ್ನು ಮಟ್ಟುಮಾಡುವದರ ಬದಲು ಅದನ್ನೇ ಎಬ್ಬಿಸುವ ಪ್ರಯತ್ನವು ನಡೆದಿರುತ್ತದೆ. ಸತ್ಕಾರ, ಮಾನ, ಪೂಜೆ - ಇವುಗಳಿಗಾಗಿಯೇ ಈ ತಪಸ್ಸುಗಳನ್ನು ಎಲ್ಲರೂ ಆಚರಿಸುವರು. ತಮ್ಮನ್ನು ಜನರು ಸತ್ಕಾರಮಾಡಲಿ, ತಮಗೆ ಮಾನಮರ್ಯಾದೆಗಳು ದೊರೆಯಲಿ ಜನರು ತಮ್ಮನ್ನು ಗೌರವಿಸಲಿ - ಎಂಬ ಉದ್ದೇಶದಿಂದ ಮಾಡುವ ತಪಸ್ಸು ರಾಜಸವು. ಇದರಲ್ಲೆಲ್ಲ ಮುಖ್ಯವಾಗಿ ತಾನು ಧಾರ್ಮಿಕನೆಂಬುದನ್ನು ಹೊರಗೆ ತೋರಿಸಿಕೊಳ್ಳುವದೇ ಉದ್ದೇಶವಾಗಿರುತ್ತದೆ. ಶ್ರೀಸುರೇಶ್ವರಾಚಾರ್ಯರವರು ತಮ್ಮ ನೈಷ್ಕರ್ಮ್ಯಸಿದ್ಧಿಯನ್ನು ಬರೆಯುವಾಗ `ಖ್ಯಾತಿಗಾಗಿ, ಲಾಭಕ್ಕಾಗಿ, ಅಥವಾ ಪೂಜೆಗಾಗಿ ನಾನು ಈ ಗ್ರಂಥವನ್ನು ಬರೆಯುತ್ತಿಲ್ಲ ; ಬ್ರಹ್ಮಜ್ಞಾನಿಗಳೆಂಬ ಒರೆಗಲ್ಲುಗಳಲ್ಲಿ ತಿಕ್ಕಿ ನನ್ನ ಜ್ಞಾನದ ಬೆಲೆಯನ್ನು ಕಟ್ಟಿಕೊಳ್ಳುವದಕ್ಕಾಗಿ ಬರೆದಿರುತ್ತೇನೆ' - ಎಂದು ಹೇಳಿರುತ್ತಾರೆ. ಈಗಿನ ಕಾಲದಲ್ಲಿ "ಇದನ್ನು ಧಾರ್ಮಿಕವಾಗಿ ಮಾಡುತ್ತೇನೆ"- ಎಂಬುದೂ ಒಂದು ದಂಭದ ಗುರುತಾಗಿಬಿಟ್ಟಿದೆ. ದಂಭಕ್ಕಾಗಿ ಮಾಡುವ ತಪಸ್ಸು ಇಷ್ಟು ಬಗೆಯಾಗಿರುವದೆಂಬುದನ್ನು ಕೂಡ ಗೊತ್ತುಮಾಡುವದಕ್ಕೆ ಬರುವದಿಲ್ಲ. ವ್ಯಾಪಾರಗಾರರು ತಾವು ಒದಗಿಸುವ ಸಾಮಾನುಗಳಿಗೆ ತಮ್ಮವೆಂದು ತೋರಿಸುವದಕ್ಕೆ ವ್ಯಾಪಾರದ ಹೆಗ್ಗುರುತು (Trade mark) ಗಳನ್ನು ಹಾಕಿಕೊಳ್ಳುವಂತೆ ಈ ದಾಂಭಿಕರು ತಮ್ಮ ತಪಸ್ಸುಗಳಿಗೂ ಕೂಡ ಬಗೆಬಗೆಯ ಅಸಾಧಾರಣವಾದ ಹೆಗ್ಗುರುತುಗಳನ್ನು ಮಾಡಿಕೊಂಡು ಜನರನ್ನು ವಂಚಿಸುತ್ತಿರುವರು. ಹೀಗಿರುವದರಿಂದ ಸಾತ್ತ್ವಿಕರನ್ನು ಕೂಡ ನಾವು ನಂಬುವದು ಕಷ್ಟವಾಗಿದೆ. ಪಂಚತಂತ್ರದಲ್ಲಿ ತನ್ನ ಆಹಾರವನ್ನು ಬೇಟೆಯಾಡಿ ದೊರಕಿಸಿಕೊಳ್ಳುವ ಶಕ್ತಿ ಇಲ್ಲದಿದ್ದ ಒಂದು ಮುದಿಹುಲಿಯ ಕಥೆ ಇದೆ. ಅದು ಒಂದಾನೊಂದು ಚಿನ್ನದ ಕಂಕಣವನ್ನು ಹಿಡಿದುಕೊಂಡು "ನನಗೆ ಮತ್ತೆ ಯಾವ ಪ್ರತಿಫಲವೂ ಅವಶ್ಯವಿಲ್ಲ ; ಈ ಕಂಕಣವನ್ನು ಕೇಳಿದವರಿಗೆ ದಾನವಾಗಿ ಕೊಟ್ಟುಬಿಡುತ್ತೇನೆ"- ಎಂದು ಒಂದು ಕಡೆ ಕುಳಿತುಬಿಟ್ಟಿತಂತೆ. ದಾರಿಹೋಕನಾದ ಒಬ್ಬ ಬ್ರಾಹ್ಮಣನು ಆಶೆಯಿಂದ ಅದರ ಬಳಿಗೆ ಬರಲು ಸಮೀಪದಲ್ಲಿಯೇ ಇದ್ದ ಕಳ್ಳುಸುಬಿನಲ್ಲಿ ಅವನ ಎರಡು ಕಾಲುಗಳೂ ಹೂತುಕೊಂಡುಬಿಟ್ಟವಂತೆ. ಹುಲಿಗೆ ಯಾವ ಆತಂಕವೂ ಇಲ್ಲದೆ ಒಂದು ಆಹಾರವು ದೊರೆಯಿತಂತೆ ! ರಾಜಸತಪಸ್ಸೆಂಬುದು ಇಂಥ ದಾಂಭಿಕಧರ್ಮಕ್ಕೆ ಸೇರಿದ್ದು. ದಂಭವೆಂಬುದು ಮನುಷ್ಯನಿಗೆ ಅವನಿಗೂ ಗೊತ್ತಿಲ್ಲದಂತೆ ಹೇಗೋ ಸೇರಿಕೊಂಡುಬಿಡುತ್ತದೆ.

ರಾಜಸಗುಣವು ಇದ್ದವರು ತಾವು ಮಾಡುವ ತಪಸ್ಸನ್ನು ಸತ್ಕಾರಾದಿಗಳಿಗಾಗಿ ದಂಭದಿಂದ ಮಾಡುತ್ತಾರೆ. ಹೀಗೆ ಅಂತಃಕರಣದಲ್ಲಿರುವ ರಾಜಸಗುಣಗಳಿಂದ ತಪಸ್ಸು ರಾಜಸವೆನಿಸುತ್ತದೆ.

ರಾಜಸತಪಸ್ಸಿನ ಫಲವು ಚಲವೂ ಅಧ್ರುವವೂ ಆಗಿರುತ್ತದೆ. ಈ ತಪಸ್ಸೇ ಚಂಚಲವಾಗಿರುವದರಿಂದ ಇದರ ಫಲವು ಸ್ಥಿರವಾಗಿರುವಂತಿಲ್ಲ. ಶ್ರದ್ಧೆಯಿಲ್ಲದೆ ತೋರುಗಾಣಿಕೆಗಾಗಿ ಸಾಮಾನ್ಯಪ್ರಯತ್ನದಿಂದ ಮಾಡಿದ ಈ ತಪಸ್ಸಿನ ಫಲವು ಹೇಗೆ ತಾನೆ ಧ್ರುವವಾಗಿ ನಿಂತೀತು ?

ಇನ್ನು ತಾಮಸತಪಸ್ಸಿನ ರೂಪವು ಹೇಗೆಂದರೆ :-

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥ 17-19**

ಅವಿವೇಕದಿಂದ ಹಿಡಿದ ಪಟ್ಟನ್ನು ಬಿಡದೆ ಇರುವದು ಮೂಢಗ್ರಾಹವು. ಇದರಲ್ಲಿ ತನಗೆ ಆಗುವ ಸಂಕಟವನ್ನಾಗಲಿ ಅಂತ್ಯದಲ್ಲಿ ಆಗುವ ದುಷ್ಪರಿಣಾಮವನ್ನಾಗಲಿ ಯೋಚನೆಮಾಡುವ ಸಂಭವವೇ ಇಲ್ಲ. ಹಿರಣ್ಯಕಶಿಪುವು ಮಾಡಿದ ತಪಸ್ಸು ಈ ಜಾತಿಯದು. ಅವನು ಅಸ್ಥಿಗತಪ್ರಾಣವಾಗುವವರೆಗೂ ಅಂಗುಷ್ಠಾಗ್ರದಲ್ಲಿ ಪಾದವನ್ನಿಟ್ಟು ನಿಂತುಕೊಂಡು ಪರಮೇಶ್ವರನ ಧ್ಯಾನವನ್ನು ಮಾಡಿದನಂತೆ. ಇದರಲ್ಲಿ ಹೇಗಾದರೂ ಮಾಡಿ ತಾನು ಮರಣದಿಂದ ತಪ್ಪಿಸಿಕೊಳ್ಳಬೇಕು ಎಂಬ ಉದ್ದೇಶವೂ ಸೇರಿತ್ತು. ತನ್ನ ಅಣ್ಣನಿಗೆ ದೇವತೆಗಳು ಮಾಡಿದ ಅಪಕಾರಕ್ಕೆ ಪ್ರತಿಯಾಗಿ ಸೇಡನ್ನು ತೀರಿಸಿಕೊಳ್ಳಬೇಕೆಂಬ ಪ್ರತೀಕಾರಬುದ್ಧಿಯೂ ಇತ್ತು. ಮತ್ತೊಬ್ಬರ ನಾಶಕ್ಕಾಗಿ ಮಾಡುವ ಈ ಬಗೆಯ ತಪಸ್ಸು ಅದರಿಂದ ತನಗೆ ಯಾವ ತೊಂದರೆಯಾದರೂ ಆಗಲಿ ಎನ್ನುತ್ತಿರುವದು, ಮತ್ತೊಬ್ಬರ ನಾಶವನ್ನಾಗಲಿ ತನಗಾಗಿ ಆಗುವ ತೊಂದರೆಯನ್ನಾಗಲಿ ಲಕ್ಷ್ಯವಿಡದೆ ಮಾಡುವ ತಪಸ್ಸು ತಾಮಸತಪಸ್ಸಾಗುವದು.

ಸಾತ್ತ್ವಿಕತಪಸ್ಸೇ ನಿಜವಾದ ತಪಸ್ಸು ; ಅದರಿಂದಲೇ ತಪಸ್ಸಿಗೆ ಸಿಕ್ಕಬೇಕಾದ ಪೂರ್ಣಫಲವು ದೊರೆಯುತ್ತದೆ. ರಾಜಸತಾಮಸತಪಸ್ಸುಗಳು ತಪಸ್ಸಿನ ಅಭಾಸಮಾತ್ರ. ಅವುಗಳಲ್ಲಿ ತನಗೆ ಆಗಬೇಕಾದ ಕ್ಷುದ್ರ ಫಲವನ್ನೋ ಮತ್ತೊಬ್ಬರಿಗೆ ಮಾಡಬೇಕೆಂದಿರುವ ಅಪಕಾರವನ್ನೋ ಲಕ್ಷ್ಯದಲ್ಲಿಟ್ಟಿರುತ್ತದೆ. ಸಾತ್ತ್ವಿಕತಪಸ್ಸಿನಲ್ಲಿ ಯಾವ ಫಲಾಕಾಂಕ್ಷೆಯೂ ಇರುವದಿಲ್ಲವಾದರೂ ಅದರಿಂದಲೇ ಎಲ್ಲಾ ಫಲವೂ ದೊರೆಯುತ್ತದೆ. ಗೀತೆಯಲ್ಲೆಲ್ಲ ಫಲಾಕಾಂಕ್ಷೆಯಿಲ್ಲದೆ ಶ್ರದ್ಧೆಯಿಂದ ಸಾಧನ ಮಾಡಬೇಕೆಂದು ಪಲ್ಲವಿಯನ್ನು ಹಾಡಿದಂತೆ ಮತ್ತೆ ಮತ್ತೆ ಹೇಳಿರುತ್ತದೆ. ಫಲದ ಮೇಲೆ ಕಣ್ಣಿಲ್ಲದೆ ಮಾಡಿದ ಸಾಧನವೇ ಪರಮಪುರುಷಾರ್ಥಕ್ಕೆ ಕಾರಣವಾಗುತ್ತದೆ. ಆದರೆ ನಾನು ಫಲವನ್ನು ಬಿಡುತ್ತೇನೆ ಎಂಬ ಭಾವನೆಯೇ ನಮಗೆ ಫಲಾಕಾಂಕ್ಷೆಯನ್ನು ಪ್ರಕಾರಾಂತರದಿಂದ ತಂದು ಕೊಡುತ್ತದೆ. ಕಾಮವನ್ನು

ಬಿಟ್ಟೆನು ಎಂಬುವನೂ ಪ್ರಕಾರಾಂತರದಿಂದ ಕಾಮಿಯಾಗಿರುತ್ತಾನೆ ; ಇದರಂತೆ ದಂಭವನ್ನು ಬಿಟ್ಟೆನು ಎಂಬುದೂ ಪ್ರಕಾರಾಂತರದಿಂದ ಒಂದು ದಂಭವೇ ಆಗುತ್ತದೆ. ಸಾಧನಕ್ಕಾಗಿ ಸಾಧನವನ್ನು ಮಾಡುತ್ತಿದ್ದರೆ ಫಲಾಕಾಂಕ್ಷೆ, ದಂಭ ಮುಂತಾದವು ತಾವೇ ಬಿಟ್ಟು ಹೋಗುವವು, ಪರಮಪುರುಷಾರ್ಥವೂ ದೊರೆಯುವದು. ಆತ್ಮಪರೀಕ್ಷೆಯನ್ನು ಮಾಡಿಕೊಳ್ಳುವವರಿಗೆ ತಮಗೆ ದಂಭ, ಫಲಾಕಾಂಕ್ಷೆ- ಮುಂತಾದವುಗಳಲ್ಲಿ ಯಾವದಾದರೊಂದು ಸೂಕ್ಷ್ಮರೂಪದಿಂದ ಬಂದೊದಗಿರುವವೆಂಬುದು ಗೊತ್ತಾಗುವದು. ಆದ್ದರಿಂದ ವಿವೇಕಿಯಾದವನು ಪರಮೇಶ್ವರನನ್ನು ಅನುದಿನವೂ "ನನ್ನ ಸಾಧನವನ್ನು ನಿರ್ದುಷ್ಟವಾಗಿ ನಡೆಯುವಂತೆ ಮಾಡಿ ನೀನೇ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸುತ್ತಿರಬೇಕು.



## ೧೭೦. ದಾನದ ಸಾತ್ತ್ವಿಕಾದಿಪ್ರಭೇದಗಳು 17- (20-22)

(28-5-50)

ಶಾಸ್ತ್ರವು ಅತೀಂದ್ರಿಯವಾದ ಅರ್ಥವನ್ನೇ ಮುಖ್ಯವಾಗಿ ಹೇಳುತ್ತದೆ. ನಾವು ಮಾಡುವ ಯಜ್ಞ, ತಪಸ್ಸು, ದಾನ - ಮುಂತಾದ ಸಾಧನಗಳಿಗೆ ಲೌಕಿಕವಾದ ಪ್ರತಿಫಲವನ್ನು ಶಾಸ್ತ್ರವು ಹೇಳುವದಿಲ್ಲ. ಮುಮುಕ್ಷುಗಳಾದವರು ಅಂಥ ಕ್ಷುದ್ರಫಲಗಳನ್ನು ಬಯಸುವದೂ ಇಲ್ಲ. ದೇವತೆಗಳ ಉದ್ದೇಶದಿಂದ ಮಾಡುವ ಹೋಮವನ್ನು ಕಂಡು "ಅಯ್ಯೋ, ಅನ್ಯಾಯವಾಗಿ ತುಪ್ಪವನ್ನು ಬೆಂಕಿಯಲ್ಲಿ ಸುರಿದು ಹಾಳುಮಾಡುತ್ತಾರಲ್ಲ !" ಎಂದು ಕೊರಗುವವರು ಕೆಲವರು. ಇದರಂತೆ ಕರಣತ್ರಯವನ್ನು ಸಂಯಮಮಾಡುವ ತಪಸ್ವಿಗಳನ್ನು ಕಂಡು `ಅಯ್ಯೋ, ಅನ್ಯಾಯವಾಗಿ ಕಾರ್ಯಕರಣಗಳನ್ನು ಸೊರಗಿಸುತ್ತಾರಲ್ಲ!' ಎಂದು ಪಶ್ಚಾತ್ತಾಪ ಪಡುವವರೂ ಕೆಲವರಿದ್ದಾರೆ. ಇದರಂತೆ ಯೋಗ್ಯರಿಗೆ ದಾನಮಾಡುವವರನ್ನು ಕಂಡು `ಇವರಿಗೆ ಧನಾದಿಗಳ ಉಪಯೋಗವು ತಿಳಿಯದು ; ಯಾರಿಗೋ ವ್ಯರ್ಥವಾಗಿ ಕೊಟ್ಟು ಹೀಗೆ ಧನಹೀನರಾಗುತ್ತಿದ್ದಾರೆ' ಎಂದು ಮರುಕವನ್ನು ತೋರಿಸುವವರೂ ಕೆಲವರಿದ್ದಾರೆ. ಇದೆಲ್ಲ ಶಾಸ್ತ್ರೋಕ್ತಸಾಧನಕ್ಕೆ ಅದೃಷ್ಟವಾದ ಫಲವಿರುವದೆಂಬುದನ್ನು ಅರಿತುಕೊಳ್ಳಲಾರದೆ ಆಡುವ ಮಾತುಗಳು. ಅದೃಷ್ಟವೆಂದರೆ ಹೇಗೂ ತಿಳಿಯಬರತಕ್ಕದ್ದಲ್ಲವೆಂದೇನೂ ಅರ್ಥವಲ್ಲ ; ಶಾಸ್ತ್ರಸಂಸ್ಕಾರವುಳ್ಳ ಸೂಕ್ಷ್ಮಬುದ್ಧಿಯುಳ್ಳವರಿಗೆ ಮಾತ್ರ ಗೋಚರವಾಗತಕ್ಕದ್ದು ಎಂದರ್ಥ.

ಯಜ್ಞವನ್ನೂ ತಪಸ್ಸನ್ನೂ ಸಾತ್ತ್ವಿಕಾದಿವಿಭಾಗದಿಂದ ವರ್ಣಿಸಿದ್ದಾಗಿದೆ. ಈಗ ದಾನವನ್ನೂ ಹಾಗೆಯೇ ವಿಂಗಡಿಸಿ ತಿಳಿಸುತ್ತಾರೆ.

**ದಾತವ್ಯಮಿತಿ ಯದ್ದಾನಂ ದೀಯತೇऽನುಪಕಾರಿಣೇ |**
**ದೇಶೇ ಕಾಲೇ ಚ ಪಾತ್ರೇಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ || 17-20**

ಯಾವದನ್ನು ಇದು ದಾತವ್ಯವು ಎಂದು ಕೊಡುತ್ತಾರೋ ಅದು ಸಾತ್ತ್ವಿಕದಾನವು. ಏತಕ್ಕೆ ದಾನವನ್ನು ಮಾಡಬೇಕು ? ಎಂದರೆ ದಾನಮಾಡತಕ್ಕದ್ದು ಯುಕ್ತವಾಗಿದೆಯಾದ್ದರಿಂದ ಎಂದಿಷ್ಟೇ ಭಾವವಿರಬೇಕು. ಮತ್ತೊಬ್ಬರ ಬಲಾತ್ಕಾರ, ಫಲದಾಸೆ, ಭಯ - ಮುಂತಾದ ಕಾರಣಗಳು ಯಾವವೂ ಇರಬಾರದು. ಅದೇ ಸಾತ್ತ್ವಿಕದಾನವು.

ಅನುಪಕಾರಿಯಾದವನಿಗೆ ಕೊಟ್ಟರೆ ದಾನವು ಸಾತ್ತ್ವಿಕವಾಗುವದು ಎಂದು ಇಲ್ಲಿ ಹೇಳಿರುವದರ ಅಭಿಪ್ರಾಯವೇನೆಂದರೆ ಯಾರು ನಮಗೆ ಉಪಕಾರವನ್ನು ಮಾಡುತ್ತಾರೋ ಅವರಿಗೆ ಕೊಡತಕ್ಕದ್ದಲ್ಲ ಎಂದೇನೂ ಅಲ್ಲ. ಪ್ರತ್ಯುಪಕಾರನಿರೀಕ್ಷಣೆಯಿಲ್ಲದೆ ನಾವು ಯಾರಿಗೆ ದಾನವನ್ನು ಮಾಡುತ್ತೇವೋ ಅವರು ನಮಗೆ ಪ್ರತ್ಯುಪಕಾರವನ್ನು ಮಾಡುವದಕ್ಕೆ ಸಮರ್ಥರಾಗಿರಲಿ ಇಲ್ಲದವರಾಗಿರಲಿ, ಇಂಥ ನಿರೀಕ್ಷಣೆಯಿಂದ ಈ ದಾನವನ್ನು ಮಾಡುತ್ತೇನೆ ಎಂಬ ಭಾವವಿಲ್ಲದೆ ಮಾಡುವ ದಾನವು ಸಾತ್ತ್ವಿಕವು. ದಾನವು ದಾನಕ್ಕಾಗಿ, ಅದರ ಮಹತ್ತ್ವವು ಮುಂದೆ ಬರುವ ಪ್ರತಿಫಲದಿಂದಲ್ಲ.

"ದೇಶೇ ಕಾಲೇ ಚ ಪಾತ್ರೇ ಚ" ಉತ್ತಮವಾದ ದೇಶದಲ್ಲಿ, ಉತ್ತಮವಾದ ಕಾಲದಲ್ಲಿ, ಉತ್ತಮನಾದ ಪಾತ್ರನಿಗೆ ಮಾಡುವ ದಾನವು ಸಾತ್ತ್ವಿಕವಾಗುವದು. ಇಲ್ಲಿ ಹೇಳಿರುವ ದೇಶಕಾಲಪಾತ್ರಗಳು ದಾನದ್ರವ್ಯವೇ ಮುಂತಾದವುಗಳಿಗೂ ಉಪಲಕ್ಷಣವೆಂದು ಭಾವಿಸಬೇಕು. ದುರ್ಭಿಕ್ಷಕಾಲದಲ್ಲಿ ಹೊಟ್ಟೆಗಿಲ್ಲದವರಿಗೆಲ್ಲ ಗಂಜಿಯನ್ನಾದರೂ ದಾನಮಾಡುವದು ಪುಣ್ಯಪ್ರದವೇ ಸರಿ. ಆದರೆ ಸುಭಿಕ್ಷ ಕಾಲದಲ್ಲಿ ದಾನಕ್ಕೆ ಪಾತ್ರರಾದವರಿಗೂ ಅದೇ ಗಂಜಿಯನ್ನು ದಾನಮಾಡುವದು ಯುಕ್ತವಾಗಲಾರದು. ಆದ್ದರಿಂದ ಆಯಾ ದೇಶಕಾಲಗಳಿಗೆ ಅನುಗುಣವಾಗಿ ಪಾತ್ರರಾದವರಿಗೆ ದಾನಮಾಡುವದು ಹೆಚ್ಚಿನ ದಾನವಾಗುವದು.

ಶಾಸ್ತ್ರದಲ್ಲಿ ಅನೇಕ ಪುಣ್ಯಕ್ಷೇತ್ರಗಳನ್ನು ಹೇಳಿರುತ್ತದೆ. ಈಗ ಕ್ಷೇತ್ರತೀರ್ಥಗಳು ಅನೇಕ ಕಾರಣಗಳಿಂದ ಅಪವಿತ್ರವಾಗಿರುತ್ತವೆ. ಕ್ಷೇತ್ರಗಳಲ್ಲಿ ಸುಲಿಗೆ ಮಾಡುವ ಪಂಡರುಗಳು ಹೆಚ್ಚಾಗಿರುತ್ತಾರೆ ; ತೀರ್ಥಗಳು ಕೊಳಕಾಗಿಬಿಟ್ಟಿವೆ. ಆದ್ದರಿಂದ ಉತ್ತಮವಾದ ದೇಶಗಳಲ್ಲಿ ಈಗಲೂ ಪವಿತ್ರವಾಗಿ ಕಾಣಬರುವ ತೀರ್ಥಕ್ಷೇತ್ರಗಳನ್ನೇ ಆರಿಸಿಕೊಳ್ಳಬೇಕು. ಶಾಸ್ತ್ರದಲ್ಲಿ ಕ್ಷೇತ್ರಗಳೆಂದು ಉಲ್ಲೇಖಿಸಿ ಹೇಳದಿದ್ದರೂ ನಿಃಸ್ಪೃಹರೂ ತಪಸ್ವಿಗಳೂ ವಾಸಿಸುತ್ತಿರುವ ಸ್ಥಳಗಳನ್ನು ಕ್ಷೇತ್ರಗಳೆಂದೇ ಭಾವಿಸಬೇಕು.

ಇದರಂತೆ ಸಂಕ್ರಮಣಾದಿಕಾಲಗಳಲ್ಲಿ ಸ್ವಾರ್ಥವನ್ನು ಬಿಟ್ಟು ದಾನಮಾಡುವದು ಮನುಷ್ಯನ ಶ್ರೇಯಸ್ಸಿಗೆ ಕಾರಣವಾಗುತ್ತದೆ. ಸಾಮಾನ್ಯವಾಗಿರುವ ಕಾಲಗಳಲ್ಲಿಯೂ ಔಚಿತ್ಯವನ್ನು ಕಂಡು ದಾನಾದಿಗಳನ್ನು ಮಾಡಬೇಕು. ಬೇಸಗೆಯಲ್ಲಿ ಬೀಸಣಿಗೆ, ಪನ್ನೀರು,

ಪಾನಕ - ಮುಂತಾದವುಗಳ ದಾನವು ಹಿತಕರವಾಗಿರುವದು. ಅವನ್ನು ಆಯಾಸಪಟ್ಟವರಿಗೆಲ್ಲ ದಾನಮಾಡಬೇಕು. ಅದರಲ್ಲಿಯೂ ವಿದ್ಯಾವಿನಯಾದಿಗಳಿಂದ ಶ್ರೇಷ್ಠರಾದವರಿಗೆ ಮಾಡುವ ಇಂಥ ದಾನವು ಪ್ರಶಸ್ತ್ಯತರವಾಗಿರುತ್ತದೆ. ಆದರೆ ಇದೇ ವಸ್ತುಗಳ ದಾನವು ಚಳಿಗಾಲದಲ್ಲಿ ಉಚಿತವೆನಿಸಲಾರದು. ಮಾಸಮಾಹಾತ್ಮ್ಯಗಳೇ ಮುಂತಾದವುಗಳಲ್ಲಿ ಕಾಲೋಚಿತವಾದ ದಾನಗಳನ್ನು ವರ್ಣಿಸಿರುವದು ಈ ದೃಷ್ಟಿಯಿಂದಲೇ.

ದೀನಾಂಧಬಧಿರರಿಗೆ ಅವಶ್ಯವಾದ ವಸ್ತುಗಳನ್ನು ದಾನಮಾಡುವದು ಯುಕ್ತವೇ ಸರಿ. ಆದರೆ ವಿದ್ಯಾವಿನ್ಯಯಾದಿಗಳಿಂದ ಸಂಪನ್ನರಾದವರಿಗೆ ಮಾಡಿದ ದಾನವು ವಿಶೇಷ ಫಲಪ್ರದವಾಗಿರುವದು ; ಏಕೆಂದರೆ ಪಾತ್ರತೆಯು ಕೇವಲ ವಸ್ತುಗಳ ಅವಶ್ಯಕತೆಯನ್ನೇ ಅವಲಂಬಿಸದೆ ಗುಣಾಧಿಕ್ಯವನ್ನೂ ಬಯಸುತ್ತದೆ. ಯಾವನು ಸಂತತನಾಗಿ ಪರಮಾತ್ಮ ಚಿಂತನೆಯಲ್ಲಿಯೇ ಕಾಲವನ್ನು ಕಳೆಯುತ್ತಿರುವನೋ, ಯಾವನು ಸರ್ವಪ್ರಾಣಿಗಳಲ್ಲಿಯೂ ಸಮಬುದ್ಧಿಯಿಂದ ಕೂಡಿರುವನೋ ಯಾವನು ಜೀವಕ್ಕೆ ಅವಶ್ಯವಾದ ವಸ್ತುಗಳನ್ನು ಬಿಟ್ಟು ಮತ್ತೇನನ್ನೂ ಬಯಸದಿರುವ ನಿಃಸ್ಪೃಹನಾಗಿರುವನೋ ಅಂಥ ಜ್ಞಾನಿಗೆ ಮಾಡುವ ದಾನವು ಅಪರಿಮಿತಫಲವುಳ್ಳದ್ದಾಗಿರುವದು. ಏಕೆಂದರೆ ಅದರಿಂದ ದಾತೃವಿಗೆ ಚಿತ್ತಶುದ್ಧಿಯೂ ಅಧ್ಯಾತ್ಮಪ್ರವಣತೆಯೂ ದೊರಕುವದು.

ಮೇಲೆ ಹೇಳಿರುವ ಸಾತ್ತ್ವಿಕದಾನದ ವರ್ಣನೆಯಲ್ಲಿ ಶಾಸ್ತ್ರದಲ್ಲಿ ಹೇಳಿರುವ ಪುಣ್ಯಕ್ಷೇತ್ರ, ಪುಣ್ಯಕಾಲ, ಬ್ರಾಹ್ಮಣಾದಿಯೋಗ್ಯ ಪಾತ್ರಗಳು - ಇವುಗಳೇ ಮುಖ್ಯವಾಗಿ ವಿವಕ್ಷಿತವಾಗಿದ್ದರೂ ಈಗ ಪ್ರಸನ್ನವಾಗಿರುವ ದೇಶಕಾಲಗಳನ್ನೂ ಗುಣಾದಿಗಳಿಂದ ಕೂಡಿರುವ ಪಾತ್ರಗಳನ್ನೂ ಕೈಬಿಡಬಾರದು. ಶಾಸ್ತ್ರದಲ್ಲಿ ಹೇಳಿರುವಂಥ ದೇಶಕಾಲಾದಿಗಳಲ್ಲಿ ನಮಗೆ ಮನಸ್ಸನ್ನು ಮೇಲು ಮಟ್ಟಕ್ಕೇರಿಸುವವೆಂಬ ಉತ್ತಮಭಾವನೆಯುಂಟಾದರೆ ಅವಶ್ಯವಾಗಿ ಅವನ್ನು ಆರಿಸಿಕೊಳ್ಳಬೇಕು. ಹೀಗೆ ದೇಶಕಾಲ ಶಾಸ್ತ್ರಗಳನ್ನನುಸರಿಸಿ ದಾನವನ್ನು ಮಾಡಬೇಕೆಂಬಿಷ್ಟೇ ಭಾವನೆಯಿಂದ ಮಾಡುವ ದಾನವು ಸಾತ್ತ್ವಿಕವೆನಿಸುವದು.

ಈಗ ರಾಜಸತಾಮಸದಾನಗಳನ್ನು ವರ್ಣಿಸುತ್ತಾರೆ. ಮುಮುಕ್ಷುವಾದವನು ಪ್ರಯತ್ನಪೂರ್ವಕವಾಗಿ ಅವುಗಳನ್ನು ಬಿಟ್ಟು ಸಾತ್ತ್ವಿಕ ದಾನವನ್ನೇ ಮಾಡಬೇಕೆಂಬುದು ಇಲ್ಲಿ ವಿವಕ್ಷಿತವಾಗಿರುತ್ತದೆ.

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ 17-21**

ಉಪಕಾರದೃಷ್ಟಿಯಿಂದ ಮಾಡಿದ ದಾನವು ರಾಜಸದಾನವು. ಅನಂತನ ಕಥೆಯಲ್ಲಿ ಅಕ್ಕತಂಗಿಯರಿಬ್ಬರು ಯಾವಾಗಲೂ ಒಬ್ಬರಿಗೊಬ್ಬರು ದಾನವನ್ನು ಮಾಡುತ್ತಿದ್ದರೆಂದು ವರ್ಣಿಸಿರುವದನ್ನು ಜ್ಞಾಪಿಸಿಕೊಳ್ಳಬೇಕು. ಈಗಲೂ ತಮ್ಮ ತಮ್ಮ ನೆಂಟರನ್ನೇ, ತಮ್ಮ

ಪರಿಚಿತರನ್ನೇ, ಅಥವಾ ಸಮಯದಲ್ಲಿ ತಮಗೇನಾದರೂ ಉಪಕಾರವನ್ನು ಮಾಡಿಯಾರೆಂಬ ನಿರೀಕ್ಷಣೆಯಿರುವ ಮಮತೆಯುಳ್ಳವರನ್ನೇ ಆರಿಸಿಕೊಂಡು ದಾನಮಾಡುವ ಪದ್ಧತಿಯನ್ನು ಅಲ್ಲಲ್ಲಿ ಕಾಣಬಹುದು. ದಾನವು ಆಧ್ಯಾತ್ಮಿಕ ಶುದ್ಧಿಯನ್ನುಂಟುಮಾಡುವದಕ್ಕೆ. ಆದ್ದರಿಂದ ಇಂಥ ಯಾವ ಸ್ವಾರ್ಥಫಲವೂ ಗುರಿಯಲ್ಲಿರಬಾರದು. ಹೆಸರಿಗಾಗಿ, ಅಥವಾ ಯಾವದಾದರೊಂದು ಕಾರ್ಯಸಾಧನೆಯ ದೃಷ್ಟಿಯಿಂದ ಛತ್ರಗಳನ್ನು ಕಟ್ಟಿಸುವ, ತೋಪುಗಳನ್ನು ನೆಡಿಸುವ, ಬಾವಿಗಳನ್ನು ತೋಡಿಸುವ, ಅಥವಾ ಜಪಹೋಮಾದ್ಯನುಷ್ಠಾನಗಳನ್ನು ವಿಜೃಂಭಣೆಯಿಂದ ಮಾಡಿಸುವ - ಎಲ್ಲಾ ಬಗೆಯ ಉದಾರಕಾರ್ಯಗಳನ್ನೂ ಈ ಗುಂಪಿನಲ್ಲಿಯೇ ಸೇರಿಸಬೇಕಾಗಿದೆ. ಪಾಂಡವರಿಗೆ ಅರಣ್ಯವಾಸವು ಪ್ರಾಪ್ತವಾದಾಗ ದ್ರೌಪದಿಯು ಧರ್ಮರಾಯನನ್ನು ಕುರಿತು "ಧರ್ಮಿಷ್ಠನಾದ ನಿನಗೂ ಈ ದುರ್ದಶೆಯು ಬರಬಹುದೆ ?" ಎಂದು ಶೋಕಿಸಿದಾಗ "ನಾನು ವೈಶ್ಯನಂತೆ ಫಲನಿರೀಕ್ಷಣೆಯಿಂದ ಯಾವ ಧರ್ಮವನ್ನೂ ಮಾಡಿಲ್ಲ ; ಧರ್ಮದ ಫಲವು ಇದೆಂದು ಏತಕ್ಕೆ ಭಾವಿಸಬೇಕು ?" ಎಂದು ಆಕೆಗೆ ಸಮಾಧಾನವನ್ನು ಹೇಳಿದನಂತೆ ; ಸಾತ್ತ್ವಿಕದಾನವನ್ನು ಮಾಡುವವರಿಗೆ ಇಂಥ ಬುದ್ಧಿ ಇರಬೇಕು.

ಪ್ರತಿದಿನವೂ ಗುಪ್ತವಾಗಿ ಯಾವದಾದರೊಂದು ದಾನವನ್ನು ಮಾಡುತ್ತಲೇ ಇರಬೇಕೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. "ಹಾಗೆ ಮಾಡಿದರೆ ನಾವು ಬದುಕುವದು ಹೇಗೆ ?" ಎಂದು ಚಿಂತಿಸಬಾರದು. ಏಕೆಂದರೆ ಯಾವ ಫಲನಿರೀಕ್ಷಣೆಯೂ ಇಲ್ಲದೆ ಮಾಡಿದ ದಾನಕ್ಕೆ ಅನಿರೀಕ್ಷಿತವಾದ ಉತ್ತಮಫಲಗಳು ತಾವೇ ಬರುವದೇ ಸಾಕ್ಷಿಯಾಗಿರುತ್ತದೆ. ನಿರೀಕ್ಷಣೆಯಿಂದ ಮಾಡಿದ್ದಕ್ಕೆ ನಿರೀಕ್ಷಿಸಿದ ಪ್ರತಿಫಲವು ಬಂದರೂ ಬರಬಹುದು ; ಬಾರದೆಯೂ ಹೋಗಬಹುದು. ಫಲವನ್ನು ನಿರೀಕ್ಷಿಸುವದು ತಪ್ಪಲ್ಲ ; ಆದರೆ ನಿರೀಕ್ಷಿಸದೆ ಇರುವದು ಉತ್ತಮ. ಅದರಿಂದ ಮಮತಾಬುದ್ಧಿಯು ಕಡಿಮೆಯಾಗಿ ಚಿತ್ತಶುದ್ಧಿಯಾಗುವದು. ಫಲದಾಸೆಯಿಂದ ಮಾಡಿದರೆ ಮಮತಾತ್ಯಾಗವು ಸಾಧ್ಯವೇ ಇಲ್ಲ. ಹಿತಮಿತವಾಗಿ ಆರೋಗ್ಯಕ್ಕನುಗುಣವಾದ ಆಹಾರವನ್ನು ತಿಂದು ಯುಕ್ತಾಹಾರನಾದವನಿಗೆ ಬರುವ ದೇಹಾರೋಗ್ಯವು ಮಿತಿಮೀರಿ ತಿಂದು ಆಗಾಗ್ಗೆ ಭೇದಿಯ ಔಷಧವನ್ನು ಸೇವಿಸುತ್ತಿರುವವನಿಗೆ ಹೇಗೆತಾನೆ ದೊರಕೀತು ? ಒಂದೂರಿನಲ್ಲಿ ನನಗೆ ಗೊತ್ತಿದ್ದ ಒಬ್ಬ ಬಡ ವೈದಿಕ ಬ್ರಾಹ್ಮಣನಿದ್ದನು. ಆತನು ಅತ್ಯಲ್ಪವೇತನದಿಂದ ಜೀವಿಸುತ್ತಿದ್ದ ಒಬ್ಬ ಸ್ಕೂಲು ಮಾಸ್ತರು. ಆತನಲ್ಲಿದ್ದ ಒಂದು ಸೌಜನ್ಯವೇನೆಂದರೆ ಅತಿಥಿಗಳಾಗಿ ತಮ್ಮ ಊರಿಗೆ ಬರುವ ಪರಸ್ಥಳದವರಿಗೆ ಯಾರಿಗೆ ಯಾವ ಅನನುಕೂಲಪರಿಸ್ಥಿತಿ ಇದ್ದರೂ ಲೆಕ್ಕಿಸದೆ ಅವರನ್ನು ಮನೆಗೆ ಕರೆತಂದು ಅವರು ಕೊಡುವಷ್ಟು ದಕ್ಷಿಣೆಯಿಂದಲೇ ತೃಪ್ತನಾಗಿ ಸಾಲದ್ದಕ್ಕೆ ತನ್ನ ಕೈಯಿಂದಲೂ ಖರ್ಚುಮಾಡಿ ಅವರು ಆ ಕ್ಷೇತ್ರದಲ್ಲಿ ಮಾಡಬೇಕಾಗಿದ್ದ ಕರ್ಮಗಳನ್ನು ಮಾಡಿಸುತ್ತಿದ್ದನು. ಸಾಧುಗಳೂ ಸಂನ್ಯಾಸಿಗಳೂ ಯೋಗ್ಯರಾದ ವಿದ್ವಾಂಸರೂ ಬಂದರೆ ಅತ್ಯಂತ

ಉದಾರಬುದ್ಧಿಯಿಂದ ಅವರಿಗೆ ಉಪಚಾರವನ್ನು ಮಾಡುತ್ತಿದ್ದನು. ಆತನಿಗೆ ಹೀಗೆ ಪರೋಪಕಾರವನ್ನು ಮಾಡುವದೇ ಒಂದು ಆನಂದಸಾಧನವಾಗಿಬಿಟ್ಟಿತು ! ತಾನು ಮಾಡುವ ದಾನಧರ್ಮಪರೋಪಕಾರಗಳಿಗೆ ತಕ್ಕ ಪ್ರತಿಫಲವು ದೊರಕಲಿಲ್ಲವೆಂಬ ಪಶ್ಚಾತ್ತಾಪವನ್ನು ಆತನು ವ್ಯಕ್ತಪಡಿಸಿದ್ದನ್ನು ನಾನು ಒಂದು ದಿನವೂ ಕಾಣಲೇ ಇಲ್ಲ: ಅವನಿಗೆ ಈಶ್ವರನು ಹೆಚ್ಚಿನ ಧನಧಾನ್ಯಸಂಪತ್ತನ್ನು ಕೊಡದಿದ್ದರೂ ನಿತ್ಯಜೀವನದ ಸುಖಕ್ಕೆ ಕೊರತೆಯಿಲ್ಲದಂತೆ ಅನುಗ್ರಹಿಸಿದ್ದನು.

ಯಾರೋ ಗಂಟುಕಳ್ಳರು ದಾನವನ್ನು ಮಾಡಬೇಕೆಂದು ಉಪದೇಶಿಸಿ ಗ್ರಂಥವನ್ನು ಬರೆದಿದ್ದಾರೆಂದು ಕೆಲವರು ಸ್ವಾರ್ಥಪರರು ನಿಂದಿಸುವದುಂಟು. ಆದರೆ ಇದು ನಿಜವಲ್ಲ. ದಾನವನ್ನು ಮಾಡಬೇಕೆಂದು ಉಪದೇಶಿಸಿರುವವರು ಅತ್ಯಂತನಿಃಸ್ಪೃಹರಾದ ಋಷಿಗಳು. ಅವರು ಅರಣ್ಯದಲ್ಲಿ ತಮಗೆ ಸಿಕ್ಕಿದ ಗೆಡ್ಡೆಗೆಣಸುಗಳನ್ನು ತಿಂದು ತಮ್ಮ ತಮ್ಮ ಪ್ರಭಾವದಿಂದ ಗಳಿಸಿದ ಸಿದ್ಧಿಗಳನ್ನು ಜನೋಪಕಾರಕ್ಕೇ ಉಪಯೋಗಿಸುತ್ತಿದ್ದವರು. ಅನೇಕ ರಾಜರುಗಳಿಗೆ ಕೂಡ ಅವರು ಯುಕ್ತವಾದ ಸೂಚನೆಗಳನ್ನು ಕೊಡಬಲ್ಲವರಾಗಿದ್ದರು ; ಜನರಿಗೆ ಉಪಯುಕ್ತವಾದ ಲೌಕಿಕವೈದಿಕವಿಷಯಗಳನ್ನು ತಿಳಿಸುವ ಅನೇಕಶಾಸ್ತ್ರಗಳನ್ನು ರಚಿಸಿ ಅವರು ಉಪಕಾರಮಾಡಿರುತ್ತಾರೆ. ಅವರು ಮತ್ತೊಬ್ಬರ ಸ್ವತ್ತನ್ನು ಎತ್ತಿಹಾಕುವ ಉದ್ದೇಶದಿಂದ ದಾನಮಾಡಿರಿ ಎಂದು ಉಪದೇಶಿಸಿರುತ್ತಾರೆಂದು ಕಲ್ಪಿಸುವದು ಅಸತ್ಯವೂ ಅನ್ಯಾಯವೂ ಆಗಿರುತ್ತದೆ. ಲೋಭಗುಣವುಳ್ಳವರು ಮಾತ್ರವೇ ಇಂಥ ಕಲ್ಪನೆಯನ್ನು ಮಾಡಬಹುದು. ಉಪಕಾರನಿರೀಕ್ಷಣೆಯಿಂದಲೂ ಫಲದ ಆಶೆಯಿಂದಲೂ ದಾನಮಾಡುವದು ಹೇಗೆ ರಾಜಸವೋ ಹಾಗೆಯೇ "ಅಯ್ಯೋ ! ಉತ್ತಮವಾದ ಈ ವಸ್ತುಗಳನ್ನು ದಾನಮಾಡಬೇಕಾಗಿ ಬಂದಿದೆಯಲ್ಲ!" ಎಂದು ಪರಿಕ್ಲೇಶದಿಂದೊಡಗೂಡಿ ಕೊಡುವದೂ ರಾಜಸದಾನವೇ. ಕೆಲವು ಸಂದರ್ಭಗಳಲ್ಲಿ ದಾನವನ್ನು ಮಾಡಿಸಿರೆಂದು ತಾವೇ ಕೇಳಿಕೊಂಡ ಗೃಹಸ್ಥರೂ "ದಶದಾನ" ಗಳಿಗೆಂದು ಹತ್ತು ಕಾಲಾಣೆಯ ಬಿಲ್ಲೆಗಳನ್ನು ಕೊಟ್ಟು "ಏನಪ್ಪ, ಈ ಪುರೋಹಿತರು ಸುಲಿಗೆಮಾಡುತ್ತಾರೆ !" ಎಂದು ಕರಕರೆಪಡುವದುಂಟು. ಇದೇ ಪರಿಕ್ಲಿಷ್ಟ ದಾನವು.

ಈಗ ತಾಮಸದಾನದ ವರ್ಣನೆಯನ್ನು ಕೇಳಿರಿ :

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥** **17-22**

ಅದೇಶಕಾಲದಲ್ಲಿ, ಅಪಾತ್ರರಿಗೆ ಸತ್ಕಾರವಿಲ್ಲದೆ ತಿರಸ್ಕಾರಪೂರ್ವಕವಾಗಿ ಕೊಡುವದು ತಾಮಸದಾನವು. ಇಲ್ಲಿ ಅದೇಶವೆಂದರೆ ದುರ್ದೇಶವು ; ಎಲ್ಲಿ ಮ್ಲೇಚ್ಛರು, ಅಶುಚಿಪದಾರ್ಥಗಳು - ಮುಂತಾದವು ತುಂಬಿರುವವೋ ಅಂಥ ಸ್ಥಳವು. ಹೀಗೆಯೇ ಅಕಾಲವೆಂದರೆ ಕಾಲವಲ್ಲದ ಕಾಲವು, ಅಪಾತ್ರನೆಂದರೆ ದುಷ್ಪಾತ್ರನು ಎಂದು ಅರ್ಥವನ್ನು

ಮಾಡಿಕೊಳ್ಳಬೇಕು. ಯಾವ ದೇಶಕಾಲಗಳಲ್ಲಿ ದಾನಮಾಡುವದರಿಂದ ಮತ್ತು ಯಾವ ಅಪಾತ್ರರಿಗೆ ದಾನಮಾಡುವದರಿಂದ ಪಾಪವೇ ಅಭಿವೃದ್ಧಿಯಾಗುವದೋ ಅಂಥ ದೇಶಾದಿಗಳಲ್ಲಿ ಮಾಡುವ ದಾನವು ತಾಮಸವು. `ಅಪಾತ್ರರಿಗೆ ಯಾವ ದಾನವನ್ನೂ ಮಾಡಕೂಡದೆ ? ಬಡವರಿಗೆ ದಾನಮಾಡುವದು ಅಯುಕ್ತವೆ ?'- ಎಂದು ಕೆಲವರು ಕೇಳುತ್ತಾರೆ. ಬಡವರಿಗೆ ಏನನ್ನೂ ಕೊಡಬಾರದೆಂದು ಶಾಸ್ತ್ರದಲ್ಲಿ ಹೇಳಿಲ್ಲ ; ಆದರೆ ಅದು ದಾನವಲ್ಲ, ಸಹಾಯ. ದಾನವನ್ನು ಮಾಡುವಾಗ ತೆಗೆದುಕೊಳ್ಳುವವನು ಮೇಲಿನ ಅಂತಸ್ತಿನಲ್ಲಿದ್ದು ಕೊಡುವವನನ್ನು ಉದ್ಧಾರಮಾಡಬೇಕಾಗಿರುತ್ತದೆ ; ಕೊಡುವವನು "ದಯವಿಟ್ಟು ಈ ದಾನವನ್ನು ತೆಗೆದುಕೊಂಡು ನನ್ನನ್ನು ಉದ್ಧಾರಮಾಡಿ" ಎನ್ನುತ್ತಾನೆ. ಸಹಾಯದಲ್ಲಿ ಹಾಗಲ್ಲ; ಕೊಡುವವನು ಮೇಲೆ ಇರುತ್ತಾನೆ, ಸಹಾಯವನ್ನು ಪಡೆಯುವವನು ಕೆಳಗಿನ ಮಟ್ಟದಲ್ಲಿರುತ್ತಾನೆ. ಕಾರುಣ್ಯದಿಂದ ಅಪಾತ್ರರಿಗೂ ಅನ್ನಬಟ್ಟೆಗಳನ್ನು ಕೊಡಬಹುದು. ಆದರೆ ಹೀಗೆ ಕೊಡುವದರಲ್ಲಿ ತಾನು ಕೊಟ್ಟು ಅವರನ್ನು ಬದುಕಿಸುವೆನೆಂಬ ಅಹಂಭಾವವು ಇದ್ದೇ ಇರುತ್ತದೆ. ಆದರೆ ಸತ್ಪಾತ್ರರಲ್ಲಿ ಮಾಡುವ ದಾನದಿಂದ ಅಹಂಭಾವವು ತಗ್ಗುತ್ತದೆ. ದಾನಕ್ಕೆ ಸತ್ಕಾರವೆಂಬುದೊಂದು ಅಸಾಧಾರಣ ವಿಶೇಷವು. ಪ್ರಿಯವಾದ ಮಾತನ್ನಾಡುವದು, ಗೌರವದಿಂದ ಕಾಣುವದು - ಮುಂತಾದದ್ದು ಸತ್ಕಾರವು. ತಾಮಸದಾನದಲ್ಲಿ ಸತ್ಕಾರವಿರುವದಿಲ್ಲ. "ನೀನೂ ಒಂದಿಷ್ಟು ಕೂಳು ತಿಂದುಹೋಗು !" ಎಂದು ಅಸಡ್ಡೆಯಿಂದ ಬೈದು ಅನ್ನವನ್ನು ಹಾಕುವದು ಅನ್ನದಾನವಲ್ಲ ; ಯಾರನ್ನೇ ಆಗಲಿ, ಅಪಮಾನಮಾಡಿ ಕೊಡುವ ಯಾವದೂ ನಿಜವಾದ ದಾನವಾಗಲಾರದು. ಅಪಾತ್ರನನ್ನು ತಿರಸ್ಕರಿಸುವದೂ ತಪ್ಪೇ ; ಹೀಗಿರುವಲ್ಲಿ ಪಾತ್ರನಾದವನನ್ನು ತಿರಸ್ಕರಿಸುವದು ಎಂಥ ತಾಮಸವರ್ತನೆ !

ಉತ್ತಮವಾದ ದಾನ, ಉತ್ತಮವಾದ ತಪಸ್ಸು, ಉತ್ತಮವಾದ ಯಜ್ಞ- ಇವುಗಳಿಂದ ಸತ್ತ್ವಗುಣವು ಹೆಚ್ಚುವದು ; ಅದರಿಂದ ಚಿತ್ತಶುದ್ಧಿಯೂ ಜ್ಞಾನಭಕ್ತಿವೈರಾಗ್ಯಗಳೂ ದೊರಕುವವು. ಯಾವಾಗಲೂ ಸಾತ್ತ್ವಿಕವಾದ ಯಜ್ಞಾದಿಗಳನ್ನೇ ಮಾಡುವದು ಎಲ್ಲರಿಗೂ ಸಾಧ್ಯವಿಲ್ಲ. ಹೇಳುವದೇನೋ ಸುಲಭ, ಆದರೆ ಮಾಡುವದಕ್ಕೆ ಹೋದರೆ ಅದರಲ್ಲಿರುವ ಕಷ್ಟವು ಮನವರಿಕೆಯಾಗುತ್ತದೆ. ಇದಕ್ಕೇನು ಮಾಡಬೇಕು ? ಎಂದರೆ ಯಜ್ಞಾದಿಗಳಲ್ಲಿರುವ ನ್ಯೂನತೆಯು ಭಗವನ್ನಾಮಸ್ಮರಣೆಯಿಂದ ಹೋಗಿ ಅವುಗಳು ಪೂರ್ಣಫಲಪ್ರದವಾಗುವವು. ನಾಮಸ್ಮರಣೆ ಎಂದರೆ ಬರಿಯ ನಾಮೋಚ್ಚಾರಣೆಯಲ್ಲ ; ನಾಮದ ದ್ವಾರದಿಂದ ಆತನ ನೆನಪನ್ನು ಮನಸ್ಸಿಗೆ ಹತ್ತಿಸಿಕೊಳ್ಳುವದೇ ಆ ಸ್ಮರಣವು. ಯಜಮಾನನಾದವನು ಸೇವಕನ ದೋಷವನ್ನೇ ಎಣಿಸುತ್ತಾ ಅಷ್ಟಷ್ಟಕ್ಕೂ ಸಂಬಳವನ್ನು ಹಿಡಿಯುತ್ತಾಬಂದರೆ ಸೇವಕನಿಗೆ ತಿಂಗಳ ಕೊನೆಯಲ್ಲಿ ಗಿಟ್ಟುವದು ಏನು ? ಹೀಗೆಯೇ ದೇವರು ನಾವು ಮಾಡುವ ಸಾಧನಗಳಲ್ಲಿರುವ ದೋಷವನ್ನೇ ಎತ್ತೆಣಿಸುವವನಾಗಿದ್ದರೆ ಆ ಸಾಧನೆಗಳಿಗೆ ಯಾವ ಬೆಲೆಯೂ ಇರುತ್ತಿರಲಿಲ್ಲ. ಆದರೆ ಸೇವಕನಿಗೆ ಬುದ್ಧಿ ಹೇಳಿ ಅವನನ್ನು ತಿದ್ದಿ ಮುಂದೆ ಕ್ರಮವಾಗಿ ಕೆಲಸಮಾಡುವಂತೆ

ಮಾಡಿ ಸಂಬಳವನ್ನು ಸರಿಯಾಗಿ ಕೊಡುವ ದಯಾಳುವಾದ ಯಜಮಾನನಂತೆ ಆ ಭಗವಂತನು ನಾಮಸ್ಮರಣೆ ಮಾತ್ರದಿಂದ ನಾವು ಮಾಡಿದ ಯಜ್ಞಾದಿಗಳ ನ್ಯೂನತೆಯನ್ನು ಕಳೆದು ಅವಕ್ಕೆ ಸಾದ್ಗುಣ್ಯವನ್ನು ಉಂಟುಮಾಡುತ್ತಾನೆ. "ಭಗವಂತ ! ನಮ್ಮ ಸಾಧನದಲ್ಲಿ ಯಾವಾಗಲೂ ಕೊರೆಯು ಇದ್ದೇ ಇರುತ್ತದೆ. ; ಇದನ್ನೇ ಪೂರ್ಣವೆಂದು ಭಾವಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು" ಎಂದು ನಾವು ಆತನನ್ನು ಪ್ರಾರ್ಥಿಸಬೇಕು. ಅದೇ ನಮ್ಮ ಯಜ್ಞಾದಿಗಳಿಗೆ ಸಾತ್ತ್ವಿಕತೆಯನ್ನು ಕೊಡುವದು.



## ೧೭೧. ಭಗವನ್ನಾಮಸ್ಮರಣೆಯಿಂದಾಗುವ ಕರ್ಮಸಾದ್ಗುಣ್ಯ 17 - (23-28)

**(4-6-50)**

ಗೀತೆಯ ಹದಿನೇಳು, ಹದಿನೆಂಟನೆಯ ಅಧ್ಯಾಯಗಳಲ್ಲಿ ಶಾಸ್ತ್ರದ ಸಂಕ್ಷೇಪವನ್ನು ಹೇಳಿರುತ್ತದೆ. ಯಜ್ಞ, ದಾನ, ತಪಸ್ಸು ಇವುಗಳು ಮುಮುಕ್ಷುಗಳಾದವರಿಗೆ ಆತ್ಮಜ್ಞಾನದಲ್ಲಿ ಉತ್ಕಟವಾದ ಇಚ್ಛೆಯನ್ನುಂಟುಮಾಡುವವೆಂದು ಉಪನಿಷತ್ತಿನಲ್ಲಿ ಹೇಳಿದೆ. ಈ ಅರ್ಥವನ್ನೇ ಇಲ್ಲಿಯೂ ಸಂಗ್ರಹಿಸಿರುತ್ತದೆ. ಯಜ್ಞಾದಿಗಳನ್ನು ದ್ವಿಜರಾದವರು ತಮ್ಮ ವರ್ಣಾಶ್ರಮ ಧರ್ಮವೆಂಬ ಕರ್ತವ್ಯಬುದ್ಧಿಯಿಂದಲೂ ಮಾಡಬಹುದು ; ಇವುಗಳನ್ನೇ ಪರಮೇಶ್ವರನ ಆರಾಧನೆಯೆಂದೂ ಮಾಡಬಹುದು. ಆರಾಧನೆಗೆಂದು ಮಾಡಿದ ಯಜ್ಞಾದಿಗಳು ಚಿತ್ತಶುದ್ಧಿಯ ಮೂಲಕ ಜ್ಞಾನಕ್ಕೆ ಬೇಕಾದ ಅರ್ಹತೆಯನ್ನುಂಟುಮಾಡುವವು.

ಯಜ್ಞವೆಂದರೆ ಸ್ವಾರ್ಥತ್ಯಾಗವನ್ನು ಮಾಡಿ ತನ್ನ ಸ್ವತ್ತನ್ನು ದೇವತೆಗಳಿಗೆ ಒಪ್ಪಿಸುವದು; ತಪಸ್ಸೆಂದರೆ ತ್ರಿಕರಣಗಳನ್ನು ಸಂಯಮಮಾಡಿ ಅವುಗಳಲ್ಲಿ ದುರಭಿಮಾನವಿಲ್ಲದಂತೆ ಮಾಡಿಕೊಳ್ಳುವದು ; ದಾನವೆಂದರೆ ತನ್ನದಾದದ್ದನ್ನು ಯೋಗ್ಯರಾದವರಿಗೆ ಹಂಚಿಕೊಟ್ಟು ಲೋಭವನ್ನು ಪರಿಹರಿಸಿಕೊಳ್ಳುವದು. ಯಜ್ಞಾದಿಗಳು ಸಾತ್ತ್ವಿಕವಾದಾಗಲೇ ಅಧ್ಯಾತ್ಮಸಾಧನವಾಗುವವು. ಕಲಿಯುಗದಲ್ಲಿ ಇವು ಮೂರರೊಳಗೆ ದಾನವೇ ಮುಖ್ಯವಾಗಿ ಎಲ್ಲರಿಗೂ ಸಾಧ್ಯವಾಗಿರುವ ಸಾಧನವು - ಎಂದು ಭಾರತದಲ್ಲಿ ಹೇಳಿರುತ್ತದೆ. ಲೋಭಕ್ಕಿಂತ ಹೆಚ್ಚಿನ ದೋಷವಿಲ್ಲ. ಲೋಭವು ಯಾರಿಗೆ ಹೆಚ್ಚಾಗಿರುವದೋ ಅವರಲ್ಲಿ ಪದಾರ್ಥಗಳ ಸಂಗ್ರಹ, ಅಭಿಮಾನ, ಕ್ರೋಧ, ಮಾತ್ಸರ್ಯ - ಮುಂತಾದವುಗಳೂ ಪರಂಪರೆಯಿಂದ ಹೆಚ್ಚುತ್ತಾಬರುವವು. ಆದ್ದರಿಂದಲೇ ಬಲ್ಲವರು ದಾನವನ್ನು ಪ್ರಶಂಸಿಸಿರುತ್ತಾರೆ. "ದಾನವೆಂಬುದು ಯಜ್ಞಗಳಿಗೆ ಬೆಲೆಯನ್ನು ಕೊಡುವ ಸಾಧನವು. ಲೋಕದಲ್ಲಿ ದಾತೃವಾದವನನ್ನೇ ಜ್ಞಾನಿಗಳು ಹೊಗಳುತ್ತಾರೆ. ದಾತೃವನ್ನೇ ಎಲ್ಲಾ ಭೂತಗಳೂ ಉಪಜೀವಿಸಿಕೊಂಡಿರುತ್ತವೆ. ದಾನದಿಂದ ವೈರಿಗಳನ್ನು ಅತ್ತ ತಳ್ಳಬಹುದು ; ಅದರಿಂದ

ಶತ್ರುಗಳೂ ಮಿತ್ರರಾಗುವರು. ದಾನವನ್ನೇ ಎಲ್ಲವೂ ಅವಲಂಬಿಸಿಕೊಂಡಿರುತ್ತದೆ. ಆದ್ದರಿಂದ ದಾನವನ್ನು ಶ್ರೇಷ್ಠವೆನ್ನುವರು" ಎಂದು ವೇದಾಂತವಚನವಿದೆ.

ಒಬ್ಬ ಸಾಹುಕಾರನು ಧನಮದದಿಂದ ಕೂಡಿ ಮೆರೆಯುತ್ತಿದ್ದನು. ಅವನು ಕೂತಿದ್ದ ಕೋಣೆಗೆ ಬರುವದಕ್ಕೆ ಎಷ್ಟೋ ಬಾಗಿಲುಗಳನ್ನು ದಾಟಿಬರಬೇಕಾಗಿತ್ತು. ಒಂದೊಂದು ಬಾಗಿಲಿನಲ್ಲಿಯೂ ಒಬ್ಬೊಬ್ಬ ಕಾವಲುಗಾರನಿರುತ್ತಿದ್ದನು. ಒಮ್ಮೆ ಒಬ್ಬ ಸಾಧು ಇವನ ಮನೆಗೆ ಬಂದನು. ಸೇವಕರು ಅವನ ತೇಜಸ್ಸನ್ನು ನೋಡಿ ಅಲ್ಲಿಯೇ ನಿಲ್ಲೆಂದು ತಡೆಯಲಾರದೆ ಹೋದರು ; ಸಾಧುವು ನೇರಾಗಿ ಸಾಹುಕಾರನ ಕೋಣೆಗೇ ಬಂದುಬಿಟ್ಟನು. ಸಾಹುಕಾರನು ಈತನನ್ನು ಕಂಡು "ಯಾರೋ, ನೀನು ?" ಎಂದು ಗದರಿಸಿ ತನ್ನ ಕೆಲಸದಲ್ಲಿಯೇ ಮಗ್ನನಾದನು. ಸಾಧುವು ಇನ್ನೂ ಹತ್ತಿರಕ್ಕೆ ಬಂದನು. "ಯಾರೋ ಅದು ? ಇವನನ್ನು ಆಚೆಗೆ ತಳ್ಳಿರೊ !" ಎಂದು ಸಾಹುಕಾರನು ಸಿಡುಮೋರೆಯಿಂದ ಕೂಗಿಕೊಳ್ಳುವದನ್ನು ಕಂಡು ಸಾಧು "ನನಗೆ ದಾರಿ ಗೊತ್ತಿದೆ ; ಸೇವಕರ ಸಹಾಯವೇನೂ ಬೇಡ. ನಾನು ನಿನ್ನಲ್ಲಿ ಏನನ್ನೂ ಬೇಡುವದಕ್ಕೆ ಬಂದಿಲ್ಲ ; ಆದರೆ ನಿನಗೊಂದು ಹಿತೋಕ್ತಿಯನ್ನು ಹೇಳುವದಕ್ಕೆ ಬಂದಿರುತ್ತೇನೆ. ನಿನಗೆ ಮೃತ್ಯು ಸಂನಿಹಿತವಾಗಿದೆ ; ಬೇಕಾದ ಎಚ್ಚರಿಕೆಯನ್ನು ತೆಗೆದುಕೊಳ್ಳುವದು ಮೇಲು" ಎಂದು ಹೊರಡುವದಕ್ಕೆ ಉದ್ಯುಕ್ತನಾದನು. ಇದನ್ನು ಕೇಳಿ ಸಾಹುಕಾರನಿಗೆ ಸಿಡಿಲುಬಡಿದಂತೆ ಆಯಿತು. `ಸ್ವಾಮಿ, ನನ್ನನ್ನು ಹೇಗಾದರೂ ಮಾಡಿ ಉದ್ಧಾರಮಾಡಬೇಕು !' ಎಂದು ಬೇಡಿಕೊಂಡನು. ಸಾಧು ಅವನ ಮಾತು ಕಿವಿಗೆ ಬೀಳಲಿಲ್ಲವೋ ಎಂಬಂತೆ ಮುಂದಕ್ಕೆ ಹೆಜ್ಜೆಯಿಟ್ಟನು. ಆದರೆ ಸಾಹುಕಾರನು ದೀನವದನನಾಗಿ ಮಾಡಿಕೊಂಡ ಪ್ರಾರ್ಥನೆಯಿಂದ ಹೃದಯವು ಕರಗಿ ಅಲ್ಲಿಯೇ ನಿಂತು ಅವನಿಗೆ ದಾನದ ಮರ್ಮವನ್ನು ಉಪದೇಶಿಸಿ ಹೊರಟುಹೋದನಂತೆ. ಧನಸಂಗ್ರಹದಲ್ಲಿ ನಿರತರಾದವರಿಗೆ ದಾನವೆಂದರೆ ಮನಸ್ಸಿಗೆ ಬೇಸರವಾಗುವದು. ದ್ರವ್ಯವು ಓಡಾಡುತ್ತಲೇ ಇರಬೇಕು ; ಒಂದೇ ಕಡೆ ರಾಶಿಹಾಕುವದರಿಂದ ಅದರ ಬೆಲೆ ಕಡಿಮೆಯಾಗುತ್ತದೆ. ಸಂಪಾದನೆಯು ತನ್ನ ಮತ್ತು ಮತ್ತೊಬ್ಬರ ಉಪಯೋಗಕ್ಕಾಗಿ ; ದಾನದಿಂದ ಅದರ ಪ್ರಯೋಜನವು ಇಮ್ಮಡಿಸುವದು - ಎಂದು ತಿಳಿದುಕೊಂಡಿರುವವನೇ ಜಾಣನು.

ಹೀಗೆಯೇ ದೇವತೆಗಳ ಅಸ್ತಿತ್ವದಲ್ಲಿ ನಂಬಿಕೆಯಿಲ್ಲದವರು ಯಜ್ಞಾದಿಗಳನ್ನು ಮಾಡಲಾರರು. ಕೆಲವರು "ನಮಗೆ ದೇವತೆಗಳ ಇರುವಿಕೆಯಲ್ಲಿ ನಂಬಿಕೆಯಿಲ್ಲ ; ಕಾಣದ್ದನ್ನು ನಂಬಿರೆಂದು ಒತ್ತಾಯಪಡಿಸುವವರಿಂದ ಯಾವ ಪ್ರಯೋಜನವೂ ಇಲ್ಲ" ಎನ್ನುತ್ತಾರೆ. ದೇವತೆಗಳನ್ನು ಅವರು ಕಂಡಿಲ್ಲವೆಂಬುದೇನೋ ನಿಜ ; ಆದರೆ ಕಾಣದಮಾತ್ರದಿಂದ ವಸ್ತುವೇ ಇಲ್ಲವೆನ್ನುವದು ಸರಿಯಲ್ಲ. ಎಷ್ಟೋ ಪದಾರ್ಥಗಳು ನಮಗೆ ಕಾಣಿಸದಿದ್ದರೂ ಇರುತ್ತವೆ. ಇಂದ್ರಿಯಕ್ಕೆ ಗೋಚರವಲ್ಲದ ಹಸಿವು, ಬಾಯಾರಿಕೆ, ಹೊಟ್ಟೆನೋವು, ಪ್ರೀತಿ, ಭಯ - ಮುಂತಾದ ಪದಾರ್ಥಗಳು ಅವಶ್ಯವಾಗಿ ಇರುತ್ತವೆಯಲ್ಲವೆ ? ವೈಜ್ಞಾನಿಕರ ಶೋಧನೆಯಲ್ಲಿ ಕೂಡ ಸಾಮಾನ್ಯಜನರು ಕಾಣದಿರುವ ಹಲವು ಶಕ್ತಿವಿಶೇಷಗಳಿರುತ್ತವೆ. ಆ ಶಕ್ತಿಗಳ ಅಸ್ತಿತ್ವವು

ಇಂದ್ರಿಯಗಮ್ಯವಲ್ಲದಿದ್ದರೂ ಅವುಗಳ ಕಾರ್ಯದಿಂದ ಅವು ಇರುವವೆಂದು ನಾವೆಲ್ಲರೂ ನಂಬುತ್ತೇವೆ. ದೇವತೆಗಳನ್ನೂ ಹೀಗೆಯೇ ನಂಬಬೇಕು. ಈ ನಂಬಿಕೆಯಿಂದ ನಮ್ಮ ಅಹಂಕಾರವು ತಗ್ಗುವದಕ್ಕೂ ನಾವು ಇನ್ನೂ ಮೇಲಿನ ಅಂತಸ್ತಿಗೆ ಏರಬೇಕು - ಎಂಬ ಆಶೆಯುಂಟಾಗುವದಕ್ಕೂ ಅವಕಾಶವಾಗುತ್ತದೆ. ತಪಸ್ಸಿನ ಪ್ರಯೋಜನವನ್ನೂ ಹೀಗೆಯೇ ಅರಿಯಬೇಕು.

ಸಾಮಾನ್ಯವಾಗಿ ನಾವುಗಳು ಮಾಡುತ್ತಿರುವ ಕರ್ಮದಲ್ಲಿ ಅನೇಕ ನ್ಯೂನತೆಗಳಿರುತ್ತವೆ. ಅಲ್ಲಿ ನ್ಯೂನವಾದದ್ದು ಸಂಪೂರ್ಣವಾಗುವದಕ್ಕೆ ಒಂದು ಉತ್ತಮವಾದ ಉಪಾಯವು ಯಾವದೆಂದರೆ ಭಗವಂತನ ಸ್ಮರಣೆ. ಲೌಕಿಕ ವ್ಯವಹಾರದಲ್ಲಿಯೇ ಯಾವದೊಂದು ವಸ್ತುವಿನ ಪರಿಮಾಣವನ್ನೂ ಕರಾರುವಾಕ ಅಳೆದು ತಿಳಿಯುವದಕ್ಕೆ ಆಗುವದಿಲ್ಲ ; ಎಲ್ಲಾ ಅಳತೆಗಳೂ ಸ್ವಲ್ಪ ಹೆಚ್ಚು ಕಡಿಮೆ ಇಂತಿಷ್ಟು ಎಂದೇ ಹೇಳಬೇಕಾಗಿರುತ್ತದೆ. ಹೀಗಿರುವಲ್ಲಿ ಅತೀಂದ್ರಿಯವಾಗಿರುವ ಯಜ್ಞಾದಿಗಳಿಂದಾಗುವ ಅದೃಷ್ಟಫಲವು ಪರಿಪೂರ್ಣವಾಗಿ ಆಯಿತು ಎಂದು ಧೈರ್ಯದಿಂದ ಹೇಳುವದು ಹೇಗೆತಾನೆ ಸಾಧ್ಯವಾದೀತು ? ಯಾವ ಕರ್ಮವಾಗಲಿ, ಯಾವ ವಸ್ತುವೇ ಆಗಲಿ, ತನ್ನ ರೂಪದಿಂದ ಅಪೂರ್ಣವೇ ಆಗಿರುತ್ತದೆ. ಪರಿಪೂರ್ಣವಸ್ತುವೇ ಆಗಲಿ, ತನ್ನ ರೂಪದಿಂದ ಅಪೂರ್ಣವೇ ಆಗಿರುತ್ತದೆ. ಪರಿಪೂರ್ಣವಸ್ತುವೆಂದರೆ ಭಗವಂತನೊಬ್ಬನೇ. ಭಗವಂತನ ದೃಷ್ಟಿಯಿಂದಲೇ ಎಲ್ಲವೂ ಪೂರ್ಣವಾಗಬೇಕು ; ಭಗವಂತನು ಅಪೂರ್ಣವಾದದ್ದನ್ನೆಲ್ಲ ಪೂರ್ಣವಾಗಿಸುವ ಅಚಿಂತ್ಯಮಹಿಮೆಯುಳ್ಳಾತನು. ಆದ್ದರಿಂದ ಆತನ ಸ್ಮರಣೆಯಿಂದಲೇ ನಮ್ಮ ಸಾಧನೆಗಳೆಲ್ಲ ಪೂರ್ಣವಾಗಬೇಕು.

ಪರಮಾತ್ಮನ ನಾಮಕ್ಕೆ ಬಹಳ ಬೆಲೆಯಿದೆ. ನಿಜವಾಗಿ ನೋಡಿದರೆ ಎಲ್ಲಾ ನಾಮಗಳೂ ಆತನವೇ. ಒಂದಾನೊಂದು ಪತ್ರಿಕೆಯಲ್ಲಿ ಗಾಂಧಿಯವರ ಹೇಳಿಕೆಯೊಂದರ ವಿಮರ್ಶೆಯಿತ್ತು. ಅದರಲ್ಲಿದ್ದದ್ದೇನೆಂದರೆ : ತುಕಾರಾಮನು ಒಂದು ದಿನ ಅಸಮಾಧಾನದಿಂದ "ಇಂದು ನಾನು ನಿನ್ನನ್ನು ಹೊಗಳಲಾರೆ, ಇಗೋ ಬಯ್ಯುತ್ತೇನೆ" ಎಂದು ಭಗವಂತನನ್ನು ಕತ್ತೆ, ನಾಯಿ, ತೋಳ- ಎಂದು ನಿಂದಿಸುವದಕ್ಕೆ ಪ್ರಾರಂಭಿಸಿದನಂತೆ. ಆದರೆ ಭಕ್ತನ ಬಯ್ಗುಳೂ ಭಗವಂತನಿಗೆ ಸ್ತುತಿಯೇ ಆಗುವದು. ಇಡೀ ಜಗತ್ತೇ ಪರಮಾತ್ಮನ ವಿಭೂತಿಯಾಗಿರುವಾಗ ಯಾವದರ ಹೆಸರು ತಾನೆ ಭಗವಂತನ ನಾಮವಾಗಲಾರದು ? ಭಗವಂತನನ್ನು ಹೇಳದ ಶಬ್ದವೇ ಲೋಕದಲ್ಲಿಲ್ಲ. ಭಕ್ತರು ಹಾಸ್ಯದಿಂದ ಅಥವಾ ಮಿಥ್ಯಾಕೋಪದಿಂದ ಆಡಿದ ಮಾತುಗಳೂ ಭಗವಂತನ ಸ್ತುತಿಗಳೇ ಆಗಿರುತ್ತವೆ. ಆದರೂ ಅವರು ಪ್ರೇಮದಿಂದ ಆರಿಸಿಕೊಂಡು ಭಗವಂತನನ್ನು ಹೊಗಳುವ ಕೆಲವು ನಾಮಗಳಿವೆ. ಅವು ಭಗವಂತನಿಗೆ ಅತ್ಯಂತ ಪ್ರಿಯವಾಗಿರುತ್ತವೆ.

ಇಂಥ ನಾಮಗಳಲ್ಲಿ ಓಂ, ತತ್, ಸತ್ - ಎಂಬೀ ಮೂರು ಬಹಳ ಮುಖ್ಯವಾದವುಗಳು. ಓಂಕಾರವು ವೈದಿಕವಾಙ್ಮಯದಲ್ಲಿ ಬಹಳ ಪ್ರಸಿದ್ಧವಾದದ್ದು. ಓಂಕಾರದ ಉಪಾಸನೆಯನ್ನೂ ತತ್ತ್ವಾರ್ಥವನ್ನೂ ಉಪನಿಷತ್ತುಗಳಲ್ಲಿ ಅಲ್ಲಲ್ಲಿ ವರ್ಣಿಸಿರುತ್ತದೆ. ಆದರೆ ಅದರ ಬೆಲೆಯನ್ನು ಬಲ್ಲವರಿಗೆ ಮಾತ್ರ ಅದರ ಪ್ರಯೋಜನವು ಹೆಚ್ಚಾಗಿರುವದು. ವೇದಕ್ಕೆ ಅಧಿಕಾರವಿರುವವರೆಲ್ಲ ಭಗವಂತನ ನಾಮಗಳನ್ನು ಓಂಕಾರಪೂರ್ವಕವಾಗಿ ಉಚ್ಚರಿಸುತ್ತಾರೆ. ಅಷ್ಟೋತ್ತರ ನಾಮಗಳನ್ನೂ ಸಹಸ್ರನಾಮಗಳನ್ನೂ ಅರ್ಚನೆಗೆ ಉಪಯೋಗಿಸುವಾಗ ಓಂಕಾರವನ್ನು ಸೇರಿಸಿಕೊಂಡು ಹೇಳುವ ಪದ್ಧತಿಯಿದೆ. ಇದರ ಉದ್ದೇಶವೇನೆಂದರೆ ಓಂಕಾರದ ಅರ್ಥದಲ್ಲಿ ಆಯಾ ನಾಮದ ಅರ್ಥವು ಅಡಕವಾಗಿಯೇ ಇರುತ್ತದೆ. ಆದ್ದರಿಂದ ಆ ಎಲ್ಲಾ ನಾಮಗಳ ಅಭಿಪ್ರಾಯವೂ ಓಂಕಾರದಲ್ಲಿ ಸೇರಿದೆ ಎಂದಾಯಿತು. ಪ್ರಪಂಚದಲ್ಲಿರುವ ನಾಮಗಳೆಲ್ಲವೂ ಓಂಕಾರದ ವಿಕಾರವೇ ; ಓಂಕಾರದ ಅರ್ಥದಲ್ಲಿ ಅವುಗಳ ಅರ್ಥಗಳೆಲ್ಲ ಅಡಕವಾಗಿವೆ - ಎಂದು ಮಾಂಡೂಕ್ಯೋಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಿಬಿಟ್ಟಿದೆ. ಇದು ಹೇಗೆಂಬುದನ್ನು ಆ ಉಪನಿಷತ್ತಿನ ಅಭಿಪ್ರಾಯವನ್ನು ತಿಳಿದವರೂ ಓಂಕಾರದ ವಿಚಾರವಾಗಿ ಸದ್ಗುರುವಿನ ಬಳಿಯಲ್ಲಿ ವಿಮರ್ಶೆಮಾಡಿದವರೂ ತಿಳಿದುಕೊಳ್ಳಬಹುದು. ಓಂಕಾರದ ಜಪಕ್ಕೆ ಎಲ್ಲರಿಗೂ ಅಧಿಕಾರ ಉಂಟೊ ? ಇಲ್ಲವೊ ? ಎಂಬುದೊಂದು ಈಗಿನಕಾಲದ ಚರ್ಚೆ. ವೇದದ ಅರ್ಥವೆಲ್ಲವೂ ಓಂಕಾರದಲ್ಲಿ ಅಡಗಿರುತ್ತದೆ. ಆದ್ದರಿಂದಲೇ ಸಂನ್ಯಾಸಿಗಳು ಆಶ್ರಮ ಸ್ವೀಕಾರದ ವೇಳೆಯಲ್ಲಿ ವೇದಗಳನ್ನೆಲ್ಲ ವ್ಯಾಹೃತಿಗಳಲ್ಲಿಯೂ ವ್ಯಾಹೃತಿಗಳನ್ನೆಲ್ಲ ಓಂಕಾರದಲ್ಲಿಯೂ ಪ್ರವೇಶಮಾಡಿಕೊಂಡು ಕೇವಲ ಓಂಕಾರವನ್ನೇ ಜಪಕ್ಕೆ ಇಟ್ಟುಕೊಳ್ಳುತ್ತಾರೆ. ವೇದವನ್ನು ಅಧ್ಯಯನಮಾಡಿ ಅದರ ಅರ್ಥವನ್ನು ತಿಳಿದುಕೊಂಡಿರುವವರು ವೇದದ ಸಾರವಾದ ಓಂಕಾರವನ್ನು ಅರ್ಥಾನುಸಂಧಾನಪೂರ್ವಕವಾಗಿ ಉಚ್ಚರಿಸಬಲ್ಲರು. ಆದರೆ ವೇದವನ್ನು ಎಂದಿಗೂ ಅಧ್ಯಯನಮಾಡದಿದ್ದವರೂ ವೇದಭಾಷ್ಯವನ್ನು ಕಡೆಗಣ್ಣಿನಿಂದಲೂ ನೋಡದವರೂ ಉಪನಯನಾದಿಗಳಿಂದ ವೇದಾಧಿಕಾರಗಳನ್ನು ಪಡೆದುಕೊಳ್ಳದೆ ಇರುವವರೂ ಆ ಅಕ್ಷರವನ್ನು ಉಚ್ಚರಿಸಿದರೆಷ್ಟು, ಬಿಟ್ಟರೆಷ್ಟು ? ಎಲ್ಲಕ್ಕೂ ದೊಡ್ಡದಾದದ್ದನ್ನೇ ಬಯಸುವದು ನಮ್ಮೆಲ್ಲರಿಗೂ ಸ್ವಾಭಾವಿಕ. ಈಗಿನ ಕಾಲದಲ್ಲಿ ತಮ್ಮ ಮಕ್ಕಳು ನೆಹರು, ಗಾಂಧಿ ಮುಂತಾದವರಂತೆ ಪ್ರಖ್ಯಾತರಾಗಬೇಕೆಂದು ಪ್ರತಿಯೊಬ್ಬ ತಾಯಿಯೂ ಬಯಸಬಹುದು. ಆದರೆ ಅಷ್ಟುಮಾತ್ರದಿಂದಲೇ ಅವರ ಮಕ್ಕಳೆಲ್ಲರೂ ಒಬ್ಬೊಬ್ಬ ಗಾಂಧಿ, ಒಬ್ಬೊಬ್ಬ ನೆಹರು ಆದಾರೆ ? ಓಂಕಾರವೆಂಬುದು ಬ್ಯಾಂಕಿನ ಚೆಕ್ಕಿನಂತೆ ಇರುತ್ತದೆ. ಅದರ ಮೇಲೆ ಎಷ್ಟು ರೂಪಾಯಿನ ಆರ್ಡರುಬರೆದು ಬ್ಯಾಂಕಿಗೆ ಕೊಡುತ್ತೇವೋ ಅಷ್ಟು ರೂಪಾಯಿಗಳು ಚೆಕ್ಕು ಕೊಟ್ಟವನಿಗೆ ಬ್ಯಾಂಕಿನಲ್ಲಿ ಸಿಕ್ಕುತ್ತದೆ. ಆದರೆ ಬ್ಯಾಂಕಿನಲ್ಲಿ ಚೆಕ್ಕು ಕೊಟ್ಟವರ ಖಾತೆ ಇರಬೇಕು. ಚೆಕ್ಕು ಬ್ಯಾಂಕಿಗೆ ಕೊಡುವದಕ್ಕೆ ತೆಗೆದುಕೊಂಡು ಹೋಗುವವನಲ್ಲಿ ಇದು ಇಂತಿಷ್ಟು ರೂಪಾಯಿ ಬಾಳುವ ಚೆಕ್ಕು ಎಂಬ ಭಾವನೆಯೂ ಇರಬೇಕು. ಇವೆರಡೂ ಇಲ್ಲದ ಕಡೆಯಲ್ಲಿ ಬ್ಯಾಂಕಿನ ಚೆಕ್ಕಿಗೂ ಒಂದು ಸಾಮಾನ್ಯವಾದ ಕಾಗದದ ಹಾಳೆಗೂ ಯಾವ ವ್ಯತ್ಯಾಸವೂ ಇರುವದಿಲ್ಲ.

ಅಲ್ಲವೆ ? ಇದರಂತೆಯೇ ಓಂಕಾರವನ್ನು ಜಪಿಸುವವನೂ ತಕ್ಕ ಅಧಿಕಾರಿಯಾಗಿರುವದು ಅತ್ಯಾವಶ್ಯಕವು. ಕೇವಲ ಓಂಕಾರವನ್ನು ಜಪಿಸಿ ಅದರ ಪ್ರಯೋಜನವನ್ನು ಪಡೆದುಕೊಳ್ಳಲಾರದವರು ತಮಗೆ ಅರ್ಥವಾಗುವ ಯಾವದಾದರೊಂದು ರಾಮ, ಕೃಷ್ಣ, ಶಿವ ಮುಂತಾದ ನಾಮವನ್ನು ಉಪಯೋಗಿಸಿ ಪ್ರಯೋಜನವನ್ನು ಪಡೆಯುವದಕ್ಕೆ ಅಡ್ಡಿಯೇನೂ ಇರುವದಿಲ್ಲ. ಹಣ್ಣಿಗಾಗಿ ಒಂದು ಮರವನ್ನು ಹತ್ತುವವನು ಹಾಗೆಯೇ ಹತ್ತುವದಕ್ಕೆ ಬಾರದಿದ್ದರೆ ಏಣಿಯನ್ನು ಉಪಯೋಗಿಸುವದೇನೂ ತಪ್ಪಲ್ಲವಷ್ಟೆ. ಓಂಕಾರವೆಂಬುದು ಒಂದು ಬಹಳ ಬೆಲೆಯುಳ್ಳ ನಾಮವು. ಅದರ ಉಪಯೋಗವನ್ನು ಮಾಡಿಕೊಳ್ಳಲಾರದೆ ಅದರ ಅಧಿಕಾರವೂ ಇಲ್ಲದವರು ಅದನ್ನು ಮನಬಂದಂತೆ ಗಟ್ಟಿಯಾಗಿ ಉಚ್ಚರಿಸಿಕೊಂಡು ತಿರುಗಾಡುವದುಂಟು. ಇದರಿಂದ ಅವರಿಗೇನೂ ಉಪಯೋಗವಿಲ್ಲ. ಅನರ್ಘವಾದ ರತ್ನವೊಂದನ್ನು ನಾಯಿಯ ಬಾಲಕ್ಕೆ ಕಟ್ಟಿದರೆ ಹಾಗೆ ಕಟ್ಟಿದವನ ಅವಿವೇಕವನ್ನು ನೋಡಿ ತಿಳಿದವರು ಅವನಲ್ಲಿ ಕನಿಕರವನ್ನು ತೋರಿಸುವಂತೆ ಪ್ರಣವದ ಮಹತ್ತ್ವವನ್ನು ಬಲ್ಲ ಮಹನೀಯರು ಇಂಥವರಲ್ಲಿ ಅನುಕಂಪೆಯನ್ನು ತೋರಿಸಿ ಮರುಗುತ್ತಾರೆ ; ಅಷ್ಟೆ. ಓಂ ತತ್ಸತ್ ಎಂಬಿವು ಬ್ರಹ್ಮದ ನಾಮಗಳು. ಯಜ್ಞ, ದಾನ, ತಪಸ್ಸುಗಳನ್ನು ಈ ನಾಮಗಳ ಉಚ್ಚಾರಣೆಯಿಂದಲೇ ಮುಗಿಸುತ್ತಾರೆ. ಯಜ್ಞ ದಾನ ತಪಸ್ಸುಗಳು ಪರಮಾತ್ಮನ ಸ್ವರೂಪವನ್ನು ತಿಳಿಯುವದಕ್ಕೆ ಸಾಧನ. ಅವುಗಳೂ ಒಂದು ದೃಷ್ಟಿಯಿಂದ ಪರಮಾತ್ಮನ ಹೊರಮೈಯೇ - ಎಂಬುದು ಅವರ ಭಾವವು. ತತ್ ಎಂಬುದು ಫಲಾಕಾಂಕ್ಷೆ ಇಲ್ಲದೆ ಮಾಡುವ ಯಜ್ಞಾದಿಗಳ ಸಂಕೇತವು. ನಾವು ಮಾಡುವ ಕ್ರಿಯೆಗಳೆಲ್ಲವೂ ಪರಮಾತ್ಮನಿಗೆ ಅರ್ಪಣೆಯಾಗಲಿ - ಎಂಬಭಿಪ್ರಾಯವು ಈ ತತ್ತೆಂಬ ನಾಮದಲ್ಲಿ ಅಡಗಿರುತ್ತದೆ. ಪರಮಾತ್ಮನ ಸ್ಮರಣೆಯಿಂದ ಮಾಡಿದ ಧರ್ಮವೆಲ್ಲವೂ ವೀರ್ಯವತ್ತರವಾಗುತ್ತದೆ. ಅದು ತಪ್ಪದೆ ಪರಮಾತ್ಮನನ್ನೇ ಮುಟ್ಟುತ್ತದೆ. ಪರಮಾತ್ಮನು ನಮ್ಮನ್ನೂ ನಮ್ಮ ಕರ್ಮಗಳನ್ನೂ ಉಪಯೋಗಿಸಿಕೊಳ್ಳಲಿ ಎಂದು ಎಲ್ಲವನ್ನೂ ಪರಮಾತ್ಮನಿಗೆ ಸಂಬಂಧಿಸಿಕೊಳ್ಳುವದು ಚಿತ್ತದಲ್ಲಿ ಶುದ್ಧಭಾವವನ್ನು ಕೊಡುತ್ತದೆ. ಹಿಂದೀಭಾಷೆಯಲ್ಲಿ ಒಬ್ಬ ಮುಸಲ್ಮಾನ್ ಕವಿಯು ಶ್ರೀಕೃಷ್ಣನನ್ನು ಬಹುವಿಧವಾಗಿ ಹೊಗಳಿರುತ್ತಾನೆ. ಅವನು ಒಂದು ಕಡೆ ಹೇಳಿರುವದೇನೆಂದರೆ "ದೇವ, ನಾನು ಯಮುನಾ ನದಿಯ ದಡದಲ್ಲಿ ಒಂದು ಬಿದಿರಾಗಿ ಹುಟ್ಟಿದ್ದರೆ ನೀನು ನನ್ನನ್ನು ಒಂದು ಕೊಳಲುಮಾಡಿಕೊಂಡು ಉತ್ತಮವಾದ ರಾಗವೊಂದನ್ನು ನನ್ನಿಂದ ಹೊರಡಿಸುತ್ತಿದ್ದೆ. ಆಗ ನಾನು ಎಷ್ಟು ಜನರ ಆನಂದಕ್ಕೆ ಸಾಧನವಾಗುತ್ತಿದ್ದೆನು !"

ಓಂ ಎಂಬುದನ್ನುಚ್ಚರಿಸಿ ಕರ್ಮವನ್ನು ಮಾಡಿದರೆ ಕರ್ಮಕ್ಕೆ ಒಂದು ಪ್ರಾರಂಭಕವೇಗವುಂಟಾಗುತ್ತದೆ. ಕೊನೆಯಲ್ಲಿ ತತ್ ಎಂಬ ಶಬ್ದವನ್ನುಚ್ಚರಿಸುವದರಿಂದ ಇದೆಲ್ಲವೂ ಪರಮೇಶ್ವರನಿಗೆ ಅರ್ಪಣೆಯಾಗಲಿ ಎಂಬ ಭಾವವುಂಟಾಗುವದು. ಇನ್ನು ಸತ್ತೆಂಬ ನಾಮದ ಅಭಿಪ್ರಾಯವೇನೆಂದರೆ -:

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ 17-26**

ಸತ್ತೆಂದರೆ ಇರುವದು, ಒಳ್ಳೆಯದು ಎಂದು ಎರಡರ್ಥ. ಈ ಲೋಕದಲ್ಲಿ ನಿಜವಾಗಿ ಇರುವ ಪದಾರ್ಥವು ಪರಮಾತ್ಮನೇ. ನಮ್ಮ ಇರವೆಲ್ಲವೂ ಈ ಪರಮಾತ್ಮನದೇ. ನಮ್ಮ ಕರ್ಮಗಳಿಗೆ ಆತನಿಂದಲೇ ಇರವು - ಎಂಬ ಭಾವನೆಯೂ ಸಚ್ಛಬ್ದದಿಂದ ಉಂಟಾದಂತಾಯಿತು. ಇನ್ನು ಒಳ್ಳೆಯದೆಂಬ ಎರಡನೆಯ ಅರ್ಥವನ್ನು ತೆಗೆದುಕೊಂಡರೆ ಆಗಲೂ ಈ ಪರಮಾತ್ಮನನ್ನೇ ಹೇಳಿದಂತೆ ಆಗುತ್ತದೆ. ಲೋಕದಲ್ಲಿ ಯಾವ ಯಾವ ಒಳ್ಳೆಯ ಪದಾರ್ಥಗಳಿವೆಯೋ ಅವುಗಳ ಒಳ್ಳೆಯತನವೆಲ್ಲವೂ ಪರಮಾತ್ಮನದು. ಏಳನೆಯ ಅಧ್ಯಾಯದಲ್ಲಿ ಹೇಳಿರುವಂತೆ ಪೃಥ್ವಿಯಲ್ಲಿರುವ ಸುಗಂಧವು ಪರಮಾತ್ಮನ ವಿಭೂತಿಯು ; ಅದರಲ್ಲಿ ತೋರುವ ದುರ್ಗಂಧವೋ ಎಂದರೆ ನಮ್ಮ ದುಷ್ಕರ್ಮದ ಫಲವು. ಹೀಗೆ ಪರಮಾತ್ಮನಲ್ಲಿ ಎಲ್ಲಾ ಒಳ್ಳೆಯ ಭಾವಗಳೂ ಇರುವವು. ಕೆಟ್ಟದ್ದೆಂಬುದೆಲ್ಲಾ ನಮ್ಮ ಅಜ್ಞಾನದ ಫಲವಾಗಿದೆ. ಆದ್ದರಿಂದ ನಾವು ಮಾಡುವ ಪ್ರಶಸ್ತವಾದ ಕರ್ಮಗಳು ಅಂದರೆ ಯಜ್ಞಾದಿಕರ್ಮಗಳು ಈ ಅರ್ಥದಲ್ಲಿ ಸ್ವಚ್ಛಬ್ದವಾಚ್ಯವಾಗಿರುತ್ತದೆ. ಈ ಕರ್ಮಗಳಲ್ಲಿ ನಿರತರಾಗಿರುವದು ಒಳ್ಳೆಯತನದ ಗುರುತಾಗಿರುವದರಿಂದ ಅದೂ ಸಚ್ಛಬ್ದವಾಚ್ಯವಾಗಿರುತ್ತದೆ. ಇಷ್ಟೇ ಅಲ್ಲ. ಅಂಥ ಸತ್ಕರ್ಮಕ್ಕಾಗಿ ಮಾಡುವಕರ್ಮವೂ ಸತ್ತೆಂಬ ಶಬ್ದಕ್ಕೆ ತಕ್ಕದ್ದಾಗಿರುತ್ತದೆ. ಉದಾಹರಣೆಗೆ ಇಲ್ಲೊಂದು ಪೂಜೆ ನಡೆಯುತ್ತದೆ ಎಂದಿಟ್ಟುಕೊಳ್ಳಿರಿ ; ಆ ಪೂಜೆಗೆ ಸಹಾಯಕವಾಗಿ ಜನರು ಮಾಡುವ ನೆಲವನ್ನು ಗುಡಿಸುವದು, ಸಾರಿಸುವದು, ರಂಗೋಲಿ ಹಾಕುವದು, ಸಾಮಾನುಗಳ ಸಿದ್ಧತೆ - ಇವೇ ಮುಂತಾದವುಗಳೂ ಸತ್ಕರ್ಮಕೋಟಿಯಲ್ಲಿಯೇ ಸೇರುತ್ತವೆ. ಹೀಗೆ ಪರಮಾರ್ಥವಾಗಿರುವ ವಸ್ತು, ಉತ್ಕೃಷ್ಟವಾಗಿರುವ ವಸ್ತು, ಉತ್ಕೃಷ್ಟವಾಗಿರುವ ಕರ್ಮ, ಅದಕ್ಕೆ ಸಹಾಯಕವಾಗಿರುವ ಬೇರೆಯ ಕರ್ಮಗಳು - ಇವುಗಳೆಲ್ಲವೂ ಸತ್ ಎಂಬ ನಾಮದಲ್ಲಿ ತೋರುವ ಅರ್ಥಗಳು.

ಆದರೆ ಕರ್ಮಗಳಿಗೆಲ್ಲ ಮುಖ್ಯವಾದದ್ದು ಶ್ರದ್ಧೆಯು. ಯಾವ ಕರ್ಮವನ್ನು ಶ್ರದ್ಧೆಯಿಂದ ಮಾಡುವೆವೋ, ಯಾವ ಕರ್ಮವನ್ನು ಭಗವನ್ನಾಮೋಚ್ಚಾರಣೆಯ ಮೂಲಕ ಭಕ್ತಿಯಿಂದ ಪುಷ್ಟಿಗೊಳಿಸುವೆವೋ ಅದೆಲ್ಲ ಸತ್ ಎಂಬ ಶಬ್ದಕ್ಕೆ ಯೋಗ್ಯವಾಗಿರುತ್ತದೆ. ಹೀಗಲ್ಲದೆ -

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ 17-28**

ಯಾವ ಕರ್ಮದಲ್ಲಿ ಶ್ರದ್ಧೆ ಇರುವದೇ ಇಲ್ಲವೋ ಅಂಥ ಕರ್ಮವು ಹೋಮವಾಗಲಿ, ದಾನವಾಗಲಿ, ತಪಸ್ಸಾಗಲಿ, ಅಸತ್ತೆನಿಸುತ್ತದೆ. ಇಂಥ ಕರ್ಮವು ಇದ್ದರೂ ಇಲ್ಲದಂತೆ. ಅದನ್ನು ಮಾಡಿದವನು ಇರುವಾಗ ಇದ್ದವರ ಕೋಟಿಯಲ್ಲಿ ಸೇರುವದಿಲ್ಲ ; ಸತ್ತಮೇಲಂತೂ ಅವನ

ಹೆಸರನ್ನು ಹೇಳುವವರೇ ಇರುವದಿಲ್ಲ. ಅಂಥವನಿಗೆ ಯಾವ ಪುರುಷಾರ್ಥವೂ ದೊರಕಲಾರದು. ಯಾವನು ಪರಮಾರ್ಥವನ್ನು ಕೈಬಿಟ್ಟು ಶ್ರದ್ಧಾಭಕ್ತಿಹೀನನಾಗಿರುವನೋ ಅವನು ಕ್ರಿಮಿಕೀಟಗಳಿಗಿಂತಲೂ ಕಡೆ - ಎಂದು ಬಲ್ಲವರು ಹೇಳುವರು. ಮನುಷ್ಯನ ಆಯುಸ್ಸು, ಸಂಪಾದನೆ, ಉಣ್ಣುವದು ತಿನ್ನುವದು, ಉಡುಪು - ಮುಂತಾದದ್ದು ಯಾವದೂ ಲೆಕ್ಕಕ್ಕೆ ಬರುವದಿಲ್ಲ. ಯಾವನು ಸತ್ಕರ್ಮವನ್ನು ಮಾಡುತ್ತಾ ಬಾಳುವನೋ ಅವನೇ ಬಾಳಿದವನು. ಅಸತ್ಕರ್ಮವನ್ನು ಮಾಡುವವನಿಗೆ ಈ ಲೋಕದಲ್ಲಿಯೇ ಯಾವ ಫಲವೂ ಆಗುವದಿಲ್ಲ. ಪರಲೋಕದಲ್ಲಂತೂ ಅವನಿಗೆ ಫಲದಾಶೆ ಇಲ್ಲವಷ್ಟೆ ! ಅಸತ್ಕರ್ಮದಲ್ಲಿಯೂ ರಾವಣಾದಿಗಳಂತೆ ಎಲ್ಲರೂ ಖ್ಯಾತಿಗೆ ಬರುವುದು ಸಾಧ್ಯವಿಲ್ಲ. ಆದರೆ ಸತ್ಕರ್ಮದಿಂದ ಎಲ್ಲರೂ ಪ್ರಕಾಶಕ್ಕೆ ಬರಬಹುದು, ಪುರುಷಾರ್ಥವನ್ನೂ ಪಡೆಯಬಹುದು. ಕರ್ಮಗಳು ಎಲ್ಲಾ ವಿಧದಿಂದಲೂ ಸಾದ್ಗುಣ್ಯವನ್ನು ಪಡೆಯಬೇಕಾದರೆ ಅವುಗಳನ್ನು ಆದಿಯಲ್ಲಿಯೂ ಮಧ್ಯದಲ್ಲಿಯೂ ಅಂತ್ಯದಲ್ಲಿಯೂ ಶ್ರದ್ಧಾಭಕ್ತಿಗಳಲ್ಲಿ ಅದ್ದಬೇಕು ; ಅವುಗಳಲ್ಲಿರುವ ಯಾವ ನ್ಯೂನತೆಯೇ ಆಗಲಿ ಪರಮಾತ್ಮನ ನಾಮಸ್ಮರಣೆಯಿಂದ ಪರಿಪೂರ್ಣವಾಗಬೇಕು. ಓಂ ತತ್ಸತ್ ಎಂಬ ನಾಮಗಳ ವರ್ಣನೆಯಿಂದ ಇದನ್ನೇ ನಾವಿಲ್ಲಿ ತಿಳಿಯಬೇಕಾದದ್ದು.

## ೧೭೨. ಕರ್ಮಯೋಗವೂ ತ್ಯಾಗವೂ 18 - (1-6)

**(11-6-50)**

ಹದಿನೇಳನೆಯ ಅಧ್ಯಾಯದ ಆರಂಭದಲ್ಲಿ ಅರ್ಜುನನು ಶ್ರದ್ಧೆಯ ವಿಚಾರವಾಗಿ ಪ್ರಶ್ನೆಯನ್ನು ಮಾಡಿರುತ್ತಾನೆ. ಭಗವಂತನು ಶ್ರದ್ಧೆಯಿಂದ ಮಾಡಿದ ಕರ್ಮವೇ ಸತ್ಫಲವನ್ನು ಕೊಡುತ್ತದೆ, ಅಶ್ರದ್ಧೆಯಿಂದ ಮಾಡಿದ್ದು ಯಾವ ಪ್ರಯೋಜನವನ್ನೂ ಕೊಡಲಾರದು ಎಂದಿರುತ್ತಾನೆ. ಕರ್ಮದ ಮರ್ಮವೇ ಶ್ರದ್ಧೆ ಎಂಬುದನ್ನು ಎಷ್ಟು ಹೇಳಿದರೂ ಸಾಲದು. ಮೀಮಾಂಸಾಶಾಸ್ತ್ರದಲ್ಲಿ ಪರಿಣತರಾಗಿದ್ದ ಒಬ್ಬರಿಗೆ ಅಜೀರ್ಣರೋಗದಿಂದ ಮತ್ತೆ ಮತ್ತೆ ತೇಗು ಬರುತ್ತಿತ್ತು. ಅವರು ಬೇರೆ ಬೇರೆಯ ಔಷಧಗಳನ್ನು ಉಪಯೋಗಿಸಿದರೂ ಪ್ರಯೋಜನವಾಗಿರಲಿಲ್ಲ. "ಸೂರ್ಯನಮಸ್ಕಾರವನ್ನು ಮಾಡಿನೋಡಿ" ಎಂದು ಅವರಿಗೆ ಸೂಚನೆಯನ್ನು ಕೊಟ್ಟಾಗ ಅವರು ತಿರಸ್ಕಾರಭಾವದಿಂದ ನಕ್ಕರು. ಆಗ ಅವರಿಗೆ ಕರ್ಮಕ್ಕೆ ಶ್ರದ್ಧೆಯೇ ಮುಖ್ಯವೆಂಬುದನ್ನು ತಿಳಿಸಿಕೊಡಬೇಕಾಯಿತು. ಮೀಮಾಂಸಾಶಾಸ್ತ್ರವನ್ನೆಲ್ಲ ಸಭಾಷ್ಯವಾಗಿ ಓದಿದ್ದರೂ ಈ ಸರಳವಾದ ತತ್ತ್ವವು ಅವರ ಮನಸ್ಸಿಗೆ ಬಂದಿರಲಿಲ್ಲ. "ಶ್ರದ್ಧೆಯಿಂದ ತ್ರಿಚಕಲ್ಪಪ್ರಕಾರದಿಂದ ನಮಸ್ಕಾರವನ್ನು ಮಾಡಿರಿ, ಪ್ರತಿಯೊಂದು ಏಕಾದಶಿಯ ದಿನವೂ ಉಪವಾಸ ಮಾಡಿರಿ ; ಹೀಗೆ ಮೂರು ತಿಂಗಳು ಮಾಡಿದರೆ ನಿಮಗೆ

ಪ್ರಯೋಜನವಾಗುತ್ತದೆ" ಎಂದು ತಿಳಿಸಿದ್ದಾಯಿತು. ಅದರಿಂದ ಅವರಿಗೆ ಸ್ವಲ್ಪ ಆ ಅಜೀರ್ಣರೋಗವು ಗುಣಮುಖವಾಯಿತೆಂದು ತಿಳಿಯಬಂದಿತು.

ವಿಜ್ಞಾನಶಾಸ್ತ್ರದ ಬೆಂಬಲವುಳ್ಳವರು `ಇದರಲ್ಲೇನೂ ಆಶ್ಚರ್ಯವಿಲ್ಲ ; ನಮಸ್ಕಾರದಿಂದ ವ್ಯಾಯಾಮವಾಯಿತು, ಉಪವಾಸದಿಂದ ಪಚನವಾಗದೆ ಇದ್ದ ಆಹಾರವು ಜೀರ್ಣವಾಗುವದಕ್ಕೆ ಅವಕಾಶವಾಯಿತು'- ಎಂದು ಈ ಘಟನೆಗೆ ಉಪಪತ್ತಿಯನ್ನು ಕೊಡಬಹುದು ; ಆದರೆ ಅದು ಪೂರ್ಣ ಉಪಪತ್ತಿಯಾಗಲಾರದು. ಏಕೆಂದರೆ ಮನುಷ್ಯನಿಗೆ ಶರೀರವು ಮಾತ್ರವೇ ಇರುವದಿಲ್ಲ; ಅವನಿಗೆ ಮನಸ್ಸೆಂಬುದೂ ಒಂದು ಇದೆ. ಶರೀರಕ್ಕೆ ಹೇಗೆ ಆರೋಗ್ಯದ ನಿಯಮಗಳೂ ಚಿಕಿತ್ಸೆಯೂ ಅವಶ್ಯವೋ ಹಾಗೆಯೇ, ಅಥವಾ ಅದಕ್ಕಿಂತಲೂ ಹೆಚ್ಚಾಗಿ, ಮನಸ್ಸಿಗೂ ನಿಯಮಗಳೂ ಚಿಕಿತ್ಸೆಯೂ ಬೇಕು. ಮನಸ್ಸನ್ನು ಅನಾದರಮಾಡಿದ ಔಷಧೋಪಚಾರಗಳು ಫಲದಾಯಕವಲ್ಲದೆ ಹೋಗಿರುವದು ನಮ್ಮಲ್ಲಿ ಅನೇಕರಿಗೆ ಮನದಟ್ಟಾಗಿರುತ್ತದೆ. ಇಷ್ಟೇ ಅಲ್ಲ. ಕೆಲವು ವೇಳೆಗಳಲ್ಲಿ ಮನೋರೋಗವೇ ಮುಖ್ಯವಾಗಿರುತ್ತದೆ. ಅಂಥ ಸಂದರ್ಭದಲ್ಲಿ ಶರೀರಕ್ಕಿಂತಲೂ ಮನಸ್ಸಿಗೇ ಚಿಕಿತ್ಸೆಯು ಅವಶ್ಯವಾಗಿರುತ್ತದೆ. ಆದ್ದರಿಂದಲೇ 'ತಚ್ಛಾನ್ತಿರೌಷಧೈರ್ದಾನೈರ್ಜಪಹೋಮಸುರಾರ್ಚನೈಃ' ಎಂದು ಹಿರಿಯರು ರೋಗಕ್ಕೆ ಔಷಧವಲ್ಲದೆ ಜಪಹೋಮಾದಿಗಳನ್ನೂ ವಿಧಿಸಿರುತ್ತಾರೆ. ಶರೀರಕ್ಕೆ ಜ್ವರಾದಿಗಳು ಬಂದರೆ ಮನಸ್ಸಿನಲ್ಲಿಯೂ ಆ ತಾಪದ ಮಾರ್ಪಾಡುಗಳಾಗಿರುತ್ತವೆ. ಶರೀರದ ಆರೋಗ್ಯವು ಸುಸ್ಥವಾಗಿದ್ದರೆ ಮನಸ್ಸಿನ ಸಮಾಧಾನವೂ ಸುಸ್ಥವಾಗಿರುತ್ತದೆ. ಇದು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿರುವ ವಿಷಯ. ಇದರಂತೆಯೇ ಮನಸ್ಸಿನಲ್ಲಾಗುವ ಕಾಮಕ್ರೋಧಾದಿಗಳಿಂದಲೂ ಶ್ರದ್ಧಾಶಾಂತ್ಯಾದಿಗಳಿಂದಲೂ ಶರೀರದ ಮೇಲೂ ಪರಿಣಾಮವಾಗುವದೆಂಬುದು ಚೆನ್ನಾಗಿ ಪರೀಕ್ಷೆಮಾಡಿದವರಿಗೆ ತಿಳಿಯಬರುತ್ತದೆ. ಆದ್ದರಿಂದಲೇ ಶ್ರದ್ಧೆಯಿಂದಲೂ ತಿಳಿವಳಿಕೆಯಿಂದಲೂ ಮಾಡಿದ ಕರ್ಮವು ವೀರ್ಯವತ್ತರವಾಗುವದೆಂದು ಶ್ರುತಿಯಲ್ಲಿ ಹೇಳಿರುತ್ತದೆ. "ಇದನ್ನು ಮಾಡಿ ನೋಡೋಣ, ಇದರಿಂದ ನನಗೆ ಅನುಕೂಲವಾಗುವ ನಿರೀಕ್ಷಣೆಯಿದೆ"- ಎಂಬ ರೂಪದ ಪರೀಕ್ಷಾರ್ಥವಾದ ಶ್ರದ್ಧೆಯು ಕೂಡ ಪ್ರಯೋಜನಕಾರಿಯಾಗಿರುತ್ತದೆ. ಶ್ರದ್ಧೆ ಇಲ್ಲದೆ ಮಾಡಿದ ಕರ್ಮವು ಬರಿಯ ಶಾರೀರ ವ್ಯಾಯಾಮ ಮಾತ್ರವಾಗುತ್ತದೆ. ಅಶ್ವತ್ಥಕಟ್ಟೆಯ ಪ್ರದಕ್ಷಿಣೆಯೇ ಮುಂತಾದವುಗಳು ಭಾವನೆಯಿಂದ ಕೊಡುವ ಫಲವನ್ನು ಬರಿಯ ಪ್ರದಕ್ಷಿಣೆಯೇ ಮುಂತಾದದ್ದು ಎಂದಿಗೂ ಕೊಡಲಾರದು. ನಾಟಕದಲ್ಲಿ ಅಭಿನಯಿಸಿ ತೋರಿಸುವ ಪೂಜೆ, ದಾನ, ಹೋಮ, ತಪಸ್ಸು - ಮುಂತಾದವುಗಳನ್ನು ನೋಡಿದರೆ ನಮಗೆ ಅದರಿಂದ ಯಾವ ಭಾವಭಕ್ತಿಗಳ ಬೆಳವಣಿಗೆಯೂ ಆಗುವದಿಲ್ಲ ; ಏಕೆಂದರೆ ಅದು ಬರಿಯ ಆಟವೆಂದು ನಮಗೆ ಮೊದಲೇ ಗೊತ್ತಿರುತ್ತದೆ. ಶ್ರದ್ಧಾಪೂರ್ವಕವಾಗಿ ನಾವು ಮಾಡುವ ಕರ್ಮಗಳಿಂದ ನಮ್ಮ ಚಿತ್ತದ ಮೇಲೆ ಉತ್ತಮ ಪರಿಣಾಮವಾಗುತ್ತದೆ ; ಏಕೆಂದರೆ ಅದೇ ನಿಜವಾದ ಕರ್ಮವಾಗಿರುತ್ತದೆ.

ಗೀತೆಗೆಲ್ಲ ಕರ್ಮಯೋಗವೇ ತಳಹದಿ. ಕರ್ಮವನ್ನು ಶ್ರದ್ಧೆಯಿಂದ ಮಾಡುವದಲ್ಲದೆ ಭಗವಂತನ ಅರ್ಚನೆಯೆಂಬ ಅಭಿಪ್ರಾಯದಿಂದ ಅಹಂಕಾರವನ್ನೂ ಫಲಾಭಿಸಂಧಿಯನ್ನೂ ಬಿಟ್ಟು ಮಾಡುವದೂ ಅತ್ಯವಶ್ಯವು. ಆ ಕರ್ಮಯೋಗವೇ ಮುಮುಕ್ಷುಗಳಿಗೆ ಕ್ರಮಕ್ರಮವಾಗಿ ಪ್ರತ್ಯಕ್ಪ್ರವಣತೆಯನ್ನುಂಟುಮಾಡುತ್ತದೆ. ಬರಿಯ ಕರ್ಮವು ಆಯಾ ಫಲವನ್ನು ಕೊಡುವದಾದರೂ ಕರ್ಮಯೋಗವು ಚಿತ್ತಶುದ್ಧಿಯ ದ್ವಾರದಿಂದ ಜ್ಞಾನಕ್ಕೆ ಬೇಕಾದ ಯೋಗ್ಯತೆಯನ್ನುಂಟುಮಾಡುತ್ತದೆ. ಕರ್ಮಯೋಗದಿಂದಲೇ ನೈಷ್ಕರ್ಮ್ಯವನ್ನು ಪಡೆಯುತ್ತಾನೆಂದು ಭಗವಂತನು ಉಪದೇಶಿಸಿರುತ್ತಾನೆ. ಕರ್ಮಸಂನ್ಯಾಸಪೂರ್ವಕವಾಗಿಯೇ ಪರಮಾತ್ಮನಲ್ಲಿ ನಿಷ್ಠೆಯನ್ನು ಪಡೆಯುವದಕ್ಕೆ ಸಾಧ್ಯವಾಗುತ್ತದೆಯಾದರೂ ಆ ಕರ್ಮಸಂನ್ಯಾಸವೆಂಬುದು ಕರ್ಮಯೋಗದಿಂದ ಮಾತ್ರವೇ ಸಾಧ್ಯವಾಗುತ್ತದೆಯಾದ್ದರಿಂದ ಆತ್ಮಜ್ಞಾನವಿಲ್ಲದವರು ತಟ್ಟನೆ ಕರ್ಮಸಂನ್ಯಾಸವನ್ನು ಮಾಡುವದಕ್ಕಿಂತಲೂ ಕರ್ಮವನ್ನು ಈಶ್ವರಾರಾಧನೆಗೆಂದು ಮಾಡುವ ಕರ್ಮಯೋಗವನ್ನು ಅನುಸರಿಸುವದೇ ಮೇಲೆಂದು ಮತ್ತೆ ಮತ್ತೆ ಭಗವಂತನು ಉಪದೇಶಿಸಿರುತ್ತಾನೆ. ಹೀಗೆ ಕರ್ಮಯೋಗದ್ವಾರದಿಂದ ಕರ್ಮಸಂನ್ಯಾಸವನ್ನು ಅಳವಡಿಸಿಕೊಂಡು ಆತ್ಮಜ್ಞಾನನಿಷ್ಠೆಯನ್ನು ಹೊಂದುವದೇ ನಿಃಶ್ರೇಯಸಕ್ಕೆ ಸಾಧನವೆಂಬ ಈ ಗೀತೋಪದೇಶದ ಸಾರವನ್ನು ಈ ಹದಿನೆಂಟನೆಯ ಅಧ್ಯಾಯದಲ್ಲಿ ಉಪಸಂಹಾರಮಾಡಿರುತ್ತದೆ.

ಅರ್ಜುನನು ಸಂನ್ಯಾಸತ್ಯಾಗಶಬ್ದಗಳ ನಿಜವಾದ ಅರ್ಥವನ್ನು ಕೇಳಿದನೆಂದು ಉಪಕ್ರಮಿಸಿ ಅದಕ್ಕೆ ಉತ್ತರವನ್ನು ಹೇಳುವ ಮೂಲಕ ಭಗವಂತನು ಗೀತಾರ್ಥದ ಉಪಸಂಹಾರವನ್ನು ಮಾಡಿರುತ್ತಾನೆಂದು ತಿಳಿಯಬೇಕು ; ಏಕೆಂದರೆ ಈ ಅಧ್ಯಾಯದಲ್ಲಾಗಲಿ ಗೀತೆಯಲ್ಲಾಗಲಿ ಬರಿಯ ಸಂನ್ಯಾಸತ್ಯಾಗಗಳ ನಿರ್ವಚನವು ಮಾತ್ರ ಇರುವದಿಲ್ಲ, ಆದರೂ ಗೀತೆಯ ಸಾರವು ತ್ಯಾಗ ಎಂಬುದಕ್ಕೇನೂ ಅಡ್ಡಿಯಿಲ್ಲ. ಗೀತಾಪಾರಾಯಣವನ್ನು ಮಾಡಿದ್ದಕ್ಕೆ ತ್ಯಾಗಬುದ್ಧಿ ಹುಟ್ಟುವದೇ ಫಲವು. ಮಮತೆಯೇ ಮರ್ತ್ಯತ್ವಕ್ಕೆ ಹೇತು, ತ್ಯಾಗವೇ ಅಮೃತತ್ವಕ್ಕೆ ಹೇತು - ಎಂಬಿಷ್ಟನ್ನು ಜನರು ತಿಳಿದುಕೊಂಡರೆ ಅಧ್ಯಾತ್ಮವಿದ್ಯೆಯ ರಹಸ್ಯವನ್ನೇ ಅರಿತುಕೊಂಡಂತಾದೀತು. ಕೊಟ್ಟಷ್ಟು ಮನಸ್ಸಿನಲ್ಲಿ ಆನಂದವು ಹೆಚ್ಚುವದು. "ಕೊಟ್ಟದ್ದು ತನಗೆ ಇಟ್ಟದ್ದು ಪರರಿಗೆ " ಎಂಬುದು ನಿಜವಾಗಿಯೂ ಸರ್ವಜ್ಞೋಕ್ತಿಯೇ. ಅರ್ಜುನನು ಕರ್ಮ, ಕರ್ಮಸಂನ್ಯಾಸ ಇವುಗಳ ವಿಷಯವನ್ನು ಎಷ್ಟೋ ಸಲ ಬೇರೆ ಬೇರೆಯ ಪ್ರಕಾರದಿಂದ ಕೇಳಿರುತ್ತಾನೆ. ಆದರೂ ಅವನಿಗೆ ತೃಪ್ತಿಯಿಲ್ಲ. ಇನ್ನೊಂದು ಸಲ ಕೊನೆಯದಾಗಿ ಈ ವಿಷಯವನ್ನು ಕೇಳಿ ನಿಷ್ಕೃಷ್ಟಾರ್ಥವನ್ನು ತಿಳಿದುಕೊಂಡು ಬಿಡೋಣ - ಎಂಬುದು ಅವನ ಆಶಯ. ಈ ಅಭಿಪ್ರಾಯದಿಂದಲೇ ಅರ್ಜುನನು ಸಂನ್ಯಾಸದ ಮತ್ತು ತ್ಯಾಗದ ತತ್ತ್ವವನ್ನು ಅರಿತುಕೊಳ್ಳಬೇಕೆಂಬುದು ನನ್ನ ಅಭಿಲಾಷೆ - ಎಂದಿರುತ್ತಾನೆ.

ಸಂನ್ಯಾಸ, ತ್ಯಾಗ ಎಂಬ ಶಬ್ದಗಳ ಅರ್ಥವನ್ನು ಮನಸ್ಸಿನಲ್ಲಿ ಹೊರಳಿಸಿ ನೋಡುವದರಿಂದ ನಮಗೆ ಬಹಳ ಲಾಭವುಂಟು. ಒಂದಾನೊಂದು ಕಾಲದಲ್ಲಿ ಒಬ್ಬ ಬ್ರಾಹ್ಮಣನು ಒಬ್ಬ ರಾಜನ ಬಳಿಗೆ ಬಂದು "ಪ್ರಭುವೆ, ಭಾಗವತಪುರಾಣದ ಅಭಿಪ್ರಾಯವನ್ನು ತಮ್ಮಲ್ಲಿ ತಿಳಿಸಬೇಕೆಂದು ಬಂದಿರುತ್ತೇನೆ ; ಚಿತ್ತವಿಟ್ಟು ಲಾಲಿಸಬೇಕು" ಎಂದನಂತೆ. ಆ ಬ್ರಾಹ್ಮಣನು ಹೇಳಿದ ಭಾಷಣವನ್ನೆಲ್ಲ ಮನಮುಟ್ಟಿಕೇಳಿದ ಬಳಿದ ರಾಜನು, `ತಾವು ಭಾಗವತದ ಸಾರವನ್ನು ಹೇಳಲಿಲ್ಲವಲ್ಲ!'- ಎಂದನಂತೆ. ಬ್ರಾಹ್ಮಣನು "ರಾಜನ ಬಳಿಯಲ್ಲಿ ಅನೇಕ ವಿದ್ವಾಂಸರು ಬರುತ್ತಾರೆ ; ಯಾರೋ ಭಾಗವತದ ರಹಸ್ಯಾರ್ಥವೊಂದನ್ನು ಇವನಿಗೆ ಹೇಳಿರಬೇಕು. ನನಗೆ ಇದು ತಿಳಿಯಲಿಲ್ಲವೆಂದಾಗಬಾರದು, ಇದನ್ನು ಮನೆಯಲ್ಲಿ ಚೆನ್ನಾಗಿ ಆಲೋಚನೆ ಮಾಡಿಬರೋಣ" ಎಂದು ನಾಳೆ ಮತ್ತೆ ಬರುತ್ತೇನೆ ಎಂದು ರಾಜನ ಅನುಜ್ಞೆಯನ್ನು ಪಡೆದು ಹೊರಟುಹೋದನು. ಮತ್ತೆ ಮತ್ತೆ ಭಾಗವತವನ್ನು ತಿರಿವಿ ಹಾಕಿ ಆ ಬ್ರಾಹ್ಮಣನು ರಾಜನಲ್ಲಿಗೆ ಬಂದು ಎರಡು ಮೂರು ದಿನಗಳು ತನ್ನ ಉದ್ದಾಮಪಾಂಡಿತ್ಯವನ್ನು ಪ್ರಕಟಿಸುವ ಭಾಷಣಗಳನ್ನು ಮಾಡಿದನು. ಆದರೂ ರಾಜನು ಭಾಗವತದ ಸಾರವನ್ನು ಮಾತ್ರ ತಾವು ಹೇಳಿಲಿಲ್ಲ ಎಂದನು ; ಬ್ರಾಹ್ಮಣನು ಈಗ ನಿಜವಾಗಿಯೂ ಆಲೋಚನಾಪರನಾದನು. ಅವನು ಮನೆಗೆ ಹೋಗಿ "ಭಾಗವತದ ಸಾರವೇನು ?" ಎಂಬ ಪ್ರಶ್ನೆಗೆ ನಿಜವಾದ ಉತ್ತರವನ್ನು ಕಂಡು ಹಿಡಿಯಬೇಕೆಂದು ಮನಃಪೂರ್ವಕವಾಗಿ ಭಾಗವತವನ್ನೆಲ್ಲ ಆದ್ಯಂತವಾಗಿ ನೋಡುವದಕ್ಕೆ ಪ್ರಾರಂಭಿಸಿದನು. ಈಗ ಅವನಿಗೆ ರಾಜನಲ್ಲಿ ಭಾಗವತವನ್ನು ಹೇಳಿ ಅವನಿಂದ ಪಾರಿತೋಷಿಕವನ್ನು ಪಡೆಯಬೇಕೆಂಬ ತವಕವಿರಲಿಲ್ಲ. "ಭಾಗವತದ ಸಾರವೇನಿದ್ದೀತು ? ಅದನ್ನು ತಿಳಿಯದೆ ನಾನು ಇಷ್ಟು ದಿನ ಬರಿಯ ಶಬ್ದಮಾತ್ರದಿಂದ ತುಷ್ಟನಾಗಿದ್ದೆನಲ್ಲ! ನಿಜವಾಗಿ ಈತನೇ ನನಗೆ ಗುರು. ಭಾಗವತವನ್ನು ಓದಿ ಅದರ ಸಾರವನ್ನು ತಿಳಿದುಕೊ ಎಂದು ಬೋಧಿಸಿರುತ್ತಾನೆ ? ಎಂದು ಈ ಸಾರವನ್ನು ನನಗೆ ತಿಳಿಯಿಸಿ ಅನುಗ್ರಹಿಸೆಂದು ಭಗವಂತನನ್ನು ಶ್ರದ್ಧಾಭಕ್ತಿಗಳಿಂದ ಪ್ರಾರ್ಥಿಸುವದಕ್ಕೆ ಮೊದಲುಮಾಡಿದನು. ಬಹಳ ಹೊತ್ತು ಹುಡುಕಿ ಹುಡುಕಿ ನೋಡಿದ ಮೇಲೆ ಶ್ರೀಹರಿಯ ಕೃಪೆಯಿಂದ ಭಾಗವತದ ತೀರ ಕೊನೆಯಲ್ಲಿದ್ದ ಈ ಶ್ಲೋಕವು ಕಣ್ಣಿಗೆ ಬಿತ್ತು :

**ಶ್ರೀಮದ್ಭಾಗವತಂ ಪುರಾಣಮಮಲಂ ಯದ್ವೈಷ್ಣವಾನಾಂ ಪ್ರಿಯಂ ।**
**ಯಸ್ಮಿನ್ ಪಾರಮಹಂಸ್ಯಮೇಕಮಮಲಂ ಜ್ಞಾನಂ ಪರಂ ಗೀಯತೇ ॥**
**ಯತ್ರ ಜ್ಞಾನವಿರಾಗಭಕ್ತಿಸಹಿತಂ ನೈಷ್ಕರ್ಮ್ಯಮಾವಿಷ್ಕೃತಂ ।**
**ತಚ್ಛೃಣ್ವನ್ ವಿಪಠನ್ ವಿಚಾರಣಪರೋ ಭಕ್ತ್ಯಾ ವಿಮುಚ್ಯೇನ್ನರಃ ॥**

"ವಿಷ್ಣುಭಕ್ತರಿಗೆ ಪ್ರಿಯವಾಗಿರುವದಾದ, ಪರಮಹಂಸರಿಗೆ ಮಾತ್ರ ತಕ್ಕ, ಹೆಚ್ಚಿನ ಜ್ಞಾನವನ್ನು ಗಾನಮಾಡಿರುವ, ಜ್ಞಾನವೈರಾಗ್ಯ ಭಕ್ತಿಗಳಿಂದೊಡಗೂಡಿದ, ನೈಷ್ಕರ್ಮ್ಯವನ್ನು

ಹೊರಪಡಿಸಿರುವ ನಿರ್ಮಲವಾದ ಶ್ರೀಮದ್ಭಾಗವತ ಪುರಾಣವಿದೆಯಷ್ಟೆ, ಅದನ್ನು ಭಕ್ತಿಯಿಂದ ಶ್ರವಣಮಾಡಿ, ಪಠನಮಾಡಿ, ಅದರರ್ಥದ ವಿಚಾರದಲ್ಲಿಯೇ ತಾತ್ಪರ್ಯವುಳ್ಳ ಮನುಷ್ಯನು ಮುಕ್ತನಾಗುವನು" ಎಂಬುದು ಶ್ಲೋಕದ ಅಭಿಪ್ರಾಯ. "ಆಹಾ! ಸರ್ವಕರ್ಮವನ್ನೂ ಪರಿತ್ಯಾಗ ಮಾಡಿ ಪರಮಹಂಸನಾಗಿ ಪರಮಾತ್ಮನಿಷ್ಠೆಯನ್ನು ಪಡೆದುಕೊಳ್ಳುವದೇ ಪರಮ ನಿಃಶ್ರೇಯಸ್ಸು-ಎಂಬೀ ಭಾಗವತದ ಸಾರವನ್ನು ತಿಳಿಯದೆ ಗಾಜಿನ ಚೂರುಗಳಿಗಾಗಿ ಮರಕತಮಣಿಯನ್ನು ಮಾರುಗೊಡುವದಕ್ಕೆ ಹೋಗುವ ಮೂರ್ಖನಂತೆ ಭಾಗವತಶ್ರವಣವನ್ನು ರಾಜನಿಗೆ ಮಾಡಿಸಿ ಅವನಿಂದ ಧನಕನಕಾದಿಗಳನ್ನು ಸಂಪಾದಿಸಬೇಕೆಂದು ಹವಣಿಸಿದೆನಲ್ಲ ! ನಾನು ಎಂಥ ಅವಿವೇಕಿಯು !" ಎಂದು ಪಶ್ಚಾತ್ತಾಪದಿಂದ "ಇನ್ನು ಭಗವದ್ಭಕ್ತಿಯೊಂದನ್ನಲ್ಲದೆ ಮತ್ತೇನನ್ನೂ ನಾನು ಯಾಚಿಸುವದಿಲ್ಲ" ಎಂದು ದೃಢಸಂಕಲ್ಪವನ್ನು ಮಾಡಿಕೊಂಡು ಭಗವಚ್ಚಿಂತಾಪರನಾಗಿ ಸಮಾಧಿಯಲ್ಲಿ ಕುಳಿತುಬಿಟ್ಟನು. ಅತ್ತ ರಾಜನು ಬ್ರಾಹ್ಮಣನೇಕೆ ಬರಲಿಲ್ಲವೆಂಬುದು ತಿಳಿಯದೆ ಅವನನ್ನು ನೋಡಬೇಕೆಂಬ ತವಕದಿಂದ ಅವನಿದ್ದಲ್ಲಿಗೆ ತಾನೇ ಬಂದನು. ತೇಜಸ್ವಿಯಾದ ಬ್ರಾಹ್ಮಣನು ಹೃದಯದಲ್ಲಿ ಭಗವಂತನನ್ನಿಟ್ಟುಕೊಂಡು ಶಾಂತನಾಗಿ ಕುಳಿತಿರುವದನ್ನು ಕಂಡು ಆಶ್ಚರ್ಯಚಕಿತನಾದನು. ಆತನ ಚರಣಕಮಲದಲ್ಲಿ ತನ್ನ ಸಂಪತ್ತನ್ನಿಟ್ಟು ಕೃತಾರ್ಥನಾಗಬೇಕೆಂದು ಬಗೆಬಗೆಯಿಂದ ಪ್ರಾರ್ಥಿಸಿದರೂ ಪರಮವಿರಕ್ತನಾದ ಆವೈಷ್ಣವ ಶಿರೋಮಣಿಯು ಯಾವದೊಂದನ್ನೂ ಬಯಸದೆ "ನನಗೆ ಸಿಕ್ಕಬೇಕಾಗಿದ್ದದ್ದು ಸಿಕ್ಕಿತು, ಇನ್ನೇನಾಗಬೇಕು ? ನಿನ್ನ ಸದುಪದೇಶಕ್ಕೆ ಕೃತಜ್ಞನಾಗಿರುತ್ತೇನೆ. ಅಷ್ಟೇ ನನಗೆ ಸಾಕು" ಎಂದನಂತೆ. ಈ ತೃಪ್ತಿಯೇ ನಿಜವಾದ ಸಂನ್ಯಾಸದ ಫಲವು, ಇದೇ ನಿಜವಾದ ತ್ಯಾಗದ ಪರಾಕಾಷ್ಠೆ.

ಅರ್ಜುನನು ಕೇಳಿದ ಪ್ರಶ್ನೆಗೆ ಕ್ರಮಕ್ರಮವಾಗಿ ಉತ್ತರವನ್ನು ಹೇಳಬೇಕೆಂಬ ಅಭಿಪ್ರಾಯದಿಂದ ಭಗವಂತನು ಹೇಳಿದ ಉತ್ತರವಿದು :

**ಶ್ರೀ ಭಗವಾನುವಾಚ --**

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ 18-2**

ಇದು ಭಗವಂತನು ಹೇಳಿದ್ದೆಂಬುದನ್ನು ನಾವೆಲ್ಲರೂ ಮನದಂದುಕೊಳ್ಳಬೇಕು. ಶ್ರೀ ಭಗವಂತನೇ ನೇರವಾಗಿ ಆಡಿದ ಮಾತಿದು - ಎಂದು ಶ್ರದ್ಧಾಪುರಸ್ಸರವಾಗಿ ಇದನ್ನು ಕೇಳಿ ಆಚರಣೆಗೆ ತಂದುಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಕಾಮ್ಯಕರ್ಮಗಳ ಫಲಗಳನ್ನು ಹೇಳುವ ಅರ್ಥವಾದಗಳಿಗೆ ಮರುಳಾಗಬಾರದೆಂದು ಹಿಂದೆಯೇ (2-42) ಹೇಳಿರುತ್ತದೆ ; ಕಾಮ್ಯಕರ್ಮಗಳಿಗೆ ಆಯಾ ಫಲವಾಗುವದಿಲ್ಲವೆಂದೇನೂ ಈ ಉಪದೇಶದ ಅಭಿಪ್ರಾಯವಲ್ಲ; ಆದರೆ ಈ ಕ್ಷುದ್ರಫಲಗಳಿಗೆ ಮರುಳಾಗಿ ಉತ್ತಮವಾದ ಮೋಕ್ಷಫಲವನ್ನು ಕಳೆದುಕೊಳ್ಳಬಾರದು

- ಎಂದು ಇಲ್ಲಿ ಉತ್ತಮಾಧಿಕಾರಿಗಳಿಗೆ ತಿಳಿಸಿಕೊಟ್ಟಿರುತ್ತದೆ. "ಒಂಟಿ ಸೀನು ಸೀನದೆ ಇದ್ದರೆ ಮದುವೆಮಾಡಿಸಿದ ಫಲ" ಎಂಬಂತೆ ಕಾಮ್ಯಕರ್ಮಗಳನ್ನು ಬಿಡುವದು ಮೊದಲನೆಯ ಸಂನ್ಯಾಸವು, ಆ ಬಳಿಕ ಸರ್ವಕರ್ಮಗಳ ಫಲವನ್ನೂ ಬೇಡವೆಂದು ತ್ಯಜಿಸುವದು ಎರಡನೆಯ ಸಂನ್ಯಾಸ. ಸಂನ್ಯಾಸ, ತ್ಯಾಗ ಈ ಎರಡು ಶಬ್ದಗಳಿಗೂ ಬಿಡುವದು ಎಂದೇ ಅರ್ಥ. ಕಾಮ್ಯಕರ್ಮಗಳನ್ನು ಬಿಟ್ಟಮೇಲೂ ನಿತ್ಯನೈಮಿತ್ತಿಕಕರ್ಮಗಳಿಗೂ ಫಲವಿರುತ್ತದೆ ; ಆ ಫಲವನ್ನು ಕೋರದೆ ಇರುವದು ಅದಕ್ಕಿಂತಲೂ ಹೆಚ್ಚಿನ ಸಂನ್ಯಾಸವು.

ಈಗ ಸರ್ವಕರ್ಮಫಲತ್ಯಾಗರೂಪವಾದ ಸಂನ್ಯಾಸವನ್ನು ಹೊಗಳುವದಕ್ಕಾಗಿ ಭಗವಂತನು ಮುಂದಿನ ಮಾತನ್ನು ಆಡಿರುತ್ತಾನೆ. ಏಕೆಂದರೆ ಫಲತ್ಯಾಗಪೂರ್ವಕವಾಗಿ ಈಶ್ವರಾರ್ಚನಬುದ್ಧಿಯಿಂದ ಮಾಡಿದ ಕರ್ಮವು ಕರ್ಮಯೋಗವೆನಿಸುತ್ತದೆ ; ಆ ಕರ್ಮಯೋಗವೇ ಜ್ಞಾನಕ್ಕೆ ಯೋಗ್ಯತೆಯನ್ನು ಕೊಡುತ್ತದೆ.

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ |**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ || 18.3**

ಕರ್ಮವೆಲ್ಲವೂ ದೋಷಯುಕ್ತವಾದದ್ದೇ. ವೈದಿಕಕರ್ಮವು ಕೂಡ ಹಿಂಸಾದಿಗಳಿಂದ ಕೂಡಿರುತ್ತದೆ. ಆದರೆ ಅದರಲ್ಲಿರುವ ದೋಷವು ಲೌಕಿಕಹಿಂಸಾದಿಗಳಷ್ಟು ಇರುವದಿಲ್ಲ ; ಅದರಿಂದ ಸ್ವರ್ಗಾದಿಫಲಗಳೂ ಸಿಕ್ಕುತ್ತವೆ. ನಿಜವಾದ ಜ್ಞಾನವು ಬೇಕೆನ್ನುವ ಮುಮುಕ್ಷುಗಳು ಮಾತ್ರ ಆ ಕರ್ಮಗಳನ್ನು ಬಿಡಬೇಕು - ಎಂಬುದು ಸಾಂಖ್ಯಾದಿದೃಷ್ಟಿಯುಳ್ಳವರ ಮತ. ಮೀಮಾಂಸಕಾದಿಗಳ ಅನುಯಾಯಿಗಳು ಮತ್ತೆ ಕೆಲವರು ಯಜ್ಞದಾನತಪೋರೂಪವಾದ ಕರ್ಮವನ್ನು ಎಂದಿಗೂ ಬಿಡಬಾರದು. ಅವುಗಳನ್ನು ಬದುಕಿರುವವರೆಗೆ ಮಾಡಬೇಕು ; ಅಥವಾ ಮುಪ್ಪಿನಿಂದ ಅಶಕ್ತನಾಗುವವರೆಗೂ ಮಾಡಬೇಕು ಎಂದು ಹೇಳುತ್ತಾರೆ. ನಾನು ನೋಡಿರುವ ಒಂದಾನೊಂದು ಧರ್ಮಸೂತ್ರದಲ್ಲಿ ಸಂನ್ಯಾಸಾಶ್ರಮವನ್ನು ಒಬ್ಬ ಅಸುರನು ನಿರ್ಮಾಣಮಾಡಿದನೆಂಬ ನಿಂದೆಯು ಕಂಡುಬರುತ್ತದೆ. ಅದರಲ್ಲಿ ಒಂದು ಕಡೆಯಲ್ಲಿ ಎಪ್ಪತ್ತನೆಯ ವರ್ಷದಲ್ಲಿ ಕರ್ಮಸಂನ್ಯಾಸವನ್ನು ಮಾಡಬಹುದೆಂದಿದೆ ; ವ್ಯಾಖ್ಯಾನಕಾರನು "ಪ್ರಾಯಶಃ ಎಪ್ಪತ್ತನೆಯ ವರ್ಷದಲ್ಲಿ ಭಾರ್ಯಾವಿಯೋಗವಾಗುವದರಿಂದ ಆಗ ಕರ್ಮತ್ಯಾಗವನ್ನು ಮಾಡಬಹುದು" ಎಂದು ಬರೆದಿರುತ್ತಾನೆ. ಇವೆಲ್ಲ ಕರ್ಮತ್ಯಾಗವನ್ನು ಮಾಡಬಾರದು ಎಂಬ ಅಭಿಪ್ರಾಯದಿಂದ ಬರೆದಿರುವ ವಾಕ್ಯಗಳು. ಅನಧಿಕಾರಿಗಳು ಮಾತ್ರ ಕರ್ಮಸಂನ್ಯಾಸವನ್ನು ಮಾಡಬಹುದು ಎಂಬುದು ಈ ವಾದಿಗಳ ಮತವು.

ಈ ಪ್ರಕಾರವಾಗಿ ಕರ್ಮವನ್ನು ಬಿಡಬೇಕು, ಬಿಡಬಾರದು - ಎಂಬ ಎರಡು ಪಕ್ಷಗಳು ಏರ್ಪಡುವವಷ್ಟೆ. ಇಲ್ಲಿ ಯಾವದು ಸರಿಯಾದದ್ದು ಎಂದರೆ ಭಗವಂತನು ಹೇಳುತ್ತಾನೆ. ತ್ಯಾಗವು ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯಾಗಿರುತ್ತದೆ. ಇವುಗಳನ್ನು

ಇಷ್ಟರಲ್ಲಿಯೇ ತಿಳಿಸಿಕೊಡಲಾಗುವದು. ಸಧ್ಯಕ್ಕೆ ಭಗವಂತನ ನಿರ್ಣಯವನ್ನು ಇಲ್ಲಿ ಹೇಳಲಾಗುತ್ತದೆ :

**ಯಜ್ಞೋ ದಾನಂ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ 18-5**

ಯಜ್ಞದಾನತಪೋರೂಪವಾದ ಕರ್ಮವನ್ನು ಎಂದಿಗೂ ಬಿಡಬಾರದು. ಏಕೆಂದರೆ ಅವುಗಳನ್ನು ಮಾಡುವದರಿಂದ ಚಿತ್ತವು ಪಾವನವಾಗುತ್ತದೆ. ಕರ್ಮವು ದೋಷಯುಕ್ತವೆಂದು ಬಿಟ್ಟರೆ ಅದರಿಂದಾಗುವ ಪ್ರಯೋಜನವನ್ನೇ ಕಳೆದುಕೊಂಡಂತೆ ಆಗುತ್ತದೆ. ಇದಲ್ಲದೆ ಶಾಸ್ತ್ರದಲ್ಲಿ ವಿಧಿಸಿರುವ ಕರ್ಮವು ಅಶುದ್ಧವೆಂದು ಕಲ್ಪಿಸುವದೂ ಅಯುಕ್ತ. ಏಕೆಂದರೆ ಶುದ್ಧಾಶುದ್ಧವಿಭಾಗವನ್ನು ನಮಗೆ ಶಾಸ್ತ್ರವೇ ಹೇಳಿಕೊಡಬೇಕಾಗಿದೆ. ಶಾಸ್ತ್ರವು ಮಾಡೆಂದು ಹೇಳಿರುವ ಕರ್ಮವು ಶುದ್ಧ, ಬಿಡೆಂದಿರುವದು ಅಶುದ್ಧ. ಶುದ್ಧಕರ್ಮದಿಂದಲೇ ನಮ್ಮ ಚಿತ್ತಕ್ಕೆ ಶುದ್ಧಿಯುಂಟಾಗುತ್ತದೆ. ಕರ್ಮವು ಹೊರಗೆ ಶರೀರದಿಂದ ಮಾಡತಕ್ಕದ್ದಾದರೂ ಅದರ ಫಲವು ಚಿತ್ತದಲ್ಲಿ ಕಾಣುವ ಅತೀಂದ್ರಿಯರೂಪವಾಗಿರುತ್ತದೆ. ಚಿತ್ತಶುದ್ಧಿಗೆ ಹೇತುವೆಂದು ಶಾಸ್ತ್ರವು ತಿಳಿಸಿದಮೇಲೂ ಅದು ಅಶುದ್ಧವೆಂದು ನಾವು ಹೇಗೆತಾನೆ ಹೇಳಬಹುದು ?

ಶಾಸ್ತ್ರವನ್ನು ಕೈಬಿಟ್ಟು ಕರ್ಮಾಚರಣೆಗೂ, ಕರ್ಮತ್ಯಾಗಕ್ಕೂ ದೃಷ್ಟ ಪ್ರಯೋಜನವನ್ನು ಕಲ್ಪಿಸಿಕೊಳ್ಳುವವರು ತಮ್ಮ ಶ್ರೇಯಸ್ಸಿಗೆ ತಾವೇ ಹಾಸುಗಲ್ಲು ಎಳೆದುಕೊಂಡವರಾಗುತ್ತಾರೆ. ಏಕೆಂದರೆ ಅತೀಂದ್ರಿಯವಾದದ್ದನ್ನು ದೃಷ್ಟವಸ್ತುವಿಷಯವಾದ ತರ್ಕವು ಎಂದಿಗೂ ತಿಳಿಸಿಕೊಡಲಾರದು. ಕೆಲವು ದಿನಗಳ ಹಿಂದೆ ಕುಂಭಮೇಳವಾಯಿತಷ್ಟೆ. ಆ ಸಂದರ್ಭದಲ್ಲಿ ಒಬ್ಬ ಯುವಕನು ಹೃಷಿಕೇಶದಲ್ಲಿರುವ ಶ್ರೀಶಿವಾನಂದರ ಬಳಿಗೆ ಬಂದು "ದಯವಿಟ್ಟು ನನಗೆ ಒಂದು ಕಾವಿಯ ವಸ್ತ್ರವನ್ನು ಕೊಡಿಸಿರಿ" ಎಂದು ಕೇಳಿದನಂತೆ. ಆಗ ಸ್ವಾಮಿಗಳು "ನಿನಗೇತಕ್ಕೆ ಕಾವಿಯ ವಸ್ತ್ರ?" ಎಂದು ಕೇಳಿದರು. ಉತ್ತರ ದೇಶದಲ್ಲಿ ಕಾವಿಯ ಬಟ್ಟೆಯವರನ್ನು ಬಹಳ ಪೂಜ್ಯಬುದ್ಧಿಯಿಂದ ಕಾಣುತ್ತಾರಂತೆ. "ಸಂನ್ಯಾಸಿಗಳಿಗೆ ಆಹಾರವು ಸುಲಭವಾಗಿ ದೊರಕುತ್ತದೆ; ಆದ್ದರಿಂದ ನನಗೊಂದು ಕಾವಿಯನ್ನು ಕೊಡಿಸಿರಿ" ಎಂದು ಆ ತರುಣನು ಸರಳಬುದ್ಧಿಯಿಂದ ನುಡಿದನು. ಆಗ ಸ್ವಾಮಿಗಳು ನಕ್ಕು "ನೀನು ಯೋಚಿಸಬೇಡ ; ನಮ್ಮ ಆಶ್ರಮದಲ್ಲಿಯೇ ಇರು. ನಿನಗೆ ಕಾವಿಯಿಲ್ಲದಿದ್ದರೂ ಆಹಾರವನ್ನು ಒದಗಿಸುತ್ತೇವೆ" ಎಂದರಂತೆ! ಸಂನ್ಯಾಸಿಯು ಕರ್ಮತ್ಯಾಗವನ್ನು ಮಾಡುವದೂ ಕಾವಿಯ ಬಟ್ಟೆಯನ್ನು ಉಟ್ಟುಕೊಳ್ಳುವದೂ ಆಹಾರಕ್ಕೆ ಎಂದು ಆ ಯುವಕನ ಅಭಿಪ್ರಾಯ ! ಹೀಗೆ ಕರ್ಮಗಳನ್ನು ಬಿಡುವದೇನೂ ತ್ಯಾಗವಲ್ಲ:

**ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥ 18-6**

ಈ ಕರ್ಮಗಳನ್ನು ಮಾಡಬೇಕು; ಆದರೆ ನಾನು ಮಾಡುತ್ತೇನೆಂಬ ಸಂಗವಾಗಲಿ ಇವುಗಳ ಫಲಗಳು ನನಗೆ ಬೇಕೆಂಬ ಅಭಿಸಂಧಿಯಾಗಲಿ ಇರಬಾರದು. ಸಂಗಫಲಗಳ ತ್ಯಾಗವೇ ನಿಜವಾದ ತ್ಯಾಗ ಎಂಬುದು ಭಗವಂತನ ಮತವು. ಕಾಮ್ಯಕರ್ಮಗಳ ತ್ಯಾಗ, ನಿತ್ಯನೈಮಿತ್ತಿಕ ಕರ್ಮಗಳ ಫಲತ್ಯಾಗ ಈ ಎರಡು ಬಗೆಯ ತ್ಯಾಗಗಳಿಂದಲೇ ನಿಜವಾದ ಸರ್ವಕರ್ಮತ್ಯಾಗಕ್ಕೆ ಅಧಿಕಾರಿಯಾಗುತ್ತಾನೆ. ಆದ್ದರಿಂದ ಈ ಕರ್ಮಗಳನ್ನು ಮುಮುಕ್ಷುವಾದವನು ಮಾಡಲೇಬೇಕು ಎಂಬುದು ಭಗವಂತನ ಮತವು. ಸಂಗತ್ಯಾಗ ಫಲತ್ಯಾಗ ಇವುಗಳನ್ನೇ ಮಾಡಲಾರದವನು ಎಂದಿಗೂ ಸರ್ವಕರ್ಮಸಂನ್ಯಾಸ ರೂಪವಾದ ಪೂರ್ಣತ್ಯಾಗಕ್ಕೆ ಅರ್ಹನಾಗಲಾರನು.

## ೧೭೩. ಸಂಗತ್ಯಾಗಫಲತ್ಯಾಗ ರೂಪವಾದ ಸಾತ್ತ್ವಿಕತ್ಯಾಗ 18 - (7-10)

**(18-6-50)**

ಕರ್ಮವನ್ನು ಮಾಡಬಾರದು, ಅದನ್ನು ಬಿಟ್ಟುಬಿಡಬೇಕು - ಎಂದು ಕೆಲವರು; ಅದನ್ನು ಬಿಡತಕ್ಕದ್ದಲ್ಲವೆಂದು ಕೆಲವರು- ಹೀಗೆ ವಿವಾದವನ್ನು ಮಾಡುತ್ತಿರುತ್ತಾರೆ, ಇಲ್ಲಿ ನನ್ನ ನಿಶ್ಚಯವನ್ನು ಹೇಳುತ್ತೇನೆ- ಎಂದು ಭಗವಂತನು ಸಂಗತ್ಯಾಗಪೂರ್ವಕವಾಗಿ ಮತ್ತು ಫಲತ್ಯಾಗಪೂರ್ವಕವಾಗಿ ಯಜ್ಞಾದಿಕರ್ಮಗಳನ್ನು ಮಾಡಬೇಕು ಎಂದು ತನ್ನ ಅಭಿಪ್ರಾಯವನ್ನು ಹೇಳಿರುತ್ತಾನೆ. ಆದರೆ ಕ್ಲೇಶಕರವಾದದ್ದನ್ನು ಯಾರೂ ಸುಮ್ಮನೆ ಮಾಡಲಿಚ್ಛಿಸುವದಿಲ್ಲ. ಫಲವಿಲ್ಲದೆ ಯಾರು ತಾನೆ ಕರ್ಮವನ್ನು ಮಾಡಿಯಾರು?- ಎಂಬ ಉದ್ದೇಶದಿಂದಲೇ ಪ್ರಶ್ನೆಯು ಹುಟ್ಟಿರುತ್ತದೆ. ಜ್ಞಾನಿಗಳಲ್ಲಿ ಕೆಲವರು ಕರ್ಮವೆಲ್ಲವೂ ದೋಷಯುಕ್ತವೇ, ಆದ್ದರಿಂದ ಅದನ್ನು ಬಿಟ್ಟುಬಿಡಬೇಕು - ಎನ್ನುತ್ತಾರೆ; ಇನ್ನು ಕೆಲವರು ದೋಷವಿದ್ದರೂ ಅದನ್ನು ಮಾಡಬೇಕು ಎನ್ನುತ್ತಾರೆ. ಮನುಷ್ಯನು ಒಂದಲ್ಲ ಒಂದು ಕರ್ಮವನ್ನು ಮಾಡಿಯೇತೀರುತ್ತಾನೆ. ಆದ್ದರಿಂದ ಕರ್ಮವನ್ನು ಬಿಡುವದು ಆಗುವಹಾಗಿಲ್ಲ. ದೋಷಯುಕ್ತವಾದ ಕರ್ಮವನ್ನು ಸುಮ್ಮನೆ ಮಾಡುತ್ತಿರುವದೂ ಯಾರಿಗೂ ಇಷ್ಟವಲ್ಲ. ಈ ಎರಡು ಪಕ್ಷಗಳಲ್ಲಿ ಯಾವದು ಸರಿ?- ಎಂಬ ಸಂಶಯವು ಎದ್ದುಕೊಳ್ಳುತ್ತದೆ. ಕರ್ಮವನ್ನು ಮಾಡುವವರನ್ನು ಕರ್ಮತ್ಯಾಗ ಪಕ್ಷದವರು ಹಾಸ್ಯಮಾಡುತ್ತಾರೆ ; ಕರ್ಮತ್ಯಾಗಿಗಳನ್ನು ಕರ್ಮಿಗಳು ಹಾಸ್ಯಮಾಡುತ್ತಾರೆ. ಹಿಂದೆ ಒಂದಾನೊಂದು ಕಾಲದಲ್ಲಿ ಕರ್ಮಿಗಳೆಲ್ಲ ಅಜ್ಞರು ಎಂದು ನಿಂದೆಮಾಡುತ್ತಿದ್ದರು ; ಆಗ್ಗೆ ನಟನೆಯ ತ್ಯಾಗಿಗಳು ಹೆಚ್ಚಿದರು. ಈಗ್ಗೆ ಜೀವನವೆಂದರೇ ಕರ್ಮ, ಯಾವದಾದರೊಂದು ಕೆಲಸವನ್ನು ಮಾಡುತ್ತಲೇ ಇರಬೇಕು; ಕೆಲಸವನ್ನು ಬಿಡುವವರು ಆಲಸರು ಎಂದು ತ್ಯಾಗಿಗಳು ನಿಂದೆಮಾಡುವ ಕಾಲವು ಬಂದೊದಗಿದೆ. ಈಗ ಕರ್ಮವನ್ನು ಮಾಡುತ್ತೇವೆಂದು ನಟಿಸುವವರು ಹೆಚ್ಚಾಗಿರುತ್ತಾರೆ. ಸಮ್ಮನೆ ಸುಮ್ಮನೆ ವೃತ್ತ ಪತ್ರಿಕೆಗಳಲ್ಲಿ ತಮ್ಮ ಹೆಸರನ್ನು ಹಾಕಿಸಿಕೊಂಡು

ತಾವು ಸದಾ ಪರೋಪಕಾರವೇ ಮುಂತಾದ ಕರ್ಮಗಳಲ್ಲಿ ನಿರತರಾಗಿರುವೆವೆಂಬ ಕೀರ್ತಿಯನ್ನು ಗಳಿಸುವದಕ್ಕೆ ಪ್ರಯತ್ನಿಸುವವರ ಸಂಖ್ಯೆ ಹೆಚ್ಚುತ್ತಿದೆ. ಹೀಗೆ ಕರ್ಮತ್ಯಾಗಿಗಳನ್ನು ಅನುಕರಣಮಾಡುವ ಅಲಸರೂ ಇರುತ್ತಾರೆ, ಕರ್ಮನಿರತರನ್ನು ಅನುಕರಣಮಾಡುವ ನಟನೆಯ ಕರ್ಮಿಗಳೂ ಇರುತ್ತಾರೆ. ಭಗವಂತನು ಈ ಎರಡು ಪಕ್ಷಗಳ ದೋಷವನ್ನೂ ತೆಗೆದುಹಾಕುವದಕ್ಕಾಗಿ ಸಂಗವನ್ನೂ ಫಲವನ್ನೂ ತ್ಯಜಿಸಿ ಕರ್ಮವನ್ನು ಮಾಡಬೇಕೆಂಬುದೇ ತನ್ನ ಮತವೆಂದು ನಿರ್ಣಯಿಸಿರುತ್ತಾನೆ.

ಸಾಮಾನ್ಯರು ಯಾವಾಗಲೂ ಯಾವದಾದರೊಂದು ಫಲಕ್ಕಾಗಿಯೇ ಕರ್ಮವನ್ನು ಮಾಡುತ್ತಾರೆ. ಅದು ಅವರಕರ್ಮ, ಕೀಳುಕರ್ಮ ಎಂಬುದು ಗೀತೆಯ ಸಿದ್ಧಾಂತವು. ಮುಮುಕ್ಷುವಾದವನು ಫಲಾರ್ಥವಾಗಿ ಕರ್ಮವನ್ನು ಮಾಡಬಾರದು. ಸೋಮಾರಿಗಳಿಗಿಂತ ಫಲಾಪೇಕ್ಷಿಗಳಾಗಿ ಕರ್ಮವನ್ನು ಮಾಡುವವರು ಅವರಿಗಿಂತ ಹೆಚ್ಚಿದ ಅಂತಸ್ತಿನವರು. ಸಂಗವನ್ನೂ ಫಲವನ್ನೂ ಬಿಟ್ಟು ಕರ್ಮವನ್ನು ಮಾಡುವದರಲ್ಲಿ ಒಂದು ವಿಲಕ್ಷಣವಾದ ಆನಂದವಿದೆ. ಆ ಆನಂದಕ್ಕಾಗಿಯೇ ಕರ್ಮಯೋಗಿಗಳು ಕರ್ಮದ ಕ್ಷುದ್ರಫಲವನ್ನು ತ್ಯಜಿಸುತ್ತಾರೆ, ಅದರ ಸಂಗವನ್ನೂ ಬಿಡುತ್ತಾರೆ. ಕರ್ಮದ ತತ್ತ್ವವೇ ಇದು. ಕರ್ಮವನ್ನು ಹೀಗೆ ಮಾಡುವದರಿಂದ ಜ್ಞಾನನಿಷ್ಠೆಗೆ ಪೂರ್ವಪೀಠಿಕೆಯಾದಂತಾಗುತ್ತದೆ. ಈ ಕರ್ಮವನ್ನೇ ನಾವು ಗೀತೆಯಿಂದ ಕಲಿತುಕೊಳ್ಳಬೇಕಾಗಿರುವದು.

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥** **18-7**

ನಿತ್ಯಕರ್ಮವನ್ನು ಎಂದಿಗೂ ಬಿಡಬಾರದು. ಅದನ್ನು ಮೋಹದಿಂದ ಬಿಟ್ಟರೆ ಅದು ತಾಮಸ ತ್ಯಾಗವಾಗುತ್ತದೆ. ಲೌಕಿಕ ಕರ್ಮಗಳನ್ನು ಮಾಡುವಾಗಲೂ ನಾವು ತಿಳಿವಳಿಕೆಯಿಲ್ಲದೆ ಬಿಡುವದುಂಟು. ಅದು ತಾಮಸತ್ಯಾಗವಾಗುವದು. ಹೀಗೆಯೇ ವೈದಿಕಕರ್ಮಗಳನ್ನು ಮುಖ್ಯಕಾಲದಲ್ಲಿ ಮಾಡಬೇಕು ; ಅದಾಗದಿದ್ದರೆ ಗೌಣಕಾಲದಲ್ಲಾದರೂ ಮಾಡಬೇಕು. ಅಕಾಲದಲ್ಲಾದರೂ ಪ್ರಾಯಶ್ಚಿತ್ತ ಪೂರ್ವಕವಾಗಿ ಮಾಡಿದರೆ ಒಳ್ಳೆಯದೇ ಆಗುತ್ತದೆ. ಆದರೆ ಈ ಕರ್ಮವನ್ನು ಯಾರು ಮಾಡಿಯಾರು ?- ಎಂದು ಬಿಟ್ಟುಬಿಡುವದು ತಾಮಸತ್ಯಾಗವು. ತಮೋಗುಣವು ಹೆಚ್ಚಿದಾಗ ಕರ್ಮವನ್ನು ಬಿಟ್ಟುಬಿಡಬೇಕೆಂಬ ಬುದ್ಧಿಯುಂಟಾಗುವದು ; ಆಗ ರಜೋಗುಣವನ್ನು ಅವಲಂಬಿಸಿ ಕರ್ಮವನ್ನು ಮಾಡುವದನ್ನು ಅಭ್ಯಾಸಮಾಡಬೇಕು. ವಿಚಾರವಿಲ್ಲದೆ ಮೋಹದಿಂದ ಬಿಡುವದು ತಾಮಸತ್ಯಾಗವು ; ಆದರೆ --

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥** **18-8**

ರಾಜಸಬುದ್ಧಿಯುಂಟಾದಾಗ "ಕರ್ಮವನ್ನು ಮಾಡುವದು ಕಷ್ಟ, ಆದ್ದರಿಂದ ಶರೀರಕ್ಲೇಶವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಅದನ್ನು ಬಿಟ್ಟುಬಿಡೋಣ" ಎಂದು ಬುದ್ಧಿಯಾಗುತ್ತದೆ. ಇದು ತ್ಯಾಗವೇ ಆದರೂ ರಾಜಸತ್ಯಾಗವು. ಹಾಗಾದರೆ ಸಾತ್ತ್ವಿಕ ತ್ಯಾಗವು ಯಾವದು ? ಎಂದರೆ ;

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಙ್ಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ 18-9**

ನಿತ್ಯಕರ್ಮವನ್ನು ಮಾಡತಕ್ಕದ್ದೇ ಎಂಬ ಬುದ್ದಿಯಿಂದ ಸಂಗವನ್ನೂ ಫಲವನ್ನೂ ಬಿಟ್ಟು ಮಾಡುವದೇ ಸಾತ್ತ್ವಿಕತ್ಯಾಗವು. ಕರ್ಮವನ್ನು ಮಾಡುವದನ್ನು ತ್ಯಾಗ ಎಂದಿರುವದು ಹೇಗೆ? ಎಂದರೆ ಇದರಲ್ಲಿ ಸಂಗತ್ಯಾಗ, ಫಲತ್ಯಾಗ -ಎಂಬ ತ್ಯಾಗವು ಇರುವದರಿಂದ. ನಿತ್ಯಕರ್ಮವನ್ನು ಸಂಗಫಲತ್ಯಾಗಪೂರ್ವಕವಾಗಿ ಮಾಡುತ್ತಿರುವವನಿಗೆ ಆತ್ಮಜ್ಞಾನಕ್ಕೆ ತಕ್ಕ ಯೋಗ್ಯತೆಯುಂಟಾಗುತ್ತದೆ. ಆದ್ದರಿಂದ ಕರ್ಮಾನುಷ್ಠಾನವನ್ನು ಇಲ್ಲಿ ಹೊಗಳುವದಕ್ಕಾಗಿ ಅದನ್ನು ಸಾತ್ತ್ವಿಕತ್ಯಾಗವೆಂದು ಹೊಗಳಿರುತ್ತದೆ. ಇಲ್ಲಿ ನಿಜವಾಗಿ ತ್ಯಾಗವನ್ನೇ ಹೊಗಳಿರುವದು -ಏಕೆಂದರೆ ಸಂಗಫಲಗಳನ್ನು ತ್ಯಜಿಸಿದರೆ ಕರ್ಮವನ್ನು ಮಾಡಿದರೂ ಬಿಟ್ಟಂತೆಯೇ. ದೊಡ್ಡವರಿಗೆ ಕರ್ಮದಲ್ಲಿ ತೊಡಿಗಿರುವದೆಂಬುದೇ ಒಂದು ಆನಂದ; ಕೆಲಸದಲ್ಲಿ ಇರುವದೇ ಅವರ ಜೀವನ, ಅದೇ ಅವರ ಉಸಿರು. ಆದ್ದರಿಂದಲೇ ಭಗವಂತನು ನಾನು ಕರ್ಮದಲ್ಲಿದ್ದುಕೊಂಡೇ ಇರುತ್ತೇನೆ - ಎಂದಿರುತ್ತಾನೆ. ನಮಗೆ ಕೆಲಸ ಮಾಡಬೇಕಾಗಿದ್ದರೆ ಒಂದು ದೊಡ್ಡ ಬಂಡೆಯು ಅಡ್ಡಲಾದಂತೆ ಕಾಣುತ್ತದೆ. ದೊಡ್ಡವರಿಗೆ ಕರ್ಮದಲ್ಲಿಯೇ ಆನಂದವಿರುತ್ತದೆ; ಅವರು ಊಟ, ತಿಂಡಿ, ನಿದ್ರೆ ಯಾವದೂ ಬೇಕಿಲ್ಲದೆ ಆನಂದದಿಂದ ಕೆಲಸಮಾಡುತ್ತಿರುತ್ತಾರೆ. ಅವರ ದೃಷ್ಟಿಯಿಂದ ಅದು ಕೆಲಸವೇ ಅಲ್ಲ; ಏಕೆಂದರೆ ಅದು ಅವರಿಗೆ ಭಾರವಾಗಿರುವದಿಲ್ಲ. ಸಂಗವನ್ನೂ ಫಲವನ್ನೂ ಬಿಟ್ಟು, ಕೆಲಸಮಾಡುತ್ತಿರುವದೇ ಮನುಷ್ಯನಿಗೆ ಸ್ವಾಸ್ಥ್ಯವು. ಈ ಸ್ವಾಸ್ಥ್ಯವು ಕರ್ಮಯೋಗದಿಂದಲೇ ನಮ್ಮಗಳಿಗೆ ಬರಬೇಕಾಗಿದೆ. ಇದೇ ಜೀವನದ ರಹಸ್ಯ, ಇದೇ ಜೀವನವೆಂಬ ಕುಶಲವಿದ್ಯೆ. ಅಜ್ಞತೆಯಿಂದ ನಾನು ಕರ್ಮವನ್ನು ತಪ್ಪಿಸಿಕೊಳ್ಳಬೇಕೆಂದೂ ಹಾಗಾದರೆ ಹಾಯಾಗಿರಬಹುದೆಂದೂ ಎನಿಸುತ್ತದೆ. ಬಹುಜನರಿಗೆ ಕೆಲಸಮಾಡಲು ಇಚ್ಛೆಯಿರುವದಿಲ್ಲ. ಒಬ್ಬ ಹೆಣ್ಣು ಮಗಳು ಕೆಲಸಮಾಡಿ ಸಾಕಾಗಿದ್ದಳಂತೆ. ತಾನು ಸತ್ತರೆ ಗೋರಿಯ ಕಲ್ಲಿನ ಮೇಲೆ ಒಂದು ವಾಕ್ಯವನ್ನು ಬರೆಯಬೇಕೆಂದು ಮೊದಲೇ ತಾನು ಅದನ್ನು ಬರೆಸಿಟ್ಟದ್ದಳಂತೆ : "ಈಗ ನನಗೆ ಕೆಲಸದಿಂದ ಮುಕ್ತಿಯಾಯಿತು ! ಇನ್ನು ಯಾರೂ ನನ್ನನ್ನು ಕೆಲಸಮಾಡೆನ್ನುವವರಿಲ್ಲ" ಎಂಬುದೇ ಆ ವಾಕ್ಯ ! ಕರ್ಮಯೋಗದ ರಹಸ್ಯವನ್ನು ತಿಳಿದವರು ಇದನ್ನು ಕೇಳಿ ನಗುವರು. ಕರ್ಮದ ಆನಂದವೇನೆಂಬುದನ್ನು ಅಜ್ಞರೇನು ಬಲ್ಲರು? ಗೀತೆಯಲ್ಲಿ ಕರ್ಮಯೋಗವೊಂದನ್ನೇ ಬರೆದಿದ್ದರೂ ಸಾಕಾಗಿತ್ತು; ಅಷ್ಟು ದೊಡ್ಡ ತತ್ತ್ವವು ಅದು.

ಕರ್ಮಯೋಗದಲ್ಲಿ ನಿಷ್ಣಾತನಾದವನು ಹೇಗೆ ಕೆಲಸವನ್ನು ಮಾಡುತ್ತಾನೆ ? ಕರ್ಮಯೋಗದ ಫಲವು ದೊರೆತರೆ ಅಂಥ ಜ್ಞಾನಿಯು ಹೇಗೆ ವ್ಯವಹರಿಸುತ್ತಾನೆ ?

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಚ್ಛಿನ್ನಸಂಶಯಃ ॥ 18-10**

ಕರ್ಮಯೋಗಿಯು ಕೆಟ್ಟಕರ್ಮವನ್ನು ದ್ವೇಷಿಸುವದಿಲ್ಲ. ಒಳ್ಳೆಯ ಕರ್ಮದಲ್ಲಿ ಆಸಕ್ತನಾಗುವದೂ ಇಲ್ಲ. ಕರ್ಮದ ಮರ್ಮವು ಸಿಕ್ಕದೆ ಇರುವವರು ತೊಂದರೆಗೆ ಒಳಗಾಗುತ್ತಾರೆ; ಆದರೆ ಮರ್ಮವನ್ನು ತಿಳಿದವರಿಗೆ ಯಾವ ಕಷ್ಟವೂ ಬಂದೊದಗುವಹಾಗಿಲ್ಲ. ಕರ್ಮತ್ಯಾಗಿಗೆ ಆ ಮರ್ಮವು ಸಿಕ್ಕಿರುತ್ತದೆ. ಅವನು ಕರ್ಮದಲ್ಲಿ ಸಂಗವನ್ನಾಗಲಿ ಫಲದಲ್ಲಿ ಇಚ್ಛೆಯನ್ನಾಗಲಿ ಇಟ್ಟಿರುವದಿಲ್ಲ. ಆದ್ದರಿಂದ ಅವನಿಗೆ ಕಾಮ್ಯಕರ್ಮದಿಂದ ಸಂಸಾರಫಲವಾಗುವದೆಂಬ ಅಂಜಿಕೆ ಇರುವದಿಲ್ಲ; ನಿತ್ಯಕರ್ಮವೇ ಮೋಕ್ಷಹೇತುವೆಂಬ ಅಭಿಮಾನವೂ ಇರುವದಿಲ್ಲ. ಅವನ ದೃಷ್ಟಿಯಲ್ಲಿ ಕೆಲಸವು ಕೆಟ್ಟದ್ದು ಅಥವಾ ಒಳ್ಳೆಯದು ಎಂಬ ವಿಂಗಡವೇ ಇರುವದಿಲ್ಲ. ಕೆಲಸವು ಸ್ವತಃ ಕೀಳೂ ಅಲ್ಲ, ಮೇಲೂ ಅಲ್ಲ; ನಾವು ಅದನ್ನು ಯಾವ ಪ್ರಕಾರದಿಂದ ಮಾಡುವೆವೋ ಆ ಪ್ರಕಾರದಿಂದ ಅದು ಒಳ್ಳೆಯದು ಅಥವಾ ಕೆಟ್ಟದ್ದು ಆಗುತ್ತದೆ. ಒಬ್ಬ ಲಾಯರು ಜಡ್ಜಿಯನ್ನು ಒಂದು ದಿನ "ಸ್ವಾಮಿ, ತಾವು ಹಿಂದೆ ದೋಣಿಬಾರಿಸುವವರಾಗಿದ್ದಿರಾ ?" ಎಂದು ಹಾಸ್ಯ ಮಾಡಿದನಂತೆ, ಅದಕ್ಕೆ ಜಡ್ಜಿಯು `ಹೌದು, ಆಗ ನಾನು ಎಷ್ಟು ಚೆನ್ನಾಗಿ ದೋಣಿಬಾರಿಸುತ್ತಿದ್ದೆ, ನಿನಗೆ ತಿಳಿದಿದೆಯೆ ?' ಎಂದು ಕೇಳಿದನಂತೆ.

ಕರ್ಮಯೋಗಿಯಾದವನು ಕರ್ಮಫಲತ್ಯಾಗವನ್ನೂ ಕರ್ಮಸಂಗತ್ಯಾಗವನ್ನೂ ಮಾಡಿರುತ್ತಾನೆಂಬುದಕ್ಕೆ ಕಾರಣವೇನು ? ಅವನ ಅಂತಃಕರಣದಲ್ಲಿ ಸತ್ತ್ವವು ತುಂಬಿಕೊಂಡಿರುವದೇ ಕಾರಣ. ಅವನು ಮಹಾವಿವೇಕಿಯಾಗಿರುತ್ತಾನೆ, ಅವನಿಗೆ "ಈ ಕರ್ಮದಿಂದ ನನಗೆ ಸದ್ಗತಿಯಾದೀತೊ, ಆಗದೊ ? ಎಂಬ ಸಂಶಯವು ಎಂದಿಗೂ ಇರುವದಿಲ್ಲ. ಮಹಾಜನರು ತಿರುಗುವ ದೊಡ್ಡ ರಸ್ತೆಯಲ್ಲಿ ಪ್ರಯಾಣಮಾಡುತ್ತಿರುವವನಿಗೆ ಸೀಳುಹಾದಿಯಲ್ಲಿ ನಡೆಯುವವರಂತೆ ದಾರಿತಪ್ಪಿಯೇನೆಂಬ ಅಂಜಿಕೆಯು ಹೇಗೆ ಬರಬೇಕು? ಫಲಾಭಿಸಂಧಿಯೂ ಸಂಗವೂ ಇರುವವರನ್ನು ಕರ್ಮವು ಕುಗ್ಗಿಸುತ್ತದೆ. ಅವನು "ಇಷ್ಟು ಕಷ್ಟವಾದ ಕರ್ಮವನ್ನು ಹೇಗೆ ಮಾಡಲಿ!" ಎಂದು ಎದೆಗೆಟ್ಟು ಉಸ್ಸೆಂದು ಕುಳಿತುಕೊಳ್ಳುತ್ತಾನೆ. ವಿಷ್ಣುವು ಕೂಡ ಬಲಿಯುನ್ನು ಯಾಚಿಸುವಾಗ ವಾಮನನಾಗಬೇಕಾಯಿತಲ್ಲವೆ ? ಸಂಗಫಲೇಚ್ಛೆಗಳು ವಿಷದ ಮುಳ್ಳಿದ್ದಂತೆ. ಅದನ್ನು ತೆಗೆದುಹಾಕಿದರೆ ಕರ್ಮವು ನಮಗೆ ವಿಷ್ಣುವಿನ ಕೈಯಲ್ಲಿರುವ ಸುದರ್ಶನಚಕ್ರವಾಗುವದು. ಆಗ ಕರ್ಮದಿಂದ ಏನನ್ನು ಬೇಕಾದರೂ ಸಾಧಿಸಬಹುದು. ಕರ್ಮಯೋಗಿಯಾದವನು `ಭಗವಂತ, ಕಷ್ಟ ಬೇಕಾದಷ್ಟು ಬರಲಿ, ನಿನ್ನ ಕೃಪೆ ಮಾತ್ರ ಇರಲಿ!' ಎನ್ನುತ್ತಿರುವನು. ಅವನನ್ನು ಯಾವ ಕರ್ಮವೂ ಎದೆಗುಂದಿಸಲಾರದು.

ಶ್ರೀಕೃಷ್ಣಭಗವಂತನು ಸಂಗಫಲತ್ಯಾಗಗಳಿಂದ ಮಹಾಪುರುಷಾರ್ಥವುಂಟೆಂಬುದನ್ನು ತೋರಿಸಿಕೊಟ್ಟಿರುತ್ತಾನೆ. ನಾವುಗಳು ಅದನ್ನು ಮೊದಲು ಅನುಷ್ಠಾನಮಾಡಲು ಪ್ರಾರಂಭಿಸಬೇಕು. ಆಸೆಗೆ ದಾಸರಾದವರು ಎಲ್ಲಕ್ಕೂ ದಾಸರು; ಆದರೆ ಆಶೆಯು ಯಾರಿಗೆ ದಾಸನಾಗಿರುವದೋ ಅವರು ಎಲ್ಲರನ್ನೂ ಆಳುವವರಾಗುವರು. ಸಾರ್ವಜನಿಕವಾದ ದೊಡ್ಡ ಕೆಲಸಗಳನ್ನು ಮಾಡುವ ಒಂದೊಂದು ಸುಸಂದರ್ಭವು ದೈವಯೋಗದಿಂದ ನಮಗೆ ದೊರೆಯುತ್ತದೆ. ಆಗ ಈ ಕರ್ಮಯೋಗದ ಭಾವವನ್ನು ಮನಸ್ಸಿಗೆ ತಂದುಕೊಂಡು ಮುನ್ನುಗ್ಗಬೇಕು. ಮಹಾಪುರುಷರೆನಿಸಿಕೊಳ್ಳುವದಕ್ಕೆ ಅದೇ ಮಾರ್ಗವು.

ಕರ್ಮಯೋಗಿಯು ಸಂಗಫಲತ್ಯಾಗದಿಂದ ಯಾವಾಗ ಸತ್ತ್ವಸಮಾವಿಷ್ಟವಾದ ಆತ್ಮಾನಾತ್ಮವಿವೇಕವನ್ನು ಮಾಡಿಕೊಂಡು ಮೇಧಾವಿಯಾಗುವನೋ, ಪರಮಾರ್ಥಜ್ಞಾನವನ್ನು ಸಂಪಾದಿಸಿಕೊಳ್ಳುವನೋ, ಆಗ ಅವನಿಗೆ ಯಾವ ಸಂಶಯವೂ ಇರುವದಿಲ್ಲ. ಅವನು ಮಾಡುವ ಕರ್ಮಗಳೆಲ್ಲ ಅಕರ್ಮಗಳಾಗಿ ಬಿಡುವದರಿಂದ ಅವನಿಗೆ ನಿಜವಾಗಿಯೂ ಅಕುಶಲಕರ್ಮದಲ್ಲಿ ದ್ವೇಷವಾಗಲಿ ಕುಶಲಕರ್ಮದಲ್ಲಿ ಸಂಗವಾಗಲಿ ಇರುವದಕ್ಕೆ ಅವಕಾಶವೇ ಇರುವದಿಲ್ಲ. ಅವನ ದೃಷ್ಟಿಯಿಂದ ಎಲ್ಲವೂ ಪರಮಾರ್ಥವಾದ ನಿಷ್ಕ್ರಿಯಸ್ವರೂಪವಾದ ಬ್ರಹ್ಮವೇ ಆಗಿಬಿಟ್ಟಿರುತ್ತದೆ.



## ೧೭೪. ಕರ್ಮಫಲದಿಂದ ಬಿಡುಗಡೆ 18 - (11-12)

(25-6-50)

ಅರ್ಜುನನು ಭಗವಂತನನ್ನು ತ್ಯಾಗದ ರಹಸ್ಯವನ್ನು ಕೇಳಲು ಭಗವಂತನು ತ್ಯಾಗಕ್ಕೆ ಮೊದಲನೆಯ ಮೆಟ್ಟಿಲಾಗಿ ಕರ್ಮಯೋಗವನ್ನೇ ತ್ಯಾಗವೆಂದು ಹೊಗಳಿ ಉಪದೇಶಿಸಿದನು. ಸಂಗತ್ಯಾಗ, ಫಲತ್ಯಾಗ - ಇದೇ ಸಾತ್ತ್ವಿಕ ತ್ಯಾಗವು. ಕರ್ಮಯೋಗಿಯು ಸತ್ತ್ವಸಮಾವಿಷ್ಟನಾಗಿರುತ್ತಾನೆ. ಆದ್ದರಿಂದ ಮೆಲ್ಲಮೆಲ್ಲಗೆ ಕರ್ಮಬಂಧದಿಂದ ಬಿಡುಗಡೆಯನ್ನು ಹೊಂದಿಬಿಡುತ್ತಾನೆ. ಕರ್ಮವನ್ನು ಸಂಗತ್ಯಾಗಫಲತ್ಯಾಗಪೂರ್ವಕವಾಗಿ ಮಾಡುವದಕ್ಕೆ ಪ್ರಾರಂಭಿಸಿದವೆಂದರೆ ಕಾಯಿ ಹಣ್ಣಾಗುವಂತೆಯೂ, ಹಾಲು ಮೊಸರಾಗುವಂತೆಯೂ, ಜನರು ಯುವಕರಾಗಿದ್ದು ಮೆಲ್ಲಮೆಲ್ಲಗೆ ಮುದುಕರಾಗುವಂತೆಯೂ, ಮೆಲ್ಲಮೆಲ್ಲಗೆ ಸಾಧನದಲ್ಲಿ ರೂಪಾಂತರವಾಗಿ ಕರ್ಮತ್ಯಾಗವೇ ದಕ್ಕಿಬಿಡುತ್ತದೆ.

ಕರ್ಮದ ಫಲವು ಎಂದು ಹೇಗೆ ಆಗುವದೆಂಬುದನ್ನು ಹೇಳುವದಕ್ಕೆ ಬರುವದಿಲ್ಲ. ಸಾಧನೆಮಾಡುತ್ತಾ ಇದ್ದರೆ ಅದು ಮೆಲ್ಲಮೆಲ್ಲಗೆ ತನ್ನ ಫಲವನ್ನು ಕೊಟ್ಟುಬಿಡುತ್ತದೆ. ಒಬ್ಬ ಮಂಕನು ಯಾವಾಗಲೂ ಮಂಕನಾಗಿಯೇ ಇರುತ್ತಾನೆಂದು ಹೇಳುವದಕ್ಕೆ ಬರುವದಿಲ್ಲ. ನನ್ನ

ಮಿತ್ರರೊಬ್ಬರು ಗಣಿತ ಶಾಸ್ತ್ರದಲ್ಲಿ ಸಾಧಾರಣ ತಿಳಿವಳಿಕೆಯುಳ್ಳವರಾಗಿದ್ದರು. ಅವರು ನನ್ನಿಂದ ಅದರಲ್ಲಿ ಬಹಳ ವಿಷಯಗಳನ್ನು ತಿಳಿದುಕೊಂಡರು. ಒಂದು ಕಾರಣವಿಶೇಷದಿಂದ ನನಗೆ ಅವರ ಸಹವಾಸವು ಒಂದು ವರ್ಷ ಇಲ್ಲವಾಯಿತು. ಮತ್ತೆ ನಾನು ಅವರನ್ನು ನೋಡಿದಾಗ ಅವರ ಬುದ್ಧಿಯು ಗಣಿತಶಾಸ್ತ್ರದಲ್ಲಿ ವಿಶೇಷವಾದ ಕೌಶಲವನ್ನು ಹೊಂದಿತ್ತು; ಈಗ ಅವರೇ ಮತ್ತೊಬ್ಬರಿಗೆ ಆ ಶಾಸ್ತ್ರದ ಕೆಲವು ಭಾಗಗಳನ್ನು ಚೆನ್ನಾಗಿ ತಿಳಿಯಹೇಳಬಲ್ಲವರಾಗಿದ್ದರು ! ಇದರಂತೆ ಸಾತ್ತ್ವಿಕತ್ಯಾಗವನ್ನು ಅಭ್ಯಾಸಮಾಡುತ್ತಿರುವವರಿಗೆ ಅವರಿಗೂ ತಿಳಿಯದಂತೆ ಹೇಗೋ ಕರ್ಮದ ಹಂಗು ಬಿಟ್ಟುಹೋಗುತ್ತದೆ.

ಕರ್ಮದ ಫಲವನ್ನು ಬಿಡುವದು ಯಾರಿಂದಲೂ ಸಾಧ್ಯವಿಲ್ಲವೆಂಬುದಿಲ್ಲ ; ಆದರೆ ಸಾಮಾನ್ಯವಾಗಿ ದೇಹಾಭಿಮಾನವಿರುವವರಿಗೆ ಕರ್ಮತ್ಯಾಗವು ಶಕ್ಯವಲ್ಲ.

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ 18-11**

ಧರ್ಮಾಧರ್ಮಗಳ ಫಲವಾಗಿ ಮನುಷ್ಯನ ದೇಹವು ದೊರೆಯುತ್ತದೆ. ಆದ್ದರಿಂದ ದೇಹವನ್ನು ಧರಿಸಿರುವದು ಕರ್ಮದ ಫಲ ! ದೇಹಧಾರಣೆಮಾಡಿದವನು ಮತ್ತೆ ಕರ್ಮವನ್ನು ಮಾಡುತ್ತಲೂ ಅದರಿಂದ ಮತ್ತೊಂದು ದೇಹವನ್ನು ಪಡೆಯುತ್ತಲೂ ಇರುತ್ತಾನೆ. ಹೀಗೆ ಮತ್ತೆ ಮತ್ತೆ ದೇಹಧಾರಣೆಮಾಡುತ್ತಿದ್ದರೆ ಕರ್ಮಬಂಧದಿಂದ ಬಿಡುಗಡೆ ಹೇಗಾಗಬೇಕು ?- ಎಂದರೆ ಕರ್ಮದ ಫಲತ್ಯಾಗದಿಂದ. ಯಾವನು ಕರ್ಮದ ಫಲವನ್ನು ಬಿಡುತ್ತಾನೋ ಅವನು ಕರ್ಮತ್ಯಾಗಿಯೇ ಏಕೆಂದರೆ ಬರಿಯ ಕರ್ಮದಿಂದಲ್ಲ, ದೇಹರೂಪಫಲವನ್ನು ಪಡೆಯುವದು, ಫಲೇಚ್ಛೆಯಿಂದ. ಈ ಗುಟ್ಟನ್ನು ತಿಳಿದವನು ಕರ್ಮಸಂಗತ್ಯಾಗವನ್ನೂ ಕರ್ಮ ಫಲತ್ಯಾಗವನ್ನೂ ಮಾಡುತ್ತಿರಬೇಕು. ಇದರಿಂದ ಮೆಲ್ಲಮೆಲ್ಲಗೆ ದೇಹಾಭಿಮಾನವು ತಪ್ಪಿಹೋಗುವದು. ಸರಿಯಾಗಿ ನೋಡಿದರೆ "ದೇಹವೆಂಬುದೊಂದು ನನಗೆ ಇದೆ ಎಂಬುದೇ ಮಿಥ್ಯಾಭಿಮಾನವು" "ನಾನು ಅವಿನಾಶಿಯಾದ ಆತ್ಮನು" ಎಂಬ ಜ್ಞಾನವು ಯಾವನಿಗೆ ಆಗುವದೋ ಅವನಿಗೆ ಕರ್ಮವೂ ಇಲ್ಲ, ಕರ್ಮಫಲವಾದ ದೇಹವೂ ಇಲ್ಲ. ಅಂಥ ಜ್ಞಾನಿಯ ದೃಷ್ಟಿಯಲ್ಲಿ ಕರ್ಮವೂ ದೇಹವೂ ಎಲ್ಲವೂ ಕನಸಿನಲ್ಲಿ ಕಾಣುವ ದೇಹಕರ್ಮಗಳಂತೆ ಅನೃತವಾಗಿರುವವು.

ಆದರೂ ಯಾರು "ನಾನು ದೇಹಿಯು, ಈ ಕರ್ಮವನ್ನು ಮಾಡಿ ಈ ಫಲವನ್ನು ಪಡೆಯುತ್ತೇನೆ" ಎಂದು ದೇಹದಲ್ಲಿಯೂ ಕರ್ಮದಲ್ಲಿಯೂ ಸಕ್ತರಾಗಿರುವರೋ ಅವರಿಗೆ ಎಂದಿಗೂ ಕರ್ಮವನ್ನು ಬಿಡುವದು ಆಗುವದೇ ಇಲ್ಲ. ಅವರು ಸಂಗತ್ಯಾಗವನ್ನೂ ಫಲತ್ಯಾಗವನ್ನೂ ಮಾಡಿ ಕರ್ಮದಿಂದ ಬಿಡುಗಡೆಯನ್ನು ಹೊಂದುವದಕ್ಕೆ ಪ್ರಯತ್ನಿಸಬೇಕು. ಕರ್ಮವಿದೆ, ದೇಹವಿದೆ - ಎಂದು ನಂಬುವವರಿಗೆ ದೇಹವು ಯಾವಾಗಲೂ ಇದ್ದೇ ಇರುತ್ತದೆ. ಆದ್ದರಿಂದಲೇ ಜ್ಞಾನಿಗಳು ಹೇಳುವದೇನೆಂದರೆ ನಾವು ಯಾವಾಗ ದೇಹವುಂಟೆಂದು ನಂಬುವೆವೋ

ಆಗಲೇ ದೇಹಧಾರಣೆಮಾಡಿದಂತಾಗುವದು. ರಾತ್ರಿಯಲ್ಲಿ ಮಲಗಿನಿದ್ರಿಸುತ್ತಿರುವವನಿಗೆ ಥಟ್ಟನೆ ಸ್ವಪ್ನದ ದೇಹಾದಿಗಳು ಎದ್ದುಕೊಳ್ಳುವಂತೆ ಅಜ್ಞರಿಗೆ ಅಜ್ಞಾನ ನಿದ್ರೆಯಿಂದ ದೇಹಧಾರಣ, ಕರ್ಮ, ಕರ್ಮದ ಫಲ - ಮುಂತಾದ ಸ್ವಪ್ನದೃಶ್ಯಗಳು ಕಾಣಿಸಿಕೊಳ್ಳುವವು. ಅವುಗಳ ಹಿಡಿತದಿಂದ ಅಜ್ಞರು ಎಂದಿಗೂ ತಪ್ಪಿಸಿಕೊಳ್ಳಲಾರರು. ಅಜ್ಞಾನವು ಕತ್ತಲೆಯಲ್ಲಿ ಈಚಲ ಮರವನ್ನೇ ಕಳ್ಳನೆಂದು ಕಲ್ಪಿಸಿಕೊಳ್ಳುತ್ತದೆ ; ಒಂದು ಕಡೆಯಲ್ಲಿ Reward of 10,000 (10,000 ರೂಪಾಯಿಗಳ ಬಹುಮಾನ) ಎಂದು ಬರೆದಿದ್ದರೆ Beware of 10,000 (10,000 ದ ವಿಷಯಕ್ಕೆ ಎಚ್ಚರಿಕೆಯಿಂದಿರಿ) ! ಎಂದು ಓದಿಕೊಳ್ಳುತ್ತದೆ. ಕಣ್ಣಿಗೆ ಕಂಡದ್ದನ್ನೂ ಮನಸ್ಸಿಗೆ ಗೋಚರವಾದದ್ದನ್ನೂ ತನಗೆ ಬೇಕಾದಂತೆ ಇಲ್ಲದ್ದನ್ನು ಭರ್ತಿಹಾಕಿ ರೂಪಿಸಿಕೊಂಡು ಅದಕ್ಕೆ ಹಿಗ್ಗುತ್ತದೆ,ಅಥವಾ ಅಂಜುತ್ತದೆ. ಇದೆಲ್ಲ ಮನಸ್ಸಿನ ಸ್ವಭಾವವು. ಈ ತುಂಟಮನಸ್ಸೇ ನಮಗೆ ಶರೀರವಿದೆ, ಕರ್ಮವಿದೆ, ಕರ್ಮದ ಸಾಮಗ್ರಿಗಳಿವೆ ; ಹೆಂಡಿರುಮಕ್ಕಳು, ಹೊಲಮನೆ, ಹಣ, ಅಧಿಕಾರ, ಮುಂತಾದವುಗಳಿವೆ - ಎಂದು ಕಲ್ಪಿಸಿಕೊಡುತ್ತಿರುತ್ತದೆ.

ಮಿಥ್ಯಾದೇಹಾಭಿಮಾನದಿಂದಲೇ ದೇಹವೂ ಕರ್ಮವೂ ನಮಗೆ ಹೀಗೆ ಗಂಟುಬಿದ್ದಿದೆ, ನಿಜವಾಗಿ ನಮಗೆ ದೇಹತದ್ಧರ್ಮತತ್ಕರ್ಮಗಳ ಬಂಧವು ಇಲ್ಲವೇ ಇಲ್ಲ ಎಂಬುದಕ್ಕೆ ಯಾವ ಆಧಾರವಿದೆ ?- ಎಂದು ನೀವು ಕೇಳಬಹುದು. ಗಾಢನಿದ್ರೆಯ ಅನುಭವವನ್ನು ನೆನಪಿಗೆ ತಂದುಕೊಳ್ಳಿರಿ. ಆಗ ನಮಗೆ ದೇಹದ ಸಂಬಂಧವಿಲ್ಲ. ಅಲ್ಲಿ ಯಾವ ಕರ್ಮದ ಹಂಗೂ ನಮಗೆ ಇರುವದಿಲ್ಲ. ಹೀಗೆಯೇ ಮೂರ್ಛೆ, ಸಮಾಧಿ - ಮುಂತಾದ ದ್ವೈತರಹಿತವಾದ ಅವಸ್ಥೆಗಳಲ್ಲಿ ನಮಗೆ ಏತರ ಅಭಿಮಾನವೂ ಇರುವದಿಲ್ಲ. ಆಗ ಯಾವ ಕರ್ಮದ ಸಂಬಂಧವೂ ಇರುವದಿಲ್ಲ. ಇದರಂತೆ ವ್ಯವಹಾರದಲ್ಲಿ ಆಟ, ಚಿತ್ರ ಸೌಂದರ್ಯದ ನೋಟ, ಸಂಗೀತದ ಇಂಪು - ಮುಂತಾದವುಗಳಲ್ಲಿ ಮಗ್ನರಾಗಿರುವಾಗ, ಅಥವಾ ನಮಗೆ ಅತ್ಯಂತ ಪ್ರಿಯವಾದ ಯಾವದಾದರೊಂದು ವಿಷಯದ ಯೋಚನೆಯಲ್ಲಿ ವ್ಯಾಸಕ್ತರಾಗಿರುವಾಗ ನಮಗೆ ಯಾವ ದೇಹದ ಅಭಿಮಾನವೂ ಇರುವದಿಲ್ಲ. ಆಗ ಕರ್ಮದ ಅಥವಾ ಕರ್ಮಫಲದ ಸಂಬಂಧವೂ ಇರುವದಿಲ್ಲ. ಮತ್ತೊಬ್ಬರು ಯಾರಾದರೂ ನಮಗೆ ಜ್ಞಾಪಿಸಿದರೆ ಮಾತ್ರವೇ ದೇಹದ ಕಡೆಗೆ ಲಕ್ಷ್ಯವಿರುತ್ತದೆ. ಅಲ್ಲವೆ ? ಇದರಿಂದ ಏನು ಸಿದ್ಧವಾಯಿತೆಂದರೆ ದೇಹಾಭಿಮಾನಕ್ಕೂ ಕರ್ಮಕ್ಕೂ ಗಂಟು ; ದೇಹಾಭಿಮಾನವು ಕರ್ಮಕ್ಕೆ ಪ್ರಾರಂಭಿಕವೇಗ (Initial Velocity) ವಾಗಿರುತ್ತದೆ. ಬ್ರಹ್ಮಾಂಡವೆಲ್ಲ ಈ ಅಭಿಮಾನವನ್ನವಲಂಬಿಸಿ ನಿಂತಿರುತ್ತದೆ. ಪ್ರತಿಯೊಬ್ಬ ಮನುಷ್ಯನಿಗೂ ಚರಮಕ್ಷಣದವರೆಗೂ ಸಾಯುವ ಕಾಲದವರೆಗೂ ದೇಹಾಭಿಮಾನವು ಅನುವೃತ್ತವಾಗಿರುತ್ತದೆ. ಇನ್ನೊಂದು ಕ್ಷಣಕ್ಕೆ ಸಾಯುವವನು ಕೂಡ, "ಅಗೋ, ನಿಮ್ಮ ಮಗ!" ಎಂದ ಕೂಡಲೇ "ಆ!" ಎಂದು ಕಣ್ಣು ಬಿಡುತ್ತಾನೆ ; ಇಂಥದ್ದು ದೇಹಾಭಿಮಾನ !

ಇದರಿಂದಲೇ ದೇಹಾಭಿಮಾನವನ್ನು ಬಿಡುವದು ಸಾಧ್ಯವೆಂದಾಯಿತು. ಅಭಿಮಾನದಿಂದಲೇ ದೇಹವಿರುವದು ; ದೇಹವಂತನಾಗಿರುವದು ಮಿಥ್ಯಾಭಿಮಾನದಿಂದಾದರೆ,

ಸರಿಯಾದ ತಿಳಿವಳಿಕೆ ಬಂದರೆ ನಾವು ದೇಹವಂತರೇ ಆಗಿರುವದಿಲ್ಲವೆಂದಾಗುವದು. ಒಬ್ಬನಿಗೆ ಎರಡು ಗುಂಟೆ ಹಾಳು ಜಮೀನು ಇದ್ದರೂ ಅವನಿಗೆ ಜಮೀನುದಾರಿಯ ಕಾನೂನೆಲ್ಲ ಅನ್ವಯಿಸುತ್ತದೆ. ಹೀಗೆಯೇ ದೇಹಾಭಿಮಾನಿಯೂ ಕೆಲಸಮಾಡುತ್ತಿದ್ದರೂ ಸುಮ್ಮನಿದ್ದರೂ ಕರ್ಮದಿಂದ ಬಿಡುಗಡೆಯಾಗಿರುವದಿಲ್ಲ ; ಅವನು ಮನಸ್ಸಿನಲ್ಲಿ ಕೆಲಸಮಾಡುತ್ತಲೇ ಇರುತ್ತಾನೆ. ಕೆಲಸ ಮಾಡಲಿಲ್ಲ ಎಂಬುದುಕೂಡ ಒಂದು ಕೆಲಸವೇ ; ಕರ್ಮಿಯಾಗಿರುವವನು, ಕೆಲಸಕ್ಕೆ ಜವಾಬುದಾರನಾಗಿರುವವನು, ಕೆಲಸವನ್ನು ಮಾಡಲಿಲ್ಲವೆಂದರೂ ತಪ್ಪಾಗುವದು ; ಅದಕ್ಕಾಗಿ ಅವರಿಗೆ ದಂಡನೆಯಾಗುವದು. ದೇಹಭೃತಾ - ದೇಹಧಾರಿಯಾಗಿರುವವನಿಂದ ಕರ್ಮಗಳನ್ನು ಅಶೇಷವಾಗಿ ಬಿಡುವದು ಶಕ್ಯವೇ ಅಲ್ಲ - ಎಂಬ ವಾಕ್ಯಕ್ಕೆ ಇಷ್ಟು ಅರ್ಥ.

ಇದೇ ಭಗವಂತನ ಅಭಿಪ್ರಾಯವೆಂಬುದು ಮುಂದಿನ ಶ್ಲೋಕದಿಂದ ಸ್ಪಷ್ಟವಾಗುತ್ತದೆ:

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ 18-12**

ತ್ಯಾಗವನ್ನು ಮಾಡದವರ ಕರ್ಮಕ್ಕೆ ಇಷ್ಟಾನಿಷ್ಟಮಿಶ್ರಫಲಗಳು ಆಗುತ್ತಲೇ ಇರುವವು; ಸಂನ್ಯಾಸಿಗಳಿಗೆ ಎಂದಿಗೂ ಈ ಫಲಗಳು ಆಗುವದಿಲ್ಲ - ಎಂದು ಭಗವಂತನು ಹೇಳಿರುತ್ತಾನೆ. ಇಲ್ಲಿ ಸಂನ್ಯಾಸಿಗಳೆಂದರೆ ಏನು ? ಕಾವಿಯ ಶಾಟಿಯನ್ನು ಧರಿಸಿರುವ ದಂಡಕಮಂಡಲು ಧಾರಿಯೆಂದು ಅರ್ಥವಲ್ಲ ; ಸರ್ವಕರ್ಮಗಳನ್ನೂ ಸಂನ್ಯಾಸಮಾಡಿರುವ ಪರಮಾರ್ಥ ಜ್ಞಾನಿಗಳು. ಕರ್ಮಕ್ಕೆ ಇಷ್ಟ, ಅನಿಷ್ಟ, ಮಿಶ್ರ - ಎಂಬ ಮೂರು ಫಲಗಳುಂಟು ; ಅವು ಯಾವವೂ ಈ ಸಂನ್ಯಾಸಿಗಳಿಗೆ ತಟ್ಟುವದಿಲ್ಲ. ಇಲ್ಲಿ ಇಷ್ಟಫಲವೆಂದರೆ ದೇವತಾದಿ ಜನ್ಮಗಳು ; ಮನುಷ್ಯ ಜನ್ಮವು ಮಿಶ್ರಫಲ, ಮಿಶ್ರಫಲವೆಂದರೆ ಸುಖದುಃಖಗಳೆರಡನ್ನೂ ಕೊಡುವ ಫಲ. ಒಬ್ಬನು ತನ್ನ ಮಗನ ಹೆಸರಿನಲ್ಲಿ ಇನ್ಶೂರೆನ್ಸು ಮಾಡಿದಾನೆಂದು ಇಟ್ಟುಕೊಳ್ಳಿ. ಅವನ ಮಗನು ಯಾವದಾದರೂ ಕಾರಣದಿಂದ ಸತ್ತು ಹೋದರೆ ಅವನಿಗೆ ಸುಖದುಃಖಗಳೆರಡೂ ಬೆರೆತು ಬರುವವಲ್ಲವೆ ? ಹೀಗೆ ಮನುಷ್ಯನಿಗೆ ಸಾಮಾನ್ಯವಾಗಿ ಸುಖದುಃಖಗಳ ಮಿಶ್ರಾನುಭವವೇ ಹೆಚ್ಚಾಗಿರುತ್ತದೆ. ಏಕೆಂದರೆ ಅವನ ದೇಹವು ಪಾಪಪುಣ್ಯಗಳೆರಡರ ಸಂಮಿಶ್ರಣದ ಫಲವಾಗಿರುತ್ತದೆ. ಹೀಗೆ ಮೂರು ಬಗೆಯ ಫಲಗಳು ಕರ್ಮಕ್ಕೆ ಉಂಟಷ್ಟೆ ; ಇವುಗಳು ಯಾವವೂ ಸಂನ್ಯಾಸಿಗಳಿಗೆ ಆಗುವದೇ ಇಲ್ಲ, ಅತ್ಯಾಗಿಗಳಿಗೇ ಆಗುತ್ತವೆ.

ಫಲಾಭಿಸಂಧಿಯನ್ನೂ ಸಂಗವನ್ನೂ ತ್ಯಜಿಸಿದ ಸಾತ್ತ್ವಿಕತ್ಯಾಗಿಯಾದ ಕರ್ಮಯೋಗಿಗೆ ಕರ್ಮದಿಂದ ಯಾವ ಫಲವೂ ಆಗುವದಿಲ್ಲವೆಂದು ತಿಳಿಯುವ ಹಾಗಿಲ್ಲ. ಒಬ್ಬನು ಸ್ವಯಂಸೇವಕನಾಗಿ ಮಿಲಿಟರಿ ಡ್ರಿಲ್ ಮಾಡುತ್ತಾನೆ ; ಆದರೆ ಯುದ್ಧಕ್ಕೆ ಹೋಗುವದಿಲ್ಲ. ಅಷ್ಟು ಮಾತ್ರದಿಂದ ಅವನಿಗೆ ಕವಾಯತ್ತು ಮಾಡಿದ್ದರ ಫಲವೂ ಇಲ್ಲವೆನ್ನುವದಕ್ಕಾದೀತೆ ? ಆಗಲಾರದು. ಇದರಂತೆ ಸಾತ್ತ್ವಿಕತ್ಯಾಗಿಗೆ ಮತ್ತೆ ಯಾವ ಫಲವೂ ಆಗದಿದ್ದರೂ

ಚಿತ್ತಶುದ್ಧಿಯೆಂಬ ಫಲವಾದರೂ ಆಗುವದು. ಆದರೆ ಪರಮಾರ್ಥಸಂನ್ಯಾಸಿಗೆ ಈ ಫಲವೂ ಆಗುವದಿಲ್ಲ. ಇದನ್ನು ತಿಳಿಸುವದಕ್ಕೆ "ನ ತು ಸಂನ್ಯಾಸಿನಾಂ ಕ್ವಚಿತ್" ಎಂದಿದೆ.

ಇಂಥ ಸಂನ್ಯಾಸಿ ಯಾರು ? ಎಂದರೆ ಆತ್ಮಜ್ಞಾನಿಯು. ಆತ್ಮಜ್ಞಾನಿಯು ಸಂನ್ಯಾಸಿಯಾಗಿರುತ್ತಾನೆಂದರೆ ಅವನು ಏನೂ ಮಾಡದೆ ಸೋಮಾರಿ ಎಂದು ಭಾವಿಸಬಾರದು. ಸರ್ವದಾ ಕರ್ಮವನ್ನು ಮಾಡುತ್ತಿದ್ದರೂ ಪರಮಾರ್ಥವಾಗಿ ಏನನ್ನೂ ಮಾಡದೆ ಇರುವವನು, ಅವನು. ಜನಕನು ರಾಜನಾಗಿದ್ದನು, ಅನೇಕ ವಿದ್ವಾಂಸರಿಗೆ ಸಭೆಯಲ್ಲಿ ಆಶ್ರಯವನ್ನು ಕೊಟ್ಟಿದ್ದನು. ರಾಜ್ಯಭಾರವನ್ನು ವಹಿಸಿದ್ದನು ; ಆದರೂ ಅವನು ಯಾವ ಕರ್ಮವನ್ನೂ ಮಾಡದವನು. ಆದ್ದರಿಂದಲೇ ಅವನು "ಮಿಥಿಲಾನಗರಿಯೇ ಸುಟ್ಟುಹೋದರೂ ನನ್ನದೇನೂ ಸುಡುವಹಾಗಿಲ್ಲ" ಎಂದು ಹೇಳಬಲ್ಲವನಾಗಿದ್ದನು. ನನಗೆ ತಿಳಿದಿದ್ದ ಒಬ್ಬ ಕೊಲಿಜಿಯೇಟ್ ಹೈಸ್ಕೂಲ್ ಹೆಡ್‌ಮಾಸ್ಟರು ಒಳ್ಳೆಯ ವೇದಾಂತಿಗಳಾಗಿದ್ದರು. ಅವರು ಸ್ಕೂಲಿನ ಕೆಲಸವನ್ನೆಲ್ಲ ಸಾಂಗವಾಗಿ ನೆರವೇರಿಸಿ ಮನೆಯಲ್ಲೂ ಮಕ್ಕಳು ಮರಿಗಳೊಡನೆ, ವಿದ್ವಾಂಸರೊಡನೆ, ಅಧ್ಯಾಪಕರೊಡನೆ, ಸಂಗೀತಗಾರರೊಡನೆ, ಜೋಯಿಸರೊಡನೆ, ಕೊನೆಗೆ ಒಬ್ಬ ಬುಡಬುಡಿಕೆಯವನೊಡನೆ, ವಿನೋದದಿಂದ ಕಾಲವನ್ನು ಕಳೆಯಬಲ್ಲವರಾಗಿದ್ದರು. ಅಷ್ಟು ಕೆಲಸವನ್ನು ಮಾಡಿದರೂ ಅವರಿಗೆ ಯಾವದೂ ಭಾರವಾಗಿರಲಿಲ್ಲ. ಜ್ಞಾನಿಗಳು ಹಗುರವಾಗಿ ಮಾಡುವಷ್ಟು ಕೆಲಸವನ್ನು ಯಾವ ಕರ್ಮಿಯೂ ಮಾಡಲಾರನು. ಕೆಲಸಕ್ಕೆ ಅಂಜುವವನು ಹೇಡಿ. ಅಜ್ಞಾನಿಯಾದವನು ಕರ್ಮವನ್ನು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾನೆ ; ಆದರೆ ಅದರಿಂದ ಅವನಿಗೆ ದುಃಖವೇ ಬಂದೊದಗುತ್ತದೆ. ಸಂಗಫಲಗಳ ಅಭಿಮಾನವಿರುವದೇ ಈ ದುಃಖಕ್ಕೆ ಕಾರಣ. ಜ್ಞಾನಿಗಳಾದವರಿಗೆ ಕರ್ತೃತ್ವವೇ ಮಿಥ್ಯೆಯಾಗಿರುತ್ತದೆ ; ಅವರ ಈ ಅರಿವೇ ಕರ್ಮವನ್ನು ಹಗುರವಾಗಿ ಮಾಡಿಬಿಡುತ್ತದೆ. "ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ । ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್॥" ಎಂದು ಹಿಂದೆ ವರ್ಣಿಸಿರುವದು ಇಂಥ ಸಂನ್ಯಾಸಿಗಳನ್ನೇ. ಸಂನ್ಯಾಸಿಯಾದವನು ದೇಹಕ್ಕಿಂತ ವ್ಯತಿರಿಕ್ತನಾಗಿ ದೇಹಾಭಿಮಾನವಿಲ್ಲದೆ ಇರುತ್ತಾನೆ; ಅಜ್ಞಾನಿಯು ದೇಹವೇ ಆಗಿರುವದರಿಂದ ಕರ್ಮದಿಂದ ಗೋಳಾಡುತ್ತಿರುತ್ತಾನೆ. ಅವನು ನಾನು ದೇಹಕ್ಕಿಂತ ಬೇರೆಯಾಗಿರುತ್ತೇನೆ ಎಂದು ತಿಳಿಯುವದಿಲ್ಲ ; ನಾನು ಮನೆಯಲ್ಲಿದ್ದೇನೆ ಎಂದು ದೇಹಾಭಿಮಾನದಿಂದ ತಪ್ಪಾಗಿ ತಿಳಿಯುತ್ತಾನೆ. ಇದು ನನ್ನ ನೆರಳು, ಇದು ವಸ್ತುವಲ್ಲ - ಎಂಬ ಅರಿವು ಸುಖಕಾರಿಯಾಗುತ್ತದೆ; ನೆರಳನ್ನು ವಸ್ತುವೆಂದು ತಿಳಿದು ನನ್ನ ಬಳಿಯಲ್ಲಿರುವ ಈ ಎರಡನೆಯ ವ್ಯಕ್ತಿಯನ್ನು ಓಡಿಸಬೇಕು ಎಂದು ಪ್ರಯತ್ನಿಸಿದರೆ ದಡ್ಡನಾಗುತ್ತಾನೆ, ಕಷ್ಟಪಡುತ್ತಾನೆ. ದೇಹಕ್ಕೆ ಸತ್ಯತ್ವವನ್ನು ಕೊಟ್ಟರೆ ಅದು ಮಾಡಿದ್ದೆಲ್ಲ ನಮ್ಮದೇ ಎಂಬ ಮಿಥ್ಯಾಜ್ಞಾನವುಂಟಾಗುತ್ತದೆ. ಕನಸನ್ನು ಕನಸೆಂದು ತಿಳಿದಮಾತ್ರದಿಂದ ಅಲ್ಲಿಯ ಸಂಕಷ್ಟಗಳೆಲ್ಲ ತಪ್ಪಿಹೋಗುವಂತೆ, ದೇಹವೂ ಕರ್ತೃತ್ವವೂ ಮಿಥ್ಯೆ ಎಂದು ಅರಿತುಕೊಂಡರೆ ಕರ್ಮದ ಹೊರೆಯನ್ನೇ ಇಳಿಸಿಕೊಂಡಂತೆ ಆಗುತ್ತದೆ.

ಹೀಗೆ ಇಲ್ಲಿ ಸಾಧನ, ಸಿದ್ಧಾಂತ - ಎರಡನ್ನೂ ತಿಳಿಸಿದಂತೆ ಆಗಿರುತ್ತದೆ. ನಾವುಗಳು ಜ್ಞಾನಿಯ ಬುದ್ಧಿಯ ಮಟ್ಟವನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು ; ಕರ್ತೃತ್ವದಿಂದಾಗುವ ತೊಂದರೆಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಸಂಗಫಲತ್ಯಾಗಗಳನ್ನು ಮಾಡುವದನ್ನು ಅಭ್ಯಾಸಮಾಡಬೇಕು. ಕರ್ಮಕ್ಕೂ ಫಲಕ್ಕೂ ನಿಕಟವಾದ ಸಂಬಂಧವಿದೆ. ಆದರೆ ಆ ಫಲವು ನಮಗೇ ಆಗಬೇಕೆಂಬುದೇನೂ ಇಲ್ಲ. ವ್ಯಾಪಾರದಲ್ಲಿ ದಿನದಿನಗಳ ದರದ ಏರಿಳಿತಗಳ ಸುದ್ದಿಯನ್ನು ಕೇಳಿದರೆ ವ್ಯಾಪಾರಿಗೆ ಮಾತ್ರ ಹರ್ಷವಿಷಾದಗಳಾಗುತ್ತವೆ ; ಮಿಕ್ಕವರಿಗಲ್ಲ. ಹೀಗಿರುವದರಿಂದ ಈ ಕರ್ಮದ ಫಲವು ನನಗೇ ಎಂಬುದು ಬರಿಯ ಅಭಿಮಾನವೇ ತಾನೆ ? ಹುಡುಗರಿಗೆ ಪಾಸುಮಾಡಿಸಬೇಕೆಂಬ ಅಭಿಮಾನವಿರುವ ಉಪಾಧ್ಯಾಯನು ಪರೀಕ್ಷಕರನ್ನು ಹುಡುಕಿ ಅವರ ಅನುಸರಣೆಮಾಡುವಂತೆಯೂ, ತನ್ನ ಮಾತು ನಿಜವಾಗಲೇಬೇಕೆಂಬ ಅಭಿಮಾನವುಳ್ಳ ಜೋಯಿಸನು ನಾಳೆ ನಿನ್ನ ಹೊಲಕ್ಕೆ ಮಳೆಯಾಗುತ್ತದೆಯೆಂದು ಭವಿಷ್ಯವನ್ನು ಹೇಳಿ ರಾತ್ರಿ ಆ ರೈತನ ಹೊಲಕ್ಕೆ ನೀರು ಹಾಯಿಸಿ ಕಷ್ಟಪಟ್ಟಂತೆಯೂ, ಫಲವನ್ನು ತನಗೆಂದು ಅಭಿಮಾನಪಟ್ಟ ಮಾತ್ರದಿಂದ ಕಷ್ಟಕ್ಕೆ ಈಡಾಗಬೇಕಾಗುವದು. ಆದ್ದರಿಂದ ಜಾಣನಾದವನು ಕರ್ಮದ ಸಂಗಫಲಗಳನ್ನು ಬಿಡಬೇಕು; ಕರ್ಮದಲ್ಲಿ ಮಾತ್ರ ನಿಲ್ಲಬೇಕು. ಯಾವ ಕರ್ಮವು ಬಂದೊದಗಿದರೂ ಅದನ್ನು ಆನಂದದಿಂದ ಮಾಡಬೇಕು. ಇದೇ ಕರ್ಮಬಂಧದಿಂದ ಪಾರಾಗುವದಕ್ಕೆ ಮುಖ್ಯೋಪಾಯವು. ಕಚೇರಿಯಲ್ಲಿ ಒಬ್ಬ ಗುಮಾಸ್ತನು ತಾನು ಬರೆದಿದ್ದ ಲೆಕ್ಕವನ್ನು ಪರಾಮರ್ಶಕ್ಕಾಗಿ ಮತ್ತೊಬ್ಬನು ಕೇಳಿದರೆ "ಬೇಕಾದರೆ ನೋಡಿಕೊ !" ಎನ್ನುವನು. ಇದಕ್ಕೆ ಕಾರಣವೇನು ? ತಾನು ಮಾಡಿದ್ದಕ್ಕೆ ತನಗೇ ಕೀರ್ತಿಬರಬೇಕು, ಅಥವಾ ಅದರ ಪ್ರತಿಫಲವು ಬರಬೇಕು ಎಂದು ಅಲ್ಲವೆ ? ಹೀಗೆ ಸಂಗವೂ ಫಲಾಭಿಸಂಧಿಯೂ ಸಂದುಸಂದಿನಲ್ಲಿಯೂ ತೂರಿಕೊಂಡು ಬರುತ್ತವೆ. ಇವುಗಳಿಂದ ಕೂಡಿದವನು ಮಾಡುವ ಕರ್ಮಕ್ಕೆ ಅವರಕರ್ಮವೆಂದು ಹೆಸರು. ಸಂಗಫಲಗಳನ್ನು ಬಿಟ್ಟವನು ಮಾಡುವ ಕರ್ಮವು ಇದಕ್ಕಿಂತ ಸಾವಿರಪಾಲು ಮೇಲಾಗುತ್ತದೆ.

ಸಂನ್ಯಾಸತ್ಯಾಗಗಳ ರಹಸ್ಯವನ್ನು ಹೇಳು ಎಂದು ಅರ್ಜುನನು ಕೇಳಿದ್ದಕ್ಕೆ ಭಗವಂತನು ಕರ್ಮಯೋಗವನ್ನು ಹೇಳಿದ್ದೇಕೆ ? ಎಂದರೆ ಅದೇ ಜ್ಞಾನದ ಪೆಟ್ಟಿಗೆಯ ಮುಚ್ಚಳವನ್ನು ತೆರೆಯುವ ಬೀಗದ ಕೈಯಾಗಿದೆ. ದೊಡ್ಡಪೆಟ್ಟಿಗೆಯನ್ನು ತೆರೆಯುವದಕ್ಕೆ ಸಣ್ಣ ಬೀಗದ ಕೈ ಅತ್ಯವಶ್ಯವಾಗಿರುವಂತೆ ಕರ್ಮಯೋಗವು ಪರಂಪರೆಯಿಂದ ಜ್ಞಾನಪ್ರಾಪ್ತಿಯಾಗುವದಕ್ಕೆ ಅತ್ಯವಶ್ಯವಾಗಿರುತ್ತದೆ. ವಿಶ್ವೇಶ್ವರಯ್ಯ, ಮಹಾತ್ಮಗಾಂಧಿ - ಮುಂತಾದವರು ಮುಪ್ಪಿನಲ್ಲಿಯೂ ಜನಸಾಮಾನ್ಯರ ಉಪಯೋಗಕ್ಕಾಗಿ ದುಡಿಯುತ್ತಾ ಮಹಾಜನರ ಉಪಕಾರದಿಂದಲೇ ಆನಂದವನ್ನು ಪಡೆದದ್ದನ್ನು ನೆನಪಿಸಿಕೊಳ್ಳಿರಿ. ತಿಲಕರ ಕರ್ಮಯೋಗ, ಗಾಂಧಿಯವರ ಅನಾಸಕ್ತಿಯೋಗ - ಇವುಗಳನ್ನು ಪರಮಸಿದ್ಧಾಂತದ ಗ್ರಂಥಗಳೆಂದು ಭಾವಿಸುವದಕ್ಕಿಲ್ಲದಿದ್ದರೂ ಕರ್ಮಫಲವನ್ನು ಬಯಸದೆ ಕರ್ಮವನ್ನು ಮಾಡುವದರಿಂದಾಗುವ

ಸುಖವನ್ನು ಹೊರಪಡಿಸುವ ಗ್ರಂಥಗಳೆಂದು ಭಾವಿಸುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ಯಾವ ಕೆಲಸವನ್ನು ಮಾಡಿದರೂ ನಾನೇಕೆ ಮಾಡಲಿ ? ನನ್ನಂಥವನು ಈ ಸಣ್ಣ ಕೆಲಸವನ್ನು ಮಾಡುವದೆ ?- ಎಂದು ಉದಾಸೀನಭಾವವನ್ನು ತೋರಿಸುವದು ಸಾಮಾನ್ಯಜನರಿಗೆ ಸ್ವಭಾವವು, ಆದರೆ ಕರ್ಮದಲ್ಲಿ ಸಂಗವನ್ನೂ ಕರ್ಮಫಲದ ಅಭಿಲಾಷೆಯನ್ನೂ ತೊರೆದ ಕರ್ಮಯೋಗಿಗಳು ಎಂದಿಗೂ ಹಾಗೆ ಕರ್ಮದಲ್ಲಿ ಅಸಡ್ಡೆಯನ್ನು ತೋರಿಸಲಾರರು. ಕರ್ಮಯೋಗವೇ ನಿಜವಾದ ತ್ಯಾಗಕ್ಕೆ ದ್ವಾರವೆಂಬುದನ್ನು ಅವರು ಅರಿತುಕೊಂಡಿರುವರು.

## ೧೭೫. ನಿಷ್ಕ್ರಿಯಾತ್ಮಜ್ಞಾನ 18 - (13-16)

**(2-7-50)**

ಸಂನ್ಯಾಸ ತ್ಯಾಗಗಳ ನಿರ್ಣಯವನ್ನು ಮಾಡುವದಕ್ಕೆ ಹೊರಟ ಭಗವಂತನು ಸಂನ್ಯಾಸ ತ್ಯಾಗ ಶಬ್ದಗಳಿಗೆ ಅರ್ಥಭೇದವೇನೂ ಇಲ್ಲ, ಗುಣಗಳಿಗೆ ಅನುಸಾರವಾಗಿ ಈ ತ್ಯಾಗವು ಸಾತ್ತ್ವಿಕ ರಾಜಸ ತಾಮಸಗಳೆಂದು ಮೂರು ವಿಧವಾಗಿದೆ ಎಂದಿರುತ್ತಾನೆ. ರಾಜಸ ತಾಮಸ ತ್ಯಾಗಗಳು ಕರ್ಮದ ತ್ಯಾಗ ; ಮೂರನೆಯದಾದ ಸಾತ್ತ್ವಿಕ ತ್ಯಾಗವು ಸಂಗಫಲತ್ಯಾಗ. ಇಲ್ಲಿ ಕರ್ಮತ್ಯಾಗವು ವಿವಕ್ಷಿತವೋ, ಫಲತ್ಯಾಗವು ವಿವಕ್ಷಿತವೋ ? ಇವುಗಳಲ್ಲಿ ಯಾವದನ್ನು ಮೂರು ಬಗೆಯಾಗಿ ವಿಂಗಡಿಸಿದಂತೆ ಆಯಿತು ? ಕರ್ಮತ್ಯಾಗಗಳಿಗೆ ಫಲತ್ಯಾಗವು ಸಮಾನ ಜಾತಿಯದಲ್ಲವಲ್ಲ ! ಹೀಗಿರುವಲ್ಲಿ ತ್ಯಾಗವು ಮೂರು ವಿಧವೆಂದು ವಿಂಗಡಿಸಿರುವದು ಹೇಗೆ ಸರಿ ?- ಎಂಬ ಶಂಕೆಯುಂಟಾಗುವದು. ಆದರೆ ಇದರಲ್ಲಿ ಯಾವ ದೋಷವೂ ಇಲ್ಲ. ಸಂಗತ್ಯಾಗಫಲತ್ಯಾಗಗಳಿಂದ ಕರ್ಮವನ್ನು ಮಾಡುವದನ್ನೇ ತ್ಯಾಗವೆಂದು ಹೊಗಳಿರುವದರಿಂದಲೇ ನಿಜವಾದ ಸಾತ್ತ್ವಿಕಕರ್ಮತ್ಯಾಗವೊಂದಿದೆ ಎಂದು ಸೂಚಿತವಾಗಿರುತ್ತದೆ. ಆದ್ದರಿಂದಲೇ ಭಗವಂತನು ಇಷ್ಟಾನಿಷ್ಟಮಿಶ್ರಫಲಗಳು ಅತ್ಯಾಗಿಗಳಿಗೆ ಆಗುವವು ; ಆದರೆ ಸಂಪೂರ್ಣವಾಗಿ ಕರ್ಮವನ್ನು ತ್ಯಾಗಮಾಡಿದವರಿಗೆ ಈ ಯಾವ ಫಲಗಳೂ ಆಗುವದಿಲ್ಲ ಎಂದು ಹೇಳಿರುತ್ತಾನೆ. ಸರ್ವಕರ್ಮಸಂನ್ಯಾಸವು ದೇಹಾಭಿಮಾನಿಗಳಿಗೆ ಕಷ್ಟವಾದರೂ ಪರಮಾರ್ಥಸಂನ್ಯಾಸಿಯಾದ ಜ್ಞಾನಿಗೆ ಸಾಧ್ಯ ಎಂದು ತಿಳಿಸಿಕೊಟ್ಟಿರುತ್ತಾನೆ. ಇದು ಹೇಗೆಂಬುದನ್ನು ಈಗ ತಿಳಿಸಲಾಗುವದು.

**ಪಞ್ಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಙ್ಖ್ಯೇ ಕೃತಾನ್ತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥ 18-13**

ಒಂದು ಕರ್ಮವು ಉಂಟಾಗುವದಕ್ಕೆ ಈ ಮುಂದೆ ಹೇಳುವ ಐದು ಕಾರಣಗಳು ಬೇಕು ಎಂದು `ಸಾಂಖ್ಯಸಿದ್ಧಾಂತಲ್ಲಿ' ಹೇಳಿದೆ ಎಂಬುದು ಶ್ಲೋಕದ ಅರ್ಥವು. ಸಾಂಖ್ಯವೆಂದರೆ

ತತ್ತ್ವವನ್ನು ತಿಳಿಸುವ ಶಾಸ್ತ್ರ. ಪರಮಾತ್ಮನು ಸಾಂಖ್ಯಯೋಗಗಳಿಂದ ಪ್ರಾಪ್ಯನು ಎಂದು ಶ್ರುತಿ ಸಾರುತ್ತದೆ. ಅಲ್ಲಿ ಸಾಂಖ್ಯವೆಂದರೆ ವೇದಾಂತವೇ ; ಪೂರ್ವಕ್ಕೆ ವೇದಾಂತಶಾಸ್ತ್ರಕ್ಕೆ ಸಾಂಖ್ಯವೆಂಬ ಹೆಸರೇ ಪ್ರಚಾರವಾಗಿತ್ತೆಂಬುದು ಭಾರತಾದಿಗಳಿಂದ ತಿಳಿಯಬರುತ್ತದೆ. ಭಾರತದಲ್ಲಿ ಸಾಂಖ್ಯವೆಂಬ ಹೆಸರು ಎಲ್ಲೆಲ್ಲಿಯೂ ಕಾಣಬರುತ್ತದೆ; ವೇದಾಂತವೆಂಬ ಹೆಸರು ಎಲ್ಲಿಯೋ ಕೆಲವು ಕಡೆಗಳಲ್ಲಿ ಮಾತ್ರವೇ ಸಿಕ್ಕುತ್ತದೆ. ಇಪ್ಪತ್ತೈದು ತತ್ತ್ವಗಳನ್ನು ಹೇಳುವ ಕಾಪಿಲಸಾಂಖ್ಯವು ಎಲ್ಲೆಲ್ಲಿಯೂ ಹರಡಿಕೊಂಡಮೇಲೆ ಸಾಂಖ್ಯವೆಂದರೆ ಆ ಸಿದ್ಧಾಂತವೇ ಎಂಬ ಪ್ರತೀತಿಯುಂಟಾಗುವದಕ್ಕೆ ಮೊದಲಾಯಿತು ; ಸಾಂಖ್ಯಶಬ್ದವು ಆ ಅರ್ಥದಲ್ಲಿಯೇ ರೂಢವಾಯಿತು. ಆದ್ದರಿಂದ ವೈದಿಕಸಿದ್ಧಾಂತವನ್ನನುಸರಿಸುವವರು 'ವೇದಾಂತಿಗಳು' ಔಪನಿಷದರು' ಎಂಬ ಬೇರೊಂದು ಹೆಸರನ್ನು ಇಟ್ಟುಕೊಂಡರು. ಇದರಂತೆಯೇ ಬುದ್ಧ ಎಂದರೆ ಜ್ಞಾನಿ, ಶ್ರಮಣ ಎಂದರೆ ಸಂನ್ಯಾಸಿ; ಈ ಅರ್ಥಗಳಲ್ಲಿ ಆ ಶಬ್ದಗಳನ್ನು ಹಿಂದಿನ ಗ್ರಂಥಗಳಲ್ಲಿ ಪ್ರಯೋಗಿಸಿರುವದು ಕಂಡುಬರುತ್ತದೆಯಾದರೂ ಬೌದ್ಧರೂ, ಜೈನರೂ ಅವನ್ನು ರೂಢಿಶಬ್ದಗಳಾಗಿ ಬೇರೆಯ ಅರ್ಥಗಳಲ್ಲಿ ಬಳಸುತ್ತಾ ಬಂದಂತೆ ವೈದಿಕರು ಆ ಶಬ್ದಗಳನ್ನು ಈಗ ಅಷ್ಟಾಗಿ ಪ್ರಯೋಗಿಸುವದಿಲ್ಲ. ಈಚೆಗೆ ಮಹಾತ್ಮಗಾಂಧಿಯವರೇ ಮೊದಲಾದವರು ಬಳಕೆಗೆ ತಂದಿರುವ ಹರಿಜನಶಬ್ದವೂ ಹೀಗೆಯೇ ತನ್ನ ಯೌಗಿಕಾರ್ಥವನ್ನು ಬಿಟ್ಟು ಆದಿಕರ್ನಾಟಿಕರೇ ಮುಂತಾದವರಲ್ಲಿ ರೂಢವಾಗುತ್ತಿದೆ. ಇದರಂತೆಯೇ ಸಾಂಖ್ಯಶಬ್ದಕ್ಕೂ ಅರ್ಥವು ಬದಲಾಯಿಸಿರುತ್ತದೆ.

ಇರಲಿ, ಸಾಂಖ್ಯಶಬ್ದವು ಪ್ರಕೃತಶ್ಲೋಕದಲ್ಲಿ ವೇದಾಂತವೆಂಬರ್ಥದಲ್ಲಿಯೇ ಪ್ರಯುಕ್ತವಾಗಿದೆ ಎಂದು ಇಟ್ಟುಕೊಂಡರೂ ವೇದಾಂತದಲ್ಲಿ ಕರ್ಮವಿಚಾರವು ಏತಕ್ಕೆ ಬಂದಿದೆ?- ಎಂಬ ಪ್ರಶ್ನೆಯೊಂದು ಎದ್ದುಕೊಳ್ಳುತ್ತದೆಯಷ್ಟೆ. ಇದಕ್ಕೆ ಉತ್ತರವೇನೆಂದರೆ ಕರ್ಮಕ್ಕೆ ಇಷ್ಟು ಕಾರಣಗಳು ಬೇಕು ; ಈ ಕಾರಣಗಳಿಲ್ಲದಿರುವಾಗ ಆತ್ಮನಿಗೂ ಕರ್ಮಕ್ಕೂ ಯಾವ ಸಂಬಂಧವೂ ಇಲ್ಲ ಎಂದು ತಿಳಿಸುವದೇ ವೇದಾಂತದ ಉದ್ದೇಶವು. ಕರ್ಮಕ್ಕೆ ಬೇಕಾಗಿರುವ ಐದು ಕಾರಣಗಳು ಯಾವವೆಂದರೆ :

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಞ್ಚಮಮ್ ॥** 18-14

ಅಧಿಷ್ಠಾನವೆಂದರೆ ಕರ್ಮಗಳಿಗೆ ಆಶ್ರಯವಾಗಿರುವ ಶರೀರವು. ಈಚೀನ ವೇದಾಂತಿಗಳು ಅಧ್ಯಾರೋಪಿತಪದಾರ್ಥಕ್ಕೆ ಆಸ್ಪದವಾಗಿರುವ ಸತ್ಯವಸ್ತು ಎಂಬ ಅರ್ಥದಲ್ಲಿ ಈ ಶಬ್ದವನ್ನು ಉಪಯೋಗಿಸುತ್ತಿದ್ದಾರೆ ; ಆದರೆ ಆ ಅರ್ಥವು ಅವರ ಪಾರಿಭಾಷಿಕ ಶಬ್ದವು. ಸಂಸ್ಕೃತದಲ್ಲಿ ಈ ಶಬ್ದದ ಸಾಮಾನ್ಯವಾದ ಅರ್ಥವೆಂದರೆ ವಾಸಮಾಡುವ ಆಶ್ರಯಸ್ಥಾನ. ಕರ್ಮಗಳು ಆಶ್ರಯಿಸಿಕೊಂಡಿರುವದು ದೇಹವನ್ನೇ ಆದ್ದರಿಂದ ಅದೇ ಅವಕ್ಕೆ ಅಧಿಷ್ಠಾನವು. ಕರ್ತೃ ಎಂದರೆ

ಕರ್ಮವನ್ನು ಮಾಡುವ ಜೀವನು. ಕರಣಗಳೆಂದರೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು. ಇವುಗಳ ವ್ಯಾಪಾರವೇ ಚೇಷ್ಟೆ, ಪ್ರಾಣಾಪಾನಾದಿವ್ಯಾಪಾರಗಳೂ ಚೇಷ್ಟೆ ಎಂಬ ಶಬ್ದದಲ್ಲಿ ಸೇರಿಕೊಂಡಿವೆ. ಚಕ್ಷುರಾದಿಗಳಿಗೆ ಅನುಗ್ರಾಹಕವಾಗಿರುವ ಆದಿತ್ಯಾದಿಗಳೇ ದೈವವು. ಇಂದ್ರಿಯಗಳಿಗೆ ತಮ್ಮ ತಮ್ಮ ವ್ಯಾಪಾರವನ್ನು ಮಾಡುವದಕ್ಕೆ ಸಹಾಯಕವಾಗಿರುವ ಕನ್ನಡಕ, ಕೊಡಲಿ - ಮುಂತಾದವೂ ಕರಣಗಳೇ ; ಅವುಗಳನ್ನು ಉಪಕರಣಗಳೆಂದು ಕರೆಯಬಹುದು. ಕರ್ಮವು ನೆರವೇರುವದಕ್ಕೆ ಶರೀರದ ಕರಣಚೇಷ್ಟೆಗಳಲ್ಲದೆ ಹೊರಗಿನ ಕೆಲವು ಪ್ರಕೃತಿನಿಯಮಗಳೂ ಬೇಕಾಗುತ್ತವೆ ; ಅವನ್ನೆಲ್ಲ ದೈವವೆಂಬ ಮಾತಿನಲ್ಲಿಯೇ ಅಡಕಮಾಡಿಕೊಳ್ಳಬೇಕು. ಒಬ್ಬ ಮೇದರವನು `ಯುಕ್ತಿಗಳನ್ನು ಹೆಣೆಯುವ ಲಾಯರಿಗೇ ಹೆಚ್ಚು ಸುಖಜೀವನವಾಗುತ್ತಿದೆ ; ಬಿದಿರುಬುಟ್ಟಿಯನ್ನು ಹೆಣೆಯುವ ನನಗೇಕಿಲ್ಲ ?' ಎಂದು ಗೊಣಗುಟ್ಟಿಕೊಂಡನಂತೆ. ಅದಕ್ಕೆ ಇನ್ನೊಬ್ಬನು ನೀನೂ ಹೆಣೆದಿರುವದು ನಿಜ ; ಆದರೆ ಅದು ಕೊಳ್ಳುವವರಿಗೆ ಬೇಕೆನಿಸಿಲ್ಲವಲ್ಲ ಎಂದನಂತೆ ! ಅವನಿಗೆ ಅನುಗ್ರಹವಿಲ್ಲವೆಂದಾಯಿತು. ಅಂತೂ ಕರ್ಮವಾಗಬೇಕಾದರೆ ಈ ಐದೂ ಬೇಕಾಗಿರುತ್ತವೆ ;

**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ 18-15**

ಕರ್ಮಗಳು ಶಾರೀರಕವಾಗಲಿ, ವಾಕ್ಕೃತವಾಗಲಿ, ಮಾನಸವಾಗಲಿ, ಅವೆಲ್ಲಕ್ಕೂ ಈ ಐದು ಕಾರಣಗಳಿರಬೇಕು. ಒಳಹೊಕ್ಕು ನೋಡಿದರೆ ಎಲ್ಲಾ ಕರ್ಮಗಳಲ್ಲಿಯೂ ಮನಸ್ಸು ಸೇರಿಯೇ ಇರುತ್ತದೆ ; ಆದರೂ ಶರೀರವು ಪ್ರಧಾನವಾಗಿದ್ದರೆ ಶಾರೀರಕರ್ಮವೆನಿಸುವದು, ವಾಕ್ಪ್ರಧಾನವಾದರೆ ವಾಕ್ಕರ್ಮವೆನಿಸುವದು, ಮನಃಪ್ರಧಾನವಾದದ್ದು ಮಾನಸವೆನಿಸುವದು. ಈ ಮೂರು ಬಗೆಯ ಕರ್ಮಕ್ಕೂ ಮೇಲೆ ವಿವರಿಸಿರುವ ಐದು ಕಾರಣಗಳೂ ಸೇರಿರಲೇಬೇಕು. ಕಣ್ಣಿನಿಂದ ನೋಡುವದು, ಕಿವಿಯಿಂದ ಕೇಳುವದು - ಮುಂತಾದ ಜೀವನಸ್ಥಿತಿಗೆ ಬೇಕಾಗಿರುವ ಕರ್ಮಗಳೂ ಈ ಮೂರು ಬಗೆಯ ಕರ್ಮಗಳಲ್ಲಿಯೇ ಅಡಕವಾಗಿರುತ್ತವೆ ಎಂದು ತಿಳಿಯಬೇಕು. ಆದ್ದರಿಂದ ಈ ಐದೇ ಕರ್ಮಹೇತುಗಳು ಎಂದದ್ದರಿಂದ ಯಾವ ದೋಷವೂ ಇರುವದಿಲ್ಲ.

ಪ್ರಕೃತದಲ್ಲಿ ಆತ್ಮನು ಈ ಐದು ಕಾರಣಗಳಿಂದಲೇ ಕರ್ತೃವೆನಿಸಿರುತ್ತಾನೆಯೇ ಹೊರತು ಸ್ವತಃ ಕರ್ತೃವಾಗಿಲ್ಲವೆಂಬುದನ್ನು ನಾವು ಮರೆಯದೆ ಇರಬೇಕು.

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ 18-16**

ಶರೀರಾದಿಗಳಿಂದೊಡಗೂಡಿದ ಆತ್ಮನು ಕರ್ತೃವಾಗಬಹುದು ; ಕೇವಲಾತ್ಮನು ಕರ್ತೃವೆಂಬುದು ಎಂದಿಗೂ ಹೊಂದುವಹಾಗಿಲ್ಲ. ಆತ್ಮನು ಯಾವಾಗಲೂ ಏನಾದರೊಂದು

ಕ್ರಿಯೆಯನ್ನು ಮಾಡುವಂತೆಯೇ ತೋರುತ್ತಿರುತ್ತಾನೆ ; ಎಚ್ಚರದಲ್ಲಿಯೂ ಕನಸಿನಲ್ಲಿಯೂ ಅವನು ಕರ್ಮಗಳನ್ನು ಮಾಡುವವನಾಗಿಯೇ ತೋರುತ್ತಿರುತ್ತಾನೆ. ಆದರೆ ಸುಷುಪ್ತಿಯೆಂಬ ತನಿನಿದ್ರೆಯನ್ನು ಪರೀಕ್ಷಿಸಿರಿ. ಅಲ್ಲಿ ಮೇಲೆ ಹೇಳಿರುವ ಯಾವ ಕರ್ಮಕರಣವೂ ಇರುವದಿಲ್ಲ; ಕೇವಲಾತ್ಮನೇ ಇರುತ್ತಾನೆ. ಅಲ್ಲಿ ಅವನಲ್ಲಿ ಯಾವ ಕರ್ಮವೂ ಇರುವದಿಲ್ಲ. `ನಿದ್ರೆಮಾಡುತ್ತಿದ್ದಾನೆ' ಎಂದರೆ ಯಾವ ಕೆಲಸವನ್ನು ಮಾಡುತ್ತಾನೆ ? `ಊಟಮಾಡುತ್ತಿದಾನೆ' ಎಂಬಂತೆ ಅದೊಂದು ಕ್ರಿಯೆಯೆಂದು ಹೇಳಬಹುದೆ ? ನಿದ್ರೆಯೆಂಬುದು ಹಾಗಿದೆ, ಹೀಗಿದೆ; ಅಷ್ಟು, ಇಷ್ಟು ; ಅಂಥದ್ದು, ಇಂಥದ್ದು - ಎಂದು, ಕಾಳಿದಾಸನು ಹಿಮಾಲಯವನ್ನು ವರ್ಣಿಸಿರುವಂತೆ, ವರ್ಣಿಸುವದಕ್ಕೆ ಯಾರಿಂದಲೂ ಆಗುವದಿಲ್ಲ. ನಿದ್ರೆಯಲ್ಲಿ ಆತ್ಮನಲ್ಲಿ ಯಾವ ವಿಶೇಷವೂ ಇರುವದಿಲ್ಲ ; ಆದ್ದರಿಂದಲೇ ಅವನಲ್ಲಿ ಯಾವ ಕರ್ಮವೂ ತೋರುವದಿಲ್ಲ. ಆದರೆ ಆಗ ನಮ್ಮ ಆತ್ಮನೂ ಇರುವದಿಲ್ಲ ಎಂದು ಹೇಳುವದಕ್ಕೆ ಬರುವದಿಲ್ಲ. ಆಗ ನಾವು ನಿಷ್ಕರ್ಮರಾಗಿರುತ್ತೇವೆ. ನಿದ್ರಿಸಿದ ಕಳ್ಳನು ಕಳ್ಳನಾಗಿರುವದಿಲ್ಲ. ಧನಿಕನು ಧನಿಕನಾಗಿರುವದಿಲ್ಲ ; ತಿರುಕನು ತಿರುಕನಾಗಿರುವದಿಲ್ಲ ; ತಂದೆಯು ತಂದೆಯಾಗಿರುವದಿಲ್ಲ ; ತಾಯಿಯು ತಾಯಿಯಾಗಿರುವದಿಲ್ಲ. ಯಾವ ಯಾವ ಹೆಸರು ಕರ್ಮವಶದಿಂದ ಮನುಷ್ಯನಿಗೆ ಬಂದಿರುವದೋ ಅದು ಯಾವದೂ ನಿದ್ರೆಯಲ್ಲಿ ಅವನಿಗೆ ಅನ್ವಯಿಸುವದಿಲ್ಲ. ಆದ್ದರಿಂದ ನಮ್ಮ ಆತ್ಮನು ಸ್ವಭಾವದಿಂದಲೇ ನಿಷ್ಕರ್ಮನು ಎಂದಾಯಿತು.

ಇಂಥ ನಿಷ್ಕರ್ಮನಾದ ಕೇವಲಾತ್ಮನು ಕರ್ತೃವೆಂದು ತಿಳಿದವನು ಸರಿಯಾದ ತಿಳಿವಳಿಕೆಯುಳ್ಳವನೆನ್ನಬಹುದೆ ? ಯಾವನು ಹಾಗೆಂದು ತಿಳಿಯುವನೋ ಅವನು ಅಕೃತ ಬುದ್ಧಿಯು, ಸಂಸ್ಕೃತ ಬುದ್ಧಿಯವನಲ್ಲ. ದರ್ಜಿಯ ಅಂಗಡಿಯ ಮುಂದೆ ಕೋಟುಹಾಕಿಟ್ಟಿರುವ ಗೊಂಬೆಯನ್ನು ಅವಿವೇಕಿಯಾದವನೊಬ್ಬನು ಕೋಟುಹಾಕಿರುವದರಿಂದ ಇವನು ನನ್ನಂತೆ ಮನುಷ್ಯನಿರಬೇಕು ಎಂದು ಊಹಿಸುವಂತೆ ಸುಷುಪ್ತಿಯ ವಿಚಾರವು ಮನಸ್ಸಿಗೆ ಹತ್ತದೆ ಇರುವವನು ಆತ್ಮನು ಯಾವಾಗಲೂ ಕರ್ತೃವೇ ಎನ್ನುತ್ತಾನೆ.

ಹಿಂದೆ ದೇಹಧಾರಿಯಾದವನಿಗೆ ಕರ್ಮವನ್ನು ಬಿಡಲು ಸಾಧ್ಯವಿಲ್ಲ - ಎಂದಿತ್ತಷ್ಟೆ. ಅದು ಈ ವಿಚಾರಕ್ರಮದಿಂದಲೂ ಸ್ಪಷ್ಟವಾಗುತ್ತದೆ. ಸುಷುಪ್ತಿಯಲ್ಲಿ ನಮಗೆ ದೇಹಸಂಬಂಧವಿಲ್ಲದ್ದರಿಂದ ಯಾವ ಕರ್ಮವೂ ಇರುವದಿಲ್ಲ. ಎಚ್ಚರವಾದ ಕೂಡಲೆ ದೇಹದ ಸಂಬಂಧವಾಗುತ್ತದೆ. ಕರ್ಮಕ್ಕೆ ಬೇಕಾದ ಐದು ಕಾರಣಗಳ ರಾಶಿಯ ಸಂಬಂಧವಾಗುತ್ತದೆ.; ಆಗ ಕರ್ಮವೂ ಗಂಟುಬೀಳುತ್ತದೆ. ವಿದ್ಯುಚ್ಛಕ್ತಿಯ ಸಂಬಂಧ (Connection) ತೆಗೆದುಕೊಂಡರೆ ತಿಂಗಳಿಗೆ ಇಂತಿಷ್ಟು ಎಂದು ತೆರಿಗೆಕೊಡಬೇಕಾಗುತ್ತದೆ ; ಕನೆಕ್ಷನ್ ಇಲ್ಲದವನಿಗೆ ಯಾವ ಖರ್ಚೂ ಬೀಳುವದಿಲ್ಲ. ಅಲ್ಲವೆ ? ಹೀಗೆಯೇ ದೇಹಾದಿಪಂಚಕದ ಸಂಸರ್ಗವಿರುವವರೆಗೂ ಕರ್ಮವನ್ನು ಮಾಡಿ ಫಲವನ್ನು ಅನುಭವಿಸುತ್ತಿರಬೇಕು. ದೇಹಸಂಬಂಧವನ್ನು ತಪ್ಪಿಸಿಕೊಂಡರೆ ಕರ್ಮಫಲವೂ ಇಲ್ಲ. ಹುಲಿವೇಷವನ್ನು

ಹಾಕಿಕೊಂಡಿದ್ದಾತನು ಕೊನೆಗೆ ಮೈಗೆ ಬಳಿದುಕೊಂಡಿದ್ದ ಬಣ್ಣವನ್ನು ತೊಳೆದುಹಾಕಿಕೊಳ್ಳುವಂತೆ ನಾವು ಕರ್ಮದ ಕಟ್ಟನ್ನು ಕಳಚಿಕೊಳ್ಳಬೇಕು. ದೇಹಾದಿಪಂಚಕಗಳ ಸಂಬಂಧವಿರುವವರು ಕರ್ಮವನ್ನು ಮಾಡಿ ಮಾಡಿ ಮುಂದುಮುಂದಕ್ಕೆ ಬೇರೆ ಬೇರೆಯ ದೇಹಾದಿಗಳ ಸಂಬಂಧವನ್ನು ಮಾಡಿಕೊಳ್ಳುತ್ತಲೇ ಇರುತ್ತಾರೆ. ಆದರೆ ಯಾರು ತಮಗೆ ಶರೀರದ ಸಂಬಂಧವಿಲ್ಲವೆಂದು ನಿಶ್ಚಯಿಸಿಕೊಂಡಿರುವರೋ, ಯಾರಿಗೆ ಸುಷುಪ್ತ್ಯಾದ್ಯವಸ್ಥೆಗಳಲ್ಲಿ ಅನುಭವಕ್ಕೆ ಬರುವ ನಿಷ್ಕ್ರಿಯಾತ್ಮನ ಸ್ವರೂಪವು ಮನಸ್ಸಿಗೆ ತಟ್ಟಿರುವದೋ, ಯಾರು ಸುಷುಪ್ತಿಯಲ್ಲಿರುವಂತೆ ಜಾಗ್ರತ್ಸ್ವಪ್ನಗಳಲ್ಲಿಯೂ ತಮಗೆ ಶರೀರದ ಹಂಗೇ ಇಲ್ಲವೆಂದು ನಿರ್ಧರಿಸಿಕೊಂಡಿರುವರೋ, ಅವರಿಗೆ ಯಾವ ಕರ್ಮವೂ ಇರುವದಿಲ್ಲ ; ಅವರಿಗೆ ಯಾವ ಪ್ರಿಯಾಪ್ರಿಯಗಳ ಸೋಂಕೂ ಇರುವದಿಲ್ಲ. ಅವುಗಳಿಂದಾಗುವ ಸುಖದುಃಖಗಳೂ ಇರುವದಿಲ್ಲ.

ಒಂದು ಸೀರೆಯನ್ನುಟ್ಟಾಕೆ ಮತ್ತೊಂದು ಸೀರೆಯ ವ್ಯಾಪಾರಕ್ಕೆ ಅಂಗಡಿಗೆ ಹೋಗಬೇಕಾಗುತ್ತದೆ. ಹೀಗೆಯೇ ಒಂದು ಶರೀರದಲ್ಲಿ ಅಭಿಮಾನವಿದ್ದವನು ಕರ್ಮವನ್ನು ಮಾಡಿ ಮತ್ತೊಂದು ಶರೀರಕ್ಕೆ ಸಿದ್ಧನಾಗಿರಬೇಕಾಗುತ್ತದೆ. ಕನಸಿನಲ್ಲಿ ಕಂಡ ದೇಹವೂ ದೇಹಸಂಬಂಧದ ದೃಶ್ಯಗಳೂ ಎಚ್ಚತ್ತಕೂಡಲೆ ಬಾಧಿತವಾಗುವಂತೆ ಜ್ಞಾನವನ್ನು ಸಂಪಾದಿಸಿಕೊಂಡು ನಿರಭಿಮಾನಿಯಾದರೆ ಈಗಿನ ದೇಹವೂ ಅದಕ್ಕೆ ಸಂಬಂಧಪಟ್ಟ ಕರ್ಮಗಳೂ ಅವುಗಳ ಫಲಗಳೂ ಎಲ್ಲವೂ ಹುಸಿತೋರಿಕೆಯಾಗಿಬಿಡುವವು. ಆದ್ದರಿಂದ ಕರ್ಮದ ಕಟ್ಟನ್ನು ಕಳಚಿಕೊಳ್ಳುವದಕ್ಕೆ ಇಚ್ಛಿಸುವವರು ಈ ತತ್ತ್ವಜ್ಞಾನವನ್ನು ಸಂಪಾದಿಸಬೇಕು. ಆಗ ಸರ್ವಕರ್ಮವನ್ನೂ ಸಂನ್ಯಾಸಮಾಡಿದಂತೆ ಆಗುತ್ತದೆ ; ಎಲ್ಲಾ ಕರ್ಮಫಲಗಳ ಸಂಬಂಧವೂ ತಪ್ಪಿಹೋಗುತ್ತದೆ.

ಆದರೆ ಈ ಜ್ಞಾನವು ಬರುವವರೆಗೂ ಇದಕ್ಕೆ ಉಪಾಯವಾಗಿರುವ ಕರ್ಮಯೋಗವನ್ನು ಮಾಡುತ್ತಿರಬೇಕು. `ನನಗೆ ದೇಹವಿಲ್ಲ, ನಾನು ಕರ್ಮಿಯಲ್ಲ !' ಎಂದು ಬಾಯಿ ವೇದಾಂತಹೇಳುವವರು ಅನೇಕರಿರಬಹುದು ; ಆದರೆ ನಿಜವಾದ ಜ್ಞಾನಿಗಳು ವಿರಳ. ಇದರಂತೆ `ಕರ್ಮದ ಸಂಗವನ್ನು ಬಿಟ್ಟೆನು, ಫಲಾಶೆಯನ್ನು ಬಿಟ್ಟೆನು !' ಎನ್ನುವವರು ಅನೇಕರು ಕಾಣಬರಬಹುದು ; ಆದರೆ ನಿಜವಾಗಿ ಸಂಗಫಲವನ್ನು ಬಿಟ್ಟಿರುವ ಸಾತ್ತ್ವಿಕ ತ್ಯಾಗಿಯು ಎಲ್ಲಿಯೋ ಒಬ್ಬೊಬ್ಬನು ಇರುತ್ತಾನೆ. ಮುಮುಕ್ಷುಗಳಾದವರು ನಿಜವಾದ ತ್ಯಾಗಿಗಳಾಗುವದಕ್ಕೆ ಪ್ರಯತ್ನವನ್ನು ಮಾಡಬೇಕು.



# ೧೭೬. ಕರ್ಮದ ವಿಷಯದ ಸಮ್ಯಗ್ಜ್ಞಾನ 18 - (17-18)

**(9-7-50)**

ಹಿಂದಿನ ದಿನದ ನಿರೂಪಣದಲ್ಲಿ ಕರ್ಮಕ್ಕೆಲ್ಲ ಐದು ಕಾರಣಗಳಿವೆ ಎಂದೂ ಅವುಗಳ ಸಂಬಂಧವಿಲ್ಲದ ಕೇವಲಾತ್ಮನು ಕರ್ತೃವಲ್ಲವೆಂದೂ ತಿಳಿಸಿದ್ದಾಗಿದೆ. ಕೇವಲಾತ್ಮನೆಂದರೆ ಮತ್ತೊಬ್ಬರ ಸಹಾಯವಿಲ್ಲದ ಆತ್ಮನು ಎಂದು ಅರ್ಥವಲ್ಲ ; ಯಾವ ಉಪಾಧಿಯ ಸೋಂಕೂ ಇಲ್ಲದ ಶುದ್ಧಾತ್ಮನು ಎಂದರ್ಥ. ದೇಹಾದಿ ವ್ಯತಿರಿಕ್ತನಾದ ಆತ್ಮನೊಬ್ಬನು ಇದಾನೆಂದೂ ಅವನು ಕರ್ತೃವಾದರೂ ಅವನಿಗೆ ಸಹಾಯಕ್ಕೆ ದೇಹಾದಿಗಳೂ ಬೇಕಾಗಿರುವದರಿಂದ ಅವನೊಬ್ಬನನ್ನೇ ಕರ್ತೃವೆಂದು ತಿಳಿಯಬಾರದೆಂದೂ ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ದೇಹಾದಿಗಳು ಇದ್ದರೂ ಇಲ್ಲದಿದ್ದರೂ ಅವುಗಳು ನಿಜವಾಗಿ ಆತ್ಮನಿಗೆ ಸಂಬಂಧಪಟ್ಟೇ ಇಲ್ಲ ; ಅವು ಬರಿಯ ತೋರಿಕೆ. ಅವುಗಳಲ್ಲಿ ನಾನು ಎಂಬ ಅಭಿಮಾನವಿರುವವನಿಗೆ ಕರ್ಮವೂ ಅದರ ಫಲವೂ ಗಂಟುಬೀಳುತ್ತವೆ. ರಾಜನಾಗಿರುವದು ರಾಜ್ಯವೆಂಬ ಉಪಾಧಿಯಿಂದಾಗಿರುವಂತೆ ಆತ್ಮನಿಗೆ ಕರ್ತೃತ್ವವೂ ದೇಹಾದ್ಯುಪಾಧಿಗಳಿಂದ ಆಗಿದೆ. ನಿಜವಾಗಿ ಆತ್ಮನಲ್ಲಿ ಕರ್ತೃತ್ವವು ಇರುವದೇ ಇಲ್ಲ.

ಈ ಅಭಿಪ್ರಾಯಕ್ಕೆ ಮುಂದಿನ ಶ್ಲೋಕವು ಪುಷ್ಟಿಯನ್ನು ಕೊಡುತ್ತದೆ. ಹೇಗೆಂದರೆ :

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಲ್ಲೋಕಾನ್ನ ಹನ್ತಿ ನ ನಿಬಧ್ಯತೇ ॥ 18-17**

"ಯಾವನಿಗೆ ಅಹಂಕಾರಕೃತವಾದ ಭಾವವು ಇರುವದಿಲ್ಲವೋ, ಯಾವನ ಬುದ್ಧಿಗೆ ಲೇಪವಾಗುವದಿಲ್ಲವೋ ಅವನು ಈ ಪ್ರಾಣಿಗಳನ್ನೆಲ್ಲ ಕೊಂದರೂ ಕೊಂದವನಲ್ಲ, ಬದ್ಧನಾಗುವದೂ ಇಲ್ಲ." ಇದು ಶ್ಲೋಕದ ಅಕ್ಷರಾರ್ಥವು. ಈ ಅರ್ಥವು ಅತ್ಯಂತವಾಗಿ ತನಗೆತಾನೇ ವಿರುದ್ಧವಾಗಿರುವಂತೆ ತೋರುತ್ತದೆ. ಏಕೆಂದರೆ ಎಲ್ಲರನ್ನೂ ಕೊಂದು ಯಾರನ್ನೂ ಕೊಂದಿಲ್ಲ ಎನ್ನುವದು ಹೇಗೂ ಹೊಂದಿಕೆಯಾಗುವದಿಲ್ಲ. ಯಾವನೋ ಒಬ್ಬ ಅಪರಾಧಿಯು ಕೋರ್ಟಿನ ವಿಚಾರಣೆಯ ಕಾಲಕ್ಕೆ "ಸ್ವಾಮಿ, ನನ್ನನ್ನು ಅಪರಾಧಿಯೆಂದು ತಿಳಿಯುವದಕ್ಕೆ ಕಾರಣವಿಲ್ಲ ; ಏಕೆಂದರೆ ಯಾವನಿಗೆ ನಿರಹಂಕಾರಭಾವವಿರುವದೋ ಅವನು ಕೊಂದರೂ ಕೊಂದಿಲ್ಲ ಎಂದು ಭಗವದ್ಗೀತೆಯಲ್ಲಿ ಹೇಳಿದೆ" ಎಂದು ಯುಕ್ತಿಪೂರ್ವಕವಾಗಿ ವಾದಿಸಿದನಂತೆ. ಆಗ ಕೋರ್ಟಿನ ನ್ಯಾಯಾಧಿಪತಿಯು ಸ್ವಲ್ಪ ಹಾಸ್ಯರಸಿಕನಾದ್ದರಿಂದ `ಸರಿಯೆ, ನಾನು ನಿನ್ನನ್ನು ದಂಡಿಸಿದರೂ ಗೀತೆಯ ಪ್ರಕಾರ ದಂಡಿಸಿದಂತೆ ಅಲ್ಲವಷ್ಟೆ ? ಆದ್ದರಿಂದ ಕಾನೂನುಪ್ರಕಾರ ನಿನಗೆ ಆಗಬೇಕಾಗಿರುವ ಶಿಕ್ಷೆಯನ್ನು ವಿಧಿಸಿರುತ್ತೇನೆ" ಎಂದು ಉತ್ತರವನ್ನು ಕೊಟ್ಟನಂತೆ ! ತಿಳಿದೂತಿಳಿದೂ ಕೊಂದವನು ತಾನು ಕೊಂದಿಲ್ಲವೆಂದು ವಾದಿಸಿದರೆ ಅದು

ಕುಯುಕ್ತಿಯಾಗುವದೇ ಹೊರತು ಸರಿಯಾದ ವಾದವಾಗಲಾರದು. ಅಹಂಕಾರಪೂರ್ವಕವಾಗಿ ಕರ್ಮವನ್ನು ಮಾಡುವವನು ತನಗೆ ಅಹಂಕಾರವಿರಲಿಲ್ಲವೆಂದು ಹೊರಗೆ ವಾದಿಸಿದರೂ ತನ್ನ ಕರ್ಮದ ಫಲವನ್ನು ಅನುಭವಿಸಲೇಬೇಕು. ಕರ್ಮಸಂಗವೂ ಫಲಾಸಕ್ತಿಯೂ ನಿಜವಾಗಿ ಇಲ್ಲದವನು ಮೂರು ಲೋಕವನ್ನೇ ಕೊಂದರೂ ಕೊಂದಂತಲ್ಲ, ಎಂದರೆ ಕೊಂದದ್ದರ ಕೆಟ್ಟಫಲವು ಅವನಿಗೆ ಆಗುವದಿಲ್ಲ - ಎಂಬುದು ನಿರ್ಬಾಧವಾಗಿಯೇ ಇರುತ್ತದೆ. ಇದಕ್ಕೆ ಭಗವಂತನೇ ಸಾಕ್ಷಿ. ಅವನು ಇಡಿಯ ಜಗತ್ತನ್ನೇ ಪ್ರಲಯಕಾಲದಲ್ಲಿ ನಾಶಮಾಡುತ್ತಾನೆ ; ಆದರೂ ಅದರಿಂದಾದ ಫಲವೇನೂ ಅವನಿಗೆ ಅಂಟಿಕೊಳ್ಳುವದಿಲ್ಲ. ಆದ್ದರಿಂದಲೇ ಹಿಂದೆ `ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್" (4-13) ನಾನು ಅದನ್ನು ಮಾಡಿದರೂ ಮಾಡಿದವನಲ್ಲ - ಎಂದು ಭಗವಂತನು ಹೇಳಿರುತ್ತಾನೆ. ನಾನು ಮಾಡುತ್ತೇನೆ ಎಂಬ ಅಭಿಮಾನವೇ ಕರ್ಮಕ್ಕೂ ಕರ್ಮಫಲಕ್ಕೂ ಗಂಟುಬೀಳುವಂತೆ ಮಾಡುತ್ತದೆ. ಉದಾಹರಣೆಗೆ ನೋಡಿರಿ. ನಾಟಕದಲ್ಲಿ ಭೀಮ, ದುಶ್ಶಾಸನರ ಪಾತ್ರವನ್ನು ವಹಿಸಿದವರಿಬ್ಬರೂ ಜನರಿಗೆ ಅಂಜಿಕೆಯನ್ನುಂಟುಮಾಡುವಂತೆ ಯುದ್ಧವನ್ನು ಮಾಡಿದರೂ ಅವರು ನಿಜವಾಗಿ ಯುದ್ಧ ಮಾಡಿಲ್ಲ. ಆ ಅಭಿನಯದಲ್ಲಿ ಮಾತ್ರ ಅವರಿಗೆ ಅಭಿಮಾನವಿರುವದರಿಂದ ಸರಿಯಾಗಿ ಅಥವಾ ತಪ್ಪಾಗಿ ಅಭಿನಯಿಸಿದ ಕೀರ್ತ್ಯಪಕೀರ್ತಿಗಳೂ ಕಂಪೆನಿಯ ಯಜಮಾನನಿಂದ ಪುರಸ್ಕಾರ ತಿರಸ್ಕಾರಗಳೂ ಅವರಿಗೆ ತಪ್ಪದೆ ಆಗುತ್ತವೆ. ಅಲ್ಲವೆ ?

ಲೋಕದಲ್ಲಿ ನಿಃಸ್ವಾರ್ಥತೆಯಿಂದ ಕರ್ಮವನ್ನು ಮಾಡುತ್ತೇವೆಂದು ಹೇಳಿಕೊಳ್ಳುತ್ತಿರುವವರೂ ತಮಗೆ ಸ್ವಾರ್ಥತ್ಯಾಗಿಗಳೆಂಬ ಕೀರ್ತಿ ಬರಬೇಕೆಂಬ ದೊಡ್ಡ ಆಸೆಯನ್ನು ಇಟ್ಟುಕೊಂಡಿರುತ್ತಾರೆ. ಈ ಶ್ಲೋಕದಲ್ಲಿ "ಯಾವನಿಗೆ ಅಹಂಕಾರ ಭಾವವಿರುವದಿಲ್ಲವೋ" ಎಂದು ಹೇಳಿರುವದರಲ್ಲಿ ಯಾವದೊಂದು ಅಹಂಕಾರವೂ ಇರಬಾರದೆಂಬ ಅಭಿಪ್ರಾಯವೇ ಅಡಗಿರುತ್ತದೆ. ಶ್ರೀಕೃಷ್ಣನು ಈ ಗೀತೋಪದೇಶವನ್ನು ತನಗೆ ಯಾವದಾದರೊಂದು ಹೆಸರುವಾಸಿ ಬರಲಿ - ಎಂಬ ಸಂಕಲ್ಪದಿಂದ ಮಾಡಿರುವದಿಲ್ಲ; ಅರ್ಜುನನೂ "ನನ್ನ ನಿಮಿತ್ತದಿಂದ ಗೀತೋಪದೇಶವಾಯಿತೆಂಬ ಕೀರ್ತಿಯು ನನಗೆ ಬರಲಿ!" ಎಂದು ಶ್ರವಣಮಾಡಿರುವದಿಲ್ಲ. ಸಾತ್ತ್ವಿಕ ಕರ್ಮವನ್ನುಮಾಡುವವರು ಸಾತ್ತ್ವಿಕಾಹಂಕಾರವನ್ನಾದರೂ ಇಟ್ಟುಕೊಂಡೇ ಇರಬೇಕಷ್ಟೆ ; ಆದರೆ ಇಲ್ಲಿ ಅದನ್ನೂ ಬಿಟ್ಟಿರುವವರ ವಿಷಯವನ್ನು ಹೇಳಿರುತ್ತದೆ. ಶಾಸ್ತ್ರಾಚಾರ್ಯರ ಉಪದೇಶದಿಂದ ಸಂಸ್ಕಾರವನ್ನು ಹೊಂದಿದ ಚಿತ್ತವುಳ್ಳವನಾಗಿ "ಅಧಿಷ್ಠಾನವೇ ಮುಂತಾದ ಐದು ಕಾರಣಗಳೇ ಆತ್ಮನಲ್ಲಿ ಕಲ್ಪಿತವಾಗಿ ಕರ್ಮವನ್ನುಂಟುಮಾಡುತ್ತಲಿವೆ ; ನಾನಾದರೊ ಅವುಗಳಿಗೂ ಸಾಕ್ಷಿಯಾಗಿರುವದರಿಂದ ಹೇಗೆ ನೋಡಿದರೂ ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ ಎಂಬ ಉತ್ತಮಜ್ಞಾನವನ್ನು ಯಾವನು ಪಡೆದುಕೊಂಡಿರುತ್ತಾನೋ ಅವನೇ ಸರ್ವಥಾ ಅಹಂಭಾವವಿಲ್ಲದವನು ; ಅವನಿಗೆ ಯಾವ ಕರ್ಮದ ಫಲವೂ ಅಂಟುವಂತೆ ಇಲ್ಲ - ಎಂಬುದರಲ್ಲಿ ಶ್ಲೋಕದ ತಾತ್ಪರ್ಯವಿದೆ.

ಮನುಷ್ಯನು ಕೆಲಸಮಾಡುತ್ತಿದ್ದರೂ ಅಹಂಭಾವವನ್ನು ಬಿಟ್ಟಿರುವದು ಸಾಧ್ಯವೆ - ಎಂದು ಯಾರಾದರೂ ಕೇಳಬಹುದು. ಇದು ಸಾಧ್ಯವೆಂಬುದನ್ನು ಆತ್ಮಪರೀಕ್ಷೆಗೆ ಸಿದ್ಧರಾಗಿರುವವರೆಲ್ಲರೂ ಮನಗಾಣುವದಕ್ಕಾಗುತ್ತದೆ. ಉದಾಹರಣೆಗೆ ನೋಡಿ. ಸಂಗೀತವನ್ನು ಆನಂದದಿಂದ ಹಾಡುತ್ತಿರುವವನು ರಾಗದಲ್ಲಿಯೇ ತಲ್ಲೀನನಾಗಿರುತ್ತಾನೆ ; ಆಗ ಅವನಿಗೆ ಹೊರಗಿನ ಯಾವ ಪ್ರತ್ಯಯವೂ ಇರುವದಿಲ್ಲ. ನಾನು ಹಾಡುತ್ತಿದ್ದೇನೆ ಎಂಬ ಸ್ಫೂರ್ತಿಯೂ ಇರುವದಿಲ್ಲ. ಹೀಗೆಯೇ ಚಿತ್ರಕರ್ಮ, ಶಿಲ್ಪಕರ್ಮ, ಕಾವ್ಯರಚನೆ - ಮುಂತಾದವುಗಳನ್ನೂ ಉದಾಹರಿಸಬಹುದು. ಅತ್ಯಂತವಾದ ಹರ್ಷ, ದುಃಖ, ಭಯಾದಿಗಳು ನಮ್ಮನ್ನು ಮೈಮರೆಯುವಂತೆ ಮಾಡುವಾಗಲೂ ಅಹಂಭಾವವು ಮರೆಯಾಗಿರುವದು ಅನುಭವಕ್ಕೆ ಬರುತ್ತದೆ. ಇಷ್ಟೇ ಅಲ್ಲ. ವ್ಯವಹಾರದಲ್ಲಿ ಮಗ್ನರಾಗಿರುವವರಿಗೆಲ್ಲ ಅಹಂಭಾವವು ಸಾಮಾನ್ಯವಾಗಿ ಮರೆಯಾಗಿರುತ್ತದೆ ; ಉದ್ದೇಶಪೂರ್ವಕವಾಗಿ "ನಾನು ಇದನ್ನು ಮಾಡುತ್ತಿದ್ದೇನೆ" ಎಂಬ ಭಾವವನ್ನು ಎಬ್ಬಿಸಿಕೊಂಡಾಗ ಮಾತ್ರ ಅದು ತಲೆದೋರುತ್ತದೆ. ಆದ್ದರಿಂದ ನಮ್ಮಂಥ ಸಾಮಾನ್ಯರಿಗೂ ಅಹಂಭಾವವು ಕಾಣಿಸಿಕೊಳ್ಳದೆ ಇರುವದುಂಟು ಎಂದಾಯಿತು. ಆದರೆ ಆತ್ಮಜ್ಞಾನವುಂಟಾಗುವವರೆಗೂ ನಮಗೆ ಬೀಜರೂಪದಿಂದ ಅಹಂಭಾವವು ಇದ್ದುಕೊಂಡಿರುತ್ತದೆ ; ಸುಷುಪ್ತಿಯಲ್ಲಿ ಯಾವ ಅಹಂಭಾವವೂ ಇಲ್ಲದಿದ್ದರೂ ಬೀಜರೂಪದಲ್ಲಿ ಇದ್ದುಕೊಂಡಿರುವದರಿಂದಲೇ ಅಲ್ಲವೆ, ಎಚ್ಚತ್ತ ಮೇಲೆ ಕಾಣಿಸಿಕೊಳ್ಳುವದು? ಆದರೆ ಪರಮಾತ್ಮಜ್ಞಾನವು ಉಂಟಾದ ಬಳಿಕ ಎಂದಿಗೂ ಯಾವ ಅಹಂಭಾವವೂ ಒಂದಿಷ್ಟೂ ಉಂಟಾಗುವದೇ ಇಲ್ಲ. ಅದು ಆಗ ಸಂಪೂರ್ಣವಾಗಿ ಅಳಿಸಿಹೋಗಿಬಿಟ್ಟಿರುತ್ತದೆ.

ಇಲ್ಲಿ `ಹತ್ವಾಪಿ' (ಕೊಂದರೂ) ಎಂದು ಹೇಳಿರುವದು ಉಪಲಕ್ಷಣಕ್ಕಾಗಿ. ಯಾವ ಕ್ರಿಯೆಯನ್ನು ಮಾಡಲಿ ಅಹಂಭಾವವಿದ್ದರೇ ಫಲವಾಗುತ್ತದೆ, ಇಲ್ಲದಿದ್ದರೆ ಇಲ್ಲ ಎಂಬುದು ಇಲ್ಲಿ ಸಾರವು. "ಆತ್ಮನು ಅವಿನಾಶಿಯು, ನಿತ್ಯನು, ಎಂದು ತಿಳಿದುಕೊಂಡಿರುವವನು ಕೊಲ್ಲುವದೂ ಇಲ್ಲ" ಎಂದು ಎರಡನೆಯ ಅಧ್ಯಾಯದಲ್ಲಿ ಹೇಳಿದ್ದರಭಿಪ್ರಾಯವೇ ಇದು. ಅಹಂಭಾವವು ನಮಗೂ ತಿಳಿಯದಂತೆ ನಮ್ಮನ್ನು ಹಿಡಿದುಕೊಂಡುಬಿಡುತ್ತದೆ ; ಆದ್ದರಿಂದ ಎಚ್ಚರಿಕೆಯಿಂದಿರಬೇಕು. "ಜಪವನ್ನು ಯಾವಾಗ ಬೇಕಾದರೂ ಮಾಡಬಹುದು ; ಏಕೆಂದರೆ ಈ ಮಂತ್ರವು ಶುಚಿಯಾಗಿಯೇ ಇರುತ್ತದೆ" ಎಂದು ಮಂತ್ರಮಾಹಾತ್ಮ್ಯವನ್ನು ವರ್ಣಿಸಿರುವದುಂಟು. "ಹಾಗಾದರೆ ಇದನ್ನು ಮೃತಾಶೌಚದಲ್ಲಿಯೂ ಮಾಡಬಹುದಷ್ಟೆ?" ಎಂದು ಕೇಳಿ ಹ್ಞೂ ಎನ್ನಿಸಿಕೊಂಡು ಅಂಥ ದಿವಸವನ್ನೇ ಜಪಕ್ಕೆ ಆರಿಸಿಕೊಂಡವನಿಗೆ ಅಹಂಭಾವವು ಖಂಡಿತವಾಗಿಯೂ ಉಂಟೆಂದು ನಿಶ್ಚಯಿಸಬಹುದು ; ಏಕೆಂದರೆ ಆ ಕಾರ್ಯವು ಮಂತ್ರದ ಪ್ರೇಮದಿಂದಾದದ್ದಲ್ಲ. ಇದಂತಿರಲಿ. ಮನುಷ್ಯನಿಗೆ ಅಹಂಭಾವವಿಲ್ಲದಂಥ ಸ್ಥಿತಿಯು ಆಗಾಗ್ಗೆ ಸಹಜವಾಗಿ ಬರುತ್ತಲೇ ಇರುತ್ತದೆ : ಆತ್ಮಜ್ಞಾನಿಯಾದವನಿಗೆ ಎಂದಿಗೂ

ಅಹಂಭಾವವಿರುವದೇ ಇಲ್ಲ. ಆದ್ದರಿಂದ ಅಹಂಭಾವವಿಲ್ಲದೆ ಮಾಡಿದ ಕರ್ಮದಿಂದ ಯಾವನೂ ಲಿಪ್ತನಾಗುವದಿಲ್ಲ ಎಂಬುದೇ ಇಲ್ಲಿ ತಿಳಿಯಬೇಕಾದದ್ದು.

ಹೀಗೆ ಕ್ರಿಯಾಕಾರಕಫಲರೂಪವಾದ ಸಂಸಾರವೆಲ್ಲವೂ ಅಜ್ಞಾನಕೃತವಾದ ಅಹಂಭಾವದಿಂದ ಆಗಿರುತ್ತದೆ ಎಂದು ಹೇಳಿದ್ದಾಯಿತಷ್ಟೆ. ಸಮ್ಯಗ್ಜ್ಞಾನದಿಂದಾಗುವ ಪರಮಪುರುಷಾರ್ಥವನ್ನು ತಿಳಿಯಪಡಿಸುವದಕ್ಕಾಗಿ ಈಗ ಕರ್ಮವಿಚಾರವನ್ನು ಇನ್ನಷ್ಟು ಒಳಹೊಕ್ಕು ವಿಸ್ತರಿಸಲಾಗುತ್ತದೆ :

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ 18-18**

ಕರ್ಮದಲ್ಲಿ ಜ್ಞಾನಕರ್ಮಗಳೆರಡೂ ಅಂತರ್ಗತವಾಗಿರುತ್ತವೆ. ಏಕೆಂದರೆ ಕರ್ಮವು ಜ್ಞಾನಪೂರ್ವಕವಾಗಿಯೇ ಮಾಡತಕ್ಕದ್ದು ; ಜ್ಞಾನವು ಅಂತರ್ವೇಷ, ಕರ್ಮವು ಬಹಿರ್ವೇಷ. ಇದನ್ನು ತಿಳಿಸುವದಕ್ಕಾಗಿ ಭಗವಂತನು ಕರ್ಮವನ್ನು ವಿಭಜನೆಮಾಡುತ್ತಿದ್ದಾನೆ, ಕರ್ಮಚೋದನೆಗೆ ಜ್ಞಾತೃ, ಜ್ಞಾನ, ಜ್ಞೇಯ ಇವೆಲ್ಲವೂ ಬೇಕು ; ಇದರಂತೆ ಕರ್ಮಕ್ಕೆ ಕರ್ತೃ, ಕರ್ಮ, ಕರಣ ಎಂಬ ಮೂರು ಇರಬೇಕು. ಇವುಗಳನ್ನು ಗುಣತ್ರಯದೃಷ್ಟಿಯಿಂದ ವಿಂಗಡಿಸಿ ಸಾತ್ತ್ವಿಕವಾದದ್ದನ್ನು ಗ್ರಹಿಸಬೇಕೆಂದೂ ಮಿಕ್ಕೆರಡನ್ನೂ ತ್ಯಜಿಸಬೇಕೆಂದೂ ಹೇಳುವದಕ್ಕಾಗಿ ಈ ವಿಂಗಡವನ್ನು ಹೇಳಿದೆ. ಕರ್ಮದ ತತ್ತ್ವವನ್ನು ತಿಳಿದು ಹಾನೋಪಾದಾನಗಳನ್ನು ಮಾಡಬೇಕಾಗುತ್ತದೆ. ಇದಕ್ಕೆಲ್ಲ ಏತರಲ್ಲಿ ತಾತ್ಪರ್ಯ - ಎಂದರೆ ಕರ್ಮಯೋಗವನ್ನೂ ಅದರಿಂದಾಗುವ ಸಮ್ಯಗ್ಜ್ಞಾನವನ್ನೂ ತಿಳಿಸುವದರಲ್ಲಿಯೇ. ಕರ್ಮಯೋಗವನ್ನು ಮೊದಲು ತಿಳಿಸಿ ಅದರಿಂದಾಗುವ ಸಮ್ಯಗ್ದರ್ಶನವನ್ನು ಆಮೇಲೆ ತಿಳಿಸುವದಕ್ಕಾಗಿಯೇ ಈ ಕರ್ಮತತ್ತ್ವದ ವಿಭಜನೆ. ದರ್ಜಿಯವರು ಮೊದಲೇ ಹುಡುಗರ ಕೈಯಲ್ಲಿ ಸೂಜಿಯನ್ನು ಕೊಟ್ಟು ಹೊಲಿಯುವದಕ್ಕೆ ಹೇಳಿಕೊಡುವದಿಲ್ಲ. ಅವರನ್ನು ಒಂದು ಕಡೆ ಕುಳ್ಳಿರಿಸಿ ಎಡಗೈಯಲ್ಲಿ ಒಂದು ಕಡ್ಡಿಯನ್ನು ಇಟ್ಟು ಅದನ್ನು ಮೇಲಕ್ಕೆ ಎತ್ತುವದನ್ನು ಕಲಿಸುತ್ತಾರೆ ಕಣ್ಣಿಗೆ ಚುಚ್ಚದಂತೆ ಬಲಗಿವಿಯ ಆಚೆಗೆ ಆ ಕಡ್ಡಿಯನ್ನು ಎತ್ತಿ ಮತ್ತೆ ಎಡಗೈಯಲ್ಲಿಡಬೇಕು. ಹೀಗೆ ಮಾಡಿ ಮಾಡಿ ಎತ್ತಲಾಗಿ ನೋಡುತ್ತಾ ಎತ್ತಿದರೂ ಕಡ್ಡಿಯ ಕೈ ಬಲಗಿವಿಯ ಆಚೆಗೇ ಹೋಗುವ ಅಭ್ಯಾಸವಾಯಿತೆಂದರೆ ಆಗ ಸೂಜಿಯನ್ನು ಕೊಡುತ್ತಾರೆ. ಇಲ್ಲಿ ಕಡ್ಡಿ ಎತ್ತಿಸುವದು ಅಭ್ಯಾಸಕ್ಕಾಗಿ, ಸೂಜಿಯನ್ನು ಉಪಯೋಗಿಸುವದು ನಿಜವಾಗಿ ಕೆಲಸಕ್ಕಾಗಿ. ಅಲ್ಲವೆ ? ಇದರಂತೆಯೇ ಕರ್ಮವನ್ನು ಮಾಡುವಾಗ ಹೆಚ್ಚಿನ ವಿಚಾರವೇನೂ ಬೇಕಿಲ್ಲ ; ಕರ್ಮವನ್ನು ಹೇಗೆ ಮಾಡಬೇಕು ?- ಎಂಬಿಷ್ಟನ್ನು ತಿಳಿದುಕೊಂಡರೆ ಸಾಕು ; ಆದರೆ ಅದು ಅಳವಟ್ಟ ಮೇಲೆ ಅದರ ಫಲವೇನು ಎಂಬುದನ್ನು ವಿಚಾರಮಾಡಬಹುದು. ಮನಸ್ಸನ್ನು ಒಂದಾನೊಂದು ಸ್ಥಿತಿಗೆ ಅಂದರೆ ಸಮ್ಯಗ್ಜ್ಞಾನಕ್ಕೆ ಯೋಗ್ಯವಾಗುವಂತೆ ಮಾಡುವದೇ ಕರ್ಮವು. ಆದ್ದರಿಂದ

ಭಗವಂತನು ಕರ್ಮಗಳಿಗೆ ಒಂದು ದೊಡ್ಡ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಡು ಆ ಫಲವನ್ನು ಕೊಡುವದಕ್ಕೆ ತಕ್ಕಂತೆ ಕರ್ಮಮಾರ್ಗವನ್ನು ಉಪದೇಶಿಸಿರುತ್ತಾನೆ. ನಮ್ಮ ಕರ್ಮವೆಲ್ಲ ಭಗವಂತನನ್ನೇ ಲಕ್ಷ್ಯದಲ್ಲಿಟ್ಟು ಮಾಡಿದ್ದಾಗಿರಬೇಕು ; ಆದ್ದರಿಂದ ಕರ್ಮಫಲವನ್ನು ಲಕ್ಷ್ಯದಲ್ಲಿ ಇಡದೆ ಇರಬೇಕು. ಇದೇ ಕರ್ಮದ ರಹಸ್ಯವಾದ ಕರ್ಮಯೋಗವು.

## ೧೭೭. ಕರ್ಮದ ಅಂಗವಾಗಿರುವ ಜ್ಞಾನಾದಿಗಳು 18 - (19-20)

(16-7-50)

ಅಧ್ಯಾತ್ಮಶಾಸ್ತ್ರಕ್ಕೆ ನಮ್ಮ ಅಂತಃಕರಣವನ್ನು ಪ್ರಪಂಚದ ವಿಷಯಕ್ಕೆ ಹೇಗೆ ನಡೆದುಕೊಳ್ಳಲು ಸಿದ್ಧವಾಗಿರಿಸಬೇಕೆಂಬುದೇ ಗುರಿ. ಎಲ್ಲಾ ಶಾಸ್ತ್ರಗಳೂ ಒಂದೊಂದು ತಿಳಿವಳಿಕೆಯನ್ನು ಕೊಡುವದಕ್ಕೆ ಹೊರಟಿವೆ. ಆದರೆ ಅಧ್ಯಾತ್ಮಶಾಸ್ತ್ರವು ವಿಶೇಷವಾದ ಒಂದು ವಿಷಯವನ್ನು ಪ್ರತಿಪಾದಿಸುವದಕ್ಕೆ ಹೊರಟಿರುವದಿಲ್ಲ ; ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ಜೀವನದ ಎಲ್ಲಾ ಅಂತಸ್ತುಗಳಲ್ಲಿಯೂ ನಮ್ಮ ನಡೆ, ನುಡಿ, ಆಲೋಚನೆ-ಇವು ಹೇಗೆ ಇರಬೇಕು ? ಎಂಬುದನ್ನು ಸಾಮಾನ್ಯವಾಗಿ ಗೊತ್ತುಪಡಿಸುವದೇ ಈ ಶಾಸ್ತ್ರದ ಉದ್ದೇಶವು. ಒಬ್ಬ ಕಪಿಕುಣಿಸುವವನನ್ನು ಕಂಡರೆ ಮಕ್ಕಳಿಗೆ ಎಲ್ಲಾ ಕೆಲಸವನ್ನೂ ಬಿಟ್ಟು ಅವನ ಜೊತೆಯಲ್ಲಿಯೇ ಹೋಗಬೇಕೆನ್ನಿಸುತ್ತದೆ ; ಯುವಕರಿಗೆ ಕೊಂಚ ನೋಡಿ ಮುಂದುಹೋಗುವಂತಾಗುತ್ತದೆ ; ಮುದುಕರಿಗೊ ಎಂದರೆ ಅಸಡ್ಡೆಯಿಂದ ಇಂಥದ್ದೆಷ್ಟೋ ಇದೆ ಎಂದುಕೊಂಡು ಮುಂದೆಸಾಗುವಂತೆ ಆಗುತ್ತದೆ. ಯಾವನೋ ಒಬ್ಬ ಸುಭಾಷಿತಕಾರನು ಎಂದಿರುವಂತೆ ಕನ್ನಡಿಯನ್ನು ನೋಡಿದ ತರುಣನು ಕ್ರಮಕ್ರಮವಾಗಿ ನರವೀರವಾನರನಾಗುತ್ತಾನೆ. ಮೊದಲು ಹಾಗೆಯೇ ನೋಡಿಕೊಳ್ಳುವದು, ಸ್ವಲ್ಪ ಹೊತ್ತಾಗುತ್ತಲೂ ತನ್ನ ಮೀಸೆಯ ಮೇಲೆ ಕೈ ಹಾಕಿಕೊಳ್ಳುವದು, ಆಮೇಲೆ ಹಲ್ಲುಕಿರಿದು ನೋಡಿಕೊಳ್ಳುವದು ಎಂಬ ಪ್ರತಿಕ್ರಿಯೆಗಳು ಆಗುತ್ತವೆ. ಇದರಂತೆ ಪ್ರಪಂಚವನ್ನು ನೋಡಿದಾಗಲೂ ಬೇರೆ ಬೇರೆಯವರಿಗೆ ಬೇರೆ ಬೇರೆಯ ಪ್ರತಿಕ್ರಿಯೆಗಳು ಮನಸ್ಸಿನಲ್ಲಿ ಉಂಟಾಗುತ್ತವೆ. ಯಾವ ಪ್ರತಿಕ್ರಿಯೆಯಾಗುವದು ಉಚಿತ, ಯಾವದಾಗುವದು ಅನುಚಿತ?- ಎಂಬುದನ್ನು ನಿರ್ಣಯಿಸುವದಕ್ಕೆ ಅಧ್ಯಾತ್ಮಶಾಸ್ತ್ರವು ಬೇಕು. ಅರ್ಜುನನು ಮೊದಲು ವೀರನಾಗಿದ್ದವನು ಯುದ್ಧರಂಗದಲ್ಲಿದ್ದ ಬಂಧುಗಳ ದೃಶ್ಯದಿಂದ ಹೇಡಿಯಂತೆ ವರ್ತಿಸುವದಕ್ಕೆ ಮೊದಲು ಮಾಡಿರುತ್ತಾನೆ. ಸ್ವಲ್ಪ ಹೊತ್ತಿನ ಬಳಿಕ "ನನಗೆ ಏನೂ ತೋಚುವದಿಲ್ಲ, ನಿನ್ನ ಶಿಷ್ಯನಾಗಿರುತ್ತೇನೆ ; ಶರಣುಹೊಕ್ಕಿರುವ ನನಗೆ ಧರ್ಮೋಪದೇಶವನ್ನು ಮಾಡು" ಎಂದು ಬೇಡಿಕೊಂಡಿರುತ್ತಾನೆ. ಮನಸ್ಸಿನಲ್ಲಿ ಪ್ರಪಂಚದ ಬಗ್ಗೆ ಆಗುವ ಇಂಥ ಪ್ರತಿಕ್ರಿಯೆಗಳನ್ನು

ಹೇಗೆ ತಡೆದುಕೊಳ್ಳಬೇಕು ? ನಮ್ಮ ಮನಸ್ಸು ಹೇಗಿದ್ದರೆ ನಮಗೆ ಅಡಿಯಾಳಾಗುವದು, ಹೇಗಿದ್ದರೆ ನಾವೇ ಅದಕ್ಕೆ ಅಡಿಯಾಳಾಗುವೆವು - ಎಂಬುದರ ರಹಸ್ಯವನ್ನು ಭಗವಂತನು ಅರ್ಜುನನನ್ನು ನೆಪಮಾಡಿಕೊಂಡು ಬಿಡಿಸಿಹೇಳಿರುತ್ತಾನೆ. ಇದೇ ಗೀತಾಶಾಸ್ತ್ರ.

ನಮ್ಮ ಮನಸ್ಸಿನ ವ್ಯವಹಾರವೆಲ್ಲ ಕರ್ಮ, ಜ್ಞಾನ ಎಂಬ ಎರಡರಲ್ಲಿ ಅಡಕವಾಗಿರುತ್ತದೆ. ನಡೆ, ತಿಳಿವಳಿಕೆ ಈ ಎರಡರಲ್ಲಿಯೇ ನಮ್ಮ ವ್ಯವಹಾರವೆಲ್ಲವೂ ಮುಗಿಯುತ್ತದೆ. ನಡೆಯ ಪೂರ್ಣತೆಯೇ ಕರ್ಮಯೋಗ, ತಿಳಿವಳಿಕೆಯ ಪೂರ್ಣತೆಯೇ ಸಾಂಖ್ಯ ಅಥವಾ ಜ್ಞಾನಯೋಗ. ಕರ್ಮ, ಜ್ಞಾನ ಎರಡರ ದೃಷ್ಟಿಯಿಂದಲೂ ತ್ಯಾಗವನ್ನು ಈ ಹದಿನೆಂಟನೆಯ ಅಧ್ಯಾಯದಲ್ಲಿ ವಿವರಿಸಿರುತ್ತದೆ. ಜ್ಞಾನದೃಷ್ಟಿಯಿಂದ ಮಾಡುವದು ಸರ್ವಕರ್ಮತ್ಯಾಗ, ಕರ್ಮಯೋಗದ ದೃಷ್ಟಿಯಿಂದ ಮಾಡಬೇಕಾದದ್ದು ಸಂಗಫಲತ್ಯಾಗ. ಈ ತ್ಯಾಗವೇ ಗೀತೋಪದೇಶದ ಸರ್ವಸ್ವ. ಎಲ್ಲರೂ ಇದನ್ನು ಕೇಳಿಹೇಳಿ ಹೊಗಳುತ್ತಾರೆ. ಆದರೆ ಆಚರಣೆಯ ಮಾತು ಬಂದಾಗ ಸುಮ್ಮನೆ ತ್ಯಾಗವನ್ನು ಮಾಡಬೇಕೆಂದರೆ ಜನರಿಗೆ ಬಹಳ ಗಾಬರಿಯಾಗುತ್ತದೆ. ಗೀತೆಯೇನೋ ತ್ಯಾಗವನ್ನೇ ಮಾಡಬೇಕೆಂದು ಹೇಳುತ್ತಲೇ ಇದೆ, ಇದೇ ಪರೀಕ್ಷೆಯ ಕಾಲ. "ಫಲತ್ಯಾಗ, ಸಂಗತ್ಯಾಗ, ಸರ್ವತ್ಯಾಗ ಇವುಗಳಲ್ಲಿ ಯಾವದಕ್ಕೆ ಸಿದ್ಧರಾಗಿದ್ದೀರಿ ?" ಎಂದು ಗೀತೆಯು ಎಲ್ಲರನ್ನೂ ಕೇಳುತ್ತಿದೆ. ಕರ್ಮತ್ಯಾಗವನ್ನು ಮಾಡುವದಕ್ಕೆ ಸಿದ್ಧರಾಗುವವರು ಇಬ್ಬರು ; ಒಬ್ಬನು ಧರ್ಮಲಂಡ, ಅವನಿಗೆ ಯಾವ ಕರ್ಮದಲ್ಲಿಯೂ ಫಲದಲ್ಲಿಯೂ ನಂಬಿಕೆಯಿಲ್ಲ. ಇನ್ನೊಬ್ಬನು ಪರಮೇಶ್ವರನ ಭಕ್ತನು ; ಅವನಿಗೆ ಪರಮೇಶ್ವರನ ಹೊರತು ಮತ್ತೇನೂ ಬೇಕಿರುವದಿಲ್ಲ. ಮಧ್ಯಮ ಅಂತಸ್ತಿನ ಮನಸ್ಸಿನವರಿಗೆ ಬಲು ಕಷ್ಟ. ಕರ್ಮವನ್ನು ಮಾಡಬೇಕೊ, ಬಿಡಬೇಕೊ ?- ಎಂದು ಅವರ ಮನಸ್ಸು ಆಲೋಚಿಸುತ್ತಾ ತೂಗಾಡುತ್ತಿರುತ್ತದೆ.

ನಿಜವಾಗಿ ನೋಡಿದರೆ ನಮಗೆ ಇಷ್ಟವಿರಲಿ, ಇಲ್ಲದಿರಲಿ ; ವಿಷಯಗಳು ನಮ್ಮನ್ನು ಬಿಟ್ಟೇಹೋಗುವವು. ಭರ್ತೃಹರಿ ಹೇಳಿರುವದನ್ನು ಕೇಳಿರಿ :

**ಅವಶ್ಯಂ ಯಾತಾರಶ್ಚಿರತರಮುಷಿತ್ವಾಪಿ ವಿಷಯಾ ।**
**ವಿಯೋಗೇ ಕೋ ಭೇದಸ್ತ್ಯಜತಿ ನ ಜನೋ ಯತ್ಸ್ವಯಮಮೂನ್ ॥**

**ವ್ರಜನ್ತಃ ಸ್ವಾತನ್ತ್ರ್ಯಾದತುಲಪರಿತಾಪಾಯ ಮನಸಃ ।**
**ಸ್ವಯಂ ತ್ಯಕ್ತ್ವಾ ಹ್ಯೇತೇ ಶಮಸುಖಮನನ್ತಂ ವಿದಧತಿ ॥**

ವಿಷಯಗಳು ಎಷ್ಟುದಿನವಿದ್ದರೂ ಅವಶ್ಯವಾಗಿ ಬಿಟ್ಟು ಹೋಗಲೇಬೇಕು ; ಆದರೆ ಹೇಗೂ ವಿಷಯವಿಯೋಗವು ಆಗಲೇಬೇಕಾಗಿರುವದರಿಂದ ಜನರು ತಾವೇ ಏಕೆ ಬಿಡಬಾರದು? ಆದರೆ ಈ ಎರಡು ಬಗೆಯ ವಿಯೋಗಗಳಲ್ಲಿ ತಾರತಮ್ಯವುಂಟು. ವಿಷಯಗಳು ತಾವೇ ಹೋಗುವಾಗ ಮನುಷ್ಯರನ್ನು ಬಗೆಬಗೆಯಿಂದ ತಾಪಗೊಳಿಸಿ ಅಳುವಂತೆಮಾಡಿ ಹೋಗುತ್ತವೆ;

ನಾವೇ ಅವನ್ನು ಬಿಟ್ಟರೆ ಅನಂತವಾದ ಶಾಂತಿಸುಖವುಂಟು. ಇದನ್ನು ತಿಳಿಸುವದಕ್ಕೇ ಗೀತೆಯು ಬಂದಿರುತ್ತದೆ. ನಮ್ಮಗಳ ತಪ್ಪು ತಿಳಿವಳಿಕೆಯೇನೆಂದರೆ ವಿಷಯಗಳಿಗೂ ನಮಗೂ ಏನೋ ಸಂಬಂಧವಿದೆ ; ಅವಕ್ಕೂ ನಮಗೂ ಯಾವದೋ ಒಂದು ಬಿಡಿಸಲಾರದಂಥ ಕಗ್ಗಂಟು ಬಿದ್ದಿರುತ್ತದೆ. ಅವು ಅತ್ತಲಾಗಿ ಎಳೆಯುತ್ತಿವೆ, ನಾವು ಇತ್ತಲಾಗಿ ಎಳೆದುಕೊಳ್ಳುತ್ತಿದ್ದೇವೆ ; ಅವನ್ನು ಬಿಟ್ಟರೆ ಕೆಟ್ಟೆವು - ಹೀಗೆಂಬುದು ಪ್ರಾಕೃತರೆಲ್ಲರ ಭಾವನೆ. ಆದರೆ ನಿಜವೇನು ? ನಮ್ಮ ಪಾಡಿಗೆ ನಾವು ಇರುತ್ತೇವೆ, ಅವುಗಳ ಪಾಡಿಗೆ ಅವು ಇರುತ್ತವೆ. ಮಮತೆ ಎಂಬ ಹುಸಿಯಾದ ಸಂಬಂಧವನ್ನು ಬಿಟ್ಟರೆ ಮತ್ತೆ ಯಾವ ಸಂಬಂಧವೂ ನಮಗೂ ಅವಕ್ಕೂ ಇರುವದೇ ಇಲ್ಲ. ಮಮತೆಯೇ ಬಂಧ, ತ್ಯಾಗವೇ ಆನಂದ !

ಪ್ರಪಂಚವೆಲ್ಲವೂ ನಿಜವಾಗಿ ಆನಂದಮಯವಾಗಿರುತ್ತದೆ. ಅದರ ಕಡೆಗೇ ತಿರುಗಿರಿ ಎಂದು ಗೀತೆಯು ನಮಗೆ ಎಷ್ಟು ಬೋಧಿಸಿದರೂ ನಾವು ಹಿಂತಿರುಗಲೊಲ್ಲೆವು. ಒಂದೊಂದು ಕನಸಿನಲ್ಲಿ ರೆಕ್ಕೆಯಿಲ್ಲದೆಯೇ ನಾವು ಹಾರಾಡುವದಕ್ಕಾಗುವದೆಂಬ ಭಾವನೆ ಬರುತ್ತದೆ. ಕೈಬಡಿದರೆ ಮೇಲಕ್ಕೇರುತ್ತೇವೆ, ಇಲ್ಲದಿದ್ದರೆ ಬೀಳುವೆವು - ಎಂದೂ ತೋರುತ್ತಿರುವದು. ಅಲ್ಲವೆ ? ಹೀಗೆಯೇ ಕರ್ತೃತ್ವದಿಂದ ಅಭ್ಯುದಯವಾಗುವದೆಂದೂ ಅದರಿಂದಲೇ ನಮಗೆ ಸುಖಪ್ರಾಪ್ತಿಯಾಗುವದೆಂದೂ ಅದು ಇಲ್ಲದಿದ್ದರೆ ಕೆಡುತ್ತೇವೆಂದೂ ಜನರು ಭಾವಿಸುತ್ತಿದ್ದಾರೆ. ಆದರೆ ಈ ಕರ್ತೃತ್ವಭೋಕ್ತೃತ್ವಗಳು ಕನಸಿನ ಹಾರಾಟ, ಅದರಿಂದಾಗುವ ಸುಖ - ಇವುಗಳಂತೆಯೇ ಇರುತ್ತವೆ. ಅವು ಬರಿಯ ತೋರಿಕೆಯೇ ಹೊರತು ಯಾಥಾರ್ಥ್ಯವಲ್ಲ. ಇವುಗಳಿಂದ ಪಾರಾಗುವದೇ ಅಮೃತತ್ವಕ್ಕೆ ಹಾದಿ ಎಂದು ಗೀತೆಯು ನಮಗೆ ತ್ಯಾಗವನ್ನು ಬೋಧಿಸುವದಕ್ಕೆ ಬಂದಿರುತ್ತದೆ. ಭಗವಂತನು ಇಲ್ಲಿ ಮೇಲೆ ಹೇಳಿದಂತೆ ಎರಡು ಬಗೆಯ ತ್ಯಾಗಗಳನ್ನು ಹೇಳಿ ಅದನ್ನು ವಿವರಿಸುವದಕ್ಕೆ ಹೊರಟಿರುತ್ತಾನೆ.

ಮೊಟ್ಟಮೊದಲು ಸರ್ವಕ್ರಿಯಾಕಾರಕಫಲಗಳೂ ಗುಣಾತ್ಮಕವಾಗಿರುವದರಿಂದ ಮೂರು ಬಗೆ ಎಂಬುದನ್ನು ತಿಳಿಸಬೇಕಾಗಿದೆ. ಅದಕ್ಕಾಗಿ ಭಗವಂತನು ಹೇಳುತ್ತಿದ್ದಾನೇನೆಂದರೆ–

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ 18-19**

ಜ್ಞಾನ, ಕರ್ಮ, ಕರ್ತೃ ಇವು ಮೂರರಲ್ಲಿ ಒಂದೊಂದೂ ಮೂರು ಮೂರು ವಿಧವಾಗಿರುತ್ತವೆ. ಇವುಗಳಲ್ಲಿ ರಾಜಸತಾಮಸಗಳನ್ನು ಬಿಟ್ಟು ಸಾತ್ತ್ವಿಕವಾದದ್ದನ್ನು ಪರಿಗ್ರಹಿಸಬೇಕು. ಗುಣಸಂಖ್ಯಾನದಲ್ಲಿ ಎಂದರೆ ಸಾಂಖ್ಯಶಾಸ್ತ್ರದಲ್ಲಿ ಈ ಸತ್ತ್ವರಜಸ್ತಮೋವಿಭಾಗವನ್ನು ಮಾಡಿ ತಿಳಿಸಿರುತ್ತಾರೆ. ಸಾಂಖ್ಯರು ಬ್ರಹ್ಮಾತ್ಮೈಕತ್ವನ್ನು ತಿಳಿಸಿಲ್ಲವಾದರೂ ಗುಣಗಳ ವಿಷಯದಲ್ಲಿ ಬಹಳ ಕೃಷಿಮಾಡಿರುತ್ತಾರೆ, ಅದನ್ನು ಸಾರಗ್ರಹಣದೃಷ್ಟಿಯಿಂದ ವೇದಾಂತಿಗಳೂ ಅನುಸರಿಸಿರುತ್ತಾರೆ.

ಸಾಂಖ್ಯರು ಹೇಳುವದೇನೆಂದರೆ : ಇಡೀ ಜಗತ್ತೇ ಸತ್ತ್ವರಜಸ್ತಮೋಮಯ ವಾಗಿರುತ್ತದೆ. ಈಗ ಕಪಿಲರ ಅನುಯಾಯಿಗಳೆಂದು ಹೇಳಿಕೊಳ್ಳುವವರು ಯಾರೂ ಇಲ್ಲದಿದ್ದರೂ ಈ ಗುಣತ್ರಯವಾದವು ವ್ಯವಹಾರದಲ್ಲಿನಮಗೆಲ್ಲರಿಗೂ ಸಮ್ಮತವಾಗಿಯೇ ಇರುತ್ತದೆ. ಅಮೆರಿಕದೇಶದ ಮನಃಶಾಸ್ತ್ರಜ್ಞನೊಬ್ಬನು ಮೆದುಳು ಪ್ರಧಾನವಾಗಿರುವವರು, ಹೃದಯವು ಪ್ರಧಾನವಾಗಿರುವವರು, ಹೊಟ್ಟೆಪ್ರಧಾನವಾಗಿರುವವರು ಎಂದು ಮನುಷ್ಯರನ್ನು ಮೂರು ವರ್ಗಗಳಾಗಿ ವಿಂಗಡಿಸಿ ಅವರವರ ಮನಸ್ಸು, ಚೇಷ್ಟೆ, ಮಾತು ಮುಂತಾದವು ಹೇಗೆ ಹೇಗೆ ಇರುವವೆಂಬುದನ್ನು ವಿವೇಚಿಸಿರುತ್ತಾನಂತೆ. ಸಾಂಖ್ಯರು ಮತ್ತೊಂದು ಹೆಚ್ಚಿನ ಶಾಸ್ತ್ರೀಯ ರೀತಿಯಿಂದ ಈ ಗುಣತ್ರಯವಿಭಾಗವನ್ನು ಮಾಡಿರುತ್ತಾರೆ. ಅವರ ವಿಭಾಗವು ಆಧ್ಯಾತ್ಮಿಕ ದೃಷ್ಟಿಯಿಂದ ಮಾಡಿದ್ದಾಗಿರುತ್ತದೆ. ಗುಣಗಳ ಸ್ವರೂಪವು ಅತೀಂದ್ರಿಯವಾದದ್ದು ; ಅವುಗಳ ಕಾರ್ಯಗಳು ಮಾತ್ರ ಗೋಚರವಾಗಿರುತ್ತವೆ. ಮನುಷ್ಯರಲ್ಲಿ, ಪ್ರಾಣಿಗಳಲ್ಲಿ, ದೇವತೆಗಳಲ್ಲಿ - ಎಲ್ಲರಲ್ಲಿಯೂ ಈ ಗುಣಗಳುಂಟು. ವ್ಯಕ್ತಿಗಳ ಗುಣಕ್ರಿಯೆಗಳಲ್ಲಿಯೂ ಅವರ ಅಂಗಾಂಗಗಳಲ್ಲಿಯೂ ಈ ಸಾತ್ತ್ವಿಕಾದಿಭೇದಗಳು ಇರುತ್ತವೆ ಎಂಬುದು ಸಾಂಖ್ಯರ ಮತ. ಗೀತೆಯಲ್ಲಿ ಈ ಗುಣತ್ರಯವಿಭಾಗವನ್ನು ಹೇಳಿರುವದು ಮಿಕ್ಕೆರಡನ್ನು ಬಿಟ್ಟು ಸಾತ್ತ್ವಿಕವಾದದ್ದನ್ನೇ ತೆಗೆದುಕೊಳ್ಳಬೇಕೆಂದು ತಿಳಿಸಿಕೊಡುವದಕ್ಕೆಂದು ಆಗಾಗ ಹೇಳುತ್ತಲೇ ಬಂದಿರುತ್ತೇನೆ. ಅದನ್ನು ಮರೆಯಬಾರದು.

ಸಾತ್ತ್ವಿಕಜ್ಞಾನವು ಯಾವದೆಂದರೆ :

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ 18-20**

"ಸರ್ವಭೂತಗಳಲ್ಲಿ ಒಂದೇ ಅವ್ಯಯಭಾವವನ್ನು ಯಾವ ಜ್ಞಾನದಿಂದ ಕಂಡುಕೊಳ್ಳುತ್ತಾನೋ, ಆ ಭೂತಗಳು ವಿಭಕ್ತವಾಗಿದ್ದರೂ ತಾನು ವಿಭಕ್ತವಾಗದೆ ಇರುವ ಪರಮಾರ್ಥವನ್ನು ಕಂಡುಕೊಳ್ಳುವ ಆ ಜ್ಞಾನವೇ ಸಾತ್ತ್ವಿಕವೆಂದು ತಿಳಿಯಬೇಕು." ಈ ಶ್ಲೋಕದಲ್ಲಿ ಸರ್ವಭೂತವೆಂಬ ಶಬ್ದವು ಅತ್ಯಂತವ್ಯಾಪಕವಾಗಿರುತ್ತದೆ. ಇದರಲ್ಲಿ ಅಡಕವಾಗದ್ದೇ ಇಲ್ಲ. ಒಂದಾನೊಂದು ಸಭೆಯಲ್ಲಿ ಒಬ್ಬ ಗ್ರೀಕ್‌ವಾಗ್ಮಿಯು ಮನುಷ್ಯರಿಗೆ ಇರುವ ಹಕ್ಕುಗಳನ್ನು ಕುರಿತು ಭಾಷಣವನ್ನು ಮಾಡುತ್ತಿದ್ದನಂತೆ. ಆಗ ಗರ್ಭದಾಸರ ವಿಷಯವೇನು ?- ಎಂದು ಯಾರೋ ಕೇಳಿದ್ದಕ್ಕೆ ಅವರು "ಮನುಷ್ಯರಲ್ಲ" ಎಂದು ಉತ್ತರಕೊಟ್ಟನಂತೆ ಹೀಗೆ ಸಂಕುಚಿತಭಾವದಿಂದ ಧರ್ಮವನ್ನೂ ನ್ಯಾಯವನ್ನೂ ಬೋಧಿಸುವವರು ಎಷ್ಟೋ ಜನರರಿಬಹುದು; ಎಷ್ಟೋ ಧರ್ಮಗ್ರಂಥಗಳೂ ಇರಬಹುದು. ಆದರೆ ಗೀತೋಕ್ತವಾದ ತತ್ತ್ವಜ್ಞಾನಕ್ಕಾಗಲಿ ನೀತಿಗಾಗಲಿ ಇಂಥ ಸಂಕುಚಿತದೃಷ್ಟಿಯನ್ನು ಅನ್ವಯಿಸುವದಕ್ಕೆ ಅವಕಾಶವಿರುವದಿಲ್ಲ. ಭೂತವೆಂದರೆ ಪ್ರಾಣಿಯು ; ಬ್ರಹ್ಮನಿಂದ ಹಿಡಿದು

ಸ್ತಂಬದವರೆಗೆ ಎಂದು ಅಧ್ಯಾತ್ಮಶಾಸ್ತ್ರಗಳಲ್ಲಿ ಆಗಾಗ್ಗೆ ವರ್ಣಿಸಿರುವ ಪ್ರಾಣಿಗಳೆಲ್ಲ ಈ ಭೂತಶಬ್ದದಲ್ಲಿ ಅಂತರ್ಭೂತವಾಗಿರುತ್ತವೆ. ಬ್ರಹ್ಮಾದಿಗಳೂ ಪ್ರಾಣಿಗಳೇ, ಸ್ಥಾವರಗಳೂ ಪ್ರಾಣಿಗಳೇ ಎಂದು ಇಲ್ಲಿ ಹೇಳಿರುವದನ್ನು ಲಕ್ಷಿಸಬೇಕು. ಈ ಎಲ್ಲಾ ಭೂತಗಳೂ ನಶ್ವರವಾದವೇ ; ಈ ಎಲ್ಲಾ ಭೂತಗಳಲ್ಲಿಯೂ ಅವ್ಯಯವಾದ, ನಾಶವಾಗದ, ಒಂದಾನೊಂದು ತತ್ತ್ವವಿರುತ್ತದೆ. ಇದು ಪ್ರತಿಯೊಂದು ಪ್ರಾಣಿಗಳಲ್ಲಿಯೂ ಪೂರ್ಣವಾಗಿಯೇ ಇರುತ್ತದೆ. ಪ್ರಾಣಿಗಳು ವಿಭಕ್ತವಾಗಿ, ಒಂದಕ್ಕಿಂತ ಒಂದು ಬೇರೆಯಾಗಿರುವಂತೆ ತೋರುತ್ತಿದ್ದರೂ ಅವುಗಳಲ್ಲಿ ಈ ಪರಮಾರ್ಥವು ಪರಿಪೂರ್ಣವಾಗಿಯೇ ಒಂದೊಂದರಲ್ಲಿಯೂ ಇದೆ - ಎಂಬುದನ್ನು ತಿಳಿಯುವದು ಬಲು ಕಷ್ಟ. ಪ್ರಾಣಿಗಳು ವಿಭಕ್ತವಾಗಿದ್ದರೂ ಈ ಬ್ರಹ್ಮವು ವಿಭಕ್ತವಾಗಿಲ್ಲ ; ಒಂದೊಂದು ಪ್ರಾಣಿಗೆ ಒಂದೊಂದು ಬ್ರಹ್ಮವಿಲ್ಲ. ಗಂಗೆಯ ನೀರಿನಲ್ಲಿ ಪ್ರತಿಬಿಂಬಿಸಿರುವ ಸೂರ್ಯನೂ ಚಂಡಾಲವಾಟಿಯಲ್ಲಿರುವ ತೊರೆಯಲ್ಲಿ ಪ್ರತಿಬಿಂಬಿಸಿರುವ ಸೂರ್ಯನೂ ಬೇರೆ ಬೇರೆಯಾಗಿರುವದಿಲ್ಲವಷ್ಟೆ? ಆಪಸ್ತಂಬರು ಹೇಳಿರುವ ಪ್ರಕಾರ "ಪೂಃ ಪ್ರಾಣಿನಃ ಸರ್ವ ಏವ ಗುಹಾಶಯಸ್ಯ" ಹೃದಯಸ್ಥನಾದ ಪರಮಾತ್ಮನಿಗೆ ಎಲ್ಲಾ ಪ್ರಾಣಿಗಳೂ ಪುರಗಳು. ಪರಮಾತ್ಮನು ಎರಡು ಕಾಲಿನ ಪುರಗಳನ್ನೂ ನಾಲ್ಕು ಕಾಲಿನ ಪುರಗಳನ್ನೂ ಮಾಡಿಕೊಂಡು ಅವುಗಳೊಳಗೇ ಹಕ್ಕಿಯು ಗೂಡನ್ನು ಸೇರಿಕೊಂಡಿರುವಂತೆ ಒಳಹೊಕ್ಕಿರುತ್ತಾನೆ ಎಂದು ಶ್ರುತಿ ಹೇಳುತ್ತಿದೆ. ಇದನ್ನು ತಿಳಿದುಕೊಂಡಿರುವದೇ ಸಾತ್ತ್ವಿಕಜ್ಞಾನವು.

ಭೇದವನ್ನೆಲ್ಲ ಇಲ್ಲವೆನ್ನುವದು ವಿವೇಕವಲ್ಲ. ಈ ಭೇದದಲ್ಲಿಯೇ ಅಭೇದವಿದೆ ಎಂದು ತಿಳಿಯುವದೇ ವಿವೇಕವು. ಯಾವ ವಸ್ತುಗಳಿಗೂ ಕ್ರಿಯಾದ್ವೈತವನ್ನು ಮಾಡಬಾರದು ; ಒಂದು ವಸ್ತುವನ್ನು ಉಪಯೋಗಿಸುವ ಕೆಲಸಕ್ಕೆ ಮತ್ತೊಂದನ್ನು ಉಪಯೋಗಿಸುವದೇನೂ ಅದ್ವೈತವಲ್ಲ. ಜ್ಞಾನದಿಂದ ಒಂದೇ ವಸ್ತುವನ್ನು ಸಮನಾಗಿ ಎಲ್ಲದರಲ್ಲಿಯೂ ಕಾಣುವದೇ ನಿಜವಾದ ಅದ್ವೈತವು. ನಾವು ಒಬ್ಬೊಬ್ಬರೊಡನೆ ವ್ಯವಹರಿಸುವಾಗ ಒಂದೊಂದು ಪ್ರತಿಕ್ರಿಯೆಗೆ ವಶರಾಗುತ್ತೇವೆ. ಸಭೆಯಲ್ಲಿರುವ ಪಂಡಿತರು, ಮನೆಯಲ್ಲಿರುವ ಹೆಂಡತಿ ಮಕ್ಕಳು, ಆಳುಕಾಳು-ಯಾರೊಡನೆ ವ್ಯವಹರಿಸಿದರೂ ಜ್ಞಾನವು ಒಂದೇ ಬಗೆಯಾಗಿರುವದು ಎಲ್ಲರಿಗೂ ದಕ್ಕುವದಲ್ಲ. ಅತ್ಯಂತಭಿನ್ನಭಿನ್ನವಾಗಿರುವ ಭಾವಗಳು ಅದ್ವೈತವಸ್ತುವಿನಲ್ಲಿ ಮುಳುಗಿಹೋಗಬೇಕು. ಹಾಗೆ ಎಲ್ಲರಲ್ಲಿಯೂ ಸಮಭಾವದಿಂದ ವರ್ತಿಸುವದು ಜ್ಞಾನಿಗಳಿಗೆ ಮಾತ್ರ ಸಾಧ್ಯ. ಒಬ್ಬ ಸಾಧುಗಳು ಮುದುಕರಾಗಿದ್ದರು. ಅವರು ಬಲಗೈಯನ್ನು ಒಬ್ಬ ಬ್ರಾಹ್ಮಣನ ಹೆಗಲಮೇಲೂ ಎಡಗೈಯನ್ನು ವಡ್ಡರವನ ಹೆಗಲಮೇಲೂ ಹಾಕಿಕೊಂಡು ನಡೆಯುತ್ತಿದ್ದರು. ಅವರ ಮನಸ್ಸಿನ ಸಮಭಾವಕ್ಕೆ ಅದರಿಂದ ಯಾವ ಹೆಚ್ಚುಕಡಿಮೆಯೂ ಆಗುತ್ತಿರಲಿಲ್ಲ. ಹೊರಗಿನ ಈ ಬಗೆಯ ವ್ಯವಹಾರವು ಎಲ್ಲಾ ಸಂದರ್ಭಗಳಲ್ಲಿಯೂ ಎಲ್ಲರಿಗೂ ಯುಕ್ತವಾಗುವದೆಂದು ಹೇಳಲಾಗುವದಿಲ್ಲವಾದರೂ ಎಲ್ಲರಲ್ಲಿಯೂ

ಸಮವಾಗಿರುವ ಪರಮಾರ್ಥಭಾವವನ್ನು ಕಾಣುವ ಜ್ಞಾನವನ್ನು ಸಂಪಾದಿಸುವದಕ್ಕೆ ನಾವೆಲ್ಲರೂ ಪ್ರಯತ್ನಿಸಬಹುದಾಗಿದೆ. ಮೇಲೆ ಹೇಳಿದ ಸಾಧುಗಳ ಶಿಷ್ಯರೊಬ್ಬರು ಪ್ರಸಿದ್ಧ ಸಾಧುಗಳಾಗಿದ್ದರು. ಅವರು ಶ್ರೀಮಂತರಾಗಿದ್ದರೂ ತಮ್ಮ ಮನೆಯ ಮೃಷ್ಟಾನ್ನವನ್ನು ಬಿಟ್ಟು ಮಾಧುಕರಿಯಿಂದ ತಂದ ಅನ್ನವನ್ನು ಊಟಮಾಡುತ್ತಿದ್ದ ಶಿಷ್ಯರೊಡನೆ ಕುಳಿತು ಭೋಜನಮಾಡುತ್ತಾ ಅವರಿಗೆಲ್ಲ ಸಂತೋಷವನ್ನು ಉಂಟುಮಾಡುತ್ತಿದ್ದರು. ಇಂಥ ಸಮಭಾವದ ಜ್ಞಾನವುಳ್ಳವರು ಎಲ್ಲಿದ್ದರೂ ಸರಿಯೇ ; ಜನರೆಲ್ಲರೂ ಅವರನ್ನೇ ಅನುವರ್ತಿಸುತ್ತಾರೆ. ಏಕತ್ವವನ್ನು ಕಂಡುಕೊಂಡವನಿಗೆ ಎಲ್ಲಿಯ ಮೋಹವು, ಎಲ್ಲಿಯ ಶೋಕವು ?- ಎಂದು ಶ್ರುತಿ ಹೇಳುವದು ಇಂಥ ಮಹನೀಯರ ವಿಷಯವೇ.

ಈಗಿನ ಸ್ಥಿತಿಯಲ್ಲಿ ನಮಗೆ ಸಮತೆಯು ತಪ್ಪಿರುತ್ತದೆ. ಚಿಕ್ಕಮಕ್ಕಳಿಗೆ ದೊಡ್ಡ ರುಮಾಲನ್ನು ಸುತ್ತಿದರೆ ತಲೆಯನ್ನು ಭಾರದಿಂದ ಬಾಗಿಸುವಂತೆ ನಮಗೆ ಎಲ್ಲೆಲ್ಲಿಯೂ ವೈಷಮ್ಯದೃಷ್ಟಿಯ ರುಮಾಲು ತಲೆಯ ಮೇಲೆ ಕುಳಿತಿದೆ; ಅದರಿಂದ ನಾವು ಕತ್ತೆತ್ತಿ ಎಲ್ಲರನ್ನೂ ಒಂದೇ ಸಮನಾಗಿ ಕಾಣಲಾರೆವು. ಸರ್ವಭೂತಗಳಲ್ಲಿಯೂ ಸಮತ್ವವನ್ನು ಕಾಣುವ ಜ್ಞಾನಿಗಳು ದೇಶಕ್ಕೊಬ್ಬರಂತೆ ಇದ್ದರೂ ಸಾಕು, ಲೋಕಕ್ಕೆ ಮಂಗಳವಾದೀತು. ಈ ಸಾತ್ತ್ವಿಕಜ್ಞಾನವನ್ನು ಅನುಗ್ರಹಿಸೆಂದು ಭಗವಂತನನ್ನು ಪ್ರಾರ್ಥಿಸೋಣ.

## ೧೭೮. ಜ್ಞಾನದಲ್ಲಿ ಮೂರು ಬಗೆ 18 - (21-22)

**(23-7-50)**

ಜ್ಞಾನ, ಕರ್ಮ, ಕರ್ತೃ - ಇವುಗಳ ನಿರೂಪಣವು ಪ್ರಾರಂಭವಾಗಿದೆ. ಜ್ಞಾನವೆಂದರೆ ಗ್ರಂಥಗಳನ್ನು ಓದಿ ಸಂಪಾದಿಸುವದಲ್ಲ. "ನ ಹಿ ಜ್ಞಾನೇನ ಸದೃಶಮ್" ಎಂಬ ಉಕ್ತಿಯನ್ನು ಈಗಿನ ಸಕಲವಿದ್ಯಾನಿಲಯಗಳಲ್ಲಿಯೂ ಉಪಯೋಗಿಸುತ್ತಿದ್ದಾರೆ. ಜ್ಞಾನವು ದೊಡ್ಡದು ಎಂಬುದು ಎಲ್ಲರೂ ಒಪ್ಪತಕ್ಕದ್ದೇ ; ಆದರೆ ಜ್ಞಾನವೆಂದರೇನು ? ಎಂಬುದರಲ್ಲಿ ಮತಭೇದಕ್ಕೆ ಅವಕಾಶವಿರುತ್ತದೆ. ಜ್ಞಾನವೆಂಬ ಮಾತನ್ನು ಅನೇಕಾರ್ಥಗಳಲ್ಲಿ ಪ್ರಯೋಗಿಸುತ್ತಾರೆ. ಮೂರ್ಛೆ ಹೋದವನಿಗೆ ಜ್ಞಾನ ಬಂತು, ಎಂದರೆ ಎಚ್ಚರದರಿವಾಯಿತು ಎಂದರ್ಥ. ವಸ್ತುಗಳ ವಿಷಯದ ಪ್ರತ್ಯಯಗಳನ್ನೂ ಅವುಗಳನ್ನು ಒಂದಕ್ಕೊಂದನ್ನು ಜೋಡಿಸಿ ಊಹಿಸಿ ಕಲ್ಪಿಸುವ ನಿರ್ಣಯವನ್ನೂ ಜ್ಞಾನವೆಂದೇ ಕರೆಯುತ್ತಾರೆ. ವ್ಯವಹಾರಚತುರರಿಗೆ ಇಂಥ ಪ್ರತ್ಯಯಗಳು ಬಹಳವಾಗಿ ಸ್ವಾಧೀನದಲ್ಲಿರುತ್ತವೆ ; ಅವರನ್ನು ಜನರು ಜ್ಞಾನಿಗಳೆಂದೇ ಕರೆಯುತ್ತಾರೆ. ಭೌತಿಕವಿಜ್ಞಾನವೆಂಬದು ಈ ಬಗೆಯ ಪ್ರತ್ಯಯಗಳ ರಾಶಿಯೇ ಆಗಿರುತ್ತದೆ. ಇನ್ನು ಯೋಗಿಗಳಿಗೆ ಭೂತಭವಿಷ್ಯಜ್ಞಾನವಿರುತ್ತದೆ ಎನ್ನುತ್ತಾರಲ್ಲ, ಆ ಅತೀಂದ್ರಿಯವಾದ ತಿಳಿವಳಿಕೆಯೂ ಜ್ಞಾನವೇ.

ಈಗ ಪ್ರಕೃತವಾದದ್ದು ಈ ಮೂರರಲ್ಲಿ ಒಂದೂ ಅಲ್ಲ, ವಸ್ತು ಹೇಗಿದೆಯೋ ಹಾಗೆಯೇ ಅದನ್ನು ತಿಳಿಯುವ ಜ್ಞಾನವೇ ಇಲ್ಲಿ ಪ್ರಕೃತವಾಗಿರುತ್ತದೆ. ಹುಡುಗರ ಭಾವನೆಯಲ್ಲಿ ಆಟದ ವಸ್ತುಗಳೇ ತುಂಬಿರುತ್ತವೆ ; ತರುಣರಿಗೆ ಕಾಮುಗಳೇ ತುಂಬಿರುತ್ತವೆ. ದೃಷ್ಟಿಭೇದದಿಂದ ಈ ಪ್ರಪಂಚವು ಒಬ್ಬೊಬ್ಬರಿಗೆ ಒಂದೊಂದು ಬಗೆಯಾಗಿ ಕಾಣುತ್ತಿರುತ್ತದೆ. ಆತ್ಮವಿಚಾರದ ಪತ್ರಿಕೆಗಳು ವೃತ್ತಾಂತಪತ್ರಿಕೆಗಳ ದೃಷ್ಟಿಗೆ ಕಾಣುವ ಬಗೆಯೇ ಬೇರೆ ; ಹೀಗೆಯೇ ಈ ಪ್ರಪಂಚವು ಎಷ್ಟೋ ಭೇದಗಳಿಂದ ಕೂಡಿದ್ದರೂ ಅಧ್ಯಾತ್ಮಜ್ಞಾನವುಳ್ಳವರ ದೃಷ್ಟಿಯಿಂದ ನೋಡಿದಾಗ ಒಂದೇ ಒಂದು ತತ್ತ್ವವನ್ನು ಅವಲಂಬಿಸಿರುವಂತೆ ಕಾಣಿಸುತ್ತದೆ. ಪ್ರಪಂಚದಲ್ಲಿ ಬಗೆಬಗೆಯ ಭೂತಗಳು ಎಷ್ಟೇ ವಿನಶ್ವರವಾಗಿದ್ದರೂ ಅವುಗಳಲ್ಲಿ ಒಂದೇ ಅವ್ಯಯವಾದ ಭಾವವು ಇದ್ದುಕೊಂಡಿರುವದೆಂದು ನಿರ್ಣಯವಾಗುತ್ತದೆ. ಈ ಉತ್ತಮವಾದ ಸಾತ್ತ್ವಿಕಜ್ಞಾನದ ಸ್ವರೂಪವನ್ನು ಹಿಂದಿನ ಉಪನ್ಯಾಸದಲ್ಲಿ ವರ್ಣಿಸಿದ್ದಾಗಿರುತ್ತದೆ. ಈ ಜ್ಞಾನವು ಬಂದಾಗ ಎಲ್ಲಾ ಭೂತಗಳಲ್ಲಿಯೂ ಒಂದೇ ಅವ್ಯಯತತ್ತ್ವವಿದೆ ಎಂಬ ಪ್ರತ್ಯಯಮಾತ್ರವು ಉಂಟಾಗುವದಿಲ್ಲ ; ಏಕೆಂದರೆ ಆ ತತ್ತ್ವವು ಯಾವ ಪ್ರತ್ಯಯಕ್ಕೂ ವಿಷಯವೇ ಅಲ್ಲ. ಜ್ಞಾನಿಯಾದವನು ಒಂದೇ ಒಂದು ಅದ್ವಯವಾದ ತತ್ತ್ವವನ್ನು ಎಲ್ಲಾ ಭೂತಗಳಲ್ಲಿಯೂ "ಈಕ್ಷತೇ" ಕಂಡುಕೊಂಡಿರುತ್ತಾನೆ. ಹೀಗೆಂಬುದು ಅವನ ಅನುಭವವಾಗಿರುತ್ತದೆ.

ಇದನ್ನು ಕುರಿತು ಮಾತನಾಡುವದು ಸುಲಭ, ಅನುಭವದಲ್ಲಿ ಕಂಡುಕೊಂಡು ಅದರಂತೆ ವ್ಯವಹಾರದಲ್ಲಿ ನಡೆದುಕೊಳ್ಳುವದು ಕಷ್ಟ. ಇತಿಹಾಸಪುರಾಣಗಳಲ್ಲಿ ಒಂದು ಶ್ಲೋಕವು ಆಗಾಗ್ಗೆ ಕಣ್ಣಿಗೆ ಗೋಚರವಾಗುತ್ತದೆ. `ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರನ್ಥಕೋಟಿಭಿಃ। ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್॥' ಮತ್ತೊಬ್ಬರಿಗೆ ಉಪಕಾರಮಾಡುವದು ಪುಣ್ಯಕರ್ಮವು, ಮತ್ತೊಬ್ಬರಿಗೆ ಕೆಟ್ಟದ್ದನ್ನು ಬಗೆಯುವದು ಪಾಪವು-ಎಂಬುದು ಇದರ ಅರ್ಥ. ಮತ್ತೊಬ್ಬರಿಗೇಕೆ ಒಳ್ಳೆಯದನ್ನು ಮಾಡಬೇಕು ? - ಎಂದರೆ ಅವರ ಆತ್ಮನೂ ನಮ್ಮ ಆತ್ಮನೂ ಒಬ್ಬನೇ ಎಂದು ತಿಳಿಯುವದಕ್ಕೆ ಈ ಪುಣ್ಯಕರ್ಮವು ಸಾಧಕವಾಗಿರುತ್ತದೆ. ಆದರೆ ಅಜ್ಞಾನದಶೆಯಲ್ಲಿರುವ ಜನರಿಗೆ ತಾವೆಂದರೆ ಹೆಚ್ಚು, ಮತ್ತೊಬ್ಬರೆಂದರೆ ಕಡಿಮೆ. ಜ್ಞಾನಿಗಳಿಗೆ ಮನುಷ್ಯರಲ್ಲಿ ಮಾತ್ರವೇ ಅಲ್ಲ, ಸಮಸ್ತಪ್ರಾಣಿಗಳಲ್ಲಿಯೂ ಒಬ್ಬನೇ ಪರಮಾತ್ಮನು ಇರುತ್ತಾನೆ, ಮನುಷ್ಯಜಾತಿಯಲ್ಲಿರುವ ಸ್ವಾರ್ಥದೃಷ್ಟಿಯಿಂದ ನೋಡದೆ ಈ ಜಗತ್ತನ್ನು ವಿಮರ್ಶಿಸಿದರೆ ಯಾವ ಪ್ರಾಣಿತಾನೆ ಕೀಳಾದದ್ದು? ಪರಮಾತ್ಮನ ದೃಷ್ಟಿಯಲ್ಲಿ ಯಾವುದಕ್ಕೆ ತಾನೆ ನಿಕೃಷ್ಟತ್ವವಿದೆ ? ಥೋರೋ ಎಂಬ ಅಮೇರಿಕದೇಶದ ಒಬ್ಬ ತತ್ತ್ವವಿಚಾರಕನು ಒಂದು ಕಥೆಯಲ್ಲಿ ಹೀಗೆಂದು ಬರೆದಿರುತ್ತಾನೆ ; "ವೈರಾಗಲಿಲ್ಲ, ವೈರಾಗಲಿಲ್ಲ !" ಎಂದು ಜನರು ಕೂಗುತ್ತಿರುವರಷ್ಟೆ ; ಅದಕ್ಕೆ ಅರ್ಥವೇನು ? ಯಾವ ವೈರೂ ಆಗಲಿಲ್ಲವೆಂದೇನೂ ಅಲ್ಲ. ಈಶ್ವರನ ದೃಷ್ಟಿಯಲ್ಲಿ

ಪೈರಾಗಿದೆ, ಪ್ರಾಣಿಗಳಿಗೆ ಬೇಕಾದ ಆಹಾರವಾಗುತ್ತದೆ. ಆದರೆ ಮನುಷ್ಯನಿಗೆ ಬೇಕಾದ ಪೈರು ಆಗಿರುವದಿಲ್ಲ. ಅಷ್ಟೆ. ಈಶ್ವರನ ದೃಷ್ಟಿಯಿಂದ ನೋಡಿದರೆ ಮನುಷ್ಯನದೇ ಏನು ಹೆಚ್ಚುಗಾರಿಕೆ? ಮನುಷ್ಯನಿಗೆ ಈ ಜಗತ್ತಿನಲ್ಲಿ ಇರುವ ಹಕ್ಕು ಎಲ್ಲಾ ಪ್ರಾಣಿಗಳಿಗೂ ಇದೆ. ಬರಿಯ ರಾಗದ್ವೇಷಗಳು ಇರುವದರಿಂದ ಮನುಷ್ಯನನ್ನು ಹೆಚ್ಚಿನ ಪ್ರಾಣಿ ಎನ್ನುವದಕ್ಕಾದೀತೆ? ಇರುವೆ, ಕೆಂಜಿಗೆ, ಗೆದ್ದಲು ಮುಂತಾದ ಪ್ರಾಣಿಗಳು ಕೂಡ, ತಮ್ಮ ತಮ್ಮ ಕಷ್ಟಸುಖಗಳನ್ನು ಅನುಭವಿಸುತ್ತಲಿಲ್ಲವೆ ? ಅವುಗಳಲ್ಲಿಯೂ ಮಾನವರಲ್ಲಿರುವಂತೆ ಪರಸ್ಪರ ದ್ವೇಷಾದಿಗಳು ಕಾಣುತ್ತಲಿಲ್ಲವೆ ? ಇಡಿಯ ಬ್ರಹ್ಮಾಂಡವನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಮನುಷ್ಯನು ಎಷ್ಟು ಅಲ್ಪನಾಗುತ್ತಾನೆ ! ಹೀಗಿರುವದರಿಂದ ಸ್ವಾಭಿಮಾನದಿಂದ ಹೆಮ್ಮೆಪಡುವದರಲ್ಲಿ ಯಾವ ಅರ್ಥವೂ ಇಲ್ಲ." ಪ್ರಪಂಚದಲ್ಲಿರುವ ಸಕಲಪ್ರಾಣಿಗಳಲ್ಲಿಯೂ ಅವಿಭಕ್ತವಾಗಿರುವ ಒಂದು ಪರಮಾತ್ಮತತ್ತ್ವವನ್ನು ಕಾಣಬೇಕೆನ್ನುವವನು ಈ ಅಭಿಮಾನವನ್ನು ತೊರೆಯಬೇಕು. ಎಲ್ಲಾ ಪ್ರಾಣಿಗಳಲ್ಲಿಯೂ ಸಮವಾದ ಪ್ರೇಮವನ್ನು ಸಂಪಾದಿಸಿಕೊಳ್ಳಬೇಕು. ಸರ್ವಭೂತಗಳಲ್ಲಿಯೂ ಸಮವಾದ ಪ್ರೇಮವು ಸ್ವಾಭಾವಿಕವಾಗಿ ನೆಲೆನಿಲ್ಲುವದು ಶುದ್ಧಸಾತ್ತ್ವಿಕವಾದ ಅದ್ವೈತಜ್ಞಾನವನ್ನು ಅಳವಡಿಸಿಕೊಂಡವನಿಗೆ ಮಾತ್ರವೇ.

ಇನ್ನು ರಾಜಸಜ್ಞಾನವನ್ನು ವಿಮರ್ಶಿಸೋಣ.

ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥ 18-21

ಈ ಜ್ಞಾನವನ್ನು ವಿಶ್ಲೇಷಣಾತ್ಮಕಜ್ಞಾನವೆನ್ನಬಹುದು. ಸಾತ್ತ್ವಿಕ ಜ್ಞಾನವು ಬಿಂಗಡವಿಂಗಡವಾಗಿ ತೋರುವದೆಲ್ಲಕ್ಕೂ ಸಮಾನವಾಗಿರುವ ಅವ್ಯಯವಾದ ಪರಮಾರ್ಥವೊಂದನ್ನೇ ಕಾಣುವ ಸಮ್ಯಗ್ಜ್ಞಾನವು. ಆದರೆ ರಾಜಸಜ್ಞಾನವೂ ತಾಮಸಜ್ಞಾನವೂ ದ್ವೈತಜ್ಞಾನಗಳಾಗಿರುತ್ತವೆ. ಇವೆರಡರಲ್ಲಿ ರಾಜಸಜ್ಞಾನವೆಂಬುದು ಸಂಕುಚಿತಬುದ್ಧಿಯ ಜ್ಞಾನವು. ಒಂದೊಂದು ಪ್ರಾಣಿಯೂ ಬೇರೆಬೇರೆ ಎಂದು ತಿಳಿಯುವದೇ ಈ ಜ್ಞಾನವು. ಒಂದೊಂದು ಶರೀರಕ್ಕೆ ಒಂದೊಂದು ಆತ್ಮನನ್ನು ಕಾಣುವ ಜ್ಞಾನವದು. ಈಗಿನ ಕಾಲದಲ್ಲಿ ನಮ್ಮ ದೇಶ, ನಮ್ಮ ಜನ, ನಮ್ಮ ಜಾತಿಯವರು ಎಂದು ಒಂದೊಂದು ಬೇರೆ ಬೇರೆಯ ಧ್ವಜವನ್ನು ಹಾರಿಸಿಕೊಂಡು ಮಿಕ್ಕ ಧ್ವಜದವರಿಗೆ ಪ್ರತಿಯಾಗಿ ನಿಲ್ಲುವ ಈ ರಾಜಸ ಜ್ಞಾನದ ಹಾವಳಿಯು ಬಹಳವಾಗಿರುತ್ತದೆ. ಭೂಮಿಯನ್ನು ತುಂಡುತುಂಡಾಗಿ ಮಾಡಿಕೊಂಡು ಬೇರೆ ಬೇರೆಯಾಗಿ ನಿಲ್ಲುವ ಜ್ಞಾನವು ದುಃಖಕ್ಕೆ ಕಾರಣವಲ್ಲದೆ ಮತ್ತೇನು ? ಒಂದೊಂದು ಕುಟುಂಬದಲ್ಲಿಯೂ ತನ್ನ ತನ್ನ ಸ್ವಾರ್ಥವನ್ನು ಮಾತ್ರ ತಾನು ತಾನು ನೋಡಿಕೊಂಡು ಮಿಕ್ಕವರ ಯೋಗಕ್ಷೇಮವನ್ನು ಕಡೆಗಣಿಸುವಂತೆ ಮಾಡುವದು ಈ ರಾಜಸಜ್ಞಾನವೇ. ಈಗಿನ ಕಾಲದಲ್ಲಿಯೂ ಜಗತ್ತನ್ನೆಲ್ಲ ಒಂದೇ ಒಂದೆಂದು ಎಣಿಸುವ ಸಾತ್ತ್ವಿಕಜ್ಞಾನದವರು

ಇಲ್ಲವೆಂದಿಲ್ಲ. ಅದ್ವೈತಜ್ಞಾನವನ್ನು ಅಳವಡಿಸಿಕೊಂಡಿರುವ ಮಹನೀಯರಂತಿರಲಿ, ವೈದಿಕರಲ್ಲದ ಮತಾಚಾರ್ಯರುಗಳೂ ಎಲ್ಲರನ್ನೂ ಒಟ್ಟಿಗೂಡಿಸುವ ಈ ಪ್ರೇಮದ ಸಂದೇಶವನ್ನು ತಮ್ಮ ಅನುಯಾಯಿಗಳಿಗೆ ಸಾರಿರುತ್ತಾರೆ. ಉದಾರಹಣೆಗೆ `ಬಾಹ ಉಲ್ಲಾ' ಎಂಬ ಪರ್ಷಿಯದೇಶದ ಉಪದೇಶಕನೊಬ್ಬನು "ಈ ಭೂಮಿಯೆಲ್ಲ ಒಂದು ಹಿಡಿ ಮಣ್ಣು" ಎಂದು ಉಲ್ಲೇಖಿಸಿರುತ್ತಾನೆ. ಆದರೂ ಜನರು ರಾಜಸಜ್ಞಾನದ ಆವೇಶಕ್ಕೆ ಒಳಗಾಗಿ ಒಬ್ಬರಿಂದೊಬ್ಬರು ಭಿನ್ನರೆನ್ನುವ ಭಾವನೆಯನ್ನೇ ಬಲಪಡಿಸಿಕೊಂಡಿರುತ್ತಾರೆ. ಇದರಿಂದಲೇ ಜನರಿಗೆ ಬಗೆಬಗೆಯ ದುಃಖಗಳುಂಟಾಗಿರುತ್ತವೆ. ಹೀಗೆ ಒಟ್ಟಾಗಿರುವದನ್ನು ಒಡೆಯುವ ಜ್ಞಾನವೇ ರಾಸಜವು ; ಈ ಜ್ಞಾನಕ್ಕೆ ಹೆಚ್ಚಿನ ಬೆಲೆಯನ್ನು ಕೊಟ್ಟಿರುವವನೇ ರಾಜಸನು. ಒಟ್ಟಿಗೂಡಿಸುವದು ಸಾತ್ತ್ವಿಕಜ್ಞಾನ, ಒಡೆದು ಬೇರ್ಪಡಿಸುವದು ರಾಜಸಜ್ಞಾನ.

ಇನ್ನು ಮೂರನೆಯದಾದ ತಾಮಸಜ್ಞಾನದ ಸ್ವಭಾವವೇನೆಂಬುದನ್ನು ವಿಚಾರಿಸೋಣ:

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ 18-22**

ಯಾವದು ಒಂದೇ ಒಂದು ಪರಿಚ್ಛಿನ್ನವಸ್ತುವಿನಲ್ಲಿ ಇದೇ ಎಲ್ಲವೂ ಎಂಬ ಭಾವನೆಯನ್ನು ಯಾವ ಹೇತುವೂ ಇಲ್ಲದೆ ಮಾಡಿಕೊಳ್ಳುವದೋ, ಯಾವದು ತತ್ತ್ವಾರ್ಥವನ್ನು ಮನಸ್ಸಿಗೇ ತೆಗೆದುಕೊಳ್ಳುವದಿಲ್ಲವೋ, ಆ ಅಲ್ಪವಿಷಯಕವಾದ ಅಲ್ಪಫಲವುಳ್ಳ ಜ್ಞಾನವೇ ತಾಮಸವು. ಅವಿವೇಕಿಗಳಾದವರಿಗೆ ತಮ್ಮ ತಿಳಿವಳಿಕೆಯೇ ಎಲ್ಲಕ್ಕೂ ಹೆಚ್ಚಿನದೆಂಬ ದುರ್ಭಾವನೆಯಾಗುತ್ತದೆ. ಒಬ್ಬ ಪರಮಾತ್ಮನನ್ನು ಎಲ್ಲೆಲ್ಲಿಯೂ ಕಾಣುವ ಸಾತ್ತ್ವಿಕಜ್ಞಾನವೆಲ್ಲಿ, ಒಂದೇ ಪರಿಚ್ಛಿನ್ನ ದೇವತೆಯನ್ನು ಪರಮಾತ್ಮನೆಂದು ಬಗೆಯುವ ತಾಮಸ ಜ್ಞಾನವೆಲ್ಲಿ ! "ಹೊನ್ನಾಲದಮ್ಮನಿಗೂ ಸಾಲುಮರದಮ್ಮನಿಗೂ ಆಗುವದಿಲ್ಲ !" ಎಂಬ ಹಳ್ಳಿಯ ಜನರಲ್ಲಿ ಕಾಣಬರುವ ಅಲ್ಪತಿಳಿವಳಿಕೆಯು ಈ ಬಗೆಯದೇ. ತಿಳಿವಳಿಕೆಯಿಲ್ಲದವರು ಸಾತ್ತ್ವಿಕಜ್ಞಾನವನ್ನು ಈ ತಾಮಸ ಜ್ಞಾನವೆಂಬಂತೆ ಭಾವಿಸುವದೂ ಉಂಟು. ಒಬ್ಬನು ಒಂದು ದಿನ "ಪ್ರತಿಮಾಸ್ವಲ್ಪಬುದ್ಧೀನಾಮ್" ಎಂಬ ಶ್ಲೋಕವನ್ನು ಉದಾಹರಿಸಿಕೊಂಡು ಪ್ರತಿಮೆಗಳ ಪೂಜೆಯನ್ನು ಮಾಡುವವರು ತಾಮಸರು ಎಂದು ಭಾಷಣವನ್ನು ಮಾಡುತ್ತಿದ್ದನು. ಆಗ ಪಕ್ಕದಲ್ಲಿದ್ದ ಮಹನೀಯರೊಬ್ಬರು "ಹಾಗಲ್ಲ. ಪ್ರತಿಮೆಗಳಲ್ಲಿ ಮಾತ್ರವೇ ಪರಮಾತ್ಮನನ್ನು ಕಾಣುವವರು ಅಲ್ಪಬುದ್ಧಿಗಳೇ ಸರಿ : ಆದರೆ ಇದೇ ಶ್ಲೋಕದ `ಸರ್ವತ್ರ ಸಮದರ್ಶಿನಾಮ್' ಎಂಬ ಮುಂದಿನ ಪಾದದಲ್ಲಿ ಹೇಳಿರುವಂತೆ ಸಮದರ್ಶಿಗಳಾದವರು ಪರಮಾತ್ಮನನ್ನು ಎಲ್ಲೆಲ್ಲಿಯೂ ಕಾಣುತ್ತಿರುವರು. ಅವರ ದೃಷ್ಟಿಯಿಂದ ನೋಡಿ ಪ್ರತಿಮೆಗಳಲ್ಲಿಯೂ ಪರಮಾತ್ಮನಿರುವನೆಂದು ತಿಳಿಯುವದು ತಪ್ಪಲ್ಲ, ಶ್ರೇಯಸ್ಕರವೇ" ಎಂದು ತಿಳಿಯಹೇಳಿದರು. ಸಾಲಗ್ರಾಮವು ಸಣ್ಣದಾದ ಮಾತ್ರದಿಂದ ಅದರಲ್ಲಿ ಭಾವನೆಯಿಂದ ಆಸ್ತಿಕರು ಕಾಣುವ ವಿಷ್ಣುವೇನೂ ಸಣ್ಣವನಾಗುವದಿಲ್ಲ; ಸಾಲಗ್ರಾಮದ ವರ್ಣನೆಯಲ್ಲಿ ಸಾಲಗ್ರಾಮಶಿಲೆಯು

ಸಣ್ಣದಾದಷ್ಟೂ ಮಹಿಮೆ ಹೆಚ್ಚೆಂದೇ ಶಾಸ್ತ್ರಗಳು ಹೇಳುತ್ತಿವೆ. ಸೂರ್ಯನು ಆಕಾಶದಲ್ಲಿ ಒಂದು ಕಡೆ ಇದ್ದರೂ ಅವನ ಪ್ರಕಾಶವು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವಂತೆ ನಾವು ಪರಿಚ್ಛಿನ್ನವಸ್ತುಗಳಲ್ಲಿ ಪರಮಾತ್ಮನನ್ನು ಕಂಡರೂ ಅದೇ ಪರಮಾತ್ಮನು ಎಲ್ಲೆಲ್ಲಿಯೂ ಇರುತ್ತಾನೆಂಬ ಭಾವನೆಯನ್ನು ರೂಢಿಸಿಕೊಂಡರೆ ಅದು ಸಾತ್ತ್ವಿಕವೇ ಆಗುವದು.

ಹೀಗೆ ಜ್ಞಾನವು ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯಾಗಿರುವದೆಂದು ನಿಶ್ಚಯಿಸಿದ್ದಾಯಿತು. ಇನ್ನು ಕರ್ಮಗಳಲ್ಲಿ ಗುಣಗಳ ದೃಷ್ಟಿಯಿಂದ ತ್ರೈವಿಧ್ಯವನ್ನು ವಿಂಗಡಿಸಿ ಅರಿತುಕೊಳ್ಳಬೇಕಾಗಿದೆ. ಆ ಕೆಲಸವನ್ನು ಮುಂದಿನ ವಾರ ಪ್ರಾರಂಭಿಸೋಣ.

## ೧೭೯. ಕರ್ಮದಲ್ಲಿ ತ್ರೈವಿಧ್ಯ 18 - (23-25)
**(30-7-50)**

ಗೀತೆಯಲ್ಲಿ ಕರ್ಮವೆಂಬ ಶಬ್ದವನ್ನು ಕೆಲವು ಕಡೆಗಳಲ್ಲಿ ಕ್ರಿಯಾಮಾತ್ರವೆಂಬ ಸಾಮಾನ್ಯಾರ್ಥದಲ್ಲಿ ಉಪಯೋಗಿಸಿದೆ ; ಇನ್ನು ಕೆಲವು ಕಡೆಗಳಲ್ಲಿ ಶಾಸ್ತ್ರೀಯಕರ್ಮ ಎಂಬರ್ಥದಲ್ಲಿಉಪಯೋಸಿರುತ್ತದೆ. ಶಾಸ್ತ್ರೀಯಕರ್ಮದ ಫಲವು ಅದೃಷ್ಟವಾಗಿರುತ್ತದೆ. ಆದ್ದರಿಂದ ಅದನ್ನೇಕೆ ಮಾಡಬೇಕು ?- ಎಂದು ಕೇಳುವದಕ್ಕಿಲ್ಲ, ಸಾಮಾನ್ಯ ವ್ಯವಹಾರದಲ್ಲಿಯೂ ಆಪ್ತರಾದವರು ಕಾರಣವನ್ನು ಹೇಳದೆ "ಹೀಗೆ ಮಾಡು" ಎಂದಿಷ್ಟೇ ಹೇಳುತ್ತಾರೆ; ಅದಕ್ಕೆ ಫಲವಿಲ್ಲವೆಂದೇನೂ ಅಲ್ಲ. ಅವರ ವಾಕ್ಯದ ಪ್ರಾಮಾಣ್ಯದಿಂದಲೇ ಅದನ್ನು ಮಾಡಬೇಕು ಎಂಬುದು ಅರ್ಥ. ಕೆಲವು ವರ್ಷಗಳ ಹಿಂದೆ ನಾನು "Enquire Within upon Everything" ( ಇದರೊಳಗೆ ಪ್ರತಿಯೊಂದು ವಿಷಯದಲ್ಲಿಯೂ ವಿಚಾರಮಾಡಿ ತಿಳಿದುಕೊಳ್ಳಿರಿ) ಎಂಬ ಹೆಸರಿನ ಒಂದು ಪುಸ್ತಕವನ್ನು ನೋಡಿದ್ದ ನೆನಪಿದೆ. ಚೆಂಡನ್ನು ನೆಲಕ್ಕೆ ಹೊಡೆದರೆ ಏತಕ್ಕೆ ಪುಟವೇಳುತ್ತದೆ ? ಬೆಳಕಿನಲ್ಲಿ ಏಕೆ ಏಳು ಬಣ್ಣಗಳಿವೆ ? - ಎಂದು ಮುಂತಾಗಿ ಮಕ್ಕಳು ಪ್ರಶ್ನೆಹಾಕುತ್ತಾರೆ. ತಂದೆತಾಯಿಗಳು ಅವರ ಈ ಏಕೆಗಳಿಗೆ ಸಮಾಧಾನವನ್ನು ಹೇಳಲಾರದೆ ಪೇಚಾಡುತ್ತಾರೆ. ಆದ್ದರಿಂದ ಮಕ್ಕಳು ತಟ್ಟನೆ ಕೇಳುವ ಕುತೂಹಲದ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವದಕ್ಕೆ ಅನುಕೂಲಿಸುವಂತೆ ಗ್ರಂಥಕರ್ತನು ಆ ಪುಸ್ತಕವನ್ನು ಬರೆದಿದ್ದನು. ನಮಗೆಲ್ಲ ಆ ಚಿಕ್ಕಮಕ್ಕಳಂತೆಯೇ ಶಾಸ್ತ್ರದಲ್ಲಿ ಉಪದಿಷ್ಟವಾದ ಕರ್ಮದಲ್ಲಿ ಇದೇ ಬಗೆಯ ಪ್ರಶ್ನೆಯನ್ನು ಮಾಡಬೇಕೆನ್ನಿಸುತ್ತದೆ. ಆದರೆ ನಿಜವಾಗಿ ಎಲ್ಲಾ ಕಡೆಗಳಲ್ಲಿಯೂ ಏಕೆ ? ಎಂದು ಕೇಳುವದಕ್ಕೆ ಬರುವದಿಲ್ಲ. "ಇದೇಕೆ ? ಇದೇಕೆ?" ಎಂದು ಕೇಳುವವರಿಗೆ "ಏಕೆ? ಎಂಬುದು ಏಕೆ?" ಎಂದೂ ಪ್ರತಿಪ್ರಶ್ನೆಯನ್ನು ಹಾಕಬಹುದಾಗುವದು. ಶಾಸ್ತ್ರವು ಹೇಳಿದೆ ಎಂಬುದೊಂದೇ ಕಾರಣದಿಂದ ಮಾಡಬೇಕಾದ ಕರ್ಮಗಳೂ ಉಂಟು. ಅವುಗಳಿಗೆ ನಿತ್ಯಕರ್ಮಗಳು ಎಂದು ಹೆಸರು.

ಸಾತ್ತ್ವಿಕಕರ್ಮವು ಹೇಗಿರುವದು ?- ಎಂದರೆ

ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।
ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ 18-23

ನಿಯತವಾಗಿರುವ ಕರ್ಮವು ಎಂದರೆ ನಿತ್ಯಕರ್ಮವು. ನಿತ್ಯಕರ್ಮದಲ್ಲಿ ನಿರತನಾಗಿದ್ದರೆ ಅವನನ್ನು ಸಾತ್ತ್ವಿಕನೆನ್ನುವದಕ್ಕೆ ಒಂದು ಗುರುತು ಸಿಕ್ಕಿದಂತೆ. ಸಂಗರಹಿತವಾದದ್ದು, ಎಂದರೆ "ನಾನು ಮಾಡುತ್ತಿರುವ ಕರ್ಮವಿದು, ನನ್ನ ಕರ್ಮವಿದು, ನನಗೆ ಬೇಕಾದ ಕರ್ಮವಿದು - ಎಂದು ತನಗೆ ಬೇಕಾದರೆ ತೆಗೆದುಕೊಳ್ಳುವದು, ಇಲ್ಲದಿದ್ದರೆ ಬಿಡುವದು"- ಎಂಬ ಸಂಗವಿಲ್ಲದ್ದು. ರಾಗದ್ವೇಷಗಳಿಲ್ಲದೆ ಸ್ವಾಭಾವಿಕವಾಗಿ ಮಾಡುವ ಕರ್ಮವು "ಅರಾಗದ್ವೇಷತಃ ಕೃತಮ್" ಎಂಬ ವಿಶೇಷಣದಲ್ಲಿ ಸಂಗ್ರಹವಾಗಿದೆ. ರಾಗದ್ವೇಷಗಳು ನಾವು ಮಾಡಿಕೊಳ್ಳುವವಲ್ಲ, ತಮಗೆ ತಾವೇ ಆಗತಕ್ಕವು. ಚಿಕ್ಕಮಕ್ಕಳು ಪಾಠವನ್ನು ಕೇಳುತ್ತಿರುವಾಗ ಉಪಾಧ್ಯಾಯನು ಎಷ್ಟೇ ಚೆನ್ನಾಗಿ ಪಾಠವನ್ನು ಹೇಳುತ್ತಿದ್ದರೂ ಹೊರಗೆ ಸಿನಿಮಾಪ್ರಕಟಣೆಯ ಓಲಗದ ಮತ್ತು ಡೋಲಿನ ಶಬ್ದವಾಗುತ್ತಲೂ ಆ ಕಡೆಗೆ ಗಿರಕ್ಕನೆ ತಿರುಗಿಬಿಡುವಂತೆ ನಾವೂ ರಾಗದ್ವೇಷಗಳು ಉಂಟಾದ ಕ್ಷಣವೇ ಅವಕ್ಕೆ ವಶರಾಗಿಬಿಡುತ್ತೇವೆ. ಮನುಷ್ಯನಿಗೆ ರಾಗದ್ವೇಷಗಳೆಂಬಿವು ಹಿಂದಕ್ಕೂ ಮುಂದಕ್ಕೂ ಎಳೆಯುವ ಹಗ್ಗಗಳಂತೆ ಇರುತ್ತವೆ. ಪದಾರ್ಥಗಳಲ್ಲಿ ಒಳ್ಳೆಯದು, ಕೆಟ್ಟದ್ದು - ಎಂಬ ತಪ್ಪು ತಿಳಿವಳಿಕೆಯ ಅಭಿಮಾನವಿರುವದೇ ಈ ರಾಗದ್ವೇಷಗಳ ಹಿಡಿತಕ್ಕೆ ಸಿಕ್ಕುವದಕ್ಕೆ ಕಾರಣವಾಗಿರುತ್ತದೆ. ಸಾತ್ತ್ವಿಕಕರ್ಮವು ರಾಗದ್ವೇಷಗಳ ಹಿಡಿತಕ್ಕೂ ಸಿಕ್ಕುವದಿಲ್ಲ.

ನಿಯತವಾಗಿದ್ದರೆ ರಾಗದ್ವೇಷಗಳಿಗೆ ಎಡೆಯಿರುವದೇ ಇಲ್ಲ. ಏಕೆಂದರೆ ನಿತ್ಯವಾದ ಕರ್ಮವನ್ನು ಏತಕ್ಕಾಗಿ ಮಾಡಬೇಕೆಂಬ ಪ್ರಶ್ನೆಯೇ ಇರುವದಿಲ್ಲ. ನಿತ್ಯತ್ವವೆಂಬ ಒಂದು ವಿಶೇಷಣವಿದ್ದರೆ ಶಾಸ್ತ್ರದಲ್ಲಿರುವ ಗೌರವಬುದ್ಧಿಯಿಂದಲೇ ಕರ್ಮವನ್ನು ಮಾಡಬೇಕಾಗಿಬರುವದರಿಂದ ಸಂಗ, ರಾಗದ್ವೇಷ, ಫಲೇಚ್ಛೆ - ಇವು ಯಾವದಕ್ಕೂ ಅಲ್ಲಿ ಎಡೆಯಿರುವದಿಲ್ಲ. ಧರ್ಮದ ವಿಷಯಕ್ಕೆ ಜನರಿಗೆ ರಾಗದ್ವೇಷಗಳು ಬಂದಾಗ ಅವರು ಏನುಮಾಡುವರು, ಏನುಮಾಡುವದಿಲ್ಲ - ಎಂಬುದನ್ನು ಹೇಳುವದಕ್ಕೆ ಆಗುವದಿಲ್ಲ. ರಷ್ಯದೇಶದಲ್ಲಿ ಕ್ರಿಸ್ತಿಯನ್ ಚರ್ಚಿನವರಿಗೂ ಕಮ್ಯುನಿಸ್ಟ್ ಪಕ್ಷದವರಿಗೂ ತಿಕ್ಕಾಟವು ಪ್ರಾರಂಭವಾದಾಗ ಜನರು ಕ್ರೈಸ್ತ ಧರ್ಮದವರು ತಮ್ಮನ್ನು ಕಟ್ಟಿಹಾಕುತ್ತಿದ್ದಾರೆಂದು ಬಗೆದು ಆ ಮತದ ಪಕ್ಷಪಾತಿಗಳು ಆಡುವ ಮಾತಿಗೆಲ್ಲ ಅಪಾರ್ಥವನ್ನು ಮಾಡಿಕೊಳ್ಳುತ್ತಿದ್ದರಂತೆ. ಡ್ಯೂಮ ಎಂಬ ಆ ದೇಶದ ಪಾರ್ಲಿಮೆಂಟಿನಲ್ಲಿ ಒಮ್ಮೆ ಒಬ್ಬನು "ನೀವು ಸಂಘದ ಮಕ್ಕಳು" (You are the sons of the Church) ಎಂದು ಪ್ರಸ್ತಾಪಿಸಲು "ಏನು ! ನಾವೆಲ್ಲ ಚರ್ಚಿನ ಮಕ್ಕಳೇ ?" ಎಂದು ರೇಗಿ ಗಲಾಟೆಯನ್ನು ಎಬ್ಬಿಸಿದರಂತೆ ; ಆ ದೇಶದಲ್ಲಿ

ಮತಬೋಧೆಮಾಡುವದೇ ಕಷ್ಟವಾಗಿ ಪರಿಣಮಿಸಿತಂತೆ ! ಮತವು ಒಂದಾನೊಂದು ಪಂಗಡದವರ ಹಿತಕ್ಕೆ ಇರತಕ್ಕದ್ದು, ಅದು ನಿತ್ಯಧರ್ಮವಲ್ಲ ಎಂಬ ಭಾವನೆಯೇ ಈ ಮತದ್ವೇಷಕ್ಕೆ ಕಾರಣವಾಯಿತು. ಆದರೆ ಧರ್ಮವು ನಿಯವಾದದ್ದು, ನಾವು ಧರ್ಮಸಂಘಕ್ಕೆ ಮಕ್ಕಳೇ ಸರಿ ಎಂಬ ಭಾವನೆ ಬಂದವನಿಗೆ ಹೇಗೆತಾನೆ ದ್ವೇಷವುಂಟಾದೀತು?

ಫಲೇಚ್ಛೆಯಿಲ್ಲದೆ ಮಾಡಿದ್ದೇ ಸಾತ್ತ್ವಿಕವು. ಮೀಮಾಂಸಕರ ಮತದಲ್ಲಿ ಕರ್ಮವೇ ದೇವತೆ ; ಕರ್ಮವನ್ನು ಸ್ವೀಕರಿಸುವ ಬೇರೊಂದು ದೇವತೆಯನ್ನು ಅವರು ಒಪ್ಪುವದಿಲ್ಲ. ನಿತ್ಯಕರ್ಮಕ್ಕೆ ಫಲವಿಲ್ಲ, ಆದರೆ ಅದನ್ನು ಬಿಟ್ಟರೆ ಪ್ರತ್ಯವಾಯ. ಆರೋಗ್ಯನಿಯಮಗಳನ್ನು ಪಾಲಿಸಿದರೆ ಎಂದಿನಂತೆ ಆರೋಗ್ಯವಿರುತ್ತದೆ; ಆ ನಿಯಮಗಳಿಗೆ ವಿರುದ್ಧವಾಗಿ ನಡೆದರೆ ರೋಗವು ಬರುತ್ತದೆ. ಆದರೆ ವೇದಾಂತಿಗಳ ಅಭಿಪ್ರಾಯವೇನೆಂದರೆ ಎಲ್ಲಾ ಕರ್ಮಗಳಿಗೂ ಫಲವುಂಟು. ಇಲ್ಲಿ ಭಗವಂತನು ನಿತ್ಯಕರ್ಮವನ್ನು `ಫಲಪ್ರೇಪ್ಸುವಾಗದೆ ಮಾಡಬೇಕು' ಎಂದಿರುವದೇ ಅದಕ್ಕೆ ಫಲವುಂಟೆಂಬುದಕ್ಕೆ ಗಮಕವಾಗುತ್ತದೆ. ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡಿದರೊ? ಎಂದರೆ ಅದರಿಂದ ಮತ್ತೂ ಹೆಚ್ಚಿನ ಫಲವೇ ಉಂಟಾಗುತ್ತದೆ.

ಹಾಗಾದರೆ ನಿತ್ಯಕರ್ಮಗಳಿಗೂ ಕಾಮ್ಯಕರ್ಮಗಳಿಗೂ ಹೆಚ್ಚುಕಡಿಮೆ ಏನು? ಎರಡಕ್ಕೂ ಫಲವುಂಟಲ್ಲ! - ಎಂಬ ಶಂಕೆಯೊಂದು ಎದ್ದುಕೊಳ್ಳಬಹುದು. ಕೆಲವರಂತೂ ಕಾಮ್ಯನಿಷಿದ್ಧಗಳಿಗೆ ಫಲವುಂಟಾದ್ದರಿಂದ ಕಾಮ್ಯಕರ್ಮಗಳನ್ನೇ ಮಾಡಬಾರದು ಎಂದು - ಶುಷ್ಕವೇದಾಂತವನ್ನು ಹೇಳಿಕೊಂಡು ಪರಮೇಶ್ವರನನ್ನು ಇಷ್ಟಕಾಮ್ಯಾರ್ಥಸಿದ್ಧಿಗಾಗಿ ಬೇಡಿಕೊಳ್ಳುವದು ಸರಿಯಲ್ಲ ಎನ್ನುವರು ; ಅನೇಕರು ಈ ಬುದ್ಧಿಯಿಂದ ವ್ರತಾದಿಗಳನ್ನು ಮಾಡದೆ ಇರುತ್ತಾರೆ. ಇದು ತಪ್ಪುತಿಳಿವಳಿಕೆಯ ಫಲ. ನಿಜವಾಗಿ ನಾವು ಮಾಡುವ ಎಲ್ಲಾ ಕರ್ಮಗಳಿಗೂ ಬುಡದಲ್ಲಿ ಕಾಮವೇ ಇರುತ್ತದೆ. ಆದರೂ ಲೌಕಿಕವಾದ ಕರ್ಮಗಳಿಗಿಂತಲೂ ಶಾಸ್ತ್ರೀಯಕರ್ಮಗಳು ನಮ್ಮ ರಾಗದ್ವೇಷಗಳನ್ನು ಹಿಡಿತಕ್ಕೆ ತಂದು ಕಟ್ಟಿನಲ್ಲಿರಿಸುವದರಿಂದ ಶಾಸ್ತ್ರೀಯಕರ್ಮವು ಮೇಲು. ಶಾಸ್ತ್ರೀಯಕರ್ಮದಲ್ಲಿಯೂ ಮುಮುಕ್ಷುಗಳಾದವರಿಗೆ ಕಾಮ್ಯಕರ್ಮಗಳಿಗಿಂತ ನಿತ್ಯಕರ್ಮಗಳು ಮೇಲು. ನಿತ್ಯಕರ್ಮಗಳಿಗೂ ಕಾಮವೇ ಪ್ರಯೋಜಕವಾಗಿರುತ್ತದೆಯಾದರೂ ಕಾಮ್ಯಕರ್ಮಕ್ಕೆ ವಿಶೇಷಕಾಮವೂ ಬೇಕಾಗಿರುತ್ತದೆ ; ನಿತ್ಯಕರ್ಮಕ್ಕೆ ಸಾಮಾನ್ಯಕಾಮ ಕಾರಣವಾಗಿರುತ್ತದೆ. ಇಷ್ಟವಾದದ್ದು ಆಗಬೇಕು, ಅನಿಷ್ಟವಾದದ್ದು ಆಗಬಾರದು- ಎಂದು ಸಾಮಾನ್ಯವಾಗಿರುವ ಕಾಮವಿದ್ದವರು ನಿತ್ಯಕರ್ಮವನ್ನು ಮಾಡಬೇಕು ; ಇಂಥಿಂಥ ಫಲವು ಆಗಬೇಕು - ಎಂಬ ವಿಶೇಷಕಾಮವಿದ್ದವರು ಕಾಮ್ಯಕರ್ಮವನ್ನು ಮಾಡಬೇಕು.

ಇದಿರಲಿ. ಪ್ರಕೃತದಲ್ಲಿ ಫಲೇಚ್ಛೆಯಿಲ್ಲದೆ ಕರ್ಮವನ್ನು ಮಾಡಬೇಕೆಂಬುದು ಮುಮುಕ್ಷುಗಳ ವಿಷಯ. ಮುಮುಕ್ಷುವಾದವನು ಈ ಸಾಮಾನ್ಯೇಚ್ಛೆಯು ಕೂಡ ಇಲ್ಲದೆ

ಪರಮೇಶ್ವರಾರ್ಪಣಬುದ್ಧಿಯಿಂದ ನಿತ್ಯಕರ್ಮವನ್ನು ಮಾಡಿದರೆ ಅದು ಸಾತ್ತ್ವಿಕಕರ್ಮವಾಗುತ್ತದೆ ಎಂದು ಅಭಿಪ್ರಾಯ.

ಇನ್ನು ರಾಜಸ ಕರ್ಮವು ಹೇಗಿರುವದೆಂದರೆ :

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥** **18-24**

ಸಾತ್ತ್ವಿಕಕರ್ಮದಲ್ಲಿ ಕಾಮವಿರುವದಿಲ್ಲ, ಇದರಲ್ಲಿ ಉಂಟು. ಇಂಥಿಂಥ ಕಾಮವಿದ್ದರೆ ಇಂಥಿಂಥ ಕರ್ಮವನ್ನು ಮಾಡಬೇಕು ಎಂದು ಶಾಸ್ತ್ರದಲ್ಲಿ ವಿಧಿಸಿರುತ್ತದೆ. `ಗಾಂ ಹತ್ವಾ ಏವಂ ಕುರ್ಯಾತ್' ಗೋವನ್ನುಕೊಂದರೆ ಇಂಥ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು ಎಂದು ಶಾಸ್ತ್ರದಲ್ಲಿ ಹೇಳಿರುತ್ತದೆಯಾದರೂ ಗೋವನ್ನು ಕೊಂದು ಈ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು ಎಂದೇನೂ ಅದಕ್ಕೆ ಅರ್ಥವನ್ನು ಕಲ್ಪಿಸುವದಕ್ಕೆ ಆಗುವದಿಲ್ಲವಷ್ಟೆ. ಹೀಗೆಯೇ ಇಲ್ಲಿಯೂ ತಿಳಿಯಬೇಕು. ಮನುಷ್ಯನಿಗೆ ರಾಗದ್ವೇಷಗಳು ತಾವೇ ಆಗಿಂದಾಗ್ಗೆ ಉಂಟಾಗುತ್ತಿರುತ್ತವೆ; ಶಾಸ್ತ್ರವೇನೂ ಅದನ್ನುಂಟುಮಾಡುವದಿಲ್ಲ. ಇಂಥಿಂಥ ಫಲಕ್ಕೆ ಇಂಥಿಂಥ ಕರ್ಮವು ನಿಮಿತ್ತವಾಗುತ್ತದೆ ಎಂದಿಷ್ಟನ್ನೇ ಶಾಸ್ತ್ರವು ತಿಳಿಸುತ್ತದೆ.

ಸಾಹಂಕಾರೇಣ - ಎಂದರೆ ಅಹಂಕಾರಸಹಿತವಾದ ಕರ್ಮವನ್ನು ಮಾಡುವಾಗ ನಾನು ಎಂಬ ಅಭಿಮಾನವು ಯಾರಿಗಾದರೂ ಇದ್ದೇ ಇರುತ್ತದೆ. ನಿಜವಾಗಿ ನಿರಹಂಕಾರವಾಗಿರುವವನೆಂದರೆ ಆತ್ಮಜ್ಞಾನಿಯೊಬ್ಬನೇ ; ಅವನಿಗೆ ಕಾಮಗಳನ್ನು ಪಡೆದುಕೊಳ್ಳಬೇಕೆಂಬುದಾಗಲಿ, ಕಷ್ಟಪಟ್ಟು ಸಾಧಿಸಲೇಬೇಕೆಂಬುದಾಗಲಿ ಇರುವದೇ ಇಲ್ಲ. ಇಲ್ಲಿ ಸಾಹಂಕಾರವೆಂಬುದರ ಅಭಿಪ್ರಾಯವೇನೆಂದರೆ, ಶ್ರೋತ್ರಿಯನೂ ನಿರಹಂಕಾರನೂ ಆಗಿರುವ ಕರ್ತೃವಿನಂತಲ್ಲದೆ ನಾನು ಮಾಡುತ್ತೇನೆ ಎಂದು ಅಹಂಕಾರದಿಂದ ಕೂಡಿರುವದು. ರಾಜಸಕರ್ಮಕ್ಕೆ ನಾನು ಮಾಡುತ್ತೇನೆ - ಎಂಬ ಸಂಗವು ಇದ್ದೇ ಇರುತ್ತದೆ. ಈ ಕರ್ಮವು ನಾನು ಮಾಡಿದ್ದು ಎಂದು ನಾವು ಎಷ್ಟುಸಲ ಕೊಚ್ಚಿಕೊಳ್ಳುತ್ತೇವೆ ! " ಲಾಡು ಬಡಿಸುವದರಲ್ಲಿ ಬಹಳ ವಿತರಣೆಯನ್ನು ತೋರಿಸಿದರು" ಎಂದು ಯಾರಾದರೂ ಹೊಗಳಿದರೆ "ನಾನು ಬಡಿಸಿದೆ, ಕಾಣಿರಿ !" ಎಂದು ಬಡಿಸಿದವನು ಹೇಳಿಕೊಳ್ಳುವದು ಈ ಅಹಂಕಾರರೂಪಸಂಗದಿಂದ ; ಕೃತಜ್ಞತೆಯನ್ನು ತೋರಿಸುವ ಸಂದರ್ಭದಲ್ಲಿ "ಇವರೇ ಮುಂತಾದವರು ನಮಗೆ ಉಪಕಾರವನ್ನು ಮಾಡಿ ಚಿರಋಣಿಗಳನ್ನಾಗಿ ಮಾಡಿದ್ದಾರೆ " ಎನ್ನುವದುಂಟು. ಆದರೆ `ಈ ಮುಂತಾದವರಲ್ಲಿ ನಾವು ಸೇರಿದ್ದೇವೆಯೊ, ಇಲ್ಲವೊ ?' ಎಂದು ಕೆಲವರು ಮನಸ್ಸಿನಲ್ಲಿ ಲೆಕ್ಕಹಾಕುತ್ತಿರುವದುಂಟು. ಇದೂ ಸಾಹಂಕಾರಕರ್ಮವೇ. ಒಬ್ಬ ಅಧಿಕಾರಿಯು ಅಧಿಕಾರದಿಂದ ನಿವೃತ್ತನಾಗಿ ಹಲವು ವರ್ಷಗಳಾಗಿದ್ದರೂ "ನೀವು ಆ ಸಂದರ್ಭದಲ್ಲಿ ಹಾಗೆ ಮಾಡಬಹುದಾಗಿತ್ತೆ?" ಎಂದರೆ "ಮತ್ತೇನು? ನಾನು ಆಗ ಮಾಡಿದ್ದೇ ಸರಿ" ಎಂದು ಕೆರಳಿ ಸ್ವಾಭಿಮಾನದಿಂದ ನುಡಿಯುತ್ತಾನಷ್ಟೆ.

ಅದೂ ಸಾಹಂಕಾರಕರ್ಮವೇ, ಸಸಂಗಕರ್ಮವೇ, ಅಹಂಕಾರದಿಂದ ಅಥವಾ ಸಂಗದಿಂದ ಮಾಡಿದ ಕರ್ಮವು ಅವಶ್ಯವಾಗಿ ನಮಗೆ ಒಳ್ಳೆಯ ಅಥವಾ ಕೆಟ್ಟಫಲವನ್ನು ಕೊಡುತ್ತದೆ; ಆ ಸಂಗವು ದುರಭಿಮಾನವೇ ಆಗಿದ್ದರೆ ಅದರಿಂದ ರಾಜಸಫಲವೇ ಆಗುತ್ತದೆ.

ಯಾವದು ಫಲದ ಆಶೆಯಿಂದಲೂ ಅಹಂಕಾರಪೂರ್ವಕವಾಗಿಯೂ ಮಾಡಿದ್ದೋ ಅದು ಅವಶ್ಯವಾಗಿ ಬಹಳ ಆಯಾಸದಿಂದ ಮಾಡತಕ್ಕದ್ದಾಗಿರುತ್ತದೆ. ಒಬ್ಬ ರಾಜನು ಬೆಳಗ್ಗೆ ಎಲ್ಲರಿಗಿಂತಲೂ ಮುಂಚಿತವಾಗಿ ತನ್ನಲ್ಲಿಗೆ ಬಂದು ಆಶೀರ್ವಾದಮಾಡಿದವರಿಗೆ ಎರಡು ಸುವರ್ಣನಾಣ್ಯಗಳನ್ನು ದಾನಮಾಡುವ ಪದ್ಧತಿಯನ್ನು ಇಟ್ಟುಕೊಂಡಿದ್ದನಂತೆ. ಒಬ್ಬ ದರಿದ್ರಬ್ರಾಹ್ಮಣನು ಅದೇ ಯೋಚನೆಯಿಂದ ರಾತ್ರಿಯೆಲ್ಲ ಎಚ್ಚರವಾಗಿದ್ದು ಸ್ವಲ್ಪ ನಿದ್ರಿಸಿದ ಬಳಿಕ ಇನ್ನೂ ಬೆಳದಿಂಗಳು ಇದ್ದರೂ ಬೆಳಕು ಹರಿಯಿತೆಂಬ ಭ್ರಮೆಯಿಂದ ರಾಜನ ದರ್ಶನಕ್ಕೆಂದು ಓಡಿಹೋಗುತ್ತಿರಲು ಕಾವಲುಗಾರರು ಇವನು ಯಾರೋ ಕಳ್ಳನಿರಬೇಕೆಂದು ಹಿಡಿದು ಲಾಕಪ್ಪಿಗೆ ಹಾಕಿದರಂತೆ. ಫಲದ ಆಸೆ ನಮ್ಮನ್ನು ಎಷ್ಟು ಆಯಾಸಗೊಳಿಸುವದೆಂಬುದಕ್ಕೆ ಇದೊಂದು ಉದಾಹರಣೆ. ಇದುವರೆಗೂ ವರ್ಣಿಸಿದ್ದು ರಾಜಸಕರ್ಮವು.

ಈಗ ತಾಮಸಕರ್ಮವು ಹೇಗಿರುವದೆಂಬುದನ್ನು ನೋಡೋಣ :

**ಅನುಬನ್ಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ತ ತ್ತಾಮಸಮುದಾಹೃತಮ್ ॥ 18-25**

ತಾಮಸ ಕರ್ಮವು ಹಿಂದೆ ಮುಂದೆ ವಿಚಾರಿಸದೆ ಮಾಡತಕ್ಕ ಅವಿವೇಕಿಗಳ ಕರ್ಮವು. ಈ ಕರ್ಮವನ್ನು ಮಾಡಿದರೆ ಮುಂದೆ ಕೊನೆಯಲ್ಲಿ ಯಾವ ಪರಿಣಾಮವಾದೀತು ? ಎಂಬುದನ್ನು ಯೋಚಿಸದೆ ಇರುವದು ತಾಮಸಕರ್ಮವು. `ಇಂದು ಮಾಡಿದ್ದೇ ನಮ್ಮದು, ನಾಳೆ ಏನಾದರೂ ಆಗಲಿ !'- ಎನ್ನುವ ಮೂರ್ಖರು ಈ ಕರ್ಮವನ್ನು ಮಾಡುವರು. ಕೆಲಸವನ್ನು ಮಾಡುವದಕ್ಕೆ ನಮಗೆ ಎಷ್ಟು ಶಕ್ತಿಯ ಕ್ಷಯವಾದೀತು, ಎಷ್ಟು ಧನವ್ಯಯವಾದೀತು ?- ಎಂಬುದನ್ನು ಲೆಕ್ಕಿಸದೆ ಮುನ್ನುಗ್ಗುವದೂ ತಾಮಸಕರ್ಮವೇ. ಹಿಂಸೆಯನ್ನಾಗಲಿ, ಎಂದರೆ ತನಗಾಗಲಿ ಮತ್ತೊಬ್ಬರಿಗಾಗಲಿ ಇದರಿಂದ ಎಷ್ಟು ಹಿಂಸೆಯಾದೀತು ? ಎಂಬುದನ್ನಾಗಲಿ ಇದನ್ನು ಮಾಡುವ ದೇಹಬಲವನ್ನಾಗಲಿ ಕರ್ಮದ ಪರಿಮಾಣ, ತನ್ನ ಯೋಗ್ಯತೆ - ಇವುಗಳಿಗೆ ಎಷ್ಟರಮಟ್ಟಿನ ಸಂಬಂಧವಿದೆ - ಎಂಬುದನ್ನಾಗಲಿ ನೋಡದೆ ಮಾಡುವದಕ್ಕೆ ಕೈಹಾಕುವ ಕೆಲಸವೂ ತಾಮಸವೇ. ಈ ಬಗೆಯ ಕರ್ಮಕ್ಕೆ ಮೋಹವೇ ಕಾರಣ. ಹಿಂದಕ್ಕೆ ಒಂದು ಸಲ ಬಾಣಾವರದಲ್ಲಿ ಪಂತನೆಂಬ ಒಬ್ಬ ಹಾಸ್ಯಗಾರನಿದ್ದನಂತೆ : ಅವನು ಅಮಲ್ದಾರರಿಗೆ ತಿರುಪತಿಬೆಟ್ಟದ ಬಳಿ ತಾನು ತೋರಿಸುವ ಭೂಭಾಗವನ್ನು ತನಗೆ ಯುಕ್ತವಾದ ಬೆಲೆಗೆ ಕೊಡಿಸಿಕೊಡಬೇಕೆಂದು ಒಂದು ಅರ್ಜಿಯನ್ನು ಹಾಕಿಕೊಂಡನಂತೆ. ಆ ಪ್ರಾಂತಕ್ಕೆ ಸಂಬಂಧಪಟ್ಟ ಶೇಕದಾರರು ಅವನನ್ನು ಕರೆದುಕೊಂಡು `ಸ್ಥಳ ತೋರಿಸು' ಎನ್ನಲು, ಅವನು "ಇನ್ನೂ ಸ್ವಲ್ಪ

ಮುಂದೆ ಹೋಗಬೇಕು, ಇನ್ನೂ ಸ್ವಲ್ಪ ಮುಂದೆ ಹೋಗಬೇಕು !" ಎನ್ನುತ್ತಾ ಅವರನ್ನು ಬೆಟ್ಟದ ಸಮೀಪಕ್ಕೆ ಕರೆದುಕೊಂಡು ಹೋದನಂತೆ. ಕೊನೆಗೆ "ಇನ್ನೂ ಎಲ್ಲಿದೆಯಯ್ಯ, ಆ ಭೂಮಿ?" ಎಂದು ಶೇಕದಾರರು ಸ್ವಲ್ಪ ಉದ್ವೇಗದಿಂದ ಕೇಳಲು `ಇಗೊ, ಈ ಬೆಟ್ಟದ ಕೆಳಗಿರುವದೇ ಆ ಸ್ಥಳ ; ಬೆಟ್ಟವನ್ನು ಸ್ವಲ್ಪ ಒತ್ತಲಿಸಿ ಕೆಳಗಡೆಯಿರುವ ಒಂದು ಮೊಳದಷ್ಟು ಜಮೀನು ಕೊಡಿಸಿದರೆ ಸಾಕು, ಸ್ವಾಮಿ !" ಎಂದನಂತೆ. ಆ ಶೇಕದಾರನಿಗೆ ತಾನೊಬ್ಬ ಹಾಸ್ಯಗಾರನ ಪಟ್ಟಿಗೆ ಸಿಕ್ಕಿದ್ದೇನೆಂಬ ಅರಿವು ಆಗ ಆಯಿತು. ಆ ದಿನದ ಕೆಲಸವೆಲ್ಲ ವ್ಯರ್ಥವಾಯಿತು. ತನ್ನ ಅವಿವೇಕಕ್ಕೆ ತಾನೇ ನಾಚಿಕೆಪಟ್ಟು ಕೊನೆಗೆ " ಈ ಅರ್ಜಿದಾರನು ಕೇಳುವ ಜಮೀನನ್ನು ಕೊಡಿಸಲು ಸಾಧ್ಯವಿಲ್ಲ" ಎಂದು ಮೇಲುಪಟ್ಟ ಅಧಿಕಾರಿಗಳಿಗೆ ವರದಿಮಾಡಿದನಂತೆ!

ನಾವು ದಿನ ದಿನವೂ ಇಂಥ ತಾಮಸದ ಕೆಲಸಗಳನ್ನು ಮಾಡುತ್ತಲೇ ಇರುವೆವು. ಇಷ್ಟೇ ಅಲ್ಲ. ಸಾತ್ತ್ವಿಕ, ರಾಜಸ, ತಾಮಸ- ಬುದ್ಧಿವೃತ್ತಿಗಳು ನಮ್ಮ ಮನಸ್ಸಿನಲ್ಲಿ ಎದ್ದುಕೊಳ್ಳುತ್ತಲೇ ಇರುವದರಿಂದ ನಮ್ಮ ಪ್ರವೃತ್ತಿಗಳೂ ಮೂರು ಬಗೆಯಾಗಿರುವದು ಅನಿವಾರ್ಯವಾಗಿರುತ್ತದೆ. ಆದ್ದರಿಂದ ಸಾತ್ತ್ವಿಕತೆಯನ್ನು ಸಂಪಾದಿಸಿಕೊಂಡು ಸಾತ್ತ್ವಿಕಕರ್ಮದಲ್ಲಿಯೇ ತೊಡಗುವದನ್ನು ನಾವು ಅಭ್ಯಾಸಮಾಡಬೇಕು.

## ೧೮೦. ಕರ್ತೃವಿನಲ್ಲಿ ಸಾತ್ತ್ವಿಕಾದಿಭೇದಗಳು 18 - (26-27)

**(6-8-50)**

ಹದಿನೆಂಟನೆಯ ಅಧ್ಯಾಯವು ಗೀತೆಯ ಉಪಸಂಹಾರವಾಗಿದೆ. ಆದ್ದರಿಂದ ಇಲ್ಲಿ ಹಿಂದೆ ಹೇಳಿರುವದೆಲ್ಲವನ್ನೂ ಸ್ವಲ್ಪಮಟ್ಟಿಗೆ ಕಾಣುವದು ಸ್ವಾಭಾವಿಕವಾಗಿದೆ. ಆದರೆ ಗೀತೆಯ ಸಾರವೆಲ್ಲ ಕರ್ಮಯೋಗ, ಜ್ಞಾನಯೋಗ - ಇವೆರಡರಲ್ಲಿಯೇ ಅಡಗಿರುತ್ತದೆ. ಸಾತ್ತ್ವಿಕಜೀವನವೊಂದಿದೆ, ಅದನ್ನು ನಾವು ಕಂಡುಕೊಂಡು ನಡೆಯಬೇಕು ಎಂಬ ಅಪೇಕ್ಷೆಯಿರುವವರಿಗೆ ಮಾತ್ರ ಈ ಎರಡು ಬಗೆಯ ಉಪದೇಶವು ಒಗ್ಗುತ್ತದೆ. ಅದರಲ್ಲಿಯೂ ಹೆಚ್ಚು ಜನಕ್ಕೆ ಕರ್ಮವೇ ಒಗ್ಗುತ್ತದೆ.

. ಜೀವನದಲ್ಲಿ ಸ್ವತಂತ್ರವಾಗಿ ಬಾಳುವವನ ಜೀವನವೇ ಸುಖದಾಯಕ ; ಪರಾಧೀನರಿಗೆ ದುಃಖವೇ ಹೆಚ್ಚು. ಮನುಷ್ಯಮಾತ್ರಕ್ಕೆ ಸ್ವಾತಂತ್ರ್ಯವು ಬೇಕಾಗಿದೆ, ಪರತಂತ್ರತೆಯಿಂದ ಬಿಡುಗಡೆಯಾಗಬೇಕಾಗಿದೆ. ಈಗಿನ ಕಮ್ಯೂನಿಷ್ಟರೆಂಬ ಪಂಗಡದವರು ಕೆಲಸಗಾರರಿಗೆ ಬಿಡುಗಡೆಯ ಅವಶ್ಯಕತೆಯಿದೆ ಎನ್ನುತ್ತಾರೆ ; ಬಡವರನ್ನು ಧನಿಕರ ದಾಸ್ಯದಿಂದ ಬಿಡುಗಡೆಮಾಡಿಸಬೇಕು ಎಂದು ಸಂಕಲ್ಪಿಸಿರುತ್ತಾರೆ. ರಾಜಕೀಯದೃಷ್ಟಿಯಿಂದ ಇದಕ್ಕೆ ಬೆಲೆಯಿರಲಿ, ಇಲ್ಲದಿರಲಿ, ಈಗಿನ ಸಮಾಜದಲ್ಲಿ ಏನೋ ನ್ಯೂನತೆಯಿದೆಯೆಂದೂ ಅದನ್ನು

ಸರಿಪಡಿಸಬೇಕೆಂದೂ ಅವರ ಭಾವನೆಯಿದೆ ಎಂಬುದಕ್ಕೆ ಸಂಶಯವಿಲ್ಲ. ಅವರು ಕಾರ್ಮಿಕರ ನ್ಯೂನತೆಯನ್ನು ಸರಿಪಡಿಸುವದಕ್ಕೆ ಧನಿಕರನ್ನು ಮಟ್ಟಹಾಕುವದೇ ಮದ್ದು ಎಂದು ಎಣಿಸಿರುತ್ತಾರೆ. ಇದರಂತೆ ರೋಗದ ನಿದಾನ, ಚಿಕಿತ್ಸೆ - ಇವುಗಳನ್ನು ಬೇರೆ ಬೇರೆಯ ವೈದ್ಯವಿದ್ಯೆಯ ಆಚಾರ್ಯರುಗಳು ಬೇರೆ ಬೇರೆಯಾಗಿ ಹೇಳುತ್ತಿದ್ದಾರೆ ; ಅವರವರಿಗೆ ಅನುಯಾಯಿಗಳೂ ಸಿಕ್ಕಿರುತ್ತಾರೆ. ಆಯುರ್ವೇದ, ಯುನಾನಿ, ಅಲೋಪತಿ, ಹೋಮಿಯೋಪತಿ, ನೇಚರ್ ಕ್ಯೂರ್ - ಮುಂತಾದ ವೈದ್ಯ ಪದ್ಧತಿಯವರು ತಮ್ಮ ತಮ್ಮ ಪ್ರತಿಕ್ರಿಯೆಯನ್ನೂ ತಮ್ಮ ತಮ್ಮ ಔಷಧಿಪ್ರಯೋಗವನ್ನೂ ಉಪಯೋಗಿಸುತ್ತಿರುವದನ್ನೂ ಅವರವರಿಗೆ ಕೆಲ ಕೆಲವು ಭಾಗದಲ್ಲಿ ಜಯವೂ ಸಿಕ್ಕಿರುವದನ್ನೂ ನಾವು ನೆನಪಿಗೆ ತಂದುಕೊಳ್ಳಬಹುದು. ಅಂತೂ ರೋಗದ ಬಂಧಕ್ಕೆ ಸಿಕ್ಕಿ ನರಳುತ್ತಿರುವವರನ್ನು ಮುಕ್ತರನ್ನಾಗಿ ಮಾಡುವದೇ ಎಲ್ಲಾ ವೈದ್ಯರ ಉದ್ದೇಶವು. ಹೀಗೆಯೇ ವಿದ್ಯಾಭ್ಯಾಸ ಪದ್ಧತಿಯಿಂದ ಮನುಷ್ಯನ ತಿಳಿವಳಿಕೆಯನ್ನು ಹೆಚ್ಚಿಸಿ ಅಜ್ಞಾನದ ಬಂಧದಿಂದ ಜನರನ್ನು ತಪ್ಪಿಸಬೇಕೆಂಬುದು ಕೆಲವರ ಉದ್ದೇಶವು. ಹೀಗೆ ಬೇರೆ ಬೇರೆಯ ಕ್ಷೇತ್ರಗಳಲ್ಲಿ ಆಯಾ ಬಂಧವಿಶೇಷದಿಂದ ಮುಕ್ತಿಯನ್ನು ಗಳಿಸಿಕೊಡುವದಕ್ಕೆ ಆಯಾ ಜನನಾಯಕರು ಶ್ರಮಿಸುತ್ತಿದ್ದಾರೆ.

ಅಧ್ಯಾತ್ಮಶಾಸ್ತ್ರವೂ ಮುಕ್ತಿಗೆ ಮಾರ್ಗವನ್ನು ಹೇಳುವದಕ್ಕೆ ಹೊರಟಿರುತ್ತದೆ. ಆದರೆ ಅದು ಯಾವದಾದರೊಂದು ಗೊತ್ತಾದ ಬಂಧವಿಶೇಷದಿಂದ ಬಿಡುಗಡೆಯನ್ನು ಹೊಂದುವ ಕ್ರಮವನ್ನು ಉಪದೇಶಿಸುವದಕ್ಕೆ ಬಂದಿಲ್ಲ. ಎಲ್ಲರಿಗೂ ಎಲ್ಲಾ ಅವಸ್ಥೆಯಲ್ಲಿಯೂ ಸಮಾನವಾಗಿರುವ ಒಂದಾನೊಂದು ಬಂಧವಿದೆ ; ಈ ಸಾಮಾನ್ಯಬಂಧಕ್ಕೆ ಜನರು ಅನುಸರಿಸುತ್ತಿರುವ ಒಂದಾನೊಂದು ದೃಷ್ಟಿಕೋನವೇ ಕಾರಣವಾಗಿರುತ್ತದೆ. ಆದ್ದರಿಂದ ಆ ದೃಷ್ಟಿಕೋನವನ್ನು ಮಾರ್ಪಡಿಸುವವರೆಗೂ ಯಾರಿಗೂ ಎಲ್ಲಿಗೆ ಹೋದರೂ ಏನು ಮಾಡಿದರೂ ಆತ್ಯಂತಿಕ ಮುಕ್ತಿಯು ದೊರಕಲಾರದು - ಎಂಬುದು ಅಧ್ಯಾತ್ಮಶಾಸ್ತ್ರಜ್ಞರ ಹೇಳಿಕೆ. ಕತ್ತಲೆಯ ಮನೆಯಲ್ಲಿರುವ ಮರದ ಸಾಮಾನುಗಳನ್ನೂ ಪಾತ್ರೆಗಳನ್ನೂ ಅಲ್ಲಲ್ಲಿ ಇಟ್ಟುಕೊಂಡಿದ್ದರೆ ಅವುಗಳ ಸ್ಥಳವಿನಿಮಯವನ್ನು ಮಾಡಿಕೊಂಡ ಮಾತ್ರದಿಂದ ನಮಗೆ ಎಡತಹುವದು ತಪ್ಪಲಾರದು. ಕತ್ತಲೆಯಿಂದಾಗಿರುವ ಬಂಧಕ್ಕೆ ದೀಪವೇ ಮೋಕ್ಷೋಪಾಯವು. ಇದರಂತೆ ಒಂದಾನೊಂದು ನೈಸರ್ಗಿಕಾವಿದ್ಯೆಯಿಂದ ನಮಗೆಲ್ಲ ಒಂದಾನೊಂದು ಸಾಮಾನ್ಯಬಂಧವಾಗಿರುತ್ತದೆ. ಈ ಬಂಧದಿಂದ ಬಿಡುಗಡೆಯಾಗಬೇಕಾದರೆ ವಿದ್ಯೆಯ ಬೆಳಕೇ ಬೇಕು. `ಅವಿದ್ಯಾಯಾಮನ್ತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂಮನ್ಯಮಾನಾಃ । ಜಙ್ಘನ್ಯಮಾನಾಃ ಪರಿಯನ್ತಿ ಮೂಢಾಃ ಅನ್ಧೇನೈವ ನೀಯಮಾನಾ ಯಥಾನ್ಧಾಃ" ದಟ್ಟವಾಗಿರುವ ಅವಿದ್ಯೆಯ ನಡುವೆ ಇದ್ದುಕೊಂಡಿದ್ದರೂ ನಾವು ವಿವೇಕಿಗಳು, ಪಂಡಿತರು ಎಂದು ಹೆಮ್ಮೆಪಡುತ್ತಿರುವ ಮೂಢರು ಅತ್ತಿತ್ತ ತಟ್ಟಾಡುತ್ತಾ ಸಂಕಟಪಡುತ್ತಾ ಸುತ್ತುತ್ತಿರುವರು ; ಅವರು ಒಬ್ಬರಿಗೊಬ್ಬರು ನಾಯಕರಾಗಲು ಹವಣಿಸುತ್ತಿರುವರು. ಆದರೆ ಕುರುಡರು

ಕುರುಡರಿಗೆ ನಾಯಕರಾದರೇನು ಗತಿ ? ಒಂದು ಬಂಧವನ್ನು ತಪ್ಪಿಸಿಕೊಳ್ಳುವದಕ್ಕೆ ಒಬ್ಬರು ಹೇಳಿದ ಉಪದೇಶವನ್ನು ಅನುಸರಿಸಿ ಅದರಿಂದ ಬಿಡುಗಡೆಯಾಗುವದರೊಳಗಾಗಿ ಮತ್ತೊಂದು ಬಂಧವು ನಮ್ಮನ್ನು ಕಟ್ಟಿಹಾಕುತ್ತಿರುವದು ನಮ್ಮೆಲ್ಲರ ಅನುಭವದಲ್ಲಿದೆ. ನಮ್ಮೆಲ್ಲರಿಗೂ ಕಷ್ಟಗಳಿಂದ ಪಾರಾಗುವದೇ ಉದ್ದೇಶ; ಆದರೆ ಕಷ್ಟಪರಿಹಾರದ ಉಪಾಯಗಳು ಹೆಚ್ಚಿದಷ್ಟೂ, ಅಥವಾ ಅದಕ್ಕಿಂತ ಬಲವಾಗಿಯೇ, ಕಷ್ಟಗಳು ಹೆಚ್ಚುತ್ತಿವೆ ! ಇದಕ್ಕೇನು ಮಾಡಬೇಕು ? ಈಗಿನ ಅಜ್ಞಾನದ ದೃಷ್ಟಿಕೋನವನ್ನು ಮಾರ್ಪಡಿಸಲು ತತ್ತ್ವದರ್ಶನದ ಬೆಳಕು ಉಳ್ಳ ಮಹಾತ್ಮರೇ ಬೇಕು. ಅಧ್ಯಾತ್ಮಶಾಸ್ತ್ರವನ್ನು ಬಲ್ಲವರು ಉಪದೇಶಿಸುತ್ತಿರುವ ಎರಡು ಮಾರ್ಗಗಳನ್ನು ಭಗವದ್ಗೀತೆಯಲ್ಲಿ ಬಗೆ ಬಗೆಯಿಂದ ವರ್ಣಿಸಿ ತಿಳಿಸಿರುತ್ತದೆ. ಇವೇ ಜ್ಞಾನಯೋಗ, ಕರ್ಮಯೋಗಗಳು.

ಇವೆರಡರಲ್ಲಿ ಕರ್ಮಯೋಗವೇ ಹೆಚ್ಚು ಸುಕರವಾಗಿರುತ್ತದೆ. ಅದರಲ್ಲಿ ಕರ್ಮದ ಸಾತ್ತ್ವಿಕಾದಿಪ್ರಭೇದಗಳನ್ನು ಹೇಳಿದ್ದಾಯಿತು. ಈಗ ಕರ್ತೃವಿನ ಪ್ರಭೇದಗಳನ್ನು ತಿಳಿದುಕೊಳ್ಳಬೇಕಾಗಿದೆ. ಕ್ರಿಯೆಯಲ್ಲಿ ಸ್ವತಂತ್ರನಾದವನೇ ಕರ್ತೃ. ಕರ್ತೃ, ಕರ್ಮ, ಕ್ರಿಯೆ - ಎಲ್ಲವೂ ಸಾತ್ತ್ವಿಕವಾದರೆ ಒಳ್ಳೆಯದೇ. ಆದರೆ ಕರ್ತೃವಂತೂ ಸಾತ್ತ್ವಿಕನಾಗಿ ಇರಲೇಬೇಕು. ಒಬ್ಬ ಕೀರ್ತನಕಾರನಿಗೆ ನೆರವಾಗಿರುವ ಪಿಟೀಲು, ಮೃದಂಗ ಮುಂತಾದ ಪಕ್ಕವಾದ್ಯದವರೆಲ್ಲರೂ ಕುಶಲರಾಗಿರಬಹುದು, ಕೇಳುವ ಸಭಿಕರೂ ರಸಿಕರಾಗಿರಬಹುದು. ಆದರೆ ಅವನು ಸ್ವತಃ ಕಲಾಭಿಜ್ಞನಲ್ಲದೆ ಹೋದರೆ ಕೀರ್ತನೆಯು ಎಂದಿಗೂ ಸರಿಹೋಗದು. ಇದರಂತೆ ಯಾವ ಕರ್ಮಕ್ಕಾದರೂ ಸಾಮಗ್ರಿಗಳೆಲ್ಲಕ್ಕಿಂತಲೂ ಕರ್ತೃವಿಗೆ ಪ್ರಾಮುಖ್ಯವಿದೆ. ಹಿಂದೆ ಸಾತ್ತ್ವಿಕಕರ್ಮದ ವಿಷಯವನ್ನು ಹೇಳಿದ್ದೆನಷ್ಟೆ. ಈಗ ಸಾತ್ತ್ವಿಕಕರ್ತೃವಿನ ಲಕ್ಷಣವನ್ನು

**ಮುಕ್ತಸಙ್ಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ 18-26**

ರಾಜಸರೂ ತಾಮಸರೂ ಕ್ರಮಕ್ರಮವಾಗಿ ಸಾತ್ತ್ವಿಕರಾಗಬೇಕಾದ್ದರಿಂದ ಸಾತ್ತ್ವಿಕ ಕರ್ತೃವನ್ನು ಮೊದಲು ವರ್ಣಿಸುತ್ತಾರೆ. ಕರ್ತೃವು ಮುಕ್ತಸಂಗನಾಗಿರಬೇಕು, ಅನಹಂವಾದಿಯಾಗಿರಬೇಕು. ಈ ಎರಡು ಶಬ್ದಗಳೂ ಕೇಳುವದಕ್ಕೆ ಎಲ್ಲರಿಗೂ ಮೆಚ್ಚಾಗಿರುತ್ತವೆ. ಲೋಕದಲ್ಲಿ ಕೆಲಕೆಲವು ಶಬ್ದಗಳು ನಮ್ಮ ಮೆಚ್ಚಿಗೆಯನ್ನು ಸೆಳೆದುಕೊಳ್ಳುವ ಶಕ್ತಿಯುಳ್ಳವಾಗಿರುತ್ತವೆ. ಆದರೆ ಮತ್ತೆ ಕೆಲವನ್ನು ಉಚ್ಚರಿಸಿದ ಕೂಡಲೆ ನಮಗೆ ಇದೇನೂ ಬೇಡ ಎನ್ನಿಸುತ್ತದೆ. ಉದಾಹರಣೆಗೆ ಸಂಯುಕ್ತಜನಾಂಗದ ಸಂಘದಲ್ಲಿ ರಷ್ಯದವರು `ಯುದ್ಧವನ್ನು ಅಂತಗೊಳಿಸುವ ಶಾಂತಿಯುತಕ್ರಮವನ್ನು ತಿಳಿಸುತ್ತೇವೆ' ಎಂದದ್ದು ಕೇಳಿದರೆ ಯಾರಿಗಾದರೂ ಅದನ್ನು ಕೇಳೋಣ ಎನಿಸುತ್ತದೆ. ಆದರೆ ಅವರು ಅಮೆರಿಕನ್ನರ ವಿಷಯದಲ್ಲಿ

ಆಡುವ ಕಟುವಾಕ್ಯಗಳನ್ನು ಕೇಳಿದರೆ ಯಾರಿಗಾದರೂ ಬೇಸರವಾಗುತ್ತದೆ. ಅಮೆರಿಕದವರ ಮಾತೂ ಹೀಗೆಯೇ. ಅವರ ಹಠವಾದವು ಯಾರಿಗೆತಾನೆ ಮೆಚ್ಚಾಗುವದು ? ಇದಂತಿರಲಿ ; ಪ್ರಕೃತದಲ್ಲಿ ಮುಕ್ತಸಂಗಃ, ಅನಹಂವಾದೀ - ಇವೆರಡೂ ಸ್ವಲ್ಪ ಹೆಚ್ಚು ಕಡಿಮೆಯಾಗಿ ಒಂದೇ ಅಭಿಪ್ರಾಯವನ್ನು ತಿಳಿಸುತ್ತವೆ. ಕರ್ಮದಲ್ಲಿ ಸಂಗವಿಲ್ಲದವನು, ನಾನು ನಾನು ಎಂದು ತನಗೇ ಪ್ರಾಶಸ್ತ್ಯವನ್ನು ಕೊಟ್ಟುಕೊಳ್ಳದವನು, ಸಾತ್ತ್ವಿಕಕರ್ತೃವೆನಿಸುತ್ತಾನೆ. ಕರ್ತೃವಿಗೆ ಪ್ರಾಧಾನ್ಯವನ್ನು ಕೊಡುವದು ನಮಗೆ ಅಭ್ಯಾಸವಾಗಿಬಿಟ್ಟಿದೆ. ಈ ಕೆಲಸವನ್ನು ನಾನು ಮಾಡುತ್ತೇನೆ ಎಂಬುದನ್ನು ತೋರಿಸಿಕೊಳ್ಳುವವನು ಎಂದಿಗೂ ಸಾತ್ತ್ವಿಕಕರ್ತೃವಲ್ಲ ; ಕರ್ಮವು ಎಷ್ಟು ಒಳ್ಳೆಯದಾದರೂ ಕರ್ತೃವು ಇಂಥ ಕೀಳ್ಮೆಯುಳ್ಳವನಾಗಿದ್ದರಿಂದ ನಾನು ಅದನ್ನು ಒಪ್ಪುವದಿಲ್ಲ ಎನ್ನುವದು ಸರಿಯಾದ ಮನೋಭಾವವಲ್ಲ. ದ್ರೌಪದಿಯು ದುರ್ಯೋಧನನ ಸಭೆಯಲ್ಲಿ ತನ್ನನ್ನು ಧರ್ಮರಾಯನು ಸೋತದ್ದು ನ್ಯಾಯವೋ, ಅಲ್ಲವೋ ?- ಎಂಬ ಪ್ರಶ್ನೆಯನ್ನು ಹಾಕಿದಾಗ ಸಭೆಯಲ್ಲಿ ದೊಡ್ಡವರೆಲ್ಲರೂ ಸುಮ್ಮನಿದ್ದರು. ಆಗ ವಿಕರ್ಣನು. "ಅದು ನ್ಯಾಯವಲ್ಲ! ಧರ್ಮರಾಯನು ತನ್ನನ್ನು ಸೋತುಕೊಂಡ ಬಳಿಕ ದ್ರೌಪದಿಯನ್ನು ಸೋಲುವದಕ್ಕೆ ಅವನಿಗೆ ಹಕ್ಕಿರಲಿಲ್ಲ !" ಎಂದು ಸ್ಪಷ್ಟೋಕ್ತಿಗಳನ್ನಾಡಿದರೆ "ಈ ಹುಡುಗನಿಗೇಕೆ ಸ್ವಾತಂತ್ರ್ಯ? ದೊಡ್ಡವರೆಲ್ಲ ಸುಮ್ಮನಿರುವಾಗ ಅವನು ಮಾತನಾಡಬಹುದೆ ?" ಎಂದು ಆಕ್ಷೇಪಿಸಿದ್ದು ಕರ್ಮಕ್ಕಿಂತಲೂ ಕರ್ತೃವಿಗೆ ಹೆಚ್ಚಿನ ಸ್ಥಾನವನ್ನು ಕೊಟ್ಟಿದ್ದರಿಂದಲ್ಲವೆ ? ನಾನು ಮಾಡುವ ಕರ್ಮವಾದ್ದರಿಂದ ಇದು ಹೆಚ್ಚಿನದು ಎಂದು ಎಣಿಸುವವನು ಎಂದಿಗೂ ಸಾತ್ತ್ವಿಕಕರ್ತೃವಾಗಲಾರನು. ಕರ್ಮವು ನನ್ನದು ಎಂಬ ಸಂಗವಾಗಲಿ, ನಾನು ಕರ್ಮವನ್ನು ಮಾಡುವವನು ಎಂದಾಗಲಿ, ತನಗೆ ಹೆಚ್ಚಿನ ಸ್ಥಾನವನ್ನು ಕೊಟ್ಟುಕೊಳ್ಳದೆ ಇರುವದು ಸಾತ್ತ್ವಿಕಕರ್ತೃವಿನ ಒಂದು ಲಕ್ಷಣ. ಕರ್ತೃವು ಸಾತ್ತ್ವಿಕನಾದರೆ ಕರ್ಮವೂ ಸಾತ್ತ್ವಿಕವಾಗುತ್ತದೆ.

**ಧೃತ್ಯುತ್ಸಾಹಸಮನ್ವಿತಃ :** ಋಷಿಗಳು ಎಲ್ಲಿಯೋ ಕಾಡಿನಲ್ಲಿ ವಾಸವಾಗಿದ್ದರು. ಅವರ ಜೀವನಚರಿತ್ರೆಗಳನ್ನು ಯಾರೂ ಬರೆದಿಲ್ಲ. ಆದರೆ ಅವರು ಮಾಡಿದ ಕರ್ಮವು ಅವರ ಹೆಸರನ್ನು ಎಲ್ಲೆಲ್ಲಿಯೂ ಹರಡಿಸಿಬಿಟ್ಟಿವೆ. ಅವರು ಸಾತ್ತ್ವಿಕಕರ್ತೃಗಳು. ಅವರಿಗೆ ಕರ್ಮವು ಮುಖ್ಯವೇ ಹೊರತು ತಮ್ಮ ವ್ಯಕ್ತಿತ್ವವು ಅಷ್ಟು ಮುಖ್ಯವಾಗಿರಲಿಲ್ಲ. ಅವರು ಅಹಂವಾದಿಗಳಾಗಿರಲಿಲ್ಲ. ಇಷ್ಟೇ ಅಲ್ಲ. ಅವರಲ್ಲಿ ಧೃತ್ಯುತ್ಸಾಹಗಳು ತುಂಬಿದ್ದವು. ಧೃತಿ ಎಂದರೇನು? ಕುಸಿದುಬೀಳುವ ಶರೀರೇಂದ್ರಿಯ ಮನಸ್ಸುಗಳನ್ನು ಮೇಲಕ್ಕೆತ್ತಿಕೊಳ್ಳುವ ಶಕ್ತಿ. ಇದಕ್ಕೆ ವಿರುದ್ಧವಾದದ್ದು ಅವಸಾದ ಅಥವಾ ವಿಷಾದ. ಉತ್ಸಾಹವೆಂದರೆ ಹುರುಪಿನಿಂದ ಸಾಧನಗಳನ್ನು ಕೂಡಿಹಾಕಿಕೊಳ್ಳುವದು. ಧೃತಿಯು ಉತ್ಸಾಹದ ಪ್ರಾಗ್ರೂಪವು. ವೈದಿಕ ಕರ್ಮಗಳಲ್ಲಿ ಬ್ರಾಹ್ಮಣರಿಂದ ಮಾಡಿಸುವ ಪುಣ್ಯಾಹವಾಚನವು ಕರ್ತೃವಿಗೆ ಧೃತ್ಯುತ್ಸಾಹಗಳನ್ನು ಕೂಡಿಸಿಕೊಡುತ್ತದೆ. ಒಬ್ಬ ಮನುಷ್ಯನು ತನ್ನ ಮಗುವಿನ ಕಾಲುಬಳೆ ಕಳೆದುಹೋಯಿತೆಂದು ಕೊರಗುತ್ತಿದ್ದನು ; ಅಷ್ಟರಲ್ಲಿಯೇ ಆತನಿಗೆ ಅಧಿಕಾರದಲ್ಲಿ ಮೇಲಿನ ಸ್ಥಾನವು ದೊರಕಿತು

ಎಂಬ ಆರ್ಡರು ತಂತಿಯ ಮೂಲಕ ಬಂದಿತು. ಕೂಡಲೆ ಅವನು ಉತ್ಸಾಹದಿಂದ ಎಲ್ಲರೊಡನೆಯು ಮಾತನಾಡುವದಕ್ಕೆ ಪ್ರಾರಂಭಿಸಿದನು. ಉತ್ಸಾಹಕ್ಕೆ ಹಿಂದೆ ಧೃತಿಯಿರಬೇಕು. ಉತ್ತರನಿಗೆ ಎಲ್ಲಾ ಸಾಧನಗಳೂ ಇದ್ದವು, ಅರ್ಜುನನೇ ಸಾರಥಿಯಾಗಿದ್ದನು; ಆದರೆ ಸ್ವತಃ ಧೃತಿಯಿಲ್ಲದ್ದರಿಂದ ಅವನು ಕೌರವಸೇನೆಯ ಶಂಖಧ್ವಾನವನ್ನು ಕೇಳಿದೊಡನೆ ಮೂರ್ಛೆಬಿದ್ದನಂತೆ ! ಇಲ್ಲಿ ಉತ್ಸಾಹವಿತ್ತು, ಧೃತಿ ಇರಲಿಲ್ಲ. ಕರ್ಣನಿಗೆ ಧೃತಿಗೇನೂ ಕಡಿಮೆಯಿರಲಿಲ್ಲ. ಯುದ್ಧದಲ್ಲಿ ತನಗೆ ಎಷ್ಟು ಸೋಲಾದರೂ ಅವನು ಧೃತಿಗುಂದುತ್ತಿರಲಿಲ್ಲ; ಆದರೆ ಅವನಿಗೆ ಗುರುಶಾಪದಿಂದ ಕೆಲವು ಅಡ್ಡಿಗಳುಂಟಾಗಿದ್ದವು. ಅವನಿಗೆ ಉತ್ಸಾಹದ ಕೊರತೆಯಿತ್ತು. ಯಾವ ಕರ್ತೃವು ಮುಕ್ತಸಂಗನಾಗಿ ಅನಹಂವಾದಿಯಾಗಿ ಧೃತ್ಯುತ್ಸಾಹಗಳಿಂದೊಡಗೂಡಿರುವನೋ ಅವನ ಕರ್ಮವು ಅವಶ್ಯವಾಗಿ ಸಾತ್ತ್ವಿಕವಾಗುವದು.

ಸಾತ್ತ್ವಿಕಕರ್ತೃವಿಗೆ ಮತ್ತೊಂದು ಮುಖ್ಯವಾದ ಲಕ್ಷಣವಿದೆ. ಕಾರ್ಯವು ಕೈಗೂಡಿದರೂ ಕೂಡದಿದ್ದರೂ ಮನಸ್ಸಿನಲ್ಲಿ ಯಾವ ವಿಕಾರವೂ ಇಲ್ಲದೆ ಇರುವದು ಸಾತ್ತ್ವಿಕಕರ್ತೃವಿಗೆ ಅತ್ಯಂತ ಅವಶ್ಯವಾಗಿರುತ್ತದೆ. ಹುಡುಗರು ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದೇವೆಂದು ಹೇಳಿಕೊಂಡಿದ್ದರ ಫಲವಾಗಿ ಅವರಿವರ ಹೊಗಳಿಕೆಯಿಂದ ಉಬ್ಬಿ ಮೈಮರೆಯುವದುಂಟು. ಕೆಲವು ಸಂದರ್ಭಗಳಲ್ಲಿ ಕಾರಣಾಂತರದಿಂದ ಮತ್ತೊಂದು ಸಲ ಪರೀಕ್ಷೆಯಾದರೆ ಈ ಉಬ್ಬೇ ಅವರನ್ನು ಕೆಳಕ್ಕೆ ಕೆಡಹುವದಕ್ಕೆ ಕಾರಣವಾಗಿಬಿಡುತ್ತದೆ. ಸಾಮಾನ್ಯವ್ಯವಹಾರಕ್ಕೇ ಹೀಗೆ ಸಿದ್ಧ್ಯಸಿದ್ಧಿಗಳಲ್ಲಿ ವಿಕಾರವನ್ನು ಹೊಂದದೆ ಇರುವದು ಬೇಕಾಗುತ್ತದೆ. ಇನ್ನು ಅಧ್ಯಾತ್ಮಮಾರ್ಗದಲ್ಲಿ ಹೇಳತಕ್ಕದ್ದೇನು ? ಈವರೆಗೆ ಹೇಳಿರುವ ಲಕ್ಷಣಗಳನ್ನು ನಾವು ಪ್ರಯತ್ನಪೂರ್ವಕವಾಗಿ ಸಂಪಾದಿಸಿಕೊಂಡು ಕರ್ಮಯೋಗದಲ್ಲಿ ಸಾತ್ತ್ವಿಕಕರ್ತೃಗಳಾಗಿ ಜಯಶೀಲರಾಗಬೇಕಾಗಿದೆ.

ಇನ್ನು ರಾಜಸತಾಮಸಕರ್ತೃಗಳ ಸ್ವಭಾವವನ್ನು ತಿಳಿಯಬೇಕಷ್ಟೆ. ಮೊದಲು ರಾಜಸಕರ್ತೃ ಹೇಗಿರುವನೆಂದರೆ ;

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ 18-27**

ರಾಗೀ : ಕರ್ಮಫಲದಲ್ಲಿ ರಾಗವುಳ್ಳವನೂ ಇಂಥ ಕರ್ಮಫಲವೇ ಬೇಕೆಂಬುವನೂ ರಾಜಸಕರ್ತೃವು. ರುಚಿಯಾಗಿ ಮಾಡಿದ ಅಡಿಗೆಯಲ್ಲಿ ಚಪ್ಪರಿಸಿದ ಮೇಲೆ ಸ್ವಲ್ಪ ಕಿಲುಬಿನ ರುಚಿ ತೋರುವಂತೆ ರಾಜಸಕರ್ತೃವಿಗೆ ಕರ್ಮಫಲದ ಪೂರ ಸವಿಯು ಗೊತ್ತಾಗದೆ ಇರುತ್ತದೆ. ಕರ್ಮದ ಫಲವು ಬೇಕೆಂದರೆ ತಪ್ಪೇನು ? ಅದಕ್ಕೇ ಅಲ್ಲವೆ, ಕರ್ಮವನ್ನು ಮಾಡುವದು?- ಎಂದು ನೀವು ಕೇಳಬಹುದು. ಹಾಗಲ್ಲ. ಫಲದಲ್ಲೇ ಲಕ್ಷ್ಯವಿದ್ದವನಿಗೆ ಕರ್ಮವನ್ನು ಸರಿಯಾಗಿ ಮಾಡುವದಕ್ಕೆ ಬರುವದಿಲ್ಲ. ಕರ್ಮದಲ್ಲಿ ಲಕ್ಷ್ಯವಿರಬೇಕು, ಫಲದಲ್ಲಿ ಲಕ್ಷ್ಯವಿರಬಾರದು-

ಎಂಬುದೇ ಗೀತೆಯಿಂದ ಕಲಿತುಕೊಳ್ಳಬೇಕಾದ ಮೊದಲನೆಯ ಪಾಠ. ಸಾಮಾನ್ಯವಾಗಿ ಫಲಕ್ಕಾಗಿ ಮಾಡುವ ಕರ್ಮಗಳಲ್ಲಿ ಕೂಡ ಕರ್ಮವನ್ನು ಮಾಡುವಾಗ ಫಲದ ಚಿಂತನೆಯು ಮನಸ್ಸಿಗೆ ಹತ್ತಿಕೊಂಡರೆ ಕರ್ಮವು ಕೆಟ್ಟುಹೋಗುವ ಸಂಭವವಿದೆ. ಹುಡುಗರು ಪರೀಕ್ಷೆಯ ಪ್ರಶ್ನೆಗಳಿಗೆ ಉತ್ತರವನ್ನು ಬರೆಯಬೇಕಾಗಿರುವಾಗ ತಮಗೆ ಚೆನ್ನಾಗಿ ತಿಳಿಯುವದನ್ನು ಬರೆಯುವದು ಉತ್ತಮವೋ, ಯಾವ ಪ್ರಶ್ನೆಗೆ ಹೆಚ್ಚಾಗಿ 'ನಂಬರು' ಇಟ್ಟಿದೆಯೊ ಅದನ್ನು ಬರೆಯುವದಕ್ಕೆ ಪ್ರಯತ್ನಿಸುವದು ಉತ್ತಮವೋ? ಈ ಪ್ರಶ್ನೆಗೆ ಯಾರೂ ಭಿನ್ನಾಭಿಪ್ರಾಯದ ಉತ್ತರವನ್ನು ಕೊಡುವಹಾಗಿಲ್ಲ. ಮಾಡುವ ಕರ್ಮವನ್ನು ಮಾಡಿದರೆ ಬರಬೇಕಾದ ಫಲವು ತಾನೇ ಬರುತ್ತದೆ ಎಂಬುದು ಸ್ವತಃಸಿದ್ಧನಿಯಮವಾಗಿದೆ. ಆದರೆ ರಾಗಿಯಾದ ಫಲಪ್ರೇಪ್ಸುವಾದ ರಾಜಸನಿಗೆ ಇದು ತಿಳಿಯದು.

ಲುಬ್ಧ : ಕರ್ಮಕ್ಕೆ ತಕ್ಕಷ್ಟು ಪದಾರ್ಥಗಳನ್ನು ಉಪಯೋಗಿಸುವ ಔದಾರ್ಯವಿಲ್ಲದವನಿಗೆ ಕರ್ಮವು ಎಂದಿಗೂ ಪೂರ್ಣವಾಗಲಾರದು. ದುಂದುಗಾರಿಕೆಯಿಂದ ಹೆಚ್ಚಾಗಿ ಪದಾರ್ಥಗಳನ್ನು ಉಪಯೋಗಿಸಿದರೆ ಕರ್ಮವು ಉತ್ತಮವಾಗುವದೆಂದಲ್ಲ; ಜಿಪುಣತನವಿಲ್ಲದೆ ಕರ್ಮಪರಿಪೂರ್ತಿಗೆ ತಕ್ಕದ್ದನ್ನೆಲ್ಲಾ ಉಪಯೋಗಿಸಬೇಕು. ಹಾಗಿಲ್ಲದಿದ್ದರೆ ಕರ್ಮವು ರಾಜಸವಾಗಿಬಿಡುತ್ತದೆ.

ಹಿಂಸಾತ್ಮಕನು : ಕರ್ಮದ ಫಲವು ಸಿಕ್ಕಿದರೆ ಸರಿ ಎಂದು ಹಿಂಸೆಯನ್ನೂ ಉಪಯೋಗಿಸುವವನು ರಾಜಸಕರ್ತೃ. ಕೆಲಸವು ಉತ್ತಮವಾದ ಮಾತ್ರದಿಂದ ಅದಕ್ಕೆ ಹಿಂಸಾತ್ಮಕವಾದ ಸಾಧನಗಳನ್ನು ಉಪಯೋಗಿಸಬಹುದೆಂದು ಭಾವಿಸುವದು ಲೋಕದ ಜನರಲ್ಲಿ ರೂಢಿ. ಉದಾಹರಣೆಗೆ ರೋಗವನ್ನು ಗಮನಿಸಿ ಬಹಳ ಒರಟಾಗಿ ಅವನನ್ನು ಉಪಯೋಗಿಸುವ ವೈದ್ಯನ ಕ್ರಮವು ಹಿಂಸಾತ್ಮಕವಾಗಿರುತ್ತದೆ. ಯುದ್ಧದಲ್ಲಿ ಗೆಲ್ಲುವದಕ್ಕಾಗಿ ವಿಷದ ವಾಯುವನ್ನು ಬಿಡುವದು, ಶತ್ರುವಿನಾಶಕ್ಕಾಗಿ ವಿಷಕ್ರಿಮಿಗಳನ್ನು ಸಿದ್ಧಪಡಿಸುವದು, ಶತ್ರುಗಳ ರಾಜ್ಯವನ್ನು ಗೆದ್ದು ಹಿಮ್ಮೆಟ್ಟಬೇಕಾಗಿಬಂದರೆ ಅಲ್ಲಿರುವ ಪೈರುಪಚ್ಚೆಗಳಿಗೆ ಬೆಂಕಿಯನ್ನು ಹೊತ್ತಿಸುವದು - ಇವೆಲ್ಲ ಹಿಂಸಾತ್ಮಕಕೃತ್ಯಗಳು. ಸ್ಕೂಲಿಗೆ ಹೋಗುವದಕ್ಕೆ ಅಳುತ್ತಿರುವ ಹುಡುಗನನ್ನು ಕಸ್ಸಿಗೆ ಹೊಡೆದು ಅಟ್ಟುವದೂ ಹಿಂಸಾತ್ಮಕ. ಹೀಗೆ ಅಂತಿಮ ಉದ್ದೇಶವು ಉತ್ತಮವಾಗಿದರೂ ಹಿಂಸಾತ್ಮಕಸಾಧನವನ್ನು ಉಪಯೋಗಿಸುವವನು ರಾಜಸನೇ ಆಗಿರುತ್ತಾನೆ. ಲೋಕದಲ್ಲಿ ಹೀಗೆ ಹಿಂಸಾಮಾರ್ಗದಿಂದ ಕರ್ಮವನ್ನು ಮಾಡುವದು ಸರಿಯಲ್ಲವೆಂದಿರುವಾಗ ವೈದಿಕಕರ್ಮದಲ್ಲಿ ಹಿಂಸಾಪ್ರಧಾನವಾಗಿರುವದು ಸರಿಯಲ್ಲವೆಂದು ಹೇಳತಕ್ಕದ್ದೇನಿದೆ?

[illegible] ಉತ್ತಮಕೆಲಸವನ್ನು ಮಾಡುವವರು [illegible] ಭಾವನೆ ಕೆಲವರಿಗೆ ಇರುತ್ತದೆ.

ಅಡಿಗೆಯನ್ನು ಮಾಡುವವನು ಕೊಳಕುಬಟ್ಟೆಯನ್ನುಟ್ಟುಕೊಂಡು ಅಡಿಗೆಯನ್ನು ಮಾಡಿದಮೇಲೆ ಸ್ನಾನಮಾಡಿ ಶುಚಿಯಾದ ಬಟ್ಟೆಯನ್ನು ಹಾಕಿಕೊಳ್ಳುವೆನೆನ್ನುವದು ರಾಜಸಕರ್ತೃತ್ವದ ಗುರುತು. ದೇವಾಲಯವನ್ನು ಶುದ್ಧಿಮಾಡುವದಕ್ಕೆ ಪ್ರಾಣಿಗಳ ರಕ್ತಾದಿಗಳನ್ನು ಉಪಯೋಗಿಸುವದು, ಪ್ರಾಣಿಗಳ ಬಲಿಯೇ ಮುಂತಾದವುಗಳಿಂದ ಶೀಘ್ರಫಲವಾಗುವದೆಂದು ಭಾವಿಸುವದು ಹೀಗೆಯೇ ರಾಜಸಕರ್ತೃತ್ವದ ಗುರುತು. ತಾಂತ್ರಿಕಕರ್ಮದಲ್ಲಿ ಕೆಲವು ಭಾಗಗಳು ಹೀಗೆ ರಾಜಸವಾಗಿರುವದುಂಟು. ಉದ್ದೇಶವು ಒಳ್ಳೆಯದಾದರೂ ರಾಜಸಮಾರ್ಗವನ್ನು ಹಿಡಿಯಬಾರದೆಂಬುದೇ ಇಲ್ಲಿ ತಿಳಿಯಬೇಕಾದದ್ದು. ಸಾತ್ತ್ವಿಕಮಾರ್ಗವನ್ನು ಅನುಸರಿಸಲಾರದವರಿಗೆ ರಾಜಸಮಾರ್ಗವಾದರೂ ಇರುವದು ತಪ್ಪಲ್ಲ ; ಅದು ಸಾತ್ತ್ವಿಕದಷ್ಟು ಒಳ್ಳೆಯದಲ್ಲ. ಕ್ರಮಕ್ರಮವಾಗಿ ರಾಜಸಕರ್ಮವನ್ನು ಬಿಟ್ಟು ಸಾತ್ತ್ವಿಕವಾದದ್ದನ್ನು ಹಿಡಿಯಲೆಂದು ಇಲ್ಲಿ ಎಲ್ಲವನ್ನೂ ಹೇಳಿರುತ್ತದೆ. ದೇವರಿಗೆ ಪ್ರಾಣಿಬಲಿಯನ್ನು ಕೊಡುವದು ಹಿಂಸಾತ್ಮಕವಾದರೂ ದೇವರಿಗೆಂದು ಕೊಡುವದರಿಂದ ಸುಮ್ಮನೆ ಕೊಲ್ಲುವದಕ್ಕಿಂತ ಮೇಲೇ ಸರಿ ; ಬಲಿ ಕೊಡುವದನ್ನು ಬಲಾತ್ಕಾರದಿಂದ ನಿಲ್ಲಿಸಬೇಕೆನ್ನುವ ಸುಧಾರಕರೂ ಹಿಂಸಾತ್ಮಕ ಮಾರ್ಗವನ್ನೇ ಉಪಯೋಗಿಸುವದರಿಂದ ರಾಜಸರೇ ಆಗಿರುತ್ತಾರೆಂಬುದನ್ನು ನಾವು ಇಲ್ಲಿ ಲಕ್ಷಿಸಬೇಕು.

ರಾಜಸರಿಗೆ ಹರ್ಷಶೋಕಾದಿಗಳಿಂದ ಉಬ್ಬರವಿಳಿತಗಳು ಮನಸ್ಸಿನಲ್ಲಿ ಆಗುತ್ತಲೇ ಇರುವವು. ರಾಜಸಕರ್ತೃತ್ವವು ಕರ್ಮಕ್ಕೆ ಕುಂದನ್ನು ತರುತ್ತದೆ ; ಅಂಥ ಕರ್ತೃವು ಮಾಡುವ ಕರ್ಮವೂ ಕರ್ಮವೇ ಆದರೂ ಹೆಚ್ಚು ಪ್ರಯೋಜನಕಾರಿಯಾಗುವದಿಲ್ಲ.

## ೧೮೧. ಬುದ್ಧಿಧೃತಿಗಳಲ್ಲಿ ಸಾತ್ತ್ವಿಕಾದಿಭೇದಗಳು 18 - (28-35)

**(13-8-50)**

ಅರ್ಜುನನು ಕೇಳುತ್ತಿರವದು ಸಂನ್ಯಾಸತ್ಯಾಗಗಳ ವಿಷಯ, ಭಗವಂತನು ಹೇಳುತ್ತಿರುವದು ಕರ್ಮದ ವಿಷಯ. ಇಲ್ಲಿ ಪ್ರಶ್ನೆಗೂ ಉತ್ತರಕ್ಕೂ ಎಷ್ಟು ದೂರವಾಗಿರುವಂತೆ ತೋರುತ್ತಿದೆ ! ಗೀತೆಯಲ್ಲೆಲ್ಲ ಹೀಗೆಯೇ ಕರ್ಮತ್ಯಾಗವನ್ನು ಪ್ರಶಂಸಿಸುವದು, ಕರ್ಮವನ್ನು ಮಾಡು ಎಂದು ಉಪದೇಶಿಸುವದು - ಈ ಪದ್ಧತಿಯನ್ನೇ ಅವಲಂಬಿಸಿದೆ. ಈ ವಿರೋಧಾಭಾಸಕ್ಕೆ ಕೆಲವರು ಏನು ಪರಿಹಾರವೆಂದು ತಿಳಿಯದೆ ಪೇಚಾಡುತ್ತಿರುವದುಂಟು. ಇಲ್ಲೊಂದು ರಹಸ್ಯವಿದೆ, ಮನುಷ್ಯನು ಕರ್ಮವನ್ನು ಮಾಡುವದೇಕೆ? ಕರ್ಮದಿಂದ ಬಿಡುಗಡೆಯಾಗುವದಕ್ಕೆ, ಪ್ರಯಾಣ ಮಾಡುವದೇಕೆ ? ಪ್ರಯಾಣಕ್ಕಾಗಿಯೇ ಪ್ರಯಾಣವಲ್ಲ; ಮಜಲುಮುಟ್ಟುವದಕ್ಕೇ ಪ್ರಯಾಣಮಾಡುತ್ತೇವೆ. ಆದ್ದರಿಂದ ಕರ್ಮವನ್ನು ಮಾಡುವದು ಕರ್ಮತ್ಯಾಗಕ್ಕಾಗಿಯೇ ಎಂದರೆ ಅದರಲ್ಲೇನೂ ಆಶ್ಚರ್ಯವಿಲ್ಲ.

`ಕರ್ತವ್ಯಕ್ಕಾಗಿ ಕರ್ತವ್ಯ' ಎಂದು ಕೆಲವರು ಉಪದೇಶಿಸುವದುಂಟು. ಫಲದ ಕಡೆಗೆ ಲಕ್ಷ್ಯವಿರಬಾರದೆಂಬುದಕ್ಕಾಗಿ ಹಾಗೆ ಉಪದೇಶಿಸುವರೇ ಹೊರತು ಎಂದೆಂದಿಗೂ ಮನುಷ್ಯನಿಗೊಂದು ಕರ್ತವ್ಯವಿರಲೇಬೇಕೆಂದಲ್ಲ. ಮನುಷ್ಯನು ಕರ್ತವ್ಯದಲ್ಲಿಯೇ ನಿರತನಾಗಿದ್ದರೆ ಎಂದಿಗೂ ಕೃತಕೃತ್ಯನಾಗಲಾರನು. ಈಗಿನ ಕೆಲ ಜನನಾಯಕರು ಪಂಗಡಗಳನ್ನು ಕಟ್ಟಿ `ಅದನ್ನು ಮಾಡಿ, ಇದನ್ನು ಮಾಡಿ' ಎಂದು ಉಪದೇಶಿಸುತ್ತಾ ಮೇಲಿಂದಮೇಲೆ ಕೆಲಸವನ್ನು ಮಾಡಿಸುತ್ತಾ ಜನರಿಗೆ ವಿಚಾರಮಾಡುವದಕ್ಕೂ ವಿಶ್ರಾಂತಿಯನ್ನು ಕೊಡದೆ ಇರುತ್ತಾರೆ ; ಜನಸಾಮಾನ್ಯಕ್ಕೆ ಹುರುಪುಹಚ್ಚಿಸಿ ಕೊನೆಗೆ ಅವರನ್ನು ಕೈಬಿಟ್ಟುಬಿಡುತ್ತಾರೆ. ಹಿಂದಕ್ಕೆ ಬ್ರಿಟಿಷರ ಆಳ್ವಿಕೆಯು ನಮ್ಮ ಮೇಲೆ ಇದ್ದಾಗ ಹೊಸ ಹೊಸ ವೈಸರಾಯರುಗಳು ಬಂದಂತೆಲ್ಲ ಯಾವದಾದರೊಂದು ಹೊಸ ಸಮಸ್ಯೆಯನ್ನು ದೇಶದವರ ಮುಂದೆ ಇಟ್ಟು, ಇಲ್ಲಿನ ಜನರಿಗೆ ತಮ್ಮ ದಾಸ್ಯವು ಮನಸ್ಸಿಗೆ ಹತ್ತದಂತೆ ಮಾಡುತ್ತಿದ್ದರು. ಇದು ತಮ್ಮ ಆಳ್ವಿಕೆಯು ಸ್ಥಿರವಾಗಿರುವದಕ್ಕೆಂದು ಅವರು ಮಾಡಿಕೊಂಡಿದ್ದ ಒಂದು ಉಪಾಯಮಾತ್ರ. ಈಗಲೂ ಕೆಲವರು ಶಾಂತಿ, ಸರ್ವಸಮಭಾವ- ಮುಂತಾದವುಗಳನ್ನು ಹೇಡಿಗುಣಗಳೆಂದು ಜರಿದು ಕಡಿ, ಇರಿ-ಎಂಬ "ಗಂಡುಗುಣಗಳನ್ನು" ಉಪದೇಶಿಸುವ ವೀರರೂ ಇರುತ್ತಾರೆ. ಒಬ್ಬರ ತಲೆಹೊಡೆದು ಅವರ ಧನವನ್ನು ಕಸಿದುಕೊಂಡು ಹಂಚಿಕೊಳ್ಳುವದೂ ನ್ಯಾಯವೇ, ಅದೂ ಧರ್ಮವೇ ಎಂದು ಉಪದೇಶಿಸುವವರೂ ಕೆಲವರು ಇರುತ್ತಾರೆ! ಸತ್ತ್ವಗುಣದ ಕಾರ್ಯಕ್ಕೂ ತಮೋಗುಣದ ಕಾರ್ಯಕ್ಕೂ ಇರುವ ವ್ಯತ್ಯಾಸವನ್ನು ಅಲ್ಪಜ್ಞರು ತಿಳಿಯಲಾರರು. ಕೆಲಸವನ್ನೆಲ್ಲ ಮಾಡಿ ಶಾಂತನಾಗಿ ಕುಳಿತಿರುವ ಸಾತ್ತ್ವಿಕನೆಲ್ಲಿ, ಅಲಸನಾಗಿ ಏನನ್ನೂ ಮಾಡಲಾರದೆ ಕುಳಿತಿರುವ ತಾಮಸನೆಲ್ಲಿ ! ಬೆಳಕು ಹೆಚ್ಚಾದರೂ ಕಣ್ಣಿಗೆ ವಸ್ತುಗಳು ಕಾಣಿಸುವದಿಲ್ಲ, ಮಬ್ಬು ಹೆಚ್ಚಾದರೂ ಕಾಣಿಸುವದಿಲ್ಲ ; ಆದ್ದರಿಂದ ಹೆಚ್ಚಿನ ಪ್ರಕಾಶವೂ ಹೆಚ್ಚಿನ ಕತ್ತಲೆಯೂ ಒಂದೇ ಎನ್ನಬಹುದೆ? ಶಬ್ದವು ಬಹಳ ಜೋರಿನ ಮಟ್ಟದಲ್ಲಿರುವಾಗಲೂ ನಮ್ಮ ಕಿವಿಯ ಕ್ಷೇತ್ರವನ್ನು ಮೀರಿರುತ್ತದೆ, ತೀರ ತಗ್ಗಿನ ಮಟ್ಟದಲ್ಲಿರುವಾಗಲೂ ಕೇಳಿಸುವದಿಲ್ಲ. ಆದ ಮಾತ್ರಕ್ಕೆ ಅವೆರಡೂ ಒಂದೇ ಆದಾವೆ? ಯಾವ ವಸ್ತುವನ್ನೂ ತನ್ನದೆಂದಿಟ್ಟುಕೊಳ್ಳದಿರುವ ವೈರಾಗ್ಯಚಕ್ರವರ್ತಿಗಳೂ ಏನನ್ನೂ ದುಡಿಯದೆ ಇರುವ ಬಡವನಿಗೂ ನೈಷ್ಕಿಂಚನ್ಯವು ಸಮಾನವೇ ಆದರೂ ಇಬ್ಬರನ್ನೂ ಈ ವಿಷಯದಲ್ಲಿ ಒಂದೇ ಎನ್ನುವದಕ್ಕೆ ಆದೀತೆ ? ಈ ತಾರತಮ್ಯವನ್ನು ತಿಳಿಯದೆ ಕೆಲವರು ಅವಿವೇಕಿಗಳು ಸಾತ್ತ್ವಿಕರನ್ನು ಹಳಿದು ರಜೋಗುಣವನ್ನು ಹೊಗಳಿ ಅಟ್ಟಕ್ಕೇರಿಸುವರು. ಸಾತ್ತ್ವಿಕರನ್ನು ಜರಿದು ಎಲ್ಲರೂ ನಮ್ಮ ಮಟ್ಟಕ್ಕೆ ಇಳಿಯಬೇಕೆಂದು ನಿರೀಕ್ಷಿಸುವದೇ ಈಗಿನ ಕೆಲವರ ಬುಡಿ ಪಂಕ್ತಿಕೆಯಾಗಿದೆ. ನಾವು ಈ ತಪ್ಪನ್ನು ಮಾಡಬಾರದು. ಸಾತ್ತ್ವಿಕತಾಮಸಗಳನ್ನು ವಿವೇಚನೆಮಾಡದೆ ನಾವು ಮೋಸಹೋಗಬಾರದು. ಈಗ ನೋಡಿರಿ; ಭಗವಂತನು ತಾಮಸಕರ್ತನನ್ನು ಹೀಗೆ ವರ್ಣಿಸುತ್ತಾನೆ :

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಕೃತಿಕೋಽಲಸಃ |**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ||** **18-28**

ತಾಮಸನು ಯಾವದೊಂದು ಗುರಿಯೂ ಇಲ್ಲದೆ ಆಲಸ್ಯದಿಂದ ಕೆಲಸಮಾಡುವವನು. ಸಾತ್ತ್ವಿಕನು ಹಾಗಲ್ಲ. ಅವನಿಗೆ ಗುರಿಯುಂಟು, ಕೆಲಸದಲ್ಲಿ ಧೃತ್ಯುತ್ಸಾಹಗಳಿರುತ್ತವೆ. ತಾಮಸನು ಪ್ರಾಕೃತನಾಗಿರುತ್ತಾನೆ, ಪ್ರಕೃತಿಗೆ ವಶನಾಗಿರುತ್ತಾನೆ. ಅವನು ಅತ್ಯಂತವಾಗಿ ಅಸಂಸ್ಕೃತವಾದ ಬುದ್ಧಿಯವನು. ಯಾವದು ಸರಿ, ಯಾವದು ತಪ್ಪು - ಎಂಬ ವಿವೇಕವು ಅವನಿಗಿರುವದಿಲ್ಲ. ಮತ್ತು ಇವನು ಸ್ತಬ್ಧನು, ಕಂಬದಂತೆ ನೆಟ್ಟಗೆ ನಿಂತು ಯಾರಿಗೂ ಮಣಿಯದವನು ; ಶಠನು, ತನ್ನ ಸೋಮಾರಿತನವನ್ನು ಮಾಯಾವಿಯಾಗಿ ಮುಚ್ಚಿಕೊಂಡಿರುತ್ತಾನೆ. ತಾಮಸನು ನೈಕೃತಿಕನಾಗಿರುತ್ತಾನೆ, ಮತ್ತೊಬ್ಬರಿಗೆ ಕೇಡಾದರೂ ಲೆಕ್ಕಕ್ಕೆ ತಂದುಕೊಳ್ಳುವವನಲ್ಲ. ರೈಲಿನಲ್ಲಿ ಮತ್ತೊಬ್ಬರಿಗೆ ಎಷ್ಟು ತೊಂದರೆಯಾದರೂ ಆಗಲಿ ಎಂದು ಕಾಲುಚಾಚಿ ನಿದ್ರೆಮಾಡುವವನು. ಅವನು ಅಲಸನು ; ಏತರಲ್ಲಿಯೂ ಉತ್ಸಾಹದಿಂದ ತೊಡಗುವವನಲ್ಲ. ಅವನು ವಿಷಾದಿಯು, ಯಾವ ಕೆಲಸವು ಎದುರಿಗೆ ಬಂದರೂ "ಉಸ್ಸಪ್ಪ! ಇದನ್ನೆಲ್ಲ ಮಾಡುವವರು ಯಾರು ?" ಎಂದು ಕುಸಿಯುವ ಬುದ್ಧಿಯವನು. ದೀರ್ಘಸೂತ್ರಿಯು ; ಇಂದು, ನಾಳೆ, ನಾಡಿದ್ದು - ಎಂದು ಕೆಲಸವನ್ನು ಮುಂದಕ್ಕೆ ಹಾಕುತ್ತಲೇ ಇರುವವನು.

ಸಾತ್ತ್ವಿಕನಿಗೂ ತಾಮಸನಿಗೂ ಇರುವ ಹೆಚ್ಚುಕಡಿಮೆಯನ್ನು ನಾವು ತಿಳಿದುಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಒಂದು ಕಲ್ಲಿನ ಕುದುರೆ ಅಚೇತನವಾದ್ದರಿಂದ ಸುಮ್ಮನೆ ನಿಂತಿರುತ್ತದೆ. ; ಒಂದು ಜಾತ್ಯಶ್ವವು ಸವಾರನ ಹಿಡಿತಕ್ಕೆ ಸಿಕ್ಕಿ ಹಾಗೆಯೇ ನಿಂತಿರುತ್ತದೆ. ಆದರೆ ಜಾತ್ಯಶ್ವವು ಸ್ವಲ್ಪ ಕೈಬಿಟ್ಟರೆ ನಾಗಾಲೋಟಕೀಳುತ್ತದೆ, ಕಲ್ಲಿನ ಕುದುರೆ ಎಂದೆಂದಿಗೂ ನಿಂತಿರುವದೇ. ಅಲ್ಲವೆ? ಸಾತ್ತ್ವಿಕರಾದವರು ತಮಗೆ ಇಷ್ಟವಾದರೆ ರಾಜಸತನವನ್ನು ಅವಲಂಬಿಸಿ ಎಲ್ಲರಿಗಿಂತಲೂ ವೇಗವಾಗಿ ಕೆಲಸಮಾಡಬಲ್ಲರು. ಶ್ರೀರಾಮಕೃಷ್ಣಪರಮಹಂಸರು ಅವರ ಶಿಷ್ಯರಾದ ಶ್ರೀ ವಿವೇಕಾನಂದಸ್ವಾಮಿಗಳು- ಇವರಿಗಿರುವ ತಾರತಮ್ಯವನ್ನು ನೋಡಿರಿ. ಪರಮಹಂಸರು ತಾವು ಇದ್ದಲ್ಲಿಯೇ ಇದ್ದು ಶಿಷ್ಯರನ್ನು ಆಕರ್ಷಿಸಿದರು. ಹೂವು ಅರಳಿದರೆ ಮಕರಂದವು ಬೇಕಾದ ತುಂಬಿಗಳು ತಮಗೆತಾವೇ ಅಲ್ಲಿಗೆ ಬರುವವು - ಎಂಬುದು ಅವರ ನೀತಿಯ ಮರ್ಮವಾಗಿತ್ತು. ಆದರೆ ವಿವೇಕಾನಂದರವರು ಸಾತ್ತ್ವಿಕರಾದರೂ ಭರತಖಂಡವು ಅನೇಕ ಕಾರಣಗಳಿಂದ ತಮೋಗುಣಕ್ಕೆ ಇಳಿದಿದೆ ಎಂಬುದನ್ನು ಮನಗಂಡು ಕಾಲುನಡಗೆಯಿಂದ ಎಲ್ಲೆಲ್ಲಿ.ಯೂ ತಿರುಗಾಡಿ " ಉತ್ತಿಷ್ಠತ, ಜಾಗ್ರತ!" ಏಳಿರಿ, ಎಚ್ಚರವಾಗಿರಿ !- ಎಂದು ಹುರುಪುಗೊಳಿಸುವದಕ್ಕೆ ಪ್ರಯತ್ನಮಾಡಿದರು. ತಾಮಸರನ್ನು ಎಬ್ಬಿಸುವದಕ್ಕೆ ರಜೋಗುಣವೇ ಬೇಕು ಎಂಬ ಗುಟ್ಟನ್ನು ಅವರು ಬಲ್ಲವರಾಗಿದ್ದರು. ಜನರಿಗಾಗಿ ತಾವೇ ಕೆಳಕ್ಕೆ ಇಳಿದು

ಜನರನ್ನು ರಜಃಪ್ರಧಾನವಾದ ಉಪದೇಶಗಳಿಂದ ಸಾತ್ತ್ವಿಕತೆಯ ಕಡೆಗೆ ಎಳೆದರು. ಇದೇ ಗೀತೋಪದೇಶದ ರಹಸ್ಯವು. ನಾವು ತಮೋಗುಣಗಳನ್ನು ಬಿಟ್ಟು ಏಳಬೇಕು, ರಜೋಗುಣವನ್ನು ಅವಲಂಬಿಸಬೇಕು ; ಆದರೆ ಸಾತ್ತ್ವಿಕತೆಯೇ ನಮ್ಮ ಗುರಿಯಾಗಿರಬೇಕು.

ಈಗ ಬುದ್ಧಿ, ಧೃತಿ - ಇವುಗಳನ್ನು ಸಾತ್ತ್ವಿಕಾದಿಭೇದಗಳಿಂದ ಬಿಡಿಸಿ ತಿಳಿಸುತ್ತಾರೆ. ನಮ್ಮ ಬುದ್ಧಿಯು ಯಾವ ವರ್ಗಕ್ಕೆ ಸೇರಿದ್ದು, ನಮ್ಮ ಧೃತಿಯು ಯಾವ ವರ್ಗಕ್ಕೆ ಸೇರಿದ್ದು -ಎಂಬುದನ್ನು ಈ ಲಕ್ಷಣವಾಕ್ಯಗಳಿಂದ ನಿಶ್ಚಯಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು.

ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।
ಬನ್ಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥ 18-30

ಯಾವಾಗ ಮುಂದುವರಿಯಬೇಕು, ಯಾವಾಗ ಹಿಂಜರಿಯಬೇಕು, ಮಾಡಬೇಕಾದದ್ದು ಯಾವದು, ಮಾಡಬಾರದ್ದು ಯಾವದು ?- ಎಂಬುದನ್ನು ವಿಂಗಡಿಸಿ ತಿಳಿಯಬಲ್ಲದ್ದು ಸಾತ್ತ್ವಿಕಬುದ್ಧಿ. ಹಿಂದೆ ಹೇಳಿರುವಂತೆ ಶಾಸ್ತ್ರೋಕ್ತಕರ್ಮವನ್ನು ಮಾಡುವದೇ ಕರ್ಮಸಂನ್ಯಾಸಕ್ಕೆ ಉಪಾಯವಾಗಿರುವದರಿಂದ ಕರ್ಮವನ್ನು ಮಾಡುವದೆಂಬ ಪ್ರವೃತ್ತಿಮಾರ್ಗವನ್ನು ಅನುಸರಿಸಬೇಕು ; ಆ ಬಳಿಕ ಮನಸ್ಸು ಅಂತರ್ಮುಖವಾದ ಮೇಲೆ ಶಾಂತಿದಾಂತ್ಯಾದಿಗಳನ್ನು ಪ್ರಧಾನವಾಗಿ ಮಾಡಿಕೊಂಡು ಕರ್ಮಸಂನ್ಯಾಸವನ್ನು ಮಾಡಬೇಕು. ಇದೇ ಪ್ರವೃತ್ತಿನಿವೃತ್ತಿಗಳ ಮರ್ಮವು. ಇದನ್ನು ಅರಿತಿರುವ ಬುದ್ಧಿಯು ಸಾತ್ತ್ವಿಕವಾದದ್ದು.

ಲೋಕದಲ್ಲಿ ವ್ಯವಹರಿಸಬೇಕಾದರೂ ಯಾವ ಕಾಲದಲ್ಲಿ ಮುಂದುವರಿಯಬೇಕು, ಯಾವ ಕಾಲದಲ್ಲಿ ಕರ್ಮದಿಂದ ಹಿಂಜರಿಯಬೇಕು ಎಂಬುದನ್ನು ತಿಳಿಯುವದು ಅವಶ್ಯವಾಗಿರುತ್ತದೆ. ಶ್ರೀರಾಮನು ಪಟ್ಟಾಭಿಷೇಕಕ್ಕೆ ದಶರಥನಿಂದ ನಿಯುಕ್ತನಾದಾಗ ಅದಕ್ಕೆ ಹೇಗೆ ಸಿದ್ಧನಾಗಿದ್ದನೋ ಹಾಗೆಯೇ ವನವಾಸಕ್ಕೆ ತೆರಳಬೇಕೆಂದು ಗೊತ್ತಾದ ಕೂಡಲೆ ಮುನಿವೇಷವನ್ನು ಧರಿಸಿ ಅರಣ್ಯಕ್ಕೆ ತೆರಳಲು ಸಿದ್ಧನಾದನು. ಈ ರೀತಿಯಲ್ಲಿ ಯಾವ ಕಾಲಕ್ಕೆ ಪ್ರವೃತ್ತಿ ಬೇಕು, ಯಾವ ಕಾಲಕ್ಕೆ ನಿವೃತ್ತಿ ಬೇಕು- ಎಂಬುದನ್ನು ನಿಶ್ಚಯಿಸುವ ಬುದ್ಧಿಯು ಎಲ್ಲರಿಗೂ ಬರುವದಿಲ್ಲ. ಸತ್ತ್ವಗುಣವು ಬೆಳೆದಿರುವವರಿಗೆ ಮಾತ್ರವೇ ಇದು ಸಾಧ್ಯವಾಗುವದು. ಕರ್ಮದಲ್ಲಿ ಪ್ರವೃತ್ತಿಯನ್ನೂ ನಿವೃತ್ತಿಯನ್ನೂ ನಿಶ್ಚಯಿಸುವದಕ್ಕೆ ಸಾತ್ತ್ವಿಕಬುದ್ಧಿಯು ಬೇಕಿರುವಂತೆ ಕಾರ್ಯಾಕಾರ್ಯವನ್ನು ನಿಶ್ಚಯಿಸುವದಕ್ಕೂ ಈ ಸಾತ್ತ್ವಿಕಬುದ್ಧಿಯು ಬೇಕಾಗುತ್ತದೆ. ದೇಶಕಾಲೋಚಿತವಾಗಿ ಈ ಕರ್ಮವನ್ನು ಈಗ ಮಾಡತಕ್ಕದ್ದು, ಈ ಕರ್ಮವನ್ನು ಈಗ ಬಿಡತಕ್ಕದ್ದು - ಎಂಬುದನ್ನು ನಿಶ್ಚಯಿಸುವದಕ್ಕೆ ಬೇಕಾದ ಬುದ್ಧಿಯೇ ಸಾತ್ತ್ವಿಕಬುದ್ಧಿಯು.

ಇದರಂತೆ ಭಯಾಭಯಗಳನ್ನು ವಿವೇಚಿಸಿ ತಿಳಿದುಕೊಳ್ಳುವ ಬುದ್ಧಿಯು ಸಾತ್ತ್ವಿಕಬುದ್ಧಿ. ಲೋಕದಲ್ಲಿ ಯಾವದಕ್ಕೆ ಯಾವಾಗ ಅಂಜಬೇಕು, ಯಾವದಕ್ಕೆ ಯಾವಾಗ ಅಂಜಬಾರದು?- ಎಂಬ ವಿವೇಚನೆಯು ಎಲ್ಲರಿಗೂ ಇರುವದಿಲ್ಲ. ಯಾವದೊಂದಕ್ಕೂ ಎಂದೆಂದಿಗೂ ಅಂಜದಿರುವ ದಿಟ್ಟತನವೇನೂ ಜಾಣತನವಲ್ಲ; ಅಥವಾ ಎಲ್ಲಕ್ಕೂ ಯಾವಾಗಲೂ ಅಂಜುತ್ತಿರುವದೂ ಜಾಣತನವಲ್ಲ. ಇದರಂತೆ ಅದೃಷ್ಟವಾದ ಸ್ವರ್ಗನರಕಗಳಲ್ಲಿಯೂ "ಇದಕ್ಕೆ ಅಂಜಬೇಕು, ಇದಕ್ಕೆ ಅಂಜಬಾರದು ; ಇದನ್ನು ಬಯಸಬೇಕು, ಇದನ್ನು ಬಯಸಬಾರದು"- ಎಂಬ ವಿವೇಕವು ಸಾತ್ತ್ವಿಕನಿಗೆ ಮಾತ್ರ ಇರುತ್ತದೆ.

ಇದರಂತೆ ಬಂಧಮೋಕ್ಷಗಳ ಸ್ವರೂಪವನ್ನು ವಿಂಗಡಿಸಿಕೊಳ್ಳುವದಕ್ಕೂ ಸಾತ್ತ್ವಿಕಬುದ್ಧಿಯು ಬೇಕು. ಸರಿಯಾಗಿ ನೋಡಿದರೆ ಬಂಧಕ್ಕೆ ಅಂಜಬೇಕು, ಅದನ್ನು ತಪ್ಪಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಮೋಕ್ಷಕ್ಕೆ ಅಂಜಬಾರದು, ಅದನ್ನು ಬಯಸಬೇಕು- ಹೀಗೆ ಭಯಾಭಯಗಳ ವಿವೇಕದಲ್ಲಿಯೇ ಬಂಧಮೋಕ್ಷಗಳನ್ನೂ ಸೇರಿಸಬಹುದಾಗಿತ್ತು. ಆದರೂ ಭಯಾಭಯಶಬ್ದಗಳಿಂದ ದೃಷ್ಟಾದೃಷ್ಟವಾದ ಈ ಲೋಕದ ಮತ್ತು ಪರಲೋಕದ ಭಯಾಭಯಗಳನ್ನು ಮಾತ್ರ ಸೇರಿಸಿರುತ್ತದೆ. ಆ ಭಯಾಭಯಗಳು ಅನಿತ್ಯವಾಗಿರುತ್ತದೆ. ಈಗ ಯಾವದು ಭಯಹೇತುವೋ ಅದೇ ನಾಳೆ ಅಭಯಹೇತುವಾಗಬಹುದು. ಆದರೆ ಬಂಧಮೋಕ್ಷಗಳು ಹಾಗಲ್ಲ ; ಇವು ಆತ್ಯಂತಿಕವಾಗಿರುತ್ತವೆ. ಭಯಾಭಯಗಳೆಂದು ಹಿಂದೆ ಹೇಳಿದ ಸುಖದುಃಖಹೇತುಗಳಾದ ಎರಡೂ ಈ ದೃಷ್ಟಿಯಲ್ಲಿ ಭಯವೇ ಆಗಿರುತ್ತವೆ. ಅವೆರಡಕ್ಕೂ ಅಜ್ಞಾನವೇ ಕಾರಣವಾಗಿರುವದರಿಂದಲೂ ಅಜ್ಞಾನವು ವ್ಯವಹಾರದೃಷ್ಟಿಯಿಂದ ಅನಾದಿಯೂ ಅನಂತವೂ ಆಗಿರುವದರಿಂದಲೂ ಆ ಭಯವು ಸತತವಾಗಿ ಪ್ರವಹಿಸುತ್ತಲೇ ಇರುತ್ತದೆ. ಆದ್ದರಿಂದ ಅಜ್ಞಾನದಿಂದಾಗಿರುವ ಆಬ್ರಹ್ಮಸ್ತಂಬಪರ್ಯಂತವಾದ ಸಂಸಾರವೆಲ್ಲವೂ ಭಯವೇ, ಬಂಧವೇ-ಎಂದು ತಿಳಿಯಬೇಕು. ಆ ಬಂಧದಿಂದ ಬಿಡುಗಡೆಯಾಗುವದಕ್ಕೆ ಜ್ಞಾನವನ್ನು ಸಂಪಾದಿಸಿ ಪರಮಾತ್ಮನಲ್ಲಿ ನಿಷ್ಠೆಯನ್ನು ಪಡೆಯುವದೇ ಮಾರ್ಗವು– ಎಂದು ತಿಳಿಯುವದೇ ಮೋಕ್ಷಜ್ಞಾನವು. ಹೀಗೆ ಬಂಧಮೋಕ್ಷಗಳನ್ನು ತಿಳಿದುಕೊಳ್ಳುವದೂ ಸಾತ್ತ್ವಿಕಬುದ್ಧಿಯೇ ಎಂದು ಅದನ್ನು ಬೇರೆ ಬೇರೆಯಾಗಿ ವಿಂಗಡಿಸಿ ಇಲ್ಲಿ ಭಗವಂತನು ಅಪ್ಪಣೆಕೊಡಿಸಿರುತ್ತಾನೆ.

ಇಲ್ಲಿ ಬುದ್ಧಿ ಎಂದು ಸಾತ್ತ್ವಿಕಾದಿಪ್ರಭೇದಗಳಿಂದ ವಿಂಗಡಿಸಿ ಹೇಳಿರುವದಕ್ಕೂ ಈ ಮೊದಲು "ಸರ್ವಭೂತೇಷು ಯೇನೈಕಂ" ಎಂದು ಮುಂತಾಗಿ (18-20ರಿಂದ 22 ರವರೆಗೆ) ಜ್ಞಾನವೆಂಬ ಹೆಸರಿನಿಂದ ಹೇಳಿರುವದಕ್ಕೂ ಏನು ಹೆಚ್ಚು ಕಡಿಮೆಯೆಂದು ಕೆಲವರು ಕೇಳಬಹುದು. ಇಲ್ಲಿ ಹೇಳಿರುವ ಬುದ್ಧಿಯು ಅಂತಃಕರಣವು ; ಆ ಬುದ್ಧಿಯಲ್ಲಿ ಸಾತ್ತ್ವಿಕಾದಿಪ್ರಭೇದಗಳಿಂದ ತಾರತಮ್ಯವಿರುತ್ತದೆ. ಹಿಂದೆ ಹೇಳಿರುವ ಜ್ಞಾನವೆಂಬುದು ಈ

ಬುದ್ಧಿಯ ಒಂದು ವೃತ್ತಿಯು. ಜ್ಞಾನವಲ್ಲದೆ ಕಾಮ, ಸಂಕಲ್ಪ, ಸಂಶಯ- ಮುಂತಾದ ಹಲವು ವೃತ್ತಿಗಳೂ ಬುದ್ಧಿಗೆ ಉಂಟು. ಮುಂದೆ ಹೇಳುವ ಧೃತಿಯೂ ಈ ಬಗೆಯ ಒಂದು ವೃತ್ತಿಯೇ. ಬುದ್ಧಿಯಲ್ಲಿ ಉಂಟಾಗುವ ವೃತ್ತಿಗಳೆಲ್ಲವೂ ಸಾತ್ತ್ವಿಕಾದಿಭೇದಗಳಿಂದ ವಿಂಗಡಿಸುವದಕ್ಕೆ ತಕ್ಕವಾಗಿರುತ್ತವೆ ಎಂಬುದನ್ನು ಇದು ಸೂಚಿಸುತ್ತದೆ.

ಈಗ ರಾಜಸಬುದ್ಧಿಯು ಹೇಗಿರುವದೆಂಬುದನನ್ನು ನೋಡೋಣ

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ 18-31**

ಸಾತ್ತ್ವಿಕಬುದ್ಧಿಯು ಧರ್ಮ, ಅಧರ್ಮ, ಕಾರ್ಯ, ಅಕಾರ್ಯ- ಇವುಗಳನ್ನು ಯಥಾವತ್ತಾಗಿ ತಿಳಿಯುತ್ತದೆ. ಆದರೆ ರಾಜಸಬುದ್ಧಿಗೆ ಈ ತಾಳ್ಮೆ ಇರುವದಿಲ್ಲ. ಹೇಗೋ ನಿಶ್ಚಯಿಸಿಕೊಂಡು ಕೆಲಸಕ್ಕೆ ಹೊರಟುಬಿಡುತ್ತದೆ. ಇನ್ನು ತಾಮಸಬುದ್ಧಿಯೋ ಎಂದರೆ,

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽಽವೃತಾ ।**
**ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ 18-32**

ನಿಜವಾಗಿ ಯಾವದು ಹೇಗೆ ಇದೆ ಎಂಬುದನ್ನು ವಿವೇಚಿಸುವ ಸಾಮರ್ಥ್ಯವೇ ಇಲ್ಲದ್ದು ತಾಮಸಬುದ್ಧಿ. ನ್ಯಾಯವಾಗಿ ನೋಡಿದರೆ ತಿಳಿದಮೇಲೂ ತಮಸ್ಸು ಆವರಿಸಿದೆ ಎಂದರೆ ಹೇಗೆ ? ತಪ್ಪಾಗಿ ತಿಳಿದರೆ ರಾಜಸವೇ ಎನ್ನಬೇಕು ಅಲ್ಲವೆ? ಎಂಬ ಪ್ರಶ್ನೆಯೊಂದು ಎದ್ದುಕೊಳ್ಳುತ್ತದೆ. ಆದರೆ ರಾಜಸಬುದ್ಧಿಗೂ ತಾಮಸಬುದ್ಧಿಗೂ ಇಲ್ಲಿ ಒಂದು ವಿಶೇಷವನ್ನು ಕಲ್ಪಿಸಿಕೊಳ್ಳಬಹುದು. ರಾಜಸಬುದ್ಧಿಯು ಅವಿಚಾರದಿಂದ ಚಟ್ಟನೆ ಏನಾದರೊಂದು ನಿಶ್ಚಯಮಾಡಿಬಿಡುತ್ತದೆ. ಆದರೆ ತಾಮಸಬುದ್ಧಿಯು ಸ್ವಭಾವದಿಂದ ತಪ್ಪಾಗಿಯೇ ತಿಳಿಯುತ್ತದೆ. "ಕತ್ತಲೆಯಲ್ಲಿ ಎಲ್ಲಾ ಹಸುಗಳೂ ಕಪ್ಪೇ ಆಗಿರುವವು" ಎಂಬದೊಂದು ಆಂಗ್ಲರ ಸುಭಾಷಿತವು. ಹೀಗೆಯೇ ತಾಮಸಬುದ್ಧಿಗೆ ಎಲ್ಲವೂ ವಿಪರೀತವಾಗಿಯೇ ಕಾಣುತ್ತಿರುವದು. ರಾಜಸಬುದ್ಧಿಯಲ್ಲಿ ಒಂದಿಷ್ಟು ವಿವೇಕಕ್ಕೆ ಅವಕಾಶವುಂಟು ; ಆದರೆ ತಾಮಸದ ಮಬ್ಬಿನಲ್ಲಿ ಯಾವದೊಂದೂ ತಿಳಿಯುವದೇ ಇಲ್ಲ. ಅಧರ್ಮವನ್ನೇ ಧರ್ಮವೆಂದು ನಂಬಿ ಏನುಮಾಡಿದರೂ ಧರ್ಮವನ್ನು ವಿಂಗಡಿಸಿ ಅರಿಯಲಾರದ್ದು ತಾಮಸಬುದ್ಧಿಯು. ಅಕಾರ್ಯವನ್ನು ಕಾರ್ಯವೆಂದೇ ತಿಳಿಯುವದೂ ತಾಮಸಬುದ್ಧಿಯು. ಹೀಗೆಯೇ ಮಿಕ್ಕಕಡೆಗಳಲ್ಲಿಯೂ ತಿಳಿಯಬೇಕು.

ಈಗ ಧೃತಿಯಲ್ಲಿ ಮೂರು ವಿಭಾಗಗಳು ಯಾವವು ಎಂಬುದನ್ನು ತಿಳಿಯೋಣ

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇನ್ದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ 18-33**

ಮನಸ್ಸು, ಪ್ರಾಣ, ಇಂದ್ರಿಯ - ಇವುಗಳ ಕ್ರಿಯೆಗಳನ್ನು ಯೋಗದಿಂದ ಎಂದರೆ ಅಲ್ಲಿಯೇ ಇಟ್ಟ ಚಿತ್ತದಿಂದ ಹಿಡಿತದಲ್ಲಿಟ್ಟುಕೊಂಡಿರುವದನ್ನು ಎಂದಿಗೂ ತಪ್ಪದ ಧೃತಿಯು ಸಾತ್ತ್ವಿಕಧೃತಿಯೆನಿಸುವದು. ಮನಸ್ಸು ಮುಂತಾದವುಗಳನ್ನು ಹಠದಿಂದ ಒಂದು ಸಲ ಬಿಗಿಹಿಡಿಯುವದು ಸಾತ್ತ್ವಿಕಧೃತಿಯಲ್ಲ ; ಅವ್ಯಭಿಚರಿತವಾಗಿ ಬಿಗಿಹಿಡಿದಿರಬೇಕಾದರೆ ಒಂದು ಬಗೆಯ ಕೌಶಲವು ಬೇಕಾಗುತ್ತದೆ. ಸವಾರನು ಕುದುರೆಯನ್ನು ಸ್ವಾಧೀನದಲ್ಲಿಟ್ಟು ಕೊಂಡಿರುವಂತೆ ಸೂಕ್ಷ್ಮಶರೀರವನ್ನು ಹಿಡಿತದಲ್ಲಿಟ್ಟುಕೊಂಡಿರುವ ಕೌಶಲದ ಧೃತಿಯೇ ಸಾತ್ತ್ವಿಕವು. ಋಷಿಗಳ ತಪಸ್ಸನ್ನು ಇದಕ್ಕೆ ದೃಷ್ಟಾಂತವಾಗಿ ಕೊಡಬಹುದು. ನಗರಗಳಲ್ಲಿ ವಾಸಮಾಡುವವರು ವಿವಿಧಭೋಗಗಳಿಗೆ ತಮ್ಮ ಇಂದ್ರಿಯಾದಿಗಳನ್ನು ಹರಿಯಬಿಡುವದನ್ನು ತಿಳಿದಿದ್ದರೂ ತಾವು ಮಾತ್ರ ಎಂದಿಗೂ ಹಾಗೆ ಪರವಶರಾಗದೆ ಒಂದೇ ಸಮನೆ ತಪಸ್ಸಿನಲ್ಲಿಯೇ ಕಾಲಹಾಕುತ್ತಿದ್ದವರವರು. ಎಚ್ಚರಿಕೆಯಿಂದ ಒಂದೇ ಸಮನೆ ಇಂದ್ರಿಯಪ್ರಾಣಗಳನ್ನೂ ಮನಸ್ಸನ್ನೂ ಹಿಡಿತದಲ್ಲಿಟ್ಟುಕೊಂಡಿರುವದಕ್ಕೆ ಸತ್ತ್ವಗುಣದ ಸಹಾಯವಿದ್ದ ಹೊರತು ಪ್ರಯತ್ನವು ಸಫಲವಾಗಲಾರದು.

ರಾಜಸಧೃತಿಯು ಹೇಗಿರುವುದು ?

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಙ್ಗೇನ ಫಲಾಕಾಙ್ಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ 18-34**

ಮೊದಲನೆಯ ಮೂರು ಪುರುಷಾರ್ಥಗಳಿಗೆ ತ್ರಿವರ್ಗವೆಂದು ಹೆಸರು. ಧರ್ಮಕ್ಕೆ ವಿರುದ್ಧವಲ್ಲದ ಧರ್ಮಕ್ಕೆ ಒತ್ತಾಸೆಮಾಡುವದಕ್ಕೇ ಅನುಕೂಲವಾಗಿರುವಂತೆ ಅರ್ಥಕಾಮಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳ ಫಲವನ್ನೂ ಅನುಭವಿಸುತ್ತಾ ಇರುವದು ರಾಜಸಧೃತಿಯು. ಸಾತ್ತ್ವಿಕಧೃತಿಗೆ ಫಲಾಕಾಂಕ್ಷೆ ಇಲ್ಲ ; ಎಂದರೆ ಚಿತ್ತಶುದ್ಧಿಯ ಮೂಲಕ ಜ್ಞಾನವನ್ನು ಸಂಪಾದಿಸಿ ಪರಮಪುರುಷಾರ್ಥವಾದ ಮೋಕ್ಷವನ್ನು ಪಡೆಯುವದನ್ನು ಬಿಟ್ಟರೆ ಮತ್ತೆ ಯಾವ ಭೋಗವೂ ಅದಕ್ಕೆ ಬೇಕಿಲ್ಲ. ಆದರೆ ರಾಜಸಧೃತಿಗೆ ಪುರುಷಾರ್ಥವಾದ ಅಭ್ಯುದಯವೂ ಬೇಕು, ಅದಕ್ಕೆ ಅವಿರುದ್ಧವಾಗಿ ಫಲಭೋಗವೂ ಬೇಕು.

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಞ್ಚತಿ ದುರ್ಮೇಧಾ ಧೃತಿಃ ಸಾ ತಾಮಸೀ ಮತಾ ॥ 18-35**

ಇನ್ನು ತಾಮಸಧೃತಿಯ ಲಕ್ಷಣವನ್ನು ಹೇಳಬೇಕಷ್ಟೆ. ಯಾವಾಗಲೂ ನಿದ್ರೆ, ಅಂಜಿಕೆ, ಅಳು, ಮನಸ್ಸಿನಲ್ಲಿ ಕುಸಿದುಬೀಳುತ್ತಿರುವದು, ಮದ- ಹೀಗೆ ಯಾವದಾದರೊಂದನ್ನು ಪಟ್ಟುಹಿಡಿದು ಇರುವ ಮೂಢನ ಧೃತಿಯು ತಾಮಸವು. ಭಾರತದಲ್ಲಿ ಒಂದು ಶ್ಲೋಕವು

ಆಗಾಗ್ಗೆ ಬರುತ್ತಿರುತ್ತದೆ. "ಶೋಕಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ। ದಿವಸೇ ದಿವಸೇ ಮೂಢಮಾವಿಶನ್ತಿ ನ ಪಣ್ಡಿತಮ್ ॥" ಮೂಢನಾದವನಿಗೆ ದಿನದಿನವೂ ಶೋಕಕ್ಕೆ ಕಾರಣಗಳು ಸಾವಿರಾರು ಬರುತ್ತಿರುವವು; ಅಂಜಿಕೆಗೆ ಕಾರಣವು ನೂರಾರು ಬರುತ್ತಿರುವವು. ಆದ್ದರಿಂದ ಶೋಕಾದಿಗಳು ತಪ್ಪದೆ ಅವನಿಗೆ ಆಗಾಗ್ಗೆ ಬರುತ್ತಲೇ ಇರುವವು. ರಾಜಸನ ಧೃತಿಯು ಒಂದೊಂದು ಸಲ ಒಳ್ಳೆಯ ಕಡೆಗೆ ತಿರುಗಿಸುವದು, ಒಂದೊಂದು ಸಲ ಇಂಥ ಶೋಕಭಯಾದಿಗಳಿಗೂ ಬೀಳಿಸುತ್ತಿರುವದು. ಆದರೆ ಸಾತ್ತ್ವಿಕನು ಮಾತ್ರ ಯಾವದೊಂದು ತಪ್ಪುಹಾದಿಯನ್ನೂ ಹಿಡಿಯದೆ ತನ್ನ ಕಾರ್ಯಕರಣಗಳನ್ನು ಹಿಡಿದೆತ್ತಿ ಯಾವಾಗಲೂ ಉತ್ತಮಮಾರ್ಗದಲ್ಲಿಯೇ ಬಿಡುತ್ತಿರುವನು.

ಅಂತೂ ಹೀಗೆ ಸಾತ್ತ್ವಿಕಬುದ್ಧಿಯನ್ನು ಹಿಡಿದು ಸಾತ್ತ್ವಿಕಜ್ಞಾನವನ್ನೂ ಸಾತ್ತ್ವಿಕಧೃತಿಯನ್ನೂ ಅವಲಂಬಿಸಿರುವ ಸಾತ್ತ್ವಿಕ ಕರ್ತೃವೇ ಕರ್ಮಯೋಗಕ್ಕೆ ಮುಖ್ಯಾಧಿಕಾರಿಯು. ಆದ್ದರಿಂದ ತನಗೆ ಪರಮಪುರುಷಾರ್ಥವು ಸಿಕ್ಕಬೇಕೆಂಬ ಆಸೆಯುಳ್ಳಾತನು ಈ ಬುದ್ಧ್ಯಾದಿಗಳನ್ನು ಸಂಪಾದಿಸಿಕೊಳ್ಳಬೇಕು ಎಂಬುದು ಈವರೆಗಿನ ಗ್ರಂಥದ ಸಾರವು.

## ೧೮೨. ಸುಖದಲ್ಲಿ ಸಾತ್ತ್ವಿಕಾದಿಪ್ರಭೇದಗಳು 18 - (36-37)

(20-8-50)

ಕರ್ಮಕ್ಕೆ ಬೇಕಾದ ಕರ್ತ್ರಾದಿಗಳನ್ನು ಹೇಳಿದ್ದಾಯಿತು. ಈಗ ಕರ್ಮದ ಫಲವನ್ನು ಸಾತ್ತ್ವಿಕಾದಿಪ್ರವಿಭಾಗದಿಂದ ವಿಂಗಡಿಸಿ ತಿಳಿಸುತ್ತಿದ್ದಾರೆ. ಹಿಂದಿನ ದಿನದಲ್ಲಿ ಸಾತ್ತ್ವಿಕಧೃತಿಯು ಸಾತ್ತ್ವಿಕಕರ್ಮಕ್ಕೆ ಅವಶ್ಯವೆಂಬುದನ್ನು ತಿಳಿಸಿರುತ್ತದೆ. ಯಾವ ಕರ್ಮಕ್ಕಾದರೂ ಧೃತಿ ಬೇಕೇಬೇಕು. ಸಹಜವಾದ ರೀತಿಯಿಂದ ಕರ್ಮವನ್ನು ಮಾಡುವವನು ಸಹಜವಾದ ರೀತಿಯ ಧೃತಿಯನ್ನು ಅವಲಂಬಿಸುತ್ತಾನೆ. ಅಸಹಜರೀತಿಯಿಂದ ಕರ್ಮವನ್ನು ಮಾಡುವವನು ಅಸಹಜವಾದ ಧೃತಿಯನ್ನು ಅವಲಂಬಿಸುತ್ತಾನೆ. ಆದ್ದರಿಂದ ನಾವು ಕರ್ಮದಲ್ಲಿ ಯಾವ ಬಗೆಯ ಧೃತಿಯನ್ನು ಅವಲಂಬಿಸಿರುತ್ತೇವೆಂಬುದನ್ನು ಆಗಾಗ್ಗೆ ಪರೀಕ್ಷೆಮಾಡಿಕೊಳ್ಳುತ್ತಿರಬೇಕು. ಈಗಿನ ಜನರು ಮಾತ್ರವಲ್ಲ, ಜನಾಂಗಗಳೇ ಅಸಹಜವಾದ ರೀತಿಯ ಧೃತಿಯನ್ನು ಅವಲಂಬಿಸುವದು ಕಂಡುಬರುತ್ತಿದೆ. ಅವರಲ್ಲಿ ಒಬ್ಬರ ಅಭಿಪ್ರಾಯವು ಮತ್ತೊಬ್ಬರಿಗೆ ಒಗ್ಗುವದಿಲ್ಲ ; ಒಬ್ಬೊಬ್ಬರೂ ತಾವು ಹಿಡಿದ ಮೊಲಕ್ಕೆ ಮೂರೇ ಕಾಲು ಎಂದು ಪಟ್ಟುಹಿಡಿದು ವಾದಿಸುತ್ತಿರುತ್ತಾರೆ. ಒಬ್ಬರು ಮತ್ತೊಬ್ಬರನ್ನು ಜರಿದು ಅವರ ವಿಷಯಕ್ಕೆ ಅಸಹನೆಯನ್ನು ತೋರಿಸುವದು ರೂಢಿಗೆ ಬಂದುಬಿಟ್ಟಿದೆ. ದೊಡ್ಡ ದೊಡ್ಡ ರಾಷ್ಟ್ರಗಳು ಸಣ್ಣ ಸಣ್ಣ ರಾಷ್ಟ್ರಗಳನ್ನು ಯಾವಾಗ ನುಂಗಿನೋಣದೇವು ಎಂದು ಹವಣಿಸುತ್ತಿವೆ.

ಗುಡಿಗೆ ನುಗ್ಗಿದ ಕುರಿಯನ್ನು ಕಂಡ ತೋಳನು "ಅಯ್ಯೋ ! ಅಲ್ಲಿಗೆ ಏತಕ್ಕೆ ಹೋಗುತ್ತೀಯಪ್ಪ! ಪೂಜಾರಿ ಕಂಡರೆ ನಿನ್ನನ್ನು ದೇವರಿಗೆ ಬಲಿಕೊಡುವನಲ್ಲ!" ಎಂದು ಕನಿಕರವನ್ನು ನಟಿಸುವಂತೆ ಒಂದೊಂದು ಮಹಾರಾಷ್ಟ್ರವೂ ಆ ಮತ್ತೊಂದು ಮಹಾರಾಷ್ಟ್ರದಿಂದ ಅಪಾಯವು ಬಂದೊದಗಿದೆ ಎಂಬ ಕೂಗನ್ನು ಎಬ್ಬಿಸುತ್ತಿದೆ. ಇದೆಲ್ಲ ತಾಮಸಧೃತಿಯ ಗುರುತೇ ಸರಿ. ನ್ಯಾಯಕ್ಕೆ ಬೆಲೆಕೊಟ್ಟವರು ಎಂದಿಗೂ ಇಂಥ ಧೃತಿಯನ್ನು ಅವಲಂಬಿಸುವದಿಲ್ಲ. ಒಂದಾನೊಂದು ಸಮಯದಲ್ಲಿ ಗಾಂಧಿಜಿಯವರು ಆಫ್ರಿಕದಲ್ಲಿ ಬ್ಯಾರಿಸ್ಟರಾಗಿ ಒಬ್ಬ ಕಕ್ಷಿಗಾರನ ಪರವಾಗಿ ವಾದಿಸುತ್ತಿರುವಲ್ಲಿ ನಡುವೆ ತನ್ನ ಕಕ್ಷಿಗಾರನು ಸುಳ್ಳುಹೇಳುತ್ತಿದ್ದಾನೆಂದು ತಮಗೆ ಹೊಳೆಯಲು ಕೂಡಲೆ "ನಾನು ಈ ಮೊಕದ್ದಮೆಯನ್ನು ಕೈಬಿಟ್ಟಿರುತ್ತೇನೆ" ಎಂದು ಕುಳಿತುಕೊಂಡುಬಿಟ್ಟರಂತೆ ! ತಮ್ಮ ಪಕ್ಷವು ತಪ್ಪಾಗಲಿ, ಅದನ್ನು ಹಿಡಿಯುವದರಿಂದ ಯಾವ ದುಷ್ಫಲವೇ ಆಗಲಿ, ಕೊನೆಯವರೆಗೂ ನೋಡಿಯೇಬಿಡೋಣ ಎನ್ನುವದು ಎಂದಿಗೂ ಸರಿಯಾದ ಧೃತಿಯಲ್ಲ. ಆಶೆಯನ್ನು, ಕೋಪವನ್ನು, ನಾಚಿಕೆಯನ್ನು ಅಥವಾ ಅಪಮಾನವನ್ನು ನಿಮಿತ್ತಮಾಡಿಕೊಂಡು ಪಟ್ಟುಹಿಡಿಯುವದು ಎಂದಿಗೂ ಸರಿಯಾದ ಧೃತಿಯಲ್ಲ. ಈ ಬಗೆಯ ಹಠದಲ್ಲಿ ಸೋಲುಗೆಲವುಗಳು ಅನಿಶ್ಚಿತ ; ಆದರೆ ದುಷ್ಫಲವು ಮಾತ್ರ ಖಂಡಿತವಾಗಿ ಆಗಿಯೇ ತೀರುತ್ತದೆ. ಅಧ್ಯಾತ್ಮಸಾಧನೆಯಲ್ಲಿ ಯಾವಾಗಲೂ ರಾಜಸತಾಮಸಧೃತಿಗಳನ್ನು ಬಿಟ್ಟು ಸಾತ್ತ್ವಿಕಧೃತಿಯನ್ನೇ ಅವಲಂಬಿಸಬೇಕು ಎಂದು ತಿಳಿಸಿದ್ದಾಗಿದೆ.

ಈಗ ಬೇರೆ ಬೇರೆಯ ಬುದ್ಧಿ, ಧೃತಿ - ಮುಂತಾದವುಗಳನ್ನವಲಂಬಿಸಿದ ಕರ್ಮದಿಂದ ಆಗುವ ಸುಖವು ಹೇಗೆ ಬೇರೆಬೇರೆಯಾಗಿರುವದು ಎಂಬುದನ್ನು ವಿಚಾರಿಸಬೇಕಾಗಿದೆ.

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥** 18-37

ಯಾವದು ಮೊದಲು ವಿಷದಂತಿರುವದೋ ಆದರೆ ಪರಿಣಾಮದಲ್ಲಿ ಅಮೃತದಂತಾಗುವದೋ ಆತ್ಮಬುದ್ಧಿಪ್ರಸಾದದಿಂದುಂಟಾದ ಆ ಸುಖವು ಸಾತ್ತ್ವಿಕವು. ಲೋಕದಲ್ಲಿ ಕೆಲವು ಸುಖಗಳು ಕಷ್ಟಪಟ್ಟಮೇಲೆಯೇ ಸಿಕ್ಕತಕ್ಕವುಗಳಾಗಿವೆ. ಕಾವ್ಯರಸವನ್ನು ಆಸ್ವಾದನೆಮಾಡುವ ಸುಖ, ಸೂರ್ಯನಮಸ್ಕಾರವೇ ಮುಂತಾದವುಗಳನ್ನು ಆಚರಿಸುವದರಿಂದಾಗುವ ಸುಖ, ಪಾರಾಯಣದಿಂದ ಬರತಕ್ಕ ಸುಖ, ಮಂತ್ರವನ್ನು ಶ್ರದ್ಧೆಯಿಂದ ಜಪಿಸುವದರಿಂದಾಗುವ ಸುಖ - ಇವುಗಳೆಲ್ಲ ಕಷ್ಟಪಟ್ಟು ಅಳವಡಿಸಿಕೊಂಡಮೇಲೆಯೇ ತೋರಿಕೊಳ್ಳುವವಾಗಿರುತ್ತವೆ. ಅಧ್ಯಾತ್ಮಪ್ರವಚನಗಳನ್ನು ಕೇಳುವದರಿಂದಾಗುವ ಸುಖವೂ ಇಂಥದ್ದೇ. ಇವುಗಳೆಲ್ಲವೂ ಅಭ್ಯಾಸಬಲದಿಂದ ಮನಸ್ಸಿಗೆ ರತಿಯನ್ನುಂಟುಮಾಡುವವು, ದುಃಖವನ್ನು ಅತ್ಯಂತವಾಗಿ ಕಳೆಯುವವು. ಮೊದಮೊದಲು ವಿಷವಾಗಿ ಅವು ನಮಗೆ ಬೇಕು ಎನ್ನಿಸುವದೇ ಎಲ್ಲ, ಆದರೆ ಕೊನೆಯಲ್ಲಿ ಅಮೃತದಂತೆ ಕಾಣಬರುವವು.

ಮೊದಲು ಸಾತ್ತ್ವಿಕಸಾಧನವನ್ನು ಮಾಡುವಾಗ "ಅಯ್ಯೋ! ಇದನ್ನು ಮಾಡಬೇಕಲ್ಲ!" ಎನಿಸುತ್ತದೆ; ಆದರೆ ಕೊನೆಯಲ್ಲಿ "ಇದನ್ನು ಮಾಡದೆ ಬಿಟ್ಟಿದ್ದರೆ ಕೆಡುತ್ತಿದ್ದೆ ; ನನಗೆ ತುಂಬ ನಷ್ಟವಾಗುತ್ತಿತ್ತು !" ಎನಿಸುತ್ತದೆ. ಅತಿಥಿಗಳ ಸೇವೆ, ಸಾಧುಸಂತರ ಸೇವೆ, ಈಶ್ವರಪೂಜೆ-ಮುಂತಾದವುಗಳೆಲ್ಲ ಹೀಗೆಯೇ. ನಾನು ಕೆಲವು ಸ್ನೇಹಿತರೊಡನೆ ಒಬ್ಬರು ಸಾಧುಗಳ ಬಳಿಯಲ್ಲಿದ್ದೆನು. ಅಲ್ಲಿ ಊಟಪಚಾರಗಳಿಗೇನೂ ಅಷ್ಟು ಅನುಕೂಲವಿರಲಿಲ್ಲ ; ಏಕಾದಶಿಯ ದಿನವಂತೂ ನಿಟ್ಟು ಉಪವಾಸ, ದ್ವಾದಶಿಯ ದಿನ ಹೊತ್ತಾಗಿ ಊಟ ! ರಾತ್ರಿಯ ಭಜನೆ ನಿಂತುಕೊಂಡೇ ಮಾಡುವದು; ಎಷ್ಟು ಹೊತ್ತಾದರೂ ಭಜನೆಯಾಗಲಿ ಆರತಿಯ ಪದಗಳಾಗಲಿ ಮುಗಿಯುತ್ತಲೇ ಇರಲಿಲ್ಲ ! ರಾತ್ರಿ ನಿದ್ರೆಗೆ ಅಣಿಮಾಡಿಕೊಳ್ಳುವಹೊತ್ತಿಗೆ ಸಾಧುಗಳಿಂದ ಕರೆ ! ಮನಸ್ಸಿಗೆ ಸಾಕಾಗಿದ್ದರೂ ಅವರ ಬಳಿಗೆ ಪ್ರಯತ್ನಪೂರ್ವಕವಾಗಿ ಹೋಗುವದು ; ಆದರೆ ಅವರಲ್ಲಿಂದ ಹಿಂತಿರುಗಿ ಬರುವಾಗ ಅವರ ಸಂಭಾಷಣೆಯಿಂದಲೂ ಉಪದೇಶದಿಂದಲೂ ಆದ ಸುಖವನ್ನು ಸ್ಮರಿಸಿಕೊಂಡು, "ಆಹಾ! ಇದೆಲ್ಲವನ್ನೂ ಕಳೆದುಕೊಳ್ಳುತ್ತಿದ್ದೆನಲ್ಲ!" ಎನ್ನುವದು, ಹೀಗೆ ಕಾಲಕಳೆಯುತ್ತಿತ್ತು. ಕಾಲಾನುಕಾಲಕ್ಕೆ ಹಿಂತಿರುಗಿ ನೋಡಿದಾಗ ಆ ಸತ್ಸಂಗದಿಂದ ಎಷ್ಟೊಂದು ಲಾಭವಾಯಿತೆಂಬುದು ಮನವರಿಕೆಯಾಗಿ ಆಶ್ಚರ್ಯವಾಯಿತು. "ಗುರುಗಳು ಎಂದೋ ಒಂದು ದಿನ ತಟ್ಟನೆ ತಲೆಯಮೇಲೆ ಕೈಯಿಟ್ಟು ಅನುಗ್ರಹಮಾಡುತ್ತಾರೆ ; ಅಂದಿನಿಂದ ಸಾಧಕನು ಕೃತಕೃತ್ಯನಾಗುತ್ತಾನೆ" ಎಂದು ಕೆಲವರ ನಂಬಿಕೆ. ಆದರೆ ಇದು ಸರಿಯಲ್ಲ. ಏಕೆಂದರೆ ಅವರ ಅನುಗ್ರಹವು ಕ್ಷಣಕ್ಷಣಕ್ಕೂ ಆಗುತ್ತಿರುತ್ತದೆ. ನಮ್ಮ ನಡೆನುಡಿಗಳನ್ನೂ ಮನೋಭಾವಗಳನ್ನೂ ಅವರು ಉಪದೇಶದಿಂದಲೂ ಉದಾಹರಣೆಯಿಂದಲೂ ತಿದ್ದುತ್ತಲೇ ಇರುತ್ತಾರೆ. ಕನ್ನಡಿಯ ಮುಂದೆ ನಿಂತು ರುಮಾಲನ್ನು ಸರಿಪಡಿಸಿಕೊಳ್ಳುವವನು ರುಮಾಲಿನ ಅಂಚು, ಜರತಾರಿ, ತುರುಬು ಮುಂತಾದವುಗಳನ್ನು ಒಂದೊಂದಾಗಿ ಕ್ರಮವರಿತು ತಿದ್ದುಕೊಳ್ಳುವಂತೆ ನಾವು ಗುರುಗಳ ಸಂನಿಧಿಯಲ್ಲಿ ಕ್ಷಣಕ್ಷಣಕ್ಕೂ ಅವರ ಆದರ್ಶವಾದ ನಡೆನುಡಿಗಳನ್ನು ಅನುಕರಿಸುತ್ತಿರುವೆವು; ನಮಗೂ ಗೊತ್ತಿಲ್ಲದಂತೆ ಅವರ ಅನುಗ್ರಹದಿಂದ ನಾವು ಮಾರ್ಪಟ್ಟು ಬೇರೆಯ ಮನುಷ್ಯರೇ ಆಗಿಬಿಡುವೆವು. ಸಾವಿರ ಉಳಿಯ ಪೆಟ್ಟುಬಿದ್ದು ಒಂದು ಸುಂದರಶಿಲಾವಿಗ್ರಹವು ಏರ್ಪಡುವಂತೆ ನಮ್ಮ ಹಲವು ಸಾಧನಗಳಿಂದ ಗುರುಗಳ ಅನುಗ್ರಹವನ್ನು ಸಂಪಾದಿಸಿಕೊಳ್ಳುತ್ತಿರುವೆವು. ಅಲ್ಲಿ ಸಾಧನದ ಮರ್ಮವೇನೆಂದರೆ ನಮ್ಮ ನನ್ನತನವನ್ನು ಬದಿಗಿಟ್ಟು, ಗುರುಗಳು ಮಾಡುತ್ತಿರುವ ವಿನಯಾಧಾನಕ್ಕೆ ಹೊಂದಿಕೆಯಾಗಿ ಆತ್ಮನಿವೇದನವನ್ನು ಮಾಡುವದೇ. ಇದು ಮೊದಲು ಬಹಳ ಕಷ್ಟಸಾಧ್ಯವಾಗಿ ತೋರಬಹುದು ; ಆದರೆ ಕೊನೆಯಲ್ಲಿ ಅದರಿಂದ ಉತ್ತಮವಾದ ಫಲವು ಬಂದು ನಮ್ಮಲ್ಲಿ ಆನಂದವು ನೆಲೆಸುವದು.

ಸಾತ್ತ್ವಿಕಸುಖವು ಆತ್ಮಬುದ್ಧಿಯ ಪ್ರಸಾದದಿಂದ ಬರತಕ್ಕದ್ದಾಗಿರುತ್ತದೆ. ಬುದ್ಧಿಯು ಅಥವಾ ಅಂತಃಕರಣವು ಆತ್ಮಬುದ್ಧಿಯಾಗಬೇಕು, ಆತ್ಮನ ಪ್ರತಿಬಿಂಬವು ಅದರಲ್ಲಿ

ಮೂಡಿಕೊಳ್ಳಬೇಕು ; ಆಗಲೇ ಉತ್ತಮವಾದ ಸಾತ್ತ್ವಿಕಸುಖವು ದೊರೆಯುತ್ತದೆ. ಸುಖವೆಂಬುದು ಕಬ್ಬನ್ನು ಕಣೆಗೆ ಕೊಟ್ಟು ಹಿಂಡಿಕೊಳ್ಳುವಂತೆ ವಿಷಯಗಳಿಂದ ಹಿಂಡಿಕೊಳ್ಳತಕ್ಕದ್ದಲ್ಲ. ಈಗಿನವರಾದ ನಮ್ಮಲ್ಲನೇಕರಿಗೆ ವಿಷಯಗಳಿಂದ ಸುಖವನ್ನು ಹಿಂಡಿಕೊಳ್ಳಬಹುದು ಎಂಬ ಭ್ರಮೆಯು ಬಲವಾಗಿ ಬೇರೂರಿಬಿಟ್ಟಿದೆ. ಇದರಿಂದ ನಮ್ಮಲ್ಲಿ ಲೋಭ, ಈರ್ಷ್ಯಾಸೂಯೆಗಳು ಮಾತ್ಸರ್ಯ, ಮೋಸಗಳು-ಇವೆಲ್ಲ ಬೆಳೆದುಕೊಂಡು ದುಃಖಾಂತವಾದ ಯುದ್ಧಾದಿಗಳಲ್ಲಿ ಪರ್ಯವಸಾನವಾಗುತ್ತವೆ. ವಿಷಯಗಳು ನಮಗೆ ಸಿಕ್ಕುವ ಮೊದಲು ಎಷ್ಟು ಪ್ರಲೋಭಕವಾಗಿ ಮೋಹಕವಾಗಿರುವವೋ ಸಿಕ್ಕಿದ ಮೇಲೆ ಅಷ್ಟಾಗಿರುವದಿಲ್ಲ. ಆಗ ಬಿಸಿಯ ತುಪ್ಪದಂತೆ ನುಂಗಲೂ ಆರದೆ ಉಗುಳಲೂ ಆರದೆ ಸಂಕಟಪಡುವೆವು. ನಿಜವಾಗಿ ಸುಖವು ಎಲ್ಲಿರುತ್ತದೆ ? ಒಬ್ಬನು ಪಿಟೀಲುಬಾರಿಸುತ್ತಾನೆಂದು ಇಟ್ಟುಕೊಳ್ಳಿರಿ ; ಅವನು ಕಮಾನನ್ನು ಪಿಟೀಲು ತಂತಿಯಮೇಲೆ ಆಡಿಸುತ್ತಾ ಬಗೆಬಗೆಯ ಸ್ವರಗಳಿಂದ ಬಗೆಬಗೆಯ ಇಂಪಾದ ರಾಗಗಳನ್ನು ಎಬ್ಬಿಸಿ ಆ ಆನಂದದಲ್ಲಿ ತಾನೂ ಮೈಮರೆತಿರುತ್ತಾನೆ; ಮತ್ತೊಬ್ಬರನ್ನೂ ಪರವಶರನ್ನಾಗಿ ಮಾಡಿಸುತ್ತಿರುತ್ತಾನೆ. ಈ ಇಂಪಿನ ರಾಗವು ಬರಿಯ ಕಮಾನಿನಲ್ಲಿಲ್ಲ, ಪಿಟೀಲಿನ ತಂತಿಗಳಲ್ಲೂ ಇಲ್ಲ. ಈ ಉಪಾಧಿಗಳ ಸಂಘರ್ಷವನ್ನು ನೆಪವಾಗಿ ಮಾಡಿಕೊಂಡು ರಾಗವು ಹೊರಸೂಸುತ್ತಿದೆ. ಅಲ್ಲವೆ? ಇದರಂತೆ ವಿಷಯಗಳಿಗೂ ಮನಸ್ಸಿಗೂ ಆಗುವ ಸಂಘರ್ಷದಲ್ಲಿ ಆಗುವ ಸುಖವು ವಿಷಯಗಳಲ್ಲಿಲ್ಲ, ಮನಸ್ಸಿನಲ್ಲಿಯೂ ಇರುವದಿಲ್ಲ. ಮನಸ್ಸಿನಲ್ಲಿ ಆಯಾ ಧರ್ಮಾಧರ್ಮಗಳ ನಿಮಿತ್ತದಿಂದ ನಮಗೆ ಆಯಾ ವಸ್ತುಗಳು ಎದುರಿಗೆ ಬರುತ್ತವೆ. ಆಗ ಸುಖವೋ ದುಃಖವೋ ಆಗುತ್ತದೆ. ಕೆಲವು ವೇಳೆ ನಮ್ಮ ಅಭಿಲಾಷೆಯಂತೆ ಇಷ್ಟವಸ್ತುಗಳ ಲಾಭವಾದರೆ ಆಗ ಅವುಗಳಿಂದಾಗಿ ಕಾಣಿಸಿಕೊಳ್ಳುವ ಸುಖವನ್ನು ಆಯಾ ವಿಷಯದಿಂದ ಬಂದ ಸುಖವು ಎಂದು ಭಾವಿಸಿ ನಾವು ಮೋಸಹೋಗುವೆವು. ಆದರೆ ಆಗ ನಿಜವಾಗಿ ಆಗುವದೇನು? ಇಷ್ಟವಸ್ತುವು ಪೂರ್ವಪುಣ್ಯಪರಿಪಾಕದಿಂದ ದೊರೆತರೆ ವಿಷಯದ ಅಪ್ರಾಪ್ತಿಯಿಂದ ಚಡಪಡಿಸುತ್ತಿದ್ದ ಮನಸ್ಸು ಸುಮ್ಮನಾಗುವದು. ಆಗ ಅದರ ಸಾತ್ತ್ವಿಕವೃತ್ತಿಯಲ್ಲಿ ಆತ್ಮನ ಆನಂದವು ಪ್ರತಿಬಿಂಬಿಸುತ್ತದೆ. ಈ ಆನಂದದ ನೆರಳನ್ನೇ ನಾವು ವಿಷಯಸುಖವೆಂದು ತಿಳಿದುಕೊಳ್ಳುತ್ತಿರುವೆವು ! ಇದು ನಮ್ಮ ಭಾರತವರ್ಷದವರು ಕಂಡುಹಿಡಿದಿರುವ ಮನಃಶಾಸ್ತ್ರದ ಒಂದು ಘನತತ್ತ್ವವು. "ಚಂಚಲವಾಗಿರುವ ಮನಸ್ಸು ಸ್ವಸ್ಥವಾಗಿ ನಿಂತು ಪ್ರಸನ್ನವಾಗಿರುವಾಗ ಅದರಲ್ಲಿ ಆನಂದವು ತೋರುತ್ತದೆ; ಆ ಆನಂದವು ಧರ್ಮನಿಮಿತ್ತವಾಗಿ ಉಂಟಾಗತಕ್ಕದ್ದು. ನಿಜವಾಗಿ ಆನಂದವು ಆತ್ಮನಿಂದಲೇ ನಮಗೆ ದೊರೆಯತಕ್ಕದ್ದು. ಆದ್ದರಿಂದ ಧರ್ಮವನ್ನು ಮಾಡಬೇಕು; ಪರಮಾತ್ಮನಿಗೆ ಅರ್ಪಣೆಮಾಡಬೇಕು. ಈ ಕರ್ಮಯೋಗದಿಂದ ನಮಗೆ ಮಿಗಿಲಿಲ್ಲದ ಆನಂದವು ದೊರಕುವದಕ್ಕೆ ಮಾರ್ಗವು ಸಿಕ್ಕುತ್ತದೆ" ಎಂದು ಅವರು ಹೇಳುತ್ತಾರೆ. ಹೊರಗಿನ ವಿಷಯವು ಏನಾದರೂ ಆಗಿರಲಿ, ನಮ್ಮ ಮನಸ್ಸು ಪ್ರಸನ್ನವಾಗಿ

ವಿಕ್ಷೇಪವಿಲ್ಲದೆ ಇದ್ದರೆ ಸರಿ, ನಮಗೆ ಆನಂದವೇ ಸಿಕ್ಕುತ್ತದೆ. ಬೆಟಗೇರಿ ಕೃಷ್ಣಶಾಸ್ತ್ರಿಗಳೆಂಬ ಒಬ್ಬ ಬ್ರಾಹ್ಮಣೋತ್ತಮರಿದ್ದರು; ಅವರನ್ನು ನಿಮ್ಮಲ್ಲಿ ಯಾರಾದರೂ ನೋಡಿರಬಹುದು, ಅಥವಾ ಅವರ ಹೆಸರನ್ನಾದರೂ ಕೇಳಿರಬಹುದು. ಅವರು ಕರ್ಮನಿಷ್ಠರು, ಶಾಸ್ತ್ರಜ್ಞರು, ಭಕ್ತಶಿರೋಮಣಿಗಳು. ಅವರ ರುಮಾಲಿನಮೇಲೆಲ್ಲ ಶ್ರೀರಾಮನಾಮಾಕ್ಷರವು ಒತ್ತಿತ್ತು. ಅವರು ಆಗಾಗ್ಗೆ ಭಗವನ್ನಾಮವನ್ನು ಉಚ್ಚರಿಸುತ್ತಿದ್ದರು. ಅವರನ್ನು ನೋಡಿದರೆ ಸಾಕು, ಎಂಥವರಿಗಾದರೂ ಮನಸ್ಸಿನ ತಾಪವು ಹರಿಯುವಂತೆ ಇದ್ದಿತು. ಒಮ್ಮೆ ಅವರು ನನಗೆ ಈ ಘಟನೆಯನ್ನು ಕುರಿತು ಪ್ರಸ್ತಾಪಿಸಿದ್ದರು. ಅವರು ದಾರಿ ನಡೆಯುತ್ತಿರುವಾಗ ರಾತ್ರೆ ಬಹಳ ಕತ್ತಲಾಗಿ ಒಂದು ಬಯಲಿನಲ್ಲಿ ಹಾಗೆಯೇ ನಿದ್ರಿಸಿದರಂತೆ. ಗಾಢನಿದ್ರೆಯ ಸುಖವನ್ನು ಅನುಭವಿಸಿ ಬೆಳಗಿನ ಜಾವಕ್ಕೆ ಎದ್ದು ತಾವಿದ್ದ ಪ್ರದೇಶವನ್ನು ಪರೀಕ್ಷಿಸಲು ಅದೊಂದು ಸ್ಮಶಾನವಾಗಿತ್ತಂತೆ ! " ಮನಸ್ಸು ಪ್ರಸನ್ನವಾಗಿದ್ದವನಿಗೆ ಸ್ಮಶಾನದಲ್ಲಿಯೂ ಆನಂದಕ್ಕೆ ಕೊರತೆಯಿಲ್ಲ ! "ಯೇನ ಕೇನಚಿದಾಚ್ಛನ್ನೋ ಯೇನಕೇನಚಿದಾಶಿತಃ ! ಯತ್ರ ಕ್ವಚನ ಶಾಯೀ ಸ್ಯಾತ್ ತಂ ದೇವಾ ಬ್ರಾಹ್ಮಣಂ ವಿದುಃ !1" ( ಸಿಕ್ಕಿದ ಬಟ್ಟೆಯನ್ನು ಧರಿಸಿ ಸಿಕ್ಕಿದಷ್ಟು ಅನ್ನಪಾನಗಳಿಂದ ತೃಪ್ತನಾಗಿ ಎಲ್ಲೆಂದರೆ ಅಲ್ಲಿ ಮಲಗಿ ತನ್ನ ಆನಂದವನ್ನು ತಾನು ಅನುಭವಿಸುತ್ತಿರುವಾತನೇ ಬ್ರಾಹ್ಮಣನು) ಎಂಬ ಸ್ಮೃತಿಯು ಅಕ್ಷರಶಃ ನಿಜವಾಗಿರುತ್ತದೆ.

ಮನಸ್ಸನ್ನು ನೆಮ್ಮದಿಯಾಗಿಟ್ಟುಕೊಂಡರೆ ಸಾಕು, ಸತ್ತ್ವಗುಣದಿಂದ ಅದನ್ನು ಸಂಸ್ಕರಿಸಿಕೊಂಡರೆ ಸಾಕು, ಅದರಲ್ಲಿ ಆತ್ಮನ ಆನಂದವು ಪ್ರತಿಬಿಂಬಿಸುತ್ತದೆ: ಹೊರಗಿನ ವಿಷಯಗಳ ಸಂಪತ್ತಿಯು ನಮ್ಮಲ್ಲಿರಲಿ, ಇಲ್ಲದಿರಲಿ, ಜೀವನವು ಸುಖಮಯವಾಗುತ್ತದೆ ಎಂದು ನಮ್ಮ ದೇಶದ ಸಾಧುಗಳು ಉಪದೇಶಿಸುತ್ತಿರುತ್ತಾರೆ. ಇದನ್ನೇಕೆ ನಾನು ಪರೀಕ್ಷಿಸಿ ನೋಡಬಾರದು? ಎಲ್ಲೆಲ್ಲಿಯೂ ಭೋಗಸಾಮಗ್ರಿಗಳಿಗಾಗಿ ಹೋರಾಟವು ನಡೆದಿರುವ ಈ ಕಾಲದಲ್ಲಲ್ಲದೆ ಮತ್ತೆ ಯಾವಾಗ ನಾವು ಈ ಪರೀಕ್ಷೆಯನ್ನು ಮಾಡಬಹುದು?

ಆನಂದವು ಯಾರಲ್ಲಿ ಎಷ್ಟೆಷ್ಟು ಹೆಚ್ಚಾಗಿರುವದೆಂಬ ಬಗ್ಗೆ ಉಪನಿಷತ್ತಿನಲ್ಲಿ ಒಂದು ಸುಖದ ನಿಚ್ಚಣಿಕೆಯನ್ನು ಏರ್ಪಡಿಸಿರುವ ವಚನವಿದೆ. ಯೌವನವು ಇದ್ದು ಸಾಧುತನವೂ ಇದ್ದು ಅಧ್ಯಯನಸಂಪನ್ನನಾಗಿ ಕರ್ಮಗಳನ್ನು ಮಾಡುವ ಶರೀರಾರೋಗ್ಯವೂ ಬಲವೂ ಇದ್ದು ಕರ್ಮದ ಫಲದಲ್ಲಿ ಆಶೆಯಿರುವವನಾಗಿರುವ ಒಬ್ಬನಿಗೆ ಇಡಿಯ ಭೂಲೋಕದಲ್ಲಿರುವ ವಿತ್ತವೆಲ್ಲವೂ ವಶದಲ್ಲಿರುವದೆಂದು ಇಟ್ಟುಕೊಳ್ಳಿ. ಆಗ ಅದು ಮನುಷ್ಯನ ಆನಂದವಾಯಿತು. ಆ ಮನುಷ್ಯಾನಂದದ ನೂರರಷ್ಟು ಆನಂದವು ಮನುಷ್ಯಗಂಧರ್ವರಿಗೆ, ಅದರ ನೂರರಷ್ಟು ದೇವಗಂಧರ್ವರಿಗೆ ಇರುವದಂತೆ. ಹೀಗೆಯೇ ಮುಂದೆ ಮುಂದೆ ಹೋಗುವದಾದರೆ ಪಿತೃಗಳು, ಆಜಾನದೇವತೆಗಳು; ಕರ್ಮದೇವತೆಗಳು, ದೇವತೆಗಳು, ಇಂದ್ರ, ಬೃಹಸ್ಪತಿ, ಪ್ರಜಾಪತಿ, ಹಿರಣ್ಯಗರ್ಭಬ್ರಹ್ಮ - ಇವರಿಗೆ ಒಬ್ಬರಿಗಿಂತ ಒಬ್ಬರಿಗೆ ನೂರರಷ್ಟು ಹೆಚ್ಚು ಆನಂದವಿರುವದಂತೆ ! ಆದರೆ ಶ್ರೋತ್ರಿಯನೂ ಅಕಾಮಹತನೂ ಆದ ಸಾತ್ತ್ವಿಕನಿಗೆ ಈ

ಎಲ್ಲಾ ಆನಂದವೂ ಸಿಕ್ಕುವದಂತೆ! ಇವೆಲ್ಲಕ್ಕಿಂತಲೂ ಹೆಚ್ಚಿನ ಸಹಜವಾದ ಆತ್ಮಾನಂದವೂ ಅವನದೇ ಎಂದು ಆ ಉಪನಿಷತ್ತಿನ ವಚನ !

ಈ ಸಾತ್ತ್ವಿಕಸುಖವು ಸಿಕ್ಕುವದಕ್ಕೆ ಏನು ಮಾಡಬೇಕು? "ಈಗ ಹಿಂದೂಕೋಡು ಜಾರಿಗೆ ಬರಲಿದೆ ; ಅದರಿಂದ ನಮ್ಮ ಆಸ್ತಿಪಾಸ್ತಿಗಳಿಗೆ ಧಕ್ಕೆ ತಗಲುವದು, ನಮ್ಮ ಧರ್ಮವು ಹಾಳಾಗುವದು, ನಮ್ಮ ಸಮಾಜವು ಕೆಡುವದು!" ಎಂದು ಜನರಲ್ಲಿ ಗಲಾಟೆ ಎದ್ದಿದೆ. ಇದರಲ್ಲಿ ನಿಜದಂಶವೂ ಇರಬಹುದು. ಆದರೆ ಯಾವ ಕಾನೂನು ಬಂದರೂ ನಿಮ್ಮದೇ ಆಗಿರುವ ಆತ್ಮಾನಂದವನ್ನು ಯಾವ ರಾಷ್ಟ್ರಪತಿಯ ಕಾನೂನೂ ಕಸಿದುಕೊಳ್ಳಲಾರದು. ಮನಸ್ಸಿನ ಕಶ್ಮಲವನ್ನೂ ಚಾಂಚಲ್ಯವನ್ನೂ ನೀಗಿಕೊಂಡರೆ ಸಾಕು, ಆತ್ಮಾನಂದವು ಕೂಡಲೆ ಅಂತಃಕರಣದಲ್ಲಿ ಹೊರಹೊಮ್ಮುತ್ತದೆ. ಸತ್ಯ, ಅಹಿಂಸೆ, ಧರ್ಮ, ಭಕ್ತಿ - ಇವೆಲ್ಲವೂ ಇಂಥ ಮನಸ್ಸಿನ ಪ್ರಾಪ್ತಿಗಾಗಿಯೇ ಅನುಸರಿಸತಕ್ಕವುಗಳಾಗಿವೆ. ಇದರಿಂದ ನಮಗೆ ಅನ್ನಪಾನಗಳು, ಹೆಂಡಿರುಮಕ್ಕಳು, ಆಸ್ತಿ, ಪರಿವಾರ- ಮುಂತಾದವುಗಳಿಂದಾಗುವ ಸುಖವೂ ಸಿಕ್ಕುವದೆ? ಎಂಬ ಪ್ರಶ್ನೆಯು ಸರಿಯಲ್ಲ. ಏತರಿಂದಲೇ ಆಗಲಿ ಸುಖವು ನಮಗೆ ತೋರಬೇಕಾದರೆ ಮನಸ್ಸು ಪ್ರಸನ್ನವಾಗಲೇಬೇಕು, ಈ ಮನಃಪ್ರಸಾದವಿಲ್ಲದೆ ಇದ್ದರೆ ಇಡೀ ಪೃಥ್ವಿಯೇ ನಮ್ಮದಾಗಿದ್ದರೂ ನಮಗೆ ನಿಜವಾದ ಸುಖವಿಲ್ಲ ಎಂಬುದನ್ನು ನಾವು ಎಂದಿಗೂ ಮರೆಯದೆ ಇರಬೇಕು.

## ೧೮೩. ರಾಜಸತಾಮಸಸುಖಗಳು 18 - (38-39)

**(27-8-50)**

ಸುಖದ ತ್ರೈವಿಧ್ಯವನ್ನು ಕುರಿತು ಮಾತನಾಡುತ್ತಿದ್ದೇವೆ. ಯಾವದು ಅಂತಃಕರಣದ ನೈರ್ಮಲ್ಯದಿಂದಲೂ ಅಚಾಂಚಲ್ಯದಿಂದಲೂ ಬರುವದೋ ಅದೇ ಸಾತ್ತ್ವಿಕಸುಖವು. ಯಾವದು ಮೊದಲು ವಿಷದಂತಿರುವದೋ ಪರಿಣಾಮದಲ್ಲಿ ಅಮೃತದಂತಿರುವದೋ ಅದೇ ಸಾತ್ತ್ವಿಕಸುಖವು - ಎಂದು ತಿಳಿಸಿದೆ. ಮನೆಯಲ್ಲಿ ಕಳವಾಗಿದೆ ಎನ್ನಿ ! ಕೂಡಲೆ ಗುಮಾನಿಯ ಮೇಲೆ ಯಾವನನ್ನಾದರೂ ಶೋಧನೆ ಮಾಡಿಸಿ ಹೋಗಿದ್ದ ಪದಾರ್ಥಗಳನ್ನು ಪತ್ತೆ ಹತ್ತಿಸಿದರೆ ಆಗುವ ಫಲವೊಂದು, ಆ ನಷ್ಟವನ್ನು ನುಂಗಿಕೊಂಡು ತಾಳ್ಮೆಯನ್ನು ತಂದುಕೊಂಡರೆ ಆಗುವ ಆನಂದವು ಇನ್ನೊಂದು - ಈ ಎರಡಕ್ಕೂ ಇರುವ ತಾರತಮ್ಯವು ಯಾವನಿಗೆ ತಿಳಿಯುತ್ತದೆ ? ಮನಸ್ಸನ್ನು ಶಾಂತವಾಗಿಟ್ಟುಕೊಂಡು ಅದರ ಫಲವನ್ನು ಕಂಡುಕೊಂಡವರಿಗಲ್ಲವೆ? ಆದರೆ ಇಂಥ ಸಂದರ್ಭಗಳಲ್ಲಿ ನಾವುಗಳು ಮನಸ್ಸನ್ನು ಶಾಂತವಾಗಿಟ್ಟುಕೊಳ್ಳುವದಕ್ಕೆ ಪ್ರಯತ್ನಿಸಿ ನೋಡಿದ್ದೇವೆಯೆ? ಪ್ರಯತ್ನಮಾಡಿಯೂ ಫಲವಾಗಿಲ್ಲವೆಂದು ಕಂಡಿದ್ದೇವೆಯೆ? ಕೈಲಾಗದಾಗ

ಸಿಟ್ಟನ್ನು ನುಂಗಿಕೊಳ್ಳುವದುಂಟು ; ಆದರೆ ನಾವು ಸಿಟ್ಟನ್ನು ತೋರಿಸುವದಕ್ಕೆ ಅವಕಾಶವಿರುವಾಗ ಆ ಸಿಟ್ಟಿನಿಂದ ಮತ್ತೊಬ್ಬರಿಗೆ ಕೆಟ್ಟದ್ದಾಗುವದೆಂದು ತಿಳಿದಿರುವಾಗ ಸಿಟ್ಟನ್ನು ಬಿಗಿಹಿಡಿದುಕೊಂಡು ನೋಡಿದವರು ಎಷ್ಟುಮಂದಿ ಸಿಕ್ಕುತ್ತಾರೆ ? ಜರ್ಮನರು ಇಂಗ್ಲೆಂಡಿಗೆ ಮುತ್ತಿಗೆಹಾಕಬಹುದೆಂಬ ಸಂಭವವಿದ್ದಾಗ ಮಹಾತ್ಮಗಾಂಧಿಯವರು "ನೀವು ಈಗ ಸುಮ್ಮನಿದ್ದು ಬಿಡಿ, ನೋಡೋಣ, ಅವರೇನು ಮಾಡುತ್ತಾರೆ" ಎಂದು ಮುಖ್ಯಮಂತ್ರಿಗಳಿಗೆ ಒಂದು ಪತ್ರವನ್ನು ಬರೆದರಂತೆ. ಆಗ ಚರ್ಚಿಲ್ಲರು "ನಾವಾಗಲೆ ಯುದ್ಧಕ್ಕೆ ಏರ್ಪಾಡುಮಾಡಿಬಿಟ್ಟಿದ್ದೇವೆ, ಆದ್ದರಿಂದ ಯತ್ನವಿಲ್ಲ" ಎಂದು ಉತ್ತರವನ್ನು ಬರೆದರಂತೆ. ಗಾಂಧಿಯವರು ಹೇಡಿಗಳೆಂದು ನೀವು ಭಾವಿಸಬಹುದು. ಆದರೆ ಈಗ ಇಂಗ್ಲಿಷರನ್ನೇ ಗೆದ್ದಿದ್ದಾರಲ್ಲ, ಅವರು ಸೋತವರಿಗಿಂತ ಏನು ಮೇಲಾಗಿದಾರೆ? ಹದಿನೈದು ಸೇರು ಅಕ್ಕಿಯನ್ನು ತರುತ್ತಿದ್ದ ರೂಪಾಯಿಯೂ ರೂಪಾಯಿ, ಎರಡೂವರೆ ಸೇರು ತರುತ್ತಿರುವ ರೂಪಾಯಿಯೂ ಅದೇ ರೂಪಾಯಿ ಎನ್ನಬಹುದೆ ? ಹೀಗೆಯೇ ಆಗಿನ ಇಂಗ್ಲಿಷರೇ ಬೇರೆ, ಈಗಿನ ಇಂಗ್ಲಿಷರೇ ಬೇರೆ ಎನ್ನಬೇಕಲ್ಲವೆ? ಈ ದೃಷ್ಟಿಯಿಂದ ನೋಡಿದರೆ ಗಾಂಧಿಯವರ ಉಪದೇಶವು ಆಗ್ಗೆ ಇಂಗ್ಲಿಷರಿಗೆ ವಿಷದಂತೆ ತೋರಿತಾದರೂ ಅದನ್ನನುಸರಿಸಿದ್ದರೆ ಪರಿಣಾಮದಲ್ಲಿ ಅದು ಅಮೃತತುಲ್ಯವಾಗಿರುತ್ತಿತ್ತೆಂದು ಹೇಳಬೇಕಾಗುವದು. ಏಕೆಂದರೆ ಈಗಿನಷ್ಟು ಜನಧನಗಳ ನಷ್ಟವೂ ಅವರಿಗೆ ಆಗ ಆಗುತ್ತಿರಲಿಲ್ಲ. ವಿದೇಶೀಯರಾಗಿ ಜನಪ್ರಿಯರಲ್ಲದ ಜರ್ಮನ್ನರು ಸುಖದಿಂದ ರಾಜ್ಯವಾಳಲಾರದೆ ತಾವೇ ಹೊರಟುಹೋಗುವ ಪ್ರಸಂಗವೂ ಬರುತ್ತಿತ್ತು ಎಂದು ಕಲ್ಪಿಸಬಹುದಾಗುವದು. ಅಲ್ಲವೆ ?. ಹೀಗೆಯೇ ಸಾತ್ತ್ವಿಕಾನಂದದ ಸ್ವರೂಪವನ್ನು ರಾಜಸರೂ ತಾಮಸರೂ ಮೊದಲು ಅರಿಯಲಾರರು ; ಅಷ್ಟೇ ಅಲ್ಲ, ಅದು ಆನಂದವೇ ಅಲ್ಲವೆಂದೂ ಅವರು ವಿಪರೀತವಾಗಿ ತಿಳಿಯುವರು.

ಈ ದಿನ ರಾಜಸತಾಮಸಸುಖಿಗಳ ವಿಚಾರವನ್ನು ಮಾಡಬೇಕಾದದ್ದಿದೆ. ಸುಖವೆಂಬುದೇ ಸತ್ತ್ವದಿಂದಾಗುವದೆಂದು ಹಿಂದೆ ಹೇಳಿರುವಲ್ಲಿ, `ರಾಜಸಸುಖ', `ತಾಮಸಸುಖ' ಎಂಬ ಮಾತು ವ್ಯಾಹತವಲ್ಲವೆ? ಎಂದು ಕೆಲವರಿಗೆ ಶಂಕೆಯುಂಟಾಗಬಹುದು. ಆದರೆ ಸುಖದಲ್ಲಿಯೂ ರಾಜಸತ್ವ ತಾಮಸತ್ತ್ವವು ಹೇಗೆಂಬುದನ್ನು ಒಂದೆರಡು ಉದಾಹರಣೆಗಳಿಂದ ಸ್ಪಷ್ಟಗೊಳಿಸಬಹುದು. ತಿಳಿನೀರಲ್ಲಿ ಕಾಣುವ ಚಂದ್ರಪ್ರತಿಬಿಂಬವು ಬಗ್ಗಡದ ನೀರಿನಲ್ಲಿ ತೋರುವ ಪ್ರತಿಬಿಂಬಕ್ಕಿಂತ ಹೆಚ್ಚು ವಿಶದವಾಗಿರುವದಲ್ಲವೆ? ಆದರೂ ಚಂದ್ರನು ಒಬ್ಬನೇ ಆಗಿರುತ್ತಾನೆ. ಸಕ್ಕರೆಯು ಯಾವಾಗಲೂ ಮಧುರವೇ. ಆದರೆ ಅದಕ್ಕೂ ಉಪಾಧಿವಶದಿಂದ ಬೇರೆ ಬೇರೆಯ ಸವಿ ಬರುತ್ತದೆ. ಹಾಲಿಗೆ ಬೆರೆಯಿಸಿದ ಸಕ್ಕರೆ, ಹುಣಸೆಯಹಣ್ಣಿಗೆ ಬೆರೆಯಿಸಿದ ಸಕ್ಕರೆ, ಹಾಗಲಕಾಯಿಗೊಜ್ಜಿಗೆ ಬೆರೆಯಿಸಿದ ಸಕ್ಕರೆ - ಎಲ್ಲವೂ ಸಕ್ಕರೆಯೇ ಆದರೂ ಸವಿಯಲ್ಲಿ ಎಷ್ಟು ವೈಚಿತ್ರ್ಯ ! ಹೀಗೆಯೇ ಸುಖವೆಂಬುದು ಒಂದೇ ಆದರೂ ಶುದ್ಧಸಾತ್ತ್ವಿಕವೃತ್ತಿಯಲ್ಲಿ ಪ್ರತಿಬಿಂಬಿಸಿ ತೋರುವ ಸುಖಕ್ಕೂ ರಜಸ್ತಮೋಗುಣಗಳ ಮಿಶ್ರವುಳ್ಳ ಸಾತ್ತ್ವಿಕವೃತ್ತಿಯಲ್ಲಿ

ತೋರುವ ಸುಖಕ್ಕೂ ತಾರತಮ್ಯವುಂಟು. ರಾಜಸಸುಖವೆನ್ನುವಾಗಲೂ ಸತ್ತ್ವ ಸಂಬಂಧವುಂಟು, ತಾಮಸಸುಖವೆನ್ನುವಾಗಲೂ ಸತ್ತ್ವ ಸಂಬಂಧವುಂಟು ; ಆದರೆ ಅಲ್ಲಿ ರಾಜಸತಾಮಸಗುಣಗಳ ಕಾರ್ಯಗಳೇ ಎದ್ದುಕಾಣತ್ತಿರುತ್ತವೆ. ಅಷ್ಟೆ.

**ವಿಷಯೇನ್ದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ 18-38**

ರಾಜಸಸುಖವು ಸಾತ್ತ್ವಿಕಸುಖಕ್ಕೆ ವಿಪರೀತವಾಗಿರುತ್ತದೆ. ಅದು ಮೊದಲು ಅಮೃತದಂತೆ ಇರುತ್ತದೆ, ಕೊನೆಗೆ ವಿಷವಾಗಿ ಪರಿಣಮಿಸುತ್ತದೆ. ಸಾತ್ತ್ವಿಕಸುಖದಂತೆ ಅದು ಆತ್ಮಬುದ್ಧಿಯಿಂದ ಉಂಟಾಗಿರುವದಿಲ್ಲ ; ವಿಷಯೇಂದ್ರಿಯಗಳ ಸಂಯೋಗದಿಂದ ಉಂಟಾಗುತ್ತದೆ. ಸಾತ್ತ್ವಿಕಸುಖಕ್ಕೆ ಮೂಲವು ಆತ್ಮನು ; ಆತ್ಮನ ಸ್ವರೂಪವಾದ ಸುಖವನ್ನೇ ಸಾತ್ತ್ವಿಕವೃತ್ತಿಯಲ್ಲಿ ಅವನು ಕಂಡುಕೊಂಡು ಸುಖಿಸುವನು. ವಿಷಯಗಳ ನೆಪದಿಂದ ಸುಖವನ್ನು ಅನುಭವಿಸುವಾಗಲೂ ಅವನು ವಿಷಯಗಳಿಗೆ ಹೆಚ್ಚಿಗೆಯ ಬೆಲೆಯನ್ನು ಕೊಟ್ಟಿರುವದಿಲ್ಲ ಆದರೆ ರಾಜಸನು ಹಾಗಲ್ಲ. ಅವನಿಗೆ ವಿಷಯಗಳೇ ಅವಲಂಬನೆ. ವಿಷಯಗಳಲ್ಲಿ ಉಚ್ಚನೀಚಭಾವದ ತಾರತಮ್ಯವನ್ನೇ ಅವನ ಬುದ್ಧಿಯು ಕಾಣುತ್ತಿರುವದು. ಸಾತ್ತ್ವಿಕನ ಸುಖವು ವಿಷಯಪರವಶವಲ್ಲ, ರಾಜಸರು ವಿಷಯಗಳಿಗೆ ದಾಸರು. ಇಂದ್ರಿಯಗಳನ್ನು ವಿಷಯಗಳಮೇಲೆ ಇಟ್ಟೇ ಅವರು ಸುಖವನ್ನು ಪಡೆಯಬೇಕು.

ರಾಜಸನ ಸುಖಕ್ಕೆ ಇಂದ್ರಿಯವಿಷಯಗಳ ರಾಜಿಯಾಗಬೇಕು. ಹೂವು ಬಾಡಿದರೂ ಕಣ್ಣು ಮಂಜಾದರೂ ರೂಪದ ಸುಖವಿಲ್ಲ ; ಹೀಗೆಯೇ ಮಿಕ್ಕ ಶಬ್ದಾದಿವಿಷಯಗಳನ್ನೂ ಅವುಗಳನ್ನು ಗ್ರಹಿಸುವ ಇಂದ್ರಿಯಗಳನ್ನೂ ಸರಿಯಾದ ಹೊಂದುಗೆಯ ಸ್ಥಿತಿಯಲ್ಲಿಟ್ಟುಕೊಂಡೇ ರಾಜಸನು ಆಯಾ ಸುಖವನ್ನು ಕಂಡುಕೊಳ್ಳಬೇಕು. ಆದರೆ ಇಂದ್ರಿಯಗಳೂ ಮಾರ್ಪಡುತ್ತಿರುವವು, ವಿಷಯಗಳೂ ಮಾರ್ಪಡುತ್ತಿರುವವು. ಅವೆರಡಕ್ಕೂ ಹೊಂದಿಕೆಯಾಗಿ ಈ ರಾಜಸನು ಎಷ್ಟು ಸುಖವನ್ನು ಎಂದಿಗೆ ಪಡೆದುಕೊಂಡಾನು ? ಅಮೆರಿಕ ರಷ್ಯಗಳನ್ನು ರಾಜ್ಯಭಾರಕ್ರಮದಲ್ಲಿ ಒಮ್ಮತಕ್ಕೆ ತಂದು ಪ್ರಪಂಚಕ್ಕೇ ಶಾಂತಿಯನ್ನು ತರಬೇಕೆಂದು ಅನೇಕರು ಪ್ರಯತ್ನಮಾಡುತ್ತಿದ್ದಾರೆ. ಆದರೆ ಆ ಎರಡು ರಾಷ್ಟ್ರಗಳ ಗುರಿಗಳೇ ಬೇರೆಯಾಗಿರುವವರೆಗೆ ಇದು ಎಷ್ಟು ಮಟ್ಟಿಗೆ ಸಾಧ್ಯವಾದೀತೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಒಳ್ಳೆಯ ಹೆಂಡತಿಯನ್ನು ಹುಡುಕುವದರಲ್ಲಿಯೇ ಮುಪ್ಪು ಬಂದಂತೆ ವಿಷಯಗಳನ್ನು ಸರಿಪಡಿಸಿಕೊಳ್ಳುವದರೊಳಗೇ ಇಂದ್ರಿಯಗಳ ತೇಜಸ್ಸು ಕಡಿಮೆಯಾಗಿಬಿಡಬಹುದು.

ಮನುಷ್ಯನ ಅವಿವೇಕವು ಎಂಥದ್ದು ! ಕ್ಷಣಕ್ಷಣಕ್ಕೂ ಬದಲಾಯಿಸುವ ವಿಷಯೇಂದ್ರಿಯಗಳ ವೇದನೆಯನ್ನು ನಂಬಿ ವ್ಯವಹರಿಸಿದರೆ ತನ್ನ ಪುರುಷಾರ್ಥವು ಸಿದ್ಧಿಯಾಗುವದೆಂದು ನಂಬಿ ಕುಳಿತಿರುತ್ತಾನೆ ! ಒಂದು ದ್ವೀಪಕ್ಕೆ ಆಗತಾನೆ ಬಂದಿದ್ದ ಒಬ್ಬನು

ಹೊಸಮಾದರಿಯ ಹಣ್ಣೊಂದನ್ನು ಕಂಡು ಅದರ ಮಾಧುರ್ಯಕ್ಕೇ ಮನಸೋತು ಅದನ್ನು ಸಂತೋಷದಿಂದ ತಿಂದನು. ಸ್ವಲ್ಪಹೊತ್ತಿನಲ್ಲಿಯೇ ಅವನ ಹೊಟ್ಟೆ ಗುಡುಗುಟ್ಟಿತು ; ಆಗ ಇದೇನು ? ಎಂದು ಗಾಭರಿಯಾದನು. ಇಷ್ಟರಲ್ಲಿ ಒಂದುಸಲ ಭೇದಿಯಾಗಲು ಹೊಟ್ಟೆಯೊಳಗೆ ಹಗುರವಾಗಿ ಹರ್ಷವಾಯಿತು. ಆದರೆ ಮತ್ತೆ ಭೇದಿಗೆ ಇಟ್ಟುಕೊಂಡಿತು ! ಈ ಹಣ್ಣು ಸುಖಕ್ಕೆ ಹೇತುವೊ, ದುಃಖಕ್ಕೆ ಹೇತುವೊ, ಯಾರು ಬಲ್ಲರು ? ಇನ್ನೊಂದು ವಿಚಾರ– ವಿಷಯಗಳು, ಇಂದ್ರಿಯಗಳು - ಇವೆರಡರ ಸೇರುವೆಯಿಂದಲೇ ಸುಖವು ತೋರಿಕೊಳ್ಳುತ್ತಿದ್ದರೂ, ಅದೇಕೊ, ಮನುಷ್ಯನು ವಿಷಯುಗಳಲ್ಲಿಯೇ ಸುಖವಿರುವದೆಂಬ ಪಕ್ಷಪಾತದ ದೃಷ್ಟಿಯುಳ್ಳವನಾಗಿರುತ್ತಾನೆ. ವಿಷಯಗಳು ಎಷ್ಟೇ ಉತ್ತಮವಾಗಿರಲಿ, ಅನುಭವಿಸುವ ಯೋಗ್ಯತೆಯಿಲ್ಲದಿದ್ದರೆ ಏನು ಫಲ? ಇಂದ್ರಿಯಗಳು ನೆಟ್ಟಗಿದ್ದ ಹೊರತು ವಿಷಯಗಳಿಂದ ಹೇಗೂ ಸುಖವನ್ನು ಹಿಂಡಿಕೊಳ್ಳುವದು ಆಗುವಂತಿಲ್ಲ. ಸರಿಯಾಗಿ ನೋಡಿದರೆ ಇಂದ್ರಿಯಗಳಿಂದಲ್ಲದೆ ವಿಷಯಗಳ ಸ್ವಭಾವವನ್ನು ಅರಿತುಕೊಳ್ಳುವದಕ್ಕೆ ನಮಗೆ ಬೇರೆ ಯಾವ ದ್ವಾರವೂ ಇಲ್ಲ ; ವಿಷಯಗಳು ನೇರಾಗಿ ನಮಗೆ ಸಂಬಂಧಿಸಿಕೊಳ್ಳುವಂತೆಯೂ ಇಲ್ಲ. ಆದ್ದರಿಂದಲೇ ಸಾತ್ತ್ವಿಕರಾದವರು ಸುಖಪ್ರಾಪ್ತಿಗಾಗಿ ಇಂದ್ರಿಯಗಳಿಗೆ ಸಾತ್ತ್ವಿಕಸಂಸ್ಕಾರವನ್ನುಂಟುಮಾಡಲು ಪ್ರಯತ್ನಿಸುತ್ತಾರೆ. ಆದರೆ ರಾಜಸರು ಇಂದ್ರಿಯಗಳನ್ನು ಅಲಕ್ಷಿಸಿ ವಿಷಯಗಳನ್ನು ಅರಿತುಕೊಳ್ಳುವದರಲ್ಲಿಯೇ ನಿರತರಾಗಿರುತ್ತಾರೆ !

ಈ ಇಂದ್ರಿಯವಿಷಯಗಳ ಸಂಬಂಧದಿಂದಾಗುವ ಭೋಗಗಳನ್ನೇ ಹಿಂದೆ ದುಃಖಯೋನಿಗಳು ಎಂದು ಕರೆದಿರುತ್ತದೆ. ಹಿಂದೆ ಮಾಯೆ ಎಂದು ಕರೆದಿರುವದೂ ಇವುಗಳನ್ನೇ. ತೋರುವದೊಂದು ಬಗೆ, ಇರುವದೊಂದು ಬಗೆ- ಇದು ಮಾಯೆಯಲ್ಲದಿದ್ದರೆ ಮತ್ತೇನು ? ರಾಜಸಸುಖವೆಲ್ಲವೂ ಇಂಥದ್ದಾದರೂ ಜನರು ಗಾಳಕ್ಕೆ ಬಲಿಬೀಳುವ ಮೀನಿನಂತೆ ನಾವು ಅದಕ್ಕೇ ಜೋಲುತ್ತಿದ್ದೇವೆ. ನೇರಳೆಹಣ್ಣನ್ನು ತಿಂದುತಿಂದಹಾಗೆಲ್ಲ ಗಂಟಲುಕಟ್ಟಿಕೊಳ್ಳುವಂತೆ ವಿಷಯಗಳನ್ನು ಭೋಗಿಸಿದಂತೆಲ್ಲ ಇಂದ್ರಿಯಗಳು ಸೊರಗುತ್ತಲೇ ಇರುವವು !

ಈಗ ತಾಮಸಸುಖದ ಸ್ವರೂಪವನ್ನು ನೋಡೋಣ

ಯದಗ್ರೇ ಚಾನುಬನ್ಧೇ ಚ ಸುಖಂ ಮೋಹನಮಾತ್ಮನಃ ।
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ 18-39

ಈ ಸುಖವು ನಿಜವಾಗಿ ಸುಖವೇ ಅಲ್ಲ, ನಮಗೆ ಮೊದಲಿಂದ ಕೊನೆಯವರೆಗೂ ಮೋಹವನ್ನುಂಟುಮಾಡಿ ಮೈಮರೆಯಿಸುವ ಸುಖವಿದು. ನಿದ್ರೆಯಿಂದ ಬಿದ್ದುಕೊಂಡಿರುವಾಗ, ಆಲಸ್ಯದಿಂದ ಅಲುಗಾಡದೆ ಅಜಗರನಂತೆ ಇದ್ದುಕೊಂಡಿರುವಾಗ, ಎಚ್ಚರಿಕೆಯಿಂದಿರಬೇಕಾದ ಸಮಯದಲ್ಲಿ ಎತ್ತಲೋ ನೋಡುತ್ತಾ ಮಂಕಾಗಿರುವಾಗ ಕಾಣುವ ಸುಖಾಭಾಸವು ಇದು.

ಅಫೀಮು ತಿಂದು ಮೈಮರೆತು ಮತ್ತಿನಿಂದ ಏನೇನೋ ಗಮ್ಮತ್ತಿನ ಮಾತು ಆಡುತ್ತಾ ಅರ್ಧನಿದ್ರೆ ಅರ್ಧ ಎಚ್ಚರದಲ್ಲಿರುವವರನ್ನು ನಾವು ಸುಖಿಗಳೆನ್ನಬಹುದೆ? ಅಭ್ಯಾಸಮಾಡಿದರೆ ಬಿಡುವದೇ ಕಷ್ಟವಾಗಿರುವ ಹವ್ಯಾಸಗಳೆಲ್ಲ, ನಿದ್ರಾವಸ್ಥೆಯಂತೆ ಮರವನ್ನುಂಟುಮಾಡುವ ವಿಷಯಸೇವನೆಗಳೆಲ್ಲ ಈ ತಾಮಸಸುಖವನ್ನುಂಟುಮಾಡುವ ಕಾರಣಗಳಾಗಿರುತ್ತವೆ. ಈ ಸುಖಾಭಾಸದ ಉಪಭೋಗದಲ್ಲಿರುವವನಿಗೆ ಯಾವ ವಿವೇಕವೂ ಇರುವದೇ ಇಲ್ಲ. ನನಗೆ ಗೊತ್ತಿದ್ದಂತೆ ಒಬ್ಬ ಮಗ್ಗದವನಿದ್ದನು. ಅವನು ಒಂದು ರಾತ್ರೆ ಮದ್ಯಪಾನವನ್ನು ಮಾಡಿ ಅಮಲೇರಿದಾಗ ಹೆಂಡತಿಯನ್ನು ಬಲಾತ್ಕರಿಸಿ ತಾನು ಹಲವು ತಿಂಗಳುಗಳಿಂದ ಕಷ್ಟಪಟ್ಟು ನೆಯ್ದಿದ್ದ ಜರತಾರಿಯ ಸೀರೆಯನ್ನು ಪೆಟ್ಟಿಗೆಯಿಂದ ತೆಗೆಯಿಸಿ ಸೀಮೆಎಣ್ಣೆಯಲ್ಲಿ ಅದ್ದಿ ಅದಕ್ಕೆ ಬೆಂಕಿಹತ್ತಿಸಿ ಕುಣಿದಾಡಲು ಪ್ರಾರಂಭಿಸಿದನು! ಬೆಳಿಗ್ಗೆ ಅಮಲು ಇಳಿದಾಗ ತನ್ನ ಅವಿವೇಕಕ್ಕೆ ತಾನೇ ನಾಚಿಕೊಂಡು ಪೇಚಾಡುವದಕ್ಕೆ ಮೊದಲುಮಾಡಿದನು!

ಲೌಕಿಕರ ವಿಷಯಗಳ ಸೇವನೆಯೆಲ್ಲ ನಿಜವಾಗಿ ರಾಜಸವೇ. ಅದು ಯಾವನಿಗೆ ಒಂದು ಚಟವಾಗಿಬಿಡುತ್ತದೆಯೋ ಅದು ತಾಮಸಸುಖವಾಗಿ ಪರಿಣಮಿಸಿಬಿಡುತ್ತದೆ. ನನಗೆ ಚೆನ್ನಾಗಿ ಪರಿಚಿತನಾಗಿದ್ದ ಒಬ್ಬ ಬ್ರಾಹ್ಮಣರ ಹುಡುಗ ಭಂಗಿವೇದಾಂತಿಗಳ ಸಹವಾಸವನ್ನು ಮಾಡಿದನು. ಮೊದಮೊದಲು ಅವರಿಗೆ ಸೇವಿಸುವದಕ್ಕೆ ಭಂಗಿಯನ್ನು ಸಜ್ಜುಗೊಳಿಸುವದಕ್ಕೆ ಪ್ರಾರಂಭಿಸಿದನು; ಬರುತ್ತಾಬರುತ್ತಾ ಸ್ವಲ್ಪಸ್ವಲ್ಪವಾಗಿ ತಾನೂ ಸೇವಿಸುವದಕ್ಕೆ ಪ್ರಾರಂಭಿಸಿದನು. ಹೇಗೋ ಈ ಅಭ್ಯಾಸವನ್ನು ಒಗ್ಗಿಸಿಕೊಂಡನು; ಕೊನೆಗೆ ಭಂಗಿಕೋರನೇ ಆಗಿ ಬಿಟ್ಟ! ಅವನಿಗೆ ಜ್ಯೋತಿಷ, ಸಂಸ್ಕೃತ ಮುಂತಾದದ್ದು ಬರುತ್ತಿತ್ತು. ಆ ವಿದ್ಯೆಯನ್ನೆಲ್ಲ ಭಂಗಿಗೆ ಬೇಕಾದ ಹಣವನ್ನು ಸಂಪಾದಿಸುವದಕ್ಕೇ ವಿನಿಯೋಗಿಸಲಾರಂಭಿಸಿದನು. ಇಷ್ಟೇ ಅಲ್ಲ. ಭಂಗಿಸೇವನೆಯಿಲ್ಲದೆ ಸ್ವಲ್ಪಹೊತ್ತೂ ಅವನಿಂದ ಇರುವದು ಆಗದೆಹೋಯಿತು. ಆದ್ದರಿಂದ ಸ್ವಲ್ಪಸ್ವಲ್ಪ ಅವರಿವರ ಜೇಬಿನಲ್ಲಿದ್ದ ಹಣವನ್ನು ಕದಿಯುವದು, ಸುಳ್ಳುಹೇಳುವದು ಮುಂತಾದ ಚಾಳಿಗಳಿಗೂ ಅವನು ತುತ್ತಾದನು. ಕೊಂಚ ಕಾಲದಲ್ಲಿಯೇ ಅವನು ಕೃಶನಾಗುತ್ತಾ ಬಂದು ಅಕಾಲಮೃತ್ಯುವಿಗೆ ವಶನಾಗಿಬಿಟ್ಟನು! ಇದು ತಾಮಸಸುಖದ ಪರಿಣಾಮ!

ವಸ್ತುಗಳನ್ನು ಸಾತ್ತ್ವಿಕವೆಂದು ಶಾಸ್ತ್ರದಲ್ಲಿ ಹೇಳಿದ್ದಮಾತ್ರದಿಂದ ಅವನ್ನು ಅತಿಯಾಗಿ ಸೇವಿಸಬಾರದು. ಹಾಗೆ ಅತಿಯಾಗಿ ಸೇವಿಸುವದೇ ರಾಜಸ ಅಥವಾ ತಾಮಸಪರಿಣಾಮ ವನ್ನುಂಟುಮಾಡಿಬಿಡುತ್ತದೆ. ಸಾತ್ತ್ವಿಕರಾಜಸತಾಮಸವೆಂಬ ಭೇದವು ಮುಖ್ಯವಾಗಿ ಮನಸ್ಸಿಗೆ ಸೇರತಕ್ಕದ್ದಾದ್ದರಿಂದ ಮನಸ್ಸಿಗೆ ಸಾತ್ತ್ವಿಕ ಸಂಸ್ಕಾರವನ್ನುಂಟುಮಾಡುವದಕ್ಕೆ ಅನುಕೂಲವಾಗುವ ಆಹಾರವಿಹಾರಾದಿಗಳನ್ನೇ ಅವಲಂಬಿಸಬೇಕು. ಯಾವದಾದರೊಂದು ಆಚಾರದಿಂದ ನಮಗೆ ಸುಖವಾಗಿ ತೋರಿದರೆ ಅಷ್ಟೇ ಸಾಲದು ; ಅದು ಸಾತ್ತ್ವಿಕಸುಖವೊ, ರಾಜಸಸುಖವೊ, ತಾಮಸ ಸುಖವೊ ?- ಎಂಬುದನ್ನು ವಿವೇಚಿಸಬೇಕು. ತಾಮಸ ಸ್ವಭಾವದವರು ಮೆಲ್ಲಮೆಲ್ಲಗೆ ರಾಜಸ ವ್ಯವಹಾರವನ್ನು ಸ್ವೀಕರಿಸಿ ಸಾತ್ತ್ವಿಕವನ್ನು ಮುಟ್ಟುವ

ಗುರಿಯನ್ನು ಇಟ್ಟುಕೊಂಡಿರಬೇಕು. ಚಟುವಟಿಕೆಯ ಕೆಲಸದಿಂದಲೂ ತತ್ತ್ವ ವಿಚಾರದಿಂದಲೂ ನಿದ್ರೆಯನ್ನೂ ಆಲಸ್ಯವನ್ನೂ ಗೆದ್ದುಕೊಳ್ಳಬೇಕು. ಅನವಶ್ಯವಾಗಿ ನಿದ್ರೆಮಾಡುವದೂ ಆಲಸ್ಯದಿಂದ ಯಾವ ಕೆಲಸವನ್ನೂ ಮಾಡದೆ ತನಗೆ ಅತ್ಯಂತ ಅವಶ್ಯವಾಗಿ ಸುಖಕರವಾಗಿರುವ ಕೆಲಸವನ್ನು ಕೂಡ ಮತ್ತೊಬ್ಬರಿಗೆ ವಹಿಸಿ ತೆಪ್ಪನೆ ಕುಳಿತುಕೊಳ್ಳುವದೂ ಶ್ರೇಯಸ್ಕರವಲ್ಲ. ಪ್ರಮಾದವೆಂದರೆ ಎಚ್ಚರಿಕೆಯಿಲ್ಲದಿರುವದು. ವ್ಯವಹಾರದಲ್ಲಿ ಕೂಡ ಪ್ರಮಾದದಿಂದ ಅಪಾಯವಾಗುತ್ತದೆ; ಮೋಸಗಾರರು ನಮ್ಮ ಪ್ರಮಾದವನ್ನೇ ಕಾದುಕೊಂಡಿದ್ದು ನಮ್ಮನ್ನು ಕಷ್ಟಕ್ಕೆ ಈಡುಮಾಡುವರು. ಅಂಥವರನ್ನು ಬಯ್ಯುವದೂ ಅವರ ಮೇಲೆ ರೇಗಿಬೀಳುವದೂ ಸ್ವಭಾವ. ಆದರೆ ನಮ್ಮ ತಪ್ಪನ್ನು ನಾವು ತಿದ್ದಿಕೊಳ್ಳಬೇಡವೆ ? ಕಳ್ಳರು ಕಳ್ಳತನದಿಂದಲೇ ಸಾಹುಕಾರರಾದದ್ದೆಂದು ? ಕಳ್ಳತನ, ಮೋಸ- ಮುಂತಾದವುಗಳನ್ನು ನಂಬಿರುವವರಿಗೆ ಅವರವರ ಪಾಪದ ಫಲವು ಅವಶ್ಯವಾಗಿ ಆಗುತ್ತದೆ. ಆದರೆ ಅದರಂತೆ ಪ್ರಮಾದಕ್ಕೆ ಫಲವುಂಟು. ಅಧ್ಯಾತ್ಮ ಮಾರ್ಗದಲ್ಲಂತೂ ಪ್ರಮಾದವೇ ಮೃತ್ಯುವು ಎಂದು ಸನತ್ಸುಜಾತರು ಹೇಳಿರುತ್ತಾರೆ. ಒಂದು ಸಲ ಪ್ರಮಾದಕ್ಕೆ ವಶರಾದರೆ ಇಳಿಯುವ ಮೆಟ್ಟಿಲುಗಳ ಸಾಲಿನ ಮೇಲೆ ಹಾಕಿದ ಚೆಂಡಿನಂತೆ ನಾವು ಕೆಳಕ್ಕೆ ಜಾರುತ್ತಲೇ ಇರುವೆವೆಂಬುದನ್ನು ಮರೆಯಬಾರದು. ಆದ್ದರಿಂದ ಪ್ರಮಾದದಿಂದ ತತ್ಕಾಲಕ್ಕೆ ಸುಖವಾಗಿ ತೋರಿದರೂ ಆ ತಾಮಸಸುಖವನ್ನು ನೆಚ್ಚಿ ಸುಮ್ಮನೆ ಕೂರಬಾರದು. ಮುಮುಕ್ಷುವಾದವನು ಮನಸ್ಸಿನ ಪ್ರಸನ್ನತೆಯಿಂದ ಬರುವ ಅಧ್ಯಾತ್ಮಸುಖವನ್ನೇ ಪಡೆದುಕೊಳ್ಳುವದಕ್ಕೆ ಪ್ರಯತ್ನಿಸುತ್ತಿರಬೇಕು.

## ೧೮೪. ಗುಣತ್ರಯಪ್ರಭಾವ 18 - (40-41)

**(3-9-50)**

ಕ್ರಿಯಾಕಾರಕಫಲರೂಪವಾಗಿರುವ ಈ ಸಂಸಾರವೆಲ್ಲವೂ ತ್ರಿಗುಣಾತ್ಮಕವೆಂದು ತಿಳಿಸುವದಕ್ಕಾಗಿ ಭಗವಂತನು ಈವರೆಗೆ ಜ್ಞಾನ, ಕರ್ತೃ, ಕರ್ಮ- ಮುಂತಾದವುಗಳಲ್ಲೆಲ್ಲ ಸತ್ತ್ವಾದಿಭೇದಗಳಿರುವವೆಂಬುದನ್ನು ತಿಳಿಸಿಕೊಟ್ಟಿರುತ್ತಾನೆ. ಇವುಗಳಲ್ಲಿ ರಜೋಗುಣವು ಎದ್ದುಕೊಂಡಾಗ ವ್ಯವಹಾರವು ಚೆನ್ನಾಗಿ ಸಾಗುತ್ತದೆ. ಸಾತ್ತ್ವಿಕಗುಣವು ಕೊನೆಮುಟ್ಟಿದರೂ ವ್ಯವಹಾರವಿಲ್ಲ. ತಮಸ್ಸು ಕೊನೆಮುಟ್ಟಿದರೂ ವ್ಯವಹಾರವಿಲ್ಲ. ಜಗತ್ತು ಈ ಮೂರು ಗುಣಗಳ ವೈಷಮ್ಯದಿಂದ ಹುಟ್ಟಿ, ಬೆಳೆದು, ನಾಶವಾಗುವ ಕ್ರಮವನ್ನು ಸಾಂಖ್ಯರು ಸಂಚರ ಪ್ರತಿಸಂಚರಗಳೆಂದು ಕರೆಯುತ್ತಾರೆ. ಯಾವ ವಸ್ತುವೇ ಆಗಲಿ, ಯಾವ ಪ್ರಾಣಿಯೇ ಆಗಲಿ, ಯಾವ ಮನುಷ್ಯನೇ ಆಗಲಿ, ಹುಟ್ಟಿದವನು ಬೆಳೆದು, ಕೊನೆಗೆ ಮುದುರಿಕೊಳ್ಳುವನೆಂಬುದು

ಸಹಜವಾದದ್ದು. ಮನುಷ್ಯನ ಜೀವನದ ಇತಿಹಾಸದಲ್ಲಿ ಹೀಗೆಯೇ ಆರೋಹಣಾವರೋಹಣಗಳು ಇರುತ್ತದೆ, ಪುರಾಣಕಾಲದಲ್ಲಿ ರಾವಣನು ಹುಟ್ಟಿಬೆಳೆದು ಶಾರೀರಕ ಬಲ, ವಿದ್ಯೆ, ಪ್ರಾಯ, ಸಂಪತ್ತು, ಅಧಿಕಾರ - ಮುಂತಾದವುಗಳಲ್ಲಿ ಇನ್ನಿಲ್ಲವೆಂಬಷ್ಟು ಹಿಗ್ಗಿದನು. ಅವನ ಅಭ್ಯುದಯವು ಶಿಖರವನ್ನು ಮುಟ್ಟಿತೆಂದು ಕಾಣುವಹೊತ್ತಿಗೆ ಅನಿರೀಕ್ಷಿತವಾದ ರೀತಿಯಿಂದ ಅವನತಿಯು ಪ್ರಾರಂಭವಾಯಿತು. ಕೊನೆಗೆ ಎಲ್ಲರೂ ಅವನಿಗೆ ಶತ್ರುಗಳಾದರು. ರಾಮನು ಸುಗ್ರೀವಾದಿಗಳೊಡನೆ ಅವನ ದುರ್ಭೇದ್ಯವಾದ ಲಂಕಾಪುರಿಯನ್ನು ಮುತ್ತಿ ಅವನನ್ನು ರಣರಂಗದಲ್ಲಿ ಕೆಡಹಿದನು ! ಅವನ ತಮ್ಮನಾದ ವಿಭೀಷಣನುಕೂಡ ಅವನಿಗೆ ಉತ್ತರಸಂಸ್ಕಾರವನ್ನು ಮಾಡಲು ಹಿಂಜರಿಯುವ ಕಾಲ ಬಂತು ! ಇದರಂತೆ ಅತ್ಯಂತ ಅರ್ವಾಚೀನಕಾಲದಲ್ಲಿ ನಾವು ಕಾಣುವ ಹಾಗೆಯೇ ಹಿಟ್ಲರನ ಬೆಳವಣಿಗೆಯೂ ಪ್ರಭಾವವೂ ಯುರೋಪುಖಂಡದಲ್ಲೆಲ್ಲ ತೋರಿಕೊಂಡು ಅವನ ಅಧಿಕಾರದ ಸೆಕೆ ಪೂರ್ವದೇಶಗಳಿಗೂ ವ್ಯಾಪಿಸಿತೆನ್ನುವ ಹೊತ್ತಿಗೆ ಅವನಿಗೆ ಎಲ್ಲಾ ಕಡೆಯಲ್ಲಿಯೂ ಮುಗ್ಗಟ್ಟು ಬಂದಿತು. ಶತ್ರುಗಳ ಕಾಟವನ್ನು ತಪ್ಪಿಸಿಕೊಳ್ಳುವದಕ್ಕೆಂದು ಎಲ್ಲಿಯೋ ತಲೆಮರೆಸಿಕೊಂಡನು. ಬಹುಕಾಲದವರೆಗೆ ಅವನು ಬದುಕಿದ್ದಾನೊ, ಇಲ್ಲವೊ-ಎಂಬ ಸಂಶಯವು ಜನರಿಗುಂಟಾಗುವಹಾಗಾಯಿತಲ್ಲ ! ಇದೆಲ್ಲ ಮೂರು ಗುಣಗಳ ಲೀಲೆಯೇ. ಗುಣಗಳು ಇದ್ದಂತೆ ಇರುವದೇ ಇಲ್ಲ.

ಗುಣಗಳು ಪ್ರಧಾನವೆಂಬ ಹೆಸರನ್ನು ತಾಳಿ ಸಾಮ್ಯಾವಸ್ಥೆಗೆ ಬಂದರೆ ಜಗತ್ತೆಲ್ಲವೂ ಪ್ರಲಯವಾಗಿಬಿಡತ್ತದೆ ; ಅವು ವಿಷಮವಾಗಿ ಆಡುತ್ತಿರುವವರೆಗೇ ಈ ಜಗತ್ತು ಕಾಣಿಸಿಕೊಳ್ಳುತ್ತಿರುವದು. ಈ ವಾದವನ್ನು ಅತಿಪ್ರಾಚೀನಕಾಲದಲ್ಲಿ ಕಪಿಲರೆಂಬವರು ಹೊರಕ್ಕೆ ತಂದರು. ಈ ವಾದದಲ್ಲಿ ಎಷ್ಟು ತತ್ತ್ವವಿದೆ ಎಂಬುದು ಈಗಲೂ ನಮ್ಮ ಅನುಭವಕ್ಕೆ ಗೋಚರವಾಗುತ್ತಲೇ ಇದೆ. ಕ್ಯಾಂಟ್, ಹೆಗಲ್ -ಮುಂತಾದವರು ಪ್ರಕಾರಾಂತರದಿಂದ ಈ ವಾದವನ್ನೇ ಬೋಧಿಸಿದರು. ಜಗತ್ತು ನಿರಂಕುಶಭಾವದಿಂದ ಉಂಟಾಗಿ ತೋರಿಕೊಡಿದ್ದು ಕೊನೆಗೆ ಭಾವದಲ್ಲಿಯೇ ಅಡಗುವದೆಂಬುದು ಹೆಗಲ್ ಎಂಬಾತನ ವಾದ. ಆತನ ಉಪದೇಶದಲ್ಲಿ ಅರ್ಧಭಾಗವನ್ನು ರೂಪಾಂತರೀಕರಣದಿಂದ ರಷ್ಯದ ಮಾರ್ಕ್ಸ್ ಎಂಬಾತನು ಪ್ರಚಾರಕ್ಕೆ ತಂದನು ; ಅದರ ಪರಿಣಾಮವಾಗಿ ಈಶ್ವರಭಕ್ತಿ, ಧರ್ಮ- ಮೊದಲಾದವುಗಳ ಅಡಿಗಲ್ಲೇ ಅಲುಗಾಡುವದಕ್ಕೆ ಮೊದಲಾಗಿದೆ. ಸಮಾಜದಲ್ಲಿ ತತ್ತ್ವಜ್ಞಾನಿಗಳ ಆಡಳಿತವೇ ಉತ್ತಮ ಎಂದು ಹೇಳುತ್ತಿದ್ದ ಪ್ಲೇಟೋ ಮುಂತಾದವರ ಉಪದೇಶವು ಮೂಲೆಗೆ ಬಿದ್ದು ಈಗ್ಗೆ ಕೂಲಿಕಾರರಲ್ಲಿಯೇ ಎಲ್ಲಾ ಅಧಿಕಾರವೂ ಇರಬೇಕು, ಧನಿಕರನ್ನೂ ಧರ್ಮಿಷ್ಠರನ್ನೂ ಸದೆಬಡಿಯಬೇಕು - ಎಂಬ ವಾದವು ಮೇಲಕ್ಕೇರುತ್ತಿದೆ. ಈಚೀಚೆಗೆ ಪಶ್ಚಿಮದೇಶದಲ್ಲಿ ಜನಗಳ ಮನೋಭಾವಕ್ಕೆ ತಕ್ಕಂತೆ ತತ್ತ್ವಪ್ರದರ್ಶನಗಳನ್ನು ಪ್ರಚಾರಕ್ಕೆ ತರುವದು ಬಹಳ ಹೆಚ್ಚಾಗಿರುತ್ತದೆ. "ಬದಲಾವಣೆಯ ತತ್ತ್ವಶಾಸ್ತ್ರ" (Philosophy of Change) ಎಂಬ

ಹೆಸರಿನಿಂದ ವಿಕಾರವಾಗುತ್ತಿರುವದೇ ಜಗತ್ತಿನ ಸ್ವಭಾವವು; ಕೂಟಸ್ಥನಿತ್ಯವೆಂಬುದೇ ಇಲ್ಲ-ಎಂಬ ವಾದವನ್ನು ಒಬ್ಬ ದಾರ್ಶನಿಕಮಹಾಶಯನು ಹೇಳಹೊರಟನು; ಹೊಡಿ, ಕಡಿ, ಬಡಿ-ಎಂಬಿವೇ ಗಂಡುಗುಣಗಳು ಎಂದು ಬೋಧಿಸಿದವನು ಮತ್ತೊಬ್ಬನು ; ಧನವನ್ನು ಗಳಿಸಿಕೊಂಡವರನ್ನು ದರೋಡೆಯಿಂದಲಾದರೂ ಬಡಿದು ಅವರ ಆಸ್ತಿಯನ್ನು ಹಂಚಿಕೊಳ್ಳುವದು ಯುಕ್ತವೆಂದು ಸಾರಿದನು. ಹೀಗೆಲ್ಲ ಜಗತ್ತಿನ ಬದಲಾವಣೆಯೇ ತತ್ತ್ವವೆಂಬ ಈ ಪರಿಣಾಮವಾದದ ರೂಪಾಂತರಗಳು ಅವತಾರವಾಗುತ್ತಲೇ ಇವೆ !

ವ್ಯವಹಾರದೃಷ್ಟಿಯಿಂದ ಪರಿಣಾಮವೇ ಜಗತ್ತಿನ ಸ್ವಭಾವವೆಂಬುದು ಸರಿಯಾದದ್ದೇ. ಆದ್ದರಿಂದಲೇ ಭಗವಂತನು ಹೀಗೆಂದಿದ್ದಾನೆ :

ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ ತ್ರಿಭಿರ್ಗುಣೈಃ ॥ **18-40**

ಆದರೆ ಗೀತೆಯು ಇದನ್ನೇ ಪರಮಾರ್ಥವೆಂದೇನೂ ಹೇಳುವದಿಲ್ಲ. ಪ್ರಪಂಚವು ತ್ರಿಗುಣಗಳ ಬದಲಾವಣೆಯಿಂದ ಎಷ್ಟು ವಿಕಾರಗಳನ್ನು ಪಡೆಯುವಂತೆ ತೋರಿದರೂ ಇದಕ್ಕೆ ಆಧಾರವಾಗಿರುವ ಪರಮಾರ್ಥತತ್ತ್ವವೊಂದು ಇದೆ. ಅದು ಕೂಟಸ್ಥವೂ, ಅಚಲವೂ, ಧ್ರುವವೂ ಆಗಿರುತ್ತದೆ. ವಿವೇಕಾನಂದಸ್ವಾಮಿಗಳು "ಈ ಕೂಟಸ್ಥತತ್ತ್ವವನ್ನು ಕಂಡುಹಿಡಿದ ಅದನ್ನೇ ನಂಬಿರುವ ಭರತಖಂಡದವರೇ ಎಲ್ಲರಿಗಿಂತಲೂ ಪೂರ್ವದಲ್ಲಿದ್ದ ಜನಾಂಗದವರು; ಅವರೇ ಮುಂದೂ ಇರುತ್ತಾರೆ" ಎಂದು ಎಲ್ಲಿಯೋ ಬರೆದಿರುವಂತೆ ನನಗೆ ನೆನಪಿದೆ. ಆದ್ದರಿಂದ ಕೂಟಸ್ಥತತ್ತ್ವವೊಂದು ಇದೆ ಎಂದು ಹೇಳುವ ಗೀತೆಯು ಜಗತ್ತು ಪರಿಣಮಿಸುತ್ತಲೇ ಇರುತ್ತದೆ, ನಿತ್ಯವಾದ ತತ್ತ್ವವೆಂಬುದೇ ಇಲ್ಲ ಎನ್ನುವವರಿಗೆ ವಿರೋಧಿಯಾಗಿರುತ್ತದೆ. ನಮ್ಮ ದೇಶದವರು ವಿಕಾರಗಳನ್ನು ನಂಬಿ ಎಂದಿಗೂ ವ್ಯವಹರಿಸಿದವರಲ್ಲ. ಆದರೂ ವಿಕಾರವೇ ಜಗತ್ತಿನ ತತ್ತ್ವವೆಂಬ ಪ್ರಚಾರಕ್ಕೆ ಅವರೂ ಸದ್ಯಕ್ಕೆ ಮರುಳಾಗಿರುವಂತೆ ತೋರುತ್ತಿದೆ. ಪ್ರಚಾರಕರು ಸ್ವಲ್ಪ ರುಚಿಹತ್ತಿಸಿಬಿಡುವದರಿಂದ ಅದನ್ನೇ ಹಿಡಿದುಕೊಳ್ಳುವ ಹಾಗೆ ಆಗುವದು ಸಹಜವಾಗಿದೆ. ತತ್ತ್ವವನ್ನು ಕೇಳುವವರು ಬಹಳ ಕಡಿಮೆ; ತತ್ತ್ವಜ್ಞಾನವೇ ಕೊನೆಯಲ್ಲಿ ಹಿತಕರವಾದದ್ದಾದರೂ ಸದ್ಯಕ್ಕೆ ಮೋಹಕವಾಗಿರುವ ಪ್ರಿಯಸಂದೇಶವನ್ನೇ ಜನರು ಮೆಚ್ಚುತ್ತಾರೆ. ನಮ್ಮ ದುರದೃಷ್ಟದಿಂದ ತತ್ತ್ವವನ್ನು ತಿಳಿಸುವವರೂ ಕಡಿಮೆಯಾಗುತ್ತಿದ್ದಾರೆ ; ಬದಲಾವಣೆಯೇ ಸಹಜವೆಂದು ಬೋಧಿಸುವವರ ಸಂಖ್ಯೆಯು ಮಾತ್ರ ದಿನದಿನಕ್ಕೂ ಹೆಚ್ಚುತ್ತಿದೆ; ಅಂಥವರು ಎಲ್ಲೆಲ್ಲಿಯೂ ತುಂಬಿರುತ್ತಾರೆ.

ಈಗ್ಗೆ ನಮಗೆ ದೇಹವೇ ಆತ್ಮನಾಗುತ್ತಾಬಂದಿದೆ. ಪೂರ್ವದಲ್ಲಿ ಚಾರ್ವಾಕರು ಈ ವಾದವನ್ನೇ ಹೂಡಿದ್ದರು. ಈಗಲೂ ಕೆಲವರು ಅದನ್ನೇ ನಾಮಾಂತರ ರೂಪಾಂತರಗಳಿಂದ

ಮುಂದಕ್ಕೆ ತರುತ್ತಿದ್ದಾರೆ. ಪಾಶ್ಚಾತ್ಯರಲ್ಲಿ ಸ್ವತಂತ್ರವಿಚಾರಕರು ಹದಿನೆಂಟನೆಯ ಶತಮಾನದಲ್ಲಿ ಪ್ರಬಲರಾದರು ; ಅವರು ಧರ್ಮವಿರುದ್ಧವಾಗಿ ರಾಶಿರಾಶಿಯಾಗಿ ಗ್ರಂಥಗಳನ್ನು ಬರೆದುಹಾಕಿದರು. ಅದು ಸವಿಯಾಗಿ ಕಂಡವರು ಅದರ ದುಷ್ಪರಿಣಾಮವನ್ನು ಅನುಭವಿಸಬೇಕಾಯಿತು. ಈಗ ಮತ್ತೆ ಮತ್ತೊಂದು ಪರಿಣಾಮವಾದದ ಅವತಾರವಾಗಿದೆ. ಅದು ಏನೂ ಅರಿಯದ ಜನರನ್ನು ಸಮಾಜದ ಮೇಲೆ ಛೂಬಿಟ್ಟು ಪ್ರಲಯಾಂತವಾದ ಕಾರ್ಯಗಳನ್ನು ಮಾಡಿಸುತ್ತಿದೆ ; ಕೊನೆಗೆ ಕೆಲವರು ಬುದ್ಧಿವಂತರ ಹಿಡಿತಕ್ಕೆ ಎಲ್ಲರೂ ಸಿಕ್ಕಿ ಪೇಚಾಡುವ ಗತಿಗೆ ಇಳಿಯುವರು. ಇದೆಲ್ಲ ವಿಕಾರವೇ ತತ್ತ್ವವೆಂಬ ಅಭಿಮಾನದ ಫಲ !

ಆದ್ದರಿಂದ ನಾವು ಎಚ್ಚರಿಕೆಯಿಂದಿರಬೇಕು. ಮೂರು ಗುಣಗಳು ಮೂರು ಲೋಕವನ್ನು ವ್ಯಾಪಿಸಿಕೊಂಡಿರುವದು ನಿಜ. ಅವುಗಳ ವಿಕಾರದಿಂದ ಇಡಿಯ ಜಗತ್ತೇ ವಿಕಾರವಾಗುತ್ತಿರುವಂತೆ ತೋರುವದೂ ನಿಜ. ಆದರೆ ಇದೆಲ್ಲಕ್ಕೂ ಆಧಾರವಾದ ಕೂಟಸ್ಥವಾದ ತತ್ತ್ವವೊಂದಿದೆ. ಅದೇ ಪರಮಾರ್ಥವಾದದ್ದು. ಮುಮುಕ್ಷುವಾದವನು ಆ ತತ್ತ್ವವನ್ನು ಕಂಡುಹಿಡಿಯುವದಕ್ಕೆ ಪ್ರಯತ್ನಿಸಬೇಕು; ಈ ಮೂರು ಗುಣಗಳನ್ನು ಮೀರುವದಕ್ಕೆ ಪ್ರಯತ್ನಿಸಬೇಕು. ಯಾವ ಯಾವಾಗ ಏನೇನು ಹೇಗೆ ಹೇಗೆ ಕಾಣಿಸುತ್ತದೆಯೋ ಆಗಾಗ ಅದದು ಹಾಗೆ ಹಾಗೆಯೇ ಸರಿ - ಎಂಬುದು ಮಿಥ್ಯಾವಾದವು. "ಇದೇ ಸರಿ, ಇದೇ ಸರಿ" ಎಂದುಕೊಳ್ಳುತ್ತಾ ಹೋಗುವವನು ಕೊನೆಗೆ ತಾನೇ ಸರಿಯಾಗಬೇಕಾಗುತ್ತದೆ.

ಗುಣಗಳು ನಾವು ಎಲ್ಲಿ ಹೋದರೂ ಬಿಡುವದಿಲ್ಲ ; ಅವೇ ಬೇರೆ ಬೇರೆಯ ವೇಷವನ್ನು ತಾಳಿ ಮತ್ತೆ ಮತ್ತೆ ಬಂದು ನಮ್ಮನ್ನು ಹಿಂಸಿಸುತ್ತವೆ. ಆದ್ದರಿಂದ ಅವುಗಳಿಗೆ ಮರುಳಾಗಬಾರದು. ಈ ಗುಣಗಳ ಕಾರ್ಯವು ಪ್ರಾಣಿಗಳಲ್ಲೆಲ್ಲ ಆಗುತ್ತಿರುತ್ತದೆ ; ಇದು ಎಲ್ಲಾ ದೇಶದ ಜನರಲ್ಲಿಯೂ ಆಗುತ್ತಿರುತ್ತದೆ. ಆದರೂ ಧರ್ಮಪ್ರಧಾನವಾದ ನಮ್ಮ ದೇಶದಲ್ಲಿ ಬಹುಕಾಲದಿಂದ ಪ್ರಚಾರದಲ್ಲಿರುವ ವರ್ಣವಿಭಾಗವನ್ನನುಸರಿಸಿ ಈ ಗುಣಗಳ ವ್ಯಾಪಾರವನ್ನೂ ಅವುಗಳಿಂದ ಹೇಗೆ ಪಾರಾಗಬಹುದೆಂಬುದನ್ನೂ ತಿಳಿಸುವದಕ್ಕಾಗಿ ಮುಂದಿನ ಗ್ರಂಥವು ಪ್ರಾರಂಭವಾಗಿರುತ್ತದೆ. ಈ ತ್ರಿಗುಣಾತ್ಮಕಸಂಸಾರವು ಕ್ರಿಯಾಕಾರಕಫಲಾತ್ಮಕ ವಾಗಿರುತ್ತದೆ ; ಈ ಅನರ್ಥದಿಂದ ನಾವು ಪಾರಾಗಬೇಕು ಎಂದು ಆಗಲೇ "ಅಸಂಗ ಶಸ್ತ್ರೇಣ ದೃಢೇನ ಛಿತ್ವಾ" ಎಂದು ಹೇಳಿದೆ. ಇದನ್ನು ಬಿಡಿಸಿಕೊಳ್ಳುವದಕ್ಕೆ ನಮ್ಮ ನಮ್ಮ ಕರ್ಮವನ್ನೇ ಹೇಗೆ ಉಪಯೋಗಿಸಿಕೊಳ್ಳಬಹುದು ಎಂಬುದು ಈಗ ವಿಚಾರಮಾಡತಕ್ಕದ್ದಾಗಿದೆ.

ಬ್ರಾಹ್ಮಣಕ್ಷತ್ರಿಯ ವೈಶ್ಯರಿಗೂ ಶೂದ್ರರಿಗೂ ಸ್ವಭಾವದಿಂದುಂಟಾಗುವ ಗುಣಗಳಿಂದ ಅವರವರ ಕರ್ಮಗಳು ವಿಂಗಡವಾಗಿರುತ್ತದೆ. ಬ್ರಾಹ್ಮಣಕ್ಷತ್ರಿಯ ವೈಶ್ಯರುಗಳು ಒಂದು ಗುಂಪು; ಇವರೆಲ್ಲರೂ ದ್ವಿಜರಾಗಿ ವೇದೋಕ್ತ ಕರ್ಮವನ್ನು ಮಾಡುವ ಅಧಿಕಾರವುಳ್ಳವರು. ಶೂದ್ರನು

ಇವರಿಗೆ ಸಹಾಯಮಾಡಿ ಧರ್ಮವನ್ನು ಸಂಪಾದಿಸಿಕೊಳ್ಳುವವನು. ಇವರಿಗೆ ಅವರವರ ಸ್ವಭಾವದಿಂದುಂಟಾದ ಗುಣಗಳಿಂದ ಬೇರೆ ಬೇರೆಯ ಕರ್ಮಗಳು ಏರ್ಪಟ್ಟಿರುತ್ತವೆ. ಇಲ್ಲಿ ಸ್ವಭಾವವೆಂದರೇನೆಂಬ ಬಗ್ಗೆ ಮತಭೇದವುಂಟು. ಪರಮೇಶ್ವರನ ಮಾಯೆ, ಜನ್ಮಾಂತರ ಸಂಸ್ಕಾರ - ಮುಂತಾದ ಅರ್ಥಗಳು ಸ್ವಭಾವಶಬ್ದಕ್ಕೆ ಆಗಬಹುದು. ಆದರೆ ಅವರವರ ಸ್ವಭಾವವನ್ನುಂಟುಮಾಡುವ ಸತ್ತ್ವಾದಿಗುಣಗಳಿಂದ ಬ್ರಾಹ್ಮಣಾದಿಗಳಿಗೆ ಬೇರೆ ಬೇರೆಯ ಕರ್ಮಗಳು ಏರ್ಪಟ್ಟಿವೆ ಎಂಬುದು ಸಹಜವಾದ ಅರ್ಥವೆಂದು ತೋರುತ್ತದೆ. ಈ ಕರ್ಮಗಳನ್ನು ಹೇಗೆ ಮಾಡಿದರೆ ತ್ರಿಗುಣಗಳ್ನು ಮೀರಬಹುದು ಎಂಬುದನ್ನು ಮುಂದಿನ ದಿನ ವಿಚಾರಿಸೋಣ.

## ೧೮೫. ನಾಲ್ಕುವರ್ಣದವರ ಧರ್ಮಗಳು 18 - (42-44)

### (10-9-50)

ಕರ್ಮಸಾಮಾನ್ಯಕ್ಕೆ ಬೇಕಾಗಿರುವ ಜ್ಞಾನ, ಕರ್ತೃ- ಮುಂತಾದವುಗಳನ್ನೆಲ್ಲ ಸಾತ್ತ್ವಿಕಾದಿಭೇದದಿಂದ ವಿಂಗಡಿಸಿ ತಿಳಿಸಿದ್ದಾಯಿತು. ಈ ಗುಣತ್ರಯದ ಕ್ಷೇತ್ರವನ್ನು ಮೀರಿದ ವಸ್ತುವು ಲೋಕತ್ರಯದಲ್ಲಿಯೂ ಇಲ್ಲ ಎಂದು ಹೇಳಿದ್ದಾಯಿತು. ಈಗ ಯಾವ ಜೀವನಕ್ಕಾಗಿ ಇದನ್ನು ಹೇಳಿದೆಯೋ ಆ ಜೀವನದ ಮಟ್ಟಗಳನ್ನು ಹೇಳುವದಕ್ಕೆ ಹೊರಟಿದೆ.

ಗುಣಕರ್ಮಗಳ ವಿಭಾಗದಿಂದ ಚಾತುರ್ವರ್ಣ್ಯವನ್ನು ನಾನೇ ಸೃಷ್ಟಿಸಿದ್ದೇನೆ ಎಂದು ಭಗವಂತನು ಆಗಲೆ ಹೇಳಿರುತ್ತಾನೆ. ಈಗ ಯಾವ ಯಾವ ವರ್ಣಕ್ಕೆ ಯಾವ ಯಾವದು ಕರ್ಮ ಎಂಬುದನ್ನು ಹೇಳಲಾಗುತ್ತದೆ. ಗೀತೆಯಲ್ಲಿ ಹೇಳಿರುವದು ವರ್ಣಾಶ್ರಮಕರ್ಮವಲ್ಲ ಎಂದು ಈಗಿನ ಸಮಾಜದ ದೃಷ್ಟಿಯಿಂದ ಕೆಲವರು ಹೇಳುವದುಂಟು. ಆದರೆ ಇರುವದನ್ನು ಮುಚ್ಚುವದರಿಂದ ಯಾವ ಪ್ರಯೋಜನವೂ ಇಲ್ಲ. ಸನಾತನ ಧರ್ಮಕ್ಕೆಲ್ಲ ವೇದವೇ ಮೂಲವು; ಅದರಿಂದಲೇ ಉಪನಿಷತ್ತುಗಳ ವೇದಾಂತಸಿದ್ಧಾಂತವುಂಟಾಗಿದೆ. ಆ ಉಪನಿಷತ್ತುಗಳ ಉಪದೇಶವನ್ನು ಸುಲಭವಾದ ಭಾಷೆಯಿಂದ ತಿಳಿಸುವದಕ್ಕೆಂದೇ ಗೀತೆಯು ಹೊರಟಿರುತ್ತದೆ. ಹೀಗಿರುವಲ್ಲಿ ವರ್ಣಾಶ್ರಮವಿಚಾರವು ಗೀತೆಯಲ್ಲಿ ಬರುವದಿಲ್ಲ ಎಂಬುದು ನಿರೀಕ್ಷಿಸತಕ್ಕದ್ದಲ್ಲ. `ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ । ಕರ್ಮಾಣಿ ಪ್ರವಿಭಕ್ತಾನಿ' ಎಂಬ ಶ್ಲೋಕಕ್ಕೆ ಮತ್ತೆ ಯಾವ ಅರ್ಥವನ್ನು ತಾನೆ ಮಾಡಬಹುದು ?

"ಸ್ವಭಾವಪ್ರಭವೈರ್ಗುಣೈಃ" ಎಂಬುದಕ್ಕೆ ಅವರವರ ಸ್ವಭಾವಕ್ಕೆ ಕಾರಣವಾಗಿರುವ ಸತ್ತ್ವಾದಿಗುಣಗಳಿಂದ - ಎಂಬ ಅರ್ಥವನ್ನು ಆಗಲೇ ಹೇಳಿದ್ದಾಗಿದೆ. ಬ್ರಾಹ್ಮಣಸ್ವಭಾವಕ್ಕೆ ಸತ್ತ್ವಗುಣವೇ ಪ್ರಭವವು ಎಂದರೆ ಹೇತು. ಹೀಗೆಯೇ ಕ್ಷತ್ರಿಯಸ್ವಭಾವಕ್ಕೆ ಸತ್ತ್ವವು ಬೆರೆತಿರುವ

ರಜೋಗುಣವು ಹೇತು ; ವೈಶ್ಯ ಸ್ವಭಾವವಕ್ಕೆ ತಮಸ್ಸು ಬೆರೆತಿರುವ ರಜಸ್ಸು ಹೇತು ; ಶೂದ್ರಸ್ವಭಾವಕ್ಕೆ ರಜಸ್ಸು ಬೆರೆತಿರುವ ತಮಸ್ಸು ಹೇತು. ಹೀಗೆ ಸ್ವಭಾವಕ್ಕೆ ಕಾರಣವಾಗಿರುವ ಸತ್ತ್ವಾದಿ ಗುಣಗಳಿಂದ ಅವರವರ ಕರ್ಮಗಳು ಏರ್ಪಟ್ಟಿರುತ್ತವೆ ; ಹೇಗೆಂದರೆ :

**ಶಮೋ ದಮಸ್ತಪಃ ಶೌಚಂ ಕ್ಷಾನ್ತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥ 18-42**

ಈ ಶ್ಲೋಕದಲ್ಲಿ ಸ್ವಭಾವಜಮ್ ಎಂದಿರುವದರಿಂದ ಸ್ವಭಾವಪ್ರಭವೈಃ ಎಂಬುದಕ್ಕೆ ಸ್ವಭಾವದಿಂದುಂಟಾದ ಎಂಬರ್ಥವೇ ಸರಿ ಎಂದು ಕೆಲವರು ಹೇಳುತ್ತಾರೆ. ಅದೂ ಆಗಬಹುದು. ಏಕೆಂದರೆ ಜನ್ಮಾಂತರ ಸಂಸ್ಕಾರರೂಪವಾದ ಸ್ವಭಾವದಿಂದಲೇ ಈಗಿನ ಜನ್ಮವೂ ಅದರಲ್ಲಿರುವ ವೃತ್ತಿಯ ಸ್ವಭಾವವೂ ತೋರಿಕೊಳ್ಳುತ್ತವೆ. ಈ ಸ್ವಭಾವಕ್ಕೆ ಗುಣಗಳೇ ಕಾರಣವಾಗಿರುತ್ತದೆ. ಶಮದಮಾದಿಗಳಿಂದ ಕೂಡಿರುವವನೇ ಬ್ರಾಹ್ಮಣನು. ಶಮಾದಿಗಳ ವಿವರಗಳನ್ನು ಹಿಂದೆ ತಿಳಿಸಿಯೇ ಇರುತ್ತದೆ ; ಇಲ್ಲಿ ಪಟ್ಟಿಯನ್ನು ಮಾತ್ರ ಕೊಟ್ಟಿದೆ. ನಾನು ಬ್ರಾಹ್ಮಣನು ಎಂದುಕೊಳ್ಳುವವನು ಈ ಗುಣಗಳಲ್ಲಿ ಯಾವ ಯಾವವು ನನ್ನಲ್ಲಿ ಎಷ್ಟೆಷ್ಟು ಪರಿಮಾಣದಲ್ಲಿ ಇವೆ ?- ಎಂದು ತನಗೆತಾನೇ ಪ್ರಶ್ನೆಯನ್ನು ಹಾಕಿಕೊಳ್ಳಬೇಕು.

ಈ ಪ್ರಶ್ನೆಗೆ ಉತ್ತರವನ್ನು ಕೊಡುವದಕ್ಕೆ ನಮಗೇ ನಾಚಿಕೆಯಾಗುತ್ತದೆ; ಈ ಗುಣಗಳಲ್ಲಿ ಎಲ್ಲಿಯೋ ಅಲ್ಪಸ್ವಲ್ಪದರ ಆಭಾಸವು ನಮ್ಮಲ್ಲಿ ಕಾಣಬಹುದು. ಆದರೆ ಬಹುಭಾಗ, ಮೂರು ಮುಕ್ಕಾಲುಪಾಲು, ಹೋಗಿಬಿಟ್ಟಿದೆ. ಇದೇಕೆ ? ನಮಗೆ ಗುಣಗಳು ಮೋಸಮಾಡಿರುತ್ತವೆ. ಅತ್ಯಂತವಿರಕ್ತನಾಗಿ ಸಾಧುವಾಗಿದ್ದವನೊಬ್ಬನು ಮಠಾಧಿಪತಿಯಾದದ್ದು ; ಬರುತ್ತಾ ಬರುತ್ತಾ ಅವನು "ಇದೇನು ಮಾಡೀತು ? ಇದೇನು ಮಾಡೀತು ?"- ಎಂದು ವ್ಯವಹಾರದ ಒಂದೊಂದು ಭಾಗವನ್ನು ಅವಲಂಬನೆಮಾಡಿದ್ದು, ಕೊನೆಗೆ ಸಾಧುತ್ವವೇ ಅವನಲ್ಲಿ ಉಳಿಯದೆ ಮಠವನ್ನು ಬಿಟ್ಟು ಪಲಾಯನಮಾಡಿದ್ದು - ಈ ಕಥೆಯನ್ನು ಹಿಂದೊಂದು ಸಲ ಹೇಳಿರುತ್ತೇನೆ. ಬ್ರಾಹ್ಮಣನೂ ಹೀಗೆಯೇ. ಕಾಮಕ್ರೋಧಗಳಿಗೆ ವಶನಾಗಿ ಅವನು ಮೆಲ್ಲಮೆಲ್ಲಗೆ ಬ್ರಾಹ್ಮಣ್ಯದಿಂದ ಜಾರಿಬಿದ್ದಿರುತ್ತಾನೆ. ರಜೋಗುಣವು ಇವನ ಮೇಲೆ ಕುಳಿತು ಸವಾರಿಮಾಡುತ್ತಿದೆ, ಸಮಾಜಕ್ಕೆಲ್ಲ ಆದರ್ಶನಾಗಿದ್ದ ಬ್ರಾಹ್ಮಣನು ಕೆಟ್ಟರೆ ವರ್ಣಾಶ್ರಮಧರ್ಮವನ್ನು ಕಾಪಾಡಿಕೊಡುವವರು ಮತ್ತೆ ಯಾರು ಇರುತ್ತಾರೆ ? ಅವರಿಂದ ಕೆಟ್ಟೆವು, ಇವರಿಂದ ಕೆಟ್ಟೆವು - ಎಂದು ಮತ್ತೊಬ್ಬರನ್ನು ಹಳಿದು ಪ್ರಯೋಜನವಿಲ್ಲ. ಹಿಂದಕ್ಕೆ ತಪ್ಪು, ಮುಂದಕ್ಕೆ ಬುದ್ಧಿ - ಎಂಬಂತೆ ಕೂಡಲೆ ನಾವು ನಾವು ನಮ್ಮ ನಮ್ಮ ಕರ್ಮವನ್ನು ಹಿಡಿಯಬೇಕು. ಬ್ರಾಹ್ಮಣ್ಯವನ್ನು ಕಾಪಾಡಿಕೊಂಡರೆ ವೈದಿಕಧರ್ಮವನ್ನೇ ಕಾಪಾಡಿದಂತೆ ಆಗುತ್ತದೆ, ಇಡಿಯ ಲೋಕವೇ ಉದ್ಧಾರವಾಗುತ್ತದೆ. ಈ ಕಾಲದಲ್ಲಿ ಧರ್ಮವು ಸಾಗುವದಿಲ್ಲ - ಎಂದು ನಾವು ಕುಂಟುನೆಪ ಹೇಳಿಕೊಂಡಿರುತ್ತೇವೆ. ಇದೆಲ್ಲ ಗುಣಗಳ ಪ್ರಭಾವ. ಇವುಗಳನ್ನು

ಮೀರಿದವರಿಗೇ ಗೀತೋಕ್ತಧರ್ಮದ ಸವಿ ತಿಳಿಯುವದು ; ಅವರಿಗೇ ಪರಮಪುರುಷಾರ್ಥವು ವಶವಾಗುವದು.

ಇರಲಿ. ಈಗ ಕ್ಷತ್ರಿಯನ ಕರ್ಮಗಳು ಯಾವವು, ನೋಡೋಣ :

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥** **18-43**

ಇಲ್ಲಿ ಹೇಳಿರುವ ಶೌರ್ಯಾದಿಗಳಿಗೆ ಧರ್ಮದ ತಳಹದಿ ಇರಬೇಕೆಂಬುದನ್ನು ನೆನಪಿನಲ್ಲಿಡಬೇಕು. ಎಲ್ಲಿಯೋ ನುಗ್ಗಿ ದಬಾದುಬಿಯಿಂದ ಊರುಕೇರಿಗಳನ್ನೂ ಜನರ ಆಸ್ತಿ ಪಾಸ್ತಿಗಳನ್ನೂ ವಶಪಡಿಸಿಕೊಂಡದ್ದು ಶೌರ್ಯವೆನಿಸುವದಿಲ್ಲ. ಶೌರ್ಯವು ಮನಸ್ಸಿನ ಧರ್ಮವಾಗಿರಬೇಕು; ಎಂಥ ಪ್ರಸಂಗದಲ್ಲಿಯೂ ಮನಸ್ಸು ಹೇಡಿಯಾಗಬಾರದು. ಹೇಡಿಯಾದವನು ಕೂಡ ಸಮಯವನ್ನು ಕಾದುಕೊಂಡಿದ್ದು ದೊಡ್ಡದೊಡ್ಡ ಕೆಲಸವನ್ನು ಮಾಡಬಹುದು. ಆದರೆ ಅಷ್ಟುಮಾತ್ರದಿಂದ ಅವನು ಶೂರನೆನಿಸಲಾರನು. ಆದರೂ ನಾವು ಇಂಥ ತೋರಿಕೆಯ ಶೌರ್ಯವನ್ನೇ ಮೆಚ್ಚುತ್ತಿದ್ದೇವೆ. ಈಗ ಮಾತಿನಮಲ್ಲರೇ ಹೆಚ್ಚುತ್ತಿದ್ದಾರೆ. ರಾಜಕಾರಣಿಗಳೆನಿಸುವವರು ಬ್ರಾಡ್‌ಕ್ಯಾಸ್ಟ್ ಮೂಲಕ ತಮ್ಮ ಬಡಾಯಿಕೊಚ್ಚಿ ಕೊಳ್ಳುವದರಿಂದಲೇ ಜನರ ಮೆಚ್ಚುಗೆಯನ್ನು ನಿರೀಕ್ಷಿಸುತ್ತಿದ್ದಾರೆ. ನಿಜವಾಗಿ ನೋಡಿದರೆ ಇಲ್ಲಿ ಹೇಳಿರುವ ಕ್ಷಾತ್ರಶೌರ್ಯವು ಮರೆಯಾಗಿಬಿಟ್ಟಿದೆ. "ನಸ್ವಾಂತಂ ಕ್ಷತ್ರಿಯ ಕುಲಮ್" ಎಂದರೆ ತಾವು ಕ್ಷತ್ರಿಯರೆಂದು ಭಾವಿಸಿಕೊಂಡವರಿಗೆ ಬಹಳ ಸಿಟ್ಟು ಬರುತ್ತದೆ ; ಈಗ ಬ್ರಾಹ್ಮಣ್ಯವಿಲ್ಲವೆಂದರೆ ಬ್ರಾಹ್ಮಣನಾಮಧಾರಿಗಳಿಗೆ ಹೇಗೆ ಮನಸ್ಸಿನಲ್ಲಿ ನೋವಾಗುವದೋ ಹಾಗೆಯೇ ಅವರಿಗೂ ನೋವಾಗಬಹುದು. ಆದರೇನು ? ನಿಜವಾದ ಬ್ರಾಹ್ಮಣ್ಯವು ಸತ್ತಿರುವಂತೆ ಕ್ಷಾತ್ರವೂ ಮುಳುಗಿಹೋಗಿದೆ ಎಂಬುದು ನಿಜ.

ತೇಜಸ್ಸೆಂಬುದು ಉತ್ಸಾಹದ ಪೂರ್ವರೂಪವು. ಧೃತಿ ಎಂದರೆ ಧರ್ಮದ ನಡೆಯಲ್ಲಿ ಶರೀರೇಂದ್ರಿಯಗಳ ಮನಸ್ಸುಗಳನ್ನು ಎತ್ತಿಹಿಡಿದಿರುವ ಶಕ್ತಿ. ಅಧಿಕಾರ, ಶರೀರಬಲ - ಮುಂತಾದವುಗಳಿಗೂ ಧೃತಿಗೂ ಸಂಬಂಧವಿಲ್ಲ. ಜನರು ರಾಜರುಗಳ ಮೇಲೆ ತಿರುಗಿಬಿದ್ದಾಗ ಫ್ರೆಂಚ್ ರೆವುಲ್ಯೂಷನ್ ಮುಂತಾದ ಕ್ರಾಂತಿಗಳಲ್ಲಿ ರಾಜರುಗಳೂ ದೊಂಬಿಗಾರರ ಕೂಗಿಗೆ ಬೆದರಿದರೆಂಬುದು ಲೋಕವಿದಿತವಾಗಿರುತ್ತದೆ. ಗಾಂಧಿಯವರ ದರ್ಶನಮಾತ್ರದಿಂದ ದೊಡ್ಡ ದೊಡ್ಡ ಬ್ರಿಟಿಷ್ ಅಧಿಕಾರಿಗಳೂ ಧೃತಿಗೆಟ್ಟದ್ದು ನಮಗೆಲ್ಲರಿಗೂ ತಿಳಿದಿದೆ. ಅರ್ಜುನನ ಗಾಂಡೀವಧ್ವನಿಯನ್ನು ಕೇಳಿದರೆ ಕೌರವರ ಎದೆ ನಡುಗುತ್ತಿತ್ತೆಂದು ವ್ಯಾಸರು ವರ್ಣಿಸಿರುತ್ತಾರೆ. ಧರ್ಮದ ಬೆಂಬಲವುಳ್ಳ ಧೃತಿಯ ಮುಂದೆ ಅಧರ್ಮವನ್ನನುಸರಿಸುವವರಿಗೆ ಎದೆ ಕಳಚುತ್ತದೆ ಎಂಬುದು ಸ್ವಾಭಾವಿಕ. ಒಬ್ಬ ಧನಿಕನಲ್ಲಿ ಒಬ್ಬ ಧರ್ಮಪ್ರಚಾರಕನು ಸಹಾಯವನ್ನು ಬೇಡುವದಕ್ಕೆ ಬಂದನು ; ಧನಿಕ ಮಹಾಶಯನು 'ಇರಲಿ, ನೋಡೋಣ' ಎಂದು ರಾಗವನ್ನು

ಎಳೆದನು. ಆತನು ಮುಂದೆ ಸಹಾಯಮಾಡಬಹುದೆಂಬ ಸೂಚನೆಯೂ ಇತ್ತು. ಈ ಪ್ರಚಾರಕನು ಆ ಹಣವಂತನನ್ನು ಬಿಟ್ಟುಬರುವಾಗ "ನನ್ನ ವಿಷಯವನ್ನು ತಮ್ಮ ಎದುರಿಗೆ ಇಟ್ಟಿರುತ್ತೇನೆ. ಇದಕ್ಕೆ ಸಹಾಯಮಾಡಿದರೆ ತಮಗೇ ಕೀರ್ತಿ. ತಾವು ಏನಾದರೂ ಕೊಟ್ಟರೂ ಕೊಡದಿದ್ದರೂ ಕೆಲಸವು ಮಾತ್ರ ನಿಲ್ಲುವದಿಲ್ಲ, ನಾನು ಯಾವ ಸ್ಥಲವೂ ಸಿಕ್ಕದಿದ್ದರೆ ಒಂದು ಮರದ ಕೆಳಗಾದರೂ ಕುಳಿತು ನನ್ನ ಕೆಲಸವನ್ನು ನಡೆಸುತ್ತೇನೆ, ಇದು ನಿಶ್ಚಯ !" ಎಂದನು. ಇಂಥ ಧೃತಿಯು ಆತನಿಗೆ ಎಲ್ಲಿಯದು ? ಅವನು ಅವಲಂಬಿಸಿದ್ದ ಧರ್ಮವಲ್ಲವೆ? ದೇವತೆಗಳೆಲ್ಲರನ್ನು ಗೆದ್ದು ತನ್ನ ದುರ್ಗದಲ್ಲಿ ಸೈನ್ಯದ ರಕ್ಷಣೆಯಲ್ಲಿದ್ದ ರಾವಣನಿಗೂ ರಾಮನು ಸಮುದ್ರವನ್ನು ದಾಟಿದನು ಎಂದು ಕೇಳಿದ ಮಾತ್ರದಿಂದ ಧೈರ್ಯವು ತಪ್ಪಿತು. ಇದು ಅಧರ್ಮದ ಫಲವೆಂದು ಹೇಳುವದಕ್ಕೆ ತಡವಾಗುವದೇ?

ದಾಕ್ಷ್ಯವೆಂದರೆ ತತ್ಕಾಲದಲ್ಲಿ ಹೊರಮೂಡಿದ ಪ್ರತ್ಯುತ್ಪನ್ನಮತಿತ್ವದಿಂದ ಸಮಯೋಚಿತವಾಗಿ ಪ್ರವರ್ತಿಸುವದು. ಹಕ್ಕಿಗಳ ಮರಿಗಳಿಗೆ ಹಾರುವ ಶಕ್ತಿ ಬಂದ್ಕಕೂಡಲೆ, ರೆಕ್ಕೆಗಳು ಬಿಚ್ಚಿಕೊಳ್ಳುವಂತೆ ತತ್ತತ್ಕಾಲಕ್ಕೆ ಉಚಿತವಾದ ಆಲೋಚನೆ, ಮಾತು, ಕೆಲಸ - ಇವುಗಳನ್ನು ತಟ್ಟನೆ ತೋರಿಸಿಕೊಳ್ಳುವ ಶಕ್ತಿಯೇ ದಾಕ್ಷ್ಯವು. ಇದು ಕಲಿತುಕೊಂಡದ್ದಲ್ಲ. ಇದಕ್ಕೆ ಧರ್ಮದ ಬೆಂಬಲವುಬೇಕು. ಅಧರ್ಮದ ದಕ್ಷತೆಯು ಧರ್ಮದ ಎದುರಿಗೆ ಕುಗ್ಗುವದು. ಕರ್ಣನ ದಕ್ಷತೆಯು ಕೃಷ್ಣಾರ್ಜುನರ ಎದುರಿಗೆ ಕುಸಿದುಬಿತ್ತು. ದುರ್ಯೋಧನನು ಬಹಳ ದೀರ್ಘವಾಗಿ ಆಲೋಚನೆಮಾಡಿ ಘೋಷಯಾತ್ರೆಗೆ ಹೊರಟು ಗಂಧರ್ವರಿಗೆ ಸೆರೆ ಸಿಕ್ಕಿದನು; ಧರ್ಮರಾಯನು ಕೂಡಲೆ ತನ್ನ ತಮ್ಮನ ಮೂಲಕವಾಗಿ ಅವನನ್ನು ಬಿಡಿಸಿಕೊಟ್ಟನು. ಇಲ್ಲಿ ಧರ್ಮಾಧರ್ಮಗಳ ಹಿನ್ನೆಲೆಯ ದಕ್ಷತೆಯ ತಾರತಮ್ಯವು ಸ್ಫುಟವಾಗಿ ಕಾಣುತ್ತದೆ.

ಯುದ್ಧದಲ್ಲಿ ಓಡದೆ ಇರುವದು. ಇದಕ್ಕೆ ಧೈರ್ಯವೊಂದೇ ಅಲ್ಲದೆ ಕ್ಷಾತ್ರಧರ್ಮದ ಬೆಂಬಲವೂ ಬೇಕು. ದ್ರೋಣಕರ್ಣಾದಿಗಳು ಕಟ್ಟಿದ್ದ ಚಕ್ರಭೀಮನ ಕೋಟೆಯನ್ನು ಹೊಕ್ಕು ಅದರೊಳಗೆ ಸಿಕ್ಕಿದರೂ ಎದೆಗುಂದದೆ ಸಾಹಸದಿಂದ ಕಾದಾಡಿ ವೀರಸ್ವರ್ಗವನ್ನು ಪಡೆದ ಅಭಿಮನ್ಯುವಿನ ಕೆಚ್ಚೆದೆಯನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಈಚಿನ ಇತಿಹಾಸದಲ್ಲಿಯೂ ಇಂಥ ಉದಾಹರಣೆಗಳು ಅಲ್ಲಲ್ಲಿ ಸಿಕ್ಕುತ್ತವೆ.

ದಾನವೆಂಬುದು ಮತ್ತೊಂದು ಕ್ಷತ್ರಿಯಸ್ವಭಾವ. ಬಂದವರಿಗೆಲ್ಲ ಏನೋ ಒಂದಿಷ್ಟು ಕೊಡುವದು ದಾನವಾಗಲಾರದು. ಕೊಡತಕ್ಕದ್ದನ್ನು ಪಾತ್ರನಾದವನಿಗೆ ಹಿಡಿತವಿಲ್ಲದೆ ಕೊಡುವದೇ ನಿಜವಾದ ದಾನವು. "ದಾನದಲ್ಲಿ ಕರ್ಣ" ಎಂಬ ಗಾದೆಯು ಈಗಲೂ ಸುಪ್ರಸಿದ್ಧವಾಗಿದೆ. ಕ್ಷತ್ರಿಯನಾದವನು ಪಾತ್ರನಾದವನಿಗೆ ಇಷ್ಟವಾದದ್ದನ್ನು ಹಿಂದುಮುಂದೆ ನೋಡದೆ ವಾಗ್ದಾನಮಾಡಿ ನೆರವೇರಿಸಿದರೆ ಅದೊಂದು ಉತ್ತಮವಾದ ದಾನವು. ದುಂದುವೆಚ್ಚಮಾಡುವವರು ಇರಬಹುದು, ಜಿಪುಣರೂ ಇರುತ್ತಾರೆ. ಆದರೆ ಯೋಗ್ಯವಾದ

ದಾನವನ್ನು ಮಾಡುವವರೂ ದಾನಿಗಳಿಗೆ ಶ್ರೇಯಸ್ಸನ್ನು ಕೋರುವ ಪ್ರತಿಗ್ರಹವನ್ನು ಮಾಡುವವರೂ ಬಹಳ ಕಡಿಮೆ. ಹಿಂದಕ್ಕೆ ಸಮರ್ಥ ರಾಮದಾಸರು ಒಮ್ಮೆ ಭಿಕ್ಷೆಗೆ ಬಂದಾಗ ಛತ್ರಪತಿ ಶಿವಾಜಿಯು "ರಾಜ್ಯವನ್ನೆಲ್ಲ ಕೊಟ್ಟಿದ್ದೇನೆ" ಎಂದು ಒಂದು ಚೀಟಿಯನ್ನು ಬರೆದು ಅವರ ಜೋಳಿಗೆಯೊಳಕ್ಕೆ ಹಾಕಿದನಂತೆ. ಆದರೆ ಸಮರ್ಥರು "ಅಪ್ಪ, ಈ ಚೀಟಿಯ ದಾನಬೇಡ, ಇಂಥ ಪ್ರಾಂತ್ಯದಲ್ಲಿ ನಮಗೊಂದು ವಾಸಸ್ಥಳವನ್ನು ಮಾಡಿಕೊಡು" ಎಂದು ಕೇಳಿದರಂತೆ. ಆ ಪ್ರಾಂತ್ಯವು ಆಗ್ಗೆ ಮೊಗಲರ ವಶದಲ್ಲಿತ್ತು. ಶಿವಾಜಿಯು ಹಿಂದುಮುಂದು ನೋಡದೆ ಧಾಳಿಯಿಟ್ಟು ಅದನ್ನು ವಶಪಡಿಸಿಕೊಂಡು ರಾಮದಾಸರಿಗೆ ದಾನಮಾಡಿಬಿಟ್ಟನಂತೆ ! ಅದೇ ಈಗಿರುವ "ಸಜ್ಜನಘಡ"ವೆಂಬ ಸ್ಥಾನವು.

ಈಶ್ವರಭಾವವೆಂದರೆ ಎಲ್ಲೆಲ್ಲಿಯೂ ಸ್ವಾತಂತ್ರ್ಯಭಾವನೆ. ಯಾರಿಗೆ ಇಂಥ ಭಾವನೆಯಿರುವದೋ ಅವರೇ ಪ್ರಭುಗಳಾಗುವದಕ್ಕೆ ತಕ್ಕವರು. ಯಾವ ಕಾರಣದಿಂದಲೂ ತನ್ನ ಸ್ವಾತಂತ್ರ್ಯಕ್ಕೆ ಕುಂದು ತರುವದನ್ನು ಒಪ್ಪಬಾರದು. ಶಿವಾಜಿಯು ಔರಂಗಜೇಬನ ದರ್ಬಾರಿಗೆ ಹೋದಾಗ ಅವನಿಗೆ ಒಂದು ಸಾಮಾನ್ಯ ಸ್ಥಾನವನ್ನು ಏರ್ಪಡಿಸಿದ್ದರಂತೆ; ಆದರೆ ಅವನು ತನಗೆ ಮನ್ನಣೆಯಿಲ್ಲದೆಡೆಯಲ್ಲಿ ತಾನು ಇರಲಾರೆನೆಂದು ಸ್ಪಷ್ಟವಾಗಿ ಅಲ್ಲಿಯೂ ನುಡಿದುಬಿಟ್ಟನಂತೆ ! ಕೆಲವು ರಾಜರ ಆಸ್ಥಾನಗಳಲ್ಲಿ ವಿದ್ವಾಂಸರುಗಳಾದ ಬ್ರಾಹ್ಮಣರು ವಿಶೇಷಕಾಲಗಳಲ್ಲಿ ಅರಸರಿಗೆ ಆಶೀರ್ವಾದವನ್ನು ಮಾಡುವ ಪದ್ಧತಿಯಿತ್ತು. ಆದರೆ ಕಾಲಗುಣದಿಂದ ಅವರು ರಾಜರಿಗೆ ಆ ಕಾಲಕ್ಕೆ ತಲಬಾಗಿ ನಮಸ್ಕರಿಸುವ ಪದ್ಧತಿಯನ್ನು ಯಾರೋ ಅಸೂಯಾಪರರು ಏರ್ಪಡಿಸಿಬಿಟ್ಟರು. ಬ್ರಾಹ್ಮಣರು ತಮಗೆ ಸಿಕ್ಕುವ ಧನಾದಿಗಳ ಆಶೆಯಿಂದ ಈ ಪದ್ಧತಿಗೂ ಒಪ್ಪಿದರು ! "ನಾವು ಪ್ರಜೆಗಳಾಗಿ ರಾಜರಿಗೆ ಅವಶ್ಯವಾಗಿ ನಮಸ್ಕರಿಸುತ್ತೇವೆ! ಆದರೆ ಆಶೀರ್ವಾದ ವೇಳೆಯಲ್ಲಿ ಎಂದಿಗೂ ನಮಸ್ಕಾರ ಮಾಡಲಾರೆವು" ಎಂದು ಹೇಳುವ ಈಶ್ವರಭಾವವು ಅವರಿಗೆ ಹುಟ್ಟಲಿಲ್ಲ. ಕ್ಷತ್ರಿಯನಂತೂ ಹೀಗೆ ಎಂದಿಗೂ ತನ್ನ ಈಶ್ವರತ್ವವನ್ನು ಕಳೆದುಕೊಳ್ಳಬಾರದು.

ಇದುವರೆಗೆ ಹೇಳಿರುವ ಶೌರ್ಯತೇಜಾದಿಗಳೆಲ್ಲ ಧರ್ಮದ ಅಡಿಗಟ್ಟಿನ ಮೇಲೆ ನಿಂತಿದ್ದರೆ ಕ್ಷಾತ್ರಧರ್ಮವೆನಿಸುತ್ತದೆ ಎಂಬುದನ್ನು ಮರೆಯದಿರಬೇಕು. ಧರ್ಮಸತ್ಯಗಳನ್ನು ರಕ್ಷಿಸುವದೇ ಕ್ಷತ್ರಿಯನ ಕರ್ತವ್ಯವು ; ಅದರಲ್ಲಿಯೇ ಕ್ಷತ್ರಿಯನಾದವನು ತನ್ನ ಶೌರ್ಯಾದಿಗಳನ್ನು ಪ್ರಕಟಿಸಬೇಕು. ಧರ್ಮೋದ್ಧಾರಕ್ಕೆಂದು ಅಧರ್ಮದ ಮಾರ್ಗವನ್ನು ಹಿಡಿಯುವ ರಾಜ್ಯಾಧಿಪತಿಯಲ್ಲಿ ಯಾವ ಕ್ಷಾತ್ರಧರ್ಮವೂ ಇರಲಾರದು.

ಈಗ ವೈಶ್ಯಕರ್ಮವು ಮತ್ತು ಶೂದ್ರಕರ್ಮವು ಯಾವ ಪ್ರಕಾರದ್ದೆಂಬುದನ್ನು ಭಗವಂತನು ತಿಳಿಸುತ್ತಾನೆ

**ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥** 18-44

ಕೃಷಿ, ಗೋವುಗಳ ರಕ್ಷಣೆ; ವಾಣಿಜ್ಯ - ಈ ಮೂರೇ ವೈಶ್ಯನ ಧರ್ಮಗಳೆಂದು ತಿಳಿಯಬಾರದು ; ಈ ಜಾತಿಯವು ವೈಶ್ಯನ ಕರ್ಮಗಳು ಎಂದು ಅಭಿಪ್ರಾಯ. ಧರ್ಮದ ಆಚರಣೆಯೇ ಬ್ರಾಹ್ಮಣಧರ್ಮ ; ಧರ್ಮದ ಆಚರಣೆ ಮತ್ತು ರಕ್ಷಣೆ - ಇವೇ ಕ್ಷತ್ರಿಯನ ಧರ್ಮ; ಧರ್ಮದ ಆಚರಣೆ ಮತ್ತು ಧನಾರ್ಜನೆ ಇವು ವೈಶ್ಯಧರ್ಮ. ಹೀಗೆಯೇ ಸಾಮಾನ್ಯಧರ್ಮಾಚರಣೆ ಮತ್ತು ಬ್ರಾಹ್ಮಣಾದಿತ್ರೈವರ್ಣಿಕರ ಧರ್ಮಾಚರಣೆಗೆ ಸಹಾಯಕನಾಗಿರುವದು - ಇವು ಶೂದ್ರನ ಧರ್ಮಗಳು.

ಇಲ್ಲಿ ಬ್ರಾಹ್ಮಣನೆನಿಸಿಕೊಂಡವನಲ್ಲಿ ಶಮ, ದಮ - ಇಂಥ ಧರ್ಮಗಳು ಇರುತ್ತವೆ ಎಂದೇನೂ ಅರ್ಥವಲ್ಲ ; ಇಂಥ ಧರ್ಮಗಳಿದ್ದರೇ ಬ್ರಾಹ್ಮಣನು ಎಂದರ್ಥ. ಹೀಗೆಯೇ ಕ್ಷತ್ರಿಯವೈಶ್ಯರನ್ನೂ ಶೂದ್ರನನ್ನೂ ತಿಳಿಯಬೇಕು. ಆದ್ದರಿಂದಲೇ ಜಾತಿಬ್ರಾಹ್ಮಣನಲ್ಲಿ ಶೂದ್ರನ ಧರ್ಮವಿದ್ದರೆ ಅವನು ಶೂದ್ರನೆಂದೇ ಎಣಿಸಬೇಕು; ಜಾತಿಶೂದ್ರನಲ್ಲಿ ಬ್ರಾಹ್ಮಣಧರ್ಮಗಳಿದ್ದರೆ ಅವನನ್ನು ಬ್ರಾಹ್ಮಣನೆಂದೇ ಗೌರವಿಸಬೇಕು - ಎಂಬ ವಚನವು ಭಾರತದಲ್ಲಿ ಸಿಕ್ಕುತ್ತದೆ.

"ಕೃಷಿತೋ ನಾಸ್ತಿ ದುರ್ಭಿಕ್ಷಮ್" ಕೃಷಿಯಿಂದ ಎಂದಿಗೂ ದುರ್ಭಿಕ್ಷವಿಲ್ಲ ಎಂಬ ಅಭಿಯುಕ್ತೋಕ್ತಿಯು ನಮ್ಮ ದೇಶದಲ್ಲಿತ್ತು. ಈಗ ಅದೇ ಕೃಷಿಯು ಇಲ್ಲಿ ಯಾರಿಗೂ ಬೇಡವಾಗಿದೆ. ಮೇಲಿನ ವರ್ಣದವರು ಕೆಳಗಿನ ವರ್ಣದವರೇ ಮಾಡಲಿ ಎಂದೂ, ಕೆಳಗಿನವರು ಮೇಲಿನವರೇ ಮಾಡಲಿ ಎಂದೂ ಪೈಪೋಟಿಯ ಭಾವನೆಯನ್ನು ಬೆಳೆಯಿಸಿಕೊಳ್ಳುತ್ತಿದ್ದಾರೆ. ಈಗ ಕೃಷಿ ಎಂಬುದು ಜಮೀನಿನ ಯಜಮಾನ, ಕೃಷಿಯನ್ನು ಮಾಡುವ ರೈತ - ಈ ಇಬ್ಬರ ನಡುವಿನ ಕೂಸಾಗಿ ಬಡವಾಗುತ್ತಿದೆ. ವರ್ಷವರ್ಷಕ್ಕೂ ಗುತ್ತಿಗೆಯನ್ನು ಹೆಚ್ಚಿಸಬೇಕೆಂದು ಯಜಮಾನ, ಆದಷ್ಟು ಕಡಿಮೆಮಾಡಿಸಬೇಕೆಂದು ರೈತ - ಹೀಗೆ ಮಾಡುತ್ತಾ ಕೃಷಿಯೆಂಬುದು ಕೃಶವಾಗುವಂತೆ ಮಾಡುತ್ತಿದ್ದಾರೆ. ಕೃಷಿಯಲ್ಲಿ ಇಬ್ಬರಿಗೂ ಮಮತೆಯಿಲ್ಲ, ಇಬ್ಬರೂ ಅಧರ್ಮಿಷ್ಠರೇ. ಕೃಷಿಯು ವೈಶ್ಯನ ಪ್ರಧಾನಧರ್ಮವಾಗಿದ್ದದ್ದು ಮತ್ತೊಬ್ಬರ ಪಾಲಾಗಿ ಎಲ್ಲಿಯೋ ತಟ್ಟಾಡುತ್ತಾ ನಿಂತಿದೆ. ಇಂತಿಷ್ಟೇ ಗುತ್ತಿಗೆಕೊಡಬೇಕು ಎಂಬ ಕಾನೂನನ್ನು ಸರಕಾರದವರು ಬೇಕಾದರೆ ಮುಂದೆ ಯಾವಾಗಲಾದರೂ ಮಾಡಬಹುದು ; ಆಗಲೂ ಭೂಮಿಯ ಯಜಮಾನನಿಗೊ ಅಥವಾ ರೈತನಿಗೊ ಅನ್ಯಾಯವಾಗಬಹುದೇ ಹೊರತು ಕೃಷಿಯೇನೂ ಅಭಿವೃದ್ಧಿಯಾಗಲಾರದು. ಈಗ್ಗೆ ಸರಕಾರದ ಕೃಷಿಶಾಖೆಯ ಮಂತ್ರಿಗಳು ಬೇಸಾಯಗಾರರಿಗೆ ಕೆಲವು ಉಪದೇಶಗಳನ್ನು ಮಾಡಬಹುದು ; ಆದರೆ ಅವರಿಗೆ ಕೃಷಿಯ ಅನುಭವಗಂಧವೂ ಇಲ್ಲವಾದ್ದರಿಂದ ಅದು ಶುಷ್ಕೋಪದೇಶವಾಗಿದೆ. "ಹೆಚ್ಚು ಧಾನ್ಯ ಬೆಳೆಯಿರಿ" ಎಂಬ ಕೂಗು ಎಲ್ಲೆಲ್ಲಿಯೂ ಹೆಚ್ಚುತ್ತಿದೆ ; ಆದರೆ ರೈತನ ಕೈಕೋಳಗಳನ್ನು

ಬಿಡಿಸುವವರು ಯಾರೂ ಇಲ್ಲ. ಈ ಸ್ಥಿತಿಯನ್ನು ನಮ್ಮ ದೇಶದ ವೈಶ್ಯರು ಸನಾತನಾರ್ಯಧರ್ಮದಲ್ಲಿ ಅಭಿಮಾನವಿದ್ದರೆ ಮಾತ್ರ ಸುಧಾರಿಸಬಹುದು. ಜಮೀನು ಸಾಕಾದಷ್ಟು ಇಲ್ಲವೆಂದಾಗಲಿ, ಭೂಮಿಯು ಬೆಳೆಯುವದಿಲ್ಲವೆಂದಾಗಲಿ ಹೇಳುವದಕ್ಕೆ ಬರುವದಿಲ್ಲ. ಹೊಸದಾಗಿ ಭೂಮಿಯನ್ನು ಬೆಳೆಯುವ ಜಮೀನಾಗಿ ಮಾಡುವ ಉತ್ಸಾಹವು ಜನರಿಗಿಲ್ಲ ; ಅಂಥ ಸ್ಥಳವನ್ನು ನಿರ್ದೇಶಿಸಿ ಕೃಷಿಕ್ಷೇತ್ರವನ್ನು ವರ್ಷವರ್ಷಕ್ಕೆ ಹೆಚ್ಚಿಸುವ ಉತ್ಸಾಹಭರಿತವಾದ ಸರಕಾರವೂ ಇಲ್ಲ. ಇದ್ದ ಜಮೀನುಗಳನ್ನು ಪೈಪೋಟಿಯಿಂದ ಬೆಲೆಹೆಚ್ಚಿಸಿ ಒಬ್ಬರಿಂದೊಬ್ಬರು ಸ್ವಾಧೀನಪಡಿಸಿಕೊಳ್ಳುವ, ಸಾಹುಕಾರರು ಇದ್ದಾರೆ ; ಬಗೆ ಬಗೆಯ ಸೆಸ್ಸುಗಳೆಂಬ ಪುಡಿತೆರಿಗೆಗಳನ್ನು ಹಾಕಿ ಭೂಮಿಯ ಕಂದಾಯವನ್ನು ಹೆಚ್ಚಿಸಿಕೊಳ್ಳುವ ಸರಕಾರವೂ ಇದೆ. ಆದರೆ ನಿಜವಾಗಿಯೂ ಕೃಷಿಯನ್ನು ಬಲಪಡಿಸಬೇಕೆಂಬ ಆಶೆ ಯಾರಿಗಿದೆ? ನನಗೆ ತಿಳಿದಂತೆ ಒಬ್ಬ ಸರಕಾರಿ ಉದ್ಯೋಗಸ್ಥರು ರಿಟೈರಾದಮೇಲೆ ಒಂದು ಸರಕಾರಿ ಪಾಲನ್ನು ಕೊಂಡರು. ಅಲ್ಲಿ ಬಹಳ ನೀರು ಹರಿದು ನೆಲ ಜೌಗಾಗಿತ್ತು. ಆದರೆ ಅವರು ಗಿಡಗೆಂಟೆಗಳನ್ನು ಕತ್ತರಿಸಿ ನೆಲವನ್ನು ಸಮಮಾಡಿ, ಬುದ್ಧಿವಂತಿಕೆಯಿಂದ ನೀರೆಲ್ಲ ಒಂದು ಕಡೆಗೆ ಹರಿಯುವಂತೆ ಮಾಡಿಕೊಂಡು ಬಾಳೆಗಿಡ, ಅಡಿಕೆಸಸಿ, ಮುಂತಾದವುಗಳನ್ನು ಅಲ್ಲಿ ಬೆಳೆಯಿಸಿ ಆ ಸ್ಥಳವನ್ನೇ ಒಂದು ಸಣ್ಣ ನಂದನವನವಾಗಿ ಮಾಡಿಕೊಂಡರು. ಮಮತೆಯಿಂದ ಕೆಲಸಮಾಡಿದರೆ ಭೂಮಿ ಯಾರಿಗೂ ವಂಚನೆಮಾಡುವದಿಲ್ಲ. ಆದರೆ ಯಾರಿಗೂ ಮೈನೋಯಿಕೊಳ್ಳುವದಕ್ಕೆ ಇಷ್ಟವಿಲ್ಲ!

**ಗೋರಕ್ಷಣೆ** ಎಂಬ ವೈಶ್ಯಕರ್ಮವೂ ಹೀಗೆಯೇ ಅನಾದರಕ್ಕೆ ಪಾತ್ರವಾಗಿ ಬಿಟ್ಟಿದೆ. ಜನರಿಗೆ ದಿನದಿನದ ಊಟಕ್ಕೇ ಅಲ್ಲದೆ ಕಾಫಿ, ಮಿಠಾಯಿ - ಮುಂತಾದ ಗೌಣಾಹಾರಗಳಿಗೂ ಬಹಳವಾಗಿ ಹಾಲು ಬೇಕಾಗುತ್ತದೆ. ಆದರೆ ಹಾಲು ಬೇಕೆನ್ನುವವರು ಯಾರೂ ಗೋವನ್ನು ಮನೆಯಲ್ಲಿ ಕಟ್ಟುವದಕ್ಕೆ ಇಷ್ಟಪಡುವದಿಲ್ಲ, ಮನೆಯಲ್ಲಿ ಗೋವಿಗೆ ಸ್ಥಳವೇ ಇಲ್ಲ; ಅದಕ್ಕೆ ಹುಲ್ಲು ಸಿಕ್ಕುವದಿಲ್ಲ; ಅದನ್ನು ನೋಡಿಕೊಳ್ಳುವವರು ಯಾರೂ ಇಲ್ಲ- ಎಂದು ಕುಂಟುನೆಪಗಳನ್ನು ಹೇಳಿಕೊಳ್ಳುತ್ತಿದ್ದಾರೆ. ಗಂಡಹೆಂಡಿರು ಇಬ್ಬರೇ ಇರುವ ಮನೆಯಲ್ಲಿ ಒಂದು ಮಗು ಹುಟ್ಟಿದರೆ ಅದಕ್ಕೆ ಸ್ಥಳವಿಲ್ಲ, ಮನೆಯಲ್ಲಿ ಅನುಕೂಲ್ಯವಿಲ್ಲ, ನಮಗೆ ಬಡತನ - ಎಂದು ಯಾರೂ ಅದನ್ನು ಹೊರಕ್ಕೆ ಹಾಕುವದಿಲ್ಲ. ಅಲ್ಲವೆ? ಆದರೆ ಮನೆಗೆ ಬಂದಂದಿನಿಂದ ಬಗೆಬಗೆಯಿಂದ ನಮಗೆ ಉಪಕಾರವನ್ನು ಮಾಡುತ್ತಿರುವ ಗೋವನ್ನು ಇಷ್ಟರಮಟ್ಟಿಗೆ ಯಾರು ಸಾಕುತ್ತಾರೆ ? ಗೋವಿನ ಶರೀರದಲ್ಲಿ ದೇವತೆಗಳೆಲ್ಲ ಅಭಿಮಾನಿಗಳಾಗಿರುತ್ತಾರೆಂದು ಪುರಾಣದಲ್ಲಿದೆ. ಅದನ್ನು ನಮ್ಮ ದೇಶದಲ್ಲಿ ಈಗಲೂ ಪೂಜಿಸುವವರಿದ್ದಾರೆ: ಆದರೆ ಅದನ್ನು ಸರಿಯಾಗಿ ಪೋಷಿಸಿ ದೇಶದ ಸಂಪತ್ತನ್ನೂ ತಮ್ಮ ಅಭ್ಯುದಯವನ್ನೂ ಸಾಧಿಸಿಕೊಳ್ಳುವ ಉದಾರ ಭಕ್ತರು ವಿರಳರಾಗುತ್ತಿದ್ದಾರೆ. ಪೂರ್ವದಲ್ಲಿ ಊರ ಹೊರಗೆ ಗೋವುಗಳಿಗೆಂದು ಬಿಟ್ಟಿದ್ದ ಸರಕಾರಿಯ ಹುಲ್ಲುಗಾವಲುಗಳು ಈಗ ಜಮೀನುಗಳಾಗಿವೆ, ಅಥವಾ ಅಲ್ಲಿಯೂ ಜನರು ಮನೆಮಾರನ್ನು ಕಟ್ಟಿಕೊಂಡು ದನಕರುಗಳಿಗೆ ತಿನ್ನುವದಕ್ಕೆ ಮೇವಾಗಲಿ ಕುಡಿಯುವದಕ್ಕೆ ನೀರಾಗಲಿ ಇಲ್ಲದಂತೆ ಮಾಡಿರುತ್ತಾರೆ. ಈಕಡೆಗೆ ಮುನಿಸಿಪಾಲಿಟಿಗಳೂ ಸರಕಾರದವರೂ

ಹೆಚ್ಚು ಲಕ್ಷ್ಯವಿಡಬೇಕಲ್ಲವೆ? ಇದಕ್ಕೆಲ್ಲ ವೈಶ್ಯರು ಮುಂದಾಳುಗಳಾಗಿ ಬರಬೇಕಾಗಿದೆ. ಕೃಷಿಯೂ ಗೋರಕ್ಷಣೆಯೂ ವನಸಿಂಹನ್ಯಾಯದಿಂದ ಒಂದಕ್ಕೊಂದು ಪರಿಪೋಷಕವಾಗಿರುತ್ತದೆ. ಇವೆರಡೂ ವೈಶ್ಯನ ಫಲಸಂಪತ್ತನ್ನು ಹೆಚ್ಚಿಸುತ್ತವೆ ; ಅವನ ವಾಣಿಜ್ಯಕ್ಕೂ ನೆರವಾಗುತ್ತವೆ.

ಈಗ ವಾಣಿಜ್ಯದ ವಿಚಾರವನ್ನು ಮಾಡೋಣ. ವಾಣಿಜ್ಯವೆಂದರೆ ಅಗ್ಗವಾಗಿರುವ ಕಡೆಯಿಂದ ಸಾಮಾನುಗಳನ್ನು ಜನರಿಗೆ ಬೇಕಾಗಿರುವ ಕಡೆಗೆ ಸಾಗಿಸಿ ಅದಷ್ಟು ಕಡಿಮೆಯ ಲಾಭದಿಂದ ಮಾರುವದು. ಕೃಷಿಗೋರಕ್ಷಣಗಳಿದ್ದರೆ ಈ ಕೆಲಸಕ್ಕೆ ಎಷ್ಟು ಸಹಾಯವಾದೀತೆಂಬುದನ್ನು ಹೇಳಬೇಕಾದದ್ದೇ ಇಲ್ಲ. ತಾನೇ ಬೆಳೆದ ಧಾನ್ಯಾದಿಗಳನ್ನು ತನ್ನದೇ ಆದ ಬಂಡಿಗಳ ಮೇಲೆ ಸಾಗಿಸಿ ಜನರಿಗೆ ಒದಗಿಸುತ್ತಿದ್ದ ವೈಶ್ಯನು ಕೇವಲ ಉದರಂಭರಿಯಾಗಿದ್ದನೆಂದು ಹೇಳುವದಕ್ಕೆ ಬರುವದಿಲ್ಲ. ಶರೀರದಲ್ಲಿ ಸಮಾನವಾಯುವಿನಂತೆ ಅವನು ಸಮಾಜಕ್ಕೆ ಬೇಕಾದ ಸಾಮಗ್ರಿಗಳನ್ನು ಸಮನಾಗಿ ಹಂಚುವ ಅತ್ಯಾವಶ್ಯಕಸಾಧನವಾಗಿರುತ್ತಿದ್ದನು. ಈಗ್ಗೆ ಬೆಳೆಯುವವರಿಗೆ ಮೋಸಮಾಡಿ, ಇರುವ ಸಾಮಾನನ್ನು ಬಚ್ಚಿಟ್ಟು ಯಾರಿಗೂ ಇಲ್ಲವೆನ್ನಿಸಿ, ತಾನು ಕೇಳಿದಷ್ಟು ಬೆಲೆಗೆ ಜನರು ಕೊಂಡುಕೊಳ್ಳುವಂತೆ ಮಾಡುವ ಕೊಳ್ಳೆ ಹೊಡೆಯುವ ವಿದ್ಯೆಯೇ ವಾಣಿಜ್ಯವಾಗಿಬಿಟ್ಟಿದೆ. ಇದು ನಿಜವಾಗಿ ವ್ಯಾಪಾರವೇ ಅಲ್ಲ. "ವ್ಯಾಪಾದೋ ದ್ರೋಹಚಿನ್ತನಮ್" ಎಂಬ ಕೋಶವನ್ನು ಯಾರೋ ಹಾಸ್ಯಕ್ಕಾಗಿ "ವ್ಯಾಪಾರೋ ದ್ರೋಹಚಿನ್ತನಮ್" ಎಂದು ಮಾರ್ಪಡಿಸಿದ್ದು ಈಗಿನ ವಾಣಿಜ್ಯವ್ಯಾಪಾರಕ್ಕೆ ಚೆನ್ನಾಗಿ ಅನ್ವಯಿಸುತ್ತಿದೆ. ತನ್ನಲ್ಲಿರುವ ಸರಕನ್ನು ವರ್ತಮಾನಪತ್ರಿಕೆಗಳಲ್ಲಿ ಹಾಡಿ ಹೊಗಳಿಕೊಳ್ಳುವ ಪ್ರಕಟನೆಗಳಿಂದ ಬಣ್ಣಿಸುವದು, ದಲ್ಲಾಳಿಗಳಿಗೆ ನಡುವೆ ಕಮಿಷನ್ ಎಂಬ ಹೆಸರಿನಿಂದ ಲಂಚಕೊಡುವದು, ಈ ಎಲ್ಲಾ ಖರ್ಚು ಕಳೆದಮೇಲೂ ತನಗೆ ರೂಪಾಯಿಗೆ ನಾಲ್ಕಾಣೆಯಮೇಲೆಯೇ ಗಿಟ್ಟುವಂತೆ ಹೆಚ್ಚಿನ ಬೆಲೆಯನ್ನಿಡುವದು ಇವೆಲ್ಲ ನಾವು ಪಾಶ್ಚಾತ್ಯರ ಸಂಸರ್ಗದಿಂದ ಕಲಿತುಕೊಂಡ ಕುಚೇಷ್ಟೆಗಳು. ಜನರ ಸೇವೆಯನ್ನು ಮಾಡಿ ನ್ಯಾಯವಾದ ಲಾಭವನ್ನು ಪಡೆಯುವದು ತಪ್ಪಲ್ಲ, ಅದು ಯುಕ್ತವೇ ಆಗಿದೆ. ಆದರೆ ಶೀಘ್ರವಾಗಿ ಲಕ್ಷಾಧಿಪತಿಯಾಗಬೇಕೆಂಬ ದುರಾಶೆಯಿಂದ ಮೋಸದ ವ್ಯಾಪಾರ ನಡೆಯಿಸುವದು ಇಹಪರಸೌಖ್ಯಗಳ ನಾಶಕ್ಕೆ ಸಂಚಕಾರವೆಂಬುದನ್ನು ನಾವು ಮರೆಯದಿರಬೇಕು.

ವರ್ಣತ್ರಯದವರ ಧರ್ಮಗಳನ್ನು ಹೇಳಿದ್ದಾಯಿತಷ್ಟೆ. ಶೂದ್ರನ ಧರ್ಮವು ಪರಿಚರ್ಯೆ ಎಂದಿಷ್ಟೇ ಹೇಳಿರುವದನ್ನು ಕಂಡು ನಿಜವನ್ನು ತಿಳಿಯುವ ಸಾಮರ್ಥ್ಯವಿಲ್ಲದವನು "ಅಯ್ಯೋ, ಶೂದ್ರನು ಎಂದೆಂದಿಗೂ ದಾಸನಾಗಿರುವದೇ ಧರ್ಮವೆಂದಿದಾರಲ್ಲ!"- ಎಂದು ಶೋಕಿಸುವದುಂಟು. ಆದರೆ ಇದು ತತ್ತ್ವವನ್ನು ತಿಳಿಯದ್ದರ ದೋಷ. ಏಕೆಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ - ಇವರಿಗೆ ಮತ್ತೊಬ್ಬರ ಸಹಾಯವಿಲ್ಲದೆ ಯಾವ ಕರ್ಮವನ್ನೂ ಮಾಡುವದಕ್ಕೆ ಬರುವದೇ ಇಲ್ಲ. ಕಾಲಿಲ್ಲದೆ ಶರೀರವು ಹೇಗೆ ನಿಂತುಕೊಳ್ಳಲಾರದೋ ಹಾಗೆ

ಶೂದ್ರನ ನೆರವಿಲ್ಲದೆ ಸಮಾಜವೇ ನಿಲ್ಲಲಾರದು. ಶೂದ್ರನು ಮೈಮುರಿದು ದುಡಿಯದಿದ್ದರೆ ಯಾವ ಕೃಷಿಯಾಗಲಿ, ವಾಣಿಜ್ಯವಾಗಲಿ, ದೇಶದ ನೆಮ್ಮದಿಯಾಗಲಿ, ನಾವು ಎಷ್ಟು ಪ್ರಯತ್ನಿಸಿದರೂ ಸಿದ್ಧಿಸಲಾರದು. ಕೈಗಾರಿಕೆಯೇ ಮುಂತಾದ ಕೆಲಸಗಳೂ ಶೂದ್ರನ ಪಾಲಿಗೇ ಬರುವವು. ಶೂದ್ರನನ್ನು ಪೋಷಿಸಿಕೊಂಡು ಅವನನ್ನು ಮನೆಯ ಮಗನಂತೆ ಕಾಪಾಡಿಕೊಂಡು ಬರುವದು ವರ್ಣತ್ರಯದವರ ಕರ್ತವ್ಯವೆಂಬುದು ಸ್ಮೃತಿಕಾರರ ಅಭಿಪ್ರಾಯ. ಇದನ್ನರಿಯದೆ ಶೂದ್ರನನ್ನು ಕೆಳಕ್ಕೆ ತುಳಿಯುವದೇ ಮೇಲಿನ ವರ್ಣದವರ ಕರ್ತವ್ಯವೆಂದು ಅನೇಕರು ಭ್ರಮೆಗೊಳಗಾಗಿರುತ್ತಾರೆ.

ಇಂಥ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರರು ಹೆಚ್ಚಿನ ಸಂಖ್ಯೆಯಲ್ಲಿಲ್ಲದಿದ್ದರೂ ಮಿತಸಂಖ್ಯೆಯಲ್ಲಾದರೂ ಇದ್ದರೆ ಜಗತ್ತಿಗೆ ಕಲ್ಯಾಣವಾದೀತು. ಜಗತ್ತು ಉದ್ಧಾರವಾಗಬೇಕಾದರೆ ಧರ್ಮದಿಂದ ಧರ್ಮವನ್ನವಲಂಬಿಸಿರುವ ಸಮಾಜವೊಂದು ಏರ್ಪಟ್ಟರೆ ಜನಕ್ಕೆ ಯಾವ ಕೊರತೆಯಿದ್ದೀತು? ಧರ್ಮಪ್ರಧಾನರಾದ ಬ್ರಾಹ್ಮಣರೇ ಮುಂತಾದವರಿಗೆ ವ್ಯವಹಾರದೃಷ್ಟಿಯಿಂದ ಸ್ವತ್ತು ಕಡಿಮೆಯಾಗಿರಬಹುದು ; ಅಂದರೆ ಆಸ್ತಿಯೂ ಹಣವೂ ಮಿಕ್ಕವರಷ್ಟು ಅವರಲ್ಲಿ ಕೂಡದೆ ಇರಬಹುದು. ಆದರೆ ಧರ್ಮ, ತೃಪ್ತಿ, ಜನರ ವಿಶ್ವಾಸ - ಇವೆಲ್ಲ ಅವರ ಆಸ್ತಿಯಾಗಿರುವದು. ಅವರ ಯಶಸ್ಸು ಶಾಶ್ವತವಾಗಿ ನಿಲ್ಲುವದು. ಇಲ್ಲಿ ಗಾಂಧಿಯವರನ್ನು ಉದಾಹರಿಸಬಹುದು. ಲೌಕಿಕದೃಷ್ಟಿಯಿಂದ ಅವರು ತಮ್ಮ ಸಂಸಾರವನ್ನು ಕಾಪಾಡಿಕೊಳ್ಳಲಿಲ್ಲ ; ಬ್ಯಾರಿಸ್ಟರ್ ಪರೀಕ್ಷೆಯಲ್ಲಿ ಉತ್ತೀರ್ಣರಾದದ್ದಕ್ಕೆ ಕಕ್ಷಿದಾರರಿಂದ ಹೇರಳವಾಗಿ ಹಣವನ್ನು ಸುಲಿದುಕೊಂಡು ಹಣಗಾರರೂ ಆಗಲಿಲ್ಲ. ಆದರೆ ಅವರ ಧರ್ಮದ ನಡೆಯು ಇಡೀ ಭೂಮಂಡಲವನ್ನೇ ಅವರ ಕಡೆಗೆ ಒಲಿಯುವಂತೆ ಮಾಡಿತು. ಎಲ್ಲರ ದೃಷ್ಟಿಯೂ ಅವರ ಕಡೆಗೆ ತಿರುಗಿತು.

ಇಂಥ ಸಮಾಜವು ಈಗ್ಗೆ ಬರಿಯ ಧ್ಯೇಯವಾಗಿ ಉಳಿದುಕೊಂಡಿದೆ. ಈಗ್ಗೆ ಎಲ್ಲೆಲ್ಲೆಯೂ ಪೈಪೋಟಿ, ದಿಟ್ಟತನ, ಅಧಿಕಾರಿಗಳಮೇಲೂ ಗುರುಹಿರಿಯರು ಮುಂತಾದವರ ಮೇಲೂ ತಿರುಗಿಬೀಳುವದು, ಇರುವ ಸಮಾಜದ ಕಟ್ಟನ್ನು ಮುರಿಯುವದು, ಹೊಸ ಹೊಸ ಪ್ರಯೋಗಗಳಿಂದ ಹೊಸ ಸಮಾಜವೊಂದನ್ನು ನಿರ್ಮಾಣಮಾಡುವೆನೆಂದು ಬಡಾಯಿಕೊಚ್ಚಿಕೊಳ್ಳುವದು, ಜನರಿಗೆ ಆಂತಕವನ್ನೊಡ್ಡುವ ಕೃತ್ಯಗಳನ್ನೇ ಮಾಡುತ್ತಿರುವದು - ಇವುಗಳು ಹೆಚ್ಚುತ್ತಿವೆ. ಆದರೂ ಶಾಂತರಾಗಿ ವಿಮರ್ಶಿಸುವವರಿಗೆ ಉಳಿದಿರುವದು ಎರಡೇ ಗುರಿಗಳು. ತ್ರಿಗುಣಗಳನ್ನು ಮೀರಿ ಎಲ್ಲರ ಆತ್ಮನಾಗಿರುವ ಸಾಕ್ಷಿಚೈತನ್ಯಸ್ವರೂಪನಾದ ಪರಮಾತ್ಮನಲ್ಲಿ ಸೇರಿರುವದು ಒಂದು ; ಅಥವಾ ಮೂರು ಗುಣಗಳಲ್ಲಿ ಉತ್ತಮವಾಗಿರುವ ಸಾತ್ತ್ವಿಕಗುಣವನ್ನು ಅವಲಂಬಿಸಿದ ನಡೆನುಡಿಗಳನ್ನೂ ಆಲೋಚನೆಗಳನ್ನೂ ಬೆಳೆಯಿಸಿಕೊಂಡು ತನ್ನ ಮತ್ತು ನೆರೆಯವರ ಕಲ್ಯಾಣಕ್ಕೆ ಸಾಧನವಾಗುವದು ಇನ್ನೊಂದು.

❖ ❖ ❖

# ೧೮೬. ಕರ್ಮಯೋಗವೂ ಅದರಿಂದ ದೊರಕುವ ಪುರುಷಾರ್ಥವೂ 18 - (45-46)

(17-9-50)

ಕರ್ಮವಿಶೇಷವಾದ ವರ್ಣಾಶ್ರಮಧರ್ಮಗಳನ್ನು ತಿಳಿಸಿದ್ದಾಯಿತು. ವರ್ಣಾಶ್ರಮ ವಿಭಾಗವೆಂಬುದು ನಮ್ಮ ದೇಶಕ್ಕೇ ಅಸಾಧಾರಣವಾದದ್ದು. ಈ ವಿಭಾಗವು ಈಗ ನಷ್ಟವಾಗಿಹೋಗಿಬಿಟ್ಟಿದೆ; ಮತ್ತೆ ಮೊದಲು ಇದ್ದ ಸ್ಥಿತಿಗೆ ಬರುವಂತೆ ಇದನ್ನು ಪುನರುಜ್ಜೀವನ ಮಾಡುವದು ಅಸಾಧ್ಯವೆಂದೇ ಈಗ್ಗೆ ತೋರುತ್ತಿದೆ. ಆದರೂ ಈ ವಿಂಗಡವು ಮಾನವರಲ್ಲಿ ಇದ್ದೇ ಇರುತ್ತದೆ.

ವರ್ಣಾಶ್ರಮವಿಭಾಗವೆಂಬುದು ಮೂಲತಃ ಜಾತಿಯಿಂದ ಬಂದದ್ದಾಗಿದೆ. ಅಂದರೆ ಬ್ರಾಹ್ಮಣನ ಮಗನು ಬ್ರಾಹ್ಮಣನು, ಕ್ಷತ್ರಿಯನ ಮಗನು ಕ್ಷತ್ರಿಯನು, ವೈಶ್ಯನ ಮಗನು ವೈಶ್ಯನು. ಹೀಗೆಯೇ ಗುರುವಿನಲ್ಲಿ ವಿಧಿವತ್ತಾಗಿ ವೇದಾಧ್ಯಯನಮಾಡುವವನು ಬ್ರಹ್ಮಚಾರಿಯು; ಗುರುವಿನ ಅಪ್ಪಣೆಯನ್ನು ಪಡೆದು ವಿವಾಹಿತನಾಗಿ ವೈದೋಕ್ತಕರ್ಮಗಳನ್ನು ಮಾಡುವವನು ಗೃಹಸ್ಥನು ; ವಯಸ್ಸಾದ ಬಳಿಕ ಮಕ್ಕಳಿಗೆ ಮನೆಯ ವಿಚಾರವನ್ನು ಬಿಟ್ಟುಕೊಟ್ಟು ಕಾಡಿಗೆ ಹೋಗಿ ತಪಸ್ಸಿನಿಂದ ಶರೀರವನ್ನು ಕೃಶಗೊಳಿಸಿಕೊಂಡು ಕಾಲಹಾಕುತ್ತಿರುವವನು ವಾನಪ್ರಸ್ಥನು ; ಸಾಧ್ಯಸಾಧನಗಳಲ್ಲಿ ವಿರಕ್ತನಾಗಿ ಶಮದಮಾದಿಯುಕ್ತನಾಗಿ ತತ್ತ್ವಚಿಂತನೆಯನ್ನು ಮಾಡುತ್ತಲೇ ಕಾಲಕ್ಷೇಪವನ್ನು ಮಾಡುತ್ತಿರುವವನು ಸಂನ್ಯಾಸಿಯು. ಹೀಗೆ ಬೇರೆಬೇರೆಯ ಆಶ್ರಮಗಳನ್ನು ಹೊಂದುವದು ದ್ವಿಜರಿಗೆ ಮಾತ್ರ. ಶೂದ್ರನಾದವನು ಮೇಲುಜಾತಿಯವರ ಸೇವೆಯಿಂದ ಅವರ ಅನುಗ್ರಹದಿಂದ ದೊರೆತ ಧರ್ಮಮಾರ್ಗವನ್ನು ಅರಿತು ಇಹಪರಸೌಖ್ಯಗಳನ್ನು ಹೊಂದತಕ್ಕದ್ದು - ಹೀಗೆ ಇತ್ತು, ಒಂದಾನೊಂದು ಕಾಲದಲ್ಲಿ. ಈಗ ಆ ವ್ಯವಸ್ಥೆಯೆಲ್ಲಾ ಭಗ್ನವಾಗಿರುತ್ತದೆ. ಶತ್ರುಗಳು ಒಡೆದ ಕೋಟೆಯಂತೆ ಇರುವ ವರ್ಣಾಶ್ರಮವಿಭಾಗವು ಹಿಂದಿನದೇ ಆದರೂ ಅದರಲ್ಲಿ ಯಾವದೋ ಒಂದು ಕೊರತೆಯಿರುತ್ತದೆ. ಈ ಕೊರತೆಯನ್ನು ಕಳೆಯುವದಕ್ಕೆ ಗುಣಕೃತವ್ಯವಸ್ಥೆಯನ್ನೂ ನಾವು ಅನುಸರಿಸಬೇಕಾಗಿದೆ.

ವರ್ಣಾಶ್ರಮದ ಆಭಾಸಗಳು ಈಗಲೂ ಇವೆ. ಬ್ರಾಹ್ಮಣರೆಂದುಕೊಂಡಿರುವವರು ಬುದ್ಧಿಜೀವಿಗಳಲ್ಲದೆ ಇಲ್ಲ. ಆದರೆ ಈ ಬುದ್ಧಿಯಲ್ಲಿ ಧರ್ಮದ ಕೊರತೆ ಇದೆ, ಶಮದಮಾದಿಗಳಲ್ಲಿಯೂ ಧರ್ಮವು ಬೆರೆತಿರುವದು, ಇಲ್ಲದಿರುವದು - ಇವುಗಳಿಂದಾದ ಹೆಚ್ಚು ಕಡಿಮೆ ಇರುತ್ತದೆ. ಇದರಂತೆಯೇ ಕ್ಷತ್ರಿಯಾದಿಗಳಲ್ಲಿಯೂ ತಿಳಿಯಬೇಕು. ದಾನವನ್ನು ಕೊಡುವವರಿರಬಹುದು; ಆದರೆ ತುಡುಗರಿಗೂ ಕುಡುಕರಿಗೂ ಹಣವನ್ನು ಕೊಟ್ಟಮಾತ್ರದಿಂದ ದಾನವಾಗಲಾರದು. ಕೃಷಿ, ಗೌರಕ್ಷ್ಯ, ವಾಣಿಜ್ಯ -ಮುಂತಾದವುಗಳೂ ಹೀಗೆಯೇ ; ಅವುಗಳನ್ನು

ತೋರುಗಾಣಿಕೆಯಾಗಿ ಮಾಡುವದು ಬೇರೆ, ಅವು ನನ್ನ ಧರ್ಮವೆಂದು ತಿಳಿದುಮಾಡುವದು ಬೇರೆ. ಧರ್ಮಯುಕ್ತವಾದರೇ ಆಯಾ ವರ್ಣದ ಕರ್ಮವಾದೀತೇ ಹೊರತು, ಬರಿಯ ಕರ್ಮದ ಆಕಾರವಿದ್ದ ಮಾತ್ರದಿಂದ ಆಗಲಾರದು.

ಸಮಾಜರಚನೆಯು ಬೇರೆ ಬೇರೆಯ ಜನಾಂಗದಲ್ಲಿ ಬೇರೆಬೇರೆಯ ತತ್ತ್ವವನ್ನು ಅವಲಂಬಿಸಿರುತ್ತದೆ. ಪಾಶ್ಚಾತ್ಯರಲ್ಲಿ ಧನದ ದೃಷ್ಟಿಯಿಂದ ಸಮಾಜದ ಅಂತಸ್ತನ್ನು ಏರ್ಪಡಿಸಿದೆ. ಧನವು ಒಂದೇ ಪರಿಮಾಣದಲ್ಲಿರುವದಿಲ್ಲವಾದ್ದರಿಂದ ಈ ವ್ಯವಸ್ಥೆಯೂ ಎಲ್ಲಾ ಕಾಲಕ್ಕೂ ಒಂದೇ ಪ್ರಕಾರವಾಗಿರಲಾರದೆಂಬುದು ಸ್ಪಷ್ಟವಾಗಿದೆ. ಕೆಲವರು ಕೈಕಸಬು, ವ್ಯಾಪಾರ - ಇವುಗಳ ದೃಷ್ಟಿಯಿಂದ ಸಮಾಜರಚನೆಯನ್ನು ಮಾಡಬೇಕೆನ್ನುತ್ತಾರೆ; ಯಾವಾಗಲೂ ಕರ್ಮವ್ಯಾಪೃತರಾಗಿ ಗಿರಣಿಗಳಲ್ಲೆ ತಮ್ಮ ಜೀವನವನ್ನು ಮಾಡುತ್ತಿರುವದಕ್ಕೆ ಇರುವ ಅರ್ಹತೆಯ ಮೇಲಿನಿಂದ ಸಮಾಜದಲ್ಲಿ ಅವರವರ ಅಂತಸ್ತನ್ನು ನಿರ್ಣಯಿಸಬೇಕೆಂದು ಅವರ ವಾದವು. ಇನ್ನು ಕೆಲವರು ಕೂಲಿಕಾರರ ದೃಷ್ಟಿಯಿಂದ ಸಮಾಜವ್ಯಕ್ತಿಗಳನ್ನು ಅಳೆಯಬೇಕೆಂದು ಅಭಿಪ್ರಾಯಪಟ್ಟಿರುತ್ತಾರೆ. ನಮ್ಮಲ್ಲಿ ಧರ್ಮಪ್ರಧಾನವಾದ ಸಮಾಜರಚನೆಯಿತ್ತು. ಮನುಷ್ಯರು ಯಾವಾಗಲೂ ತಪ್ಪು ಮಾಡುವದಿಲ್ಲವೆಂದು ಹೇಳುವದಕ್ಕೆ ಬರುವದಿಲ್ಲವಷ್ಟೆ; ಇದರಿಂದ ವ್ಯವಸ್ಥಿತವಾದ ಜಾತಿಗಳಲ್ಲದೆ ಸಂಕರಜಾತಿಯವರೂ ತಲೆದೋರಿದರು. ಆಗ ಆಯಾ ಜಾತಿಯವರಿಗೆ ಇಂಥಿಂಥ ವೃತ್ತಿ ಎಂದು ಏರ್ಪಡಿಸಿ ವರ್ಣಸಂಕರವಾಗದಂತೆ ವ್ಯವಸ್ಥೆಯನ್ನು ಮಾಡುತ್ತಿದ್ದರು. ಯಾವನಿಗೆ ಕಾಮವು ಕಡಿಮೆಯಾಗಿರುವದೋ, ಯಾವನಿಗೆ ಮಮತ್ವಬುದ್ಧಿಯು ಕಡಿಮೆಯೋ ಅವನು ಮಿಕ್ಕವರಿಗಿಂತ ಮೇಲಿನ ಅಂತಸ್ತಿನವನೆಂಬುದು ಆ ಸಮಾಜನಿರ್ಮಾಣಕರ ಮನೋಭಾವ. ಬ್ರಾಹ್ಮಣನು ತನ್ನದೆಂಬ ಆಸ್ತಿಯನ್ನೇ ಇಟ್ಟುಕೊಳ್ಳದ್ದರಿಂದ ಅವನ ಯೋಗಕ್ಷೇಮವನ್ನು ಮಿಕ್ಕ ಮೂರು ವರ್ಣದವರೂ ನೋಡಿಕೊಳ್ಳಬೇಕಾಯಿತು. ಯಾರುಯಾರಿಗೆ ಕಾಮವು ಹೆಚ್ಚೋ ಅವರಿಗೆ ವ್ಯಾಪಾರ, ವ್ಯವಸಾಯ, ಧನ, ರಾಜ್ಯ, ಯಶಸ್ಸು - ಇವೆಲ್ಲ ಬೇಕಾಗುವದು ಸ್ವಾಭಾವಿಕವಾಗಿದೆ. ಇದಕ್ಕಾಗಿ ಅವರಿಗೆ ಜವಾಬುದಾರಿಯ ಕರ್ಮಗಳು ಹೆಚ್ಚಾಗಿರಬೇಕಾದದ್ದೂ ಸ್ವಾಭಾವಿಕವಾಗಿದೆ.

ಹೀಗೆ ಧರ್ಮದ ಹಿನ್ನೆಲೆಯಲ್ಲಿ ರಚಿಸಿಕೊಂಡಿದ್ದ ಆರ್ಯರ ಸಮಾಜಕ್ಕೆ ಮುಸಲ್ಮಾನರ ಧಾಳಿಯಿಂದ ಧಕ್ಕೆಯಾಯಿತು. ನಮ್ಮ ಕರ್ಮವನ್ನೇ ಅರಿಯದವರ ಸಂಪರ್ಕದಿಂದ ನಮ್ಮ ಸಮಾಜದ ದುರ್ಗವು ಅಲ್ಲಲ್ಲಿ ಬಿರುಕುಬಿಟ್ಟುಕೊಂಡಿತು. ಕೊನೆಗೆ ಮುರಿದುಬಿತ್ತು. ಈಗಿನ ಸ್ಥಿತಿಯಲ್ಲಿರುವ ಸಮಾಜವನ್ನು ಕಂಡು ವರ್ಣಾಶ್ರಮಧರ್ಮದಲ್ಲೇನಿದೆ? ಇವನೇಯೊ, ಬ್ರಾಹ್ಮಣನು ?- ಎಂದು ಮುಂತಾದ ಆಕ್ಷೇಪಗಳು ಎದ್ದುಕೊಳ್ಳುತ್ತಿವೆ. ಈಗ ನಿಜವಾದ ಬ್ರಾಹ್ಮಣನಿಲ್ಲ, ನಿಜವಾದ ಕ್ಷತ್ರಿಯನಿಲ್ಲ, ನಿಜವಾದ ವೈಶ್ಯನಿಲ್ಲ, ನಿಜವಾದ ಶೂದ್ರನೂ ಇಲ್ಲ. ಎಲ್ಲವೂ ಕಲಸಿಹೋಗಿದೆ, ಎಲ್ಲರೂ ಕೆಳಕ್ಕೆ ಇಳಿದಿರುತ್ತಾರೆ. ಹಳೆಯ ವರ್ಣಾಶ್ರಮವಿಭಾಗದ ನೆನಪೇ ಆಗುವಂತಿಲ್ಲ.

ಹಾಗಾದರೇನು ಮಾಡಬೇಕು ? ನದಿಯನ್ನು ಹಿಂದಿರುಗಿಸಿ ಅದನ್ನು ಮೇಲಕ್ಕೆ ಹರಿದುಹೋಗುವಂತೆ ಮಾಡುವದು ಆಗಲಾರದು. ಅದರಂತೆ ಈ ಸಮಾಜವನ್ನು ಹಿಂದಿನ ಕ್ರಮಕ್ಕೆ ತಿರುಗಿಸುವದಕ್ಕೆ ಎಂದಿಗೂ ಆಗಲಾರದು. ಪರಮೇಶ್ವರನೇ ಅವತರಿಸಿ ಎಲ್ಲರಿಗೂ ಸರಿಯಾದ ಬುದ್ಧಿಯನ್ನು ಕೊಟ್ಟು ಎಲ್ಲವನ್ನೂ ಬುಡಮೇಲುಮಾಡಿದರೆ ಆದರೂ ಆಗಬಹುದು ! ಆದರೆ ಅಲ್ಲಿಯವರೆಗೆ ನಾವೇನು ಮಾಡಬೇಕು? ಈಗ್ಗೆ ಗುಣಗಳ ವ್ಯವಸ್ಥೆಯನ್ನು ಹಿಡಿಯುವದು ಜಾಣತನವು. ಆದಷ್ಟುಮಟ್ಟಿಗೆ ಮಾತ್ರವೇ ಜನ್ಮದ ವ್ಯವಸ್ಥೆಯನ್ನು ಹಿಡಿಯಬಹುದು. ಸಧ್ಯಕ್ಕೆ ಸತ್ತ್ವಗುಣವೇ ಮುಂತಾದವುಗಳ ಮೇಲಿಂದಲೇ ಮುಖ್ಯವಾಗಿ ಅವರವರ ಕರ್ಮಗಳು ಗೊತ್ತಾಗಬೇಕಾಗಿದೆ. ಒಮ್ಮೆ ವಿವೇಕಾನಂದರು ಈಗಿನ ನಮ್ಮ ಸಮಾಜಕ್ಕೆ ಬ್ರಾಹ್ಮಣನು ಮಿದುಳಿನಂತೆ ಇರುತ್ತಾನೆ, ಮುಸಲ್ಮಾನನು ತೋಳಿನಂತೆ ಇರುತ್ತಾನೆ ಎಂದಿದ್ದಾರೆ, ಮುಸಲ್ಮಾನರು ಕ್ಷತ್ರಿಯವರ್ಣಕ್ಕೆ ಸೇರದೆ ಇದ್ದರೂ ಅವರು ಬಲಪ್ರಧಾನರೆಂಬುದನ್ನು ಲಕ್ಷ್ಯದಲ್ಲಿಟ್ಟು ಔದಾರ್ಯದಿಂದ ಅವರನ್ನು ಸದ್ಯದ ಸಮಾಜದಲ್ಲಿ ಯಾವ ಸ್ಥಾನಕ್ಕೆ ಸೇರಿಸಬಹುದೆಂಬುದಕ್ಕೆ ಅವರು ತಮ್ಮ ಅಭಿಪ್ರಾಯವನ್ನು ಕೊಟ್ಟಿರುತ್ತಾರೆ. ಒಂದೇ ಮನೆಯ ಮಕ್ಕಳಲ್ಲಿಯೇ ಈಗ್ಗೆ ಈ ನಾಲ್ಕು ವಿಂಗಡಗಳು ಕಾಣಬರಬಹುದು. ಆದ್ದರಿಂದ ಅವರೆಲ್ಲರಿಗೂ ಒಂದೇ ಬಗೆಯ ಕರ್ಮವು ಹೊಂದುವಹಾಗೆ ತೋರುವದಿಲ್ಲ. ಹೇಗೇ ಆಗಲಿ, ಈಗಿರುವ ಸಮಾಜಕ್ಕೇ ಮೆಲ್ಲಮೆಲ್ಲಗೆ ಧರ್ಮದ ಸಂಪರ್ಕವನ್ನು ಮಾಡಿಸುವದಕ್ಕೆ ನಾವು ಪ್ರಯತ್ನಿಸಬೇಕಾಗಿದೆ. ಮನೆಯಲ್ಲಿ ನಾವುಗಳು ಮಲಗಿದಾಗ ಬೆಕ್ಕು ನುಗ್ಗಿ ಅಲ್ಲಲ್ಲಿ ಓಡಾಡಿ ಗದ್ದಲಮಾಡಿದರೆ, ಎಚ್ಚತ್ತವರಿಗೆ ಮತ್ತೆ ನಿದ್ರೆಹತ್ತಲು ಸ್ವಲ್ಪಹೊತ್ತು ಬೇಕಷ್ಟೆ. ಹೀಗೆಯೇ ಇತರ ಸಮಾಜಗಳ ಸಂಪರ್ಕದಿಂದಲೂ ಕೈವಾಡದಿಂದಲೂ ಶಿಥಿಲವಾಗಿರುವ ಈ ನಮ್ಮ ಸಮಾಜವು ಸರಿಯಾಗಲು ಸ್ವಲ್ಪಕಾಲವು ಬೇಕಾಗಬಹುದು. ಆದ್ದರಿಂದ ನಾವು ಹೀಗಾಯಿತಲ್ಲ!- ಎಂದು ಯೋಚಿಸುತ್ತಾ ಕೂರಬಾರದು ; ಕೂಡಲೆ ಸಮಾಜಕ್ಕೆ ಧರ್ಮದ ದೃಷ್ಟಿಯನ್ನು ಕೊಡಬೇಕು. ಕ್ರಮಕ್ರಮವಾಗಿ ಸಮಾಜವು ನೆಮ್ಮದಿಯನ್ನು ಕಂಡುಕೊಳ್ಳುವದು.

ಈ ಪ್ರಾಸಂಗಿಕವಿಚಾರವಿರಲಿ. ವರ್ಣಾಶ್ರಮಧರ್ಮಗಳನ್ನು ಅನುಸರಿಸುತ್ತಿರುವವರಿಗೆ ಆ ಕರ್ಮಗಳಿಂದ ಆಗುವ ಫಲವೇನು? ಅದೇ ಕರ್ಮಗಳನ್ನು ಜ್ಞಾನಕ್ಕೆ ಸಹಾಯವಾಗುವಂತೆ ಮಾಡಿಕೊಳ್ಳುವದು ಹೇಗೆ ?- ಎಂಬುದನ್ನು ಈಗ ವಿಚಾರಮಾಡೋಣ. ಶ್ರೀಶಂಕರಭಗವತ್ಪಾದರವರು ಹೇಳಿರುವದೇನೆಂದರೆ ಆಯಾ ವರ್ಣಕ್ಕೆ ವಿಹಿತವಾಗಿರುವ ಕರ್ಮವನ್ನು ಮಾಡುತ್ತಿದ್ದರೆ ಸ್ವರ್ಗಪ್ರಾಪ್ತಿಯೇ ಫಲವು. ಆಯಾ ವರ್ಣದವರೂ ಆಶ್ರಮದವರೂ ತಮ್ಮ ತಮ್ಮ ಕರ್ಮದಲ್ಲಿ ನಿಷ್ಠರಾಗಿದ್ದರೆ ಲೋಕಾಂತರದಲ್ಲಿ ಆಯಾ ಕರ್ಮದ ಫಲವನ್ನು ಅನುಭವಿಸುತ್ತಾರೆ; ಅವರು ಮಾಡಿರುವ ಕರ್ಮಶೇಷದಲ್ಲಿ ಪರಿಪಕ್ವವಾಗಿರುವದನ್ನು ಅನುಭವಿಸುವದಕ್ಕೆ ತಕ್ಕಂತೆ ಆಯಾ ದೇಶ, ಜಾತಿ, ಕುಲ, ಧರ್ಮ, ಆಯುಸ್ಸು, ವಿದ್ಯೆ, ನಡೆ, ಧನ, ಸುಖ, ಮೇಧಸ್ಸು - ಇವುಗಳುಳ್ಳ ಆಯಾ ಜನ್ಮಗಳಲ್ಲಿ

ಮತ್ತೆ ಹುಟ್ಟುತ್ತಾರೆ ಎಂದು ಸ್ಮೃತಿಯಲ್ಲಿ ಹೇಳಿರುತ್ತದೆ. ಆದರೆ ಇದೇ ಕರ್ಮಗಳನ್ನು ಮತ್ತೊಂದು ವಿಶಿಷ್ಟರೀತಿಯಿಂದ ಮಾಡಿದರೆ ಮತ್ತೊಂದು ವಿಶಿಷ್ಟವಾದ ಫಲವು ಉಂಟಾಗುತ್ತದೆ. ಹೇಗೆಂದರೆ :

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥** **18-45**

ತನ್ನ ತನ್ನ ಕರ್ಮದಲ್ಲಿ ನಿರತನಾದವನು ಸಂಸಿದ್ಧಿಯನ್ನು ಹೊಂದುತ್ತಾನೆ. ಇಲ್ಲಿ ನಿರತ ಎಂಬ ಮಾತನ್ನು ಲಕ್ಷಿಸಬೇಕು. ಒಂದಾನೊಂದು ಕರ್ಮವನ್ನು ಅಷ್ಟಿಷ್ಟುಮಾಡಿ ಮತ್ತೊಂದು ಕರ್ಮಕ್ಕೆ ಹಾರುವವನಿಗೆ ಯಾವ ಫಲವೂ ಆಗುವದಿಲ್ಲ. ಸ್ವರ್ಗಾದಿಫಲಗಳಾಗುವದಕ್ಕೆ ಆಯಾ ವರ್ಣದ ಕರ್ಮದಲ್ಲಿ ನಿರತನಾಗಿರಬೇಕು. ಇದರಂತೆ ಆ ಕರ್ಮದಿಂದ ಇನ್ನೂ ಹೆಚ್ಚಿನ ಅಧ್ಯಾತ್ಮಲಾಭವನ್ನು ಪಡೆಯಬೇಕಾದರೆ ಕರ್ಮದಲ್ಲಿ ಮತ್ತೂ ನಿರತನಾಗಬೇಕಾಗುತ್ತದೆ. ಇಲ್ಲಿ ನಮ್ಮ ಆಶ್ರಮದಲ್ಲಿ ಯಾವಾಗಲೋ ಉಗುಳಿದ್ದ ಒಂದು ದಾಳಿಂಬೆಯ ಬೀಜವು ಅಂಕುರಿಸಿ ಗಿಡವಾಗಿರುತ್ತದೆ. ಅದನ್ನು ದನಕರುಗಳು ತಿಂದುತಿಂದು ಹೋಗುತ್ತಿವೆ; ಆದರೂ ಅದು ಮತ್ತೆ ಮತ್ತೆ ಚಿಗುರುತ್ತಲೇ ಇದೆ. ಅದರ ಬೇರು ಬಲವಾಗಿ ಊರಿಕೊಳ್ಳುತ್ತಿದೆ. ಹಾಗಿರಬೇಕು, ನಿಮ್ಮ ಕರ್ಮ. ಈಗ ನೀವು ಯಾವ ವರ್ಣದವರೇ ಆಗಿರಿ ; ಆಯಾ ವರ್ಣದ ಕರ್ಮವನ್ನು ಈಗಿನ ಕಾಲಕ್ಕೆ ಸಾಧ್ಯವಾದಷ್ಟು ಮಟ್ಟಿಗಾದರೂ ತತ್ಪರರಾಗಿ ಮಾಡಿರಿ. ವರ್ಣಾಶ್ರಮವಿಭಾಗದಲ್ಲಿ ಸಂಕರವಾಗಿದೆ ಎಂದು ಬೆದರಬೇಕಾದದ್ದಿಲ್ಲ. "ಯುಗರೂಪಾ ಹಿ ತೇ ದ್ವಿಜಾ"ಎಂದು ಪರಾಶರರು ಹೇಳಿರುತ್ತಾರೆ. ಈ ಯುಗದಲ್ಲಿ ಈಗಿನ ಸ್ಥಿತಿಯಲ್ಲಿ ನಾವು ಎಷ್ಟರಮಟ್ಟಿಗೆ ಅದನ್ನು ಕಾಪಾಡಿಕೊಳ್ಳಬಹುದೋ ಅಷ್ಟರಮಟ್ಟಿಗಾದರೂ ಮನಮುಟ್ಟಿಮಾಡಬೇಕು. ಪೂರ್ಣವಾದ ವರ್ಣಧರ್ಮವನ್ನು ಮಾಡುವದಕ್ಕೆ ಆಗದೆ ಇದ್ದರೂ ಜಪೋಪವಾಸ, ದೇವತಾರ್ಚನೆ - ಮುಂತಾದವುಗಳಿಂದಲೂ ಜ್ಞಾನಕ್ಕೆ ಅನುಗ್ರಹವಾಗುವದೆಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ ನಿಮಗೆ ದೊರಕುವ ವ್ಯಾವಹಾರಿಕಕರ್ಮವನ್ನು ಕೂಡ ಮನಮುಟ್ಟಿ ಮಾಡಿರಿ. ಇಂಥ ಸಾಮಾನ್ಯಕರ್ಮಗಳನ್ನು ಆದರದಿಂದ ಮಾಡುತ್ತಾ ಧರ್ಮದ ಸಂಬಂಧವನ್ನು ಬೆಳೆಯಿಸಿಕೊಳ್ಳಿರಿ.

ಆದರೆ ಸ್ವಕರ್ಮದಲ್ಲಿ ನಿರತರಾಗಿರಿ. ನಿಮಗೆ ಸಿಕ್ಕುವ ಕರ್ಮವನ್ನು ಆನಂದದಿಂದ ಮಾಡುವದು, ಅದರಲ್ಲಿ ಯಾವ ದ್ರೋಹವನ್ನೂ ಮಾಡದಿರುವದು, ನಿರಂತರವಾಗಿ ಅದರಲ್ಲಿ ರತರಾಗಿರುವದು- ಇವು ಮುಖ್ಯ. ನಿಮ್ಮ ನಿಮ್ಮ ಕರ್ಮವು ನಿಮಗೆ ಮೆಚ್ಚಾಗಿರಬೇಕು, ಅದರಲ್ಲಿ ನೀವು ನಿರತರಾಗಿರಬೇಕು. ವ್ಯವಹಾರದಲ್ಲಿ ಈಗ ನೀವು ಬೇರೆ ಬೇರೆಯ ಕರ್ಮಗಳನ್ನು ಮಾಡಬೇಕಾಗಿರಬಹುದು ; ಆದರೆ ಸದ್ಯಕ್ಕೆ ಅವನ್ನೂ ವರ್ಣಾಶ್ರಮಕರ್ಮಗಳಂತೆಯೇ ಚಿತ್ತಶುದ್ಧಿಗಾಗಿ ತಿರುಗಿಸಿಕೊಳ್ಳುವದಕ್ಕೆ ಬರುತ್ತದೆ. ಭಗವಂತನು ಬ್ರಾಹ್ಮಣಾದಿಧರ್ಮಗಳ ವಿಷಯಕ್ಕೆ ಹೇಳಿರುವದನ್ನು ಕೇಳಿರಿ

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥ 18-46

ಎಲ್ಲಾ ಪ್ರಾಣಿಗಳೂ ಪರಮಾತ್ಮನಿಂದ ಬಂದಿರುತ್ತವೆ, ಆತನ ಸಂನಿಧಿಯಲ್ಲಿಯೇ ತಮ್ಮ ತಮ್ಮ ಕರ್ಮವನ್ನು ಮಾಡಿಕೊಂಡಿವೆ. ಇದನ್ನರಿತು ಈ ಕರ್ಮವು ಆ ಪರಮೇಶ್ವರನ ಅನುಗ್ರಹವು ; ಆತನ ಊಳಿಗವಾಗಿ ಆತನ ಆರಾಧನೆಗೆಂದು ಈ ಕರ್ಮವನ್ನು ನಾನು ಮಾಡುತ್ತೇನೆ ಎಂಬ ಆದರವಿದ್ದರೆ ಅದರಿಂದ ಒಂದು ಸಿದ್ಧಿಯುಂಟಾಗುತ್ತದೆ. ಈ ಸಿದ್ಧಿಯೇ ನಮಗೆ ಜ್ಞಾನಕ್ಕೆ ತಕ್ಕ ಯೋಗ್ಯತೆಯನ್ನು ಕೊಡುವದು, ಕರ್ಮವನ್ನು ತನ್ನ ತನ್ನ ಇಷ್ಟವಾದ ಫಲಕ್ಕೆಂದು ಮಾಡುವದು, ಈಶ್ವರನ ಆರಾಧನೆಗೆಂದು ಮಾಡುವದು - ಇವೆರಡರಲ್ಲಿ ಬಹಳ ಹೆಚ್ಚುಕಡಿಮೆಯಿದೆ. ಈಶ್ವರಾರಾಧನೆಯ ರೂಪವಾದ ಕರ್ಮವು ಅನರ್ಘವಾದದ್ದು. ಕೆಲವು ವರ್ಷಗಳ ಹಿಂದೆ ನಾನೊಂದು ಕಥೆಯನ್ನು ಕೇಳಿದ್ದೆ. ಒಬ್ಬ ತರುಣನು ಆಗಾಗ್ಗೆ ಬಂದು ಮಂತ್ರಿಯನ್ನು ತನಗೇನಾದರೂ ಉದ್ಯೋಗವನ್ನು ಕೊಡಬೇಕೆಂದು ಪ್ರಾರ್ಥಿಸುತ್ತಿದ್ದನಂತೆ. ಯಾವ ಕೆಲಸವೂ ಇಲ್ಲವೆಂದರೂ ಮತ್ತೆ ಮತ್ತೆ ಬಂದು ಕೇಳುತ್ತಿದ್ದ ಆ ಯುವಕನ ಉತ್ಸಾಹವನ್ನು ಕಂಡು ಮಂತ್ರಿಯು ಹಾಸ್ಯಕ್ಕಾಗಿ ಅವನಿಗೊಂದು ಕೆಲಸವನ್ನು ನಿಯಮಿಸಿದನು. "ಸಮುದ್ರದ ದಡದಲ್ಲಿ ಕುಳಿತು ಅಲೆಗಳನ್ನು ಲೆಕ್ಕಮಾಡುತ್ತಿರು. ನಿನ್ನ ಕೆಲಸದ ಅಭಿವೃದ್ಧಿಯನ್ನು ತಿಂಗಳ ಕೊನೆಯಲ್ಲಿ ನನಗೆ ವರದಿಮಾಡಿದ ಮೇಲೆ ನಿನಗೆ ಮತ್ತೇನಾದರೂ ನೌಕರಿಯನ್ನು ಕೊಡಿಸುವೆನು"- ಎಂದನು. ತರುಣನು ಹಾಗೆಂಬ ನಿರೂಪವನ್ನು ಬರೆಯಿಸಿಕೊಂಡು ಕೂಡಲೆ ಸಮುದ್ರದ ಕಡೆಗೆ ಸರಿದನು. ಪ್ರತಿದಿನವೂ ಬೆಳಗ್ಗೆ ಮಧ್ಯಾಹ್ನದ ಮೇಲೆ ಇಂತಿಷ್ಟು ಗಂಟೆಗಳೆಂದು ಗೊತ್ತುಮಾಡಿಕೊಂಡು ತನ್ನ ಕಡೆಗೆ ಬಂದು ದಡವನ್ನು ಬಡಿಯುವ ಅಲೆಗಳನ್ನು ಎಣಿಸುವದಕ್ಕೆ ತೊಡಗಿದನು. ಅಲ್ಲಿಗೆ ಈಜುವದಕ್ಕೂ ಮೀನುಹಿಡಿಯುವದಕ್ಕೂ ಬರುವ ಜನರನ್ನು "ರಾಜಕಾರ್ಯಕ್ಕೆ ಅಡ್ಡಿಮಾಡಬೇಡಿ!" ಎಂದು ತಡೆಗಟ್ಟಿ ಅವರಿಂದ ಆಯಾ ಕೆಲಸದ ಪರಿಮಾಣದಂತೆ ಇಂತಿಷ್ಟೆಂದು ತೆರಿಗೆಯನ್ನು ಗೊತ್ತುಮಾಡಿ ವಸೂಲುಮಾಡುತ್ತಾ ಬಂದ ಹಣದ ಲೆಕ್ಕವನ್ನು ಕ್ರಮವಾಗಿ ಬರೆದಿಟ್ಟು, ಆ ಹಣವನ್ನು ಬೊಕ್ಕಸಕ್ಕೆ ಜಮಮಾಡಿಸುತ್ತಾ ಬಂದನು. ತಿಂಗಳಾದ ಮೇಲೆ ತಾನು ಎಣಿಸಿದ ಅಲೆಗಳ ಸಂಖ್ಯೆ, ವಸೂಲುಮಾಡಿರುವ ಹಣದ ವಿವರ - ಇವುಗಳ ವರದಿಯನ್ನು ಮಂತ್ರಿಗೆ ಒಪ್ಪಿಸಿದನು ; ಮಂತ್ರಿಯು ತರುಣನ ಉತ್ಸಾಹಕ್ಕೆ ಬೆರಗಾಗಿ ಅವನಿಗೆ ಅರಮನೆಯಲ್ಲಿ ಯಾವದೋ ಒಂದು ನೌಕರಿಯನ್ನು ಕೊಡಿಸಿದನಂತೆ ! ಇದು ಕಲ್ಪಿತಕಥೆಯೇ ಸರಿ. ಆದರೆ ತನಗೆ ಸಿಕ್ಕಿದ ಅಲ್ಪವಾದ ಕೆಲಸದಲ್ಲಿ ಶ್ರದ್ಧಾದರಗಳಿಂದ ಕೂಡಿ ನಿರತನಾಗಿರುವದು, ಸ್ವಾಮಿದ್ರೋಹಮಾಡದೆ ಪ್ರಾಮಾಣಿಕತೆಯಿಂದ ನಡೆದುಕೊಳ್ಳುವದು - ಎಂಬ ಎರಡು ಉಚ್ಚವಾದ ಆದರ್ಶಗಳು ಇದರಿಂದ ನಮಗೆ ದೊರೆಯುತ್ತದೆ. ಇದೇ ರೀತಿಯಲ್ಲಿ ಈಶ್ವರನು ನಮಗೆ ಈಗ ಒದಗಿಸಿಕೊಟ್ಟಿರುವ ಕೆಲಸವನ್ನೇ ಮಹಾಪ್ರಸಾದವೆಂದು ಶ್ರದ್ಧಾಭಕ್ತಿಯಿಂದ ಮಾಡಿ ಇದೇ ಆ ಭಗವಂತನ ಅಭ್ಯರ್ಚನೆ ಎಂಬ ಭಾವನೆಯನ್ನು ಬೆಳೆಯಿಸಿಕೊಂಡರೆ ಆಗುವ ಮಹಾಫಲವನ್ನು ಆಯಾ ಸಾಧಕನೇ

ತಿಳಿದುಕೊಳ್ಳಬೇಕು. ನಮ್ಮ ಕೆಲಸವು ಯಾವದೇ ಆಗಿರಲಿ, ಅದೇ ಈಶ್ವರನ ಸೇವೆ ಎಂದು ಭಾವಿಸುವದನ್ನು ಕಲಿಯಬೇಕು. ಟ್ರೆಜರಿಯನ್ನು ಕಾಯುವವನು "ಪರಮೇಶ್ವರನ ನಿಧಿಗಳನ್ನು ಕಾಯುವವನು ನಾನು!" ಎಂಬ ಭಾವನೆಯನ್ನು, ಹಳ್ಳಿಗೆ ಕಾಗದವನ್ನು ತೆಗೆದುಕೊಂಡು ಹೋಗುವ ಅಂಚೆಯವನು `ಈಶ್ವರನ ಸಂದೇಶವನ್ನು ಒಯ್ಯುವವನು ನಾನು !' ಎಂಬ ಭಾವನೆಯನ್ನೂ ಮಾಡಿಕೊಂಡರೆ ಅದೇ ಪರಮೇಶ್ವರನ ಅಭ್ಯರ್ಚನೆಯಾಗುವದು. ಇಷ್ಟೇ ಅಲ್ಲ, ನಾವು ನಿಲ್ಲುವಾಗ, ಕುಳಿತಿರುವಾಗ, ಅತ್ತಿತ್ತ ತಿರುಗಾಡುವಾಗ -ಇದೆಲ್ಲ ಪರಮೇಶ್ವರನ ಸೇವೆ ಎಂಬ ಭಾವನೆಯಿಂದ ಭಗವನ್ನಾಮವನ್ನು ಸ್ಮರಿಸುತ್ತಿರಬೇಕು.

ಆತ್ಮಾ ತ್ವಂ ಗಿರಜಾ ಮತಿಃ ಪರಿಜನಾಃ ಪ್ರಾಣಾಃ ಶರೀರಂ ಗೃಹಂ ।
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ ।।

ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ ।
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಮ್ಭೋ ತವಾರಾಧನಮ್ ।।

ಎಂದಿರುವಂತೆ ನಾವು ಮಾಡುವ ಪ್ರತಿಯೊಂದು ವ್ಯವಹಾರವೂ ಆ ಪರಮೇಶ್ವರನ ಆರಾಧನೆಯೇ ಎಂದು ಭಾವಿಸುವ ಉಚ್ಚಭಾವನೆಯನ್ನು ನಾವು ಸಂಪಾದಿಸಿಕೊಳ್ಳಬೇಕು.

ಲೌಕಿಕವ್ಯವಹಾರದಲ್ಲಿ ಕೂಡ ಹೀಗೆ ಪರಮೇಶ್ವರನ ಆರಾಧನೆಯನ್ನು ಮಾಡುವದನ್ನು ಅಭ್ಯಾಸಮಾಡಬೇಕು. ಒಬ್ಬನು ಒಂದು ಅಂಗಡಿಯನ್ನಿಟ್ಟುಕೊಳ್ಳುತ್ತಾನೆಂದು ಇಟ್ಟಿಕೊಳ್ಳಿರಿ. ಕೂಡಲೆ ಅವನು ನೆರೆಯಲ್ಲಿರುವ ಅಂಗಡಿಯವರು ಹೇಗೆ ವ್ಯಾಪಾರಮಾಡುತ್ತಾರೆ? ಅವರು ಯಾವ ಯುಕ್ತಿಯಿಂದ ಜನರನ್ನು ಆಕರ್ಷಿಸುತ್ತಾರೆ? ಎಂಬುದನ್ನು ಮಾತ್ರವೇ ಅಲ್ಲದೆ ಅವರು ಮಾಡುವ ಮೋಸವೇ ಮುಂತಾದವುಗಳನ್ನೂ ಅನುಕರಿಸುವಂತೆ ಅವನಿಗೆ ಬುದ್ಧಿಯಲ್ಲಿ ದುಷ್ಪ್ರೇರಣೆಯಾಗುತ್ತದೆ. ಆದರೆ ಇದೇ ವ್ಯಾಪಾರವನ್ನು ಸಮಾಜದ ಸೇವೆಯ ಮೂಲಕ ಪರಮೇಶ್ವರನ ಆರಾಧನೆಯಾಗಲಿ !- ಎಂಬ ಸತ್ಸಂಕಲ್ಪದಿಂದ ಮಾಡಿ ಆಗ ತನಗೆ ಎಷ್ಟು ಲಾಭವು ಅಥವಾ ನಷ್ಟವು ಆಗುತ್ತದೆ ಎಂಬುದನ್ನು ಪರೀಕ್ಷಿಸಿ ನೋಡಬೇಕು. ಹೀಗೆ ಪ್ರಯತ್ನಿಸಿದ್ದು ವಿಫಲವಾಯಿತೆಂದು ಯಾರೂ ಹೇಳಿಲ್ಲ. ಒಬ್ಬನು ಒಂದು ತೋಟವನ್ನು ಮಾರುತ್ತೇನೆಂದು ಸಂಕಲ್ಪಿಸಿದ ; ಆಗ ಅದನ್ನು ಜನರು ಒಬ್ಬರಿಗಿಂತ ಒಬ್ಬರು ಕಡಿಮೆಯ ಬೆಲೆಗೆ ಕೇಳುವದಕ್ಕೆ ಮೊದಲುಮಾಡಿದರು. ಸ್ವಲ್ಪ ಕಾಲವಾದಮೇಲೆ ಅವನಿಗೆ ಆ ಜಮೀನಿಗೆ ಬರುವ ಪ್ರತಿಫಲವನ್ನು ಒಂದು ಧರ್ಮಕಾರ್ಯಕ್ಕಾಗಿ ವಿನಿಯೋಗಿಸಬೇಕೆಂಬ ಸಂಕಲ್ಪವುಂಟಾಯಿತು. ಕೆಲವೇ ದಿನಗಳಲ್ಲಿ ಆ ತೋಟವು ಮಾರಾಟವಾಯಿತು. ಅವನು ನಿರೀಕ್ಷಿಸಿಕೊಂಡಿದ್ದಕ್ಕಿಂತಲೂ ಹೆಚ್ಚಿಗೆಯ ಹಣವೇ ಬಂದಿತು! ಧಾರ್ಮಿಕ ಬುದ್ಧಿಯು ಕೆಡಿಸಿತು ಎಂಬುವರನ್ನು ನಾನು ಕಂಡೇ ಇಲ್ಲ.

ಈಶ್ವರನ ಮೇಲೆ ಭಾರವನ್ನು ಹಾಕಿ ಆಯಾ ದಿನಕ್ಕೆ ಪ್ರಾಪ್ತವಾದ ಕೆಲಸವನ್ನು ಮಾಡುತ್ತಿರುವವನಿಗೆ ಆಗುವ ಸಂತೋಷಕ್ಕೆ ಬೆಲೆಯನ್ನು ಕಟ್ಟುವದು ಕಷ್ಟ. ಹಿಂದಕ್ಕೆ ನಮ್ಮ

ಹಳ್ಳಿಗಳೆಲ್ಲವೂ ಬಲುಮಟ್ಟಿಗೆ ಹೀಗೆಯೇ ಸ್ವಕರ್ಮವನ್ನು ಮಾಡಿಕೊಂಡು ಈಶ್ವರ ಸ್ಮರಣೆಮಾಡುವದರಿಂದ ಭರಿತವಾಗಿದ್ದವು. ನಾನು ಕಾಣುವಂತೆ ಒಂದೂರಿನಲ್ಲಿ ಜನರು ವರ್ಷವರ್ಷವೂ ಹಬ್ಬ ಹರಿದಿನ, ಪೂಜಾಭಿಷೇಕ, ಸಂತರ್ಪಣೆ, ಧಾತ್ರೀಹವನ, ದೇವರ ಉತ್ಸವ-ಮುಂತಾದವುಗಳನ್ನು ಮಾಡುತ್ತಿದ್ದರು. ಪ್ರತಿಯೊಬ್ಬರೂ ಧಾನ್ಯದವಸಗಳನ್ನು ಹೇರಳವಾಗಿ ಬೆಳೆದುಕೊಂಡು ಉದಾರಭಾವದಿಂದ ದಾನಧರ್ಮಗಳನ್ನು ಮಾಡಿಕೊಂಡಿದ್ದರು ; ಈಗ ಅದೇ ಊರು ಬರುಬರುತ್ತಾ ಮರಳುಕಾಡಾಗುತ್ತಿದೆ !

ನಮ್ಮ ಕರ್ಮವು ಹುಲುಸಾದ ಫಲವನ್ನು ಕೊಡಬೇಕಾದರೆ ಅದು ಈಶ್ವರನಿಗೆ ಸಂಬದ್ಧವಾಗಬೇಕು. ಕರ್ಮದಿಂದ ಈಶ್ವರನ ಅರ್ಚನೆಮಾಡಬೇಕೆಂಬುದರಲ್ಲಿ ಎರಡು ಭಾಗಗಳಿವೆ. ಸಂಗಫಲಗಳನ್ನು ಬಿಟ್ಟುಬಿಡುವದೆಂಬುದು ಒಂದು ; ಈಶ್ವರನ ಅನುಗ್ರಹದಿಂದಲೇ ಈ ಕರ್ಮವನ್ನು ಮಾಡುತ್ತಿದ್ದೇನೆ ಎಂದು ಭಾವನೆಯು ಮತ್ತೊಂದು. ಸಂಗಫಲಗಳನ್ನು ಬಿಟ್ಟಮೇಲೆ ನಮಗೇನು?- ಎಂದು ಕೊರಗಬಾರದು. ಈಶ್ವರನಿಗೆ ಅರ್ಪಣೆಮಾಡಿದ ಕರ್ಮವು ಮೊದಲಿಗಿಂತಲೂ ನೂರರಷ್ಟು ದೊಡ್ಡದಾದ ಫಲವನ್ನು ಕೊಡುತ್ತದೆ. ನಮ್ಮಲ್ಲಿಯೇ ಒಬ್ಬನು ಇಂತಿಷ್ಟೆಂಬ ಪ್ರತಿಫಲವನ್ನು ನಿಗದಿಮಾಡಿಕೊಳ್ಳದೆ ಕೆಲಸಮಾಡಿದನೆಂದರೆ ಅವನಿಗೆ ಹೆಚ್ಚಿಗೆ ಕೊಡಬೇಕೆನಿಸುತ್ತದೆ. ಹೀಗಿರುವಲ್ಲಿ ಪರಮೇಶ್ವರನಿಗೆ ಅರ್ಪಣೆಯಾದ ನಿಷ್ಕಾಮಕರ್ಮಕ್ಕೆ ಹೆಚ್ಚಿಗೆ ಫಲವಿಲ್ಲದೆಹೋದೀತೆ? ಆದ್ದರಿಂದಲೇ ನಿಷ್ಕಾಮಬುದ್ಧಿಯುಕ್ತವಾದ ಕರ್ಮಕ್ಕಿಂತಲೂ ಕಾಮ್ಯಕರ್ಮವು ಬಹಳ ಕೀಳು ಎಂದು ಹಿಂದೆ ಹೇಳಿರುವದು.

ವ್ಯಕ್ತಿಯೇ ಅಲ್ಲದೆ ಸಮಾಜವೂ ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡುವದಕ್ಕೆ ಬರುತ್ತದೆ. ಯಾವ ಜನಾಂಗದಲ್ಲಿ ಬಲುಮಂದಿ ತಮ್ಮ ತಮ್ಮ ಕರ್ಮಗಳನ್ನು ಈಶ್ವರಭಕ್ತಿಯ ಗುರುತಾಗಿ ಮಾಡುತ್ತಿರುವರೋ ಆ ಜನಾಂಗವು ನಿಶ್ಚಯವಾಗಿಯೂ ಉತ್ತರೋತ್ತರವಾಗಿ ಅಭಿವೃದ್ಧಿಯನ್ನು ಹೊಂದುವದು.



# ೧೮೭. ಭಗವದರ್ಥಕರ್ಮ 18 - (47-48)

**(24-9-50)**

ವರ್ಣಾಶ್ರಮಧರ್ಮಗಳ ಪ್ರಸಂಗದಿಂದ ಹಿಂದಿನ ದಿನ ನಮ್ಮ ನಮ್ಮ ಪಾಲಿಗೆ ಬಂದಿರುವ ಕರ್ಮವನ್ನು ಕೂಡ ಪರಮೇಶ್ವರನ ಆರಾಧನೆಗೆಂದು ಉಪಯೋಗಿಸಿ ಸಿದ್ಧಿಯನ್ನು ಪಡೆದುಕೊಳ್ಳುವದಕ್ಕೆ ಬರುತ್ತದೆ ಎಂದು ಹೇಳಲಾಗಿತ್ತು. 'ಯತಃ ಪ್ರವೃತ್ತಿರ್ಭೂತಾನಾಮ್' ಎಂಬ ಶ್ಲೋಕದಲ್ಲಿ ಪ್ರವೃತ್ತಿಃ ಎಂಬ ಮಾತಿಗೆ ಉತ್ಪತ್ತಿ, ಕೆಲಸ-ಎಂಬ ಅರ್ಥಗಳನ್ನು ಮಾಡಿಕೊಳ್ಳಬಹುದು ಎಂದು ಹೇಳಿತ್ತು.

ನಾವು ಪರಮಾತ್ಮನಿಂದ ಬಂದಿರುತ್ತೇವೆ, ಆತನ ಬಳಿಗೇ ಹೋಗಬೇಕು, ಆತನ ಸಾಧರ್ಮ್ಯವೇ ನಮ್ಮ ಗುರಿ - ಎಂಬ ದೃಷ್ಟಿಯಿಂದ ಮಾಡುವ ಕರ್ಮವು ಸಾಧಾರಣಕರ್ಮಕ್ಕಿಂತ ಬಹಳ ಹೆಚ್ಚಿನ ಬೆಲೆಯುಳ್ಳದ್ದಾಗಿರುತ್ತದೆ. ಒಬ್ಬ ಮನುಷ್ಯನಿಗೆ ತನ್ನ ಜೀವಮಾನದಲ್ಲಿ ಹತ್ತು ಎಕರೆಯಷ್ಟು ಜಮೀನು ಸಂಪಾದಿಸಬೇಕೆಂಬ ಗುರಿ ಇದೆ ಎಂದು ಭಾವಿಸಿಕೊಳ್ಳಿರಿ. ಅವನು ತನ್ನ ಆದಾಯದಲ್ಲಿ ಪ್ರತಿಯೊಂದು ಪೈಸೆಯನ್ನೂ ಅದಕ್ಕಾಗಿ ಮುಡಿಪಾಗಿಟ್ಟುಕೊಳ್ಳುವದಕ್ಕೆ ಹವಣಿಸುತ್ತಾನೆ; ಹೊಟ್ಟೆಕಟ್ಟಿ ಬಟ್ಟೆಕಟ್ಟಿ ಎಷ್ಟು ಸಂಕಟಪಟ್ಟರೂ ಚಿಂತೆಯಿಲ್ಲ, ಹೇಗಾದರೂ ಮಾಡಿ ಹತ್ತು ಎಕರೆಯ ನೆಲದಲ್ಲಿ ಪೈರು ಬೆಳೆದದ್ದನ್ನು ನೋಡಿಯೇ ತೀರುವೆನೆಂಬ ಸಂಕಲ್ಪವು ಅವನದಾಗಿರುವದಲ್ಲವೆ? ಹೀಗೆಯೇ ಪರಮೇಶ್ವರನನ್ನೇ ಮುಟ್ಟುವೆನೆಂಬ ಸಂಕಲ್ಪವಿರುವವನು ತಾನು ಮಾಡುವ ಕರ್ಮವನ್ನೆಲ್ಲ ಪರಮೇಶ್ವರನ ಪ್ರೀತಿಗೆಂದೇ ಆರಾಧನರೂಪವಾಗಿ ಮಾಡುತ್ತಿರುತ್ತಾನೆ. ವಿಷಯಗಳ ಕಡೆಯಿಂದ ಹಿಂಜಗ್ಗಿಸಿ ಪರಮೇಶ್ವರನ ಕಡೆಗೇ ಅಭಿಮುಖನಾಗುವಂತೆ ಮಾಡುವ ನಿಷ್ಕಾಮಕರ್ಮವೆಲ್ಲ ಈ ಅರ್ಥದಲ್ಲಿ ಅಭ್ಯರ್ಚನ ಕರ್ಮವಾಗುತ್ತದೆ.

ಇನ್ನು ಪ್ರವೃತ್ತಿ ಎಂಬ ಮಾತಿಗೆ ವ್ಯಾಪಾರ, ಕೆಲಸ-ಎಂಬ ಅರ್ಥವನ್ನು ಮಾಡಿದರೆ ನಮ್ಮ ಪ್ರವೃತ್ತಿಯೆಲ್ಲವೂ ಪರಮಾತ್ಮನದೇ ಆಗಿರುತ್ತದೆ ಎಂಬ ಭಾವನೆಯಿಂದ ಮಾಡಿದ ಕರ್ಮವು ಅಭ್ಯರ್ಚನಕರ್ಮವಾಗುತ್ತದೆ. ಗಡಿಯಾರದ ಕೆಲಸವು ಅದರ ಶರೀರರಚನೆಯನ್ನು ಮಾಡಿ ಕೀಲುಕೊಟ್ಟವನದೇ ಆಗಿರುವಂತೆ, ನಮ್ಮ ಪ್ರಾಣ, ಮನಸ್ಸು, ಇಂದ್ರಿಯ, ದೇಹ - ಇವುಗಳ ವ್ಯಾಪಾರವೆಲ್ಲ ಯಾವ ಪರಮೇಶ್ವರನ ಬಲದಿಂದ ನಡೆಯುತ್ತಿರುವದೋ ಆತನದೇ ಆಗಿರುತ್ತದೆ. ಗಡಿಯಾರಕ್ಕೆ ನನ್ನ ವ್ಯಾಪಾರವು ನನ್ನದಲ್ಲ, ಇದು ಮತ್ತೊಬ್ಬರಿಂದ ಪ್ರೇರಿತವಾದದ್ದು ಎಂಬ ಅರಿವೇನೂ ಇರುವದಿಲ್ಲ. ಆದರೆ ನಾವು ಚೇತನರು. ಸರಿಯಾಗಿ ವಿಚಾರಮಾಡಿ ಶಾಸ್ತ್ರಾಚಾರ್ಯರ ಉಪದೇಶವನ್ನು ಹೊಂದಿದರೆ ನಾವು ಮಾಡುತ್ತಿರುವ ಕೆಲಸವೆಲ್ಲವೂ ಪರಮಾತ್ಮನದೇ ಎಂದು ಅರಿತುಕೊಳ್ಳುವದು ನಮಗೆ ಸಾಧ್ಯವಾಗುತ್ತದೆ.

ನಮ್ಮ ಕೆಲಸವೆಲ್ಲವೂ ಪರಮಾತ್ಮನದೇ ಎಂದುಕೊಳ್ಳುವದು ಸುಲಭ; ಅದು ನಿಜವೂ ಆಗಿದೆ. ಆದರೆ ಇಲ್ಲಿ ಒಂದು ವಿಷಯವನ್ನು ನಾವು ನೆನಪಿಡಬೇಕು. ನಾವು ಕೆಲಸಮಾಡುವದಕ್ಕೆ ಉಪಯೋಗಿಸುವ ಕಾರ್ಯಕರಣಸಾಮಗ್ರಿಯು ಪರಮೇಶ್ವರನಿಂದಲೇ ನಮಗೆ ಬಂದಿರುವದು ನಿಜ; ಅವುಗಳಲ್ಲಿರುವ ಶಕ್ತಿಯೆಲ್ಲ ಆತನ ಅನುಗ್ರಹವೇ ಎಂಬುದೂ ನಿಜ. ಆದರೆ ವ್ಯವಹಾರದಲ್ಲಿ ಈ ಸಾಮಗ್ರಿಗಳನ್ನು ಸರಿಯಾದ ಮಾರ್ಗದಲ್ಲಿ ಅಥವಾ ದುರ್ಮಾರ್ಗದಲ್ಲಿ ಉಪಯೋಗಿಸಿಕೊಳ್ಳುವ ಸ್ವಾತಂತ್ರ್ಯವನ್ನು ನಮಗೆ ಆತನು ಅನುಗ್ರಹಿಸಿರುತ್ತಾನೆ. ನಾವು ಉಪಯೋಗಿಸಿದ ಕೈಯೂ ಅದರ ವ್ಯಾಪಾರವೂ ಆ ಭಗವಂತನ ಅನುಗ್ರಹದಿಂದಲೇ ನಮಗೆ ಬಂದಿರುತ್ತದೆ ಎಂಬುದು ನಿಶ್ಚಯ. ಆದರೆ ಅವನ್ನು ಮತ್ತೊಬ್ಬರಿಗೆ ಉಪಕಾರವನ್ನು ಮಾಡುವದಕ್ಕೆ ಉಪಯೋಗಿಸುವದೂ ಅಥವಾ ಮತ್ತೊಬ್ಬನನ್ನು ಹೊಡೆಯುವದಕ್ಕೂ ಬಡಿಯುವದಕ್ಕೂ ಉಪಯೋಗಿಸುವದೂ ನಮ್ಮ ಹೊಣೆಗಾರಿಕೆಯಿಂದಲೇ ಆಗಿರುತ್ತದೆ. ಕರ್ಮವನ್ನು ಮಾಡುವಾಗ ಸ್ವಾಭಿಮಾನವನ್ನೇನೂ ಉಪಯೋಗಿಸದಿದ್ದರೆ ಅದೆಲ್ಲ ಪರಮೇಶ್ವರನ ಕರ್ಮವಾಗುವದು. ಸೈನಿಕರು ಸೇನಾಪತಿಯು ಅಪ್ಪಣೆಮಾಡಿದಂತೆ ನಡೆದುಬಿಟ್ಟರೆ, ಆಗ ಒಟ್ಟು ಸೇನೆಯ ವ್ಯಾಪಾರದ ಹೊಣೆಗಾರಿಕೆಯು ಹೇಗೆ ಅವರಿಗೆ ಇರುವದಿಲ್ಲವೋ ಅದರಂತೆಯೇ ಇದು. ವ್ಯಕ್ತಿ ಸ್ವಾತಂತ್ರ್ಯದ ಸಂಕಲ್ಪವು ಸೇರದೆ, ಪರಮೇಶ್ವರನ ನಿಯಮವನ್ನು ಮಾತ್ರ ಪಾಲಿಸುವೆನು ಎಂದು ಮಾಡಿದ ಕೆಲಸವೆಲ್ಲವೂ ಪರಮೇಶ್ವರನದೇ, ಅದೆಲ್ಲವೂ ಅವನ ಆರಾಧನೆಯೇ ಆಗಿಬಿಡುತ್ತದೆ. ಗಾಳಿಯು ಸ್ವಾಭಾವಿಕವಾಗಿ ಒಂದು ಕಡೆಗೆ ಬೀಸುತ್ತಿದ್ದರೂ ಒಂದು ಪಂಖವನ್ನುಪಯೋಗಿಸಿ ಆ ದಿಕ್ಕಿಗೆ ಪ್ರತಿಯಾದ ಕಡೆಗೂ ಅದನ್ನು ತಿರುಗಿಸಿಕೊಳ್ಳುವದಕ್ಕೆ ಆಗುತ್ತದೆ. ಅಲ್ಲವೆ? ಇದರಂತೆ ನಾವು ಪರಮೇಶ್ವರನ ನಿಯಮದಲ್ಲಿಯೇ ವ್ಯಾಪಾರಮಾಡುತ್ತೇವೆಯಾದರೂ ಅದನ್ನು ನಮ್ಮ ನಮ್ಮ ಇಚ್ಛಾವಿಶೇಷಗಳಿಂದ ಬೇರೆ ಬೇರೆಯ ಕಡೆಗೂ ತಿರುಗಿಸಬಹುದಾಗುತ್ತದೆ. ಆದರೆ ನಾವು ಈಶ್ವರನ ಕೈಯ ಗೊಂಬೆಗಳಾಗಿಬಿಟ್ಟು, ನಮ್ಮ ವ್ಯಕ್ತಿಸ್ವಾತಂತ್ರ್ಯವನ್ನೇನೂ ಉಳಿಸಿಕೊಳ್ಳದೆ ನಮ್ಮ ವ್ಯಾಪಾರವನ್ನೆಲ್ಲ ಆತನಿಗೆ ನಿವೇದನೆಮಾಡಿಬಿಟ್ಟರೆ ಎರಡನೆಯ ಅರ್ಥದಲ್ಲಿ ಪರಮೇಶ್ವರನ ಅಭ್ಯರ್ಚನೆಯನ್ನು ಮಾಡಿದಂತೆ ಆಯಿತು.

ಮುಂದಿನ ಶ್ಲೋಕವನ್ನು ನೋಡಿದರೆ ಇಲ್ಲಿ ಮೊದಲನೆಯ ಅರ್ಥವೇ ಹೆಚ್ಚು ಹೊಂದುಗೆಯಾಗುವಂತೆ ತೋರುತ್ತದೆ. ಏಕೆಂದರೆ ಸ್ವಧರ್ಮ, ಪರಧರ್ಮ-ಎಂಬ ವಿಂಗಡವು ತನ್ನ ಸ್ವಾತಂತ್ರ್ಯವೇ ಇಲ್ಲದಿರುವಾಗ ಹೊಂದಲಾರದು. ಈಗ ಶ್ಲೋಕವನ್ನು ನೋಡೋಣ:

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥** **18-47**

ತನ್ನ ಧರ್ಮವು ಗುಣದಲ್ಲಿ ಸ್ವಲ್ಪ ಕಡಿಮೆಯಾದರೂ ಚಿಂತೆಯಿಲ್ಲ. ಎಷ್ಟೋ ಕೊರತೆಯಿದ್ದರೂ ಅದೇ ತನಗೆ ಶ್ರೇಯಸ್ಸನ್ನುಂಟುಮಾಡುತ್ತದೆ. ಮತ್ತೊಬ್ಬರ ಧರ್ಮವನ್ನು

ನಾವು ಎಷ್ಟೇ ಚೆನ್ನಾಗಿ ಮಾಡಬಲ್ಲೆವಾದರೂ ಅದು ನಮ್ಮ ಶ್ರೇಯಸ್ಸಿಗೆ ಆಗಲಾರದು. ಅಡ್ವೋಕೇಟ್ ವೃತ್ತಿಯವನು ಎಷ್ಟೇ ಚತುರನಾದರೂ ಜಡ್ಜಿಯ ಆಸನದಲ್ಲಿ ಕುಳಿತು ನ್ಯಾಯವನ್ನು ತೀರ್ಮಾನಿಸುವದಕ್ಕೆ ಹೋಗುವದು ಎಂದಿಗೂ ಸರಿಯಲ್ಲವಷ್ಟೆ. ವರ್ಣಾಶ್ರಮಧರ್ಮವೇ ಪ್ರಕೃತವಾಗಿರುವದರಿಂದ ಇಲ್ಲಿ ಸ್ವಧರ್ಮಪರಧರ್ಮಗಳೆಂದು ಹೇಳಿರುವದೂ ಅದಕ್ಕೇ ಸಂಬಂಧಪಟ್ಟದ್ದು ಎನ್ನುವದಕ್ಕೆ ಸಂಶಯವಿಲ್ಲ. ಆದರೆ ವರ್ಣಾಶ್ರಮಧರ್ಮವು ಕುಸಿದುಬಿದ್ದಿರುವ ನಮ್ಮ ದೇಶದ ಸದ್ಯಃಸ್ಥಿತಿಯಲ್ಲಿ ಸ್ವಧರ್ಮ, ಪರಧರ್ಮಗಳ ವಿಂಗಡವು ಆಗುವಂತಿಲ್ಲ. ಲಾಟರಿಯಲ್ಲಿನ ಲಾಭದಂತೆ ಯಾರು ಯಾವ ಧರ್ಮವನ್ನು ಹಿಡಿದರೆ ಅದೇ ಅವರದಾಗಿಬಿಡುವಂತಿದೆ. ಆದ್ದರಿಂದ ಸದ್ಯಕ್ಕೆ ಅವರವರ ಪಾಲಿಗೆ ಬಂದಿರುವ ಸ್ವಕರ್ಮವನ್ನೇ ಹಿಡಿದು ಮಾತನಾಡಿದರೂ ಅದನ್ನೂ ಈ ನಿಯಮಕ್ಕೆ ಹೊಂದಿಸಿಕೊಳ್ಳುವದು ಅವಶ್ಯ.

ದುರದೃಷ್ಟದಿಂದ ಇನ್ನೊಂದು ಅಡಚಣೆಯು ಈಗ್ಗೆ ತೋರಿಕೊಳ್ಳುತ್ತಿದೆ. ನಮ್ಮ ನಮ್ಮ ರುಚಿಯನ್ನು ಅಭಿಲಕ್ಷಿಸಿ ವಿದ್ಯಾಭ್ಯಾಸವನ್ನು ಮಾಡಿಸುವ ಏರ್ಪಾಡಾಗಲಿ ಕೆಲಸವನ್ನು ಒದಗಿಸುವ ಏರ್ಪಾಡಾಗಲಿ ಈಗ ಇರುವುದಿಲ್ಲ. ವಿದ್ಯಾಭ್ಯಾಸದಲ್ಲಿ ಮೊದಲಿನಿಂದ ಐಚ್ಛಿಕಭಾಗಗಳೆಂದು ನಿಯಮಿಸಿರುವ ಕೆಲಕೆಲ ವಿಷಯಗಳಲ್ಲಿ ಯಾವದಾದರೊಂದನ್ನು ಕಡ್ಡಾಯವಾಗಿ ಆರಿಸಿಕೊಂಡು ಕಲಿಯಬೇಕಾಗಿದೆ ; ಮುಂದೆ ಆಯಾ ಸಮಯಕ್ಕೆ ನಮಗೆ ದೊರೆತ ಕೆಲಸವನ್ನು ಆರಿಸಿಕೊಂಡು ಹೇಗೋ ಮುಂದುವರಿಯಬೇಕಾಗಿದೆ. ಸ್ಕೂಲುಗಳಲ್ಲಿ ಕೆಲಹುಡುಗರು ಲೆಕ್ಕದ ತರಗತಿಯಲ್ಲಿ ಹಾಡುವದುಂಟು ; ಅವರಿಗೆ ಹಾಡಿನಮೇಲೆ ರುಚಿಯಿದ್ದರೂ ಅವರಿಗೆ ನಾವು ಸಂಗೀತವಿದ್ಯೆಯನ್ನು ಕಲಿಸುವ ಗೋಜಿಗೆ ಹೋಗುವದಿಲ್ಲ ತಾಯಿತಂದೆಗಳು ತಮಗೆ ಅಭಿಮತವಾದ ವಿಷಯಗಳನ್ನೇ ಮಕ್ಕಳಿಗೂ ಕಲಿಸುವದಕ್ಕೆ ಹೋಗುತ್ತಾರೆ ; ಕಾಲಕ್ರಮದಲ್ಲಿ ಅವರಿಗೆ ಆ ವಿಷಯಗಳು ಯಾವ ಉಪಯೋಗಕ್ಕೂ ಬಾರದೆಹೋಗಬಹುದು. ಮಕ್ಕಳ ಮನಸ್ಸಿನ ಪ್ರವಾಹವು ಎತ್ತ ಹರಿಯುತ್ತಿರುವದೋ ಅದಕ್ಕೆ ತಕ್ಕ ಉತ್ತಮವಿಷಯಗಳನ್ನು ಮಕ್ಕಳಿಗೆ ಆರಿಸಿಕೊಡುವದು ನಿಜವಾದ ವಿದ್ಯಾಭ್ಯಾಸ ವಾಗುತ್ತದೆ. ಉಪಾಧ್ಯಾಯನು ಹಿಂದೆ ಇದ್ದುಕೊಂಡು ಮಕ್ಕಳಿಗೆ ಮಾರ್ಗದರ್ಶಿ ಯಾಗಿದ್ದುಕೊಂಡು ವಿದ್ಯಾಭ್ಯಾಸಮಾಡಿಸುವ ಪದ್ಧತಿಯು ಆಚರಣೆಗೆ ಬರಬೇಕು ; ಮಂಡಿಪೇಟೆಯಲ್ಲಿ ಧಾನ್ಯವನ್ನು ಅಳೆಯುವವನಿಗೆ ಹೊಂದುವಂತೆ ಚೀಲವನ್ನು ಆಳುಗಳು ಒಡ್ಡುತ್ತಾರೆ. ಹಾಗೆ ಕಿವಿಯನ್ನು ಮಾತ್ರ ಕೊಟ್ಟು ಉಪಾಧ್ಯಾಯರು ಹೇಳುವ ವಿಷಯಗಳನ್ನು ತುಂಬಿಕೊಳ್ಳುವದು ಎಂದಿಗೂ ವಿದ್ಯಾಭ್ಯಾಸವಾಗಲಾರದು. "ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" ಎಂದಿರುವಂತೆ ಕೇಳಿದ್ದನ್ನು ಮನನಮಾಡಿ ಅನುಭವಕ್ಕೆ ತಂದುಕೊಳ್ಳುವ ಪ್ರಯತ್ನವೂ ನಡೆದಿರಬೇಕು.

ಇರಲಿ, ಪ್ರಕೃತದಲ್ಲಿ ಅವರವರ ಪಾಲಿಗೆ ಬಂದದ್ದೇ ಅವರವರ ಕರ್ಮವಾಗಿರುತ್ತದೆಯಷ್ಟೆ. ಇದ್ದಷ್ಟು ಅವಕಾಶದಲ್ಲಿ ನಮ್ಮ ನಮ್ಮ ಮನಸ್ಸಿಗೆ ಹೊಂದುಗೆಯಾದ ಕೆಲಸವನ್ನು ಆರಿಸಿಕೊಂಡು ಇದು ನನ್ನ ಪಾಲಿಗೆ ಬಂದದ್ದಾದ್ದರಿಂದ ಇದನ್ನು ಉತ್ತಮರೀತಿಯಿಂದ ಮಾಡಿ ಭಗವಂತನಿಗೆ ತೃಪ್ತಿಯನ್ನುಂಟುಮಾಡುವೆನು ಎಂಬ ಸಂಕಲ್ಪವನ್ನು ಮಾಡಿಕೊಳ್ಳಬೇಕು. ಅದರಿಂದಲೇ ನಮಗೆ ಶ್ರೇಯಸ್ಸಾಗುವದು ; ಒಂದಾನೊಂದು ಸಂಸ್ಕೃತ ಪಾಠಶಾಲೆಯಲ್ಲಿ ಶೂದ್ರಕಕವಿಯ ಮೃಚ್ಛಕಟಿಕ ನಾಟಕದಲ್ಲಿನ ಒಂದು ಭಾಗವನ್ನು ವಿದ್ಯಾರ್ಥಿಗಳಿಂದ ಅಭಿನಯಮಾಡಿಸಿದ್ದರು. ಪ್ರದರ್ಶನವು ಬಹಳ ಯಶಸ್ವಿಯಾಗಿದ್ದರಿಂದ ನೋಡುವದಕ್ಕೆ ಅನೇಕ ದೊಡ್ಡ ಮನುಷ್ಯರುಗಳು ದಯಮಾಡಿಸಿದ್ದರು. ಆ ಸಂದರ್ಭಕ್ಕೆ ಒಬ್ಬ ಪಂಡಿತರನ್ನು ಟಿಕೆಟ್ ಕೊಡುವ ಕೆಲಸಕ್ಕೆ ನಿಯಮಿಸಿದ್ದರು. ಅವರು ಆ ಕೆಲಸವನ್ನು ಶ್ರದ್ಧಾದರಗಳಿಂದ ಮಾಡುತ್ತಾ ಆಯಾ ವ್ಯಕ್ತಿಗಳನ್ನು ತಕ್ಕ ಗೌರವದಿಂದ ಬರಮಾಡಿಕೊಳ್ಳುವದರಲ್ಲಿ ತೋರಿಸಿದ ಕೌಶಲವನ್ನು ಸಭಾಂಗಣದಲ್ಲಿ ನಡೆದ ನ್ಯಾಯಾಸ್ಥಾನದ ದೃಶ್ಯದ ಪಾತ್ರಗಳನ್ನು ಶ್ಲಾಘಿಸುವಂತೆಯೇ ಬಂದ ಸಭಿಕರು ಶ್ಲಾಘಿಸಿದರು ! ಆ ಕೆಲಸವೂ ಬಹಳ ಹೊಣೆಗಾರಿಕೆಯದು ; ಅದನ್ನು ಚೆನ್ನಾಗಿ ಮಾಡಿದ್ದರಿಂದಲೂ ಆ ಪಂಡಿತರಿಗೆ ಪ್ರೇಕ್ಷಕರ ಶ್ಲಾಘನೆಯೇ ದೊರೆಯಿತು. ಈ ನಮ್ಮ ಕಾರ್ಯಾಲಯದಲ್ಲಿ ಬೇರೆ ಬೇರೆಯವರು ತಮ್ಮ ತಮ್ಮ ಪಾಲಿನ ಕೆಲಸವನ್ನು ಈಶ್ವರಪ್ರೀತಿಗೆಂದು ಮಾಡುತ್ತಿದ್ದಾರೆ. ತಾವು ಮಾಡುವ ಕೆಲಸವನ್ನು ಮತ್ತೊಬ್ಬರು ನೋಡಲಿ ನೋಡದಿರಲಿ, ಅದನ್ನು ಯಾರಾದರೂ ಮೆಚ್ಚಲಿ ಮೆಚ್ಚದಿರಲಿ, ಯಾರು ಅಷ್ಟೇ ಶ್ರದ್ಧೆಯಿಂದ ಮಾಡುತ್ತಿರುವರೋ, ಈ ಕೆಲಸವು ಭಗವಂತನಿಗೆ ಅರ್ಪಿತವಾಗಲಿ ಎಂದು ಯಾರ ಮನಸ್ಸಿನಲ್ಲಿ ನಿಜವಾಗಿ ಭಾವನೆಯಿರುವದೋ ಅವರು ಮಾಡುವ ಕರ್ಮವು ವೇದೋಕ್ತಕರ್ಮವನ್ನು ಈಶ್ವರಾರ್ಪಣೆಮಾಡುವ ಕರ್ಮಯೋಗಕ್ಕೆ ಸಮಾನವಾಗುತ್ತದೆ. ನದಿಯಲ್ಲಿ ಬೇರೆ ಬೇರೆಯ ಕಡೆಯಿಂದ ತೇಲಿಕೊಂಡು ಬರುವ ಕಡ್ಡಿಗಳು ಆಗಾಗ್ಗೆ ಕೂಡಿದ್ದು ಮತ್ತೆ ಪ್ರವಾಹದ ವೇಗದಿಂದ ಒಂದನ್ನೊಂದು ಅಗಲಿ ಕೊಚ್ಚಿಕೊಂಡು ಹೋಗುವಂತೆಯೇ ಕಾಲಕರ್ಮವಶದಿಂದ ನಾವುಗಳೂ ಒಬ್ಬರೊಡನೊಬ್ಬರು ಸೇರಿರುವೆವು. ಈ ಸಮಯದಲ್ಲಿ ನಮ್ಮ ನಮ್ಮ ಕೆಲಸವನ್ನು ಮನಃಪೂರ್ವಕವಾಗಿ ಮಾಡಿ ಚಿತ್ತನೈರ್ಮಲ್ಯವನ್ನು ಪಡೆದುಕೊಳ್ಳೋಣ. ಇದೇ ಈಶ್ವರಾರ್ಥಕರ್ಮ. ಇಂತಿಂಥ ಕೆಲಸವು ನನ್ನ ಪಾಲಿಗೆ ಬಂದರೆ ಚೆನ್ನಾಗಿ ಮಾಡಿಯೇನು ಎನ್ನುವವನಿಗಿಂತ ಯಾವದು ನನ್ನ ಪಾಲಿಗೆ ಬರುವದೋ ಅದನ್ನೇ ಚೆನ್ನಾಗಿ ಮಾಡುವೆನು ಎನ್ನುವದೇ ಉತ್ತಮ.

ಯಾವ ಕರ್ಮಕ್ಕೆ ಫಲವು ಏನೇ ಆಗಲಿ, ಅದನ್ನು ಮನಸ್ಸಿಗೆ ತಾರದೆ ಈಶ್ವರಪ್ರೀತಿಗೆಂದು ಮಾಡುವ ಕರ್ಮವೇ ಈಶ್ವರಾರ್ಥಕರ್ಮವು. ಯಾವ ಕರ್ಮವೂ ದೋಷವಿಲ್ಲದ್ದಲ್ಲ. ಲಾಯರಿಗೆ ಸ್ಕೂಲುಮೇಷ್ಟರ ಕೆಲಸವು ಚೆನ್ನಾಗಿದೆ ಎಂದು ಕಾಣಬಹುದು ; ಮೇಷ್ಟರಿಗೆ

ಎಂಜಿನಿಯರ ಕೆಲಸವು ಉತ್ತಮವೆಂದು ತೋರಬಹುದು. ಆದರೆ ಎಲ್ಲಾ ಕೆಲಸದಲ್ಲಿಯೂ ಗುಣವೂ ದೋಷವೂ ಇದ್ದೇ ಇರುತ್ತದೆ ಎಂಬುದು ನಿಶ್ಚಯ. ಆದ್ದರಿಂದ ಪಾಲಿಗೆ ಬಂದದ್ದೇ ಪರಮಾನ್ನ ಎಂದು ತೃಪ್ತಿಯಿಂದ ಕೆಲಸಮಾಡುವದನ್ನು ನಾವು ಕಲಿಯಬೇಕು. ಜಡ್ಜಿಯು ತೀರ್ಪನ್ನು ಕೊಡುತ್ತಾನೆ, ಆಯಾ ದಂಡವನ್ನು ಆಚರಣೆಗೆ ತರುವದು ಮತ್ತೊಬ್ಬನ ಪಾಲಿಗೆ ಬರುತ್ತದೆ. ಅವರವರ ಕೆಲಸವನ್ನು ಅವರವರು ಸರಿಯಾಗಿ ಮಾಡಬೇಕಾಗುತ್ತದೆ. ಶಾಕುಂತಲನಾಟಕದಲ್ಲಿ ಬೆಸ್ತರವನನ್ನು ಉಂಗುರಸಮೇತವಾಗಿ ಆಸ್ಥಾನಕ್ಕೆ ತಂದ ಪೋಲೀಸಿನವನು ಇವನಿಗೆ ಶಿಕ್ಷೆಯಾದರೆ ಹೀಗೆ ಹೀಗೆ ಮಾಡುವೆನು ಎಂದು ಮನಸ್ಸಿನಲ್ಲಿ ಗುಣಿಸಿಕೊಳ್ಳುತ್ತಿದ್ದನು ; ಆದರೆ ಕಾರಣಾಂತರದಿಂದ ಬೆಸ್ತನಿಗೆ ಪಾರಿತೋಷಕವು ಸಿಕ್ಕಲು ಅವನನ್ನು ಹೊಗಳತೊಡಗಿದನು. ಇದು ಪೋಲೀಸಿನವನಿಗೆ ಸ್ವಭಾವನಿಯತವಾದ ಕರ್ಮವೆನಿಸೀತೆ?

ಸ್ವಭಾವನಿಯತವಾದ ಕರ್ಮವು ದೋಷವಾದಮಾತ್ರಕ್ಕೆ ಅದನ್ನು ಬಿಡಬಾರದು ; ಧರ್ಮವ್ಯಾಧನು ತನ್ನ ಸ್ವಭಾವದಿಂದ ಪ್ರಾಪ್ತವಾಗಿದ್ದ ಕಟುಕನ ವೃತ್ತಿಯನ್ನು ನಡೆಯಿಸಿಕೊಂಡುಬರುತ್ತಿದ್ದರೂ ತಂದೆತಾಯಿಗಳ ಸೇವೆಯೇ ಮುಂತಾದ ಧಾರ್ಮಿಕವೃತ್ತಿಯಿಂದ ತಪಸ್ವಿ ಬ್ರಾಹ್ಮಣನಿಗೂ ಉಪದೇಶಮಾಡುವಂಥ ಉಚ್ಚಸ್ಥಾನ ವನ್ನೇರಿದ್ದನೆಂದು ಭಾರತದಲ್ಲಿ ಹೇಳಿರುವದರ ಮರ್ಮವೇ ಇದು. ಉಪಾಧ್ಯಾಯನು ತಪ್ಪುಮಾಡಿದ ಹುಡುಗರನ್ನು ಸಮಾಧಾನದಿಂದ ತಿದ್ದುವದು, ರೇಷನ್ ಡಿಪೋವಿನಲ್ಲಿ ದಿನಸುಗಳನ್ನು ಹಂಚುವವನು ಜನರ ಗದ್ದಲವಿದ್ದರೂ ತನ್ನ ಕೆಲಸವನ್ನು ಎಲ್ಲರಿಗೂ ಸಮರ್ಪಕವಾಗುವಂತೆ ಮಾಡುವದು - ಇವೆಲ್ಲ ಸಣ್ಣಕೆಲಸವೆಂದು ಭಾವಿಸಲಾಗದು. ಆ ಸ್ಥಿತಿಯಲ್ಲಿದ್ದರೆ ಕೆಲಸವನ್ನು ಇನ್ನೂ ಚೆನ್ನಾಗಿ ಮಾಡುತ್ತಿದ್ದೆನು ಎನ್ನುವ ಒಣಹಂಬಲಿಗಿಂತ ಈಗ ಬಂದೊದಗಿರುವ ಕೆಲಸವನ್ನು ಉತ್ತಮವಾಗಿ ಮಾಡುವದೇ ಉತ್ತಮವಾದದ್ದು. ಪರಮೇಶ್ವರನು ನಮ್ಮ ಇಂಥ ವರ್ತನೆಯಿಂದ ಪ್ರೀತನಾಗಿ ನಮ್ಮ ಸ್ವಭಾವಕ್ಕೆ ತಕ್ಕ ಕೆಲಸವನ್ನೇ ನಮಗೆ ಕಾಲಕ್ರಮದಲ್ಲಿ ಒದಗಿಸಿಕೊಡುತ್ತಾನೆ. ಈಶ್ವರನ ಅಸ್ತಿತ್ವವನ್ನು ನಂಬದೆ ಇರುವವನು ಕೂಡ ತನ್ನ ಕೆಲಸವನ್ನು ಸರಿಯಾಗಿ ಮಾಡಿದರೆ ಅವನಿಗೂ ಈಶ್ವರನು ಉತ್ತಮಫಲವನ್ನು ಕೊಡುತ್ತಾನೆ. ಇವನು ನಾಸ್ತಿಕನು ಎಂದೇನೂ ಅವನನ್ನು ಈಶ್ವರನು ಕೈಬಿಡುವದಿಲ್ಲ. ಇದೇ ಸ್ವಕರ್ಮದಿಂದ ಸಿದ್ಧಿಯನ್ನು ಪಡೆಯುವ ಪ್ರಕಾರದ ರಹಸ್ಯವು.



# ೧೮೮. ನೈಷ್ಕರ್ಮ್ಯಸಿದ್ಧಿ 18 - (49)

## (1-10-50)

ತಮ್ಮ ತಮ್ಮ ಕರ್ಮದಿಂದ ಈಶ್ವರನ ಅಭ್ಯರ್ಚನೆಯನ್ನು ಮಾಡುವದರಿಂದ ಸಂಸಿದ್ಧಿಯನ್ನು ಹೊಂದುತ್ತಾರೆಂಬುದು ಗೀತೆಯ ಒಂದು ಬಹುಮುಖ್ಯವಾದ ಉಪದೇಶವು. ಸ್ವಭಾವಪ್ರಾಪ್ತವಾದದ್ದೇ ನನ್ನ ಕರ್ಮವು ಎಂಬ ತತ್ತ್ವವನ್ನು ಅರಿಯಲಾರದೆ ಜನರು ಮತ್ತೊಬ್ಬರ ಕರ್ಮಕ್ಕೆ ಕೈಹಾಕುತ್ತಿರುವರು. ಇಷ್ಟೆ ಅಲ್ಲ. "ಇದು ನನ್ನ ಕೆಲಸವು . ಅವನು ಹೇಗೆ ಮಾಡಿದ?" ಎಂದು ಆಕ್ಷೇಪಿಸುವವರೆಗೂ ನಮ್ಮ ಬುದ್ಧಿಯು ಹೋಗುತ್ತದೆ. ಭಿಕ್ಷುಕನಿಗೆ "ಭಿಕ್ಷೆಯಿಲ್ಲ ಹೋಗು ಎಂದು ಹೇಳುವ ಅಧಿಕಾರವು ನನ್ನದು, ಸೊಸೆಗೆಲ್ಲಿ ಬಂತು ಈ ಅಧಿಕಾರ?- ಎಂದು ಆಕ್ಷೇಪಿಸಿದ ಅತ್ತೆಯ ಅನುಕರಣವೇ ನಮ್ಮ ಕರ್ಮದಲ್ಲಿ ಎದ್ದು ಕಾಣುತ್ತಿರುತ್ತದೆ" ಆದರೆ ನಿಜವಾಗಿ ನನ್ನ ಕರ್ಮವೆಂದರೇನು ? ನನ್ನನ್ನು ಸರಿಯಾದ ಮಾರ್ಗಕ್ಕೆ ತೆಗೆದುಕೊಂಡು ಹೋಗುವ ಕರ್ಮ. ಎಲ್ಲಾ ಕರ್ಮಗಳೂ ನಮಗೆ ಹೊಂದುವದಿಲ್ಲ ; ಸಹಜವಾದ ಕರ್ಮದಿಂದ ಯಾರಿಗೂ ಹಿಂಸೆಯಾಗದು. ಆದರೆ ಕೃತ್ರಿಮವಾದ ಕರ್ಮದಿಂದ ಎಲ್ಲರಿಗೂ ತೊಂದರೆಯಾಗುತ್ತದೆ. ಆದ್ದರಿಂದ ಸಹಜವಾದ ಕರ್ಮವು ಸದೋಷವಾದರೂ ಅದನ್ನು ಬಿಡಬಾರದು. ಅದನ್ನೇ ಸಂಗವಿಲ್ಲದೆ, ಫಲಾಸಕ್ತಿಯಿಲ್ಲದೆ ಮಾಡುತ್ತಿರಬೇಕು. ಅದರಿಂದಲೇ ಉತ್ತಮವಾದ ಸಿದ್ಧಿಯಾಗುವದು.

ಸ್ವಕರ್ಮವನ್ನು ಹೀಗೆ ಈಶ್ವರಾರ್ಪಣಬುದ್ಧಿಯಿಂದ ಮಾಡುತ್ತಿದ್ದರೆ ಆಗಬೇಕಾಗಿರುವ ಪರಮಫಲವು ಯಾವದು ?- ಎಂಬುದನ್ನು ಈಗ ಭಗವಂತನು ಸ್ಪಷ್ಟಗೊಳಿಸುತ್ತಾನೆ :

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥** 18 - 49

ಅಸಕ್ತಬುದ್ಧಿ ಎಂದರೇನು ? ಏತರಲ್ಲಿಯೂ ಅಂಟಿಕೊಳ್ಳದೆ ಇರುವ ಬುದ್ಧಿಯು. ಈ ಜಗತ್ತು ಕ್ರಿಯಾಕಾರಕಫಲರೂಪವಾಗಿರುತ್ತದೆ ಎಂದು ಆಚಾರ್ಯರು ಆಗಾಗ್ಗೆ ವರ್ಣಿಸಿರುತ್ತಾರೆ. ಯಾವನು ಕ್ರಿಯೆಯಲ್ಲಾಗಲಿ, ಕಾರಕಗಳಲ್ಲಾಗಲಿ, ಫಲದಲ್ಲಾಗಲಿ, ನನ್ನದು ಎಂಬ ಬುದ್ಧಿಯಿಂದ ಸಕ್ತನಾಗದೆ ಇರುವನೋ ಅವನು ಅಸಕ್ತಬುದ್ಧಿಯು. ಈ ಜಗತ್ತಿನ ವ್ಯವಹಾರವು ಆನಂದಮಯವಾಗಿ ಸಾಗುವದಕ್ಕೆ ಅಸಕ್ತಿಯು ಅತ್ಯವಶ್ಯ. ಒಂದು ಸಂಗೀತವನ್ನು ನೋಡಿರಿ. ಅಲ್ಲಿ ಗಾನಮಾಡುವವನು, ಪಕ್ಕವಾದ್ಯಗಳವರು, ಎಲ್ಲರೂ ಹೊಂದಿಗೆಯಿಂದ ಕೆಲಸಮಾಡುತ್ತಿರುವದರಿಂದ ಅದು ಸಂಗೀತ- ಹೊಂದುಗೆಯ ಗೀತವಾಗಿರುತ್ತದೆ. ಎಲ್ಲಿಯವರೆಗೆ ಗಾನವು ಇಂಪಾಗಿರುವದೋ ಹಾಡುವ ಕೀರ್ತನೆಯು ಸ್ಪಷ್ಟೋಚ್ಚಾರಣೆಯಿಂದ ಕೂಡಿದ್ದು ಸಭಿಕರ ಮನಸ್ಸನ್ನೂ ಭಾವೋದ್ರೇಕದಲ್ಲಿ ಮುಳುಗಿಸಿರುವದೋ ಅಲ್ಲಿಯವರೆಗೆ,

ಅದು ಸಂಗೀತವು. ಪಿಟೀಲಿನವನು ಗಾನಕ್ಕೆ ಹೊಂದುಗೆಯಾದ ಶ್ರುತಿಯಲ್ಲಿ ಇದೆಲ್ಲ ಒಂದೇ ರಾಗವೋ, ಒಂದೇ ಸ್ಥಾನದಿಂದ ಹೊರಡುವ ಇಂಪಿನ ಧ್ವನಿಯಿದೋ, ಎಂಬಂತೆ ತೋರುವ ಹಾಗೆ ತನ್ನ ವಾದ್ಯವನ್ನು ಬಾರಿಸುತ್ತಿರುವನೋ ಅಲ್ಲಿಯವರೆಗೂ ಅದು ಸಂಗೀತವಾಗಿರುತ್ತದೆ. ಹೀಗೆಯೇ ಗಾನದ ಸ್ವಾರಸ್ಯವನ್ನು ಹೆಚ್ಚಿಸುವದಕ್ಕೆ ಮಾತ್ರವೇ ತಕ್ಕಷ್ಟು ಮೃದುವಾಗಿ ತಬಲವನ್ನು ಬಾರಿಸುತ್ತಿರುವವರೆಗೂ ಅದು ನಿಜವಾಗಿ ಹಿಮ್ಮೇಳವೆನಿಸಿ ಒಟ್ಟನ್ನು ಸಂಗೀತಶಬ್ದಕ್ಕೆ ಅರ್ಹವಾಗಿಸುತ್ತಿರುತ್ತದೆ. ಹಾಗಿಲ್ಲದೆ ಪಿಟೀಲಿನವನು ತನ್ನ ಕೌಶಲವನ್ನೂ ತಬಲದವನು ತನ್ನ ಕೌಶಲವನ್ನೂ ತೋರಿಸಿಕೊಳ್ಳಬೇಕೆಂದು ತಮ್ಮ ತಮ್ಮ ವಾದ್ಯಗಳ ನಾದವು ಗಾನವನ್ನೇ ಮುಚ್ಚಿಬಿಡುವಂತೆ ಮಾಡಿದರೆ ಅದು ಸಂಗೀತವಾಗುವ ಬದಲು ವಿಗೀತವಾಗಿಬಿಡುವದು. ಹೀಗೆ ಕ್ರಿಯಾಕಾರಕಫಲಗಳು ಒಂದಕ್ಕೊಂದು ಹೊಂದುಗೆಯಿಂದಿದ್ದು ವ್ಯವಹಾರವನ್ನು ಸಾಗಿಸಬೇಕಾದರೆ ನಮಗೆ ಅವುಗಳಲ್ಲಿ ಯಾವಮೊಂದರಲ್ಲಿಯೂ ಹೆಚ್ಚಿನ ಆಸಕ್ತಿಯಿರಬಾರದು. ನಾವು ಮನಸ್ಸನ್ನು ಜಯಿಸಿಕೊಂಡು ಯಾವದೊಂದರ ಆಶೆಯೂ ಇಲ್ಲದವರಾಗಬೇಕು. ಮನುಷ್ಯನು ತನ್ನ ವ್ಯವಹಾರವನ್ನು ಮಾಡುತ್ತಿರುವಾಗ ಇದು ಹೀಗಾಗಬೇಕು, ಇಂಥಿಂಥ ಸಾಮಗ್ರಿಗಳು ನನಗಿರಬೇಕು, ಇಂಥಿಂಥ ಫಲವು ನನಗಾಗಬೇಕು-ಎಂಬ ದುರಾಗ್ರಹವನ್ನು ತೊಡದೆ ಎಲ್ಲೆಲ್ಲಿಯೂ ಅಸಕ್ತನಾಗಿ ವಿಗತಸ್ಪೃಹನಾಗಿದ್ದರೆ ಆಗ ಅವನ ವ್ಯವಹಾರದಲ್ಲಿ ಅಕೃತ್ರಿಮವಾದ ಆನಂದವು ಕಾಣಿಸಿಕೊಳ್ಳುವದು.

ನೈಷ್ಕರ್ಮ್ಯವೆಂಬ ಪರಮಸಿದ್ಧಿಯನ್ನು ಸಂನ್ಯಾಸದಿಂದ ಪಡೆದುಕೊಳ್ಳುತ್ತಾನೆ ಎಂಬ ಶ್ಲೋಕಾರ್ಥವನ್ನು ಅರ್ಥಮಾಡಿಕೊಳ್ಳಬೇಕಾದರೆ ಸಂನ್ಯಾಸವೆಂಬ ಶಬ್ದದ ಸ್ವಾರಸ್ಯವನ್ನು ನಾವು ಗ್ರಹಿಸಬೇಕಾಗುತ್ತದೆ. ಕರ್ಮವನ್ನು ಮಾಡುತ್ತಲೂ ಇರುವದು, ಕರ್ಮವನ್ನು ಸಂನ್ಯಾಸಮಾಡುವದು - ಇವೆರಡೂ ಒಂದೇ ಕಾಲಕ್ಕೆ ಸಾಧ್ಯವೇ? ಎಂದರೆ ಅದು ಅಸಕ್ತಿಯಿಂದ ಸಾಧ್ಯವಾಗುತ್ತದೆ. ಗಾಂಧಿಯವರು ಗೀತೆಯಲ್ಲಿ ಹೇಳಿರುವದು ಅನಾಸಕ್ತಿಯೋಗ ಎಂದು ಬರೆದಿರುತ್ತಾರೆ. ಅವರು ತಮ್ಮ ಜೀವನದಲ್ಲಿ ಅನಾಸಕ್ತಿಗೇ ಉದಾಹರಣೆ ಯಾಗಿದ್ದರೆನ್ನಬಹುದು. ಪ್ರಪಂಚದಲ್ಲಿರಬೇಕು, ಆದರೆ ಅಂಟಿಕೊಳ್ಳಬಾರದು - ಎಂಬ ಕವಿಯ ಉಕ್ತಿಗೆ ಇದೇ ಅರ್ಥ. ಜಾದುಗಾರನು ಒಂದು ಬಗೆಯ ಹುಡಿಮಣ್ಣನ್ನು ನೀರಿನಲ್ಲಿ ಹಾಕಿ ಕಲಕಿದರೂ ಅದು ಕದರಿಕೊಂಡು ಒದ್ದೆಯಾಗದೆ ಇರುತ್ತದೆ. ಅದು ನೀರಿನಲ್ಲಿ ಕರಗಿದಂತೆ ತೋರುತ್ತದೆ; ಆದರೆ ಅವನು ಅದೇ ನೀರಿನಲ್ಲಿ ಕೈಹಾಕಿ ಒಣಮಣ್ಣನ್ನೇ ತೆಗೆಯುತ್ತಾನೆ ! ಹಾಗೆ ಇರಬೇಕು, ಅಸಕ್ತವಾದ ಮನಸ್ಸು. ಹೀಗಿದ್ದವನ ಮನಸ್ಸು ಕ್ರಿಯಾಕಾರಕಫಲಗಳ ಅಂಟಿಲ್ಲದೆ ಇರುತ್ತದೆ. ಹೀಗೆ ಸಂನ್ಯಾಸದಿಂದ ಪಡೆಯುವ ಸಿದ್ಧಿಯೇ ನೈಷ್ಕರ್ಮ್ಯಸಿದ್ಧಿಯು.

ಇಲ್ಲಿ ಹೇಳಿರುವ ಸಂನ್ಯಾಸವನ್ನು ಗೃಹಸ್ಥನಿಗೂ ಹೇಳಿದೆ ಎಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. "ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ !

ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ" ಎಂಬ ಶ್ಲೋಕದಲ್ಲಿ ವೇದೋಕ್ತವಾದ ಸಕಲಕರ್ಮಗಳನ್ನೂ ಮಾಡುತ್ತಿದ್ದರೂ ಎಲ್ಲವನ್ನೂ ಬ್ರಹ್ಮದೃಷ್ಟಿಯಿಂದ ನೋಡಿ ಯಾವದೊಂದು ಕರ್ಮದ ಅಂಟೂ ಇಲ್ಲದೆ ಇರುವದು ಸಾಧ್ಯವೆಂಬುದನ್ನು ಸ್ಪಷ್ಟವಾಗಿ ಹೇಳಿರುತ್ತದೆ. ಕರ್ಮವನ್ನು ಬ್ರಹ್ಮವಾಗಿ ಮಾರ್ಪಡಿಸಿಕೊಳ್ಳುವದೇ ನಿಜವಾದ ಸಂನ್ಯಾಸವು.

ಇದು ಕಷ್ಟವಾದ್ದರಿಂದ ಜನರು ನೈಷ್ಕರ್ಮ್ಯದ ಆಭಾಸವನ್ನು ಅವಲಂಬಿಸಿಕೊಂಡು ಆತ್ಮವಂಚಕರಾಗುತ್ತಿದ್ದಾರೆ. ಅದನ್ನು ಬಿಟ್ಟಿದ್ದೇನೆ, ಇದನ್ನು ಬಿಟ್ಟಿದ್ದೇನೆ - ಎಂದು ನೈಷ್ಕರ್ಮ್ಯಪ್ರದರ್ಶನವನ್ನು ಮಾಡುವವರು ಅನೇಕರು ಇರುತ್ತಾರೆ. ಆದರೆ ನೈಷ್ಕರ್ಮ್ಯವೆಂಬುದು ಕರ್ಮದ ಅಭಾವವಲ್ಲ. "ನಾನು ಜಡ್ಜಿಯು, ಆದ್ದರಿಂದ ನನ್ನ ಅಧಿಕಾರವನ್ನುಪಯೋಗಿಸಿ ಈ ಅಪರಾಧಿಯನ್ನು ಬಿಟ್ಟಿರುವೆನು" ಎನ್ನುವವನು ನಿಜವಾದ ಜಡ್ಜಿಯಲ್ಲ. ಯಾವ ಪಕ್ಷವನ್ನೂ ವಹಿಸದೆ, ನ್ಯಾಯವನ್ನು ಮಾತ್ರ ಅನುಸರಿಸುವವನಲ್ಲವೆ, ನ್ಯಾಯಾಧಿಪತಿ? ಕರ್ಮವನ್ನು ಬಿಡುವದರಲ್ಲಿ ನೈಷ್ಕರ್ಮ್ಯವಿಲ್ಲ, ಅದು ಕರ್ಮದಲ್ಲಿ ಅಸಕ್ತನಾಗಿ ಕರ್ಮದ ಕರ್ಮತ್ವವನ್ನು ತೊಡೆದುಹಾಕುವದರಲ್ಲಿದೆ. ಚಾಣಕ್ಯನು ರಾಜ್ಯವನ್ನು ಗೆದ್ದುಕೊಂಡಮೇಲೂ ಅದರಲ್ಲಿ ಅಸಕ್ತನಾಗಿಯೇ ಇದ್ದು ಮೊದಲಿನಂತೆಯೇ ಕಾಡಿಗೆ ಹೋದದ್ದು ಅವನ ಅಸಕ್ತತ್ವವನ್ನು ಹೊರಪಡಿಸುತ್ತದೆ. ಕರ್ಮವನ್ನು-ವೈದಿಕಕರ್ಮವನ್ನು ಅಥವಾ ಲೌಕಿಕಕರ್ಮವನ್ನು, ಇಷ್ಟೇ ಅಲ್ಲ, ಅನಿವಾರ್ಯವಾದ ಶಾರೀರಾದಿಕರ್ಮವನ್ನು ಕೂಡ-ಮಾಡುತ್ತಿರುವಾಗಲೇ ಅದು ನಿಜವಾಗಿ ಕರ್ಮವಲ್ಲ ಎಂಬ ತತ್ತ್ವವನ್ನು ಅರಿತುಕೊಂಡು ಅದರಲ್ಲಿ ರವೆಯಷ್ಟೂ ಸಂಗವಿಲ್ಲದೆ ಇರುವವನೇ ನಿಜವಾದ ನಿಷ್ಕರ್ಮನು. ಒಬ್ಬನು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಕಾಷಾಯಾದಿಗಳನ್ನು ಧರಿಸಿದರೆ ಅದರಲ್ಲೇನೂ ಆಶ್ಚರ್ಯವಿಲ್ಲ; ಅದು ನೈಷ್ಕರ್ಮ್ಯವಲ್ಲ. ಸಂಗವನ್ನೂ ಅಭಿಮಾನವನ್ನೂ ಬಿಟ್ಟು ಅಸಂಗವಾದ ಆತ್ಮಸ್ವರೂಪದಲ್ಲಿ ನಿಷ್ಠೆಯನ್ನು ಪಡೆಯುತ್ತಾನಲ್ಲ, ಅದೇ ನಿಜವಾದ ನೈಷ್ಕರ್ಮ್ಯ.

ಹಿಂದೆ ಋಷಿಗಳು ತಮ್ಮ ತಮ್ಮ ಆಶ್ರಮದಲ್ಲಿ ತಪಸ್ಸುಮಾಡಿಕೊಂಡಿರುತ್ತಿದ್ದರಷ್ಟೆ. ಅವರು ರಾಜನು ಕೇಳದೆ ಇದ್ದರೂ ತಮ್ಮ ತಪಷ್ಷಡ್ಭಾಗದ ಪುಣ್ಯವನ್ನು ಅವನಿಗೆ ಧಾರೆಯೆರೆಯುತ್ತಿದ್ದರಂತೆ. ಅವರು ಕಾಡಿನಲ್ಲಿ ಬೆಳೆದ ನೀವಾರಧಾನ್ಯವನ್ನೇ ತಿನ್ನುತ್ತಿದ್ದರಾದರೂ ತಾವು ಕೂಡಿಹಾಕಿದ್ದ ಧಾನ್ಯದಲ್ಲಿ ಆರನೆಯೊಂದು ಪಾಲನ್ನು ಒಂದು ಕಡೆ ಗುಡ್ಡೆಹಾಕಿ ರಾಜನ ಪಾಲೆಂದು ಬಿಟ್ಟು ಬಿಡುತ್ತಿದ್ದರಂತೆ! ಆದರೆ ಅವರುಗಳಲ್ಲಿ ಒಬ್ಬ ಋಷಿಯು ಮತ್ತೊಬ್ಬನ ಆಶ್ರಮಕ್ಕೆ ಮುತ್ತಿಗೆಹಾಕಿದನೆಂಬ ಸೊಲ್ಲಾದರೂ ನಮ್ಮ ಇತಿಹಾಸದಲ್ಲಿ ಕೇಳಬರುವದಿಲ್ಲ. ರಾಮನು ವನವಾಸಕ್ಕೆ ಬಂದಾಗ ಎಷ್ಟೋಜನ ಋಷಿಗಳು ರಾಕ್ಷಸರಿಗೂ ಅವನಿಗೂ ಎಲ್ಲಿಯಾದರೂ ಘರ್ಷಣೆಯಾಗಿ ಹೊಸಗದ್ದಲವೇಳಬಹುದೆಂಬ ಶಂಕೆಯಿಂದ ದೂರಕ್ಕೆ ಸರಿಯುತ್ತಿದ್ದರಂತೆ. ಇದರಂತೆ ಅಸಕ್ತನಾದವನ ಮನಸ್ಸು ವಿಷಯಗಳ ಅಭಿಮಾನದಿಂದ ಹಿಂಜರಿಯುತ್ತಿರುವದು, ಕ್ರಿಯಾಕಾರಕಫಲಗಳ ಸಕ್ತಿಯು ಎಳ್ಳಷ್ಟೂ ಇಲ್ಲದ್ದಾಗಿರುವದು.

ಆಸಕ್ತಿಯೆಂಬುದು ಮನಸ್ಸಿಗೆ ಸೇರಿದ್ದು. ಅದರ ಫಲವು ಹೊರಗೂ ಕಾಣಬಹುದು.ಅಷ್ಟೇ. ಎಡ್ವರ್ಡ್ ಕಾರ್ಪೆಂಟರ್ ಎಂಬಾತನು "ನಾಗರಿಕತೆಯೂ ಅದರ ನಿದಾನವೂ ಚಿಕಿತ್ಸೆಯೂ" ಎಂಬ ಇಂಗ್ಲಿಷು ಪುಸ್ತಕವೊಂದನ್ನು ಬರೆದಿರುತ್ತಾನೆ. ಆ ಗ್ರಂಥಕರ್ತನ ದೃಷ್ಟಿಯಲ್ಲಿ ನಾಗರಿಕತೆಯೆಂಬುದೊಂದು ರೋಗವು ! ಅದಕ್ಕೆ ಮಮತ್ವವೇ ಚಿಹ್ನೆಯು. ಮಮತ್ವವೆಂಬುದನ್ನು ಕಳೆದುಕೊಂಡವರು ನಾಗರಿಕತೆಯೆಂಬ ರೋಗದಿಂದ ಪಾರಾದಂತೆ! ಇದನ್ನು ಕೇಳಿ ಆಶ್ಚರ್ಯಪಡುವವರೂ ನಮ್ಮ ದೇಶದಲ್ಲಿರುತ್ತಾರೆ. ಆದರೆ ಈ ಅಭಿಪ್ರಾಯವು ನಮ್ಮ ದೇಶದಲ್ಲಿಯೇ ಮೊದಲು ಅಂಕುರಿಸಿತೆಂಬುದನ್ನು ಅನೇಕರು ಅರಿಯದೆ ಇರುತ್ತಾರೆ. "ಮಮೇತಿ ಬಧ್ಯತೇ ಜನ್ತುರ್ನ ಮಮೇತಿ ವಿಮುಚ್ಯತೇ"- ನನ್ನದು ಎಂಬ ಅಭಿಮಾನದಿಂದ ಜೀವನು ಬದ್ಧನಾಗುತ್ತಾನೆ, ನನ್ನದಲ್ಲ ಎಂಬ ಭಾವನೆಯಿಂದ ವಿಮುಕ್ತನಾಗುತ್ತಾನೆ ಎಂಬ ಭಾವವು ನಮ್ಮ ಅಧ್ಯಾತ್ಮಶಾಸ್ತ್ರಕ್ಕೆಲ್ಲ ಹಾಸುಹೊಕ್ಕಾಗಿರುತ್ತದೆ. ಮಮತೆಯಿಲ್ಲದವನು ಚಕ್ರವರ್ತಿಯಾದರೂ ಅಸಂಗನೇ; ಅದು ಒಳಗೆ ಹುದುಗಿಕೊಂಡಿರುವವನು ಎಂಥ ಭಿಕಾರಿಯಾದರೂ ಸಕ್ತನೇ- ಎಂಬ ತತ್ತ್ವವನ್ನು ಮಾತ್ರ ನಾವು ಇಲ್ಲಿ ಮರೆಯದಿರಬೇಕು. ಪರಮಾತ್ಮನು ಇಡಿಯ ಜಗತ್ತನ್ನೆಲ್ಲ ವ್ಯಾಪಿಸಿದ್ದರೂ ಅವನನ್ನು ಅಸಂಗನು ಎಂದೇ ಶ್ರುತಿಯು ವರ್ಣಿಸುತ್ತದೆ.

ಅಸಕ್ತಬುದ್ಧಿಃ ಎಂಬ ಮಾತು ಈ ಶ್ಲೋಕದ ಜೀವಾಳವು. ನಿಜವಾದ ಅಕರ್ಮವೆಂಬುದು ಅಸಂಗದಿಂದ ಮಾತ್ರವೇ ಬರತಕ್ಕದ್ದು ; ಏಕೆಂದರೆ ಸಂಗವೆಂಬ ಅಂಟನ್ನು ಬಿಡಿಸಿಕೊಳ್ಳುವದೇ ನೈಷ್ಕರ್ಮ್ಯದ ಮರ್ಮವು; ಅಸಂಗನಾದವನಿಗೆ ಕ್ರಿಯೆಯಿಲ್ಲ, ಕಾರಕಗಳಿಲ್ಲ, ಫಲವೂ ಇಲ್ಲ; ಇಡೀಯ ಜಗತ್ತೇ ಅವನ ಪಾಲಿಗೆ ಮಾಯವಾಗಿಬಿಟ್ಟಿರುತ್ತದೆ. ವಯಸ್ಸಾದವರು ಸಕ್ತರಾಗಿದ್ದರೆ ಅವರು ಇನ್ನೂ ಮಕ್ಕಳೇ ಎಂದು ಭಾವಿಸಬೇಕು ; ಚಿಕ್ಕಮಕ್ಕಳಿಗೂ ಮೀಸೆಬಂದ ಈ ಮಕ್ಕಳಿಗೂ ಸಂಗವಿರುವ ವಿಷಯದಲ್ಲಿ ಯಾವ ವಿಶೇಷವೂ ಇಲ್ಲ. ಸಂಗವಿರುವವನು ಕಾಮದಿಂದ ಅವಶ್ಯವಾಗಿ ಕರ್ಮದಲ್ಲಿ ತೊಡುಗುತ್ತಾನೆ. ಸಂಗವಿಲ್ಲದವನು ಎಷ್ಟು ಕರ್ಮಗಳನ್ನು ಮಾಡುವಂತೆ ತೋರಿದರೂ ನಿಜವಾಗಿ ನಿಷ್ಕರ್ಮನಾಗಿರುತ್ತಾನೆ. ಕೆಲವರು ಸಾಧುವೇಷಧಾರಿಗಳು ಅಲ್ಲಲ್ಲಿ ಓಡಾಡುತ್ತಾ ಸಾವಿರಾರು ಜನರಿಗೆ ಭೋಜನಸಂತರ್ಪಣೆ ಮಾಡಿಸುತ್ತೇವೆಂದು ಹೇಳಿಕೊಳ್ಳುತ್ತಿದ್ದಾರೆ. ಆದರೆ ಇದಕ್ಕಿಂತಲೂ ಜನರ ಮನಸ್ಸಿನ ಸಂಗವನ್ನು ತಪ್ಪಿಸುವ ಸಮಾರಾಧನೆಯನ್ನು ಮಾಡಿಸಿದರೆ ಅದೇ ನಿಜವಾದ ಸಂತರ್ಪಣೆಯಾಗುವದು. ಅದೇ ನಿಜವಾಗಿ ಸಾಧುಗಳ ಕೆಲಸ. ತಾನೂ ಅಸಕ್ತಬುದ್ಧಿಯಾಗಿದ್ದು ನೈಷ್ಕರ್ಮ್ಯಸಿದ್ಧಿಯನ್ನು ಪಡೆದು ತನ್ನ ಸುತ್ತಮುತ್ತಲಿನವರಿಗೂ ಈ ಅನಾಸಕ್ತಿಯನ್ನು ಕಲಿಸುವವನೇ ನಿಜವಾದ ಸಾಧು, ನಿಜವಾದ ಸಂನ್ಯಾಸಿ. ಸಾಲವನ್ನು ತೀರಿಸಬೇಕಲ್ಲ ಎಂಬ ಸಂಕಟದಿಂದ ಅಥವಾ ಮತ್ತೆ ಯಾವದಾದರೂ ಲೌಕಿಕನಿಮಿತ್ತರಿಂದ ದಿವಾಳಿಯಾಗಿ ಕೌಪೀನದಂಡಕಮಂಡಲುಗಳನ್ನು ಧರಿಸಿದವನು ಎಂದಿಗೂ ಸಂನ್ಯಾಸಿಯಲ್ಲ. ಕರ್ಮದ ಸಂಗವನ್ನು ಬಿಟ್ಟು ಅದ್ವಿತೀಯ ಬ್ರಹ್ಮದಲ್ಲಿ ನೆಲೆನಿಂತಿರುವದೇ ನೈಷ್ಕರ್ಮ್ಯಸಿದ್ಧಿಯು.

ನೈಷ್ಕರ್ಮ್ಯಸಿದ್ಧಿಯು ಪರಮವಾದದ್ದು ಎಂದು ಇಲ್ಲಿ ಭಗವಂತನು ಹೇಳಿರುತ್ತಾನೆ. ಕರ್ಮಗಳನ್ನು ಮಾಡಿದರೆ ಸಿಕ್ಕುವ ಫಲವು ಬರಿಯ ಸಿದ್ಧಿಯು ; ಫಲಾಸಕ್ತಿಯನ್ನು ಬಿಟ್ಟು ಈಶ್ವರಾರ್ಚನೆಮಾಡಿ ಕರ್ಮದಿಂದ ಚಿತ್ತಶುದ್ಧಿಯನ್ನು ಪಡೆದ ಬಳಿಕ ದೊರಕುವ ಜ್ಞಾನಯೋಗ್ಯತೆ ಎಂಬುದು ಸಂಸಿದ್ಧಿಯು. ಆದರೆ ಅಸಕ್ತಬುದ್ಧಿಯಿಂದ ಎಂದೆಂದಿಗೂ ಕೂಟಸ್ಥನಿತ್ಯನಾದ ನಿಷ್ಕರ್ಮನಾದ ಪರಮಾತ್ಮನಲ್ಲಿ ತಾದಾತ್ಮ್ಯವನ್ನು ಹೊಂದಿ ನಿಂತುಬಿಡುವ ನೈಷ್ಕರ್ಮ್ಯವೆಂಬುದು ಪರಮಸಿದ್ಧಿಯು. ಈ ಸಿದ್ಧಿಗೆ ಹೇತುವಾಗಿರುವ ಅಸಕ್ತಿಯೇ ಪರಮಸಂನ್ಯಾಸವು.

ಗೀತೆಯ ಉಪದೇಶಗಳಲ್ಲಿ ಸಾಂಖ್ಯ, ಯೋಗ-ಎಂಬ ಎರಡು ತತ್ತ್ವಗಳು ಅಡಗಿವೆ. ನಿಷ್ಕಾಮಕರ್ಮದಿಂದ ಪರಮೇಶ್ವರನನ್ನು ಅಭ್ಯರ್ಚನೆಮಾಡಿ ಚಿತ್ತಶುದ್ಧಿಯನ್ನು ಪಡೆಯುವದೇ ಯೋಗವು; ಆ ಯೋಗವೆಂಬ ಉಪಾಯದಿಂದ ಕರ್ಮಸಂನ್ಯಾಸವನ್ನು ಸಾಧಿಸಿಕೊಂಡು ನಿಷ್ಕರ್ಮನಾದ ಪರಮಾತ್ಮನಲ್ಲಿ ನಿಲ್ಲುವದೇ ಸಾಂಖ್ಯವು. ಅಂತೂ ಮಮತಾತ್ಯಾಗವೆಂಬ ಬೀಗದ ಕೈಯಿಂದಲೇ ಅಧ್ಯಾತ್ಮವೆಂಬ ಪೆಟ್ಟಿಗೆಯ ಬೀಗವನ್ನು ತೆಗೆಯಬೇಕಾಗಿರುತ್ತದೆ. ಮಮತಾತ್ಯಾಗವೆಂಬುದು ಕಷ್ಟ ಎಂದು ಕೆಲವರು, ನಾನು ನನ್ನದೆಂಬ ವ್ಯವಹಾರವೇ ಜೀವನದ ತಿರುಳಾದ್ದರಿಂದ ಮಮತಾತ್ಯಾಗವು ಕೂಡದೆಂದು ಕೆಲವರು- ಹೀಗೆ ತಪ್ಪುಹಾದಿಯನ್ನು ಹಿಡಿದು ಇಂದಿನ ಕಷ್ಟಪರಂಪರೆಯಲ್ಲಿ ಸಿಕ್ಕಿಕೊಂಡುಬಿಟ್ಟಿರುತ್ತೇವೆ. ನಾವು ವಿಷಯಗಳ ಮಮತೆಯನ್ನು ತ್ಯಾಗಮಾಡದೆ ಇದ್ದರೂ ವಿಷಯಗಳು ಕೈಬಿಟ್ಟು ನಮ್ಮನ್ನು ಇಲ್ಲದ ದುಃಖಕ್ಕೆ ಈಡುಮಾಡಿರುತ್ತವೆ. ಹೊಟ್ಟೆಬಟ್ಟೆಗೆ ನೇರವಾಗಿ ಇಲ್ಲದಷ್ಟು ದುಷ್ಕಾಲವು ಬಂದರೂ ನಾವು ಇನ್ನೂ ದೊಡ್ಡವರ ಬೋಧೆಗೆ ಕಿವಿಗೊಡದೆ ಇರುವದು ಎಷ್ಟು ಶೋಚನೀಯವು ! **ತ್ಯಾಗದಿಂದಲೇ ಅಮೃತತ್ವವೆಂಬ ವೇದವಾಕ್ಯದ ಸಾರವೇ ಗೀತೆಯ ಉಪದೇಶದ ಸಾರವು.** ಈಗಲಾದರೂ ನಾವು ಇಹಪರಸುಖಗಳಿಗೆ ಕಾರಣವಾಗಿರುವ ಶಾಸ್ತ್ರೋಪದೇಶವನ್ನು ನಂಬಿ ನಡೆಯಬೇಕು. ಮುಮುಕ್ಷುಗಳಾದವರಂತೂ ತ್ಯಾಗದ ಮರ್ಮವನ್ನು ತಿಳಿದುಕೊಂಡು ಸಂಸಾರಬಂಧದಿಂದ ಬಿಡುಗಡೆಯಾಗಬೇಕು.

ಈ ದಿನದ ಉಪನ್ಯಾಸದ ವಿಷಯವಾಕ್ಯವಾಗಿರುವ ಶ್ಲೋಕದಲ್ಲಿ ಅಸಕ್ತಿ, ಸಂನ್ಯಾಸ, ನೈಷ್ಕರ್ಮ್ಯ- ಈ ಪದಗಳ ನಿಜವಾದ ಅರ್ಥವನ್ನು ತಿಳಿದು ಶ್ಲೋಕಾರ್ಥವನ್ನು ಮನನಮಾಡುವ ಶಕ್ತಿಯನ್ನು ಭಗವಂತನು ನಮಗೆಲ್ಲ ಅನುಗ್ರಹಿಸಲಿ!

# ೧೮೯. ಜ್ಞಾನಪ್ರಾಪ್ತಿಗೆ ಉಪಾಯ 18 - (50-53)

## (8-10-50)

ಹದಿನೆಂಟನೆಯ ಅಧ್ಯಾಯವು ಗೀತಾಶಾಸ್ತ್ರಾರ್ಥದ ಉಪಸಂಹಾರವು. ಅರ್ಜುನನು ಈ ಅಧ್ಯಾಯದಲ್ಲಿ ತ್ಯಾಗದ ವಿಷಯವನ್ನೇ ಪ್ರಶ್ನೆಮಾಡಿರುವದರಿಂದ ಗೀತೆಗೆ ತ್ಯಾಗವೇ ಮುಖ್ಯವೆಂದು ಏರ್ಪಡುತ್ತದೆ. ಸಂಸ್ಕೃತಭಾಷೆಯಲ್ಲಿ ತ್ಯಾಗವೆಂಬ ಶಬ್ದಕ್ಕೆ ಬಿಡುವದು ಎಂಬ ಅರ್ಥವಿದೆ. ಆದರೆ ಈ ಶಾಸ್ತ್ರದಲ್ಲಿ ಬಿಡುವದನ್ನೇ ಪ್ರಧಾನವಾಗಿ ಹೇಳಿರುವಂತೆ ಕಾಣುವದಿಲ್ಲ. ಆದ್ದರಿಂದಲೇ ಅರ್ಜುನನು ತ್ಯಾಗದ ತತ್ತ್ವವೇನು? ಎಂದು ಕೇಳಿರುತ್ತಾನೆ. ತ್ಯಾಗವೆಂಬುದರ ಅಭಿಪ್ರಾಯವನ್ನು ಇಂಥದ್ದೆಂದು ನಿಶ್ಚಯಿಸುವದೇ ಈ ಪ್ರಶ್ನೋತ್ತರಗಳ ಗುರಿ ಎಂದಾಯಿತು.

ಆದರೆ ಭಗವಂತನು ತನ್ನ ಉಪದೇಶವನ್ನು ರಹಸ್ಯಮಾಡಿ ಹೇಳಿರುವದಿಲ್ಲ. ತಾನು ಹೇಳಿದ್ದನ್ನೇ ಮತ್ತೆ ಮತ್ತೆ ಹೇಳಿರುತ್ತಾನೆ. ಗೀತೆಯು ಮುಗಿಯುತ್ತಾ ಬಂದಿರುವದರಿಂದ ಪುನರುಕ್ತಿಯಾದರೂ ಚಿಂತೆಯಿಲ್ಲ ಎಂದು ತ್ಯಾಗಸಂನ್ಯಾಸ ಶಬ್ದಗಳ ಅರ್ಥವನ್ನು ಸ್ಪಷ್ಟಪಡಿಸಿ ಮತ್ತೂ ಹೇಳಿರುತ್ತಾನೆ. ತ್ಯಾಗ ಎಂಬುದು ಎರಡು ವಿಧವಾಗಿರುತ್ತದೆ. ಕರ್ಮಫಲದ ತ್ಯಾಗವನ್ನು ಮಾಡುವದು ಒಂದುಬಗೆಯ ತ್ಯಾಗ; ಅಕರ್ತೃತ್ವಜ್ಞಾನದಿಂದ ಕರ್ತೃತ್ವಜ್ಞಾನವನ್ನೇ ಕಳೆದುಕೊಂಡು ಬಿಡುವದು ಮತ್ತೊಂದು ಬಗೆಯ ತ್ಯಾಗ.

ಜನರು ಮನಸ್ಸಿನಲ್ಲಿ ಹೇಗೆ ನಿರ್ಣಯಿಸುವರೋ ಹಾಗೆಯೇ ವ್ಯವಹಾರದಲ್ಲಿ ನಡೆಯುತ್ತಾರೆ. ಇದು ಇಷ್ಟವಾದದ್ದು ಎಂದು ತಿಳಿದರೆ ಅದನ್ನು ತೆಗೆದುಕೊಳ್ಳುವದಕ್ಕೆ ಪ್ರವರ್ತಿಸುತ್ತಾರೆ; ಆದರೆ ಇದು ಅನಿಷ್ಟ ಎಂದು ನಿಶ್ಚಯವಾದರೆ ಅದನ್ನು ದೂರಾಗಿ ಇರಿಸುವದಕ್ಕೆ ಪ್ರಯತ್ನಿಸುತ್ತಾರೆ. ಈ ಪ್ರಪಂಚದಲ್ಲಿ ಎಲ್ಲವೂ ಬದಲಾಯಿಸುತ್ತಲೇ ಇರುತ್ತದೆ; ಆದರೆ ಇದೆಲ್ಲಕ್ಕೂ ಆಧಾರವಾಗಿದ್ದುಕೊಂಡು ತಾನು ಬದಲಾಯಿಸದೆ ಇರುವ ಒಂದು ವಸ್ತುವು ಇದೆ. ಅದನ್ನು ನಾವು ಹಿಡಿಯಬೇಕು ; ಬದಲಾಯಿಸುತ್ತಲೇ ಇರುವದನ್ನು ಹಿಡಿಯಬಾರದು-ಎಂಬುದು ನಮ್ಮ ದೇಶದಲ್ಲಿ ಹಿಂದಿನಿಂದಲೂ ಮಾಡಿರುವ ಉಪದೇಶ. ಸೋಮಾರಿಗಳಾದವರು ಇದನ್ನು ಸರಿಯಾಗಿ ತಿಳಿದುಕೊಳ್ಳಲಾರದೆ ದುಃಖಕ್ಕೀಡಾಗುತ್ತಾರೆ. ವಿವೇಕಿಗಳಾದವರು ಇತರ ಕಷ್ಟನಿಷ್ಠುರಗಳನ್ನು ಲೆಕ್ಕಿಸದೆ ಎಲ್ಲವನ್ನೂ ಬಿಟ್ಟು ಆ ತತ್ತ್ವವೊಂದನ್ನೇ ಅವಲಂಬಿಸಿಕೊಂಡು ನಡೆಯುವದಕ್ಕೆ ಪ್ರಯತ್ನಿಸುತ್ತಾರೆ. ಕೆಲವರು ಪಾಶ್ಚಾತ್ಯತತ್ತ್ವಜ್ಞರು ಬದಲಾಯಿಸುತ್ತಿರುವದೇ ಪ್ರಪಂಚದ ಸ್ವಭಾವವೆನ್ನುತ್ತಾರೆ ; ಅವರ ಉಪದೇಶಕ್ಕೆ ಬೆಲೆಯನ್ನು ಕೊಡುವವರು ಕಾಲವು ಬದಲಾಯಿಸಿದಂತೆ ನಾವೂ ಬದಲಾಯಿಸಿಕೊಳ್ಳಬೇಕು ಎಂದು ಹೊರಟಿರುತ್ತಾರೆ. ಪ್ರಪಂಚವು ಮಾರ್ಪಡುತ್ತಿರುವದೆಂಬುದು ಅನುಭವದಲ್ಲಿಯೇ ಕಾಣುತ್ತಿರುವದರಿಂದ ಅದನ್ನು ತಿಳಿಸುವದಕ್ಕೆ ಹೆಚ್ಚಿನ ತತ್ತ್ವಶಾಸ್ತ್ರವೇನೂ

ಬೇಡ ; ಆದರೆ ಮಾರ್ಪಾಡುಗಳಿಗೆ ಆಧಾರವಾಗಿ ತತ್ತ್ವವೊಂದು ಇರಬೇಕು ಎಂಬುದನ್ನು ತಾವೂ ಮನಗಂಡು ಮಿಕ್ಕವರಿಗೂ ಉಪದೇಶಿಸುದಕ್ಕೆ ಸೂಕ್ಷ್ಮದೃಷ್ಟಿಯವರು ಬೇಕಾಗಿರುತ್ತಾರೆ. ಭಗವದ್ಗೀತೆಯು ಈ ಸೂಕ್ಷ್ಮದೃಷ್ಟಿಗೆ ಅನುಕೂಲವಾದ ನಡವಳಿಕೆಯನ್ನು ಉಪದೇಶಿಸುತ್ತದೆ.

ಈಗ ಗೀತೆಯಲ್ಲಿ ಫಲಾಸಕ್ತಿಯನ್ನು ಬಿಟ್ಟು ಕರ್ಮವನ್ನು ಮಾಡಬೇಕು ಎಂದು ಉಪದೇಶಿಸಿರುವದರ ಪ್ರಯೋಜನವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ತನ್ನ ತನ್ನ ಕರ್ಮದಲ್ಲಿ ಅಭಿರತನಾದವನಿಗೆ ಸಿದ್ಧಿಯು ದೊರಕುತ್ತದೆ ಎಂದು ಇಲ್ಲಿ ಹೇಳಿದೆಯಷ್ಟೆ ; ಆ ಸಿದ್ಧಿಯು ಯಾವದು? ಈಗಿನ ಕಾಲಕ್ಕೆ ಈ ಉಪದೇಶವು ಉಪಯೋಗಕರವಾಗಿದೆಯೆ? ಫಲಾಸಕ್ತಿಯೇ ಇಲ್ಲದೆ ಯಾರಿಗೆತಾನೆ ಕರ್ಮದಲ್ಲಿ ತೊಡಗುವದು ಸಾಧ್ಯ?- ಎಂದು ಕೆಲವರು ಶಂಕಿಸುತ್ತಾರೆ. ಆದರೆ ವ್ಯವಹಾರದಲ್ಲಿಯೇ ಇದಕ್ಕೆ ಉದಾಹರಣೆಯನ್ನು ಕೊಟ್ಟು ಸಮಾಧಾನವನ್ನು ಹೇಳಬಹುದು. ಫಲಾಶೆಯನ್ನು ಬಿಡುವದೆಂದರೇನು? ಕ್ಷುದ್ರವಾದ ಫಲವನ್ನು ಆಶಿಸದಿರುವದು ಎಂದರ್ಥ. ಉದಾಹರಣೆಗೆ ನೋಡಿರಿ. ನಮ್ಮ ಮನೆಯಲ್ಲಿ ಒಂದು ಹಸು ಹಾಲುಕೊಡುತ್ತಿರುವದು ನಿಂತುಬಿಟ್ಟರೆ ಅದಕ್ಕೆ ಹುಲ್ಲುಹಾಕುವದನ್ನು ನಾವು ಬಿಡುವದಿಲ್ಲ. ಹಾಲನ್ನು ಕೊಡದ ಮೇಲೆ ಅದಕ್ಕೆ ಏಕೆ ಹುಲ್ಲುಹಾಕುವದು ? ಎಂದು ಯಾರೂ ಕೇಳುವದಿಲ್ಲ. ಸದ್ಯಕ್ಕೆ ಹಾಲು ಕೊಡದಿದ್ದರೂ ಕಾಲಾನುಕಾಲಕ್ಕೆ ಅದು ಮತ್ತೆ ಕರುಹಾಕಬಹುದು. ಆಗ ನಮಗೆ ಹಾಲೂ ಸಿಕ್ಕುವದು, ಇನ್ನೊಂದು ರಾಸೂ ಸಿಕ್ಕುವದು, ಅಲ್ಲವೆ?

ಜನರಿಗೆ ಈ ಉಪದೇಶವು ಸದ್ಯಕ್ಕೆ ರುಚಿಸುವದಿಲ್ಲ. ಒಬ್ಬೊಬ್ಬರೂ ಪದಾರ್ಥಗಳಿಂದಲೂ ಬೇರೆಯ ಜನರಿಂದಲೂ ಆದಷ್ಟು ಪ್ರಯೋಜನವನ್ನು ತಾವು ಪಡೆದುಕೊಂಡು ಮತ್ತೊಬ್ಬರನ್ನು ವಂಚಿಸಬೇಕೆಂದು ಹವಣಿಸುತ್ತಿರುವರು. ವ್ಯಕ್ತಿಗಳಲ್ಲದೆ ರಾಷ್ಟ್ರಗಳೂ ಈ ನೀತಿಯನ್ನೇ ಅನುಸರಿಸುವದಕ್ಕೆ ಪ್ರಾರಂಭಿಸುವದರಿಂದ ಲೋಕದಲ್ಲಿ ಅಶಾಂತಿಯುಂಟಾಗಿದೆ. ಪದಾರ್ಥಗಳನ್ನು ಒಂದು ದೇಶದವರು ಮತ್ತೊಂದು ದೇಶದವರಿಗೆ ವಿನಿಮಯವಾಗಿ ಕೊಟ್ಟರೆ ಎಷ್ಟೋ ಸುಖವಾದೀತು ; ಆದರೆ ಆ ಬುದ್ಧಿ ನಮಗೆ ಬರುವಹಾಗಿಲ್ಲ. ಯಂತ್ರಗಳನ್ನು ತಯಾರುಮಾಡಿಕೊಂಡು ಪದಾರ್ಥಗಳನ್ನು ಹೆಚ್ಚಿನ ಪ್ರಮಾಣದಲ್ಲಿ ತಯಾರುಮಾಡಿ ಮಿಕ್ಕವರು ನಮ್ಮಿಂದಲೇ ಕೊಳ್ಳಲಿ !- ಎನ್ನುವ ಕ್ಷುದ್ರಬುದ್ಧಿಯು ನಮಗೆಲ್ಲ ಬಂದುಬಿಟ್ಟಿದೆ. ಸೈನ್ಯವನ್ನು ಹೆಚ್ಚಿಸಿದರೆ ಶಾಂತಿಯು ಬರುವದೆಂಬ ಹುಚ್ಚು, ರಾಷ್ಟ್ರಗಳಿಗೆಲ್ಲ ಬರುತ್ತಿದೆ ! ಎಲ್ಲರೂ ದುಡಿಯುವದು ; ಎಲ್ಲರ ಸುಖವನ್ನೂ ಲಕ್ಷ್ಯದಲ್ಲಿಡುವದು, ಸದ್ಯಃಫಲವನ್ನು, ಎಂದರೆ ಈಗಲೇ ಆಗಬಹುದಾದ ಸಣ್ಣಪುಟ್ಟಫಲಗಳನ್ನು, ಬಯಸಿ ಬಾಯಿನೀರು ಕರೆಯದಿರುವದು - ಇದೇ ಲೋಕಕ್ಕೆ ಶಾಂತಿಯನ್ನು ನೀಡುವ ನಿಜವಾದ ಉಪಾಯವೆಂಬುದು ಎಲ್ಲರಿಗೂ ಗೊತ್ತಿದೆ. ಅದನ್ನು ಎಲ್ಲರೂ ವಾದಕ್ಕಾಗಿ ಒಪ್ಪುತ್ತಾರೆ. ಆದರೆ ಕಾರ್ಯಕ್ಷೇತ್ರಕ್ಕೆ ಇಳಿಸುವದಕ್ಕೆ ಯಾರಿಗೂ

ಇಷ್ಟವಿಲ್ಲ. ಗೀತೆಯನ್ನು ಅನೇಕಭಾಷೆಗಳಿಗೆ ಪರಿವರ್ತನೆ ಮಾಡಿಕೊಂಡಿರುತ್ತಾರೆ ; ಆದರೆ ಮನಸ್ಸಿನೊಳಗೆ ಅದರ ಪರಿವರ್ತನೆಯಾಗಿರುವದಿಲ್ಲ. ಇದೇ ಲೋಕದ ಕಷ್ಟಕ್ಕೆ ಮುಖ್ಯಹೇತುವಾಗಿದೆ. ಜನರು ಗೀತೆಯನ್ನು ಶ್ರವಣಮಾಡುವದಕ್ಕೆ ಸಿದ್ಧರಾಗಿರುತ್ತಾರೆ; ಆದರೆ ಗೀತೋಪದೇಶವನ್ನು ಆಚರಣೆಗೆ ತರುವದಕ್ಕೆ ಸಿದ್ಧರಾಗಿಲ್ಲ ! ಹಾಗೆ ಅದಕ್ಕೂ ಸಿದ್ಧರಾಗಿರುವವರು ಎಲ್ಲಿಯೋ ಸಾವಿರಕ್ಕೆ, ಹತ್ತುಸಾವಿರಕ್ಕೆ, ಒಬ್ಬರು ಇದ್ದರೂ ಇರಬಹುದು!

ಆದರೂ ಗೀತಾಪ್ರೇಮಿಗಳು ಇದಕ್ಕಾಗಿ ಅಂಜಬೇಕಾಗಿಲ್ಲ. "ಸಾವಿರಗಟ್ಟಲೆಯ ಮಾನವರಲ್ಲಿ ಯಾವನೋ ಒಬ್ಬನು ಸಿದ್ಧಿಗಾಗಿ ಪ್ರಯತ್ನಿಸುತ್ತಾನೆ ; ಹಾಗೆ ಪ್ರಯತ್ನಿಸುವ ಸಾವಿರಾರು ಜನರಲ್ಲಿಯೂ ಯಾವನೋ ಒಬ್ಬನು ಭಗವಂತನನ್ನು ತತ್ತ್ವತಃ ಅರಿತುಕೊಳ್ಳುವನು" ಎಂದು ಹಿಂದೆ ಗೀತೆಯಲ್ಲಿಯೇ ಹೇಳಿದೆ ಎಂಬುದನ್ನು ನಾವು ನೆನಪಿಗೆ ತಂದುಕೊಳ್ಳಬೇಕು. ಆದರೆ ಇಷ್ಟು ಮಾತ್ರದಿಂದ ಎದೆಗೆಡಬಾರದು. `ಸಂಗಂ ತ್ಯಕ್ತ್ವಾ ಫಲಂ ಚೈವ' ಎಂಬ ಮಂತ್ರವನ್ನು ಮತ್ತೆ ಮತ್ತೆ ಪುರಶ್ಚರಣೆಮಾಡುತ್ತಲೇ ಇರಬೇಕು. ಕರ್ಮಕ್ಕೂ ತಮಗೂ ಸಂಗವನ್ನು ಮಾಡಿಕೊಳ್ಳುವದೂ ಫಲಕ್ಕೂ ತಮಗೂ ಸಂಗವನ್ನು ಮಾಡಿಕೊಳ್ಳುವದೂ ಮನುಷ್ಯರಿಗೆ ಸ್ವಾಭಾವಿಕವಾಗಿದೆ. ಸಂಗಫಲಗಳನ್ನು ಬಿಡಬೇಕು ಎಂದು ಹೇಳುತ್ತಲೇ ಇದ್ದು ಅವನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದರೆ ಆಶ್ಚರ್ಯವೇನೂ ಇಲ್ಲ. ಆದರೆ ಇಷ್ಟುಮಾತ್ರದಿಂದ ಸಂಗವನ್ನೂ ಫಲವನ್ನೂ ಬಿಡುವದು ಯಾರಿಂದಲೂ ಆಗಲಾರದು ಎಂದು ಹೇಳುವದು ಎಂದಿಗೂ ಸರಿಯಾಗಲಾರದು.

ಇಲ್ಲಿಯವರೆಗೆ ಸಂಗಫಲತ್ಯಾಗರೂಪವಾದ ತ್ಯಾಗವನ್ನು ತಿಳಿಸಿದ್ದಾಯಿತು. ಈಗ ಕರ್ಮತ್ಯಾಗದ ಎರಡನೆಯ ಪ್ರಕಾರವನ್ನು ವಿಮರ್ಶಿಸೋಣ. ಕರ್ಮತ್ಯಾಗವೆಂದರೇನು ? ಕರ್ಮವು ನನಗೆ ಸೇರಿದ್ದೇ ಅಲ್ಲ- ಎಂಬ ತಿಳಿವಳಿಕೆಯನ್ನು ನಿಶ್ಚಿತವಾಗಿ ಮಾಡಿಕೊಂಡುಬಿಡುವದು. ಕರ್ಮವು ನಮ್ಮದಲ್ಲವೆಂದರೆ ಹೇಗೆ? ಮಾಡಿದ ಕರ್ಮವು ನಮ್ಮದಲ್ಲವೆನ್ನಬಹುದೆ?- ಎಂದು ಯಾರಾದರೂ ಕೇಳಬಹುದು. ಆದರೆ ನೋಡಿ; ಸ್ವಪ್ನದಲ್ಲಿ ನಾವು ಬಗೆಬಗೆಯ ಕರ್ಮಗಳನ್ನು ಮಾಡುತ್ತೇವೆ : ಆ ಕರ್ಮಗಳು ನಿಜವಾಗಿ ನಮ್ಮವೆ? ಎಂದಿಗೂ ಅಲ್ಲ. ಸ್ವಪ್ನವೆಂದರೆ ನಮ್ಮ ಸ್ವರೂಪಕ್ಕೆ ನಿಜವಾಗಿ ಅಂಟಿಕೊಳ್ಳದೆ ಇರುವ ಹುಸಿತೋರಿಕೆ ಎಂಬುದು ನಮಗೆಲ್ಲರಿಗೂ ಗೊತ್ತು. ಅಲ್ಲಿ ನಾವು ಕರ್ಮವನ್ನು ಮಾಡಿದರೂ ನಮ್ಮ ಸ್ವರೂಪಕ್ಕೆ ಆ ಕರ್ಮವು ಅಂಟಿಕೊಂಡಿರುವದಿಲ್ಲ. ಹೀಗೆಯೇ ಎಚ್ಚರದಲ್ಲಿಯೂ ನಾವು ಮಾಡುತ್ತಿರುವ ಕರ್ಮಗಳು ನಿಜವಾಗಿ ನಮ್ಮವಲ್ಲ ; ನಮ್ಮ ಸ್ವರೂಪವು ಕರ್ಮಾತೀತವಾದದ್ದು ಎಂಬ ತತ್ತ್ವವನ್ನು ನಾವು ತತ್ತ್ವಜ್ಞಾನದಿಂದ ಮನಗಾಣಬೇಕು. ಇದೇ ತ್ಯಾಗಶಬ್ದದ ಎರಡನೆಯ ಅರ್ಥ.

ಈ ಎರಡು ತ್ಯಾಗಗಳಲ್ಲಿ ಮೊದಲನೆಯದು ಕರ್ಮಯೋಗ, ಎರಡನೆಯದು ಜ್ಞಾನಯೋಗ. ಕರ್ಮಯೋಗವೇ ನಮ್ಮಲ್ಲಿ ಅನೇಕರಿಗೆ ದಕ್ಕುವಂತಿರುವದಿಲ್ಲ. ಹೀಗಿರುವಲ್ಲಿ ಎರಡನೆಯದು ಹೇಗೆ ದಕ್ಕಬೇಕು ? ಆದರೆ ಇವೆರಡೂ ಗೀತೆಯ ಸಾರವಾಗಿರುತ್ತವೆ. ಕರ್ಮವನ್ನು ಅಸಕ್ತನಾಗಿ ಫಲೇಚ್ಛೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಮಾಡಿ ಸಿದ್ಧಿಯನ್ನು ಪಡೆದುಕೊಂಡವನಿಗೆ ಎರಡನೆಯದಾದ ಜ್ಞಾನದ-ಅಥವಾ ನೈಷ್ಕರ್ಮ್ಯದ-ಸಿದ್ಧಿಯು ಹೇಗೆ ಬರುತ್ತದೆ- ಎಂಬುದನ್ನು ತಿಳಿಸುವದಕ್ಕಾಗಿ ಭಗವಂತನು ಹೊರಟಿರುತ್ತಾನೆ:

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌನ್ತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ 18-50**

ಈ ಜ್ಞಾನದ ವಿಷಯವನ್ನು ತಿಳಿದುಕೊಳ್ಳುವದು ಬಲುಕಷ್ಟ. ಸಾಮಾನ್ಯರಿಗೆ ಇದರ ಆಲೋಚನೆಯುಕೂಡ ತಲೆತಿರುಗುವಂತೆ ಮಾಡುತ್ತದೆ. ಕರ್ಮಯೋಗದಿಂದ ಸಿದ್ಧಿಯಾಗುತ್ತದೆ, ಆ ಬಳಿಕ ಬ್ರಹ್ಮಪ್ರಾಪ್ತಿ ಎಂಬ ಮತ್ತೊಂದು ಸಿದ್ಧಿಯು ಅದರಿಂದ ಆಗುತ್ತದೆ; ಅದು ಹೇಗೆಂಬುದನ್ನು ನಿನಗೆ ತಿಳಿಸುತ್ತೇನೆ - ಎಂದು ಭಗವಂತನು ಹೇಳುತ್ತಿದ್ದಾನೆ. ಈ ಬ್ರಹ್ಮಪ್ರಾಪ್ತಿ ಎಂಬುದು ನಮಗೆ ಬಹಳ ದೂರವಾಗಿರತಕ್ಕದ್ದು ; ಆದರೂ ಅದನ್ನು ನಾವು ತಿಳಿದಿರಬೇಕು. ದೊಡ್ಡವರು ಬ್ರಹ್ಮಪ್ರಾಪ್ತಿಯನ್ನು ಮಾಡಿಕೊಂಡಿದ್ದಾರೆ, ನೀವೂ ಅದರಂತೆ ಪ್ರಾಪ್ತಿಯನ್ನು ಮಾಡಿಕೊಳ್ಳಿರಿ ಎಂದು ಇಲ್ಲಿ ಹೇಳಿರುತ್ತದೆ. ಮನುಷ್ಯನು ಎಷ್ಟೇ ಕೆಳಕ್ಕೆ ಜಾರಿರಲಿ, ಇಂದು ಮನಸ್ಸಿನಲ್ಲಿ ನಿಶ್ಚಯಿಸಿದರೆ ಈಗಿನಿಂದಲೇ ಪ್ರಯತ್ನಮಾಡಿ ಕಾಲಾನುಕಾಲಕ್ಕೆ ಈ ಜ್ಞಾನದ ಪರಾನಿಷ್ಠೆಯೆಂಬ ಕೋಡುಗಲ್ಲನ್ನು ಅವನು ಮುಟ್ಟಬಹುದು. ರಷ್ಯದಲ್ಲಿ ಟಾಲ್‌ಸ್ಟಾಯ್ ಎಂಬಾತನು ರಾಜಕೀಯವಿಚಾರದಲ್ಲಿಯೇ ಮಗ್ನನಾಗಿದ್ದನು ; ಆದರೆ ಅವನಿಗೆ ಕಾಲಾನುಕಾಲದಲ್ಲಿ ಈ ವ್ಯವಹಾರದಲ್ಲಿ ವಿರಕ್ತಿಯುಂಟಾಯಿತು. ನಾನು ಇಂಥಿಂಥ ಭಾರಿ ಭಾರಿಯ ಪಾಪಗಳನ್ನು ಮಾಡಿದೆನು ; ಅವೆಲ್ಲ ತಪ್ಪೆಂದು ಈಗ ನನಗೆ ಗೊತ್ತಾಗಿದೆ. ಆದ್ದರಿಂದ ಸರಿಯಾದ ಮಾರ್ಗವನ್ನು ಅನುಸರಿಸಬೇಕೆಂದು ನನ್ನ ನಡೆ ನುಡಿಗಳಿಂದ ನಿಮಗೂ ಬೋಧಿಸುತ್ತೇನೆ - ಎಂದು ಮಹಾಜನರಿಗೆ ಅವನು ತನ್ನ ತತ್ತ್ವವನ್ನು ಉಪದೇಶಿಸಿದನು. ನಮ್ಮ ದೇಶದಲ್ಲಿ ಸುಪ್ರಸಿದ್ಧರಾದ ಗಾಂಧಿಯವರು ವಿದೇಶಕ್ಕೆ ಬ್ಯಾರಿಸ್ಟರ್ ಪರೀಕ್ಷೆಗಾಗಿ ಹೋದರು; ಆದರೆ ಅವರಿಗೆ ಬಹುಕಾಲ ವಕೀಲಿವೃತ್ತಿಯಲ್ಲಿರುವದಾಗಲಿಲ್ಲ. ದಾಸ್ಯದಿಂದ ಬಿಡುಗಡೆಯಾಗುವ ಮಾರ್ಗವನ್ನು ಜನರಿಗೆ ಹೇಳಿಕೊಡುವದಕ್ಕೆ ಹೊರಟು ಅನಾಸಕ್ತಿಯೋಗವೆಂಬ ಮಾರ್ಗವು ಲೋಕಕ್ಕೆ ಕಲ್ಯಾಣಕರವೆಂಬುದನ್ನು ತಾವೂ ಕಂಡುಕೊಂಡು ಮಿಕ್ಕವರಿಗೂ ಬೋಧಿಸಿ ಆದರ್ಶಪುರುಷರೆನಿಸಿದರು. ಇಂಥ ಉದಾಹರಣೆಗಳು ಈಗಲೂ ಅಲ್ಲಲ್ಲಿ ಕಾಣಬರುತ್ತವೆ. ಆಯಾ ಜನರು ತಮ್ಮ ಸ್ವಭಾವವನ್ನೇ ಪರಿವರ್ತನೆಮಾಡಿಕೊಂಡು ಉಚ್ಚಸ್ಥಿತಿಯನ್ನೇರಿದರೆಂಬುದು ನಮ್ಮಂಥವರಿಗೂ ಗೀತೋಪದೇಶವು ಅನುಷ್ಠಾನದಲ್ಲಿ ಅಳವಟ್ಟೀತೆಂಬ ಪ್ರತ್ಯಾಶೆಯನ್ನು ಕೊಡುತ್ತದೆ. ಶ್ರುತಿಯಲ್ಲಿಯೂ ಎಲ್ಲಾ ಕಾಲದ ಜನರೂ

ಬ್ರಹ್ಮನಿಷ್ಠೆಯನ್ನು ಪಡೆಯುವದು ಸಾಧ್ಯವೆಂದು ಸುಸ್ಪಷ್ಟವಾಗಿ ಹೇಳಿರುತ್ತದೆ. ಆದ್ದರಿಂದ ನಾವುಗಳೂ ಈ ಜ್ಞಾನದ ಪ್ರಾಪ್ತಿಯಾಗುವ ಕ್ರಮವನ್ನು ಕಿವಿಗೊಟ್ಟು ಕೇಳಬೇಕು. ಭಗವಂತನು ಆ ಪ್ರಕಾರವನ್ನು ಇಲ್ಲಿ ಸಂಕ್ಷೇಪನಾಗಿ ಹೇಳಿರುವದು ಹೇಗೆಂದರೆ :

ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।
ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ **18-51**

ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ **18-52**

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।
ವಿಮುಚ್ಯ ನಿರ್ಮಮಃ ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ ॥ **18-53**

ಇದು ಬ್ರಹ್ಮಭಾವಕ್ಕೆ ಬೇಕಾದ ಸಾಧನಕ್ರಮವು. ಮನೆಯನ್ನು ಕಟ್ಟುವದಕ್ಕೆ ನಕಾಶೆಬರೆದುಕೊಟ್ಟಂತೆ ಇಲ್ಲಿ ಭಗವಂತನು ಒಂದಾನೊಂದು ಸಾಧನಸೋಪಾನವನ್ನು ತಿಳಿಸಿಕೊಟ್ಟಿರುತ್ತಾನೆ. ಇದನ್ನು ಅನುಷ್ಠಾನಕ್ಕೆ ತರಬೇಕಾದರೆ ತಾಳ್ಮೆಯೂ ಸ್ಥೈರ್ಯವೂ ಬೇಕಾಗುತ್ತದೆ.

ಮೊಟ್ಟಮೊದಲು ಕರ್ಮಯೋಗದಿಂದ ಬುದ್ಧಿಯು ಶುದ್ಧಿಯಾಗಿರಬೇಕು. ಸಾಮಾನ್ಯರ ಮನಸ್ಸಿನಲ್ಲಿ ಆಗಿಂದಾಗ ಹೊರಗಿನ ವಿಷಯಗಳ ವಾಸನೆಗಳು ಬಂದುಸೇರಿಕೊಂಡು ಅದನ್ನು ಕಶ್ಮಲಗೊಳಿಸಿರುತ್ತದೆ. ಆ ವಾಸನೆಗಳು ಆಗಾಗ್ಗೆ ಮೇಲಕ್ಕೆದ್ದುಕೊಳ್ಳುವದರಿಂದ ಅಧ್ಯಾತ್ಮಸಾಧನೆಗೆ ಅಡಚಣೆಯಾಗುತ್ತದೆ. ಆದ್ದರಿಂದ ಕರ್ಮಯೋಗವನ್ನು ಮಾಡಿ ಮನಃಶುದ್ಧಿಯನ್ನು ಸಂಪಾದಿಸಿಕೊಂಡಿರಬೇಕು. ಧೃತಿಯಿಂದ ಆತ್ಮನಿಯಮವನ್ನು ಮಾಡಿಕೊಂಡಿರಬೇಕು; ಎಂದರೆ ಕಾರ್ಯಕರಣಗಳ ಸಂಘಾತವನ್ನು, ದೇಹೇಂದ್ರಿಯಗಳ ಒಟ್ಟನ್ನು, ಸ್ವಾಧೀನಕ್ಕೆ ತೆಗೆದುಕೊಂಡಿರಬೇಕು.

ಶಬ್ದಾದಿವಿಷಯಗಳನ್ನು ಬಿಡುವದೆಂದರೇನು? ಈ ಶಬ್ದಾದಿಗಳು ನನ್ನವು ಅಥವಾ ನನಗೆ ಬೇಕು ಎಂಬ ಅಭಿಮಾನವನ್ನಿಟ್ಟುಕೊಳ್ಳುವದೇ ಅವುಗಳನ್ನು ಹಿಡಿದುಕೊಂಡಿರುವದು; ಅವುಗಳಲ್ಲಿ ಯಾವ ಅಭಿಮಾನವೂ ಇಲ್ಲದೆ ಔದಾಸೀನ್ಯದಿಂದಿರುವದೇ ಅವುಗಳನ್ನು ಬಿಡುವದು. ಇದಾದಮೇಲೂ ರಾಗದ್ವೇಷಗಳನ್ನು ಹೊರತಳ್ಳಬೇಕು. ಹೊರಗಿನ ವಿಷಯಗಳನ್ನು ಬಿಡಬಹುದು. ಆದರೆ ಅವುಗಳ ರಾಗದ್ವೇಷವು ಇನ್ನೂ ಅಂತಃಕರಣದಲ್ಲಿ ಉಳಿದುಕೊಂಡೇ ಇರುತ್ತದೆ. ಆದ್ದರಿಂದ ಹೊರಗಿನ, ವ್ಯಕ್ತವಾದ, ವಿಷಯಾಭಿಮಾನವನ್ನು ಬಿಟ್ಟಮೇಲೂ ಅವುಗಳ ರಾಗದ್ವೇಷರೂಪವಾದ ವಾಸನೆಗಳು ಒಳಗೆ ಅವಿತುಕೊಂಡೇ ಇರುತ್ತವೆ. ಈ ರಾಗದ್ವೇಷಗಳು ಹತ್ತಿರದ ಶತ್ರುಗಳು. ಆದ್ದರಿಂದ ಇವನ್ನು ಹೊಡೆದಟ್ಟಬೇಕು.

ಇನ್ನು ಮೂರನೆಯ ಹಂತವೆಂದರೆ ವಿವಿಕ್ತಸೇವಿತ್ವ. ಯಾವನು ಹೊರಗಿನ ವಿಷಯಗಳ ಅಭಿಮಾನವೂ ಒಳಗೆ ಅವ್ಯಕ್ತವಾಗಿರುವ ಅವುಗಳ ವಿಷಯದ ರಾಗದ್ವೇಷವಾಸನೆಯೂ ಇಲ್ಲದವನಾಗಿರುವನೋ ಅವನಿಗೇ ಬ್ರಹ್ಮಭಾವದ ಮಾರ್ಗವು ದೊರಕುವದು. ಅವನೇ ವಿವಿಕ್ತಸೇವಿಯಾಗಬಲ್ಲವನಾಗಿರುವನು. ವಿವಿಕ್ತಸೇವಿತ್ವವೆಂದರೆ ಒಂಟಿಯಾಗಿರುವದು. ಜನರ ಗುಂಪನ್ನು ಬಿಟ್ಟು ಒಂಟಿಯಾಗಿರುವದೆಂದರೆ ಸಾಮಾನ್ಯರಿಗೆ ಬಲು ಕಷ್ಟ; ಒಂದುವೇಳೆ ಅವರು ಜನರನ್ನೂ ವಿಷಯಗಳನ್ನೂ ದೂರಮಾಡಿದರೂ ಅವುಗಳ ವಾಸನೆಗಳು ಅವರನ್ನು ಹಿಂಬಾಲಿಸಿಯೇ ಇರುತ್ತವೆ. ಆದ್ದರಿಂದ ಸಾಮಾನ್ಯರು ಒಂಟಿಯಾಗಿದ್ದೇವೆ ಎಂದರೂ ಅವರಿಗೂ ಅರಿವಿಲ್ಲದಂತೆಯೇ ವಿಷಯವಾಸನೆಗಳ ಸೈನ್ಯವೇ ಅವರೊಡನೆ ಇರುತ್ತದೆ. ಸಾಮಾನ್ಯಕುಟುಂಬಿಗಳು ಹೇಗೆ ಯಾವ ಕರ್ಮವನ್ನು ಮಾಡಿದರೂ "ಅಸ್ಮಾಕಂ ಸಹಕುಟುಂಬಾನಾಮ್" ಎಂದು ಸಂಕಲ್ಪವನ್ನು ಮಾಡುತ್ತಿರುವರೋ ಅದರಂತೆಯೇ ಎಚ್ಚರಿಕೆಯಿಲ್ಲದ ಸಾಧಕರೂ ಏಕಾಂತವಾಸವೆಂದು ಕರೆಯುವ ಸ್ಥಿತಿಯಲ್ಲಿಯೂ "ಸಹಕುಟುಂಬರಾಗಿ" ಸಂಕಲ್ಪವನ್ನು ಮಾಡುತ್ತಲೇ ಇರುವರು. ಆದ್ದರಿಂದ ವಿವಿಕ್ತಸೇವಿಯಾಗಿರಬೇಕು ಎಂದರೆ ತಾಳ್ಮೆಯಿಂದ, ಅದೇ ಸ್ವಭಾವವುಳ್ಳವನಾಗಿ, ನಿಜವಾದ ವಿವಿಕ್ತದೇಶವನ್ನು, ಯಾವ ಜನರಾಗಲಿ ಯಾವ ಪ್ರಾಣಿಗಳಾಗಲಿ ಯಾವ ವಿಷಯಗಳಾಗಲಿ ಯಾವ ವಿಷಯವಾಸನೆಗಳಾಗಲಿ ಇಲ್ಲದ ಅಂತಃಕರಣವುಳ್ಳವನಾಗಿರುವದನ್ನು ಕಲಿಯಬೇಕು.

ಈ ವಿವಿಕ್ತಸೇವಿತ್ವಕ್ಕೆ ಲಘ್ವಾಶಿಯಾಗಿರುವದು ಅತ್ಯವಶ್ಯ. ಅಶನವೆಂದರೆ ಆಹಾರವನ್ನು ತೆಗೆದುಕೊಳ್ಳುವದು. ಇದು ಲಘುವಾಗಿರಬೇಕು; ಹಗುರವಾಗಿ ಜೀರ್ಣವಾಗುವಂತಿರಬೇಕು; ಚಟುವಟಿಕೆಗೆ ಅಡ್ಡಿಯಾಗಿರಬಾರದು - ಅಂಥ ಆಹಾರವಾಗಿರಬೇಕು. ಆಹಾರವೆಂದರೆ ಕೇವಲ ಊಟ, ತಿಂಡಿ, ನೀರು - ಮುಂತಾದವುಗಳೇ ಅಲ್ಲ. ಬೇರೆ ಬೇರೆಯ ಇಂದ್ರಿಯಕ್ಕೆ ಬೇರೆ ಬೇರೆಯ ಆಹಾರವು ಬೇಕಾಗಿರುತ್ತದೆ. ಯಾವ ಆಹಾರವೇ ಆಗಲಿ ರಾಗದ್ವೇಷರಹಿತವಾಗಿ ಸುಲಭವಾಗಿ ಜೀರ್ಣವಾಗುವಂಥದ್ದಾಗಿರಬೇಕು. ಆಗ ಲಘ್ವಾಶಿಯಾದಂತೆ ಆಯಿತು. ಲಘ್ವಾಶನವೂ ಸ್ವಾಭಾವಿಕವಾಗಿಯೇ ಇದ್ದರೆ ವಿವಿಕ್ತಸೇವಿತ್ವವೂ ಸ್ವಾಭಾವಿಕವಾಗಿರುವದು.

ಇನ್ನು ಯತವಾಕ್ಕಾಯಮಾನಸಃ ಎಂಬುದರ ಅರ್ಥವನ್ನು ನೋಡೋಣ. ವಾಕ್ಕು ಎಂಬುದು ಇಂದ್ರಿಯಗಳಿಗೆ ಉಪಲಕ್ಷಣ. ಇಂದ್ರಿಯಗಳನ್ನೂ ಕಾಯವನ್ನೂ ಮನಸ್ಸನ್ನೂ ಸಂಯಮಮಾಡಿಕೊಂಡಿರಬೇಕು. ಇದುವರೆಗೆ ಹೇಳಿರುವ ಸಾಧನಗಳ ಒಟ್ಟನ್ನೇ ಈ ಒಂದು ಮಾತಿನಲ್ಲಿ ಅಡಕವಾಡಿರುತ್ತದೆ ಎಂಬುದು ನಿಮ್ಮಗಳಿಗೆ ಹೊಳೆದಿರಬೇಕು. ಈ ಸಾಧನಗಳೆಲ್ಲವೂ ಯಾವನಿಗೆ ಅಳವಟ್ಟಿರುವವೋ ಅವನೇ ನಿತ್ಯವೂ ಧ್ಯಾನಯೋಗಪರನಾಗಿರಲು ತಕ್ಕವನಾಗುತ್ತಾನೆ.

ಈಗ ಧ್ಯಾನಯೋಗವೆಂದರೇನು? ಎಂಬುದನ್ನು ಸಮಾಲೋಚನೆಮಾಡುವದಕ್ಕೆ ಸಮಯವಾಗಿದೆ. ಇದೇ ಮುಖ್ಯವಾದ ಗುರಿ. ಈ ಯೋಗವು ನಮ್ಮಿಂದಲೂ ಮಾಡುವದಕ್ಕೆ ಸಾಧ್ಯವಾದದ್ದೆ? ಇದರಿಂದ ನಮಗೆ ಉಪಯೋಗವುಂಟೆ? ಎಂಬುದನ್ನು ನಾವು ಪರಿಶೀಲಿಸುವದು ಅತ್ಯಗತ್ಯ. ಕ್ವಿನೀನಿನ ಉಪಯೋಗವನ್ನು ಕುರಿತು ಹಲವು ಲೇಖನಗಳನ್ನು ಕಾರ್ಯಾಲಯಕ್ಕೆ ಕಳುಹಿಸಿ ತಿಂಗಳಿಗೊಂದರಂತೆ ಮಾಸಪತ್ರಿಕೆಯಲ್ಲಿ ಪ್ರಕಟಿಸಿದರೆ ಇಂತಿಷ್ಟು ಹಣವನ್ನು ಕೊಡುತ್ತೇವೆ ಎಂಬ ವಾಗ್ದಾನಮಾಡಿ ಬರೆದ ಪತ್ರವೊಂದು ವಿದೇಶದಿಂದ ಬಂದಿರುತ್ತದೆ. ಕ್ವಿನೈನನ್ನು ಕಂಡುಹಿಡಿದದ್ದು ಹೇಗೆ? ಅದರಿಂದ ಜನರಿಗೆ ಆಗಿರುವ ಮಹೋಪಕಾರಗಳೇನು?- ಎಂಬ ಬಗ್ಗೆ ವಿಧವಿಧವಾದ ಐತಿಹಾಸಿಕವಿಚಾರಗಳನ್ನೂ ಭೌತಿಕಶಾಸ್ತ್ರೀಯ ವಿಚಾರಗಳನ್ನೂ ಒಳಗೊಂಡ ಸುಲಭಭಾಷೆಯ ಲೇಖನಗಳಿವು. ಪ್ರಪಂಚದ ಎಲ್ಲಾ ಭಾಷೆಗಳಲ್ಲಿಯೂ ಇವನ್ನು ಪ್ರಚಾರಮಾಡುವದಕ್ಕಾಗಿ ಲಕ್ಷಾಂತರರೂಪಾಯಿಗಳನ್ನು ವೆಚ್ಚಮಾಡುವದಕ್ಕಾಗಿ ವಿದೇಶದಲ್ಲಿ ಒಂದಾನೊಂದು ಸಂಘವು ಏರ್ಪಟ್ಟಿರುತ್ತದೆ. ಆ ಸಂಘದವರು ಈ ಪ್ರಚಾರಕ್ಕೆ ಮಾಡುತ್ತಿರುವ ಸಾಹಸವನ್ನು ನೋಡಿ ನನ್ನ ಮನಸ್ಸಿಗೆ ಅತ್ಯಾಶ್ಚರ್ಯವೂ ಅವರ ಕಾರ್ಯತತ್ಪರತೆಯ ವಿಷಯದಲ್ಲಿ ಮೆಚ್ಚಿಗೆಯೂ ಉಂಟಾದವು. ಕ್ವಿನೈನು ತಿನ್ನುವದಕ್ಕೆ ಕಹಿಯಾಗಿ ಇರುತ್ತದೆಯಾದರೂ ತಿಂದವರಿಗೆ ಆರೋಗ್ಯದಲ್ಲಿ ಉತ್ತಮಪರಿಣಾಮವನ್ನು ಉಂಟುಮಾಡುತ್ತದೆ, ಮಲೇರಿಯಜ್ವರವನ್ನು ನಿಶ್ಚಿತವಾಗಿ ಪರಿಹರಿಸುತ್ತದೆ - ಎಂಬುದು ಪ್ರಚಾರಕರ ಅಭಿಪ್ರಾಯವು. ಅದೇ ರೀತಿಯಲ್ಲಿ ಗೀತೋಕ್ತವಾದ ಕರ್ಮಯೋಗಧ್ಯಾನಯೋಗಗಳು ಅಭ್ಯಾಸಮಾಡುವದಕ್ಕೆ ಹೊರಡುವ ಸಾಧಕರಿಗೆ ಮೊದಮೊದಲು ಕಷ್ಟವಾಗಿ ತೋರಬಹುದು. ಕಹಿಯಾಗಿ ಕಂಡಮಾತ್ರದಿಂದ ಕ್ವಿನೈನು ಕೆಟ್ಟದ್ದೆಂದು ಯಾರೂ ತ್ಯಜಿಸುವದಿಲ್ಲವಷ್ಟೆ. ಹೀಗೆಯೇ ಈ ಗೀತೋಕ್ತಸಾಧನಗಳನ್ನೂ ಕಷ್ಟಸಾಧ್ಯವೆಂಬ ಒಂದೇ ಕಾರಣದಿಂದ ಎಂದಿಗೂ ಬಿಡಬಾರದು. ಕಾಳುಜೀರಿಗೆ, ಕಟುಕರೋಹಿಣಿ- ಮುಂತಾದವುಗಳು ಕಹಿಯಾಗಿ ಇದ್ದರೂ ಜ್ವರವನ್ನು ನಿಶ್ಚಿತವಾಗಿ ಪರಿಹರಿಸುವಂತೆ ಈ ಸಾಧನಗಳು ನಮ್ಮ ಆಲಸ್ಯವನ್ನೂ ಮನಸ್ಸಿನಲ್ಲಿರುವ ಮಲವಿಕ್ಷೇಪಗಳನ್ನೂ ನಿಶ್ಚಿತವಾಗಿ ಪರಿಹರಿಸುತ್ತವೆ ; ಕಡೆಯಲ್ಲಿ ನಮ್ಮ ಸ್ವಸ್ವರೂಪದಲ್ಲಿ ನಿಲ್ಲುವದೆಂಬ ಸ್ವಾಸ್ಥ್ಯವೂ ದೊರಕುವಂತೆ ಮಾಡುತ್ತವೆ. ಹೀಗಿರುವದರಿಂದ ರಾಜನೀತಿಜ್ಞರಾದವರು ಪರದೇಶಗಳಿಗೆ ತಮ್ಮ ದೇಶದ ಯಥಾರ್ಥಸ್ಥಿತಿಯನ್ನು ಕುರಿತ ತಿಳಿವಳಿಕೆಯನ್ನು ಕೊಡಬಲ್ಲ ರಾಯಭಾರಿಗಳನ್ನು ಕಳುಹಿಸುವ ಹಾಗೆ ಈ ಗೀತಾಸಂದೇಶಗಳನ್ನು ಬೇರೆಬೇರೆಯ ದೇಶಗಳಿಗೆ ಸಾರುವದರಲ್ಲಿ ತಜ್ಞರಾದವರನ್ನು ನಾವೇಕೆ ಸಜ್ಜುಗೊಳಿಸಬಾರದು?



# ೧೯೦. ಧ್ಯಾನಯೋಗ 18 - (52-53)

**(22-10-50)**

ಯಾರು ಕರ್ಮಯೋಗದಿಂದ ಪರಮೇಶ್ವರನ ಅಭ್ಯರ್ಚನೆಯನ್ನು ಮಾಡಿ ಜ್ಞಾನಕ್ಕೆ ಯೋಗ್ಯತೆ ಎಂಬ ಸಿದ್ಧಿಯನ್ನು ಪಡೆದುಕೊಂಡಿರುತ್ತಾರೋ ಅಂಥವರು ಬ್ರಹ್ಮಪ್ರಾಪ್ತಿಯನ್ನು ಹೇಗೆ ಪಡೆದುಕೊಳ್ಳುವರೆಂಬುದನ್ನು ತಿಳಿಸುವೆನು- ಎಂದು ಭಗವಂತನು ಪ್ರಾರಂಭಿಸುತ್ತಾನೆ. ಹಿಂದಿನ ದಿನದಲ್ಲಿ "ಯತವಾಕ್ಕಾಯ ಮಾನಸಃ" ಎಂಬವರೆಗಿನ ಸಾಧನಕ್ರಮಗಳನ್ನು ವರ್ಣಿಸಿದ್ದಾಗಿದೆ. ಈಗ "ಧ್ಯಾನಯೊಗಪರಃ" ಎಂಬುದರ ಅಭಿಪ್ರಾಯವನ್ನು ತಿಳಿಸಬೇಕಾಗಿರುತ್ತದೆ.

ವಿಷಯಗಳ ಅಭಿಮಾನವನ್ನು ಬಿಟ್ಟುಬಿಡುವದರಿಂದ ವಿಷಯತ್ಯಾಗವನ್ನು ಮಾಡಿ, ಅವ್ಯಕ್ತವಾಗಿರುವ ವಿಷಯುಗಳ ರಾಗದ್ವೇಷವನ್ನು ತೊಲಗಿಸಿಕೊಂಡು ವಿವಿಕ್ತದೇಶಸೇವಿಯಾಗಿರುವವನು ಧ್ಯಾನಯೋಗಕ್ಕೆ ಅರ್ಹನಾಗಿರುತ್ತಾನೆ. ಸುಮ್ಮನೆ ಏಕಾಂತದಲ್ಲಿ ಕುಳಿತುಕೊಳ್ಳುವವರಿಗೆ ವಿಷಯಗಳ ಚಿಂತನೆಯು ಅಲ್ಲಿಗೂ ಬಂದು ಗಂಟುಬೀಳಬಹುದು. ಆದ್ದರಿಂದ ಸಾಮಾನ್ಯರಾದವರು ಮೊದಲು ಸಾಧುಸಂಗವನ್ನು ಮಾಡುವದನ್ನು ಕಲಿಯಬೇಕು. ನಮ್ಮಂಥವರಿಗೆ ಸಾಧುಸಂಗವೇ ಏಕಾಂತವಾಸ; ಏಕೆಂದರೆ ಸಾಧುಸಂಗದಲ್ಲಿ ವಿಷಯಗಳ ಸಂಗವು ಇಲ್ಲವಾಗಿಬಿಡುತ್ತದೆ. ಲಘ್ವಾಶಿ ಎಂದರೆ ಸ್ವಲ್ಪವನ್ನು ತಿನ್ನುವವನು ಎಂದಿಷ್ಟೆ ಅರ್ಥಮಾಡಿಕೊಂಡು ದೇಹಕ್ಕೆ ಬೇಕಾಗಿರುವದಕ್ಕಿಂತ ಕಡಿಮೆಯ ಪರಿಮಾಣದ ಆಹಾರವನ್ನು ಕೊಟ್ಟು ಅದನ್ನು ಸೊರಗಿಸಬಾರದು. ಕೆಲಸಮಾಡುವದಕ್ಕೆ ತಕ್ಕಷ್ಟು ಸಾತ್ತ್ವಿಕಾಹಾರವನ್ನು ಕೊಡುತ್ತಿರಬೇಕು. ಯತವಾಕ್ಕಾಯ ಮಾನಸಃ- ಎಂದರೆ ತ್ರಿಕರಣಗಳನ್ನು ಹೇಳಿದಂತೆ ಕೇಳುವ ಹಾಗೆ ಸಿದ್ಧಗೊಳಿಸುವ ಸಂಯಮವುಳ್ಳವನು ಎಂದರ್ಥ.

ಈ ಅಂಗಗಳೆಲ್ಲ ಅನುಷ್ಠಾನಕ್ಕೆ ಬಂದಿರುವವನು ಧ್ಯಾನಯೋಗವನ್ನು ಮಾಡಬೇಕಷ್ಟೆ. ಇದೇ ಪ್ರಧಾನವಾದ ಸಾಧನವು; ದಿಬ್ಬಣ ತೆರಳುವವರಿಗೆ ಅಳಿಯನೇ ಮುಖ್ಯವಾಗಿರುವಂತೆ ಸಾಧಕರಾದವರಿಗೆ ಧ್ಯಾನಯೋಗವೇ ಮುಖ್ಯವಾಗಿರುತ್ತದೆ. ಇದು ಕೇವಲ ಮುಮುಕ್ಷುಗಳ ವಿಷಯವೇ ಆದರೂ ನಾವು ಕೇಳಿ ಆ ಧ್ಯೇಯವನ್ನು ಇಟ್ಟುಕೊಳ್ಳಬೇಕು. "ಧ್ಯಾನಯೋಗಪರೋ ನಿತ್ಯಮ್" ಎಂಬ ವಾಕ್ಯಕ್ಕೆ ಶ್ರೀಶಂಕರಭಗವತ್ಪಾದರು ಬರೆದಿರುವ ಅರ್ಥವು ಹೀಗಿರುತ್ತದೆ: "ಧ್ಯಾನವೆಂದರೆ ಆತ್ಮಸ್ವರೂಪವನ್ನು ಚಿಂತಿಸುತ್ತಿರುವದು ; ಯೋಗವೆಂದರೆ ಆತ್ಮ ವಿಷಯದಲ್ಲಿಯೇ ಮನಸ್ಸನ್ನು ಏಕಾಗ್ರವಾಗಿಟ್ಟುಕೊಂಡಿರುವದು." ನಿತ್ಯವೂ ಎಂದು ಹೇಳಿರುವದು ಮಂತ್ರಜಪವೇ ಮುಂತಾದ ಮಿಕ್ಕ ಕರ್ತವ್ಯವಿಲ್ಲವೆಂಬುದನ್ನು ತಿಳಿಸುವದಕ್ಕೆ. ಸರ್ವಕರ್ಮಗಳನ್ನೂ ಸಂನ್ಯಾಸಮಾಡಿದ ಯತಿಗಳಿಗೆ ಪ್ರಣವಜಪವೊಂದು ಉಳಿದುಕೊಂಡಿರುತ್ತದೆ. ವೇದದ ಸಾರವೆಲ್ಲ ಪ್ರಣವದಲ್ಲಿದೆ ಎಂದು ಅದರಲ್ಲಿಯೇ

ಸರ್ವವೇದಗಳನ್ನೂ ಪ್ರವೇಶಮಾಡಿಸಿಕೊಂಡು ಜಪಿಸಿಕೊಂಡ ಇಂಥ ಸಾಧಕರಿಗೆ ಧ್ಯಾನಯೋಗವು ಆ ಜಪಕ್ಕಿಂತಲೂ ಮುಖ್ಯವಾದದ್ದು ಎಂದು ಇಲ್ಲಿ ತಿಳಿಸಿದಂತೆ ಆಗಿರುತ್ತದೆ. ಪ್ರಣವಜಪದಿಂದಲೇ ಆನಂದವನ್ನು ತೆಗೆದುಕೊಳ್ಳುತ್ತಿರುವ ಯತಿಗಳು ಅದನ್ನು ಕೂಡ ವಿಕ್ಷೇಪಕರವೆಂದು ಭಾವಿಸುವಂಥ ಸಾಧನವು, ಈ ಧ್ಯಾನಯೋಗವು- ಎಂಬುದನ್ನು ನಿತ್ಯಶಬ್ದವು ತಿಳಿಸುತ್ತದೆ. ಇದು ಬಹಳ ದೊಡ್ಡ ವಿಷಯ. ಯಾರೋ ಕೆಲವರು ಮಹನೀಯರಿಗೆ ಮಾತ್ರ ದಕ್ಕತಕ್ಕದ್ದು. ಅನೇಕ ಜನ ಸಂಗೀತಗಾರರು ಹಣಕ್ಕಾಗಿ ಹಾಡುತ್ತಾರೆ ; ಆದರೆ ಅವರಿಗಿಂತ ಸಂಗೀತದ ಆನಂದಕ್ಕಾಗಿ ಹಾಡುವವವರು ಕೆಲವರು ಉಂಟು. ಹಣ, ಕೀರ್ತಿ-ಮುಂತಾದ ಹೊರಗಿನ ಲಾಭಕ್ಕಾಗಿ ಹಾಡುವವರಿಗಿಂತ ಕೇವಲ ಸಂಗೀತದ ಪ್ರೇಮಕ್ಕಾಗಿ ಹಾಡುವವರು ಹೇಗೆ ಮೇಲ್ತರದವರಾಗಿರುವರೋ ಹಾಗೆಯೇ ಇಲ್ಲಿಯೂ ಅಧ್ಯಾತ್ಮವಿದ್ಯೆಯ ಪರಮಾನಂದವನ್ನು ಅನುಭವಿಸುವದಕ್ಕಾಗಿ ಮಿಕ್ಕೆಲ್ಲವನ್ನೂ ಬಿಟ್ಟವರು ಹೆಚ್ಚಿನತರದ ಜ್ಞಾನಿಗಳಾಗಿರುತ್ತಾರೆ. ಅಧ್ಯಾತ್ಮವಿದ್ಯೆಯ ಆನಂದವೆಂಬುದು ಅಂಥವರಿಗೆ ಮಾತ್ರ ತಿಳಿಯುತ್ತದೆ. ಧ್ಯಾನಯೋಗಪರರಾಗಿರುವ ಇಂಥ ಮಹಾತ್ಮರ ದರ್ಶನಮಾತ್ರದಿಂದ ನಮ್ಮ ಪಾಪವೆಲ್ಲವೂ ಕಳೆಯುತ್ತದೆ. ಏಕೆಂದರೆ ಅವರೇ ಪರಮಾತ್ಮಸ್ವರೂಪರಾಗಿರುತ್ತಾರೆ.

ಬ್ರಹ್ಮಭಾವಪ್ರಾಪ್ತಿಗೆ ಬೇಕಾದ ಮತ್ತೆ ಕೆಲವು ಸಾಧನಗಳನ್ನೂ ಇಲ್ಲಿ ಹೇಳಿರುತ್ತದೆ. ಇಲ್ಲಿ "ವೈರಾಗ್ಯಂ ಸಮುಪಾಶ್ರಿತಃ" ಎಂಬ ಮಾತು ಶ್ಲೋಕದ ಕೊನೆಯಲ್ಲಿದೆಯಾದರೂ ವೈರಾಗ್ಯವು ಮೊಟ್ಟಮೊದಲು ಪಡೆದುಕೊಳ್ಳತಕ್ಕ ಸಾಧನವಾಗಿರುತ್ತದೆ. ಏಕೆಂದರೆ ವೈರಾಗ್ಯವಿದ್ದರೇ ಧ್ಯಾನಯೋಗವು ದಕ್ಕುತ್ತದೆ. ಮುಂದಿನ ಶ್ಲೋಕದಲ್ಲಿರುವ ಅಭಿಪ್ರಾಯವನ್ನೂ ಹೀಗೆಯೇ ತಿಳಿಯಬೇಕು. ಅಹಂಕಾರವನ್ನೂ ಬಲವನ್ನೂ ದರ್ಪವನ್ನೂ ಕಾಮವನ್ನೂ ಕ್ರೋಧವನ್ನೂ ಪ್ರರಿಗ್ರಹವನ್ನೂ ಬಿಟ್ಟು ನಿರ್ಮಲವಾಗಿ ಶಾಂತನಾಗಿರುವಾತನು ಬ್ರಹ್ಮಭಾವಕ್ಕೆ ಸಮರ್ಥನಾಗುವನು. "ವೈರಾಗ್ಯವನ್ನೂ ಅಹಂಕಾರಾದಿಗಳನ್ನೂ ಬಿಡುವದಕ್ಕೆ ಪ್ರಯತ್ನಿಸುವವರೇ ಧ್ಯಾನಯೋಗಕ್ಕೆ ಅರ್ಹರಾಗುವರಾದರೂ ಧ್ಯಾನಯೋಗದಿಂದಾಗುವ ಜ್ಞಾನನಿಷ್ಠೆಯು ಯಾರಿಗೆ ಅಳವಟ್ಟಿರುವದೋ ಅವರಿಗೇ ವೈರಾಗ್ಯಾದಿಗಳು ಪೂರ್ಣವಾಗಿ ವಶವಾಗಿರುವವೆಂಬುದನ್ನು ತಿಳಿಸುವದಕ್ಕಾಗಿ ಇವುಗಳನ್ನು ಕೊನೆಯಲ್ಲಿ ಹೇಳಿದೆ ಎಂದೂ ವರ್ಣಿಸಬಹುದು.

ಧ್ಯಾನಯೋಗವನ್ನು ಅಭ್ಯಾಸಮಾಡುತ್ತಿರುವವರಿಗೆ ಕ್ರಮಕ್ರಮವಾಗಿ ಅಹಂಕಾರವು ಬಿಟ್ಟುಹೋಗತ್ತದೆ ; ಏಕೆಂದರೆ ನಾನು ಎಂಬ ಭಾವನೆಯನ್ನು ಬಿಟ್ಟು ಪರಮಾತ್ಮಧ್ಯಾನವನ್ನು ಮಾಡುವದೇ ಧ್ಯಾನಯೋಗದ ಸಾರವು. ಧ್ಯಾನಯೋಗಿಗಳಿಗೆ ಬಲವೂ ಬಿಟ್ಟುಹೋಗುತ್ತದೆ.ಬಲವೆಂದರೆ ಇಲ್ಲಿ ಕಾಮರಾಗಗಳಿಂದಾಗಿರುವ ಬಲವು. ಸನ್ನಿಹಿಡಿದವರಿಗೆ ತತ್ಕಾಲಿಕ ಒಂದು ಬಗೆಯ ಬಲವುಂಟಾಗಿರುತ್ತದೆ ಎಂಬುದನ್ನು ನೀವು ಕಂಡಿರಬಹುದು ; ಅದು ನಿಜವಾದ ಬಲವಲ್ಲ, ಬಲದ ಆಭಾಸವು. ಏಕೆಂದರೆ ಸನ್ನಿ ನಿಂತಕೂಡಲೆ ಅವರಿಗೆ

ಮೊದಲಿದ್ದ ಸ್ವಾಭಾವಿಕವಾದ ಬಲವೂ ಕಣ್ಮರೆಯಾಗಿ ಬಹಳ ಆಯಾಸವಾಗಿಬಿಡುತ್ತದೆ. ಇದರಂತೆ ಕಾಮರಾಗಗಳುಳ್ಳ ಆಸುರಸಂಪತ್ತಿನವರಿಗೆ ಇರುವಂತೆ ತೋರುವ ಬಲವನ್ನು ಇಲ್ಲಿ ತ್ಯಾಜ್ಯವೆಂದು ತಿಳಿಸುವದಕ್ಕಾಗಿ ಪರಾಮರ್ಶಿಸಿರುತ್ತದೆ. ಸಾಮಾನ್ಯವಾಗಿ ನಮ್ಮ ಶರೀರದಲ್ಲಿರುವದು ಕಾಮರಾಗಪ್ರಯುಕ್ತವಾದದ್ದು. ಇದರಿಂದಲೇ ಮನುಷ್ಯನು ವ್ಯವಹಾರದಲ್ಲಿ ಅಷ್ಟೊಂದು ಕುಣಿಯುತ್ತಿರುವದು. ಪರಮಾತ್ಮನಿಷ್ಠೆಯಿಂದ ಬರುವ ಸಾತ್ತ್ವಿಕಬಲವು ಅಪೇಕ್ಷಣೀಯವಾದದ್ದು, ಆದ್ದರಿಂದ ಅದನ್ನು ಇಲ್ಲಿ ಪರಾಮರ್ಶಿಸಿಲ್ಲ ; ಸ್ವಾಭಾವಿಕವಾದ ಶರೀರಾದಿಸಾಮರ್ಥ್ಯವನ್ನು ಬಿಡಬೇಕೆಂದೂ ಇಲ್ಲಿ ಹೇಳಿಲ್ಲ. ದುರ್ಬಲರಾಗಿ ಕಾಣಿಸಿಕೊಳ್ಳುವದೊಂದು ಸಾಧುಗಳ ಲಕ್ಷಣವೆಂಬ ತಪ್ಪು ಅಭಿಪ್ರಾಯವನ್ನು ಮಾಡಿಕೊಳ್ಳಬಾರದು. ಅಧ್ಯಾತ್ಮಸಾಧನಪರರಾದವರು ಶರೀರದಲ್ಲಿ ಜಟ್ಟಿಗಳಂತೆ ಪುಷ್ಟಿಯನ್ನು ಸಂಪಾದಿಸಿಕೊಳ್ಳುವದಕ್ಕಾಗಲಿ ಕೇವಲ ವಾನಪ್ರಸ್ಥರಂತೆ ಶರೀರವನ್ನು ಕೃಶಗೊಳಿಸುವದಕ್ಕಾಗಲಿ ಹವಣಿಸುವದಿಲ್ಲ. ತಮ್ಮ ಸ್ವಾಭಾವಿಕಶರೀರಾದಿಗಳ ಬಲವನ್ನು ಪರಮಾರ್ಥಚಿಂತನೆಗೇ ಸಹಾಯಕವಾಗಿ ಮಾಡಿಕೊಳ್ಳುವದಕ್ಕೇ ಪ್ರಯತ್ನಿಸುತ್ತಿರುತ್ತಾರೆ.

ಧ್ಯಾನಯೋಗನಿರತರಾದವರು ದರ್ಪ, ಕಾಮ, ಕ್ರೋಧ-ಇವುಗಳನ್ನು ಬಿಟ್ಟಿರುತ್ತಾರೆ. ದರ್ಪವೆಂದರೆ ಅಭಿಮಾನದಿಂದ ಉಬ್ಬಿ ಧರ್ಮವನ್ನು ಅತಿಕ್ರಮಿಸುವದಕ್ಕೆ ಕಾರಣವಾಗಿರುವ ಕೊಬ್ಬು. ಇಂಥದ್ದೊಂದು ಬೇಕು ಎಂಬ ಕಾಮ, ಹೀಗೆ ಅನಿಷ್ಟವಾದದ್ದು ಬಂದೊದಗಿತಲ್ಲ-ಎಂಬ ಕ್ರೋಧ, ಇಂದ್ರಿಯಮನಸ್ಸುಗಳಲ್ಲಿ ದೋಷಗಳೆಲ್ಲ ಹೋದಮೇಲೂ ಶರೀರಧಾರಣಕ್ಕಾಗಿ ಅಥವಾ ಆಶ್ರಮಧರ್ಮವನ್ನು ಅನುಷ್ಠಾನಮಾಡಬೇಕೆಂಬ ಕಾರಣಕ್ಕಾಗಿ ಹೊರಗಿನ ಯಾವದಾದರೊಂದು ವಸ್ತು ಬೇಕಾಗುವದೆಂಬ ಪರಿಗ್ರಹ, ದೇಹವು ಬದುಕಿರಬೇಕೆಂಬುದಲ್ಲಿರುವ ಮಮತ್ವ-ಇವುಗಳು ಯಾವವೂ ಅವರಿಗೆ ಇರುವದಿಲ್ಲ. ಇದೇ ಪರಮಹಂಸ ಪರಿವ್ರಾಜಕರ ಸ್ಥಿತಿಯು.

ಭಗವದ್ಗೀತೆಯು ಎಲ್ಲರನ್ನೂ ಸಂನ್ಯಾಸಿಗಳನ್ನಾಗಿ ತಿರುಗಿಸುತ್ತದೆ ಎಂಬ ದೂರು ಅಲ್ಲಲ್ಲಿ ಕೇಳಿಬರುತ್ತದೆ. ಹದಿನೆಂಟನೆಯ ಅಧ್ಯಾಯದಲ್ಲಿ ಮುಖ್ಯವಾಗಿ ಸಂನ್ಯಾಸವನ್ನೇ ವಿಚಾರಮಾಡಿರುವದರಿಂದಲೂ ಸಂನ್ಯಾಸದಿಂದಲೇ ಪರಮನೈಷ್ಕರ್ಮ್ಯಸಿದ್ಧಿಯು ದೊರಕುವದೆಂದು ಬಾಯಿಬಿಟ್ಟು ಇಲ್ಲಿ ಹೇಳಿರುವದರಿಂದಲೂ ಭಗವದ್ಗೀತೆಯು ಅಲಸರಿಗೆ ಪ್ರೋತ್ಸಾಹಕೊಡುವ ಗ್ರಂಥವೆಂದೂ ಅದರ ಉಪದೇಶದಿಂದಾಗಿ ಈ ದೇಶವು ದರಿದ್ರದೇಶವಾಯಿತೆಂದೂ ಕೆಲವರು ಅವಿವೇಕಿಗಳು ಆಡಿಕೊಳ್ಳುವದುಂಟು. ಈ ದೂರನ್ನು ಪರಿಹರಿಸುವದಕ್ಕಾಗಿ "ಗೀತೆಯಲ್ಲಿ ಸಂನ್ಯಾಸವನ್ನು ಹೇಳಿಯೇ ಇಲ್ಲ, ಕರ್ಮಯೋಗದಲ್ಲಿಯೇ ಅದಕ್ಕೆ ಪರಮತಾತ್ಪರ್ಯವಿದೆ" ಎಂದು ವಾದಿಸುವ, ಗೀತಾಪ್ರೇಮಿಗಳೂ ಇಲ್ಲದೆ ಇಲ್ಲ. ಆದರೆ ಈವರೆಗಿನ ಉಪನ್ಯಾಸಗಳನ್ನು ಕೇಳಿರುವವರಿಗೆ ಇವೆರಡೂ ಗೀತೆಯ ಸಾರವನ್ನು ಗ್ರಹಿಸದೆ ಇರುವದರ ಫಲವಾಗಿ ಉಂಟಾದ ಅಭಿಪ್ರಾಯಗಳೆಂಬುದು ಹೊಳೆದಿರಬೇಕು.

ಭಗವದ್ಗೀತೆಯಲ್ಲಿ ಬರಿಯ ವೇಷದ ಸಂನ್ಯಾಸವನ್ನೇನೂ ಹೊಗಳಿಲ್ಲ; ವೇದಾಂತಶಾಸ್ತ್ರದಲ್ಲಿ ಬರಿಯ ಕಾಷಾಯಾಂಬರ ವೇಷಮಾತ್ರದಿಂದ ಪರಮಪುರುಷಾರ್ಥವಾಗುವದೆಂದು ಎಲ್ಲಿಯೂ ಹೇಳಿರುವದೇ ಇಲ್ಲ, ಕರ್ಮದ ಸೋಂಕೂ ಇಲ್ಲದ ಬ್ರಹ್ಮಸಂಸ್ಥನಾದ ಮಹಾತ್ಮನೇ ನಿಜವಾದ ಸಂನ್ಯಾಸಿಯು. ಎಲ್ಲರಿಗೂ ಆ ವಿದ್ವತ್ಸಂನ್ಯಾಸವು ದೊರಕದೆ ಇರಬಹುದು; ಆದಮಾತ್ರದಿಂದ ಈ ಧ್ಯೇಯವನ್ನು ಅಲ್ಲಗಳೆಯುವದೇನೂ ಜಾಣತನವೆನಿಸಲಾರದು. ಯಾವನಿಗೆ ಸಂಪೂರ್ಣವಾದ ವಿರಕ್ತಿಯುಂಟಾಗಿಲ್ಲವೋ, ಯಾವನಿಗೆ ಪರಮಾತ್ಮನೇ ಬೇಕೆಂಬ ಹಣ್ಣು ಹಂಬಲಿಕೆಯು ಇನ್ನೂ ಬಂದಿಲ್ಲವೋ, ಅಂಥವನು ಪಾರಮಹಂಸ್ಯವನ್ನು ಪಡೆಯುವದಕ್ಕೆ ಎಂದಿಗೂ ಯೋಗ್ಯನಲ್ಲ. ಜ್ಞಾನದಿಂದ ನಿಷ್ಕರ್ಮನಾಗದಿದ್ದರೂ ಅಂಥ ನೈಷ್ಕರ್ಮ್ಯಸಿದ್ಧಿಗಾಗಿ ಪ್ರಯತ್ನಮಾಡುವದಕ್ಕೆಂದು ಕರ್ಮೈಕದೇಶವನ್ನು ಸಂನ್ಯಾಸಮಾಡಿ ಸರ್ವದಾ ಧ್ಯಾನಯೋಗದಲ್ಲಿಯೇ ನಿರತರಾಗುವವರನ್ನು ಅಲಸರೆಂದೂ ದರಿದ್ರ ಭಿಕಾರಿಗಳೆಂದೂ ಹಳಿಯುವದು ಮೌಢ್ಯಪ್ರದರ್ಶನವಲ್ಲದೆ ಮತ್ತೇನಾದೀತು? ಪದಾರ್ಥಗಳನ್ನು ಬಿಟ್ಟು ಬೈರಾಗಿಯೆಂದು ಕರೆದುಕೊಳ್ಳುವವರನ್ನಲ್ಲ ಇಲ್ಲಿ ಪ್ರಸ್ತಾಪಿಸಿರುವದು, ಅಭಿಮಾನ ತ್ಯಾಗಿಗಳನ್ನು. ಸ್ವಾಮಿವಿವೇಕಾನಂದರು ಒಮ್ಮೆ ಅಮೆರಿಕದೇಶದಲ್ಲಿ ಉಪನ್ಯಾಸಮಾಡುತ್ತಿದ್ದಾಗ "ಮನುಷ್ಯನು ಎಷ್ಟೆಷ್ಟು ಸಂಪಾದಿಸಿ ಇಹಲೋಕದ ಭೋಗವನ್ನು ಸೂರೆಗೊಳ್ಳಬಹುದು ಎಂಬುದನ್ನು ತೋರಿಸುವದಕ್ಕೆ ನಿಮ್ಮವರು ಪ್ರಯತ್ನಪಟ್ಟಿರುತ್ತಾರೆ; ಆದರೆ ಎಷ್ಟು ಸ್ವಲ್ಪದರಲ್ಲಿ ಮನುಷ್ಯನು ಜೀವಿಸಿಕೊಂಡಿದ್ದು ಹೆಚ್ಚಿನ ಆನಂದವನ್ನು ಅನುಭವಿಸಬಹುದು ಎಂಬುದನ್ನು ತೋರಿಸುವದಕ್ಕೆ ನಮ್ಮ ದೇಶದವರು ಪ್ರಯತ್ನಿಸಿರುತ್ತಾರೆ" ಎಂದು ಹೇಳಿರುತ್ತಾರೆ. ಇದನ್ನು ನಾವು ಲಕ್ಷ್ಯದಲ್ಲಿಡಬೇಕು. ಜೀವನದ ಮಟ್ಟವನ್ನು ಏರಿಸಬೇಕೆಂಬ ಪ್ರಯತ್ನವು ಈ ಕಾಲಕ್ಕೆ ಎಲ್ಲೆಲ್ಲಿಯೂ ನಡೆದಿರುತ್ತದೆ; ಮನುಷ್ಯನು ತನ್ನ ಜೀವನಕ್ಕೆ ಎಷ್ಟು ಸಾಮಗ್ರಿಗಳನ್ನು ಉಪಯೋಗಿಸುತ್ತಾನೆ? ವರ್ಷಕ್ಕೆ ಅವನಿಗೆ ಎಷ್ಟು ರೂಪಾಯಿಗಳ ಖರ್ಚು ಆಗುತ್ತದೆ? ಎಂಬುದರಿಂದ ಆಯಾ ದೇಶದ ಅಭಿವೃದ್ಧಿಯನ್ನು ಅಳೆಯಬೇಕೆಂಬುದು ಈಗಿನವರ ಹವಣಿಕೆ. ಆದರೆ ಮನಸ್ಸಿನ ಮಟ್ಟವು ಏರಿದರೆ ಮಾತ್ರವೇ ಜೀವನದ ಮಟ್ಟವನ್ನು ಏರಿಸಿದಂತೆ ಎಂಬ ಉತ್ತಮತತ್ತ್ವವನ್ನು ಅನೇಕರು ಮನಸ್ಸಿಗೆ ತಂದುಕೊಳ್ಳದೆ ಇರುವದು ಬಹಳ ಶೋಚನೀಯವಾಗಿದೆ.

ಕಾಮಕ್ರೋಧಾದಿಗಳು ಆಗಾಗ್ಗೆ ಬಂದುಹೋಗುತ್ತಿರುತ್ತವೆ ಎಂಬುದು ನಿಜ ; ಈ ಅರ್ಥದಲ್ಲಿ ಅವುಗಳನ್ನು ಬಿಟ್ಟಿರುವವನೇ ಇಲ್ಲ. ಆದರೆ ಅವನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟವರೇ ಧ್ಯಾನಯೋಗಿಗಳು ಎಂಬುದನ್ನು `ವಿಮುಚ್ಯ' ಎಂಬ ಮಾತು ತಿಳಿಸುತ್ತದೆ. ಕಾಮಾದಿಗಳು ನಮ್ಮಗಳನ್ನು ವಿಕ್ಷೇಪಕ್ಕೆ ಈಡುಮಾಡಿ ಅಶಾಂತರನ್ನಾಗಿ ಮಾಡಿರುತ್ತವೆ; ಆದರೆ ಧ್ಯಾನಯೋಗಿಗಳು ಯಾವ ಕಾಮಕರ್ಮಗಳಿಗೂ ವಶರಾಗದಿರುವದರಿಂದ ಶಾಂತರಾಗಿರುತ್ತಾರೆ. ಪರಮೇಶ್ವರನು ನಾವೆಲ್ಲರೂ ಬ್ರಹ್ಮಭೂಯವನ್ನು ಪಡೆದುಕೊಳ್ಳುವದಕ್ಕೆ ಅವಕಾಶವನ್ನು

ಕಲ್ಪಿಸಿರುತ್ತಾನೆ, ಆದರೆ ನಾವು ಈ ಕಾಮುಕ್ರೋಧಗಳ ಹಾವಳಿಗೆ ಒಳಗಾಗಿ ಅಲ್ಪತುಷ್ಟರಾಗಿರುತ್ತೇವೆ; ಇದಕ್ಕಿಂತ ಬಡತನವು ಇನ್ನು ಯಾವದಿದ್ದೀತು? ಇಂದ್ರಿಯ ಸಂಯಮದಿಂದ ಮನುಷ್ಯನು ದೇವತ್ವಕ್ಕೆ ಏರಬಹುದು. ಕಾಮಹತನಲ್ಲದೆ ಇರುವವನಿಗೆ ಹೆಚ್ಚು ಹೆಚ್ಚಿನ ಆನಂದವು ಸಿಕ್ಕುವದೆಂದು ಶ್ರುತಿ ಸಾರುತ್ತಿದೆ. ಸಕಲಕಾಮುಗಳಿಗೂ ಸುವಿದೂರರಾಗಿರುವ ಮಹಾತ್ಮರು ಬ್ರಹ್ಮಭೂಯತ್ವವನ್ನೇ ಪಡೆಮುಕೊಳ್ಳುವರು.

ಕರ್ಮತ್ಯಾಗದಿಂದ ಹಿಡಿದು ಬ್ರಹ್ಮಭೂಯದವರೆಗೂ ಕೇಳಿದ್ದಾಯಿತು. ನಮಗೆಲ್ಲ ಜೀವನದಲ್ಲಿ ಮನಸ್ಸಿನಲ್ಲಿ ಒಂದೊಂದು ಗೀಳು ಇರುತ್ತದೆ. ಆದರೆ ಪರಮೇಶ್ವರಚಿಂತೆಯ ಗೀಳು ಬಂದರೆ ಬದುಕಿಕೊಂಡೇವು. ಗೀತೆಯ ಪುಸ್ತಕಗಳನ್ನು ಲಕ್ಷಗಟ್ಟಲೆ ಅಚ್ಚು ಮಾಡಿಸಿದರೆ ನಮಗೆ ಯಾವ ಸೌಭಾಗ್ಯವೂ ಬಂದಂತಾಗಲಿಲ್ಲ; ಪರಮೇಶ್ವರನ ಕಡೆಗೆ ತಿರುಗುವದೇ ನಮಗೆಲ್ಲ ಪರಮಮಂಗಲವು. ಸತ್ಪುರುಷರ ಸಹವಾಸವು ದೊರಕಿದಾಗ ಈಶ್ವರಾಭಿಮುಖ್ಯವು ಅಲ್ಪಸ್ವಲ್ಪ ಬೆಳೆಯಬಹುದು; ಆದರೆ ಅದು ಒಂದಿಷ್ಟು ಬೆಳೆಯುವದರೊಳಗಾಗಿ ಅದನ್ನು ಸರಿಯಾಗಿ ಪೋಷಣೆಮಾಡಿಕೊಳ್ಳದೆ ಹಾಳುಮಾಡಿಕೊಳ್ಳುತ್ತೇವೆ. ಪ್ರತಿಯೊಬ್ಬ ಮನುಷ್ಯನಿಗೂ ಮದುವೆಯಾಗಿ ಮಕ್ಕಳನ್ನು ಹೆತ್ತು, ತಾನೂ ಭೋಗಗಳನ್ನೂ ಅನುಭವಿಸಿ ತನ್ನ ಮಕ್ಕಳಿಗೂ ದುಡಿದಿಡುವ ಸ್ವಭಾವವಿದೆ. ಆದಷ್ಟುಮಟ್ಟಿಗೆ ನಾವೆಲ್ಲರೂ ಅದಕ್ಕಾಗಿ ಪ್ರಯತ್ನಿಸುತ್ತಲೇ ಇದೇವೆ. ಆದರೆ ಇಷ್ಟೇ ಆದರೆ, ಮನುಷ್ಯನಲ್ಲಿ ಪ್ರಾಣಿಗಳಿಗಿಂತ ಇರುವ ಹೆಚ್ಚುಗಾರಿಕೆ ಏನು? ಚಾತುರಿಯಿಂದ ವ್ಯವಹಾರಮಾಡುವದು ಹೆಚ್ಚಿನದೇ ಸರಿ; ಆದರೆ ಮನುಷ್ಯನಾದದ್ದಕ್ಕೆ ಧರ್ಮ, ಜ್ಞಾನ, ವೈರಾಗ್ಯಾದಿಗಳಿಗೆ ಬೆಲೆಕೊಡಬೇಕು. ಭಗವಂತನನ್ನು ಧ್ಯಾನಿಸಬೇಕು: ನಮಗೂ ನಮ್ಮ ಸುತ್ತಲಿರುವವರಿಗೂ ಕಲ್ಯಾಣವನ್ನು ಬಯಸಬೇಕು. ಇದೇ ಮಾನವಜನ್ಮದ ಸಾಫಲ್ಯ. ಇದೇ ಗೀತೆಯ ಸದುಪಯೋಗ.

## ೧೯೧. ಬ್ರಹ್ಮನಿಷ್ಠೆ 18 - (53-55)

**(29-10-50)**

ಕರ್ಮಯೋಗವನ್ನು ಮಾಡಿ ಚಿತ್ತಶುದ್ಧಿಯನ್ನು ಸಂಪಾದಿಸಿಕೊಂಡಿರುವಾತನು ಭಗವತ್ಪ್ರಾಪ್ತಿಯನ್ನು ಹೇಗೆ ಪಡೆಯುತ್ತಾನೆಂಬುದನ್ನು ಹೇಳಿದ್ದಾಗಿದೆ. ಭಗವಂತನನ್ನು ಸೇರುವಾಗ ಕರ್ಮವನ್ನು ಬಿಟ್ಟೇ ಸೇರಬೇಕು. ಕರ್ಮವೆಂಬುದು ಒಂದು ಚಲಾವಣೆಯ ನಾಣ್ಯವಿದ್ದಂತೆ. ನಾಣ್ಯವನ್ನು ಕೊಟ್ಟಲ್ಲದೆ ನಮಗೆ ಬೇಕಾದ ಪದಾರ್ಥವು ಅಂಗಡಿಯಲ್ಲಿ ಹೇಗೆ ಪ್ರಾಪ್ತವಾಗುವದಿಲ್ಲವೋ ಹಾಗೆ ಕರ್ಮವನ್ನು ಭಗವಂತನಿಗೆ ಅರ್ಪಿಸಿದಲ್ಲದೆ ನಮಗೆ ಇಷ್ಟವಾದ ಹೆಚ್ಚಿನ ಪುರುಷಾರ್ಥವು ದಕ್ಕಲಾರದು. ಈ ಅರ್ಪಣೆಗೆ ಭಾವವೇ ಪ್ರಧಾನ. ಭಗವದ್ಭಾವನೆಯೇ ಇದರ ಸಾರ.

ಆದರೆ ಮನುಷ್ಯನು ಸಾಮಾನ್ಯವಾಗಿ ಅಹಂಕಾರಪ್ರಧಾನನಾಗಿರುತ್ತಾನೆ. ಎಲ್ಲವನ್ನೂ ನಾನೇ ಮಾಡಿದೆ, ಇದರ ಫಲವೆಲ್ಲ ನನಗೇ ಸಲ್ಲತಕ್ಕದ್ದು - ಎಂದು ಈ ನಾನನ್ನು ಆರಾಧನೆಮಾಡಿಕೊಳ್ಳುತ್ತಿರುವದು ಅವನ ಸ್ವಭಾವವು. ಈ ಸ್ವಭಾವವನ್ನು ಕಳೆದುಕೊಳ್ಳುತ್ತಿರುವದಕ್ಕೆ ಪರಮೇಶ್ವರಾರಾಧನಾರೂಪವಾದ ಕರ್ಮಯೋಗವು ಬೇಕು. ಕರ್ಮದಲ್ಲಿ ನಾನು ಎಂಬುದು ಎದ್ದುಕೊಂಡು ಅನರ್ಥವನ್ನುಂಟುಮಾಡುತ್ತಿರುತ್ತದೆ. ಆದರೆ ತಾಯಿಯಾದವಳು ತನ್ನ ಕಷ್ಟವನ್ನು ಲೆಕ್ಕಿಸದೆ ಮಗುವನ್ನು ಸಾಕುವಾಗ ಇರುವ ಭಾವನೆಯಂಥ ಭಾವನೆಯು ಕರ್ಮಯೋಗದಿಂದ ಬರಬೇಕಾಗಿದೆ. ಇದೇ ಕರ್ಮದಿಂದಾಗಬೇಕಾಗಿರುವ ಸಿದ್ಧಿ. ಇಂಥ ಸಿದ್ಧಿಯನ್ನು ಪಡೆದುಕೊಂಡ ಜನರು ತಮ್ಮ ಸ್ವಾರ್ಥವನ್ನು ಮಾತ್ರ ಸಂಪಾದಿಸಿಕೊಂಡವರೆಂದು ಎಂದಿಗೂ ಹೇಳುವದಕ್ಕೆ ಬರುವದಿಲ್ಲ ; ಆ ಪ್ರಕಾರದ ಜನರ ಸಂಖ್ಯೆಯು ಹೆಚ್ಚಿದಷ್ಟೂ ಲೋಕಕ್ಕೇ ಕಲ್ಯಾಣವಾಗುವದು.

ಇದೆಲ್ಲ ಬಹಿರಂಗಸಾಧನವಾಯಿತು. ಇದರ ಗುರಿ ಎಲ್ಲಿ? ಎಂದರೆ, ನಾನು ಎಂಬುದು ಪರಮಾತ್ಮನಲ್ಲಿ ಕರಗಿ ಎಲ್ಲೆಲ್ಲಿಯೂ ಆತನನ್ನೇ ಕಾಣುವಂತೆ ಆಗಬೇಕು. ಇಷ್ಟಾರ್ಥಪ್ರಾಪ್ತಿಗಾಗಿ ದೇವರಿಗೆ ಹರಕೆಯ ಮೀಸಲನ್ನು ಒಪ್ಪಿಸುವ ಜನರಂತೆ ಕರ್ಮಯೋಗಿಯು ಜ್ಞಾನಪ್ರಾಪ್ತಿಗಾಗಿ ಅಹಂಕಾರವನ್ನು ಭಗವಂತನಿಗೊಪ್ಪಿಸಿ ಕೃತಕೃತ್ಯನಾಗುತ್ತಾನೆ. ಇದಕ್ಕಾಗಿಯೇ ಧ್ಯಾನಯೋಗವನ್ನು ಮಾಡುವದು. ಅನುಭವೈಕವೇದ್ಯವಾದ ಈ ಸ್ಥಿತಿಯೇ ಬ್ರಹ್ಮಭೂಯವು.

ಹೀಗೆ ಬ್ರಹ್ಮಭೂತನಾದವನ ಸ್ಥಿತಿ ಹೇಗಿರುವದು? ಇದನ್ನು ಭಗವಂತನು ಹೇಳುವದಕ್ಕೆ ಉಪಕ್ರಮಿಸಿರುತ್ತಾನೆ. ಸ್ಥಿತಪ್ರಜ್ಞ, ಭಕ್ತ, ನಿತ್ಯಯುಕ್ತ, ಜ್ಞಾನಿ, ತ್ರಿಗುಣಾತೀತ- ಎಂಬ ಹೆಸರುಗಳಿಂದ ಗೀತೆಯಲ್ಲಿ ತಿಳಿಸಿರುವವನೇ ಬ್ರಹ್ಮಭೂತನು. ಈಗಿನ ಕಾಲದಲ್ಲಿ ಪ್ರಾಣಬಿಟ್ಟ ಸಂನ್ಯಾಸಿಗಳನ್ನು "ಬ್ರಹ್ಮೀಭೂತರಾದರು" ಎಂದು ಕರೆಯುವ ವಾಡಿಕೆಯಿರುವದರಿಂದ ಈ ಮಾತಿಗೆ ನಮ್ಮನ್ನೆಲ್ಲ ಬಿಟ್ಟು ತೆರಳಿದರು ಎಂದಂತೆ ಅರ್ಥವಾಗಿ ದುಃಖವನ್ನು ಸೂಚಿಸುತ್ತದೆ. ಆದರೆ ಬ್ರಹ್ಮಭೂಯವನ್ನು ಪಡೆದು ಈ ಲೋಕದಲ್ಲಿಯೇ ಇರುವ ಮಹಾತ್ಮರ ವಿಚಾರವನ್ನೇ ಗೀತೆಯಲ್ಲಿ ಹೇಳಿದೆ. ದುಃಖಮಯವಾದ ನರಕ ಎಂಬುದು ಪಾಪಿಜೀವರ ಪಾಲಿಗೆ ಬಂದದ್ದು. ಆದರೆ ಜ್ಞಾನಿಗಳ ದೃಷ್ಟಿಯಿಂದ ನರಕವೂ ಬ್ರಹ್ಮವೇ, ಬ್ರಹ್ಮಕ್ಕಿಂತ ಬೇರೆಯಾಗಿ ಮತ್ತೊಂದು ಇರುವದೇ ಇಲ್ಲ. ಶಾಸ್ತ್ರದೃಷ್ಟಿಯಲ್ಲಿ ನಾವೆಲ್ಲರೂ ಬ್ರಹ್ಮವೇ ಆಗಿರುತ್ತೇವಾದರೂ ನಮ್ಮ ಪಾಲಿಗೆ ಆ ಬ್ರಹ್ಮವೇ ದುಃಖವಾಗಿ ತೋರಿಕೊಳ್ಳುತ್ತಿದೆ. ಜ್ಞಾನಿಗಳ ಪಾಲಿಗೆ ಇದೇ ಪ್ರಪಂಚವು ಅಮೃತಮಯವಾಗಿರುತ್ತದೆ. ನಾವು ಮನಸ್ಸಿನಲ್ಲಿ ಏನನ್ನಿಟ್ಟುಕೊಂಡಿರುತ್ತೇವೋ ನಮ್ಮ ಹೊರಗೂ ಅದೇ ಕಾಣುತ್ತಿರುತ್ತದೆ. ವಿವೇಕಾನಂದಸ್ವಾಮಿಗಳು ಮಕ್ಕಳ ಹೃದಯದಲ್ಲಿ ಕಳ್ಳತನದ ಭಾವವೇ ಇಲ್ಲದ್ದರಿಂದ ಅವರಿಗೆ ಹೊರಗೂ ಕಳ್ಳನು ಕಾಣಿಸುವದೇ ಇಲ್ಲ; ಕಳ್ಳನೂ ಅವರಿಗೆ ಮಾವಯ್ಯನಾಗಿರುತ್ತಾನೆ ಎಂದಿರುತ್ತಾರೆ.

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಙ್ಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥** 18-54

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್ ॥** 18-55

ಬ್ರಹ್ಮಭೂತನಾದವನಿಗೆ ನಮ್ಮಂತೆ ಕಲುಷಿತಾಂತಃಕರಣವಿರುವದಿಲ್ಲ. ಅವನು ಶೋಕಿಸುವದಿಲ್ಲ, ಇಂಥದ್ದು ಬೇಕೆಂದು ಬಯಸುವದಿಲ್ಲ. ನಮಗೆ "ಅಯ್ಯೋ! ನಮಗೆ ಅದಿಲ್ಲವಲ್ಲ!" ಎಂದು ಕಾಮಕ್ರೋಧಗಳು ಬೆಳೆದುಕೊಂಡು ಶೋಕಮೋಹಗಳನ್ನು ತಂದು ರಾಶಿಹಾಕುತ್ತಿರುವವು. ಮಕ್ಕಳು "ದೊಡ್ಡವರಿಗೆ ಕೊಡುವಷ್ಟು ಆಹಾರವನ್ನು ಅಥವಾ ಅವರು ಉಡುವಂಥ ದೊಡ್ಡ ಉಡುಪುಗಳನ್ನು ತಮಗೆ ಕೊಡಲಿಲ್ಲವಲ್ಲ!"- ಎಂದು ಅಳುವಂತೆ ನಮಗೂ ಈ ಕಾಮಕ್ರೋಧಗಳಿಂದ ನಿಜವಾದ ಆನಂದವನ್ನು ಅನುಭವಿಸುವ ಯೋಗ್ಯತೆ ತಪ್ಪಿ ನಿರಂತರವಾಗಿ ಅಳುವ ಮನಃಸ್ಥಿತಿ ಬಂದಿರುತ್ತದೆ.

ಅಕಾಮಹತರಾದವರಿಗೇ ಆನಂದವು ಹೆಚ್ಚು ಎಂಬುದು ವೇದಾಂತಸಿದ್ಧಾಂತವು. ಎಲ್ಲರ ಆನಂದವನ್ನೂ ತಮ್ಮದಾಗಿ ಮಾಡಿಕೊಂಡು ಸುಖಿಸುವವರು ಧನ್ಯರು. ಸ್ವಾಮಿರಾಮತೀರ್ಥರವರು ತಮಗೆ ಸಮರ್ಪಿಸಿದ ಚಿನ್ನದ ಗಡಿಯಾರವನ್ನು ಸ್ವಾಮಿ ವಿವೇಕಾನಂದರವರು "ಈ ಜೇಬಿನಲ್ಲಿಯೇ ಅನುಭವಿಸುವೆನು" ಎಂದು ಅವರ ಜೇಬಿನಲ್ಲಿಟ್ಟ ಘಟನೆಯನ್ನು ಜ್ಞಾಪಿಸಿಕೊಂಡರೆ ಮತ್ತೊಬ್ಬರ ಆನಂದದಲ್ಲಿ ತಮ್ಮ ಆನಂದವನ್ನು ಕಂಡುಕೊಳ್ಳುವ ಮಹಾತ್ಮರ ಮನಃಸ್ಥಿತಿಯು ಒಂದಿಷ್ಟಾದರೂ ತಿಳಿದೀತು. ಶ್ರೀ ಕೃಷ್ಣನು ವ್ಯವಹಾರದೃಷ್ಟಿಯಿಂದ ವಸುದೇವನ ಹೊಟ್ಟೆಯಲ್ಲಿ ಜನಿಸಿದನು ; ಪರಮಾರ್ಥವಾಗಿ ಬ್ರಹ್ಮಾಂಡಕ್ಕೆಲ್ಲ ಅನ್ನವನ್ನುಕೊಡುವ ಭಗವಂತನು ಆತನೇ. ಹೀಗಿರುವಲ್ಲಿ ಗೋಪಾಲರ ಜೊತೆಯಲ್ಲಿದ್ದುಕೊಂಡು ಅವರೊಡನೆ ತಾನೂ ಒಬ್ಬ ಗೋಪಾಲಕನಾಗಿ ಅವರು ತಂದ ಬುತ್ತಿ, ತಾನು ತಂದದ್ದು - ಇವುಗಳ ವಿನಿಮಯದಿಂದ ತಾನೂ ಆನಂದಿತನಾಗಿ ಅವರಿಗೂ ತನ್ನ ಪ್ರೇಮವನ್ನು ಬೀರಿ ಆನಂದಗೊಳಿಸುತ್ತಿದ್ದ ಆ ಸ್ಥಿತಿಯನ್ನು ಏನೆಂದು ವರ್ಣಿಸಬೇಕು ! ಬ್ರಹ್ಮಭೂತನಾದವನು ಶೋಕಿಸುವದಿಲ್ಲ, ಬಯಸುವದಿಲ್ಲ-ಎಂದರೆ ಗೋಡೆಯ ಹಾಗೆ ಅಚೇತನನಾಗಿರುತ್ತಾನೆ ಎಂದೇನೂ ಅಭಿಪ್ರಾಯವಲ್ಲ. ಯಾರೊಬ್ಬರಿಗೆ ಆನಂದವು ದೊರಕಿದ್ದರೂ ಅದು ತನಗೇ ದೊರೆತದ್ದು ಎಂಬ ಉತ್ತಮವಾದ ಅರಿವು ಅವನಿಗೆ ಆಗಿರುತ್ತದೆ. ತನ್ನ ಸುತ್ತಲೂ ವಿವಿಧಜನರನ್ನು ಇಟ್ಟುಕೊಂಡು ತನ್ನ ಆನಂದವನ್ನು ಎಲ್ಲರಿಗೂ ಹಂಚಿಕೊಡುವ ಸ್ಥಿತಿಯು ಸಾಮಾನ್ಯಪುಣ್ಯದಿಂದ ಲಭಿಸತಕ್ಕದ್ದಲ್ಲ. ಈ ಪೃಥಿವಿಯು ಎಲ್ಲರ ಮಧು, ಎಲ್ಲರ ಕರ್ಮದ ಫಲವು. ನಾವೆಲ್ಲರೂ ಸೇರಿಕೊಂಡು ಒಂದಾನೊಂದು ಮಧುರಸವನ್ನು ತಯಾರಿಸಿರುತ್ತೇವೆ, ಆ ರಸದಲ್ಲಿ ನಾವೆಲ್ಲರೂ ಭಾಗಿಗಳಾಗಬೇಕು. ಆ ಮಟ್ಟಕ್ಕೆ ನಮ್ಮ ಮನಸ್ಸು ಏರಬೇಕು. ಈಗಿನ ಕಾಲಕ್ಕೆ ನಾವು ರಾಜಕೀಯವಾದ ಸುದ್ದಿಗಳನ್ನೇ ಕೇಳುತ್ತಾ ಹೇಳುತ್ತಾ ಶೋಕವನ್ನೇ ಹೆಚ್ಚಿಸಿಕೊಳ್ಳುವ ವಿದ್ಯೆಯಲ್ಲಿ ನೈಪುಣ್ಯವನ್ನು

ಸಂಪಾದಿಸಿಕೊಳ್ಳುತ್ತಿದ್ದೇವೆ. ಪಶುಪಕ್ಷ್ಯಾದಿಗಳಿಗೂ ಇಲ್ಲದ ಈ ಶೋಕದಿಂದಲೂ ಕಾಂಕ್ಷೆಗಳ ಸಂಕಷ್ಟದಿಂದಲೂ ವ್ಯಥೆಪಡುವದೇ ಮನುಷ್ಯತ್ವದ ಗುರುತೇನು? ಎಲ್ಲಾ ಪ್ರಾಣಿಗಳೂ ತನಿನಿದ್ರೆಯಲ್ಲಿ ಆನಂದರೂಪನಾದ ಪರಮಾತ್ಮನಲ್ಲಿ ತಮ್ಮ ವ್ಯಕ್ತಿತ್ವವನ್ನು ಅದ್ದಿ ಎಚ್ಚೆತ್ತಿರುವದರಿಂದ ಬೆಳಿಗ್ಗೆ ಎದ್ದಾಗ ಉಲ್ಲಾಸದಿಂದ ನಲಿದಾಡುತ್ತಿರುತ್ತವೆ; ಮನುಷ್ಯನೂ ಹಾಗೆಯೇ. ಆದರೆ ಮನಷ್ಯನಲ್ಲಿ ಒಂದು ವಿಶೇಷ. ಈ ಅವ್ಯಕ್ತವಾದ ಆನಂದದ ವಾಸನೆಯನ್ನು ಅವನು ಎಚ್ಚರದಲ್ಲಿಯೂ ಅಭಿವ್ಯಕ್ತಗೊಳಿಸಿಕೊಳ್ಳಬಲ್ಲನು. ಸತ್ಪುರುಷರ ಸಂಗದಿಂದ ನಮ್ಮ ಸ್ವರೂಪವಾಗಿರುವ ಈ ಆನಂದವನ್ನು ಕಂಡುಕೊಂಡು ಅದರ ಚಿಂತನೆಯಲ್ಲಿಯೇ ಕಾಲವನ್ನು ಕಳೆಯುವದು ಮನುಷ್ಯನಿಗೆ ಮಾತ್ರವೇ ಸಾಧ್ಯ.

ಸತ್ಪರುಷರು ದರ್ಶನಮಾತ್ರದಿಂದಲೇ ಜನರನ್ನು ಪವಿತ್ರಗೊಳಿಸುತ್ತಾರೆ ; ಅವರ ಸಂಭಾಷಣೆಯಿಂದ ನಮ್ಮ ಸ್ವರೂಪವಾಗಿರುವ ಆನಂದವು ನಮಗೆ ತಿಳಿಯಬರುತ್ತದೆ. ಇದೇಕೆಂದರೆ ಅವರು ಪರಬ್ರಹ್ಮವನ್ನೇ ತಮ್ಮ ಆತ್ಮನಾಗಿ ಕಂಡುಕೊಂಡಿರುತ್ತಾರೆ. ಆದ್ದರಿಂದ ಸರ್ವಭೂತಗಳಿಗೂ ಆ ಬ್ರಹ್ಮವೇ ಆತ್ಮನೆಂಬ ಮಹಾಜ್ಞಾನದಿಂದ ಅವರು ಎಲ್ಲರಲ್ಲಿಯೂ ಸಮಬುದ್ಧಿಯುಳ್ಳವರಾಗಿರುತ್ತಾರೆ. ಅವರ ಪ್ರೇಮವು ಸರ್ವರಲ್ಲಿಯೂ ಸಮವಾಗಿರುತ್ತದೆ. ಈ ಸರ್ವಪ್ರೇಮವು ಈಶ್ವರಭಕ್ತಿಯು. ನಮ್ಮ ಕೇಂದ್ರವು ಯಾವದು? ಪರಮೇಶ್ವರನೇ. ಆ ಪರಮಾತ್ಮನಲ್ಲಿ ಮನಸ್ಸು ಸಮಾಹಿತವಾಯಿತೆಂದರೆ ನಮಗೆ ಸಮತ್ವದೃಷ್ಟಿಯು ಬರುತ್ತದೆ. ಪರಮಾತ್ಮನು ಎಲ್ಲರಲ್ಲಿಯೂ ಸಂಪೂರ್ಣವಾಗಿಯೇ ಸಂನಿಹಿತನಾಗಿರುತ್ತಾನೆ. ಆದ್ದರಿಂದ ಆತನ ಭಕ್ತನಾದವನೂ ಎಲ್ಲರಲ್ಲಿಯೂ ಸಮವಾಗಿ ಪ್ರೇಮದಿಂದಿರುತ್ತಾನೆ. ಇದೇ ಜ್ಞಾನಲಕ್ಷಣವಾದ ಪರಭಕ್ತಿ. ಈ ಭಕ್ತಿಯಿಂದಲೇ ಪರಮಾತ್ಮನು ಎಷ್ಟು, ಯಾವ ಸ್ವರೂಪದವನು - ಎಂಬುದು ಗೊತ್ತಾಗುತ್ತದೆ. ಪರಮಾತ್ಮನು ಬಗೆಬಗೆಯ ವಿಭೂತಿಗಳಿಂದ ಬಗೆಬಗೆಯಾಗಿ ತೋರುತ್ತಿರುತ್ತಾನೆ ; ಇದೆಲ್ಲವೂ ಆ ಪರಮಾತ್ಮನ ವಿಭೂತಿಗಳೇ - ಎಂಬ ಹೆಚ್ಚಿನ ಅರಿವು ಪರಭಕ್ತನಿಗೆ ಮಾತ್ರವೇ ತಿಳಿಯಬರುತ್ತದೆ. ಪರಮಾತ್ಮನು ಯಾವ ಸ್ವರೂಪದವನು, ಅವನು ನಿಜವಾಗಿ ಯಾವ ಸ್ವರೂಪದಲ್ಲಿರುತ್ತಾನೆ-ಎಂಬುದೂ ಈ ಭಕ್ತನಿಗೇ ತಿಳಿಯಬರುತ್ತದೆ. ಪರಮಾತ್ಮನು ಅನಂತವಿಭೂತಿಗಳಿಂದ ಅನಂತವಾಗಿ ಕಾಣುತ್ತಿದ್ದರೂ ನಿಜವಾಗಿ ಅವನಲ್ಲಿ ಯಾವ ಭೇದವೂ ಇರುವದಿಲ್ಲ. ಉಪಾಧಿಗಳಿಂದ ಅವನಲ್ಲಿ ಭೇದಗಳು ಕಾಣುವದು ನಿಜ ; ಆದರೆ ಆ ಉಪಾಧಿಗಳೂ ಅವಿದ್ಯಾಕಲ್ಪಿತವೇ ಆಗಿರುತ್ತವೆ. ವಿಭೂತಿಗಳ ನಿಮಿತ್ತವಾಗಿರುವ ಉಪಾಧಿಗಳೂ ಸ್ವರೂಪದಿಂದ ಆ ಪರಮಾತ್ಮನೇ ಹೊರತು ಬೇರೆಯಲ್ಲ. ಈ ಪರಮಾತ್ಮನು ನಿಜವಾಗಿ ನಿರುಪಾಧಿಕನು, ನಿರ್ವಿಶೇಷನು, ಅದ್ವೈತನು, ಚೈತನ್ಯಮಾತ್ರೈಕರಸನು ; ಅಜನು, ಅಜರನು, ಅಮರನು, ಅಭಯನು, ಅಮರಣನು. ಇಂಥ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿರುವ ಪರಮಾತ್ಮನೇ ಪರಮಾರ್ಥವು ಎಂಬುದು ಪರಭಕ್ತನಿಗೊಬ್ಬನಿಗೇ ಮನದಟ್ಟಾಗಿರುತ್ತದೆ.

ಅಭಿಜಾನಾತಿ ಎಂದರೆ ಯಾವ ವೇಷದಿಂದ ಪರಮಾತ್ಮನು ಕಾಣಿಸಿಕೊಂಡರೂ ಇವನು ಪರಮಾತ್ಮನೇ ಎಂದು ಗುರುತಿಸುತ್ತಾನೆ ಎಂದರ್ಥ. ಇದಕ್ಕೆ ಅವನಿಗಿರುವ ನಿರತಿಶಯವಾದ ಪ್ರೇಮವೇ ಕಾರಣವು. ಪರಮಾತ್ಮನನ್ನು ಯಾವನು ಹೀಗೆ ಗುರುತಿಸಿ ಅರಿಯಬಲ್ಲನೋ ಅವನಿಗೆ ಪರಮಾತ್ಮನ ಹೊರತು ಮತ್ತೊಂದು ಕಾಣಿಸುವದೇ ಇಲ್ಲ. ಆದ್ದರಿಂದ ತಾನು ಆ ಪರಮಾತ್ಮನಿಗಿಂತ ಬೇರೆಯಾಗಿ ಉಳಿದುಕೊಳ್ಳುವದು ಅವನಿಗೆ ಸಾಧ್ಯವಾಗಿರುವದಿಲ್ಲ; ಜ್ಞಾನಭಕ್ತಿಯ ಬಲದಿಂದ ಆ ಪರಮಾತ್ಮನನ್ನು ಹೊಕ್ಕು ಆತನಲ್ಲಿಯೇ ಒಂದಾಗಿಬಿಟ್ಟಿರುತ್ತಾನೆ. ಇದೇ ಗೀತೆಯ ಕೊನೆಯ ಫಲ.

ತತ್ತ್ವವು ಎರಡು ದೃಷ್ಟಿಗಳಿಂದ ಬೇರೆ ಬೇರೆಯ ಎರಡು ಪ್ರಕಾರದಿಂದ ಕಾಣುತ್ತಿರುತ್ತದೆ. ಲೌಕಿಕದೃಷ್ಟಿಯಿಂದ ನೋಡಿದಾಗ ಈ ನಮ್ಮ ವ್ಯವಹಾರವು ದುಃಖಮಯವಾಗಿರುತ್ತದೆ; ದುಃಖಕ್ಕೆ ಪರಿಹಾರವೆಂದು ನಾವು ಅನುಸರಿಸುವ ಉಪಾಯಗಳು ಒಂದು ದುಃಖದಿಂದ ಮತ್ತೊಂದಕ್ಕೆ ನಮ್ಮನ್ನು ಮುಟ್ಟಿಸುತ್ತಿರುವವು. ಈ ದೃಷ್ಟಿಯಲ್ಲಿ ದುಃಖಕ್ಕೆ ಅಂತವೇ ಇಲ್ಲವೆಂದು ಕಾಣುತ್ತಿರುವದು. ಆದರೆ ಶಾಸ್ತ್ರದೃಷ್ಟಿಯಿಂದ ನೋಡಿದರೆ ಎಲ್ಲಿ ನೋಡಿದರೂ ಆನಂದರೂಪವಾದ ಪರಮಾರ್ಥವೇ. ಎಲ್ಲವೂ ಬಗೆಬಗೆಯ ವಿಕಾರವನ್ನು ಹೊಂದುತ್ತಿರುವಂತೆ ತೋರುತ್ತಿದ್ದರೂ ನಿಜವಾಗಿ ನಿತ್ಯನಿರ್ವಿಕಾರವಾಗಿರುವ ಒಂದೇ ಪರಮಾರ್ಥತತ್ತ್ವವಿದೆ ; ಅದೇ ಆನಂದರೂಪವಾದ ನಮ್ಮ ಆತ್ಮನು. ಅಮೃತವನ್ನು ಉಣಲೊಲ್ಲದೆ ಮೊಂಡುಹಿಡಿದು ಅಳುತ್ತಿರುವ ಮಕ್ಕಳಂತೆ ನಾವು ಪರಮಾರ್ಥವಾಗಿ ನಮ್ಮ ಸ್ವರೂಪವೇ ಆಗಿರುವ ಈ ಅದ್ವಿತೀಯಾನಂದವನ್ನು ಅರಿತುಕೊಂಡು ನಿಶ್ಚಿಂತರಾಗಿರಲಾರದೆ ಒದ್ದಾಡುತ್ತಿರುವೆವು. ಕರ್ಮಯೋಗಧ್ಯಾನಯೋಗಗಳ ಮೂಲಕವಾಗಿ ಅಂತಃಕರಣಕ್ಕೆ ಸಂಸ್ಕಾರವನ್ನು ಮಾಡಿಕೊಂಡು ಶಾಸ್ತ್ರದೃಷ್ಟಿಯಿಂದ ನೋಡುವದಕ್ಕೆ ಮೊದಲುಮಾಡಿದೆವೆಂದರೆ ಆನಂದವೇ ಆನಂದ!

## ೧೯೨. ಅರ್ಜುನನಿಗೆ ಕಡೆಯ ಉಪದೇಶ 18 - (56-59)

**(5-11-50)**

ಧ್ಯಾನಯೋಗದಿಂದ ಪರಮಾತ್ಮನಿಷ್ಠೆಯನ್ನು ಪಡೆದವನ ವಿಷಯವನ್ನು ಭಗವಂತನು ವರ್ಣಿಸುತ್ತಿದ್ದಾನೆ. ತತ್ತ್ವನಿಷ್ಠೆ ಎಂದರೆ ಧ್ಯೇಯವೊಂದೇ ನೆನಪಿನಲ್ಲಿದ್ದು ನಾನು ಎಂಬುದು ಸಂಪೂರ್ಣವಾಗಿ ತೊಡೆದುಹೋಗಿರುವ ಸ್ಥಿತಿ. ಈ ಸ್ಥಿತಿಯನ್ನು ಪಡೆದ ಪರಭಕ್ತನು ಸರ್ವರಲ್ಲಿಯೂ ಇರುವ ಒಬ್ಬ ಪರಮಾತ್ಮನನ್ನೇ ತನ್ನ ಆತ್ಮನೆಂದು ತಿಳಿಯುತ್ತಾನೆ. ಎಲ್ಲವೂ ಪರಮಾತ್ಮನ ವಿಭೂತಿಗಳೇ ಎಂಬುದು ಅವನಿಗೆ ಮಾತ್ರ ಮನದಟ್ಟಾಗಿರುತ್ತದೆ. ನಿಜವಾಗಿ ಪರಮಾತ್ಮನು ಯಾವ ಉಪಾಧಿಗಳೂ ಇಲ್ಲದ ಸತ್ಯಜ್ಞಾನಾನಂದಸ್ವರೂಪನು ಎಂಬುದು ಅವನಿಗೆ ಮಾತ್ರ ಮನದಟ್ಟಾಗುತ್ತದೆ.

ಪರಭಕ್ತನು ಜ್ಞಾನಮಾತ್ರದಿಂದ ಪರಮೇಶ್ವರನನ್ನು ಪ್ರವೇಶಿಸಿರುತ್ತಾನೆ. ಭಗವಂತನನ್ನು ಪ್ರವೇಶಿಸುವದು ಎಂದರೆ ಇಲಿಯು ಬಿಲವನ್ನು ಪ್ರವೇಶಿಸಿದಂತೆ ಅಲ್ಲ. ಪ್ರವೇಶವೆಂಬುದು ಅಂತಃಕರಣದ ಒಂದಾನೊಂದು ಅಂತಸ್ತು. ಮನಸ್ಸು ಪರಮಾತ್ಮನಿಂದ ದೂರವಾಗಿರುವದೇ ಅಪ್ರವೇಶವು; ಪರಭಕ್ತಿಯಿಂದ ಅವನಲ್ಲಿ ಒಂದಾಗಿರುವ ಅರಿವನ್ನು ಸಂಪಾದಿಸಿಕೊಳ್ಳುವದೇ ಪ್ರವೇಶವು. ಪ್ರೇಮವಿಲ್ಲದಾಗ ನಾವು ಯಾರ ಹತ್ತಿರವಿದ್ದರೂ ಅವರಿಗೆ ದೂರವಾಗಿಯೇ ಇದ್ದಂತೆ; ಪ್ರೇಮವು ಉತ್ಕಟವಾದಾಗ ಅವರಿಗೆ ಎಷ್ಟು ದೂರದಲ್ಲಿದ್ದರೂ ಹತ್ತಿರದಲ್ಲಿಯೇ ಇದ್ದಂತೆ. ಇದು ನಮಗೆಲ್ಲ ಅನುಭವದಲ್ಲಿದೆ. ಪರಮಾತ್ಮನನ್ನು ಬಿಟ್ಟಿರುವ, ಪರಮಾತ್ಮನಲ್ಲಿ ಸೇರಿಕೊಳ್ಳದೆ ಇರುವ ಪದಾರ್ಥವೆಂಬುದೇ ನಿಜವಾಗಿಲ್ಲ. ಯಾವಾಗಲೂ ವಾಯು ಮಂಡಲದಲ್ಲಿಯೇ ಇದ್ದುಕೊಂಡು ಉಸಿರಾಡುತ್ತಿರುವ ಜನರು ತಾವು ವಾಯುವಿನಲ್ಲಿಯೇ ಮುಳುಗಿ ಓಡಾಡುತ್ತಿರುವೆವೆಂಬುದನ್ನು ಮರೆತಿರುವಂತೆ, ಪರಮಾತ್ಮನಲ್ಲಿಯೇ ಇದ್ದುಕೊಂಡು ಸರ್ವವ್ಯವಹಾರವನ್ನೂ ಮಾಡುತ್ತಿರುವ ನಾವುಗಳು ಆ ಪರಮಾತ್ಮನನ್ನೇ ಮರೆತು ಆತನಿಂದ ದೂರವಾಗಿಬಿಟ್ಟಿರುತ್ತೇವೆ. ಎಂಥ ಪಾಪಿಯನ್ನೇ ಆಗಲಿ, ತನ್ನ ಉದರದಿಂದ ಹೊರಕ್ಕೆ ಹಾಕುವದು ಪರಮೇಶ್ವರನ ಕೈಯಿಂದ ಆಗಲಾರದು - ಎಂದು ಒಬ್ಬ ಸಾಧುಗಳು ವರ್ಣಿಸಿರುತ್ತಾರೆ. ಆದ್ದರಿಂದ ಪರಮಾತ್ಮನಲ್ಲಿ ನಾವು ಪ್ರವಿಷ್ಟರಾಗಿಲ್ಲ ಎಂದರೆ ವಿಷಯಾಂತರಗಳಲ್ಲಿ ಪ್ರವಿಷ್ಟರಾಗಿದ್ದೇವೆ ಎಂದೇ ಅರ್ಥ. ಇಷ್ಟುಮಾತ್ರದಿಂದಲೇ ಪರಮಾತ್ಮನಿಗಿಂತ ಹೊರಚ್ಚಾಗಿರುತ್ತೇವೆ. ಆದ್ದರಿಂದ ನಾವು ವಿಷಯರಾಗವನ್ನು ಬಿಟ್ಟು ಪರಮಾತ್ಮನಲ್ಲಿ ಪರಮಪ್ರೇಮವನ್ನು ಸಂಪಾದಿಸಿಕೊಳ್ಳಬೇಕು. ಅಷ್ಟುಮಾತ್ರದಿಂದಲೇ ನಾವು ಆತನನ್ನು ಪ್ರವೇಶಿಸುವೆವು ; ಎಂದರೆ ಎಂದೆಂದಿಗೂ ಆತನಲ್ಲಿ ಪ್ರವಿಷ್ಟರೇ ಆಗಿರುತ್ತೇವೆಂಬುದನ್ನು ಆಗ ನೆನಪಿಗೆ ತಂದುಕೊಳ್ಳುವೆವು.

ಭಗವದ್ಭಕ್ತಿಯ ಮಾಹಾತ್ಮ್ಯವು ಎಂಥದ್ದು ಎಂಬುದನ್ನು ಕೇಳಿ :

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥** **18 - 56**

ಭಗವಂತನನ್ನು ಆಶ್ರಯಿಸಿರುವಾತನು ಯಾವ ಕರ್ಮವನ್ನೇ ಸರ್ವದಾ ಮಾಡುತ್ತಿರಲಿ, ಆ ಭಗವಂತನ ಪ್ರಸಾದದಿಂದ ಶಾಶ್ವತವಾದ ಅವ್ಯಯಸ್ಥಾನವನ್ನೇ ಹೊಂದುತ್ತಾನೆ. "ಯಾವ ಕರ್ಮವನ್ನು ಮಾಡಿದರೂ" ಎಂದು ಹೇಳಿರುವದರಿಂದ ಭಕ್ತನು ಭಕ್ತಿಯ ಗರ್ವದಿಂದ ಸ್ವೇಚ್ಛಾಚಾರಪರನಾಗಿರುವನೆಂದು ತಿಳಿಯಬಾರದು. "ಪೈಲವಾನನು ಹೇಗೆ ಲಾಗಹಾಕಿದರೂ ಬೀಳುವದಿಲ್ಲ" ಎಂದರೆ ಅವನು ನೋಡುವದಕ್ಕೆ ಅಲಕ್ಷ್ಯದಿಂದ ಇರುವಂತೆ ತೋರಿದರೂ ಎಚ್ಚರಿಕೆಯಿಂದಲೇ ಇರುತ್ತಾನಾದ್ದರಿಂದ ಅವನಿಗೆ ಯಾವ ಪೆಟ್ಟೂ ಆಗುವ ಸಂಭವವಿಲ್ಲ ಎಂದೇ ಅರ್ಥ. ಇದರಂತೆ ಭಗವಂತನನ್ನು ಅವಲಂಬಿಸಿರುವಾತನು ಯಾವ ಕರ್ಮವನ್ನು

ಮಾಡಿದರೂ ಅವನಿಗೆ ಉತ್ತಮಪದವೇ ಪ್ರಾಪ್ತವಾಗುತ್ತದೆ, ಎಂದರೆ ಪ್ರಾರಬ್ಧವಶದಿಂದ ಅವನು ತಪ್ಪುಹಾದಿಗೆ ಹೋಗುತ್ತಿರುವನೆಂದು ಮತ್ತೊಬ್ಬರ ದೃಷ್ಟಿಗೆ ಕಂಡರೂ ಭಗವದ್ಭಕ್ತಿಯೇ ಅವನನ್ನು ಸರಿಯಾದ ಮಾರ್ಗಕ್ಕೆ ಒಯ್ಯುವದು. ಆಕಾಶದಲ್ಲಿ ಹಾರಾಡುವ ಹಕ್ಕಿಯು ಯಾವದಕ್ಕೂ ಅಂಜದೆ ಮನಬಂದಂತೆ ಹಾರಾಡುತ್ತಿರುವ ಹಾಗೆ ಕಾಣುತ್ತಿದ್ದರೂ ಅದಕ್ಕೆ ತನ್ನ ರೆಕ್ಕೆಗಳ ಅವಲಂಬನೆಯು ಇದ್ದೇ ಇರುವಂತೆ ಭಕ್ತನಿಗೆ ಭಗವಂತನ ಅವಲಂಬನೆಯು ಯಾವಾಗಲೂ ಇದ್ದೇ ಇರುತ್ತದೆಯಾದ್ದರಿಂದ ಅವನು ಎಂದಿಗೂ ಜಾರಿಬೀಳುವದಿಲ್ಲ. ಭಗವಂತನನ್ನು ಆಶ್ರಯಿಸಿರುವಾತನ ಯೋಗಕ್ಷೇಮವನ್ನು ಆ ಭಗವಂತನೇ ನೋಡಿಕೊಳ್ಳುತ್ತಿರುತ್ತಾನೆ. ಭಗವಂತನನ್ನು ಬಿಟ್ಟರೆ ದುಃಖ; ಆದ್ದರಿಂದ ಆತನಿಗೆ ಸರ್ವವನ್ನೂ ಅರ್ಪಿಸಿ ಆತನ ಅವಲಂಬನೆಯಿಂದಲೇ ಎಲ್ಲವನ್ನೂ ಮಾಡುತ್ತಿರಬೇಕು ಎಂಬುದು ಇಲ್ಲಿ ಸಾರವು. ಒಬ್ಬ ಮಹನೀಯರು ತಮ್ಮ ಗುರುವನ್ನು ಹೊಗಳುವಾಗ `ನಿನ್ನ ಪದರಿಗೆ ಬಂದು ಬಿದ್ದೆ, ಇನ್ನು ಮೇಲೆ ನಾನು ಗೆದ್ದೆ' ಎಂದಿದ್ದಾರೆ. ತಾಯಿಯ ಗರ್ಭದಲ್ಲಿರುವ ಕೂಸಿಗೆ ಸ್ವತಂತ್ರವಾದ ಯಾವ ಯೋಚನೆಯೂ ಇಲ್ಲದಂತೆ ಗುರುವಿಗೆ ಸರ್ವವನ್ನೂ ಅರ್ಪಿಸಿದ ಶಿಷ್ಯನಿಗೆ ಮತ್ತೆ ಏತರ ಚಿಂತನೆಯೂ ಇಲ್ಲ - ಎಂಬುದು ಅವರ ಅಭಿಪ್ರಾಯ. ಭಗವದ್ಭಕ್ತಿಯಿಂದ ಆತ್ಮನಿವೇದನೆಯನ್ನು ಮಾಡಿದಾತನ ಸ್ಥಿತಿಯನ್ನೂ ಹೀಗೆಯೇ ತಿಳಿಯಬೇಕು. ಯಾವನು ಪರಮಾತ್ಮನನ್ನೇ ಅನನ್ಯಭಕ್ತಿಯಿಂದ ಆಶ್ರಯಿಸಿರುವನೋ ಅವನು ಪರಮಪದವನ್ನು ಮುಟ್ಟಿದವನು. ಅವನೇ ಜೀವನ್ಮುಕ್ತನು. ಜೀವನ್ಮುಕ್ತಿಯೆಂದರೆ ಕಾಮಾದಿಗಳ ಬಂಧದಿಂದ ಆತ್ಯಂತಿಕವಾಗಿ ಬಿಡುಗಡೆಯನ್ನು ಹೊಂದಿರುವದು. ಪರಮಾತ್ಮನೇ ಪರಮಪದಪ್ರಾಪ್ತಿಗೆ ಉಪಾಯವೂ ಉಪೇಯವೂ ಆಗಿರುವನು. ಪರಮಾತ್ಮನನ್ನು ಬಿಟ್ಟು ಮತ್ತೆ ಯಾವದೂ ಇರುವದೇ ಇಲ್ಲ.

ಇಲ್ಲಿಗೆ ಸಾಧನಗಳ ತುದಿಯನ್ನು ಮುಟ್ಟಿದಂತೆ ಆಯಿತು. ತ್ಯಾಗದ ಮಹಿಮೆಯಿಂದ ಪ್ರಾರಂಭವಾಗಿ ಇಲ್ಲಿಗೆ ಬಂದು ತಲುಪಿದಂತಾಯಿತು. ನಾವು ಮುಖ್ಯವಾಗಿ ಲಕ್ಷಿಸತಕ್ಕದ್ದು ಇದು ಒಂದೇ. ಮನಸ್ಸಿನಿಂದ ಮಾಡುವ ತ್ಯಾಗವೇ ತ್ಯಾಗ. ಇನ್ನೊಂದರ ಅವಲಂಬನೆಯಿಲ್ಲದೆ ಇದ್ದವನಿಗೆ ಭಗವಂತನು ದೊರಕುವನು. ನಾವು ಈಗ ಅವಲಂಬಿಸುತ್ತಿರುವ ಹೊಲ, ಹಣ, ಮನೆ, ಮಠ, ಆಯುಸ್ಸು ಶಕ್ತಿ, ರೂಪ, ಕುಲ, ವಿದ್ಯೆ- ಯಾವದೇ ಆಗಲಿ ನಡುವೆ ಮುರಿದುಕೊಳ್ಳುವ ಊರುಗೋಲಿನಂತೆ ಇರುತ್ತದೆ. ಪರಮಾತ್ಮನ ಅವಲಂಬನೆಯಿರುವವನಿಗೆ ಮಿಕ್ಕದ್ದೆಲ್ಲವೂ ಆಯಾ ಕಾಲಕ್ಕೆ ಹೇಗೋ ಒದಗುವದು. ಪರಮಾತ್ಮನು ಎಲ್ಲಿಯೋ ಇದ್ದಾನೆ ಎಂದು ಭಾವಿಸಿದ್ದರಿಂದ ನಮಗೆ ದುಃಖವಾಗಿದೆ; ಆದರೆ ಆತನು ನಮ್ಮ ನಮ್ಮ ಹೃದಯದಲ್ಲಿಯೇ ಇರುತ್ತಾನೆ, ನಮ್ಮಗಳ ಆತ್ಮನೇ ಆಗಿರುತ್ತಾನೆ; ಆತನನ್ನು ಬಿಟ್ಟರೆ ನಮಗೆ ಗತಿಯೇ ಇಲ್ಲ ಎಂಬುದು ತಿಳಿದ ಒಡನೆಯೇ ಎಲ್ಲವೂ ಸುಖಮಯವಾಗಿಬಿಡುತ್ತದೆ.

ಈಗ ಇನ್ನೊಂದು ಉಪಸಿದ್ಧಾಂತವನ್ನು ಇದರಿಂದ ತೆಗೆಯಲಾಗುತ್ತದೆ. ಅರ್ಜುನನು ತನಗೆ ಮುಂದೆ ಏನುಮಾಡಬೇಕೆಂದು ತಿಳಿಯದೆ ಇದ್ದಾಗ "ನಿನ್ನ ಶಿಷ್ಯನಾಗಿರುವೆನು, ನನಗೆ ಕರ್ತವ್ಯವನ್ನು ಉಪದೇಶಿಸು" ಎಂದು ನಮ್ರವಾಗಿ ಕೇಳಿಕೊಂಡನು. ಭಗವಂತನು ಅವನಿಗೆ ಪರಮಸಿದ್ಧಾಂತದ ಆಧಾರದಿಂದ ಎಲ್ಲವನ್ನೂ ತಿಳಿಸಿ "ಹೀಗೆ ಮಾಡು" ಎಂದು ಉಪದೇಶಿಸಿದನು. ನಾವೂ ನಮಗೆ ಎಲ್ಲವೂ ತಿಳಿದಿದೆ ಎಂಬ ಹೆಮ್ಮೆಯನ್ನು ಬಿಟ್ಟು "ಏನು ಮಾಡಲಿ, ಭಗವಂತ? ನೀನೇ ನನಗೆ ದಾರಿಯನ್ನು ತೋರಿಸಬೇಕು"ಎಂದು ದೀನತೆಯಿಂದ ಬೇಡಿಕೊಳ್ಳಬೇಕು. ಆಗ ಆತನ ಸಹಾಯವು ದೊರಕುತ್ತದೆ ಮಾರ್ಗವು ಕಾಣಬರುತ್ತದೆ. ಭಗವಂತನು ಅರ್ಜುನನಿಗೆ ಮಾತ್ರ ಉಪದೇಶಮಾಡಿರುವದಿಲ್ಲ ; ಆತನ ಉಪದೇಶವು ನಮಗೆಲ್ಲರಿಗೂ ಅನ್ವಯಿಸುತ್ತದೆ ಎಂಬುದು ಆಗ ಹೊಳೆಯುತ್ತದೆ. ಅರ್ಜುನನಿಗೆ ಭಗವಂತನು ಹೇಳಿರುವ ಬುದ್ಧಿವಾದವೇನು?

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ |**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ||** **18-57**
**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ ತರಿಷ್ಯಸಿ |**

"ಚಿತ್ತದಿಂದ ಸರ್ವಕರ್ಮಗಳನ್ನೂ ನನ್ನಲ್ಲಿ ಬಿಟ್ಟು ಮತ್ಪರನಾಗಿರು" ; ನಾನು ಎಂಬುದನ್ನು ತೆಗೆದುಹಾಕು, ನನಗೆ ಸರ್ವವನ್ನೂ ಸಮರ್ಪಿಸು- ಎಂಬೀ ಬೋಧನೆಯು ಸಾಧನದ ಸಾರಸರ್ವಸ್ವವಾಗಿರುತ್ತದೆ. ಅವಿವೇಕಿಗಳಾದವರು ತಮಗಿಲ್ಲದ ಸ್ವಾತಂತ್ರ್ಯವನ್ನು ಮೈಮೇಲೆ ಹಾಕಿಕೊಂಡು, ಅನವಶ್ಯವಾದ ತಮ್ಮ ಶಕ್ತಿಗೂ ಮೀರಿದ ಕೆಲಸಕ್ಕೆ ಕೈಹಾಕಿ ಮುಗ್ಗರಿಸುತ್ತಾರೆ. ಹಾಗೆ ಮಾಡಬಾರದು. "ನಾನು" ಎಂಬುದನ್ನು ಪ್ರಧಾನವಾಗಿ ಮಾಡಿಕೊಳ್ಳುವದನ್ನು ಬಿಟ್ಟು ಭಗವಂತನನ್ನೇ ಪ್ರಧಾನವಾಗಿ ಮಾಡಿಕೊಳ್ಳಬೇಕು. ನಮಗೆ ಇರುವ ಅನುಕೂಲ್ಯಗಳು ನಮ್ಮ ಬಲದಿಂದ ಇರುದಿಲ್ಲ; ಅವು ಭಗವಂತನ ಇಚ್ಛೆಯಿಂದಲೇ ನಮಗೆ ಬಂದೊದಗಿರುತ್ತವೆ. "ತನು ನಿನ್ನದು ಜೀವನ ನಿನ್ನದಯ್ಯ" ಎಂಬುದನ್ನು ತಿಳಿಯಬೇಕು. ನಿಜವಾಗಿ ನೋಡಿದರೆ ಭಗವಂತನಿಗೆ ಅರ್ಪಣೆಮಾಡತಕ್ಕದ್ದು ಯಾವದಿದೆ? ಬರಿಯ ಅಭಿಮಾನದಿಂದ ಇದು ನನ್ನದು, ಇದು ನನ್ನದು - ಎಂದುಕೊಂಡಿದ್ದೇವೆ. ಈ ನಾನು ನನ್ನದು ಎಂಬಿದನ್ನು ಬಿಡಬೇಕು; ನಿಜವಾದ ಮಾಲೀಕನನ್ನು ಅರಿತುಕೊಳ್ಳಬೇಕು. ಇದೇ ಸಂನ್ಯಾಸ. ಈ ಭಗವಂತನೇ ಈ ಜಗತ್ತಿಗೆಲ್ಲ ಒಡೆಯನು ; ನಮಗೆ ಕಾಣಬರುವ ಸುಖದ ಲವಲೇಶವು ಕೂಡ ಆತನ ಆನಂದಸಮುದ್ರದ ತುಂತುರುಗಳೇ. ಇದನ್ನು ಅರಿತು ನಾವು ಧನ್ಯರಾಗಬೇಕು.

ರಾವಣನು ಔದ್ಧತ್ಯದಿಂದ ಕುಬೇರನನ್ನು "ಪುಷ್ಪಕವಿಮಾನವು ನನಗೆ ಸಲ್ಲತಕ್ಕದ್ದು, ಇದನ್ನು ಕೊಟ್ಟುಬಿಡು!" ಎಂದು ಕೇಳಿದನು ; ಕುಬೇರನು ಕೂಡಲೆ ಕೊಟ್ಟುಬಿಟ್ಟನು. ಆದರೆ

ರಾವಣನು ಅದನ್ನು ಎಷ್ಟುದಿನ ಅನುಭವಿಸಿದನು? ಅವನ ಹೆಮ್ಮೆಯೇ ಅವನನ್ನು ಹಾಳುಮಾಡಿತು. **ಪರಮಾತ್ಮನನ್ನು ಅವಲಂಬಿಸದವರಿಗೆ ನಂದನವನವೇ ಸಿಕ್ಕಿದರೂ ಮರುಭೂಮಿಯಾಗಿಬಿಡುತ್ತದೆ.** ಆದ್ದರಿಂದ ಸರ್ವಕ್ರಿಯಾಕಾರಕಫಲಗಳನ್ನೂ ಭಗವಂತನಿಗೆ ಸಂಪೂರ್ಣವಾಗಿ ಹೃದಯಪೂರ್ವಕವಾಗಿ ಸಮರ್ಪಿಸುವದನ್ನು ಕಲಿತುಕೊಳ್ಳಬೇಕು. ಪರಮಾತ್ಮನು "ನನಗೆ ಇದನ್ನು ಕೊಡು" ಎಂದೇನೂ ಕೇಳುವದಿಲ್ಲ; ನಿಜವಾಗಿ ಆತನದೇ ಸರ್ವವೂ ಆಗಿರುತ್ತದೆ. ಆದರೆ ನಾವು ನನ್ನದು ಎಂಬ ಅಭಿಮಾನದಿಂದ ಈ ದುಃಸ್ಥಿತಿಗೆ ಇಳಿದಿರುತ್ತೇವೆ. ಆ ನಾವು ಬುದ್ಧಿಯೋಗವನ್ನು ಆಶ್ರಯಿಸಿ ಸಕಲ ಅಭಿಮಾನವನ್ನೂ ತೊರೆದು ಭಗವಂತನಲ್ಲಿಯೇ ಚಿತ್ತವನ್ನಿಡಬೇಕು. ನಮ್ಮಗಳ ಚಿತ್ತವು ಯಾವ ಯಾವದೋ ಒಂದೊಂದು ವಸ್ತುವಿನಲ್ಲಿ ನೆಟ್ಟಿರುತ್ತದೆ. ಅದನ್ನು ಎಷ್ಟು ಕಿತ್ತರೂ ಹಿಂತಿರುಗುವದಿಲ್ಲ. ಆದ್ದರಿಂದ ಅದರ ಪ್ರಾಪ್ತಿಗಾಗಿ, ಅಥವಾ ರಕ್ಷಣೆಗಾಗಿ ನಾವು ನಮಗೂ ಅರಿವಿಲ್ಲದೆಯೇ ಎಡೆಬಿಡದೆ ದುಡಿಯುತ್ತಿರುವೆವು. ಇಂಥ ಚಿತ್ತವನ್ನು ಭಗವಂತನಲ್ಲಿಡುವದನ್ನು ನಾವು ಕಲಿತುಕೊಳ್ಳಬೇಕು. ನಮಗೆ ಬೇಕಾದ ವಿಷಯಗಳು ಒಂದಿಷ್ಟು ಕಾಲ ನಮ್ಮನ್ನು ಬಿಟ್ಟಗಲಿದರೂ ನಮಗೆ ಅತ್ಯಂತವಾಗಿ ಮನಸ್ಸಿನಲ್ಲಿ ಕಳವಳವುಂಟಾಗುತ್ತದೆ. ಅದರಂತೆ ಭಗವಂತನ ಚಿಂತನೆಯು ಒಂದಿಷ್ಟು ಮರೆತುಹೋದರೂ ಅತ್ಯಂತ ವ್ಯಾಕುಲತೆಯುಂಟಾಗಬೇಕು. ಅದೇ ಪರಮಾತ್ಮನಲ್ಲಿ ಭಕ್ತಿಯುಂಟಾದದ್ದರ ಗುರುತು. ಇದನ್ನೇ ಭಗವಚ್ಚಿತ್ತತೆ ಎನ್ನುವರು ; ಎಂಥ ವಿಘ್ನವಿರಲಿ, ಯಾವ ಕಾರಣದಿಂದಲೂ ಈ ಭಗವಚ್ಚಿತ್ತತೆಯನ್ನು ಕಳೆದುಕೊಳ್ಳಬಾರದು ; ಇದನ್ನು ತಿಳಿಸುವದಕ್ಕಾಗಿ ಇಲ್ಲಿ `ಸತತ' ಎಂಬ ಶಬ್ದವನ್ನು ಪ್ರಯೋಗಿಸಿದೆ.

ಹೀಗೆ ಸತತವಾಗಿ ಭಗವಂತನಲ್ಲಿಯೇ ಚಿತ್ತವನ್ನಿಟ್ಟಿರುವವನಿಗೆ ಭಗವಂತನ ಪ್ರಸಾದವು ಲಭಿಸುವದು. ಅವನು ಮಾಡುವ ಕರ್ಮಗಳು ಇನ್ನು ಮೇಲೆ ಭಗವಂತನೇ ಆಗಿಬಿಡುತ್ತವೆ. ಆ ಕರ್ಮಗಳಿಗೆ ಎಂದಿಗೂ ಯಾವ ವಿಘ್ನವೂ ಬರುವದೇ ಇಲ್ಲ. ಗದುಗಿನ ವೀರನಾರಾಯಣನ ಅಂಕಿತದಿಂದ ಭಾರತವನ್ನು ಬರೆದಿರುವ ನಾರಣಪ್ಪನು ತನ್ನ ಗ್ರಂಥದ ಆದಿಯಲ್ಲಿ ಭಕ್ತರ ವಿಷಯವಾಗಿ ಹೇಳಿರುವದು ಮನನೀಯವಾಗಿರುತ್ತದೆ "ಗದುಗಿನ ವೀರನಾರಾಯಣನ ಕಿಂಕರನಾದವನಿಗೆ ಇರುವ ಒಲವು ಎಂಥದ್ದೆಂದರೆ ಗ್ರಂಥವನ್ನು ರಚಿಸುವ ಮುನ್ನ ಹಲಗೆಯ ಮೇಲೆ ಮೊದಲು ಅವನು ಕರಡು ಬರೆದುಕೊಂಡು ಆಮೇಲೆ ಪದ್ಯವನ್ನು ಶುದ್ಧಪ್ರತಿಯಾಗಿ ಮಾಡಬೇಕಾದದ್ದಿಲ್ಲ ; ಒಂದು ಪದವನ್ನು ಇಟ್ಟು ಮತ್ತೆ ಅದನ್ನು ಅಳಿಸಬೇಕಾದದ್ದಿಲ್ಲ ; ಮತ್ತೊಬ್ಬ ಗ್ರಂಥಕರ್ತನ ಒಕ್ಕಣೆಯನ್ನು ಎರವು ತೆಗೆದುಕೊಳ್ಳಬೇಕಾದದ್ದಿಲ್ಲ ; ಬರೆಯುವದಕ್ಕೆ ಮೊದಲುಮಾಡಿದರೆ ಬರೆಯುವ ಕಂಠದ ಓಟವು ನಿಲ್ಲುವಹಾಗೆಯೇ ಇರುವದಿಲ್ಲ!" ಹೀಗೆ ತನ್ನ ಅಗ್ಗಳಿಕೆಯನ್ನು ಕೊಚ್ಚಿಕೊಳ್ಳುವ ಎದೆಗಾರಿಕೆಯು ಅವನಿಗೆ ಹೇಗೆ ಬಂತು? ಆ ನಾರಾಯಣನ ಅನುಗ್ರಹದಿಂದಲೇ ಅಲ್ಲವೆ? ಆ ನಾರಾಯಣನ ಸ್ಮರಣೆಯಿಂದ ಎಲ್ಲಾ ದೇವತೆಗಳ ಅನುಗ್ರಹವೂ ದೊರಕುವದು, ಎಲ್ಲಾ ಗ್ರಹಗಳೂ ಏಕಾದಶ

ಸ್ಥಾನದಲ್ಲಿದ್ದುಕೊಂಡು ಶುಭಫಲವನ್ನೇ ಕೊಡುವರು. ಪರಮಾತ್ಮನೆಂಬ ಕೇಂದ್ರವನ್ನು ಅವಲಂಬಿಸಿ ವ್ಯವಹಾರವನ್ನು ಮಾಡುವವರಿಗೆ ಯಾವ ಸೋಲೂ ಇರುವದೇ ಇಲ್ಲ. ಇದಕ್ಕೆ ಅವರು ಅವಲಂಬಿಸಿರುವದು ಒಂದೇ ಉಪಾಯ, ಸತತವಾದ ಭಗವಚ್ಚಿತ್ತತೆ. ನಾವು ಮಾಡಬೇಕಾದದ್ದೆಲ್ಲ ಏನು ? ಗೀತೆಯು ಇದಕ್ಕೆ ಉತ್ತರವಾಗಿ ಒಂದೇ ಒಂದು ಪಲ್ಲವಿಯನ್ನು ಮತ್ತೆ ಮತ್ತೆ ಹಾಡುತ್ತಿರುತ್ತದೆ. ಭಗವಂತನಲ್ಲಿಯೇ ಸತತವಾಗಿ ಚಿತ್ತವನ್ನಿಡು !

ಪರಮಾತ್ಮನಲ್ಲಿ ಚಿತ್ತವಿದ್ದರೆ ಆಯಿತು ಆತನ ಕೃಪೆಯನ್ನು ಸಂಪಾದಿಸಿಕೊಂಡರೆ ಆಯಿತು ; ಯಾವ ಕಷ್ಟವೂ ನಮಗೆ ಎಡರಾಗುವಂತಿಲ್ಲ. ವಿಂಧ್ಯಪರ್ವತದಷ್ಟು ಕಷ್ಟವು ಬರಬಹುದು, ಆದರೆ ಆಗ ನಮಗೆ ಅಗಸ್ತ್ಯರ ಕಾಲು ಬಂದುಬಿಡುತ್ತದೆ. ಆ ವಿಂಧ್ಯನನ್ನು ದಾಟಿ ಮುಂದುವರಿದುಬಿಡಬಹುದು. ನಮಗೆ ದುಸ್ತರವೆಂದು ತೋರುವ ಅನೇಕ ಕಷ್ಟಗಳು ಕಾಣುತ್ತಿರುವವು; ಆದರೆ ಅದಕ್ಕೆಲ್ಲ ಕಾರಣವೇನೆಂದರೆ ನಾವು 'ಕರ್ಮಗಳು ನಮ್ಮವು, ಫಲವು ನಮಗೇ ಆಗ ಬೇಕಾದದ್ದು' ಎಂಬ ಹೆಮ್ಮೆಯನ್ನು ಹೊತ್ತಿರುತ್ತೇವೆ. ಭಗವಂತನು ಅರ್ಜುನನಿಗೆ ಹೇಳಿರುವ ಎಚ್ಚರಿಕೆಯ ಮಾತಿದು !

**ಅಥ ಚೇತ್ ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಙ್ಕ್ಷ್ಯಸಿ ||** **18 - 58**
**ಯದ್ಯಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ |**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ |** **18 - 59**

"ನೀನು ನನ್ನ ಮಾತನ್ನು ಕೇಳದೆ ಇದ್ದರೆ, ಅಹಂಕಾರವನ್ನವಲಂಬಿಸಿಯೇ ನಡೆಯುವೆಯಾದರೆ, ಹಾಳಾಗುವೆ!" ಈ ಎಚ್ಚರಿಕೆಯ ಮಾತಿಗೆ ನಾವು ಈಗಲೆ ಕಿವಿಗೊಡುವದು ಒಳ್ಳೆಯದು. `ನಾನು'-ಎಂಬ ಅಭಿಮಾನವನ್ನು ಹೊರುವುದು ಒಂದು ಭಾರವಾದ ಬಂಡೆಯನ್ನು ಹೊತ್ತಂತೆ. ಬಂಡೆಗಲ್ಲನ್ನು ಹೊತ್ತುಕೊಂಡು ನಡೆಯುವವನು ಅಲ್ಲಲ್ಲಿ ಮುಗ್ಗರಿಸಿಬೀಳುವನೆಂಬುದರಲ್ಲಿ ಆಶ್ಚರ್ಯವೇನು? ಈಶ್ವರನ ಮೇಲೆ ಭಾರಹಾಕುವದನ್ನು ಮರೆತು ನಾವೇ ಈ ಹೊರಬಾರದ ಮೂಟೆಯನ್ನು ಹೊರುವದಕ್ಕೆ ಟೊಂಕಕಟ್ಟುತ್ತಿರುವೆವು. ಮತ, ಧರ್ಮ-ಎಂದು ಹೊರಗಿನ ವೇಷಭಾಷೆಗಳಿಗೆ ಇಲ್ಲದ ಬೆಲೆಯನ್ನು ಕೊಟ್ಟಮಾತ್ರದಿಂದ ನಾವು ಈಶ್ವರನನ್ನು ನಂಬಿದಂತೆ ಅಲ್ಲ. ಈಶ್ವರನೊಬ್ಬನು ಇದ್ದಾನೆ ; ಎಲ್ಲವೂ ಆತನ ಇಚ್ಛೆಯಂತೆ ನಡೆಯುತ್ತಿದೆ - ಎಂಬುದನ್ನು ಮರೆತರೆ ನಾವು ಯಾವ ಸಾಧನವನ್ನು ಮಾಡಿದರೂ ವ್ಯರ್ಥ. ಅರ್ಜುನನಂಥವನಿಗೆ ಭಗವಂತನು "ನೀನು ಅಹಂಕಾರವನ್ನಾಶ್ರಯಿಸಿದರೆ ಕೆಟ್ಟೆ!" ಎಂದು ಹೇಳುತ್ತಾನೆಂದಮೇಲೆ ನಮ್ಮ ಹೆಮ್ಮೆಗೆ ಬೆಲೆ ಏನಿದ್ದೀತು ? ಆದರೂ ನಾವು ಎಚ್ಚೆತ್ತಿಲ್ಲ. ಇದಕ್ಕೆ ನಾಶವಾಗುವದೇ ಫಲ. ಭಗವಂತನು ಹೇಳುತ್ತಾನೆ : " ನನ್ನಲ್ಲಿಯೇ ಚಿತ್ತವನ್ನಿಟ್ಟು ಸರ್ವದುರ್ಗಗಳನ್ನು ದಾಟುವದು, ನಿನ್ನ ಅಹಂಕಾರವನ್ನೇ ನಂಬಿ ಹಾಳಾಗುವದು - ಇವೆರಡರಲ್ಲಿ ಯಾವದಾದರೊಂದನ್ನು ಆರಿಸಿಕೊ ! ಫಲವನ್ನು ಹೇಳಿರುತ್ತೇನೆ."

"ಅಹಂಕಾರವನ್ನು ಆಶ್ರಯಿಸಿ ನಾನು ಯುದ್ಧಮಾಡುವದಿಲ್ಲ ಎನ್ನುತ್ತಿರುವೆಯಲ್ಲ, ಈ ನಿಶ್ಚಯವು ಮಿಥ್ಯಾನಿಶ್ಚಯವು. ಏಕೆಂದರೆ ನಿನ್ನ ಪ್ರಕೃತಿಯು ನಿನ್ನನ್ನು ಯುದ್ಧದಲ್ಲಿ ಅವಶ್ಯವಾಗಿ ತೊಡಗಿಸುವದು"! ಎಂದು ಭಗವಂತನು ಹೇಳಿರುವದನ್ನು ನಾವು ನೆನಪಿನಲ್ಲಿಡಬೇಕು. ನಮ್ಮೆಲ್ಲೆಲ್ಲ ಒಂದೊಂದು ಪ್ರಕೃತಿಯಿದೆ ; ಅದು ಬಹುಕಾಲದಿಂದ ನಮ್ಮನ್ನು ಆಶ್ರಯಿಸಿಕೊಂಡುಬಂದಿದೆ. ಅದನ್ನು ತಪ್ಪಿಸಿಕೊಳ್ಳುವೆನು ಎಂದು ನಾವು ಎಷ್ಟೇ ಪ್ರತಿಜ್ಞೆಮಾಡಿದರೂ ಆಗುವಂತಿಲ್ಲ. ಆದ್ದರಿಂದ ಪ್ರಕೃತಿವಿರುದ್ಧವಾಗಿ ಸ್ವತಂತ್ರವಾಗಿ ಪ್ರಯತ್ನಮಾಡುವದು ವ್ಯರ್ಥ. "ಭಗವಂತನ ಪ್ರೇರಣೆಯಂತೆ ಮಾಡುತ್ತಿದ್ದೇನೆ; ನನ್ನದೇನೂ ಸ್ವಾತಂತ್ರ್ಯವಿಲ್ಲ, ಆತನಿಗೇ ಎಲ್ಲವನ್ನೂ ಅರ್ಪಿಸುವೆನು" ಎಂದು ಆತನಿಗೆ ನಮ್ಮ ಕರ್ಮಗಳನ್ನೆಲ್ಲ ಸಮರ್ಪಣೆಮಾಡಿಬಿಡುವದೇ ಸರ್ವೋತ್ತಮವಾದ ಉಪಾಯ-ಎಂದು ಭಗವಂತನು ಮತ್ತೆ ಮತ್ತೆ ನೆನಪುಕೊಡುತ್ತಿದ್ದಾನೆ.

## ೧೯೩. ಉಪದೇಶದ ಉಪಸಂಹಾರ 18 - (60-63)

**(12-11-50)**

ಗೀತೋಪದೇಶವನ್ನೆಲ್ಲ ಮುಗಿಸಿ ಭಗವಂತನು ಅರ್ಜುನನಿಗಾಗಿ ವಿಶೇಷೋಪದೇಶವನ್ನು ಮಾಡುವದಕ್ಕೆ ಪ್ರಾರಂಭಿಸಿರುತ್ತಾನೆ. ಈ ಉಪದೇಶವನ್ನು ಕೇಳಿ ಮಾಡತಕ್ಕದ್ದೇನು ?- ಎಂಬುದು ಮುಖ್ಯವಾದ ಪ್ರಶ್ನೆಯಷ್ಟೆ. ಇದಕ್ಕೆ ಅರ್ಜುನನನ್ನು ನಿಮಿತ್ತಮಾಡಿಕೊಂಡು ಭಗವಂತನು ಉತ್ತರವನ್ನು ಹೇಳಿರುತ್ತಾನೆ. ಯಾವ ಅಧಿಕಾರಿಯು ಮನಮುಟ್ಟಿ ಗೀತೆಯನ್ನೆಲ್ಲ ಮೊದಲಿನಿಂದ ಕೊನೆಯವರೆಗೂ ಓದಿ ಅರ್ಥಾನುಸಂಧಾನವನ್ನು ಮಾಡಿಕೊಂಡಿರುತ್ತಾನೋ ಅವನು "ಒಟ್ಟಿನಲ್ಲಿ ಏನು ಹೇಳಿದಂತೆ ಆಯಿತು, ಇದುವರೆಗೆ ನಾನು ಕೇಳಿರುವ ಅನೇಕ ಉಪದೇಶಗಳಲ್ಲಿ ಅತ್ಯಂತ ಪ್ರಮುಖವಾದದ್ದು ಯಾವದು ?" ಎಂದು ತನ್ನನ್ನು ತಾನು ಕೇಳಿಕೊಳ್ಳುವದು ಸಹಜವಾಗಿರುತ್ತದೆ. ಇದಕ್ಕೆ ಭಗವಂತನು ಕೊಟ್ಟಿರುವ ಉತ್ತರವು ಇದು :

"ಎಲ್ಲಾ ಕರ್ಮಗಳನ್ನೂ ನನ್ನಲ್ಲಿ ಸಂನ್ಯಾಸಮಾಡಿ, ಮತ್ಪರನಾಗಿ, ಬುದ್ಧಿಯೋಗವನ್ನು ಆಶ್ರಯಿಸಿ ಸತತವೂ ನನ್ನಲ್ಲಿಯೇ ಚಿತ್ತವನ್ನಿಟ್ಟುಕೊಂಡಿರು, ಹಾಗಾದರೆ ಸರ್ವದುರ್ಗಗಳನ್ನೂ ನನ್ನ ಅನುಗ್ರಹದಿಂದ ದಾಟುವೆ"- ಎಂಬುದು ಉಪದೇಶದ ಸಾರಸಂಗ್ರಹವು. ಭಗವಂತನು ನಮ್ಮಗಳ ಹೃದಯದಲ್ಲಿಯೇ ಇದ್ದುಕೊಂಡು ಈ ಉಪದೇಶವನ್ನು ಈಗಲೂ ಮಾಡುತ್ತಲೇ ಇರುತ್ತಾನೆ. 'ಮಚ್ಚಿತ್ತಃ ಸತತಂ ಭವ' ಎನ್ನುವ ಉಪದೇಶವು ನಮಗೆ ಕೇಳಿಸುತ್ತಿದೆಯೆ? ಎಂಬುದನ್ನು ನಾವು ನೋಡಬೇಕು. "ಇಗೋ, ಈ ಉಪದೇಶವನ್ನು ಕೇಳಿದರೆ ಎಲ್ಲಾ

ಕಷ್ಟಗಳನ್ನೂ ದಾಟುವೆ, ಇಲ್ಲದಿದ್ದರೆ ಹಾಳಾಗುವೆ !" ಎಂದು ಭಗವಂತನು ನುಡಿಯುತ್ತಲೇ ಇದ್ದಾನೆ. ಆದರೆ ನಮಗೆ ಎಚ್ಚರವೇ ಇಲ್ಲ. ನಾವು ಭಗವಂತನ ಮಾತುಗಳನ್ನು ಪಾರಾಯಣಮಾಡುತ್ತಲೇ ಇರುತ್ತೇವೆ, ಆದರೆ ನಮ್ಮ ಚಿತ್ತವನ್ನು ಮಾತ್ರ ಆತನಲ್ಲಿ ಇಡುತ್ತಲಿಲ್ಲ. ಸ್ವಾಮಿವಿವೇಕಾನಂದರು ಒಂದು ಕಥೆಯನ್ನು ಹೇಳಿದ್ದಾರೆ - ಇಬ್ಬರು ಹುಡುಗರು ಒಂದು ಮನೆಯಲ್ಲಿ ರಾತ್ರೆ ಯಾರಿಗೂ ತಿಳಿಯದಂತೆ ದ್ರಾಕ್ಷಾರಸಮದ್ಯವನ್ನು ಕುಡಿಯುವದಕ್ಕೆ ಪ್ರಾರಂಭಿಸಿದರು. ಅವರು `ಗದ್ದಲಮಾಡಬೇಡ, ಮಾವ ಎಚ್ಚತ್ತಾನು!' ಎಂದು ಒಬ್ಬರಿಗೊಬ್ಬರು ಪಿಸುಗುಟ್ಟುತ್ತಾ ಮದ್ಯವನ್ನು ಕುಡಿಯುತ್ತಾ ಇದ್ದರು ; ಕೊನೆಗೆ ಮದ್ಯದ ಅಮಲು ಏರಿತು. ಸ್ವಲ್ಪ ಗಟ್ಟಿಯಾಗಿಯೇ `ಸದ್ದುಮಾಡಬೇಡವೋ, ಮಾವ ಎಚ್ಚತ್ತಾನು' ಎನ್ನುವದಕ್ಕೆ ಪ್ರಾರಂಭಿಸಿ ಬರಬರುತ್ತಾ `ಸದ್ದುಮಾಡಬೇಡ, ಸದ್ದು ಮಾಡಬೇಡ' ಎಂದು ಕೂಗುವದಕ್ಕೆ ಪ್ರಾರಂಭಿಸಿದರು! ಅವರ ಗಲಾಟೆಯಿಂದ ಮಾವನು ಎಚ್ಚತ್ತೇ ಬಿಟ್ಟ ! ಹೀಗಾಗಿದೆ, ನಮ್ಮ ಪಾಡು. "ಮಚ್ಚಿತ್ತಃ ಸತತಂ ಭವ"- ಎಂಬ ಭಗವಂತನ ಮಾತುಗಳನ್ನು ಕೇಳಿಕೊಂಡೇ ಆತನ ಉಪದೇಶವನ್ನು ಕಡೆಗಣಿಸುತ್ತಿರುತ್ತೇವೆ. ನಾವು ನಮ್ಮ ಸ್ವಭಾವವಾದ ಕರ್ಮದಿಂದ ಬದ್ಧರಾಗಿರುವದರಿಂದ ನಮ್ಮ ಲೌಕಿಕಪ್ರಕೃತಿಯನ್ನು ಬಿಡಲಾರದೆ ಇರುತ್ತೇವೆ.

ಈಗ ಎಲ್ಲರಿಗೂ ಶಾಂತಿ ಬೇಕಾಗಿರುತ್ತದೆ. ಆದರೆ ಶಾಂತಿಯಾಗದೆ ಇರುವದಕ್ಕೆ ಬೇಕಾದ ಸಲಕರಣೆಯನ್ನೆಲ್ಲ ಕೂಡಿಹಾಕಿಕೊಳ್ಳುತ್ತಿದ್ದೇವೆ. ರಾಷ್ಟ್ರಗಳು ಶಾಂತಿಯಾಗಬೇಕು. ಆದ್ದರಿಂದ ಯಾರೂ ಶಾಂತಿಗೆ ಭಂಗವನ್ನು ತಾರದಂತೆ ಸೈನ್ಯವನ್ನು ಕೂಡಿಹಾಕಿಟ್ಟಿರೋಣ ! ಎನ್ನುತ್ತಿವೆ. ಇದೆಂಥ ವಿಚಿತ್ರವರ್ತನೆ ! ವೈರದಿಂದ ವೈರವು ಎಂದಿಗೂ ಶಾಂತವಾಗಲಾರದು ಎಂಬುದು ಬಲ್ಲವರ ಅನುಭವಸಮ್ಮತವಾದ ಉಕ್ತಿ. ಆದರೂ ನಾವು ಪರಸ್ಪರವೈರವನ್ನೇ ಹೆಚ್ಚಿಸಿಕೊಳ್ಳುತ್ತಾ ಶಾಂತಿಯನ್ನು ಸಾಧಿಸುವದಕ್ಕೆ ಪ್ರಯತ್ನಿಸುತ್ತಿದ್ದೇವಲ್ಲ ! ನಾವು ಭಗವಚ್ಚಿಂತನೆಮಾಡುತ್ತಾ ಮಾರ್ದವವನ್ನು ವಹಿಸಿದರೆ ಮಿಕ್ಕವರು ನಮ್ಮ ಮೇಲೆ ಬೀಳುವದಿಲ್ಲವೆ? ಲೋಕದಲ್ಲಿ ದುಷ್ಟರ ಹಾವಳಿ ಹೆಚ್ಚುವದಿಲ್ಲವೆ?- ಎಂದು ನಮ್ಮಲ್ಲನೇಕರಿಗೆ ಶಂಕೆಯುಂಟಾಗುತ್ತದೆ. ನಮ್ಮ ದೃಷ್ಟಿಯಿಂದ ಇದು ಸಹಜವಾಗಿದೆಯಾದರೂ ವಸ್ತುಸ್ಥಿತಿ ಹೀಗಿಲ್ಲ. ಮನುಷ್ಯನು ಸ್ವಭಾವದಿಂದ ಶಾಂತಿಪ್ರಿಯನು ; ಶಾಂತಿಪ್ರಿಯರಾದವರ ಮುಂದೆ ಎಂಥ ಕ್ರೂರಿಯಾದರೂ ಕಾಲಕ್ರಮದಲ್ಲಿ ಶಾಂತನಾಗಬೇಕಾಗುತ್ತದೆ. ಮಹಾತ್ಮಗಾಂಧಿಯವರು ಒಮ್ಮೆ ಹೀಗೆಂದಿದ್ದರಂತೆ : " ಜನರು ಯುದ್ಧಕ್ಕೆ ಹೊರಡುವಾಗ ಅವರಿಗೆ ಮೈಮೇಲೆ ಎಚ್ಚರಿಕೆಯಿರುವದಿಲ್ಲ; ಎರಡು ಸೈನ್ಯಗಳು ಅನ್ಯೋನ್ಯವಾಗಿ ಬದ್ಧ ವೈರದಿಂದ ಆಯುಧಪಾಣಿಗಳಾಗಿ ಮುನ್ನುಗ್ಗುವಾಗ ಅಲ್ಪಸಂಖ್ಯಾತರಾದ ಕೆಲವು ನೂರು ಜನರೇ ಸಾಕು ; ಶಾಂತಿಪ್ರಿಯರು ಎರಡೂ ಸೈನ್ಯಗಳ ನಡುವೆ ನಿಂತು ನಮ್ಮನ್ನು ಮೊದಲು ಕೊಲ್ಲಿರಿ, ಇಲ್ಲದಿದ್ದರೆ ನಾವು ನಿಮ್ಮನ್ನು ಒಬ್ಬರನ್ನೊಬ್ಬರು ಕೊಲ್ಲುವದಕ್ಕೆ ಅಡ್ಡಿಮಾಡುವೆವು- ಎಂದು ಆಗ್ರಹಪೂರ್ವಕವಾಗಿ ನುಡಿದರೆ ನಿರಾಯುಧರಾದ ಅವರನ್ನು ಕೊಲ್ಲಲು ಯಾವ ಸೈನ್ಯದವರಿಗೂ ಮನಸ್ಸು ಬರಲಾರದು. ಉಭಯಸೈನ್ಯದವರಿಗೂ ತಮ್ಮ

ಅವಿವೇಕವು ಮನದಟ್ಟಾಗಿಬಿಡುವದು." ಈ ಕಾರ್ಯವನ್ನು ಅನುಷ್ಠಾನಕ್ಕೆ ತರುವಷ್ಟು ಕೆಚ್ಚೆದೆಯುಳ್ಳ ಧರ್ಮವೀರನು ಸಿಕ್ಕುವದು ಕಷ್ಟವೇ ಸರಿ. ಆದರೆ ಲೋಕದಲ್ಲಿ ಮೃದುತ್ವವು ಯಾರನ್ನಾದರೂ ಜಯಿಸಬಲ್ಲದು ಎಂಬುದೇನೋ ಸತ್ಯ. ಈಗಿನ ಜನರಿಗೆ ಅಹಂಕಾರವನ್ನು ಆರಾಧನೆಮಾಡುವ ಒಲವು ಹೆಚ್ಚಾಗಿರುತ್ತದೆ. ಅಹಂಕಾರವನ್ನಾಶ್ರಯಿಸಿರುವವರು ಆತ್ಮಹತ್ಯೆಗೆ ಎಂದಿಗೂ ಹಿಂಜರಿಯುವದಿಲ್ಲ; ಪರಸ್ಪರ ವೈರದಿಂದ ಒಬ್ಬರನ್ನೊಬ್ಬರು ಕೊಲ್ಲುವದಕ್ಕೆ ಸಿದ್ಧರಾಗುವರೆಂಬುದು ಅಹಂಕಾರೋಪಾಸನೆಯೇ, ಅವಿದ್ಯೆಯೇ; ಇದರಿಂದ ಅಂಧಂತಮಸ್ಸೇ ಗತಿ - ಎಂದು ಶ್ರುತಿಯು ಸಾರುತ್ತಿದೆ. ಆದ್ದರಿಂದ ನಾವು ಭಗವಂತನ ಉಪದೇಶಕ್ಕೆ ಕಿವಿಗೊಡಬೇಕು; ಸತತವಾಗಿ ಭಗವಚ್ಚಿತ್ತರಾಗಿರುವದಕ್ಕೆ ಯತ್ನಿಸಬೇಕು. ಈ ಉಪದೇಶವನ್ನು ಕೇಳದಿದ್ದರೆ ನಮ್ಮ ಸಾಮಾನ್ಯಸ್ವಭಾವವು ಮಾಡಬಾರದ ಕೆಲಸವನ್ನೆಲ್ಲ ಮಾಡಿಸಿಬಿಡುತ್ತದೆ.

ಭಗವಂತನಲ್ಲಿಯೇ ಚಿತ್ತವನ್ನು ಇಟ್ಟುಕೊಂಡಿರುವದಕ್ಕೆ ಉಪಾಯವೇನೆಂಬುದನ್ನು ತಿಳಿಸುವದಕ್ಕೆ ಮುಂದಿನ ಶ್ಲೋಕವು ಬಂದಿದೆ. ಭಗವಚ್ಚಿತ್ತತೆಯಿಂದಲೇ ಮನುಷ್ಯನಿಗೆ ಪರಮಶಾಂತಿಯು ದೊರಕುತ್ತದೆ-ಎಂಬುದನ್ನೂ ಇಲ್ಲಿ ಹೇಳಿಕೊಟ್ಟಿದೆ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥ 18-61**

ಭಗವಂತನು ಎಲ್ಲರ ಹೃದಯದಲ್ಲಿಯೂ ಇರುತ್ತಾನೆ ; ಆದ್ದರಿಂದ ನಮ್ಮ ಹೃದಯದಲ್ಲಿಯೂ ಇರುತ್ತಾನೆ. ನಮಗೆ ತೀರ ಹತ್ತಿರವೆಂದರೆ ನಮ್ಮ ಆತ್ಮನೇ. ನಮ್ಮ ಹೃದಯದಲ್ಲಿರುವ ಭಗವಂತನನ್ನು ಮೊಟ್ಟಮೊದಲು ಅಲ್ಲಿ ಕಂಡುಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಹೃದಯದಲ್ಲಿ ಈಶ್ವರನನ್ನು ಕಂಡುಕೊಳ್ಳುವದೆನ್ನುವದೆಂಬುದು ಅಧ್ಯಾತ್ಮಶಾಸ್ತ್ರದಲ್ಲೆಲ್ಲ ಮತ್ತೆ ಮತ್ತೆ ಉಪದೇಶಿಸಿರುವ ತತ್ತ್ವವಾಗಿರುತ್ತದೆ. ಆದರೂ ನಮಗೆ ಸ್ವಭಾವದಿಂದ ಹೊರಗಡೆಗೇ ತಿರುಗುವ ಒಲವು ಇರುತ್ತದೆ. ಹಿರಣ್ಯಕಶಿಪು "ವಿಷ್ಣುವು ಎಲ್ಲಿರುತ್ತಾನೆ ? ನೀನು ನಾರಾಯಣನೆಂದು ಮತ್ತೆ ಮತ್ತೆ ಕರೆಯುತ್ತಿರುವ ಅವನು ಎಲ್ಲಿರುವನು?" - ಎಂದು ಕೇಳಿದ್ದಕ್ಕೆ ಭಕ್ತ ವರನಾದ ಪ್ರಹ್ಲಾದನು "ತಂದೆಯೆ, ಅವನು ನಿನ್ನಲ್ಲಿಯೂ ಇರುತ್ತಾನೆ, ನನ್ನಲ್ಲಿಯೂ ಇರುತ್ತಾನೆ, ಎಲ್ಲೆಲಿಯೂ ಇರುವ ಆತನನ್ನು ಎಲ್ಲಿರುವನೆಂದು ಹೇಳಲಿ ?" ಎಂದು ಉತ್ತರ ಕೊಟ್ಟನು. ಮಹಾವಿಷ್ಣುವು ತನ್ನ ಹೃದಯದಲ್ಲಿಯೇ ಇರುತ್ತಾನೆಂಬ ಉತ್ತರವು ಹಿರಣ್ಯಕಶಿಪುವಿಗೆ ಮನವರಿಕೆಯಾಗಲಿಲ್ಲ. `ಆ ವಿಷ್ಣು ಈ ಕಂಬದಲ್ಲಿದ್ದಾನೆಯೆ?' ಎಂದು ಅವನು ಕೇಳಿದ ಪ್ರಶ್ನೆಯಿಂದ ಅವನ ದಡ್ಡತನವನ್ನು ನೀವು ಸುಲಭವಾಗಿ ಊಹಿಸಬಹುದು. ತನ್ನಲ್ಲಿಯೇ ಭಗವಂತನು ಇರುತ್ತಾನೆಂದು ಕೇಳಿದೊಡನೆ ವಿವೇಕಿಯಾದವನಿಗೆ ಅತ್ಯಂತ ಆಶ್ಚರ್ಯವಾಗುತ್ತದೆ. ; `ಇಷ್ಟು ಹತ್ತಿರವೇ ಇರುವ ಆ ಭಗವಂತನ ಸಾನ್ನಿಧ್ಯವನ್ನು ನಾನು ಅರಿಯದಾದೆನಲ್ಲ!' ಎನ್ನಿಸುತ್ತದೆ.

ಭಗವಂತನು ಸರ್ವೇಶ್ವರನು, ಎಲ್ಲರ ಹೃದಯದಲ್ಲಿಯೂ ಇದ್ದು ಎಲ್ಲರನ್ನೂ ಆಳುತ್ತಿರುವನು. ಸಾಮಾನ್ಯರಾದ ಅಧಿಕಾರಿಗಳನ್ನು ನೋಡುವದಕ್ಕೆ ನಾವು ಎಷ್ಟೋ ಸಜ್ಜಾಗಬೇಕಾಗುತ್ತದೆ. ಅವರನ್ನು ಸಮಯವರಿತು, ಅವರ ವಿಶೇಷಸ್ಥಾನದಲ್ಲಿ ಅವರು ಪ್ರಸನ್ನರಾಗಿರುವಾಗ, ತಕ್ಕ ಗೌರವದೊಡನೆ ಅವರನ್ನು ಕಾಣಬೇಕಾಗುತ್ತದೆ. ಹೀಗಿರುವಲ್ಲಿ ಸಮಸ್ತ ಜಗತ್ತಿಗೂ ಈಶ್ವರನಾಗಿರುವ ಭಗವಂತನನ್ನು ಕಾಣುವದಕ್ಕೆ ನಾವು ಎಷ್ಟರಮಟ್ಟಿಗೆ ಸಿದ್ಧರಾಗಬೇಕಾಯಿತು! ಮೊಟ್ಟಮೊದಲು ಹಿರಣ್ಯಕಶಿಪುವು ಪ್ರದರ್ಶಿಸಿದ ಅಹಂಭಾವವನ್ನು ಬದಿಗಿಡಬೇಕು; ನಾನು ಎಲ್ಲಕ್ಕಿಂತಲೂ ದೊಡ್ಡವನು, ನನಗೆ ಸಮಾನರಾದವರು ಯಾರಿದ್ದಾರೆ? - ಎಂಬ ಹಮ್ಮಿನ ಅವಿದ್ಯೆಯನ್ನು ಮೊದಲು ಸಡಿಲಿಸಿಕೊಳ್ಳಬೇಕು. ಈಶ್ವರನು ನಮ್ಮೆಲ್ಲರ ಹೃದಯದಲ್ಲಿಯೂ ಇದ್ದುಕೊಂಡು ನಮ್ಮನ್ನು ಸೂತ್ರದ ಗೊಂಬೆಗಳ ಹಾಗೆ ಅತ್ತಿತ್ತ ತಿರುಗಿಸುತ್ತಿರುತ್ತಾನೆ. ನಾವು ಹೊರಗಿನ ಮಾಯಾದೃಶ್ಯಗಳಿಗೆ ಮರುಳಾಗಿ ಅತ್ತಿತ್ತ ಇಂದ್ರಿಯಗಳನ್ನು ತಿರುಗಿಸುತ್ತಿರುತ್ತೇವೆ. ವಿಷಯಚಿತ್ತರಾಗಿ ಹೀಗೆ ಅಲೆದಾಡುತ್ತಿರುವವರೆಗೆ ನಮಗೆ ಭಗವಚ್ಚಿತ್ತತೆ ಎಲ್ಲಿಂದ ಬರಬೇಕು? ಆದ್ದರಿಂದ ಹಿಂತಿರುಗಿ ನೋಡುವದನ್ನು ಅಭ್ಯಾಸಮಾಡಬೇಕು. ಈಶ್ವರನು ನಮ್ಮಲ್ಲಿಯೇ ಇದ್ದುಕೊಂಡು ನಮಗೆ ಕಾಣಿಸದೆ ಇರುತ್ತಾನೆ. ಸ್ಕೂಲು ಹುಡುಗರು ಒಂದು ಬಗೆಯ ಆಟವನ್ನು ಆಡುತ್ತಿರುತ್ತಾರೆ. ಉಪಾಧ್ಯಾಯರು ಸಣ್ಣಮಕ್ಕಳನ್ನೆಲ್ಲ ವೃತ್ತಾಕಾರವಾಗಿ ಕೂರಿಸುತ್ತಾರೆ. ಅವರಲ್ಲಿ ಒಬ್ಬ ಹುಡುಗನು ಅವರ ಸುತ್ತಲೂ ಹಿಂದುಗಡೆ ತಿರುಗುತ್ತಾ ಇರುತ್ತಾನೆ. ಅವರು ಮುಂದುಗಡೆಗೆ ನೋಡುತ್ತಿರುವಲ್ಲಿ ಅವನು ಒಬ್ಬ ಹುಡುಗನ ಬೆನ್ನುಹಿಂದೆ ತನ್ನ ತೋಪಿಯನ್ನು ಇರಿಸುತ್ತಾನೆ. ಕೂಡಲೆ ಇದನ್ನು ಅರಿತು ಆ ಇನ್ನೊಬ್ಬ ಹುಡುಗನು ಇವನನ್ನು ಹಿಡಿದುಕೊಂಡರೆ ಗೆದ್ದ; ಇಲ್ಲದಿದ್ದರೆ ತಿರುಗುವ ಹುಡುಗನು ಒಂದು ಸುತ್ತನ್ನು ಪೂರೈಸಿಕೊಂಡು ಬಂದು ಅವನನ್ನು ತೋಪಿಯಿಂದ ತಟ್ಟಿ ಎಬ್ಬಿಸಿ ತಾನು ಅವನ ಸ್ಥಳದಲ್ಲಿ ಕುಳಿತುಕೊಂಡುಬಿಡುತ್ತಾನೆ. ಆಗ ಆ ಹೊಸ ಹುಡುಗನು ಎದ್ದು ಎಲ್ಲರ ಸುತ್ತಲೂ ತಿರುಗಿ ಹೀಗೆಯೇ ಮತ್ತೊಬ್ಬನನ್ನು ಸೋಲಿಸಬೇಕು. ಈ ಆಟದಲ್ಲಿ ಕುಳಿತಿರುವ ಹುಡುಗರ ದೃಷ್ಟಿ ಒಂದು ಕಡೆಗೆ ಇರುತ್ತದೆ; ತಿರುಗುವವನು ಅವರ ಬೆನ್ನಹಿಂದೆ ಇರುತ್ತಾನೆ. ಆದ್ದರಿಂದ ಅವರಿಗೆ ಈ ಹುಡುಗನು ತಮ್ಮ ಹಿಂದೆ ತೋಪಿಯಿಟ್ಟನೆಂಬುದು ಬೇಗನೆ ತಿಳಿಯುವದಿಲ್ಲ. ಇದರಂತೆ ನಮಗೂ ಆಗಿದೆ; ನಾವು ಹೊರಗಡೆಗೇ ಇಂದ್ರಿಯಗಳನ್ನು ಅನುಸರಿಸಿ ನೋಡುತ್ತಿರುವದರಿಂದ ನಮ್ಮ ಒಳಗೆ ಆ ಈಶ್ವರನು ಇರುತ್ತಾನೆಂಬುದು ತಿಳಿಯದೆ ಇರುತ್ತದೆ. ನಾವು ಒಳಗೆ ನೋಡುವಂತಿಲ್ಲವಾದ್ದರಿಂದ ನಮಗೆ ನಾವೇ ಹೊಸಬರಾಗಿರುತ್ತೇವೆ, ನಮ್ಮ ಮನೆಯೇ ನಮಗೆ ಪೂರ್ತಿಯಾಗಿ ಗೊತ್ತಿಲ್ಲದಂತೆ ಆಗಿಬಿಟ್ಟಿದೆ. ನಮ್ಮ ಹೃದಯದಲ್ಲಿ ಯಾವಾಗಲೂ ಭಗವಂತನು ಇದ್ದುಕೊಂಡಿರುವನೆಂಬುದನ್ನು ನಮಗೆ ಶಾಸ್ತ್ರವೂ ಗುರುಗಳೂ ತಿಳಿಸಿಕೊಡುವವರೆಗೂ ನಮಗೆ ಅದರ ಅರಿವೇ ಆಗಿರುವದಿಲ್ಲ. ಅರಿವಾದಮೇಲೂ ತಕ್ಕಷ್ಟು ಪ್ರಯತ್ನವನ್ನು ಮಾಡಿ ನಾವು ಹಿಂತಿರುಗಿ ನೋಡುವದಿಲ್ಲ.

ನಮ್ಮಲ್ಲಿ ಪ್ರತಿಯೊಬ್ಬನೂ ತಾನು ಮಾಯೆಗೆ ಸಿಕ್ಕಿಲ್ಲವೆಂದೂ ತಾನೇ ಸ್ವತಂತ್ರನೆಂದೂ ಹೆಮ್ಮೆಪಡುತ್ತಿರುತ್ತಾನೆ; ಆದರೆ ಆ ಅಹಂಕಾರವೇ ಮಾಯೆಯ ವಿಕಾಸಕ್ಕೆ ಗೊಬ್ಬರವಾಗುತ್ತದೆ. ನಾವು ಸ್ವಪ್ರಯತ್ನದಿಂದಲೇ ಈ ಮಾಯೆಯನ್ನು ಗೆದ್ದುಕೊಳ್ಳಲಾರೆವು; ಅದಕ್ಕೆ ಆ ಭಗವಂತನೇ ನೆರವಾಗಬೇಕು. ಭಗವಂತನ ಕಡೆಗೆ ತಿರುಗಿದ ಹೊರತು ಮಾಯೆ ಪಟ್ಟು ಬಿಡುವದಿಲ್ಲ, ಮಾಯೆ ಬಿಡುವವರೆಗೂ ಭಗವಂತನ ಕಡೆಗೆ ತಿರುಗುವದು ಆಗುವದಿಲ್ಲವಲ್ಲ! ಇದಕ್ಕೇನು ಮಾಡಬೇಕು? ಎಂದರೆ ಈಗ ನಾವು ಇರುವ ಸ್ಥಿತಿಯಲ್ಲಿಯೇ ಶಾಸ್ತ್ರದಿಂದಲೂ ದೊಡ್ಡವರಿಂದಲೂ ಕೇಳಿರುವದರಲ್ಲಿ ನಂಬಿಕೆಯಿಟ್ಟು ಆ ಭಗವಂತನನ್ನೇ ಮೊರೆಹೋಗಬೇಕು. 'ಭಗವಂತ, ನಿನ್ನ ಮಾಯೆಯನ್ನು ಗೆಲ್ಲುವ ನಾನು ಎಷ್ಟರವನು? ನೀನೇ ಈ ಮುಸುಕನ್ನು ತೆಗೆದುಹಾಕಿ ನನಗೆ ದರ್ಶನವನ್ನು ಕೊಟ್ಟು ಕಾಪಾಡಬೇಕು'- ಎಂಬ ಭಾವದಿಂದ ಬೇಡಿಕೊಳ್ಳುತ್ತಿರಬೇಕು. ಹೃದಯದಲ್ಲಿ ಭಗವದ್ಭಾವನೆಯು ತಲೆಯೆತ್ತಿದ ಹಾಗೆಲ್ಲ ಮಾಯೆಯು ಹಿಂದಕ್ಕೆ ಸರಿಯುತ್ತದೆ, ಅದರ ಮುಸುಕು ದಟ್ಟವಾಗಿದ್ದದ್ದು ತೆಳುವಾಗುತ್ತಾ ಬರುತ್ತದೆ. ಕೊನೆಗೆ ನಮ್ಮ ಭಾವನೆಯು ಬಲಿತಂತೆ ಈ ಮಾಯೆಯ ಸ್ವತಂತ್ರವಾದ ತತ್ತ್ವವಲ್ಲ ಎಂಬುದು ಗೊತ್ತಾಗುತ್ತದೆ, ಮಾಯೆಯೇ ಮಾಯವಾಗಿಬಿಡುತ್ತದೆ ; ಅದು ಭಗವಂತನ ವಿಭೂತಿಯಾಗಿ ತೋರುತ್ತದೆ. ಮಾಯೆಯಲ್ಲಿಯೂ ಭಗವಂತನೇ ಕಾಣಿಸಿಕೊಂಡಾಗ ಶತ್ರುಮಿತ್ರಾದಿಭೇದಗಳೆಲ್ಲ ಹೋಗಿ ಸರ್ವವೂ ವಾಸುದೇವನೇ ಎಂಬ ತತ್ತ್ವವು ಮನಸ್ಸಿನಲ್ಲಿ ನಿಂತುಬಿಡುತ್ತದೆ.

ಎಲ್ಲಕ್ಕೂ ಮೊದಲು ಈ ಭಗವಂತನನ್ನು ನಮ್ಮ ನಮ್ಮ ಹೃದಯದಲ್ಲಿ ಕಂಡುಕೊಳ್ಳಬೇಕು. ಬಳಿಕ ಅವನನ್ನು ಎಲ್ಲೆಲ್ಲಿಯೂ ಕಾಣುವದಕ್ಕಾಗುತ್ತದೆ. ದುರ್ಯೋಧನನು ಶ್ರೀಕೃಷ್ಣನನ್ನು ಸಂಧಿಗೆಂದು ಬಂದಾಗ ಎದುರುಗೊಂಡ ಕಥೆಯನ್ನು ನೆನಪಿಗೆ ತಂದುಕೊಳ್ಳಿರಿ. ಅವನು ಬರಬಹುದಾದ ಮಾರ್ಗವನ್ನು ತಿಳಿದು ಮೊದಲೇ ತನ್ನ ಕಡೆಯವರಿಂದ ಸ್ವಾಗತಕ್ಕೆ ಬೇಕಾದ ಏರ್ಪಾಡುಗಳನ್ನೆಲ್ಲ ಮಾಡಿಸಿದ್ದನು. ಅವನನ್ನು ನೇರಾಗಿ ಅರಮನೆಗೆ ಕರೆತಂದು ಸತ್ಕರಿಸಿ ಒಲಿಸಿಕೊಳ್ಳಬೇಕೆಂದು ದುರ್ಯೋಧನನ ಹಿರಿಯಾಸೆಯಾಗಿತ್ತು. ಆದರೆ ಶ್ರೀ ಕೃಷ್ಣನು ಮಾರ್ಗಾಂತರದಿಂದ ಬಂದನು, ಕೊನೆಗೆ ರಾಜಬೀದಿಯನ್ನು ಕೂಡ ಬಿಟ್ಟು ವಿದುರನ ಮನೆಗೆ ಬಂದನು. ಅವನು ಸಭೆಗೆ ಬಂದಾಗ `ನಮ್ಮ ಸತ್ಕಾರವು ನಿನಗೆ ರುಚಿಸಲಿಲ್ಲವೆ? ಹೀಗೇಕೆ ಮಾಡಿದೆ?' ಎಂದು ವಿನೋದಪೂರಿತವಾಗಿ ದುರ್ಯೋಧನನು ಕೇಳಿದನು. ಆದರೆ ನಿಜವಾಗಿ ದುರ್ಯೋಧನನ ಮನಸ್ಸಿನೊಳಗೆ ಆಗ ಇದ್ದದ್ದೇನು? ಶ್ರೀಕೃಷ್ಣನನ್ನು ಹಿಡಿದು ಬಂಧಿಸಿಬಿಡಬೇಕೆಂಬುದು ! ಆದರೆ ಅದು ಸ್ವಲ್ಪವೂ ಸಾಧ್ಯವಾಗಲಿಲ್ಲ; ಶ್ರೀಕೃಷ್ಣನು ತನ್ನ ವಿಶ್ವರೂಪದಿಂದ ಸಭೆಯವರಿಗೆಲ್ಲ ಕಾಣಿಸಿಕೊಂಡನು. ದುರ್ಯೋಧನನ ಹೊರತು ಮಿಕ್ಕವರಿಗೆಲ್ಲರಿಗೂ ಆತನ ಮಹಿಮೆಯು ವ್ಯಕ್ತವಾಯಿತು. ಯಾರು ಯಾರ ಹೃದಯಲ್ಲಿ ಶ್ರೀಕೃಷ್ಣನು ಭಗವಂತನೇ ಎಂಬ ಪೂಜ್ಯಬುದ್ಧಿಯಿದ್ದಿತೋ ಅವರಿಗೆಲ್ಲ ಆ ದಿವ್ಯರೂಪವು

ಕಾಣಿಸಿತು. "ಅಹಹ!ಕೌರವ, ನಾನು ಇಲ್ಲಿ ಒಬ್ಬನೇ ಇರುವೆನೆಂದು ಭಾವಿಸಿ ಹೀಗೆ ಯುಕ್ತಿಯಿಂದ ನನ್ನನ್ನು ಬಂಧಿಸುವ ಯೋಜನೆಯನ್ನು ಮಾಡಿದೆಯಲ್ಲವೆ? ನನ್ನನ್ನು ಕಟ್ಟಿಹಾಕುವದೆಂದರೂ ಒಂದೇ, ಇಡಿಯ ಜಗತ್ತನ್ನೇ ಕಟ್ಟಿಹಾಕುವದೆಂದರೂ ಒಂದೇ-ಎಂಬುದನ್ನು ನೀನು ಅರಿಯದಾದೆಯಲ್ಲ!" ಎಂದು ಎಚ್ಚರಿಕೆಯ ಮಾತನ್ನು ಕೂಡ ಹೇಳಿದ್ದನು. ಆದರೇನು? ದುರಭಿಮಾನಿಯಾದ ದುರ್ಯೋಧನನಿಗೆ ಆ ಮಾತಿನ ಅರ್ಥವೇನೂ ಆಗಲಿಲ್ಲ. ಭಗವಂತನು ಎಷ್ಟೆಷ್ಟು ಪ್ರಕಾರದಿಂದ ಅವನನ್ನು ಬದುಕಿಸುವದಕ್ಕೆ ಹೋದರೂ ದುರ್ಯೋಧನನ ಪ್ರಾರಬ್ಧಕರ್ಮದ ಬಲವು ಹೆಚ್ಚಾಗಿದ್ದದ್ದರಿಂದ ಅವನಿಗೆ ಭಗವಂತನ ಅನುಗ್ರಹದ ಲಾಭವು ಇಲ್ಲವಾಯಿತು. ಲೋಕದಲ್ಲಿ ದುರ್ಯೋಧನನಂತೆ ನಾನು ಎಂಬ ಅಭಿಮಾನಕ್ಕೆ ಮುಖ್ಯಸ್ಥಾನವನ್ನು ಕೊಟ್ಟುಕೊಂಡಿರುವವರಿಗೆ ಯಾರಿಗೂ ಆ ಭಗವಂತನ ಅನುಗ್ರಹವು ದೊರಕಲಾರದು ; ಏಕೆಂದರೆ ಅವರು ಎಂದಿಗೂ ಆ ಭಗವಂತನನ್ನು ಶರಣುಹೊಂದುವ ಸಂಭವವಿಲ್ಲ.

`ಎಲೈ ಅರ್ಜುನನೆ, ಆ ಪರಮೇಶ್ವರನನ್ನೇ ಸರ್ವಭಾವದಿಂದಲೂ ಶರಣುಹೋಗು; ಅಂದರೆ ಆತನ ಅನುಗ್ರಹದಿಂದ ಪರಮಶಾಂತಿಯು ನಿನಗೆ ದೊರಕುವುದು'- ಎಂಬ ಈ ವಾಕ್ಯವು ಭಗವಂತನ ಕೊನೆಯ ವಾಕ್ಯವು. `ಇದರಿಂದಲೇ ಶಾಶ್ವತವಾದ ಸ್ಥಾನವು ದೊರಕುವದು' ಎಂದು ಭಗವಂತನು ಹೇಳಿರುವ ವಾಕ್ಯವನ್ನು ನಾವು ಮನಸ್ಸಿನಲ್ಲಿ ಚೆನ್ನಾಗಿ ಮೆಲುಕುಹಾಕಬೇಕು. ಸ್ಥಾನ ಎಂದರೆ ನಿಲುಗಡೆ. ಈಗಿನ ಸ್ಥಿತಿಯಲ್ಲಿ ನಮಗೆ ಸರಿಯಾದ ಸ್ಥಾನವೇ ಇಲ್ಲ; ನಾವು ಎಲ್ಲಿದ್ದರೂ ನಮಗೆ ಅದಿರಾಟವು ತಪ್ಪಿಲ್ಲ. ನಾವು ಈಗ ನಿಂತಿದ್ದೇವೆ, ನಮಗೆ ಇನ್ನು ಚ್ಯುತಿಯಿಲ್ಲ ಎಂದು ಭಾವನೆ ಬರುವದರೊಳಗಾಗಿ ಅಲ್ಲಿಂದ ಚ್ಯುತರಾಗುತ್ತಿದ್ದೇವೆ! ಭಗವಂತನಲ್ಲಿ ನೆಲೆನಿಲ್ಲುವದೇ ನಿತ್ಯವಾದ ಸ್ಥಾನ. ಆ ಶಾಶ್ವತಸ್ಥಾನವು ದೊರಕಬೇಕಾದರೆ ಅವನಲ್ಲಿಯೇ ನಿಲ್ಲಬೇಕು.

ಇಲ್ಲಿಗೆ ಗೀತೆಯ ಉಪದೇಶವು ಮುಗಿಯಿತು. ಶಾಂತಿಯಿಂದಿರುವ ಎಂದೆಂದಿಗೂ ಇರುವ ನಿಲುಗಡೆಯು ಬೇಕಾದರೆ ಭಗವಂತನನ್ನು ಶರಣುಹೊಂದುವದು. ದಾಸರ ಪದದಲ್ಲಿ `ನಮ್ಮೂರೇ ವಾಸಿ' ಎಂಬ ವಾಕ್ಯವೊಂದಿದೆ. ಎಲ್ಲೆಲ್ಲಿ ಹುಡುಕಿ ನೋಡಿದರೂ ಆ ನಮ್ಮೂರು, ಭಗವಂತನ ಸ್ಥಾನಕ್ಕೆ ಸಮನಾಗಿರುವ ಸ್ಥಾನವಿಲ್ಲ. ಕಾಲೂರಿ ನಿಲ್ಲುವದಕ್ಕೆ ಅದೊಂದೇ ಸ್ಥಳ. ಇದೇ ಗೀತೆಯ ಸಾರವು; ಇದನ್ನರಿತು ಈ ಸ್ಥಿತಿಯಲ್ಲಿ ಆನಂದವನ್ನು ಪಡೆದುಕೊಳ್ಳುತ್ತಿರುವದೇ ನಿಜವಾದ ಜೀವನ. ನಮ್ಮ ಜೀವನದಲ್ಲಿ ಮಿತ್ರರು, ಬಂಧುಗಳು, ನೆಂಟರು, ಬ್ಯಾಂಕು, ನಗ ನಾಣ್ಯ-ಎಂಬಿವುಗಳನ್ನು ಭದ್ರವಾದ ಸ್ಥಾನಗಳೆಂದು ಭಾವಿಸಿಕೊಂಡಿರುತ್ತೇವೆ. ಆದರೆ ಅವು ಯಾವಾಗ ನಮಗೆ ಮೋಸಮಾಡಿ ಮಾಯವಾಗುವವೋ ನಮಗೆ ಯಾರಿಗೂ ತಿಳಿಯದೆ ಇದೆ. ಒಂದನ್ನು ನಂಬಬೇಕಾಗಿತ್ತು, ಅದೇ ಭಗವಂತನೆಂಬ ವಸ್ತು. ಅದೇಕೊ, ಅದನ್ನು ಮರೆತಿದ್ದೇವೆ. ಭೋಜನಸಮಾರಾಧನೆಗೆ ಏರ್ಪಡಿಸಿದ ಯಜಮಾನನನ್ನೇ ಮರೆತಂತೆ ಇಂಥ ಭೋಗಗಳಿಗೆಲ್ಲ

ಆಶ್ರಯವಾಗಿರುವ ಜಗತ್ತನ್ನು ಸಿದ್ಧಪಡಿಸಿಕೊಟ್ಟಿರುವ ಭಗವಂತನನ್ನೇ ಮರೆಯುವದೆ? ಇದು ಶುದ್ಧ ತಪ್ಪು. ಈ ಭೋಗಗಗಳೆಂಬವು ಬ್ಯಾಂಕಿನ ಕೌಂಟರುಗಳಂತೆ; ಅವೇ ಪ್ರಧಾನವಾದ ಫಲವಲ್ಲ. ಇದನ್ನರಿಯದ್ದರಿಂದ ನಮಗೆ ದುಃಖವಾಗಿರುತ್ತದೆ. ಎಲ್ಲಕ್ಕೂ ಮೂಲನಾಗಿರುವ ಆ ಭಗವಂತನನ್ನು ಮರೆತು ದುಃಖಕ್ಕೆ ಅಧಿಕಾರವನ್ನು ಕೊಟ್ಟು ಒಬ್ಬರೊಡನೊಬ್ಬರು ಕಚ್ಚಾಡುತ್ತಾ ಕಾಲವನ್ನು ಹಾಕುತ್ತಿರುವೆವು ! ಈ ಪ್ರಪಂಚವನ್ನು ಭಗವಂತನು ಕಾದಾಡುವ ಕ್ಷೇತ್ರವಾಗಲಿ ಎಂದು ನಿರ್ಮಿಸಿಲ್ಲ. ಆನಂದದಿಂದ ಎಲ್ಲರೂ ಸುಖಿಸಲಿ ಎಂದು ನಿರ್ಮಿಸಿರುತ್ತಾನೆ. ಭಗವಂತನನ್ನು ಕಂಡು ಆನಂದಿಸಿದರೆ ಭಗವದ್ಗೀತೆಯ ಸಾರವನ್ನು ಹೀರಿಕೊಂಡಂತೆ ಆಯಿತು.

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ 18-63**

ಭಗವಂತನು ಹೇಳುವದನ್ನೆಲ್ಲ ಹೇಳಿ ಅರ್ಜುನನಿಗೆ ಹೇಳಿದ ವಾಕ್ಯವಿದು. ತತ್ತ್ವದ ಅರಿವನ್ನು ಮಾತ್ರ ಹೇಳಲು ಸಾಧ್ಯ. ನಿಜವನ್ನು ತಿಳಿದಮೇಲೆ ಅದನ್ನು ಆರಿಸಿಕೊಳ್ಳುವದು ಅಥವಾ ಬಿಡುವದು ಅವರವರಿಗೆ ಸೇರಿದ್ದು. ನಿನಗೆ ಜ್ಞಾನವನ್ನು ಹೇಳಿರುತ್ತೇನೆ, ಇದು ಗುಹ್ಯಗಳಲ್ಲೆಲ್ಲ ಗುಹ್ಯವಾದದು, ಪರಮರಹಸ್ಯ, ನಿನಗೆ ಇದನ್ನೇ ಹೇಳಿಬಿಟ್ಟಿದ್ದೇನೆ. ಇನ್ನು ನೀನು ಇಚ್ಛೆ ಬಂದಂತೆ ಮಾಡು!- ಎಂಬ ವಾಕ್ಯವು ನಾವೆಲ್ಲರೂ ಮುಖ್ಯವಾಗಿ ನೆನಪಿಡಬೇಕಾದದ್ದು. ಭಗವಂತನು ಅತ್ಯಂತರಹಸ್ಯವಾದ ತತ್ತ್ವಜ್ಞಾನವನ್ನು ಹೇಳಿರುತ್ತಾನೆ; ಭಗವದ್ಗೀತೆಯಲ್ಲಿ ಈ ಜ್ಞಾನವನ್ನು ಅತ್ಯಂತಸುಲಭವಾಗಿ ತಿಳಿದುಕೊಳ್ಳಬಹುದಾದ ಸ್ಪಷ್ಟತರವಾದ ಭಾಷೆಯಲ್ಲಿ ಹೇಳಿಬಿಟ್ಟಿದೆ. ಅದನ್ನು ಅನುಸರಿಸುವದು ಅಥವಾ ಬಿಡುವದು ನಮನಮಗೇ ಸೇರಿದ್ದು. ಈಗ ಈ ಜ್ಞಾನವೆಂಬುದು ಎಲ್ಲರಿಗೂ ತಿಳಿದ ಗುಟ್ಟಾಗಿದೆ. ಭಗವಂತನನ್ನು ಶರಣುಹೊಕ್ಕರೆ ಪರಮಶಾಂತಿ ದೊರಕುತ್ತದೆ, ಆತನ ಉಪದೇಶಕ್ಕೆ ಕಿವಿಗೊಡದೆ ಹೋದರೆ ಹಾಳಾಗುತ್ತೇವೆ- ಎಂಬಿದೇ ಈ ಗುಟ್ಟು. ನಾವು ಭಗವಚ್ಚಿತ್ತತೆಯನ್ನು ಸಂಪಾದಿಸಿಕೊಂಡು ಬದುಕಬಹುದು, ಇಲ್ಲದಿದ್ದರೆ ಹಾಳಾಗಿಹೋಗಬಹುದು. "ಭಗವಂತನನ್ನು ನಂಬಿ ಬದುಕು, ಇಲ್ಲವೆ ಭಗವಂತನನ್ನು ಬಿಟ್ಟು ಹಾಳಾಗಿಹೋಗು!" ಎಂಬೀ ವಾಕ್ಯವನ್ನು ದಪ್ಪಕ್ಷರದಲ್ಲಿ ಒಂದು ರಟ್ಟಿನ ಕಾಗದದ ಮೇಲೆ ಬರೆದು ಗೋಡೆಗೆ ಅದನ್ನು ತಗಲುಹಾಕಿ ಎಡೆಬಿಡದೆ ಅದನ್ನು ನೋಡುತ್ತಿರಬೇಕು, ಅದನ್ನು ಮನನಮಾಡುತ್ತಿರಬೇಕು. ಅದರಿಂದ ನಮಗೆ ಗೀತೋಪದೇಶದ ಸಾರವು ಮನದಟ್ಟಾಗುವದು.



# ೧೯೪. ಗೀತೆಯ ಸಾರವೂ ಅದಕ್ಕೆ ಅಧಿಕಾರಿಗಳೂ 18 - (64-67)

**(19-11-50)**

ಭಗವಂತನು ಗೀತಾರ್ಥವನ್ನು ಉಪಸಂಹಾರಮಾಡಿ "ಹೀಗೆ ನಿನಗೆ ಜ್ಞಾನವನ್ನು ಹೇಳಿರುತ್ತೇನೆ ; ಇದನ್ನು ವಿಮರ್ಶೆಮಾಡಿ ನಿನ್ನ ಇಚ್ಛೆಯಂತೆ ಮಾಡು" ಎಂದಿರುತ್ತಾನೆ. ತತ್ತ್ವವನ್ನು ಏನಾದರೂ ಮಾಡಿ ಮತ್ತೊಬ್ಬರಿಗೆ ತಿಳಿಯಿಸುವದಕ್ಕೆ ಬರುವದಿಲ್ಲ; ಅವರವರಿಗೆ ಅದು ವಿಮರ್ಶೆಯಿಂದ ತಿಳಿಯಬೇಕು. ಜ್ಞಾನವು ವಸ್ತುತಂತ್ರವಾದ್ದರಿಂದ ಅದನ್ನು ಸುಮ್ಮನೆ ತಿಳಿಯಬಹುದೇ ಹೊರತು, ಹೀಗೆ ತಿಳಿದುಕೊಳ್ಳಬೇಕೆಂದು ಬಲಾತ್ಕರಿಸುವದಕ್ಕೆ ಆಗುವದಿಲ್ಲ. ನಾನು ಹೇಳಿದಂತೆ ಮಾಡು, ಅಥವಾ ನಿನ್ನ ಪ್ರಕೃತಿಗೆ ವಶನಾಗಿ ನಡೆದು ತಪ್ಪುಹಾದಿಗೆ ಹೋಗಿ ಕೆಡುವದಾದರೆ ಕೆಡು!- ಎಂದು ಭಗವಂತನು ಹೇಳಿರುತ್ತಾನೆ.

ಗೀತೆಯು ಪ್ರವರ್ತಕವಲ್ಲ ಎಂಬುದು ಈ ವಾಕ್ಯದಿಂದಲೂ ಗೊತ್ತಾಗುತ್ತದೆ. ಏಕೆಂದರೆ ಭಗವಂತನು ಏನಾದರೂ ಮಾಡಿ ಅರ್ಜುನನನ್ನು ಬಲಾತ್ಕಾರದಿಂದ ಯುದ್ಧದಲ್ಲಿ ತೊಡಗಿಸಬೇಕೆಂದಿದ್ದರೆ ತಿಳಿದಂತೆ ಮಾಡು ! ಎನ್ನುತ್ತಿರಲಿಲ್ಲ. ಸರಿಯಾದ ದಾರಿಯನ್ನು ತೋರಿಸಿದರೆ ವಿವೇಕಿಯಾದವನು ಅದನ್ನೇ ಅನುಸರಿಸುತ್ತಾನೆ. ಅದರಂತೆ ಅರ್ಜುನನಿಗೆ ಭಗವಂತನ ಉಪದೇಶವು ಮಾರ್ಗದರ್ಶಕವಾಯಿತು. ವಿವೇಕಿಯಾದ್ದರಿಂದ ಅರ್ಜುನನು ಸನ್ಮಾರ್ಗವನ್ನೇ ಅನುಸರಿಸಿದನು.

ಒಳ್ಳೆಯದನ್ನು ಒಂದು ಸಲ ಹೇಳಿದರೆ ಸಾಲದು. ಆದ್ದರಿಂದ ಭಗವಂತನು ಮತ್ತೆ ಮತ್ತೆ ಅವಧಾರಣೆಮಾಡಿ ಹೇಳುತ್ತಿದ್ದಾನೆ:

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ |**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ || 18-64**

ಗೀತೆಯಲ್ಲಿ ಈ ಉಪಸಂಹಾರವಾಕ್ಯಗಳು ಬಹಳ ಮುಖ್ಯ. ರೈಲಿಗೆ ತನ್ನವರನ್ನು ಕಳುಹಿಸಿಕೊಡುವದಕ್ಕೆ ಬಂದವರು ಮೊದಲೇ ವಿಸ್ತಾರವಾಗಿ ಹೇಳಿದ್ದನ್ನೇ ರೈಲು ಹೊರಡುವದರೊಳಗೆ ಸಂಕ್ಷಿಪ್ತವಾಕ್ಯದಿಂದ `ಇದನ್ನು ಮಾತ್ರ ಮರೆಯದಿರು!' ಎಂದು ನೆನಪುಕೊಡುವಂತೆ ಭಗವಂತನು ಮತ್ತೊಂದು ಸಲ ನಿನಗೆ ಹಿತವಾದದ್ದನ್ನು ಹೇಳುತ್ತೇನೆ ; ನೀನು ನನಗೆ ಬಹಳ ಇಷ್ಟನಾದವನು. ಆದ್ದರಿಂದ ಇದನ್ನು ಹೇಳುತ್ತೇನೆ- ಎಂದು ವಿಷಯದ ಕಡೆಗೆ ಅರ್ಜುನನ ಮನಸ್ಸನ್ನು ಎಳೆದುಕೊಂಡು ಹೇಳುತ್ತಿದ್ದಾನೆ :

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ || 18-65**

"ನನ್ನಲ್ಲಿಯೇ ಮನಸ್ಸಿಡು, ನನ್ನ ಭಕ್ತನಾಗು, ನನ್ನನ್ನೇ ಪೂಜಿಸುತ್ತಿರು, ನನ್ನನ್ನೇ ನಮಸ್ಕರಿಸುತ್ತಿರು ; ಹೀಗಾದರೆ ನೀನು ನನ್ನನ್ನೇ ಸೇರುವೆ, ಸತ್ಯವಾಗಿ ಆಣೆಮಾಡಿ ಹೇಳುತ್ತೇನೆ" ಎಂದು ಮತ್ತೊಮ್ಮೆ ಭಗವಂತನು ಹೇಳಿರುತ್ತಾನೆ. ಈ ವಾಕ್ಯವನ್ನು ಗೀತಾಪಾರಾಯಣಮಾಡುವವರು ಯಾರೂ ಮರೆಯಕೂಡದು. `ನೀನು ನನ್ನನ್ನೇ ಮನಸ್ಸಿನಲ್ಲಿಟ್ಟುಕೊಂಡರೆ ನನ್ನನ್ನೇ ಸೇರುವೆ'. ನಿಮ್ಮ ಹೃದಯವೆಲ್ಲಿರುವದೋ ಅಲ್ಲಿ ನಿಮ್ಮ ಮುಖ್ಯನಿಧಿಯಿರುತ್ತದೆ ! ಎಂಬುದೊಂದು ಆಂಗ್ಲರ ಉಕ್ತಿ. ನಿಮಗೆ ಅತ್ಯಂತಮುಖ್ಯವಾದದ್ದು ಯಾವದೋ ಅದನ್ನು ನೀವು ಎಂದಿಗೂ ಮರೆಯದೆ ಇರುವಿರಿ ; ಅದೇ ನಿಮಗೆ ಸರ್ವಸ್ವವಾಗಿರುತ್ತದೆ, ಅಲ್ಲವೆ? ನಮ್ಮಲ್ಲಿ ಕೆಲವರಿಗೆ ಪ್ರಪಂಚದಲ್ಲಿಯೂ ಮನಸ್ಸಿರುತ್ತದೆ, ಭಗವಂತನಲ್ಲಿಯೂ ಆಗಾಗ್ಗೆ ಹೋಗಿಬರುತ್ತಿರುತ್ತದೆ. ಹೀಗಾಗಬಾರದೆಂಬುದನ್ನು ಇಲ್ಲಿರುವ `ಮತ್' ಎಂಬ ಶಬ್ದವು ತಿಳಿಸುತ್ತದೆ. `ಮನ್ಮನಾ ಭವ' ನನ್ನಲ್ಲಿಯೇ ಮನಸ್ಸಿಡು, ಬೇರೊಂದರಲ್ಲಿಡಬೇಡ ; ನನ್ನ ಭಕ್ತನೇ ಆಗಿರು, ಮತ್ತೊಂದರಲ್ಲಿ ಪ್ರೀತಿಯನ್ನಿಟ್ಟುಕೊಳ್ಳಬೇಡ . . . ಎಂದು ಮುಂತಾಗಿ `ನನ್ನನ್ನು', `ನನ್ನನ್ನು', ಎಂದು ಭಗವಂತನು ಒತ್ತಿಹೇಳಿರುವದು ಇದಕ್ಕಾಗಿಯೇ. ಒಂದು ಚಿತ್ರಪಟಗಳ ಅಂಗಡಿಗೆ ಹೋದವನು ತನ್ನ ಕಣ್ಣನ್ನು ಯಾವ ಚಿತ್ರದ ಸೌಂದರ್ಯವು ಸೆಳೆಯುವದೋ ಅದನ್ನೇ ಆರಿಸಿಕೊಳ್ಳುತ್ತಾನಲ್ಲವೆ? ಹಾಗೆ ನಮಗೆ ಎತ್ತ ನೋಡಿದರೂ ಭಗವಂತನೇ ಬೇಕಾಗುವಂತೆ ಆಗಬೇಕು. ಶ್ರುತಿಯಲ್ಲಿ ಆತ್ಮನನ್ನೇ ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನ ಮಾಡಬೇಕು - ಎಂಬ ವಾಕ್ಯವಿದೆ. ಅನಾತ್ಮದ ಸೆಳೆತದಿಂದ ಬಿಡಿಸಿಕೊಂಡು ಆತ್ಮನ ಕಡೆಗೇ ತಿರುಗಬೇಕೆಂಬುದನ್ನು ಆ ವಾಕ್ಯವು ತಿಳಿಸುತ್ತದೆ. ಅದರ ಅಭಿಪ್ರಾಯವೇ ಇಲ್ಲಿದೆ.

ನಮ್ಮ ಮನಸ್ಸಿನಲ್ಲಿ ಏತರ ವಾಸನೆ ಇರುವದೋ ಅದನ್ನು ನಾವು ಆರಿಸಿಕೊಳ್ಳುವೆವು. ನಮಗೆ ಅನಾತ್ಮವಸ್ತುಗಳ ವಾಸನೆಯು ಬಲವಾಗಿರುವದರಿಂದ ಆತ್ಮವಿಚಾರವು ಬೇಡವಾಗುವದು ; ಅನಾತ್ಮವಿಚಾರಗಳನ್ನು ಹುಡುಕಿಕೊಂಡು ಹೋಗುವಹಾಗಾಗುತ್ತದೆ, ಮತ್ತೊಬ್ಬರು ನಮ್ಮನ್ನು ಹಳಿದರೂ ಚಿಂತೆಯಿಲ್ಲ, ಮುಮುಕ್ಷುಗಳಾದವರು ಈ ಅನಾತ್ಮದ ಚಿಂತೆಯನ್ನು ಬಿಟ್ಟುಬಿಡಬೇಕು. ಸದ್ಯದ ಕಾಲದಲ್ಲಿ ವರ್ತಮಾನ ಪತ್ರಿಕೆಗಳನ್ನು ಓದುತ್ತಾ ನಮಗೆ ಸಂಬಂಧಪಡದ ಎಷ್ಟೋ ವಿಷಯಗಳನ್ನು ಚಿಂತಿಸುತ್ತಾ ಅವುಗಳ ಮಾತನ್ನೇ ಆಡುತ್ತಿರುವ ಹವ್ಯಾಸವನ್ನು ಬಿಡಬೇಕು. ನನ್ನಲ್ಲಿಯೇ ಮನಸ್ಸಿಡು, ನನ್ನ ಭಕ್ತನಾಗು-ಎಂದು ಭಗವಂತನು ಹೇಳಿರುವದನ್ನು ಮನಸ್ಸಿಗೆ ತಂದುಕೊಳ್ಳಬೇಕು. ಅನಾತ್ಮವಸ್ತುಗಳಿಗೆ ಕಾರಣವಿಲ್ಲದೆ ಹೆಚ್ಚಿನ ಬೆಲೆಯನ್ನು ಕೊಡುತ್ತಿರುವ ಅಭ್ಯಾಸವನ್ನು ಬಿಡಬೇಕು. ಅವುಗಳನ್ನು ಮನಸ್ಸಿಗೆ ತಂದುಕೊಂಡಷ್ಟೂ ಕ್ಲೇಶವು ಹೆಚ್ಚುವದು, ಸುಖವು ದೂರವಾಗುವದು. ಪ್ರಪಂಚದಲ್ಲಿ ಈಶ್ವರನು ಇಲ್ಲವೇ ಇಲ್ಲವೆಂಬಂತೆ ನಾವು ವ್ಯವಹರಿಸುತ್ತಿದ್ದೇವೆ. ಪರಮಪ್ರೇಮಾಸ್ಪದನಾದ ಆನಂದಧಾಮನನ್ನು ಮರೆತು ದುಃಖದ ಕಗ್ಗಾಡಾದ

ವಿಷಯಪ್ರಪಂಚದಲ್ಲಿ ಅಲೆದಾಡುತ್ತಿರುವದು ಎಂಥ ಶೋಚನೀಯವಾದದ್ದು ! ಸಾಹುಕಾರನೊಬ್ಬನು ಪರಸ್ಥಳದಲ್ಲಿ ಹಣಕ್ಕಾಗಿ ಅವರಿವರನ್ನು ಅಂಗಲಾಚಿ ಬೇಡಿಕೊಂಡರೂ ಯಾರೊಬ್ಬರೂ ಸಹಾಯಮಾಡದೆ ಇರಲು ಬೇಸರದಿಂದ "ಎಲಾ, ಮನೆಯಲ್ಲಿ ಮತ್ತೊಬ್ಬರಿಗೆ ಸಹಾಯಮಾಡುವಷ್ಟು ಹಣವನ್ನಿಟ್ಟುಕೊಂಡಿರುವ ನನಗೆ ಇಂಥ ಕಷ್ಟ ಬರಬಹುದೆ?" ಎಂದು ತನ್ನ ಅಂಗಿಯ ಜೇಬಿನಲ್ಲಿ ಕೈ ಹಾಕಿದನಂತೆ ; ಅಲ್ಲಿ ತಾನು ಇಟ್ಟು ಮರೆತಿದ್ದ ನೋಟು ಒಂದು ಸಿಕ್ಕಲು ಹೊಸದಾಗಿ ಹಣವನ್ನು ಸಂಪಾದಿಸಿದವನಂತೆ ಸಂತೋಷಪಟ್ಟನಂತೆ! ಹೀಗೆಯೇ ನಾವು ಸುಖಕ್ಕಾಗಿ ಆ ವಿಷಯ, ಈ ವಿಷಯ- ಹೀಗೆ ಅಲೆದಲೆದು ಎಲ್ಲಿಯೂ ಆ ಸುಖವು ಸಿಕ್ಕದೆ ಇರುವದನ್ನು ಕಂಡು ಶಾಸ್ತ್ರಾಚಾರ್ಯರ ಉಪದೇಶದಿಂದ ನಮ್ಮ ಒಳಗಡೆ ತಿರುಗಿದರೆ ಅಲ್ಲಿಯೇ ಎಂದೆಂದಿಗೂ ಇದ್ದುಕೊಂಡಿರುವ ನಮ್ಮ ಸ್ವರೂಪಕ್ಕೇ ಸೇರಿದ ಆತ್ಮಾನಂದವು ಹೊಸದಾಗಿ ಲಭಿಸಿದಂತೆ ಆಗುತ್ತದೆ. ಇದನ್ನೇ ಭಗವಂತನು ನನ್ನಲ್ಲಿಯೇ ಮನಸ್ಸಿಡು, ನನ್ನ ಚಿಂತೆಯನ್ನೇ ಮಾಡುತ್ತಿರು, ನನ್ನ ಪ್ರೇಮವನ್ನು ಮಾಡು, ನನ್ನನ್ನೇ ಪೂಜಿಸುತ್ತಿರು, ಹಾಗಾದರೆ ನನ್ನನ್ನೇ ಸೇರುವೆ - ಎಂದು ಪ್ರತಿಜ್ಞೆಮಾಡಿ ಹೇಳುತ್ತಿದ್ದಾನೆ.

ಕರ್ಮಯೋಗನಿಷ್ಠೆಯ ಪರಮರಹಸ್ಯವೆಂದರೆ- ಈಶ್ವರನನ್ನು ಶರಣುಹೊಂದುವದು. ಅದನ್ನು ಭಗವಂತನು `ಮನ್ಮನಾ ಭವ' ಎಂಬ ಶ್ಲೋಕದಿಂದ ಉಪಸಂಹಾರಮಾಡಿರುತ್ತಾನೆ. ಈ ಕರ್ಮಯೋಗದಲ್ಲಿಯೇ ನೆಲೆನಿಂತರೆ ಆಗುವ ಫಲವೇನು? ಎಂದರೆ ಸಮ್ಯಗ್ದರ್ಶನವೆಂಬ ಹೆಚ್ಚಿನ ವಿಜ್ಞಾನವು. ಇದನ್ನೇ ಎಲ್ಲಾ ಉಪನಿಷತ್ತುಗಳೂ ಸಾರುವವು. ಇದರ ಆಧಾರವನ್ನಿಟ್ಟುಕೊಂಡೇ ಭಗವಂತನು ತನ್ನ ಉಪದೇಶವನ್ನು ಪ್ರಾರಂಭಿಸಿದನು. ಈಗ ಶಾಸ್ತ್ರದಲ್ಲಿ ಅದನ್ನೇ ಉಪಸಂಹಾರಮಾಡುತ್ತಾನೆ.

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ 18-66**

ಭಗವಂತನ ಕಡೆಗೆ ತಿರುಗುವದು, ಆಮೇಲೆ ಆತನನ್ನು ಕಂಡುಕೊಂಡು ಅಲ್ಲಿಯೇ ಆನಂದವನ್ನನುಭವಿಸುತ್ತಾ ನೆಲೆನಿಂತುಬಿಡುವದು - ಇವೆರಡೇ ಅಧ್ಯಾತ್ಮಶಾಸ್ತ್ರದ ಉಪದೇಶಸಾರವು. ಪರಮಾರ್ಥತತ್ತ್ವದಲ್ಲಿ ಎಂದೆಂದಿಗೂ ತಾದಾತ್ಮ್ಯಭಾವನೆಯಿಂದ ನೆಲೆನಿಲ್ಲುವದೇ ಸರ್ವಕರ್ಮಸಂನ್ಯಾಸಪೂರ್ವಕವಾದ ಜ್ಞಾನನಿಷ್ಠೆಯು.

`ಸರ್ವಧರ್ಮಾನ್‌ಪರಿತ್ಯಜ್ಯ' ಎಂಬ ವಾಕ್ಯದಲ್ಲಿ ಒಂದು ಹೆಚ್ಚಿನ ತತ್ತ್ವವು ಅಡಗಿರುತ್ತದೆ. ಇಗೊ, ಇದು ಕರ್ತವ್ಯವು- ಎಂದು ಕರ್ತವ್ಯಕ್ಕೆ ಕಟ್ಟುಬಿದ್ದವನು ಕರ್ತವ್ಯಕರ್ಮಕ್ಕೆ ದಾಸನಾಗಿರುವವನು. ಮನುಷ್ಯನು ಉಸಿರುಬಿಡುತ್ತಿರುವವರೆಗೂ ಒಂದಲ್ಲ ಒಂದು ಕರ್ತವ್ಯವು ಇದ್ದೇ ಇರುವದು. ಇದಕ್ಕೆ ಕೊನೆಯಲ್ಲಿ? ಸಾಯುವಾಗ ಶರೀರವಾಙ್ಮನಸ್ಸುಗಳ ಕರ್ಮಗಳು ನಿಂತುಹೋಗುತ್ತವೆ, ನಿಜ; ಆದರೆ ಹಳೆಯ ಬಟ್ಟೆಯನ್ನು ಬಿಟ್ಟು ಹೊಸ ಬಟ್ಟೆಯನ್ನು

ಸ್ವೀಕರಿಸುವಂತೆ ಈಗ ಮಾಡಿದ ಕರ್ಮಗಳ ಫಲವಾಗಿ ಮತ್ತೊಂದು ಶರೀರವನ್ನು ನಾವು ಧರಿಸಿದಮೇಲೆ ಕರ್ಮವನ್ನು ಮಾಡದೆ ಗತ್ಯಂತರವಿಲ್ಲ. ಹೀಗೆ ನೋಡಿದರೆ ಈ ಕರ್ಮಗಳ ಸರಪಳಿಗೆ ಮೊದಲಿಲ್ಲ, ತುದಿಯಿಲ್ಲ, ಎಳೆದಷ್ಟೂ ಬರುತ್ತಲೇ ಇರುತ್ತದೆ. ಆದ್ದರಿಂದ ಮನುಷ್ಯನು ಮಾಡತಕ್ಕ ಮುಖ್ಯಕರ್ತವ್ಯವೇನೆಂದರೆ ಮಾಡುವದೆಂಬ ಬುದ್ಧಿಯನ್ನೇ ಕಳೆದುಕೊಳ್ಳುವದು. ಯಾವನು ಕರ್ಮಗಳನ್ನು ಮಾಡಿಮಾಡಿ ಫಲಗಳನ್ನು ಪಡೆದು ಭೋಗಿಸಿ ಭೋಗಿಸಿ ಬೇಸತ್ತಿರುವನೋ, ಯಾವನಿಗೆ ಸಾಧ್ಯ, ಸಾಧನ-ಎಂಬಿವೆರಡೂ ಕಾಮದ ಪಾಶದ ಬಿಗಿತವೇ ಎಂದು ತೋರುವದೊ ಅವನಿಗೇ ಈ ಉಪದೇಶವನ್ನು ಶಾಸ್ತ್ರವು ಮಾಡುತ್ತದೆ. ಕಾಮ್ಯನಿಷಿದ್ಧಕರ್ಮಗಳನ್ನು ಬಿಟ್ಟು ನಿತ್ಯಕರ್ಮಗಳನ್ನು ಮಾಡುತ್ತಿರುವವನು ಮಿಕ್ಕವರಿಗಿಂತ ಎಷ್ಟೋ ಮೇಲು ; ಅವನನ್ನು ರಾಗದ್ವೇಷಗಳು ಹಿಗ್ಗಾಮುಗ್ಗಾ ಎಳೆಯುತ್ತಿರುವದಿಲ್ಲ. ಆದರೆ ಈ ನಿತ್ಯಕರ್ಮವನ್ನು ಪರಮೇಶ್ವರನ ಆರಾಧನೆಯೆಂದು ಮಾಡಿ ಚಿತ್ತಶುದ್ಧಿಯನ್ನು ಸಂಪಾದಿಸಿಕೊಳ್ಳುವ ಕರ್ಮಯೋಗಿಯು ಸಾಮಾನ್ಯಕರ್ಮಿಗಿಂತಲೂ ಬಹಳ ಮೇಲಿನ ಮಟ್ಟವನ್ನು ಸೇರಿರುತ್ತಾನೆ. ಪರಮೇಶ್ವರನ ಚಿಂತೆಯಲ್ಲಿಯೇ ಮುಳುಗಿ ತನ್ನ ವ್ಯವಹಾರವನ್ನೂ ಸಾಗಿಸುವದು ಎಲ್ಲರಿಗೂ ದಕ್ಕತಕ್ಕದ್ದಲ್ಲ. ಆದರೆ ಈ ಕರ್ಮಯೋಗದಿಂದ ಚಿತ್ತಶುದ್ಧಿಯನ್ನು ಪಡೆದು ಮಿಕ್ಕದ್ದೆಲ್ಲವನ್ನೂ ಬಿಟ್ಟು ಬರಿಯ ಧ್ಯಾನದಲ್ಲಿಯೇ ನಿಲ್ಲುವದು ಸಾಮಾನ್ಯವೆ? ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ, ದೊರಕುವ ಕರ್ಮಫಲವೆಲ್ಲವೂ ಪರಿಚ್ಛಿನ್ನವಾದದ್ದು ಎಂಬುದನ್ನು ಮನಗಂಡು ಪರಮಾತ್ಮನ ಶ್ರವಣಮನನಧ್ಯಾನಗಳಿಗೇ ಮನಸ್ಸನ್ನು ಧಾರೆಯೆರೆಯುವದು ಎಷ್ಟೋ ಸಾವಿರ ಜನಗಳಲ್ಲಿ ಒಬ್ಬನಿಗೆ, ಎಷ್ಟೋ ಜನ್ಮಗಳ ಪುಣ್ಯಸಂಸ್ಕಾರಗಳ ಫಲವಾಗಿ ದೊರಕತಕ್ಕದ್ದಾಗಿರುತ್ತದೆ.

ಹೀಗೆ ಸರ್ವಕರ್ಮಗಳನ್ನೂ ಪರಿತ್ಯಾಗಮಾಡಿದರೆ ನಮಗೆ ದೊರಕುವದಾದರೂ ಏನು? ಎಂದು ಕೆಲವರು ಕೇಳಬಹುದು. ಆದರೆ ಇದು ಹೊಸದಾಗಿ ದೊರಕುವ ವಿಷಯದ ವಿಚಾರವಲ್ಲ, ನಾವು ಈಗಾಗಲೆ ಕಳೆದುಕೊಂಡಿರುವದನ್ನು ಮತ್ತೆ ಪಡೆದುಕೊಳ್ಳುವ ವಿಷಯ. ನಿಜವಾಗಿ ನೋಡಿದರೆ ಅಶ್ವಮೇಧಾದಿ ಮಹಾಮಹಾಕರ್ಮಗಳಿಂದಲೂ ದೊರಕಿಸಿಕೊಳ್ಳಲಾಗದೆ ಇರುವ ನಿತ್ಯಾನಂದಸ್ವರೂಪವಾದ ಪರಮಾರ್ಥವು ನಮ್ಮನಮ್ಮಲ್ಲಿಯೇ ಇದ್ದುಕೊಂಡು ಬಿಟ್ಟಿದೆ. ಆದರೆ ಅದರ ಕಡೆಗೆ ಲಕ್ಷ್ಯವಿಲ್ಲದ್ದರಿಂದ ನಾವು ಬಹಿರ್ಮುಖರಾಗಿ ಈ ಫಲ, ಆ ಫಲ-ಎಂದು ಫಲಭೋಗಕ್ಕಾಗಿ ಹಾತುವರಿಯುತ್ತಾ ಅಲೆಯುತ್ತಿರುವೆವು. ಎಂಥ ಕರ್ಮವನ್ನು ಮಾಡಿದರೂ ಪರಿಚ್ಛಿನ್ನವೇ ಆಗಿರುವದರಿಂದ, ಅದು ಪರಿಚ್ಛಿನ್ನವಾದ ಫಲವನ್ನು ಕೊಟ್ಟೀತೇ ಹೊರತು ಅನಂತವಾದ ಫಲವನ್ನು ಎಂದಿಗೂ ಕೊಡಲಾರದು. ಇದಲ್ಲದೆ ನಮ್ಮ ಸ್ವರೂಪಕ್ಕೆ ಹತ್ತಿಕೊಂಡಿರುವ ಈ ಅನಂತಾನಂದವು ನಮ್ಮ ಹೊರಗೆ ಎಲ್ಲಿತಾನೆ ದೊರಕೀತು? ಕೆಟ್ಟ ಕರ್ಮದಿಂದ ಕೆಟ್ಟ ಫಲವು ದೊರಕುವಂತೆ ಒಳ್ಳೆಯ ಕರ್ಮದಿಂದ ಒಳ್ಳೆಯ ಫಲವು ದೊರಕಬಹುದು; ಲೋಕದಲ್ಲಿ ದುಃಖವು ತಾರತಮ್ಯದಿಂದ ಕಾಣುವಂತೆ ಸುಖವೂ

ತಾರತಮ್ಯದಿಂದಲೇ ಕಾಣುತ್ತಿರುವದು. ದುಃಖವು ಅಧರ್ಮದ ಫಲ. ಸುಖವು ಧರ್ಮದ ಫಲ; ಆದ್ದರಿಂದ ನಾವು ಮಾಡುವ ಧರ್ಮಾಧರ್ಮಗಳ ತಾರತಮ್ಯಕ್ಕನುಗುಣವಾಗಿ ಸುಖದುಃಖಗಳೂ ತಾರತಮ್ಯದಿಂದ ದೊರಕುವವೆಂಬುದು ನಿರೀಕ್ಷಿಸತಕ್ಕದ್ದೇ ಆಗಿದೆ. ನಾವು ಅಂಜಿಕೆಯಿಂದ ಕೆಟ್ಟ ಕರ್ಮವನ್ನು ಬಿಡಬಹುದು ; ಅಥವಾ ಆಶೆಯಿಂದ ಒಳ್ಳೆಯ ಕರ್ಮವನ್ನು ಮಾಡಬಹುದು. ಈ ಎರಡೂ ಒಂದೇ ; ತಮ್ಮ ತಮ್ಮ ಪರಿಚ್ಛಿನ್ನಫಲವನ್ನು ಕೊಟ್ಟು ಮತ್ತೆ ಮತ್ತೆ ನಮ್ಮನ್ನು ಕರ್ಮದಲ್ಲಿ ತೊಡಗಿಸುತ್ತಿರುವವು. ಇದನ್ನರಿತು ಈ ಕರ್ಮಫಲಪ್ರಬಂಧವನ್ನೇ ಮೀರಿರಬೇಕೆಂಬ ಪರಮವಿರಕ್ತಿಯು ಯಾವ ಮಹಾತ್ಮನಿಗೆ ಬರುತ್ತದೆಯೋ ಆತನು 'ಭಗವಂತ, ನನಗೆ ಕೆಟ್ಟಕರ್ಮವನ್ನು ಮಾಡಿ ದುಃಖವನ್ನು ಅನುಭವಿಸುವದೂ ಬೇಕಿಲ್ಲ, ಒಳ್ಳೆಯದನ್ನು ಮಾಡಿ ಸುಖವನ್ನು ಅನುಭವಿಸುವದೂ ಬೇಕಿಲ್ಲ. ಕರ್ಮವನ್ನು ಮಾಡುವದು ಫಲವನ್ನು ಅನುಭವಿಸುವದು - ಈ ಹಂಬಲವನ್ನೇ ತಪ್ಪಿಸಿಬಿಡು!'- ಎಂದು ದೈನ್ಯದಿಂದ ಬೇಡಿಕೊಳ್ಳುವನು. ಅಂಥ ಪುರುಷ ಧೌರೇಯನಿಗೇ ಈ ಸರ್ವಧರ್ಮಪರಿತ್ಯಾಗೋಪದೇಶವು ಅರ್ಥವಾಗುವದು.

ಭಕ್ತಿ, ಜ್ಞಾನ-ಎಂಬಿವು ಗೀತೆಯಲ್ಲಿ ಎರಡು ಅಣಿಮುತ್ತುಗಳಂಥ ಉಪದೇಶಗಳು. ಇವುಗಳಲ್ಲಿ ವ್ಯವಹಾರಕ್ಕಿಂತಲೂ ಭಗವಂತನಿಗೇ ಹೆಚ್ಚಿನ ಸ್ಥಾನವಿರುವದು. ಜನರು ಸಾಮಾನ್ಯ ವ್ಯವಹಾರದಲ್ಲಿ ಭಗವಂತನನ್ನು ಪೂರ್ಣವಾಗಿ ಕೈಬಿಟ್ಟಿರುತ್ತಾರೆ. ಆದರೆ ವಿವೇಕಿಗಳಾದವರಿಗೆ ಭಗವಂತನೊಬ್ಬನೇ ಗತಿ; ಆತನ ಸ್ಮರಣೆಯಿಲ್ಲದ ಯಾವ ವ್ಯವಹಾರವೂ ಬೇಡ. ಯಾವ ಮಹನೀಯರಿಗೆ ಈ ಮನಃಸ್ಥಿತಿಯು ದಕ್ಕಿರುವದೋ ಅಂಥವರು ಭಗವಂತನೊಬ್ಬನನ್ನೇ ಶರಣುಹೊಕ್ಕಿರುತ್ತಾರೆ. ಅವರಿಗೆ ಯಾವ ವ್ಯವಹಾರವೂ ರುಚಿಸುವದಿಲ್ಲ ; ಅವರಿಗೆ ಭಗವಂತನೊಬ್ಬನೇ ಬೇಕು. ಮಾಡುವ ಕರ್ಮವು ಭಗವಂತನಿಗಾಗಿ, ಮಾಡುವ ವಿಚಾರವು ಭಗವಂತನ ವಿಷಯ; ಅವರ ಹಂಬಲವೆಲ್ಲ ಭಗವಂತನ ವಿಷಯವೇ ಆಗಿರುತ್ತದೆ. ಅಂಥವರಿಗೆ ಕರ್ಮದ ಹಂಗೇ ಇಲ್ಲದಂತೆ ಆ ಭಗವಂತನು ಅನುಗ್ರಹಿಸುತ್ತಾನೆ. ಪಾಪದಂತೆಯೇ ಪುಣ್ಯವೂ ಪಾಪವೇ, ಅದೂ ಬಂಧವೇ ಎಂಬ ಉತ್ತಮವಾದ ತಿಳಿವಳಿಕೆಯನ್ನು ಅವರಿಗೆ ಅನುಗ್ರಹಿಸುತ್ತಾನೆ. ನಿಜವಾಗಿ ನೋಡಿದರೆ ಪಾಪ, ಪುಣ್ಯ; ಕ್ರಿಯೆ, ಕಾರಕ, ಫಲ - ಒಂದೂ ಪರಮಾರ್ಥವಾಗಿಲ್ಲವೇ ಇಲ್ಲ. ಇದೆಲ್ಲ ಮಾಯೆಯ ಹುಸಿನೋಟಗಳಂತೆ, ಕನಸಿನಲ್ಲಿ ಕಾಣುವ ಟೊಳ್ಳುತೋರಿಕೆಗಳಂತೆ. ಇವುಗಳಲ್ಲಿ ನಿಜವಾದ ಸಾರವೇನೂ ಇಲ್ಲವೇ ಇಲ್ಲ; ಅಥವಾ ಸಾರವಿಲ್ಲವೆಂದೇಕೆ ಹೇಳುವದು? ಎಲ್ಲಕ್ಕೂ ಸಾರವು ಆ ಭಗವಂತನೇ; ವಾಸುದೇವನೆಂಬ ಭಗವತ್ತತ್ತ್ವದಲ್ಲಿಯೇ ಈ ಕ್ರಿಯಾಕಾರಕಫಲರೂಪವಾದ ಪ್ರಪಂಚವು ಸಾಂಸಾರಿಕರಿಗೆ ಭ್ರಾಂತಿಯಿಂದ ತೋರುತ್ತಿರುವದು. ನಿಜವಾಗಿ ಭಗವಂತನೊಬ್ಬನಲ್ಲದೆ ಮತ್ತೆ ಯಾವದೊಂದೂ ಇಲ್ಲವೇ ಇಲ್ಲ - ಎಂಬ ಪರಮಾರ್ಥವನ್ನು ಇಂಥ ಪರಭಕ್ತರಿಗೇ ಆ ಭಗವಂತನು ಅನುಗ್ರಹಿಸುತ್ತಾನೆ. ಅವರಿಗೆ ಪುಣ್ಯಪಾಪಗಳಿಂದ ಬಿಡುಗಡೆಯು ಆತ್ಯಂತಿಕವಾಗಿ

ಆಗಿಬಿಡುತ್ತದೆ. ಇನ್ನುಮೇಲೆ ಅವರಿಗೆ ಯಾವ ಶೋಕವೂ ಇಲ್ಲ, ಯಾವ ಮೋಹವೂ ಇಲ್ಲ; ಅವರು ಯಾವದೊಂದನ್ನೂ ಹೊಸದಾಗಿ ಅರಿತುಕೊಳ್ಳಬೇಕಾದದ್ದೂ ಉಳಿದಿರುವದಿಲ್ಲ, ಮಾಡಬೇಕಾದ ಯಾವದೊಂದು ಕರ್ತವ್ಯವೂ ಇರುವದಿಲ್ಲ; ನೀಗಿಕೊಳ್ಳಬೇಕಾದ ಯಾವ ದುಃಖವೂ ಇರುವದಿಲ್ಲ, ಪಡೆದುಕೊಳ್ಳಬೇಕಾದ ಯಾವ ಸುಖವೂ ಇರುವದಿಲ್ಲ. ಇದೇ ಸಮ್ಯಗ್ಜ್ಞಾನದಿಂದ ದೊರೆಯುವ ಸದ್ಯೋಮುಕ್ತಿ.

ಈ ತತ್ತ್ವಜ್ಞಾನವನ್ನೂ ಇದರ ಉಪಾಯವಾದ ಕರ್ಮಯೋಗವನ್ನೂ ಯಾರಿಗೆ ಹೇಳಬೇಕು? ಇದನ್ನು ಶ್ರವಣಮಾಡಿ ಇದರ ಲಾಭವನ್ನು ಪಡೆಯುವದಕ್ಕೆ ಅರ್ಹರು ಯಾರು? ಎಂದರೆ ಭಗವಂತನು ಹೀಗೆನ್ನುತ್ತಿದ್ದಾನೆ:

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥ 18-67**

"ಇದನ್ನು ತಪಸ್ಸಿಲ್ಲದವನಿಗೆ ಹೇಳದಿರು; ಭಕ್ತನಲ್ಲದವನಿಗೆ ಹೇಳದಿರು ; ಶುಶ್ರೂಷೆಯನ್ನು ಮಾಡದವನಿಗೆ ಹೇಳಬಾರದು; ನನ್ನಲ್ಲಿ ಅಸೂಯೆಯಿರುವವನಿಗೂ ಹೇಳಬಾರದು." ಅಧಿಕಾರಿಗುಣಗಳು ಯಾವನಲ್ಲಿರುವವೋ ಅವನಿಗೆ ಹೇಳಬೇಕು ; ಅವು ಇಲ್ಲದವನಿಗೆ ಎಂದಿಗೂ ಹೇಳಬಾರದು ಎಂದರ್ಥ.

ಮೊಟ್ಟಮೊದಲನೆಯದಾಗಿ ತಪಸ್ಸು ಇಲ್ಲದವನಿಗೆ ಹೇಳಬಾರದು. ತಪಸ್ಸೆಂದರೆ ಏನು? ಕೇವಲ ಕೃಚ್ಛ್ರಚಾಂದ್ರಾಯಣಗಳನ್ನು ಅಧಿಕಾರಕಾರಣವೆಂದು ಇಲ್ಲಿ ಗ್ರಹಿಸಿರುವದಿಲ್ಲ. ನಿಯಮಗಳು ತಪಸ್ಸಿನಲ್ಲಿ ಸೇರಿವೆಯಾದರೂ ಮುಖ್ಯವಾಗಿ "ಮನಸಶ್ಚೇನ್ದ್ರಿಯಾಣಾಂ ಚ ಹ್ಯೈಕಾಗ್ರ್ಯಂ ಪರಮಂ ತಪಃ" ಎಂದಂತೆ ಇಂದ್ರಿಯಗಳನ್ನೂ ಮನಸ್ಸನ್ನೂ ಬಿಗಿಹಿಡಿದು ಏಕಾಗ್ರತೆಯನ್ನು ಸಂಪಾದಿಸಿಕೊಂಡಿರುವದೇ ಮುಖ್ಯತಪಸ್ಸು. ಯಾವನು ಚಪಲಚಿತ್ತನಾಗಿರುವನೋ ಅವನಿಗೆ ಇಂಥ ಸೂಕ್ಷ್ಮವಿಚಾರವು ಮನಸ್ಸಿಗೆ ಹಿಡಿಯಲಾರದು ; ಆದ್ದರಿಂದ ಐಕಾಗ್ರ್ಯದಿಂದ ಕೇಳುವದಕ್ಕೆ ಸಿದ್ಧನಾದವನು ಈ ಉಪದೇಶಕ್ಕೆ ಮುಖ್ಯಾಧಿಕಾರಿಯು. ಅವನಿಗೇ ಈ ಉಪದೇಶದ ಪೂರ್ಣಫಲವು ಆಗುವದು.

ಎರಡನೆಯದಾಗಿ ಅಭಕ್ತನಾದವನಿಗೆ ಹೇಳಬಾರದು. ಭಕ್ತಿಯೆಂದರೆ ಪೂಜ್ಯವಸ್ತುಗಳಲ್ಲಿರುವ ಪ್ರೇಮವು. ಕೇಳುವದಕ್ಕೆ ಮನಸ್ಸಿನ ಸಿದ್ಧತೆಯೇನೋ ಇರಬಹುದು, ಆದರೆ ವಿಷಯದಲ್ಲಿ ಅನಾದರವಿರುವವನಿಗೆ ಹೇಳಿದರೆ ಯಾವ ಪ್ರಯೋಜನವೂ ಇಲ್ಲ. ಗುರುದೇವತಾಭಕ್ತಿಯಿಲ್ಲದವನಿಗೆ ಉಪದೇಶವು ಹೇಗೆ ತಾನೆ ಮನದಟ್ಟಾದೀತು? ಅಧ್ಯಾತ್ಮವಿಚಾರದಲ್ಲಿ ಯಾವನಿಗೆ ಪ್ರೇಮವಿರುವದೋ, ಯಾವನು ವಿಷಯಪ್ರಪಂಚದ ವಿಷಯಕ್ಕೆ ವಿರಕ್ತನಾಗಿ ಭಗವಂತನ ಕಡೆಗೇ ಮನಸ್ಸಿನ ಒಲವು ಇರುವವನೋ ಅಂಥವನು ಗೀತೋಪದೇಶಕ್ಕೆ ಮುಖ್ಯಾಧಿಕಾರಿಯು; ಅಂಥವನಿಗೇ ಈ ಉಪದೇಶದ ಫಲವು ಲಭಿಸುವದು.

ಮೂರನೆಯದಾಗಿ ಶುಶ್ರೂಷೆಮಾಡದವನಿಗೆ ಹೇಳಬಾರದು. ಶುಶ್ರೂಷೆ ಏತಕ್ಕೆ? ತತ್ತ್ವವನ್ನು ತನ್ನ ಸೇವೆಮಾಡಿದವನಿಗೆ ಹೇಳಬೇಕೆ? ಎಂದು ಕೆಲವರು ಕೇಳುತ್ತಾರೆ. ಗುರುಶುಶ್ರೂಷೆಯು ಗುರುವಿನ ಮನಸ್ಸನ್ನೇ ಅನುವರ್ತಿಸಿಕೊಂಡಿರುವದಕ್ಕೆ ಹೊರಗುರುತು. ಶುಶ್ರೂಷೆಯೆಂದರೆ ಪರಿಚಾರಿಕೆ ಎಂತ ಭಾವಿಸಬಾರದು. ತತ್ತ್ವವನ್ನು ಬಲ್ಲ ಗುರುವೇ ಭಗವಂತನ ಪ್ರತಿನಿಧಿಯಾಗಿರುತ್ತಾನೆ; ಗುರುವಿಗೆ ಮಾಡಿದ ಸೇವೆಯು ಆ ಭಗವಂತನಿಗೇ ಮುಟ್ಟುತ್ತದೆ. ನದಿಯ ನೀರು ನಲ್ಲಿಯ ಮೂಲಕವೂ ವಿದ್ಯುದ್ದೀಪವು ತಂತಿಯ ಸಂಬಂಧವುಳ್ಳ ಬಲ್ಬಿನ ಆಕಾಶದಲ್ಲಿಯೂ ಹೊರತೋರಿಕೊಳ್ಳುವಂತೆ ಭಗವಂತನ ತತ್ತ್ವದ ಪ್ರಕಾಶವು ಗುರುಗಳಲ್ಲಿಯೇ ಆಗುತ್ತದೆ. ದೊಡ್ಡ ದೊಡ್ಡ ಜಲಾಶಯಗಳಿಂದ ತಂದ ನೀರನ್ನು ಹಂಡೆ, ಕೊಳದಪ್ಪಲೆ- ಮುಂತಾದ ದೊಡ್ಡ ಪಾತ್ರೆಗಳಲ್ಲಿ ತುಂಬಿಟ್ಟುಕೊಂಡಿದ್ದು ಬೇಕಾದಾಗ ತಂಬಿಗೆ ಮುಂತಾದವುಗಳಿಂದ ತೆಗೆದುಕೊಂಡು ಉಪಯೋಗಿಸಿಕೊಳ್ಳುವಂತೆ ಎಲ್ಲೆಲ್ಲಿಯೂ ತುಂಬಿರುವ ಪರಮಾತ್ಮನೆಂಬ ಆನಂದಸಾಗರದ ಅಮೃತವನ್ನು ಸದ್ಗುರುವೆಂಬ ಪಾತ್ರದಿಂದಲೇ ನಾವು ತೋಡಿಕೊಳ್ಳಬೇಕಾಗಿರುತ್ತದೆ. ಶುಶ್ರೂಷಾದಿಗಳಿಂದ ಪ್ರಸನ್ನನಾಗಿರುವ ಗುರುವು ಯಾವ ಸಮಯದಲ್ಲಿ ತತ್ತ್ವೋಪದೇಶವನ್ನು ಮಾಡುವನೋ ಆಗಲೇ, ಗಾಳಿ ಬಂದಾಗ ತೂರಿಕೊಳ್ಳುವ ಜಾಣರಂತೆ, ನಾವು ಆ ಉಪದೇಶದ ಸದುಪಯೋಗವನ್ನು ಮಾಡಿಕೊಳ್ಳಬೇಕು. ಈ ಕಾರಣದಿಂದ ಗುರುವಿನ ಅನುವರ್ತನೆಯು ಅತ್ಯವಶ್ಯಕವಾಗಿರುತ್ತದೆ. ಯಾವನು ತಪಸ್ವಿಯೂ ಭಕ್ತನೂ ಆಗಿದ್ದರೂ ಗುರುಶುಶ್ರೂಷಾತತ್ಪರನಾಗಿರುವದಿಲ್ಲವೋ ಅವನಿಗೆ ಶುಶ್ರೂಷುವಾದ ಶಿಷ್ಯನಿಗೆ ದೊರಕುವ ತತ್ತ್ವಜ್ಞಾನಲಾಭವು ಆಗಲಾರದು ಎಂಬುದನ್ನೇ ಈ ಶುಶ್ರೂಷಾವಾಕ್ಯದಿಂದ ಭಗವಂತನು ತಿಳಿಸಿರುತ್ತಾನೆ.

ಇನ್ನು `ನನ್ನಲ್ಲಿ, ಅಸೂಯೆಯಿರುವವನಿಗಂತೂ ಹೇಳಲೇಬೇಡ' ಎಂಬ ವಾಕ್ಯದ ಅರ್ಥವನ್ನು ವಿಚಾರಮಾಡೋಣ. ಇದುವರೆಗೆ ಹೇಳಿದ ಮಿಕ್ಕ ಗುಣಗಳು ಒಂದೊಂದು ಇದ್ದರೆ ಮತ್ತೊಂದು ಕಾಲಕ್ರಮದಲ್ಲಿ ಬಂದು ಕೂಡಿಕೊಳ್ಳುವ ಸಂಭವವಿದೆ.. ಆದರೆ ಭಗವಂತನಲ್ಲಿ ಅಸೂಯೆಯಿರುವವನಿಗೆ ಮಿಕ್ಕ ಯಾವ ಅಧಿಕಾರಗುಣವು ಇದ್ದರೂ ಪ್ರಯೋಜನವಿಲ್ಲ. ಕುದುರೆಗೆ ಕಾಲು ಎರಡೂ ಕತ್ತರಿಸಿ ಹೋಗಿದ್ದರೆ ಅಂಥದ್ದನ್ನು ಯಾವ ಶಿಪಾಯಿತಾನೆ ಯುದ್ಧಕ್ಕೊಯ್ಯುವ ಯೋಚನೆಮಾಡಿಯಾನು? ಅಸೂಯಾಗುಣವು ಅಂಥ ದೊಡ್ಡದೊಂದು ಕೊರತೆ. ಅಸೂಯೆ ಎಂದರೇನು? ದೊಡ್ಡವರಲ್ಲಿ ಕಾಣುವ ಗುಣಗಳನ್ನು ಕೂಡ ದೋಷಗಳೆಂದೇ ತಿಳಿಯುವ ದೌರ್ಭಾಗ್ಯವದು. ಕೆಲವರಿಗೆ ಸಾಧುಗಳ ವಿಷಯಕ್ಕೆ ಸಂಶಯವುಂಟಾಗುತ್ತದೆ. ಅವರಿಗೆ ಸಾಧೂಪದೇಶದಿಂದ ತಮಗೂ ತಮ್ಮವರಿಗೂ ಎಲ್ಲಿ ವಿರಕ್ತಿ ಬರುವದೋ, ಎಲ್ಲಿ ವ್ಯವಹಾರವು ಕೆಟ್ಟುಹೋಗುವದೋ ಎಂಬ ಅಂಜಿಕೆಯಿರುತ್ತದೆ. ತತ್ತ್ವೋಪದೇಶದಿಂದ ಜನರಲ್ಲಿ ಆಲಸ್ಯವುಂಟಾಗುತ್ತದೆ ಎಂದು ಅವರ ಭಾವನೆಯಿರುತ್ತದೆ. "ಸಾಧುಗಳು ಅಹಂಕಾರಿಗಳು, ತಾವೇ ದೊಡ್ಡವರು ಎಂದುಕೊಂಡಿರುತ್ತಾರೆ; ಎಲ್ಲರಿಂದಲೂ

ನಮಸ್ಕಾರವನ್ನು ಸ್ವೀಕರಿಸುತ್ತಾರೆ, ತಮ್ಮ ಹೆಚ್ಚುಗಾರಿಕೆಯನ್ನೇ ಪ್ರದರ್ಶನಮಾಡುತ್ತಾರೆ. ತಾವು ಸರ್ವಜ್ಞರು ಎಂದು ಕೊಳ್ಳುತ್ತಾರೆ" ಎಂಬ ತಪ್ಪುತಿಳಿವಳಿಕೆಯೂ ಕೆಲವರಿಗೆ ಉಂಟು. ಇನ್ನು ಎಲ್ಲಾ ಸಾಧುಗಳಿಗೂ ಸಾಧುತ್ವವನ್ನು ಅನುಗ್ರಹಿಸಿರುವ ಭಗವಂತನಲ್ಲಿಯೇ ಇಂಥ ಅಸೂಯೆ ಇದ್ದುಬಿಟ್ಟರೆ ಗತಿಯೇನು? ಶ್ರೀಕೃಷ್ಣನು ಕೊನೆಯಲ್ಲಿ ಅರ್ಜುನನಿಗೆ 'ನನ್ನನ್ನು ಪೂಜೆಮಾಡು, ನನ್ನನ್ನು ನಮಸ್ಕರಿಸು' ಎಂದು ಮುಂತಾಗಿ ಆತ್ಮಪ್ರಶಂಸೆಮಾಡಿಕೊಂಡಿರುತ್ತಾನೆ; `ಅರ್ಜುನ, ನೀನು ನನ್ನ ಮಾತನ್ನು ಕೇಳದೆ ಇದ್ದರೆ ಕೆಟ್ಟುಹೋಗುವೆ' ಎಂದು ಬೆದರಿಕೆಹಾಕಿರುತ್ತಾನೆ ; ನನ್ನಲ್ಲಿ ಭಕ್ತಿಯಿಲ್ಲದವರು ಅಸುರರು ಎಂದು ಪರನಿಂದೆಮಾಡಿದ್ದಾನೆ!- ಎಂದು ಆ ಭಗವಂತನಲ್ಲಿಯೇ ದೋಷಾರೋಪಣೆಮಾಡುವದು ಎಂಥ ಪರಮಪಾಪದ ಫಲವಾಗಿರಬೇಕು! ಅಂಥವರಿಗೆ `ಭಗವಂತನನ್ನು ನಂಬಿರಿ, ಅದರಿಂದ ಸದ್ಗತಿಯಾಗುವದು' ಎಂದು ಉಪದೇಶಮಾಡಿದರೆ ಎಂದಿಗೆ ತಿಳಿದೀತು? ನಿಜವಾಗಿ ನೋಡಿದರೆ ಸಾಧುಗಳಾಗಲಿ ಸಾಧುಶರಣ್ಯನಾದ ಭಗವಂತನಾಗಲಿ ಯಾವ ಆತ್ಮಪ್ರಶಂಸೆಯನ್ನೂ ಮಾಡಿಕೊಂಡಿಲ್ಲ; ಅವರಿಗೆ ನಾನು ಎಂಬ ವ್ಯಕ್ತಿಗತಾಹಂಕಾರವೇ ಇರುವದಿಲ್ಲ. ಅವರು ಲೋಕವನ್ನೆಲ್ಲ ಸರ್ವಪ್ರೇಮದಿಂದ ಕಾಣುತ್ತಿರುತ್ತಾರೆ. ಭಗವಂತನಂತೂ ಎಲ್ಲರಿಗೂ ಆತ್ಮನಾಗಿರುತ್ತಾನೆ. ಹೀಗಿರುವಲ್ಲಿ ಅವನಲ್ಲಿ ಆತ್ಮಪ್ರಶಂಸೆ, ಪರನಿಂದೆ, ಕೀರ್ತಿಯ ಆಶೆ- ಮುಂತಾದ ದೋಷಗಳು ಹೇಗೆ ತಾನೆ ಇರುವದು ಸಾಧ್ಯ? ಗಂಡಹೆಂಡಿರು ಇಬ್ಬರೇ ಇರುವ ಮನೆಯಲ್ಲಿ ಚಿಕ್ಕಹುಡುಗನೊಬ್ಬನು ಇದ್ದರೆ, ಅವನಿಗೆ ಗುರುಹಿರಿಯರಲ್ಲಿ ಭಕ್ತಿಯನ್ನು ಉಪದೇಶಿಸುವದು ಹೇಗೆ? ತಾಯಿಯು `ನಿಮ್ಮ ತಂದೆಯವರಿಗೆ ನಮಸ್ಕಾರಮಾಡು, ಅದರಿಂದ ಶ್ರೇಯಸ್ಸಾಗುವದು' ಎಂದೂ, ತಂದೆಯು 'ನಿಮ್ಮ ತಾಯಿಯನ್ನು ದೇವರೆಂದು ಭಾವಿಸು. ಇದೇ ನಿನ್ನ ಕಲ್ಯಾಣಕ್ಕೆ ಸಾಧನವು' ಎಂದೂ ಉಪದೇಶಿಸುವದು ಆತ್ಮಶ್ಲಾಘನೆ, ಅಥವಾ ಆತ್ಮೀಯಶ್ಲಾಘನೆ ಎನ್ನಬಹುದೆ? ಇಂಥ ಉಪದೇಶವನ್ನು ಮಾಡದೆ ಇದ್ದರೆ ಆ ಹುಡುಗನಿಗೆ ಧರ್ಮದ ತತ್ತ್ವವು ತಿಳಿಯುವದಾದರೂ ಹೇಗೆ? ಭಗವಂತನು ಜಗತ್ತನ್ನು ಸೃಷ್ಟಿಮಾಡುತ್ತಲೇ ಬ್ರಹ್ಮಾದಿಗಳಿಗೆ ಧರ್ಮವನ್ನು ಉಪದೇಶಿಸಿರುತ್ತಾನೆ ; ಆತನ ಅನುಗ್ರಹದಿಂದ ಆ ಬ್ರಹ್ಮಾದಿಗಳೂ ತಾವು ಸೃಜಿಸಿದ ಪ್ರಜೆಗಳಿಗೂ ಧರ್ಮೋಪದೇಶವನ್ನು ಮಾಡಿರುತ್ತಾರೆ. ಹೀಗೆ ಸಂಪ್ರದಾಯಕ್ರಮಾಗತವಾಗಿಯೇ ನಮಗೆ ಶ್ರುತಿಸ್ಮೃತಿಗಳು ಬಂದಿರುತ್ತವೆ. ಆದ್ದರಿಂದ ಸರ್ವಲೋಕಗುರುವಾದ ವಾಸುದೇವನಲ್ಲಿ ಯಾವನು ಅಸೂಯಾಯುಕ್ತನಾಗಿರುವನೋ ಅವನಿಗೆ ಗೀತೋಪದೇಶವನ್ನು ಅರಿತು ಆನಂದವನ್ನು ಅನುಭವಿಸುವದಕ್ಕೆ ಯಾವದೋ ಒಂದು ದೊಡ್ಡ ಕಂಟಕವು ಅಡ್ಡಬಂದಿರುವದೆಂದು ತಿಳಿಯಬೇಕು.

ಲೋಕದಲ್ಲಿ ಜನರಿಗೆ ಅಧರ್ಮನಿಮಿತ್ತವಾಗಿಯೇ ಮಿಕ್ಕವರಲ್ಲಿ ದೋಷವು ಹೆಚ್ಚಾಗಿ ಕಾಣುವದು ; ಅಥವಾ ಗುಣಗಳಲ್ಲಿಯೂ ದೋಷಬುದ್ಧಿಯುಂಟಾಗುವದು. ಕೈಕೇಯಿಗೆ ಯಾವದೋ ಒಂದು ಚಿತ್ತದೋಷದ ನಿಮಿತ್ತದಿಂದ ಮಂಥರೆಯ ದುರ್ಬೋಧನೆಯು

ಪಥ್ಯವಾಗಿ ತೋರಿತು ; ದಶರಥನು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಏರ್ಪಡಿಸಿದ್ದು ತನ್ನ ಮಗನಿಗೆ ತೊಂದರೆಯನ್ನುಂಟುಮಾಡುವದಕ್ಕೆ ಎಂಬ ದುರ್ಬುದ್ಧಿ ಬಂತು. ಈ ಪ್ರತಿಬಂಧಕವನ್ನು ನಿವಾರಣೆಮಾಡುವದಕ್ಕಾಗಿ ಶ್ರೀರಾಮನಿಗೆ ವನವಾಸವನ್ನೂ ಭರತನಿಗೆ ಪಟ್ಟಾಭಿಷೇಕವನ್ನೂ ಮಾಡುವಂತೆ ದಶರಥನನ್ನು ವರದ್ವಯದ ವಾಗ್ದಾನವನ್ನು ನಿಮಿತ್ತಮಾಡಿಕೊಂಡು ಬಲಾತ್ಕರಿಸಿದಳು. ಆದರೇನು, ಆ ದೋಷಬುದ್ಧಿಯು ಕೊನೆಯವರೆಗೂ ಇತ್ತೆ? ಇಲ್ಲ. ಅವಳು ತಾನು ಮಾಡಿದ್ದು ತಪ್ಪೆಂದು ತಿಳಿದಕೂಡಲೇ ಎಚ್ಚೆತ್ತುಕೊಂಡಳು, ಕೊನೆಗೆ ಪಶ್ಚಾತ್ತಾಪದಿಂದ ದುಃಖಪಟ್ಟಳು. ಶ್ರೀರಾಮನಿಗೆ ಮತ್ತೆ ಪಟ್ಟಾಭಿಷೇಕವಾದಾಗ ಆಕೆಗೆ ಎಲ್ಲರಿಗಿಂತಲೂ ಹೆಚ್ಚಿನ ಸಂತೋಷವೇ ಆಗಿರಬೇಕಲ್ಲವೆ? ಹೀಗೆ ದೋಷದೃಷ್ಟಿ ಎಂಬುದು ಪಾಪದ ಫಲವಾದ್ದರಿಂದ ಯಾರಿಗಾದರೂ ಅಸೂಯೆ ಇದೆ-ಎಂದು ತೋರಿದರೆ ಅವರಲ್ಲಿ ಮರುಕವನ್ನು ತೋರಿಸಬೇಕು. ನಾವು . ಯಾರಲ್ಲಾದರೂ ಯಾವದಾದರೂ ದೋಷವನ್ನು ಕಂಡರೆ ಅದರಲ್ಲಿಯೂ ಗುಣಾಂಶವನ್ನು ಗ್ರಹಣಮಾಡುವದನ್ನು ಕಲಿಯಬೇಕು. ಲೋಕದಲ್ಲಿ ಯಾವದೊಂದು ಪದಾರ್ಥವೂ ನಿರ್ದೋಷವಲ್ಲ, ನಿರ್ಗುಣವಲ್ಲ; ಹೀಗಿರುವದರಿಂದ ದೋಷವನ್ನೇ ಆರಿಸುವದು ನಮ್ಮ ಚಿತ್ತದೋಷವನ್ನು ತೋರಿಸುತ್ತದೆ. ಹೀಗಿರುವಲ್ಲಿ ಕಲ್ಯಾಣಗುಣಗಳ ಗನಿಯೇ ಆಗಿರುವ ಭಗವಂತನಲ್ಲಿಯೇ ದೋಷವನ್ನು ಆರೋಪಿಸುವದು ಎಂಥ ಪಾಪದ ಫಲವು! ಭಗವಂತನು ಪಾಪಗಳನ್ನೇಕೆ ಸೃಷ್ಟಿಮಾಡಿದನು ? ಅಥವಾ ಪಾಪವನ್ನು ಮಾಡುವದಕ್ಕೇಕೆ ಅವಕಾಶವನ್ನು ಕೊಟ್ಟಿರುತ್ತಾನೆ?- ಎಂದು ಕೂಡ ಶಂಕಿಸುವ ಪಾಪಿಗಳು ಉಂಟು. ಅಂಥವರಿಗೆ ಅಂಧಂತಮಸ್ಸಲ್ಲದೆ ಬೇರೆ ಗತಿಯು ಕಾಣುವದಿಲ್ಲ. ಆದರೂ ದಯಾಘನನಾದ ಭಗವಂತನೇನೋ ಎಲ್ಲರಿಗೂ ದೋಷವನ್ನು ಬಿಟ್ಟು ಗುಣವನ್ನು ಸಂಪಾದಿಸಿಕೊಳ್ಳುವದಕ್ಕೆ ಅವಕಾಶವನ್ನು ಕಲ್ಪಿಸಿರುತ್ತಾನೆ. ಭಗವಂತನಲ್ಲಿಯೇ ದೋಷವನ್ನು ಕಲ್ಪಿಸುವವರು ಅಷ್ಟೊಂದು ಹೆಚ್ಚಿನ ಸಂಖ್ಯೆಯವರಿಲ್ಲ. ಅಂಥವರಿಗೆ ಎಂದಿಗೂ ತತ್ತ್ವಜ್ಞಾನವು ಹಿಡಿಯಲಾರದು.

ಈ ಸಂದರ್ಭದಲ್ಲಿ ಶ್ರೀಶಂಕರಭಗವತ್ಪಾದರವರು ಗೀತೋಪದೇಶಕ್ಕೆ ಯಾರು ಅಧಿಕಾರಿಗಳೆಂಬುದನ್ನು ಕುರಿತು ಬರೆದಿರುವದನ್ನು ಮನಸ್ಸಿಗೆ ತಂದುಕೊಳ್ಳುವದರಿಂದ ಪ್ರಯೋಜನವುಂಟು ; "ಮೇಧಾವಿಯಾದವನು, ತಪಸ್ವಿ-ಇವೆರಡರಲ್ಲಿ ಯಾವದಾದರೂ ಒಂದು ಗುಣವಿದ್ದರೂ ಆಗಬಹುದೆಂದು ದೊಡ್ಡವರು ಹೇಳಿರುತ್ತಾರಾದ್ದರಿಂದ ಶುಶ್ರೂಷಾಭಕ್ತಿಗಳಿಂದೊಡಗೂಡಿರುವ ತಪಸ್ವಿಗಾಗಲಿ ಅಥವಾ ಅವುಗಳಿಂದದೊಡಗೂಡಿದ ಮೇಧಾವಿಗಾಗಲಿ ಹೇಳಬಹುದು ; ಶುಶ್ರೂಷಾಭಕ್ತಿಗಳಿಲ್ಲದಿದ್ದರೆ ತಪಸ್ವಿಯಾಗಿದ್ದರೂ ಹೇಳಬಾರದು, ಮೇಧಾವಿಗೂ ಹೇಳಬಾರದು; ಗುರುಶುಶ್ರೂಷಾಭಕ್ತಿಯಿದ್ದರೂ ಹೇಳಬಹುದು; ಭಗವಂತನಲ್ಲಿ ಅಸೂಯೆಯಿರುವವನಿಗಂತೂ ಮಿಕ್ಕ ಯಾವ ಗುಣಗಳಿದ್ದರೂ ಹೇಳಬಾರದು." ಆಚಾರ್ಯರ ಅಭಿಪ್ರಾಯದಲ್ಲಿ ಅಸೂಯಾರಾಹಿತ್ಯವೆಂಬುದು ಎಲ್ಲಕ್ಕೂ ಮುಖ್ಯವಾದ

ಅಧಿಕಾರಗುಣವೆಂದು ಸ್ಪಷ್ಟವಾಗಿರುತ್ತದೆ. ಆದ್ದರಿಂದ ಗೀತಾರ್ಥವನ್ನು ಅರಿತುಕೊಳ್ಳುವದಕ್ಕೆ ಅಧಿಕಾರವನ್ನು ಸಂಪಾದಿಸಿಕೊಳ್ಳಬೇಕೆನ್ನುವವರು ಮೊಟ್ಟಮೊದಲು ಭಗವಂತನ ಗುಣಗಳನ್ನು ಎಡೆಬಿಡದೆ ಚಿಂತಿಸುವ ಸಾಧನವನ್ನು ಮಾಡಬೇಕು. ಆ ಸಾಧನದ ಬಲದಿಂದ ತಪಸ್ಸು, ಭಕ್ತಿ, ಗುರುಶುಶ್ರೂಷೆ-ಇವುಗಳು ಕ್ರಮಕ್ರಮವಾಗಿ ಅವರ ಅಂತಃಕರಣದಲ್ಲಿ ತೋರಿಕೊಳ್ಳುವವು.



## ೧೯೫. ಗೀತಾರ್ಥಪ್ರಚಾರದ ಪುಣ್ಯ 18 - (67-71)

(26-11-50)

ಭಗವಂತನು ಅರ್ಜುನನಿಗೆ ತಾನು ಮಾಡಬೇಕಾದ ಉಪದೇಶವನ್ನು ವಿಸ್ತಾರವಾಗಿ ಹೇಳಿ ಅದರ ಸಾರವನ್ನು ಈಶ್ವರಶರಣತ್ವ, ಸಮ್ಯಗ್ಜ್ಞಾನ- ಎಂಬ ಎರಡರಲ್ಲಿ ಸಂಗ್ರಹಿಸಿಕೊಟ್ಟಿರುತ್ತಾನೆ. ಬಳಿಕ ಈ ಗೀತಾರ್ಥವನ್ನು ಯಾರಿಗೆ ಉಪದೇಶಿಸಬೇಕು? ಯಾರಿಗೆ ಇದರ ಪರಮಪ್ರಯೋಜನವಾಗುವದು?- ಎಂಬುದನ್ನು ನಿಶ್ಚಯಿಸುವದಕ್ಕಾಗಿ ತಪಸ್ಸು, ಗುರುದೇವತಾಭಕ್ತಿ, ಗುರುಶುಶ್ರೂಷೆ-ಎಂಬ ಅಧಿಕಾರಗುಣಗಳಿರಬೇಕು; ಆದರೆ ಭಗವಂತನಲ್ಲಿ ಅಸೂಯೆಯು ಎಂದಿಗೂ ಇರಬಾರದು. ಇಂಥವರಿಗೆ ಈ ವಿಷಯವನ್ನು ಬೋಧಿಸಬೇಕು, ಇಂಥವರೇ ಇದರ ಲಾಭವನ್ನು ಪಡೆಯುವವರು ಎಂದು ಹೇಳಿರುತ್ತಾನೆ.

ಭಗವಂತನಲ್ಲಿ ಅಸೂಯೆಯಿರುವಾಗ ಯಾವ ಸುಖವೂ ದೊರಕುವದಿಲ್ಲ. ಅವರಿಗೆ ಇಹಲೋಕದ ವಿಚಾರಗಳಲ್ಲಿಯೇ ಸರಿಯಾದ ಪ್ರವೃತ್ತಿಯಾಗುವದಿಲ್ಲ, ಇನ್ನು ಇಂಥ ಪರಮಾರ್ಥವಿಚಾರವು ಹೇಗೆ ಮನಸ್ಸಿಗೆ ಅಂಟೀತು? ಶಿಶುಪಾಲನು ಹುಟ್ಟುವಾಗಲೇ ಶ್ರೀಕೃಷ್ಣನಿಂದ ಅವನಿಗೆ ಮರಣವಾಗುವದೆಂದು ತಿಳಿದುಬಂದದ್ದರಿಂದ ಅವನ ತಾಯಿ ಕೃಷ್ಣನ ಪಾದಗಳಿಗೆ ನಮಸ್ಕರಿಸಿ ಹೇಗಾದರೂ ತನ್ನ ಮಗನನ್ನು ಕಾಪಾಡಬೇಕೆಂದು ಬೇಡಿಕೊಂಡಳಂತೆ. ಆಗ ಕೃಷ್ಣನು ಒಳ್ಳೆಯದು, ಅವನು ನನ್ನ ವಿಷಯದಲ್ಲಿ ಇಂತಿಷ್ಟು ಅಪರಾಧಗಳನ್ನು ಮಾಡಿದರೂ ಕ್ಷಮಿಸಿಬಿಡುವೆನು-ಎಂದು ವಾಗ್ದಾನವಿತ್ತನಂತೆ. ಶಿಶುಪಾಲನಿಗೆ ತಂದೆತಾಯಿಗಳು ಈ ವಿಷಯದಲ್ಲಿ ಮೊದಲೇ ಎಚ್ಚರಿಕೆಕೊಟ್ಟಿರಬೇಕು ; ಆದರೇನು? ಅವನ ಅಸೂಯಾಗುಣವು ದಿನದಿನಕ್ಕೆ ಹೆಚ್ಚುತ್ತಾಬಂತು. ಕೃಷ್ಣನ ವಿಷಯಕ್ಕೆ ಅವನು ದ್ವೇಷಾಸೂಯೆಗಳನ್ನೇ ತೋರಿಸುತ್ತಾ ಬಂದನು. ಕೊನೆಗೆ ಮೀತಿಮೀರಿದ ಅಸೂಯೆಯ ಫಲವಾಗಿ ಅವನು ಶ್ರೀಕೃಷ್ಣನ ಚಕ್ರಕ್ಕೆ ಬಲಿಯಾದನು ಎಂಬುದನ್ನು ನೀವುಗಳೆಲ್ಲ ಪುರಾಣದಲ್ಲಿ ಕೇಳಿರುತ್ತೀರಿ. ಹಾಗಾದರೆ ಭಗವಂತನೂ ಕೋಪಪರವಶನೇನು? ಹಾಗಲ್ಲ. ಭಗವಂತನಲ್ಲಿ ಕಾಮವೂ ಕೋಪವೂ ಸಮಯದಲ್ಲಿ ಅವನ ವಶವಾಗಿಯೇ ಇದ್ದುಕೊಂಡು ಲೋಕಕಲ್ಯಾಣಕ್ಕಾಗಿ

ಹೊರತೋರಿಕೊಳ್ಳುತ್ತವೆ. ಅವು ಭಗವಂತನ ಕಾಮಕ್ರೋಧಗಳು ಎನ್ನುವದಕ್ಕಿಂತ ಭಗವಂತನ ಅನುಗ್ರಹವೇ ಎಂದರೂ ಸಲ್ಲುತ್ತದೆ. ಶಿಶುಪಾಲನ ವಧೆಯಿಂದ ಲೋಕಕ್ಕೆ ಒಳ್ಳೆಯದೇ ಆಯಿತು; ಶಿಶುಪಾಲನಿಗೂ ಸದ್ಗತಿಯೇ ಆಯಿತು. ಭಗವಂತನು ಇಡಿಯ ಜಗತ್ತನ್ನೇ ಪ್ರಲಯಕಾಲದಲ್ಲಿ ಸಂಹರಿಸಿದರೂ ಅವನಿಗೆ ಕೋಪಪರವಶತೆಯಿರುವದಿಲ್ಲ. ಪ್ರಾಣಿಗಳ ಕರ್ಮದ ಅಪೇಕ್ಷೆಯಿಂದ ಆತನ ಸಂಕಲ್ಪವು ಕಾಲಕ್ಕೆ ತಕ್ಕಂತೆ ಪ್ರವರ್ತಿಸುತ್ತಿರುತ್ತದೆ.

ಇದಿರಲಿ. ಭಗವಂತಲ್ಲಿ ಅಸೂಯೆಯನ್ನು ತೋರಿಸುವದೆಂಬುದು ನಮ್ಮ ಅಜ್ಞಾನದಿಂದ. ಮನುಷ್ಯನು ತಾನು ಮಾಡಿದ ತಪ್ಪನ್ನು ತಾನು ಒಪ್ಪಿಕೊಳ್ಳುವದಕ್ಕೆ ಸಿದ್ಧನಿರುವದಿಲ್ಲ; ಯಾರ ಮೇಲಾದರೂ ಆ ತಪ್ಪಿಗೆ ಕಾರಣವನ್ನು ಹೊರಿಸುತ್ತಾನೆ. ಕೊನೆಗೆ ದೇವರ ಮೇಲೆಯೇ ಎಲ್ಲಾ ದೋಷವನ್ನೂ ಆರೋಪಿಸುವದಕ್ಕೂ ಹಿಂಜರಿಯುವದಿಲ್ಲ. ಕೆಲವರು ಮೊದಲು ಆಸ್ತಿಕರಾಗಿದ್ದು ಕಾರಣಾಂತರದಿಂದ ನಾಸ್ತಿಕರಾಗುವರು. ಮತ್ತೆ ಕೆಲವರು ತಾವು ಮಾಡುವ ಪಾಪಕೃತ್ಯಗಳಿಗೆ ಅಡ್ಡಿಯಾಗುವನಲ್ಲ ಎಂದು ಈಶ್ವರನನ್ನು ದ್ವೇಷಿಸುವದುಂಟು. ಈಶ್ವರನೂ ಧರ್ಮವೂ ಲೌಕಿಕವ್ಯವಹಾರಕ್ಕೆ ಅಡಚಣೆ ಎಂದು ಹೇಗೋ ಅವರು ಕಲ್ಪಿಸಿಕೊಳ್ಳುತ್ತಾರೆ. `ದೇವರು ಸತ್ತನು' ಎಂಬ ಹೆಸರಿನಿಂದ ಒಬ್ಬ ಪಾಶ್ಚಾತ್ಯನು ಒಂದು ಗ್ರಂಥವನ್ನು ರಚಿಸಿದನಂತೆ! ಯಾರು ಅಸದ್ವರ್ತನೆಯಿಂದಿರುವರೋ ಅವರ ಪಾಲಿಗೆ ದೇವರು ಸತ್ತಂತೆಯೇ; ದೇವರ ಅಸ್ತಿತ್ವವೂ ನಾಸ್ತಿತ್ವವೂ ನಮ್ಮ ನಮ್ಮ ಮನಸ್ಸಿನ ಸ್ವಭಾವದಿಂದ ನಮನಮಗೆ ನಿಜವೆಂದು ತೋರುವವು. ನಾಸ್ತಿಕ್ಯವು ಪರದೇಶಗಳಲ್ಲಿ ಕಾರಣಾಂತರದಿಂದ ಹರಡಿದ್ದು ಈಗ ನಮ್ಮ ದೇಶದವರೆಗೂ ಹರಡುತ್ತಾ ಬಂದಿದೆ. ನಮ್ಮ ದೇಶದವರೂ ಈಗ ಈಶ್ವರನ ವಿಷಯಕ್ಕೆ ಔದಾಸೀನ್ಯನವನ್ನು ತೋರಿಸುತ್ತಿದ್ದಾರೆ. ಕ್ರಿಸ್ತಿಯನ್ ದೇಶಗಳಲ್ಲಿ ದೇವರ ಪ್ರಾರ್ಥನೆಗೆಂದು ಚರ್ಚುಗಳೆಂಬ ಮಂದಿರಗಳನ್ನು ಕಟ್ಟಿಕೊಂಡಿರುತ್ತಾರೆ; ಆದರೆ ಏಳು ದಿನಕ್ಕೊಮ್ಮೆ ಅಲ್ಲಿ ಸೇರುವ ಕೂಟಗಳಲ್ಲಿ ಮನುಷ್ಯರ ವ್ಯವಹಾರಕ್ಕೆ ಬೇಕಾದ ಮದುವೆ ಮುಂತಾದವುಗಳಿಗೆ ಸಾಧನಗಳನ್ನಾಗಿ ಆ ಮಂದಿರಗಳನ್ನು ತಿರುಗಿಸುವ ಯತ್ನವೂ ನಡೆದಿರುತ್ತದೆ. ನಮ್ಮ ದೇಶದಲ್ಲಿಯೂ ದೇವಸ್ಥಾನಗಳು ದೇವರ ಸ್ಥಾನಗಳೇ ಆಗಿವೆ ಎನ್ನುವದಕ್ಕೆ ಬರುವದಿಲ್ಲ. ಎಷ್ಟೋ ಜನರು ಧರ್ಮವನ್ನು ಬೋಧಿಸುವವರನ್ನು ದ್ವೇಷಿಸಹತ್ತಿದ್ದಾರೆ; ತಮ್ಮ ಸ್ವೇಚ್ಛಾವರ್ತನೆಗೆ ಅವರು ಅಡ್ಡಿ ಬರುವರಲ್ಲ!-ಎಂಬುದೇ ಅವರ ಈ ದ್ವೇಷಕ್ಕೆ ಕಾರಣ. ಹೀಗೆ ಧರ್ಮದ್ವೇಷ, ಭಗವದ್ದ್ವೇಷ, ಅಸೂಯೆ , ಅಥವಾ ಔದಾಸೀನ್ಯ-ಇವುಗಳಿಂದ ಪರಿಪೂರಿತರಾಗಿರುವವರಿಗೆ ಯಾರಿಗೂ ಭಗವದ್ಗೀತೆಯು ರುಚಿಸುವದಿಲ್ಲ; ಅಥವಾ ಅವರು ಇದನ್ನು ಶ್ರವಣಮಾಡಿದರೂ ಇದರಿಂದ ಆಗಬೇಕಾದ ಫಲವನ್ನು ಪಡೆಯಲಾರರು. ಆದ್ದರಿಂದ ಇಂಥವರಿಗೆ ಖಂಡಿತವಾಗಿ ಈ ಧರ್ಮವನ್ನು ಉಪದೇಶಿಸದಿರು-ಎಂದು ಭಗವಂತನು ಅರ್ಜುನನಿಗೆ ಎಚ್ಚರಿಕೆ ಕೊಟ್ಟಿರುತ್ತಾನೆ.

ಹಾಗಾದರೆ ಗೀತೆಯಲ್ಲಿ ಉದಾಸೀನರಾಗಿರುವವರೇ ಹೆಚ್ಚಾಗಿರುವ ಈ ಕಾಲದಲ್ಲಿ ಗೀತೋಪನ್ಯಾಸಗಳನ್ನು ಮಾಡುವದೇಕೆ?- ಎಂದು ನೀವು ಕೇಳಬಹುದು. ಭಗವಂತನಲ್ಲಿ ನೇರಾಗಿ ಅಸೂಯೆಯೇ ಇರುವವರನ್ನು ಮುಂದುಮಾಡಿಕೊಂಡು ಗೀತೆಯನ್ನು ಕುರಿತು ಏನು ಹೇಳಿದರೂ ವ್ಯರ್ಥ; ಆದ್ದರಿಂದ ಅವರಿಗೆ ಹೇಳಬಾರದು ಎಂಬುದು ನಿಜವೇ. ಆದರೆ ಈ ದೇಶದಲ್ಲಿ ಈಗ್ಗೆ ಕಾಣುವ ನಾಸ್ತಿಕ್ಯವು ಭಗವಂತನಲ್ಲಿರುವ ಅಸೂಯೆಯಿಂದ ಬಂದದ್ದಲ್ಲ; ಅದು ಕಾಲಕೃತವಾದದ್ದು. ನಮ್ಮ ದೇಶದಲ್ಲಿ ಯಾರೊಬ್ಬರೂ ನಿಜವಾಗಿ ನಾಸ್ತಿಕರಾಗಿರುವದು ಸಾಧ್ಯವೇ ಇಲ್ಲ. ಆದರೂ ಈ ಕಾಲಕ್ಕೆ ಕೆಲವರ ಬಾಯಲ್ಲಿ ಅಧರ್ಮದ ಅಥವಾ ನಾಸ್ತಿಕ್ಯದ ಮಾತುಗಳು ಬರುವದಕ್ಕೆ ಕಾರಣಾಂತರವಿದೆ. ರಾಮಾಯಣದಲ್ಲಿ ಶ್ರೀರಾಮನನ್ನು ಅರಣ್ಯವಾಸದಿಂದ ಹೇಗಾದರೂ ಮಾಡಿ ಹಿಂತಿರುಗಿಸಬೇಕು ಎಂಬ ಉದ್ದೇಶದಿಂದ ಅನೇಕರು ಅವನಲ್ಲಿಗೆ ಬಂದರಷ್ಟೆ. ಅವರಲ್ಲಿ ಜಾಬಾಲಿ ಎಂಬ ಬ್ರಾಹ್ಮಣನು ರಾಮನನ್ನು ಕುರಿತು "ದಶರಥನು ಸ್ತ್ರೀಪರವಶನಾಗಿ ಮಾಡಿದ ಈ ವರದಾನವು ನಿನ್ನನ್ನು ಬಂಧಿಸಲಾರದು; ನೀನು ಪಿತೃಪೈತಾಮಹಕ್ರಮದಿಂದ ಬಂದಿರುವ ಈ ರಾಜ್ಯಕ್ಕೆ ಹಕ್ಕುದಾರನಾದ್ದರಿಂದ ಆ ರಾಜನನ್ನು ನಿಗ್ರಹಿಸಿ ರಾಜ್ಯವನ್ನು ಆಳುವದೇ ಸರಿಯಾದದ್ದು! ಈ ಕಾಲದಲ್ಲಿ ಧರ್ಮದ ಮಾತುಗಳನ್ನು ಆಡಿ ಪ್ರಯೋಜನವಿಲ್ಲ" ಎಂದು ಮುಂತಾಗಿ ಅರ್ಥಪ್ರಧಾನವಾದ ಮಾತುಗಳನ್ನೇ ಆಡಿದನು. ಅದಕ್ಕೆ ಪ್ರತಿಯಾಗಿ ರಾಮನು ಕೋಪದಿಂದ "ಅಹಾ! ಧರ್ಮಾತ್ಮನಾದ ದಶರಥನ ರಾಜ್ಯದಲ್ಲಿ ಇಂಥ ನಾಸ್ತಿಕ್ಯಕ್ಕೂ ಅವಕಾಶವು ಸಿಕ್ಕಿತಲ್ಲ! ಇದೊಂದೇ ಶೋಚನೀಯವಾದದ್ದು...." ಎಂದು ಮುಂತಾಗಿ ಬಿರುನುಡಿಗಳನ್ನಾಡಿದನು. ಆಗ ವಸಿಷ್ಠರು "ರಾಮನೆ, ಜಾಬಾಲಿಯು ನಿಜವಾಗಿ ನಾಸ್ತಿಕನಲ್ಲ; ಆತನಿಗೂ ಧರ್ಮದ ಸ್ವರೂಪವು ತಿಳಿದಿದೆ. ಆದರೆ ಈಗ ಸಮಯಾನುಸಾರವಾಗಿ ಆತನು ನಾಸ್ತಿಕನಾಗಿರುತ್ತಾನೆ, ಮುಂದೆ ಸಮಯಾನುಸಾರ ಆಸ್ತಿಕ್ಯವನ್ನು ಪ್ರಕಟಿಸುವನು" ಎಂದು ರಾಮನನ್ನು ಸಮಾಧಾನಗೊಳಿಸಿರುವದನ್ನು ನಾವು ನೆನಪಿಗೆ ತಂದುಕೊಳ್ಳಬೇಕು. ಈಗಿನ ಕೆಲವರು ಜನರು ಹೊಟ್ಟೆಗಿಲ್ಲದೆ ಕಾಲಪ್ರವಾಹಕ್ಕೆ ಸಿಕ್ಕಿ ಅಧರ್ಮದ ಮಾತುಗಳನ್ನಾಡುತ್ತಿರಬಹುದು. ಧರ್ಮದಲ್ಲಿ ಔದಾಸೀನ್ಯವನ್ನು ತೋರಿಸುತ್ತಲೂ ಇರಬಹುದು. ಆದರೆ ಅವರ ರಕ್ತದಲ್ಲಿ ಧರ್ಮದ ಜೀವಾಳವಿಲ್ಲವೇ ಇಲ್ಲವೆಂದು ಹೇಳುವದಕ್ಕಾಗುವದಿಲ್ಲ. ಸರಿಯಾಗಿ ತತ್ತ್ವವನ್ನು ಉಪದೇಶಿಸಿ ಅಂಥವರನ್ನು ಸನ್ಮಾರ್ಗಕ್ಕೆ ತಿರುಗಿಸಬಹುದು. ವಿವೇಕಾನಂದಸ್ವಾಮಿಗಳು ನಮ್ಮ ದೇಶದವರಿಗೇ ಅಲ್ಲದೆ ಧನಪ್ರಧಾನರಾದ ಪರದೇಶದವರಿಗೆ ಕೂಡ ವೇದಾಂತಾರ್ಥವನ್ನು ಉಪದೇಶಿಸಿದರು; ಆಗ ಅವರು ಕೂಡ ಬೆರಗಾಗಿ ಎಷ್ಟೋ ಜನರು ನಾಸ್ತಿಕ್ಯವನ್ನು ಬಿಟ್ಟರೆಂದು ತಿಳಿಯಬಂದಿದೆ. ಹೀಗಿರುವದರಿಂದ ಈಗಲೂ ಗೀತಾಪ್ರಚಾರವನ್ನು ಜನರಲ್ಲಿ ಮಾಡುವದು ವ್ಯರ್ಥವಲ್ಲ. ಅಂಥವರಿಗೆ ಕೂಡಲೆ ವಿಷಯವು ರುಚಿಸದೆಹೋಗಬಹುದು ; ಕಾಲಾನುಕಾಲಕ್ಕಾದರೂ ಅದು ಸಫಲವಾಗಿಯೇ ತೀರುವದು. ಸದ್ಯಕ್ಕೆ ಹೇಳಿದವರಿಗಂತೂ ಸಾತ್ತ್ವಿಕ ವಿಚಾರಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಬಾಯಲ್ಲಿಯೂ ಆಡಿದ ಲಾಭವಿದ್ದೇ ಇದೆ. ಅಧಿಕಾರಿಗಳಲ್ಲದವರಿಗೆ ಹೇಳಿದರೆ ಬೇಗ ತಿಳಿಯಲಾರದು ಎಂಬುದೇ ಇಲ್ಲಿ ಭಗವಂತನ ಉಕ್ತಿಗೆ ಅಭಿಪ್ರಾಯ.

ಆದರೆ ಅಧಿಕಾರಿಗಳಾದವರಿಗೇ ಅದರಲ್ಲಿಯೂ ಗುರುದೇವತಾಭಕ್ತಿಯುತರಾದ ಜನರಿಗೇ ಈ ಗೀತೆಯ ವಿಷಯವನ್ನು ತಿಳಿಸಿದರೆ ಮಹಾಪುಣ್ಯವುಂಟು. ಭಕ್ತರಿಗೆ ಭಗವಂತನ ವಿಚಾರವೆಂದರೇ ಆನಂದ; ಅವರಿಗೆ ಜ್ಞಾನಿಗಳೇ ಹೇಳಬೇಕೆಂಬ ನಿಯಮವಿಲ್ಲ. ಸಾಮಾನ್ಯರು ಈ ವಿಷಯವನ್ನು ಪ್ರಸ್ತಾಪಿಸಿದರೂ ಅವರು ಆನಂದದಿಂದ ಕೇಳುತ್ತಾರೆ. ಆದ್ದರಿಂದ ಭಗವಂತನು ಹೇಳುತ್ತಾನೇನೆಂದರೆ:

**ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ 18-68**

"ಈ ಪರಮಗುಹ್ಯವಾದ ಅರ್ಥವನ್ನು ಯಾವನು ನನ್ನ ಭಕ್ತರಲ್ಲಿ ಹೇಳುವನೋ ಅವನು ಪರಭಕ್ತಿಯನ್ನು ಮಾಡಿದವನಾಗುತ್ತಾನೆ ; ಆದ್ದರಿಂದ ಅವನು ನನ್ನನ್ನೇ ಹೊಂದುವನು. ಇದರಲ್ಲಿ ಸಂಶಯವಿಲ್ಲ" ಗೀತಾರ್ಥಪ್ರಚಾರದ ಮಹಿಮೆಯನ್ನು ಈ ವಾಕ್ಯದಿಂದ ತಿಳಿದುಕೊಳ್ಳಬೇಕು. ಬೀಜವು ಸುಮಾರಾದರೂ ಕ್ಷೇತ್ರದ ಮಹಿಮೆಯಿಂದ ಹುಲುಸಾಗಿ ಫಲವಾಗುವಂತೆ ಸಾಮಾನ್ಯರು ಹೇಳಿದರೂ ಶ್ರೋತೃಗಳು ಭಕ್ತರಾಗಿದ್ದರೆ ಸಾಕು, ಅದರಿಂದ ಕೇಳಿದವರಿಗೆ ಆನಂದವಾಗುವದೆಂಬುದಿಷ್ಟೇ ಅಲ್ಲ; ಹೇಳಿದವನಿಗೂ ಭಗವಂತನಲ್ಲಿ ಭಕ್ತಿಯು ಹೆಚ್ಚಿ ಅವನಿಗೆ ಪರಭಕ್ತಿರೂಪವಾದ ಜ್ಞಾನನಿಷ್ಠೆಯೇ ದೊರಕಿಬಿಡುತ್ತದೆ. ಭಕ್ತರ ಗೋಷ್ಠಿಯಲ್ಲಿ ಭಗವದ್ವಿಚಾರವನ್ನು ಕುರಿತು ಮಾತನಾಡುವದೆಂಬುದೊಂದು ಮಹಾಪುಣ್ಯಕರವಾದ ಅವಕಾಶವು. ನಿಜವಾಗಿ ಭಕ್ತರೇ ಆದವರು ಹೇಳುವದು, ಭಕ್ತರೇ ಆದವರು ಕೇಳುವದು- ಅಂಥ ಸಭೆಯು ಆನಂದಧಾಮವೇ ಆಗಿರುವದೆಂಬುದರಲ್ಲಿ ಸಂಶಯವೇನು? ಭಗವಂತನ ತತ್ತ್ವವನ್ನು ಕೇಳಿದವರಿಗೆ ಮಾತ್ರವೇ ಅಲ್ಲ, ಹೇಳಿದವರಿಗೂ ಭಗವಂತನೇ ಗತಿ.

ಹೇಳಿದವರಿಗೂ ಕೇಳಿದವರಿಗೂ ಫಲವುಂಟೆಂದು ಧಾರ್ಮಿಕಗ್ರಂಥಗಳ ಕೊನೆಯಲ್ಲಿ ತಪ್ಪದೆ ಬರೆದಿರುತ್ತದೆ. ಪೂರ್ವಕಾಲದಲ್ಲಿ ಯಾತ್ರಿಕರು, ಪುರಾಣಿಕರು, ಭಿಕ್ಷುಕರು-ಇಂಥವರ ಮೂಲಕವಾಗಿಯೂ ಧರ್ಮದ ಪ್ರಚಾರವಾಗುತ್ತಿತ್ತು. ಆದ್ದರಿಂದ ಜನರಿಗೆ ಓದುಬರಹವು ಬರಲಿ- ಬಾರದಿರಲಿ, ಧರ್ಮದ ಮಾತುಗಳು ಅನೇಕ ರೀತಿಯಿಂದ ಕಿವಿಗೆ ಬೀಳುವದಕ್ಕೆ ಅನುಕೂಲ್ಯವಿತ್ತು. ಈಗ ಮತ್ತೆ ಅದನ್ನು ನಾವು ಉಜ್ಜೀವನಗೊಳಿಸಬೇಕು. ಆಗಿನ ಕಾಲಕ್ಕೆ ರೈಲು ಮುಂತಾದ ಪ್ರಯಾಣಸೌಕರ್ಯಗಳೂ, ಅಚ್ಚಿನಯಂತ್ರಗಳೂ ಇಲ್ಲದ್ದರಿಂದ ಒಬ್ಬರಿಂದೊಬ್ಬರಿಗೆ ವಿಷಯುಗಳು ತಿಳಿಯುವದು ಕಷ್ಟವಾಗಿತ್ತು; ಆದ್ದರಿಂದ ಗ್ರಂಥಪ್ರಚಾರಕ್ಕಾಗಿ ಹೀಗೆ ಗ್ರಂಥಗಳ ಕೊನೆಯಲ್ಲಿ ಬರೆದಿರುತ್ತದೆ- ಎಂದು ಕೆಲವರಿಗೆ ಎನ್ನಿಸಬಹುದು. ಕೇವಲ ಪುಸ್ತಕಗಳ ಸಂಖ್ಯೆಯನ್ನು ಹೆಚ್ಚಿಸಬೇಕೆಂಬ ಉದ್ದೇಶವಿರುವವರ ಅಭಿಪ್ರಾಯದಲ್ಲಿ ಹೀಗೆಯೇ ಸರಿ. ಆದರೆ ಪರೀಕ್ಷಿಸಿ ಇನ್ನಷ್ಟು ಆಳವಾಗಿ ಇಳಿದು ವಿಷಯವನ್ನು ನೋಡಿದರೆ ಈ ಫಲಸ್ತುತಿಯ ವಿಶೇಷವು ಕಂಡುಬರುತ್ತದೆ. ಭಗವದ್ಗ್ರಂಥವನ್ನು ಮತ್ತೆ ಮತ್ತೆ ಓದುವದು, ಭಗವದ್ವಿಚಾರವಾಗಿ ಬರೆಯುವದು, ಮತ್ತೊಬ್ಬರಿಗೆ ಹೇಳುವದು,

ಮತ್ತೊಬ್ಬರಿಂದ ಕೇಳುವದು-ಈ ಪದ್ಧತಿಯು ಒಂದು ದೊಡ್ಡಸಾಧನವೆನಿಸುವದು. ಇದು ಮನಸ್ಸಿನಲ್ಲಿ ಮತ್ತೆ ಮತ್ತೆ ಭಗವಂತನ ಸ್ಮರಣೆಯೇ ಬಂದು ನಮ್ಮನ್ನು ವಿಷಯವಿಚಾರದ ಕೆಸರಿನಿಂದ ಮೇಲಕ್ಕೆತ್ತುವದು ; ಭಗವದ್ವಿಚಾರದ ಉತ್ತಮಭಾವಗಳು ನಮ್ಮ ಅಂತಃಕರಣದಲ್ಲಿ ಪ್ರಬಲವಾಗುವವು. ಅಶುಭವಾಸನೆಗಳು ತೊಲಗಿ ಶುಭವಾಸನೆಗಳು ಎದ್ದುಕೊಂಡವೆಂದರೆ ಸನ್ಮಾರ್ಗದಲ್ಲಿ ಅರ್ಧ ನಡೆದಂತೆ ಆಯಿತು. ಈಗಿನ ಕಾಲಕ್ಕೆ ಜನರಿಗೆ ಮತ್ತೊಬ್ಬರ ವಿಷಯದ ಸುದ್ದಿಗಳನ್ನು ಸುಮ್ಮನೆ ಪ್ರಚಾರಮಾಡುವ ಅಭ್ಯಾಸವು ಹೆಚ್ಚುತ್ತಿದೆ; ಮತ್ತೊಬ್ಬರ ತಪ್ಪನ್ನು ಎಣಿಸುವದು, ನಿಜವಾಗಿ ದೋಷವಿಲ್ಲದಿದ್ದರೂ ಕಲ್ಪಿಸಿ ಜನರಲ್ಲಿ ಪ್ರಚಾರಮಾಡುವದು-ಈ ದುರಭ್ಯಾಸವು ಹೆಚ್ಚಾಗುತ್ತಿದೆ. ಬಾಯಲ್ಲಿ ಮಾತನಾಡಿ ತೃಪ್ತಿಯಾಗದೆ ಎಲ್ಲಾ ಕಡೆಗೂ ಬೇಗನೆ ಹರಡಲಿ ಎಂಬ ಉದ್ದೇಶದಿಂದ ಬಿರುಸಾದ ನುಡಿಗಳಿಂದ ಮತ್ತೊಬ್ಬರ ದೋಷಗಳನ್ನು ನೇತ್ರಾಕರ್ಷಕವಾಗುವ ರೀತಿಯಲ್ಲಿ ವೃತ್ತಾಂತಪತ್ರಿಕೆಗಳಲ್ಲಿ ಹಾಕುವ ಹವ್ಯಾಸವೂ ಜನರಲ್ಲಿ ಹೆಚ್ಚುತ್ತಿದೆ. ಈ ದೋಷಾರೋಪಣೆಯಿಂದಲೂ ಪೈಶುನ್ಯದಿಂದಲೂ ಅಜ್ಞಾನವೂ ಮೋಹವೂ ಹೆಚ್ಚಿ ಅಧೋಗತಿಗೇ ದಾರಿಯಾಗುವದೊಂದಲ್ಲದೆ ಮತ್ತೆ ಯಾವ ಪ್ರಯೋಜನವೂ ಕಾಣಿಸುವದಿಲ್ಲ. ಆದರೆ ಇದೇ ರೀತಿಯಿಂದ ಭಗವಂತನ ವಿಷಯವನ್ನು ಪ್ರಚಾರಮಾಡಿದರೆ ಎಂಥ ಶುಭ ಪರಿಣಾಮವಾದೀತು! ಜನರು ಕೇಳಲಿ ಬಿಡಲಿ, ಹೇಳಿದವನಿಗಂತೂ ಪುಣ್ಯವಿದ್ದೇ ಇದೆ. ಆದರೆ ಸದ್ವಿಚಾರವನ್ನು ಮತ್ತೆ ಮತ್ತೆ ಹೇಳುವದು ಎಂದಿಗೂ ವ್ಯರ್ಥವಾಗಲಾರದು. ಒಂದಲ್ಲ ಒಂದು ಕಾಲದಲ್ಲಿ ಜನರ ಮೇಲೆ ಒಳ್ಳೆಯ ಪರಿಣಾಮವಾಗಿಯೇತೀರುತ್ತದೆ, ಮಿಕ್ಕವರು ತನ್ನನ್ನು ನಿಂದಿಸಲಿ, ಹಾಸ್ಯಮಾಡಲಿ, ಸರ್ವರಿಗೂ ತಂದೆಯಾಗಿರುವ ನಿಷ್ಪಕ್ಷಪಾತಿಯಾದ ಭಗವಂತನು ಈ ಪ್ರಚಾರದಿಂದ ತೃಪ್ತನಾಗುವದು ಖಂಡಿತ. ಆದ್ದರಿಂದ ಭಗವಂತನು ಗೀತೆಯ ಅಭಿಪ್ರಾಯವನ್ನು ನನ್ನ ಭಕ್ತರಲ್ಲಿ ಹೇಳಿದವನು ನನಗೆ ಪರಭಕ್ತನು, ಅವನಿಗಿಂತ ನನಗೆ ಪ್ರಿಯತಮನಾದವನು ಮತ್ತೆ ಯಾರೂ ಈಗ ಇರುವದಿಲ್ಲ, ಮುಂದೆಯೂ ಉಂಟಾಗುವ ಸಂಭವವಿಲ್ಲ- ಎಂದು ಗೀತಾರ್ಥಪ್ರಚಾರಕನನ್ನು ಬಾಯಿತುಂಬ ಹೊಗಳಿರುತ್ತಾನೆ.

ಇದಿಷ್ಟು ಭಕ್ತರಿಗೆ ಗೀತೆಯ ಅಭಿಪ್ರಾಯವನ್ನು ಹೇಳಿದ್ದರ ಫಲವಾಯಿತು. ಇನ್ನು ಯಾರು ಗೀತೆಯನ್ನು ಶ್ರದ್ಧೆಯಿಂದ ಪಠಿಸುವರೋ ಅವರಿಗೆ ಈ ಫಲವು:

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ |**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ || 18-70**

ಅಧ್ಯಯನಶಬ್ದಕ್ಕೆ ಸುಮ್ಮನೆ ಓದುವದು ಎಂಬುದಿಷ್ಟೇ ಅರ್ಥವಲ್ಲ; ಅದರಲ್ಲಿ ವಿಷಯವನ್ನು ಸ್ಮರಿಸಿಕೊಳ್ಳುವದೂ ಸೇರಿರುತ್ತದೆ. ಗೀತೆಯನ್ನು ಓದುತ್ತಾ ಗೀತಾರ್ಥವನ್ನು ಯಾವನು ಸ್ಮರಿಸಿಕೊಳ್ಳುವನೋ ಅವನಿಗೆ ಜ್ಞಾನಯಜ್ಞವನ್ನು ಮಾಡಿದ ಫಲವು ಬರುತ್ತದೆ.

"ಇದೊಂದು ಧರ್ಮ್ಯವಾದ ಸಂವಾದವು, ಭಗವಂತನಾದ ಶ್ರೀ ಕೃಷ್ಣನಿಗೂ ಅರ್ಜುನನಿಗೂ ನಡೆದ ಸಂವಾದವಿದು" ಎಂಬ ಭಾವನೆಯಿಂದ ನಾವೇ ಅರ್ಜುನನ ಸ್ಥಾನದಲ್ಲಿದ್ದುಕೊಂಡು ಗೀತೆಯನ್ನು ಶ್ರದ್ಧಾಪೂರ್ವಕವಾಗಿ ಅರ್ಥಾನುಸಂಧಾನವನ್ನು ಮಾಡುತ್ತಾ ಓದಬೇಕು. ಆಗ ಗೀತಾಪಠನದ ಫಲವು ನಮಗೆ ದೊರಕುತ್ತದೆ. ಅರ್ಜುನನಿಗೆ ಗೀತೆಯ ಉಪದೇಶವಾದ ಸಮಯವನ್ನು ಸ್ಮರಿಸಿಕೊಳ್ಳಿರಿ, ಆಗ ಕೌರವಪಾಂಡವರ ಸೇನೆಗಳು ಯುದ್ಧಕ್ಕೆ ಸನ್ನದ್ಧವಾಗಿದ್ದವು. ಪ್ರತಿಯೊಬ್ಬನ ಮನಸ್ಸಿನಲ್ಲಿಯೂ ಯುದ್ಧದ ಭಾವನೆಯೇ ತುಂಬಿತುಳುಕಾಡುತ್ತಿತ್ತು. ಆದರೆ ಅರ್ಜುನನಿಗೊಬ್ಬನಿಗೆ ಮಾತ್ರ "ಅಯ್ಯೊ, ಇಷ್ಟೊಂದು ಜನವು ಯುದ್ಧದಲ್ಲಿ ಮಡಿಯುತ್ತದೆಯಲ್ಲ ! ಬಂಧುಬಾಂಧವರೆಲ್ಲರೂ ನಾಶವಾಗುವ ಯುದ್ಧದಿಂದ ಯಾರಿಗೆತಾನೆ ಏನು ಪ್ರಯೋಜನ? ಇದೆಲ್ಲ ಇರಲಿ. ಶೂರಧೀರನೆಂದು ಪ್ರಖ್ಯಾತಿ ಪಡೆದ ನಾನು ಇಷ್ಟೊಂದು ಜನರನ್ನು ಕೊಲ್ಲುವದಕ್ಕೆ ಸಿದ್ಧನಾಗಿರುತ್ತೇನಲ್ಲ! ಇದೇನು ಪಾಪವೊ, ಪುಣ್ಯವೊ? ನಾನು ಈಗ ನಿಜವಾದ ಧರ್ಮವನ್ನು ಅರಿತುಕೊಳ್ಳಬೇಕು" ಎಂಬ ಯೋಚನೆಯು ಮನಸ್ಸಿನಲ್ಲಿ ಮೂಡಿತು. ಈಗ ಗೀತೆಯನ್ನು ಪಠಿಸುವಾಗ ನಮಗೂ ಹೀಗೆಯೇ ವಿಚಾರಧಾರೆಯು ಎದ್ದುಕೊಳ್ಳಬೇಕು. "ಆಹಾ! ಗೀತೆಯನ್ನು ಓದುವವರು ಎಷ್ಟುಜನರಿಲ್ಲ! ಆದರೆ ಗೀತಾಪಾಠಿಗಳಾದ ನಾವು ಮಾಡುತ್ತಿರುವ ವ್ಯವಹಾರವು ಪಾಪಕರವೊ, ಪುಣ್ಯಕರವೊ? ಇನ್ನು ಕೆಲವು ವರ್ಷಗಳೊಳಗಾಗಿ ನಾವೆಲ್ಲರೂ ಕಾಲಪುರುಷನ ದವಡೆಗೆ ಸಿಕ್ಕಿ ಚೂರುಚೂರಾಗುವೆವಲ್ಲ! ಅಷ್ಟರೊಳಗೆ ತತ್ತ್ವವನ್ನು ತಿಳಿದುಕೊಂಡು ಪಾರಾಗಬೇಡವೆ? ಭಗವಂತನು ಅರ್ಜುನನಿಗೆ ಮಾಡಿದ ಧರ್ಮ್ಯವಾದ ಉಪದೇಶವನ್ನು ಓದುತ್ತಲೇ ಇದ್ದು ಅಧರ್ಮಕ್ಕೆ ಬೀಳಬಹುದೆ? ಗೀತೆಯಲ್ಲಿ ಉಪದೇಶಿಸಿರುವ ಕರ್ಮಯೋಗ ಜ್ಞಾನಯೋಗಗಳ ಮರ್ಮವನ್ನು ಒಂದಿಷ್ಟಾದರೂ ತಿಳಿದುಕೊಳ್ಳಬೇಡವೆ? ನಮಗೆ ಯಾವಾಗ ಯಾವ ಮಹಾತ್ಮರು ಈ ತತ್ತ್ವವನ್ನು ಹೇಳಿಕೊಟ್ಟಾರು? ಅರ್ಜುನನಿಗೆ ವಿಷಾದವು ಹೆಚ್ಚಾದ ಕಾಲದಲ್ಲಿ ಸಹಾಯಮಾಡಿದ ಭಗವಂತನು ಈಗಲೂ ಇರುವನಲ್ಲವೆ? ಅವನನ್ನೇಕೆ ಶರಣುಹೋಗಬಾರದು? ಭಗವಂತ, ನೀನೇ ನಿನ್ನ ಉಪದೇಶದ ಸಾರವು ನನ್ನ ಮನಸ್ಸಿಗೆ ಹಿಡಿಯುವಂತೆ ಮಾಡಬೇಕು. ನೀನೇ ನನಗೆ ಮಾರ್ಗದರ್ಶಕನಾಗಬೇಕು!" ಎಂದು ಪ್ರಾರ್ಥಿಸಿಕೊಂಡು ಗೀತಾಪುಸ್ತಕದಲ್ಲಿ ಆ ಭಗವಂತನೇ ಸಂನಿಹಿತನಾಗಿರುವನೆಂಬ ಭಾವನೆಯಿಂದ ಓದಬೇಕು. ಆಗ ನಮಗೆ ಜ್ಞಾನಯಜ್ಞದಿಂದ ಭಗವಂತನನ್ನು ಪೂಜಿಸಿದ ಫಲವು ದೊರಕುವದು. ವಿಧಿಯಜ್ಞ, ಜಪ ಯಜ್ಞ, ಉಪಾಂಶುಯಜ್ಞ, ಮಾನಸಯಜ್ಞ- ಎಂಬ ನಾಲ್ಕು ವಿಧವಾದ ಯಜ್ಞಗಳಲ್ಲಿ ಮಾನಸವಾದ ಯಜ್ಞವನ್ನು ಮಾಡಿದ ಫಲವು ಬರುತ್ತದೆ.

ಇನ್ನು ಗೀತೆಯನ್ನು ಕೇಳಿದವರಿಗೊ, ಎಂದರೆ -

ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।

**ಸೋಽಪಿ ಮುಕ್ತಃ ಶುಭಾಲ್ಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮಣಾಮ್॥ 18-71**

ಯಾವನು ಶ್ರದ್ಧೆಯಿಂದೊಡಗೂಡಿ ಭಗವಂತನಲ್ಲಿ ಅಸೂಯೆಯಿಲ್ಲದೆ ಈ ಸಂವಾದವನ್ನು ಶ್ರವಣಮಾಡುತ್ತಾನೋ, ಸುಮ್ಮನೆ ಅರ್ಥಜ್ಞಾನವಾಗದೆ ಇದನ್ನು ಕೇಳಿದರೂ ಸಾಕು, ಪಾಪಗಳಿಂದ ಮುಕ್ತನಾಗಿ ಪುಣ್ಯವನ್ನು ಮಾಡಿದವರಿಗೆ ಸಿಕ್ಕುವ ಪರಲೋಕವನ್ನು ಹೊಂದುತ್ತಾನೆ. ಇನ್ನು ಅರ್ಥವನ್ನು ತಿಳಿದುಕೊಂಡು ಕೇಳುವವರಿಗೆ ಎಂಥ ಹೆಚ್ಚಿನ ಫಲವಾಗಬೇಕಾಯಿತು ! ಅವರ ಮನಸ್ಸಿನಲ್ಲಿರುವ ಅಶುಭವಾಸನೆಗಳೆಲ್ಲ ಸಮೂಲವಾಗಿ ನಾಶವಾಗುವವು, ಪುಣ್ಯವಾಸನೆಗಳು ಬಲಿತುಕೊಳ್ಳುವವು. ಸನ್ಮಾರ್ಗವನ್ನು ಹತ್ತಿ ಅವನು ಕ್ರಮಕ್ರಮವಾಗಿ ಗೀತೋಕ್ತಸಾಧನವನ್ನೇ ಅಭ್ಯಾಸಮಾಡಿ ಪರಗತಿಯನ್ನು ಹೊಂದುತ್ತಾನೆ.

## ೧೯೬. ಗೀತಾಜ್ಞಾನದ ಫಲ 18 - (72-76)

**(3-12-50)**

ಭಗವದ್ಗೀತೆಯ ಉಪದೇಶವೇ ಇಲ್ಲಿಗೆ ಮುಗಿದಂತೆ ಆಯಿತು. "ಪ್ರಜ್ಞಾವಾದಾಂಶ್ಚ ಭಾಷಸೇ" ಎಂಬುದರಿಂದ ಹಿಡಿದು ಅಜ್ಞಾನದ ಫಲಗಳಾದ ಶೋಕಮೋಹಗಳನ್ನೂ ಅವುಗಳನ್ನು ತೊಲಗಿಸಿಕೊಳ್ಳುವದಕ್ಕೆ ಬೇಕಾದ ಆತ್ಮಜ್ಞಾನವನ್ನೂ ಉಪದೇಶಿಸಿದ್ದಾಯಿತು.

ಅಜ್ಞಾನವಿದ್ದಲ್ಲಿ ಶೋಕವಿರುವದು. ಇರುವ ಸ್ಥಿತಿಯನ್ನು ಇದ್ದಂತೆ ತಿಳಿದುಕೊಂಡ ಮೇಲೆ ಶೋಕವು ನಿಲ್ಲುವದಿಲ್ಲ. ಇಲ್ಲಿ ಶೋಕವೆಂಬ ಮಾತಿನಿಂದ ಜನಗಳಿಗೆ ಉಂಟಾಗಿರುವ ಕಷ್ಟಗಳನ್ನೆಲ್ಲ ಉಪಲಕ್ಷಣೆಯಿಂದ ತಿಳಿದುಕೊಳ್ಳಬೇಕು. ಇವಕ್ಕೆ ಕಾರಣವೇನು? ಮೋಹವೇ. ತಪ್ಪು ತಿಳಿವಳಿಕೆಯಿರುವವರೆಗೆ ಕಷ್ಟಗಳು ತಪ್ಪಲಾರವು. ಒಬ್ಬ ಗ್ರಂಥಕರ್ತನು "ಸಾಮಾಜಿಕರೋಗಗಳೂ ಅದಕ್ಕಿಂತ ಕೀಳಾದ ಚಿಕಿತ್ಸೆಗಳೂ" ಎಂಬ ಹೆಸರಿನ ಗ್ರಂಥವೊಂದನ್ನು ಇಂಗ್ಲಿಷಿನಲ್ಲಿ ಬರೆದಿರುತ್ತಾನೆ. ಸದ್ಯದಕಾಲದಲ್ಲಿ ಜನರಲ್ಲಿ ಬಗೆಬಗೆಯ ಕಷ್ಟಗಳು ತಲೆದೋರಿರುತ್ತವೆ; ಅವುಗಳನ್ನು ನಿವಾರಿಸುವದಕ್ಕೆಂದು ಆ ರಾಜ್ಯವನ್ನು ಈ ರಾಜ್ಯಕ್ಕೆ ಸೇರಿಸುವದು, ಆ ರಾಜ್ಯಭಾರಕ್ರಮಗಳನ್ನು ಬಿಟ್ಟು ಈ ರಾಜ್ಯಭಾರ ಕ್ರಮವನ್ನು ಅನುಸರಿಸುವದು, ಜನರ ಆಚಾರಗಳನ್ನು ಅತ್ಯಂತವಾಗಿ ಮಾರ್ಪಡಿಸುವದು, ಉಡುಪು, ಭಾಷೆ ಮುಂತಾದವುಗಳನ್ನು ಮಾರ್ಪಡಿಸುವದು, ಯುದ್ಧಗಳನ್ನು ಏರ್ಪಡಿಸುವದು, ಆಟಂಬಾಂಬ್ ಮುಂತಾದ ಘಾತುಕಾಸ್ತ್ರಗಳನ್ನು ಪ್ರಯೋಗಿಸುವದು-ಇವೇ ಮುಂತಾದ ವ್ಯರ್ಥವಾದ ಅಥವಾ ಅನರ್ಥಕರವಾದ ಉಪಾಯಗಳನ್ನು ಅನುಸರಿಸುವದು ವಾಡಿಕೆಯಾಗಿಬಿಟ್ಟಿದೆ. ಒಬ್ಬರು ಮಾಡಿರುವ ತಪ್ಪನ್ನು ತಿದ್ದುವದಕ್ಕೆ ಇನ್ನಷ್ಟು ಭಾರಿಯ ತಪ್ಪನ್ನು ಮಾಡುವದು ಎಂದಿಗೂ ಚಿಕಿತ್ಸೆಯಾಗಲಾರದು. ತಿಳಿದವರು ತಿಳಿಯದವರ ಅಜ್ಞಾನವನ್ನು ಕಳೆಯಬೇಕು ; ತಿಳಿಯದವರು ತಮ್ಮ ತಪ್ಪನ್ನು ತಾವು ತಿಳಿದುಕೊಂಡು ಸರಿಯಾದ ಮಾರ್ಗದಲ್ಲಿ ವಿಚಾರಮಾಡುವದಕ್ಕೂ ಸರಿಯಾಗಿ ನಡೆದು ತಾವು ಬದುಕಿ ತಮ್ಮ ಸುತ್ತಲಿನ ಜನರನ್ನು ಸುಖದಲ್ಲಿರಿಸುವದಕ್ಕೂ ಸ್ವಾತಂತ್ರ್ಯವನ್ನು ಕೊಡಬೇಕು.

ಅಜ್ಞಾನವನ್ನು ಕಳೆಯುವದಕ್ಕೆಂದೇ ಗೀತಾಬೋಧೆಯು ಪ್ರಾರಂಭವಾಯಿತು. 'ಅರ್ಜುನ, ನಿನ್ನ ಮೋಹವು ಹೋಯಿತೆ?' ಎಂದು ಶ್ರೀಕೃಷ್ಣನು ಕೇಳಿರುತ್ತಾನೆ ; ಅರ್ಜುನನು "ಮೋಹವು ಹೋಯಿತು, ತತ್ತ್ವದ ನೆನಪು ಬಂತು. ಇನ್ನು ಮೇಲೆ ನೀನು ಹೇಳಿದಂತೆ, ಎಂದರೆ ಸನ್ಮಾರ್ಗದಲ್ಲಿ ನಡೆಯುವೆನು" ಎಂದಿರುತ್ತಾನೆ ಅರ್ಜುನನನ್ನು ಒಂದು ಮಾರ್ಗಕ್ಕೆ ಭಗವಂತನು ದೂಡಲಿಲ್ಲ. ಅವನ ಅಜ್ಞಾನವನ್ನು ಕಳೆದನು. ಅರ್ಜುನನು ಜ್ಞಾನವನ್ನು ಪಡೆದು ಸನ್ಮಾರ್ಗವನ್ನು ಅವಲಂಬಿಸಿದನು. ಭಾರತದಲ್ಲಿ ರಾಜನೀತಿಯೂ ಇದೆ, ತತ್ತ್ವಾರ್ಥದ ಉಪದೇಶವೂ ಇದೆ. ಸಾಮಾನ್ಯವಾಗಿ ವ್ಯವಹಾರಮಗ್ನರಾಗಿರುವವರಿಗೆ ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳನ್ನು ಅಲ್ಲಿ ಉಪದೇಶಿಸಿದ್ದರೂ ದೃಷ್ಟಿಕೋಣವು ಬದಲಾಯಿಸಿ ತತ್ತ್ವವನ್ನೇ ತಿಳಿದುಕೊಳ್ಳಬೇಕೆಂಬ ಕುತೂಹಲವಿರುವವರಿಗಾಗಿ ಮೋಕ್ಷಧರ್ಮವನ್ನೂ ಅಲ್ಲಿ ಉಪದೇಶಿಸಿದೆ. ಇವೆರಡರಲ್ಲಿ ಜ್ಞಾನಮಾರ್ಗದಲ್ಲಿಯೇ ಭಾರತಕ್ಕೆ ಪರಮತಾತ್ಪರ್ಯವಿದೆ. ಇಂಥ ಜ್ಞಾನವನ್ನು ಉಪದೇಶಿಸುವದಕ್ಕೆ ಭಗವಂತನು ಪ್ರಾರಂಭಮಾಡಿದ್ದನು. ಆ ಉಪದೇಶದ ಫಲವಾಗಿ ಅರ್ಜುನನಿಗೆ ಆತ್ಮಸ್ಮೃತಿಯು ಲಬ್ಧವಾಯಿತು. ಆತ್ಮತತ್ತ್ವವನ್ನು ಕಂಡುಕೊಂಡರೆ ಎಲ್ಲಾ ಸಂಶಯಗಳೂ ತೊಲಗುವವು; ಜ್ಞಾನವನ್ನು ದೊರಕಿಸಿಕೊಂಡರೆ ಮಾಡತಕ್ಕದ್ದನ್ನು ಮಾಡಿದಂತೆಯೂ ಪಡೆಯತಕ್ಕದ್ದನ್ನು ಪಡೆದಂತೆಯೂ ಆಗುವದು. ಅರ್ಜುನನನ್ನು ಭಗವಂತನು ತಯಾರುಮಾಡಿದಂತೆ ಒಬ್ಬನನ್ನು ಜ್ಞಾನಮಾರ್ಗಕ್ಕೆ ತಂದರೂ ಸಾಕು, ಇಡಿಯ ಭೂಮಂಡಲವೇ ಸುಖಶಾಂತಿಗಳನ್ನು ಹೊಂದುವದು.

ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದವು ಮುಗಿಯಿತು. ಸಂಜಯನು ಈಗ ಕಥೆಯನ್ನು ಮುಗಿಸಲು ಹೇಳುತ್ತಿದ್ದಾನೆ. ಅರ್ಜುನನು ತತ್ತ್ವವನ್ನು ತಿಳಿದುಕೊಂಡು ಯುದ್ಧವು ಸ್ವಧರ್ಮವು, ಮಾಡತಕ್ಕದ್ದು-ಎಂದು ಅದನ್ನೇ ಮಾಡಿದನು ಎಂದು ಧೃತರಾಷ್ಟ್ರನಿಗೆ ಸಂಜಯನು ಹೇಳಿದನು. ಸಂಜಯನು ಒಳ್ಳೆಯ ಜ್ಞಾನಿ. ಇಡೀ ಭಗವದ್ಗೀತೆಯನ್ನು ಧೃತರಾಷ್ಟ್ರನಿಗೆ ಉಪದೇಶಿಸಿರುತ್ತಾನೆ. ಇದನ್ನು ಕೇಳುವಾಗ ಧೃತರಾಷ್ಟ್ರನ ಮನಃಸ್ಥಿತಿ ಹೇಗಿತ್ತು? "ನನ್ನ ಮಕ್ಕಳ ಗತಿ ಏನಾಯಿತು? ಪಾಂಡವರು ಏನು ಮಾಡಿದರು?"-ಎಂದು ಅವನು ಕೇಳಿದ್ದನು. ಆದರೆ ಸಂಜಯನು ಯುದ್ಧಸನ್ನಾಹವನ್ನು ಹೇಳಿದ್ದಲ್ಲದೆ ಅರ್ಜುನನ ಮನಸ್ಸಿನಲ್ಲಿ ಉಂಟಾದ ವಿಷಾದವನ್ನೂ ಅವನು ಶ್ರೀಕೃಷ್ಣನನ್ನು ಶರಣುಹೊಕ್ಕ ರೀತಿಯನ್ನೂ ಶ್ರೀಕೃಷ್ಣನು ಅವನಿಗೆ ಮಾಡಿದ ತತ್ತ್ವೋಪದೇಶವನ್ನೂ ಯಥಾವತ್ತಾಗಿ ವರ್ಣಿಸಿರುತ್ತಾನೆ. ಸಂಜಯನಿಗೆ ಈ ತತ್ತ್ವವು ಹೇಗೆ ಗೊತ್ತಾಯಿತು? ವೃತ್ತಾಂತಪತ್ರಿಕೆಗಳಿಗೆ ಬಾತ್ಮಿದಾರರು ಕೊಡುವ ಸುದ್ದಿಗಳಂತೆ ಅವನಿಗೆ ಗೀತೆಯ ಸುದ್ದಿಗಳನ್ನು ಯಾರೂ ಬಾತ್ಮಿಕೊಡಲಿಲ್ಲ! ಅವನು ವಾಸುದೇವನ ಮತ್ತು ಅರ್ಜುನನ ಸಂವಾದವನ್ನು ನೇರಾಗಿ ಕೇಳಿದನು.

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥ 18-74**

'ಧೃತರಾಷ್ಟ್ರನೆ, ವಾಸುದೇವನು ಭಗವಂತ ; ಆದ್ದರಿಂದ ಅವನು ಮಹಾತ್ಮನೇ, ಅರ್ಜುನನು ಯುದ್ಧದ ಗಡಿಬಿಡಿಯಲ್ಲಿದ್ದರೂ, ತನ್ನ ಮನಸ್ಸಿನಲ್ಲಿ ಕೃಪಾಪರವಶನಾಗಿ ವಿಷಾದದಿಂದ ತುಂಬಿದ್ದರೂ, ಭಗವಂತನು ಮಾಡಿದ ಉಪದೇಶವನ್ನು ಚಿತ್ತವಿಟ್ಟು ಕೇಳಿ, ಆಗಾಗ್ಗೆ ಪ್ರಶ್ನೆಗಳನ್ನು ಮಾಡಿ, ಸಂಶಯಗಳನ್ನೆಲ್ಲ ತೊಲಗಿಸಿಕೊಂಡು, ಈಗ ಮತ್ತೊಂದು ಸಲ ಭಗವಂತನು ಹೇಳಿದ್ದನ್ನೆಲ್ಲ ಮನಸ್ಸಿನಲ್ಲಿ ಹೊರಳಾಡಿಸಿ ತತ್ತ್ವವನ್ನು ತಿಳಿದುಕೊಂಡು 'ನನ್ನ ಮೋಹವು ಹೋಯಿತು, ಇನ್ನು ತಪ್ಪುಮಾರ್ಗದಲ್ಲಿ ನಡೆಯುವದಿಲ್ಲ' ಎನ್ನುತ್ತಿದ್ದಾನೆ-ಎಂದ ಮೇಲೆ ಅವನು ಮಹಾತ್ಮನಲ್ಲವೆ? ಈ ಇಬ್ಬರು ಮಹಾತ್ಮರ ಸಂವಾದವಿದು. ಅವರು ಜಲ್ಪಕಥೆಯಿಂದ ಒಬ್ಬರನ್ನೊಬ್ಬರು ಸೋಲಿಸುವ ಅಭಿನಿವೇಶದಿಂದ ಚರ್ಚೆಯನ್ನು ಮಾಡಲಿಲ್ಲ. ತತ್ತ್ವವನ್ನು ನಿರ್ಣಯಿಸುವದಕ್ಕಾಗಿ ಹೊಂದಿಕೆಯಿಂದ ಒಬ್ಬರೊಡನೊಬ್ಬರು ಮಾತಾಡುತ್ತಿದ್ದರು. ಒಬ್ಬರ ಹೃದಯದಲ್ಲಿ ಇನ್ನೊಬ್ಬರು ಕಲೆತು ಮಾಡುವ ವಿಚಾರವೇ ಸಂವಾದವು. ಈ ಸಂವಾದವು ಎಂಥ ಅದ್ಭುತವಾದದ್ದು! ಇಂಥ ಆಶ್ಚರ್ಯವಾದ ಘಟನೆಯು ಇನ್ನೊಂದು ನಡೆಯಲಾರದು. ಈ ಸಂವಾದದ ಶ್ರವಣದಿಂದ ನನ್ನ ದೃಷ್ಟಿಯೆಲ್ಲವೂ ಬದಲಾಯಿಸಿಬಿಟ್ಟಿತು ; ನನಗೆ ರೋಮಾಂಚವಾಗಿಬಿಟ್ಟಿತು. ಇಂಥ ಸಂವಾದವನ್ನೇ ನಾನು ಈವರೆಗೂ ಎಲ್ಲಿಯೂ ಕೇಳಿರಲಿಲ್ಲವಲ್ಲ!- ಎಂದು ಆಶ್ಚರ್ಯವಾಗಿಬಿಟ್ಟದೆ. ಇಂಥ ಅದ್ಭುತವಾದ ರೋಮಹರ್ಷಣವಾದ ಈ ಸಂವಾದವನ್ನು ನಾನು ನೇರಾಗಿ ಕೇಳಿದೆನಯ್ಯ! ನಾನೇ ಧನ್ಯ!'-ಎಂದು ಸಂಜಯನು ಹೇಳುತ್ತಿದ್ದಾನೆ.

ಸಂಜಯನಿಗೆ ಇಷ್ಟುದೂರದಲ್ಲಿ ಕೃಷ್ಣಾರ್ಜುನರು ಮಾಡಿದ ಸಂವಾದವು ಹೇಗೆ ಕೇಳಿಸಿತು? ಆಗ ಅಲ್ಲಿಗೆ ಟೆಲಿಫೋನ್ ಇಟ್ಟಿದ್ದರೇನು? ಇಲ್ಲ. ಧೃತರಾಷ್ಟ್ರನಿಗೆ ಬುದ್ಧಿಯು ಬರಲಿ! ಎಂದು ಅನುಗ್ರಹಮಾಡುವದಕ್ಕಾಗಿ ವ್ಯಾಸರು ಸಂಜಯನಿಗೆ ದಿವ್ಯದೃಷ್ಟಿಯನ್ನು ಕೊಟ್ಟಿದ್ದರು; ಅವನಿಗೆ ಯುದ್ಧರಂಗದಲ್ಲಿ ನಡೆದ ಈ ಸಂವಾದವನ್ನು ಕೇಳುವ ಶಕ್ತಿಯಾಗುವಂತೆ ಅನುಗ್ರಹಿಸಿದ್ದರು.

**ವ್ಯಾಸಪ್ರಸಾದಾಚ್ಛ್ರುತವಾನಿಮಂ ಗುಹ್ಯತಮಂ ಪರಮ್ ।**
**ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ಕಥಯತಃ ಸ್ವಯಮ್ ॥ 18-75**

ವ್ಯಾಸರ ಪ್ರಸಾದದಿಂದ ಈ ಪರಮಗುಹ್ಯವಾದ ಸಂವಾದವನ್ನು ನಾನು ಕೇಳಿದೆನು. ಗೀತೋಕ್ತಯೋಗವನ್ನು ಯೋಗೇಶ್ವರನಾದ ಶ್ರೀಕೃಷ್ಣನು ತಾನೇ ಹೇಳುತ್ತಿದ್ದಂತೆಯೇ ನೇರಾಗಿ ನಾನು ಕೇಳಿದೆನು. ಇದಕ್ಕಿಂತ ಹೆಚ್ಚಿನ ಪುಣ್ಯವು ಯಾವದು? ಈ ಯೋಗವು ಪರಮಾತ್ಮನಿಗೂ ನಮಗೂ ಇರುವ ಸಂಬಂಧವು. ಇದನ್ನು ಈಗಲೂ ಭಗವಂತನು ಆಸ್ತಿಕರ ಹೃದಯದಲ್ಲಿ ಕುಳಿತು ಗಾನಮಾಡುತ್ತಲೇ ಇರುತ್ತಾನೆ; ಇದನ್ನು ಕೇಳುವಂಥ ಅರ್ಜುನನು ಮಾತ್ರ ಬೇಕಾಗಿದೆ. ಅಷ್ಟೆ. ವ್ಯಾಸರು ಭಗವದ್ಗೀತೆಯನ್ನು ಶ್ಲೋಕಗಳಾಗಿ ಬರೆದಾಗ ಈ ಮಾತನ್ನು ಸಂಜಯನ

ಬಾಯಿಯಲ್ಲಿ ಹಾಕಿರುವದರಲ್ಲಿ ಒಂದು ಸ್ವಾರಸ್ಯವಿದೆ. ಈ ಮಾತನ್ನು ಕೇಳಿದಮೇಲಾದರೂ ಧೃತರಾಷ್ಟ್ರನ ಮನಸ್ಸು ಮಾರ್ಪಡಬೇಡವೆ? ಶ್ರೀ ಕೃಷ್ಣನು ವಾಸುದೇವಭಗವಂತನು, ತಾನೇ ಅರ್ಜುನನಿಗೆ ತತ್ತ್ವಾರ್ಥವನ್ನು ಹೇಳಿರುತ್ತಾನೆ, ಅವನ ಅನುಗ್ರಹದಿಂದ ಯುದ್ಧವನ್ನು ಮಾಡುವ ಅರ್ಜುನನಿಗಲ್ಲದೆ ಮತ್ತೆಯಾರಿಗೆ ಜಯವಾದೀತು? ಆದರೂ ಧೃತರಾಷ್ಟ್ರನು ಸ್ವಲ್ಪವೂ ಬದಲಾಯಿಸಲಿಲ್ಲ. ಅವನಿಗೆ ಎರಡು ಕಣ್ಣುಗಳೂ ಕಾಣಿಸುತ್ತಿರಲಿಲ್ಲ, ಅಷ್ಟೇ ಅಲ್ಲ. ಅವನಿಗೆ ಕಿವಿಯಲ್ಲಿಯೂ ಈ ಮಾತುಗಳು ಸರಿಯಾಗಿ ಬೀಳಲಿಲ್ಲ, ಅನಧಿಕಾರಿಗಳಾದವರಿಗೆ ಗೀತೋಪದೇಶವು ಕಿವಿಗೆ ಬಿದ್ದರೂ ಹೀಗೆಯೇ ಆಗುವದರಲ್ಲಿ ಆಶ್ಚರ್ಯವೇನು?

ಸಂಜಯನು ಈ ಅದ್ಭುತವಾದ ಸಂವಾದವನ್ನು ಕೇಳಿದನು ; ಕೇಳಿದ್ದನ್ನು ಸ್ಮರಣೆಗೆ ತಂದುಕೊಂಡನು. ಅವನಿಗೆ ಮತ್ತೆ ಮತ್ತೆ ರೋಮಹರ್ಷವಾಗುತ್ತಿತ್ತು. ಧೃತರಾಷ್ಟ್ರನಿಗೆ ತಾನು ಕೇಳಿದ್ದನ್ನೇ ಅವನು ವರ್ಣಿಸಿದನು. ಮತ್ತೊಬ್ಬರು ಮಾಡಿದ ಪಾಪವನ್ನು ಸ್ಮರಣೆಗೆ ತಂದುಕೊಳ್ಳುವದೂ ದುಃಖಕರ; ಆದರೆ ಪುಣ್ಯಕರವಾದ ಈ ಸಂವಾದವನ್ನು ಕೇಳಿ ಮತ್ತೆ ಮತ್ತೆ ಹೇಳುವದೂ ಪುಣ್ಯಕರವಾಗಿರುತ್ತದೆ. ಭಗವಂತನ ಸಂವಾದವನ್ನು ಧೃತರಾಷ್ಟ್ರನಿಗೆ ತಾನು ಕೇಳಿದ್ದಂತೆ ಹೇಳಿ, ಅದರ ಆನಂದವನ್ನು ಪಡೆಯುವ ಸುಯೋಗವು ಮೊಟ್ಟಮೊದಲು ಸಂಜಯನಿಗೆ ಬಂದಿತು. ನಾವೂ ಭಗವದ್ಗೀತೆಯನ್ನು ಕೇಳಿ, ಮತ್ತೊಬ್ಬರಿಗೆ ಹೇಳುವ ಸುಯೋಗವು ದೊರೆತರೆ ನಮ್ಮ ಜನ್ಮವು ಸಾರ್ಥಕ.

## ೧೯೭. ಭಗವಂತನನ್ನು ನಂಬಿದವರಿಗೆ ಇಹಪರಸುಖ 18 (77-78)

### (10-12-50)

ಸಂಜಯನು ಧೃತರಾಷ್ಟ್ರನಿಗೆ ಗೀತೋಪದೇಶವನ್ನು ಪೂರ್ತಿಯಾಗಿ ಪುನಃ ಶ್ರವಣ ಮಾಡಿಸಿದ ಬಳಿಕ "ರಾಯನೆ, ಇದನ್ನು ನಾನು ನೇರಾಗಿ ಕೇಳಿದೆನು. ಇದನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಂಡು ಮತ್ತೆ ಮತ್ತೆ ರೋಮಾಂಚದಿಂದ ಆನಂದಪಡುತ್ತಿದ್ದೇನೆ" ಎನ್ನುತ್ತಿದ್ದಾನೆ. ಅವನು ರೇಡಿಯೋಯಂತ್ರದಂತೆ ಒಂದು ಮಾಧ್ಯಮವೆಂದು ಭಾವಿಸಬಾರದು. ಅರ್ಜುನನಿಗೆ ಮಾಡಿದ ಉಪದೇಶವು ಅವನಿಗೂ ಆಗಿಂದಾಗಲೇ ವ್ಯಾಸರ ಅನುಗ್ರಹದಿಂದ ಕೇಳಿಸುತ್ತಿತ್ತು. ಅವನಲ್ಲಿ ಎಂಥ ಅಧಿಕಾರಸಂಪತ್ತಿದ್ದದ್ದರಿಂದ ಈ ಯೋಗವು ಅವನಿಗೆ ಲಭಿಸಿರಬೇಕು! ಒಂದೇ ಕಾಲದಲ್ಲಿ ಭಗವಂತನು ಹೇಳುವದು, ಅರ್ಜುನನು ಕೇಳುವದು, ಸಂಜಯನು ಹೇಳುವದು, ಧೃತರಾಷ್ಟ್ರನು ಕೇಳುವದು- ಹೀಗೆ ನಡೆದಿದೆ. ವ್ಯಾಸರು ತಮ್ಮ ತಪೋಮಹಿಮೆಯಿಂದ ಇದೆಲ್ಲವನ್ನೂ ಗ್ರಹಿಸಿ ಬರೆದಿರುತ್ತಾರೆ. ಸಂಜಯನು ಕೇಳಿದ್ದು

ಮಾತ್ರವೇ ಅಲ್ಲ; ಶ್ರೀಕೃಷ್ಣಭಗವಂತನು ಅರ್ಜುನನಿಗೆ ಉಪದೇಶಮಾಡುತ್ತಿದ್ದಂತೆಯೇ ವಿಶ್ವರೂಪವನ್ನೂ ತೋರಿಸಿದನಷ್ಟೆ, ಅದನ್ನೂ ಅವನು ನೇರಾಗಿ ಕಂಡನು.

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ ॥ 18-77**

ಆ ಹರಿಯ ಅತ್ಯದ್ಭುತವಾದ ವಿಶ್ವರೂಪವನ್ನು ಕಂಡೆನಲ್ಲ, ಅದನ್ನು ನೆನಪಿಗೆ ಮತ್ತೆ ಮತ್ತೆ ತಂದುಕೊಂಡಾಗಲೆಲ್ಲ ನಾನು ವಿಸ್ಮಿತನಾಗುತ್ತೇನೆ, ಪುಲಕಾಂಕಿತನಾಗುತ್ತೇನೆ!- ಎಂದು ಅವನು ಹೇಳಿರುತ್ತಾನೆ. ಸಂಜಯನು ನೇರಾಗಿ ಹೇಳಿದಂತೆ ನಾವು ನೇರಾಗಿ ಗೀತೆಯನ್ನು ಕೇಳಿದರೆ, ಸಂಜಯನು ಭಗವಂತನ ರೂಪವನ್ನು ನೇರಾಗಿ ಕಂಡಂತೆ ನಾವೂ ಕಂಡರೆ ಧನ್ಯರು. ನಮಗೂ ಅರ್ಜುನನಂತೆ ಸಂಭಾಷಣೆಮಾಡುವ ಭಾವನೆ ಬರಬೇಕು, ಈ ಸಂವಾದವನ್ನು ಮತ್ತೆ ಮತ್ತೆ ಜ್ಞಾಪಿಸಿಕೊಂಡು ಆನಂದದಿಂದ ಹಿಗ್ಗುವ ಸುಯೋಗವು ಒದಗಬೇಕು. ಹೊಸದಾಗಿ ಉತ್ತಮವಾದ ನಾಟಕವೊಂದನ್ನು ನೋಡಿದವರಿಗೆ ಅಲ್ಲಿ ನೋಡಿದ ದೃಶ್ಯಗಳು ಕಣ್ಣಿಗೆ ಕಟ್ಟಿದಂತೆ ಆಗುವವು; ಅಲ್ಲಿ ಕೇಳಿದ ಹಾಡುಗಳನ್ನು ಮತ್ತೆ ಕಿವಿಯಲ್ಲಿ ಯಾರೋ ಹಾಡಿದಂತೆ ಆಗುವದು. ಇಂಥದ್ದರಲ್ಲಿ ಭಗವಂತನ ಸಂವಾದವನ್ನು ನೇರಾಗಿ ಕೇಳಿದವನಿಗೆ ಹೇಗಾಗಬೇಡ! ಅವನೇ ಸಂಜಯನು, ಅವನೇ ಇಂದ್ರಿಯಗಳನ್ನು ಚೆನ್ನಾಗಿ ಜಯಿಸಿ ಭಗವಂತನನ್ನು ಶರಣುಹೊಗುವ ಪುಣ್ಯಾತ್ಮನು.

ಇಂಥ ಉಪದೇಶವು ನಮ್ಮ ಸ್ಮರಣೆಗೆ ಮತ್ತೆ ಮತ್ತೆ ಬರಬೇಕು. ನಮ್ಮ ಜೀವನದಲ್ಲಿ ಎರಡು ದೃಷ್ಟಿಗಳಿವೆ. ಸಾಮಾನ್ಯವಾಗಿ ನಾವು ಪರಿಚ್ಛಿನ್ನದೃಷ್ಟಿಯವರು ; ನಮ್ಮ ದೃಷ್ಟಿಯು ಸಂಕುಚಿತವಾಗಿ ಅಲ್ಪವಾದ ಪದಾರ್ಥಗಳ ಲಾಭನಷ್ಟಗಳನ್ನೇ ಕಾಣುತ್ತಿರುವದು. ಆದರೆ ಸತ್ಸಂಗದಿಂದಲೂ ಗೀತೆಯಂಥ ಮಹಾಗ್ರಂಥಗಳ ಅಧ್ಯಯನದಿಂದಲೂ ವಿಶಾಲತರವಾದ ದೃಷ್ಟಿಯನ್ನು ಸ್ವಲ್ಪಮಟ್ಟಿಗೆ ಸಂಪಾದಿಸಿಕೊಂಡರೆ ಸಾಕು, ದೊಡ್ಡ ವಿಶ್ವವೇ ಕಣ್ಣೆದುರಿಗೆ ಕಾಣುತ್ತದೆ. ಕ್ಷುದ್ರತರವಾದ ಈ ಮೂರು ದಿನದ ಬಾಳು ಆಗ ಎಂದಿಗೂ ರುಚಿಸದು. ಹಾಗೆ ಸಂಜಯನು ಭಗವಂತನ ವಿಶ್ವರೂಪವನ್ನೇ ಮತ್ತೆ ಮತ್ತೆ ನೆನಪಿಗೆ ತಂದುಕೊಳ್ಳುತ್ತಿದ್ದಾನೆ. ಅರ್ಜುನನೂ ಹಾಗೆಯೇ. ಆ ವಿಶ್ವರೂಪವನ್ನು ಕಂಡ ಬಳಿಕ ಅವನಿಗೆ ಪರಿಚ್ಛಿನ್ನದೃಷ್ಟಿ ಬಂದರೂ ಅದು ಬಾಧಿತವಾಗಿಯೇ ಉಂಟಾಗುತ್ತಿದೆ. ನಾನು, ನೀನು, ಅವನು-ಎಲ್ಲವೂ ಮುಳುಗಿಹೋಗಿ ಅವನ ಪಾಲಿಗೆಲ್ಲವೂ ಭಗವಂತನೇ ಆಗಿಬಿಟ್ಟಿದೆ.

ನಾವು ಅಂಥ ರೂಪವನ್ನು ಸಂಕಲ್ಪಮಾಡಿಕೊಳ್ಳಬಾರದೆ? ಕನಸಿನಲ್ಲಿ ಕಂಬಳಿಯನ್ನು ಹೊದ್ದವನು ಎಚ್ಚತ್ತಾಗ ಕಂಬಳಿ ಹೋಯಿತೆಂದು ಅತ್ತಾನೆ? ಪರಮೇಶ್ವರನ ವಿಶ್ವರೂಪವನ್ನು ಸ್ಮರಿಸಿಕೊಂಡವನಿಗೆ ಈ ಕ್ಷುದ್ರವಾದ ನಾನು, ನನ್ನದು-ಎಂಬ ಭಾವನೆಯ ಹಂಬಲು ಉಳಿದೀತೆ? ಅಂಥ ಕಲ್ಪನೆಯನ್ನು ಕಂಡುಕೊಳ್ಳುವಾಗ ನಮಗೆ ಯಾವಯಾವದೋ ಕ್ಷುದ್ರಬುದ್ಧಿಗಳು

ಅಡ್ಡಿಯಾಗಿ ಬರುವವು. ಪರಮೇಶ್ವರನಿಗೆ ಮಾನಸಪೂಜೆಯನ್ನು ಮಾಡು ಎಂದು ಉಪದೇಶಿಸಿದಾಗ, `ಸ್ನಾನಕಾಲಕ್ಕೆ ಹುಬ್ಬಳ್ಳಿಯ ಹಂಡೆಯ ನೆನಪು ಬರುತ್ತದೆಯಲ್ಲ! ಏನು ಮಾಡಲಿ?' ಎಂದು ಒಬ್ಬನು ಕೇಳಿದನು. `ಆದರೆ ಒಂದು ಅಮೃತದ ಮಹಾನದಿಯನ್ನೇ ಕಲ್ಪಿಸಿಕೊ' ಎಂದು ಗುರುಗಳು ಉತ್ತರವನ್ನು ಕೊಟ್ಟರು! ಭಗವಂತನ ಸ್ಮರಣೆಯನ್ನು ಮಾಡಬೇಕು. ಆತನ ಉಪದೇಶವನ್ನು ಅನುಸಂಧಾನಕ್ಕೆ ಇಟ್ಟುಕೊಳ್ಳಬೇಕು. ಈ ಅಲ್ಪಜೀವನದ ಕ್ಷುದ್ರವಾದ ಯೋಗಕ್ಷೇಮಗಳ ಹಂಬಲವನ್ನು ಬಿಡಬೇಕು; ಅದರಿಂದ ನಮಗೆ ಯಾವ ನಷ್ಟವೂ ಆಗುವದಿಲ್ಲ, ಪರಮಲಾಭವಾಗುವದು!

ಸಂಜಯನು ತಾನು ಕಂಡ ಕೇಳಿದ್ದರ ವಿವರವನ್ನೆಲ್ಲ ಹೇಳಿ ತನ್ನ ಅಭಿಪ್ರಾಯವನ್ನು ಮುಚ್ಚುಮರೆಯಿಲ್ಲದೆ ಧೃತರಾಷ್ಟ್ರನಿಗೆ ತಿಳಿಸುತ್ತಾನೆ.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ 18-78**

ಸಂಜಯನು ಈ ಮಾತನ್ನು ತನ್ನದೆಂಬ ಅಭಿಮಾನದಿಂದ ಹೇಳಿರುವದಿಲ್ಲ. ಆಕಸ್ಮಾತ್ತಾಗಿ ಬಂದ ಅಪರಿಚಿತರು ನಮಗೆ ಯಾವದಾದರೂ ಬುದ್ಧಿವಾದವನ್ನು ಹೇಳಿದರೆ ನಾವು ಅದನ್ನು ಸದ್ಬುದ್ಧಿಯಿಂದ ಗ್ರಹಿಸುತ್ತೇವೆ. ಅವರು ನಮ್ಮ ದೋಷವನ್ನು ಹೇಳಿದರೂ ಸಂತೋಷದಿಂದ ತಿದ್ದಿಕೊಳ್ಳುವದಕ್ಕೆ ಹೋಗುತ್ತೇವೆ. ಸರಳಹೃದಯರಿಗೆಲ್ಲ ಇದು ಸ್ವಭಾವವು. ಇದರಂತೆ ಪಕ್ಷಪಾತರಹಿತನಾದ ಸಂಜಯನು ಹೇಳಿದ ಮಾತನ್ನು ಧೃತರಾಷ್ಟ್ರನು ಗ್ರಹಿಸಬಹುದಾಗಿತ್ತು. ಆದರೂ ಭವಿತವ್ಯವು ಬಲವಾಗಿದ್ದದ್ದರಿಂದ ಆ ಕುರುಡನ ಕಿವಿಗೆ ಈ ಬುದ್ಧಿಯ ಮಾತು ಬೀಳಲಿಲ್ಲ, ಅಥವಾ ಬಿದ್ದರೂ ಅದು ಫಲಿಸಲಿಲ್ಲ.

ಇರಲಿ. ಸಂಜಯನು ಏನು ಹೇಳಿದನು? ಶ್ರೀಯೋಗೇಶ್ವರನು-ಈಗಿನ ಕಾಲದಲ್ಲಿ ಯೋಗಿಗಳೆಂಬವರು ಬಹಳಮಟ್ಟಿಗೆ ವೇಷಧಾರಿಗಳಾಗಿರುತ್ತಾರೆ. ಆದರೆ ನಿಜವಾದ ಯೋಗಿಗಳಿಗೆ ಅಣಿಮಾದಿಸಿದ್ಧಿಗಳಿರುವವು. ಆ ಸಿದ್ಧಿಗಳು ಪರಮೇಶ್ವರನ ಅನುಗ್ರಹದಿಂದಲೇ ಅವರಿಗೆ ದೊರಕಿದವುಗಳಾಗಿವೆ. ಅಂದಮೇಲೆ ಆ ಪರಮೇಶ್ವರನ ನಿತ್ಯಸಿದ್ಧಿಯನ್ನು ಏನೆಂದು ವರ್ಣಿಸಬೇಕು? ಅಂಥ ಯೋಗೇಶ್ವರನು-ಯಾವ ಕಡೆಯಲ್ಲಿರುತ್ತಾನೋ ಅವರಿಗೆ ಜಯವಲ್ಲದೆ ಮತ್ತೆ ಯಾರಿಗೆ ಆಗಬೇಕು!

ಇನ್ನು ಧನುರ್ಧರನಾದ ಪಾರ್ಥನು, ಎಂದರೆ ಭಗವಂತನ ಇಚ್ಛೆಯಂತೆ ನಡೆಯುವದಕ್ಕೆ ಸಿದ್ಧನಾಗಿರುವ ತತ್ತ್ವವನ್ನು ಮನಗಂಡಿರುವ, ಅಹಂತೆಯನ್ನು ಕಳೆದುಕೊಂಡಿರುವ, ಅರ್ಜುನನು ಯಾವ ಪಕ್ಷದಲ್ಲಿರುತ್ತಾನೋ ಅವನಿಗಲ್ಲವೆ, ಜಯವು ದೊರಕಬೇಕು?

ಇವರಿಬ್ಬರೂ ಇರುವ ಕಡೆಯಲ್ಲಿ ಶ್ರೀ, ವಿಜಯ, ಭೂತಿ , ಧ್ರುವನೀತಿ-ಇವುಗಳೆಲ್ಲವೂ ಇರುವವು. ಭಗವಂತನ ಇಚ್ಛೆಯಂತೆಯೇ ನಡೆಯುತ್ತದೆ ಎಂಬುದು ನಿಶ್ಚಯ . ಆ ಭಗವಂತನ

ಇಚ್ಛೆಗೆ ತನ್ನ ಇಚ್ಛೆಯನ್ನು ಯಾವನು ಹೊಂದಿಸಿರುತ್ತಾನೋ ಅವನಿಗೆ ಎಲ್ಲವೂ ತನ್ನ ತನ್ನ ಕಾಲದಲ್ಲಿ ಬಂದು ಒದಗುವದು ಸ್ವಭಾವವಾಗಿರುತ್ತದೆ . ಬೇರೆ ಯೋಗವನ್ನು ಸಂಪಾದಿಸುವದಕ್ಕಿಂತಲೂ ಯೋಗೇಶ್ವರನಾದ ಶ್ರೀಕೃಷ್ಣಭಗವಂತನ ಹೃದಯಕ್ಕೆ ಮೆಚ್ಚಾಗುವುದೆಂಬ ಯೋಗವನ್ನು ಒಂದನ್ನು ಸಂಪಾದಿಸಿಕೊಂಡರಾಯಿತು. ಅಣಿಮಾದಿಗಳು ನಮ್ಮ ದಾಸಿಯರಾಗುವರು! ಆದ್ದರಿಂದ ಪಾಂಡವರ ಸಕಲ ಇಷ್ಟಾರ್ಥಗಳೂ ಕೈಗೂಡುವದು ನ್ಯಾಯವಾಗಿದೆ ಎಂಬುದು ಸಂಜಯನ ಅಭಿಪ್ರಾಯವು.

ಈ ರಹಸ್ಯವನ್ನರಿತು ನಾವು ಭಗವಂತನ ಹೃದಯಕ್ಕೆ ಮೆಚ್ಚಾಗಿ ಆತನ ಇಚ್ಛೆಗೆ ನಮ್ಮ ಆಶೋತ್ತರಗಳನ್ನೆಲ್ಲ ಹೊಂದುಗಡೆಮಾಡಿಕೊಳ್ಳುವ ಸುಯೋಗವೊಂದನ್ನು ಸಂಪಾದಿಸಿಕೊಳ್ಳಬೇಕು.

# ೧೯೮. ಗೀತೋಪದೇಶವನ್ನು ಜೀವನಕ್ಕೆ ಹೇಗೆ ಹೊಂದಿಸಿಕೊಳ್ಳಬೇಕು?

## (17-12-50)

ಸುಮಾರು ನಾಲ್ಕುವರೆ ವರ್ಷಗಳಿಂದ ಗೀತೆಯ ಉಪನ್ಯಾಸಗಳು ನಡೆದಿರುತ್ತವೆ. ಯಾರು ಒಂದು ವಾರವೂ ಬಿಡದೆ ಇವನ್ನು ಕೇಳಿರುತ್ತಾರೋ ಅಥವಾ ಅಧ್ಯಾತ್ಮಪ್ರಕಾಶ ಮಾಸಪತ್ರಿಕೆಯಲ್ಲಿ ಪ್ರಕಟವಾದದ್ದನ್ನು ನೆನಪುಮಾಡಿಕೊಂಡು ಓದಿರುತ್ತಾರೋ ಅಂಥವರಿಗೆ ಇದರಲ್ಲಿ ಒಂದಾನೊಂದು ವಿಚಾರಧಾರೆಯು ಹರಿದುಬಂದಿರುವದು ಎದ್ದುಕಾಣುತ್ತದೆ. ಇಂಥವರು ತಮ್ಮ ಮನಸ್ಸಿನಲ್ಲಿ ಸ್ವಭಾವದಿಂದ ಬಂದಿದ್ದ ವಿಚಾರಧಾರೆಯನ್ನು ಇದಕ್ಕೆ ಹೋಲಿಸಿನೋಡಿದರೆ ಕನಸಿನ ವಿಚಾರಧಾರೆಯು ಎಚ್ಚರದ ಧಾರೆಯಿಂದ ಬಾಧಿತವಾಗುವಂತೆಯೂ ಈಗಿನ ಕಾಲದ ವಿದ್ಯಾಶಾಲೆಗಳ ಹುಡುಗರು ಹಳೆಯ ಭೂಪಟಗಳನ್ನು ಈಗ್ಗೆ ಉಪಯೋಗವಿಲ್ಲವೆಂದು ಕಂಡುಕೊಂಡಾಗ ಅವುಗಳಲ್ಲಿರುವ ತಿಳಿವಳಿಕೆಯು ಬಾಧಿತವಾಗುವಂತೆಯೂ ಭಗವದ್ಗೀತೆಯ ವಿಚಾರಧಾರೆಯು ಮನಸ್ಸಿಗೆ ಹತ್ತಿದಾಗ ಅವರ ಹಳೆಯ ವಿಚಾರಧಾರೆಯು ಬಾಧಿತವಾಗುವದು. ಆಗ ತಮ್ಮ ವಿಚಾರಕ್ರಮವು ಮಾರ್ಪಡಬೇಕಾಗುವದೊಂದೇ ಅಲ್ಲ, ಜೀವನಕ್ರಮವೂ ಮಾರ್ಪಡಬೇಕಾಗಿಬರುತ್ತದೆ. ಚೆನ್ನಾಗಿ ಶ್ರವಣಮಾಡಿ ಮನನಮಾಡಿದವರಿಗೆ ಮಾತ್ರ ಈ ಮಾರ್ಪಾಡು ಅವಶ್ಯವಾಗಿ ಆಗುತ್ತದೆ. ಹೀಗೆ ಜೀವನವು ಸಂಪೂರ್ಣವಾಗಿ ಮಾರ್ಪಡುವಷ್ಟು ಪರಿಣಾಮವಾಗದವರಿಗೂ ಗೀತೆಯ ಪಠಣದಿಂದ ಹೊಸ ಜೀವನಕ್ರಮವೊಂದಿದೆ, ಈಗಿನ ನಮ್ಮ ಕ್ರಮದಲ್ಲಿಯಾವುದೋ ಒಂದು ದೋಷವಿದೆ-ಎಂದಿಷ್ಟಾದರೂ ಮನಸ್ಸಿಗೆ ತಾಕದೆಹೋಗುವದಿಲ್ಲ.

ನಾವು ಗೀತಾಶ್ರವಣದಿಂದ ಹೊಸದೊಂದು ದೃಷ್ಟಿಕೋಣವು ದೊರೆತ ಮೇಲೂ ನಮ್ಮ ಜೀವನಕ್ರಮವನ್ನು ಪರೀಕ್ಷಿಸಿಕೊಳ್ಳಲು ಅಂಜುತ್ತಿರುವೆವು. ಒಬ್ಬ ದೊಡ್ಡಮನುಷ್ಯರಲ್ಲಿ ಒಂದು ಮುತ್ತಿನ ಕಂಠಿಯಿತ್ತು. ಅದು ಒಳ್ಳೆಯ ಚಿಪ್ಪಿನ ಮುತ್ತು ಎಂದೇ ಅವರ ಮನೆಯವರ ಭಾವನೆ. ಆದರೆ ಒಮ್ಮೆ ಒಬ್ಬ ಹೊಸಬನು ಬಂದನು. ಆತನಿಗೆ ಮುತ್ತಿನ ಪರೀಕ್ಷೆ ತಿಳಿಯುತ್ತಿತ್ತು. "ಇದು ಸಾಮಾನ್ಯದ ಮುತ್ತೇ ಹೊರತು ನಿಜವಾದ ಚಿಪ್ಪಿನ ಮುತ್ತಲ್ಲ;ಬೇಕಾದರೆ ತಿಳಿದವರಲ್ಲಿ ಪರೀಕ್ಷಿಸಿ"ಎಂದು ಆತನು ಹೇಳಿದ್ದಕ್ಕೆ ಮನೆಯ ಯಜಮಾನನು "ಅದು ಹೇಗಾದರೂ ಇರಲಿ, ಮೂರು ನಾಲ್ಕು ತಲೆಮಾರಿನಿಂದ ಇದು ನಮ್ಮ ಮನೆಯಲ್ಲಿದೆ. ಇದು ಅನರ್ಘ್ಯವಾದ ಮುತ್ತಿನಹಾರವೆಂದೇ ನಾವೆಲ್ಲರೂ ನಂಬಿರುತ್ತೇವೆ. ಹೀಗಿರುವಲ್ಲಿ ಇದನ್ನು ಪರೀಕ್ಷಿಸಿ ಆ ನಂಬಿಕೆಯನ್ನು ಕಳೆದುಕೊಳ್ಳುವ ಕೆಲಸಕ್ಕೆ ನಾವೇಕೆ ಕೈಹಾಕೋಣ?" ಎಂದನಂತೆ! ಹೀಗೆಯೇ ನಮ್ಮ ಜೀವನಕ್ರಮದಲ್ಲಿ ಯಾವದೋ ಒಂದು ಕಲಂಕವಿರಬೇಕೆಂದು ಗೊತ್ತಾದಮೇಲೂ ಸುಮ್ಮನಿರುವವರು ಕೆಲವರು. ಆದರೆ ಅದೇನೂ ವಿಚಾರಪರರ ಕ್ರಮವಲ್ಲ. ಉತ್ತಮವಾದ ಮಾರ್ಗವೊಂದಿದ್ದರೆ, ಅದು ನಮಗೆಲ್ಲರಿಗೂ ದೊರೆಯುವಂತೆಯೂ ಇದ್ದರೆ, ನಾವೇಕೆ ಅದನ್ನು ಅನುಸರಿಸಬಾರದು? ಆದ್ದರಿಂದ ಇಷ್ಟುದಿನ ಗೀತಾಶ್ರವಣವನ್ನು ಮಾಡಿದ್ದರಿಂದ ನಮಗೆ ತಿಳಿದುಬಂದದ್ದೇನು? ನಾವು ಜೀವನಕ್ರಮದಲ್ಲಿಯಾವ ಬದಲಾವಣೆಯನ್ನು ಮಾಡಿಕೊಂಡರೆ ನಮಗೆ ಸುಖಶಾಂತಿಗಳು ದೊರಕುವವು?-ಎಂಬುದನ್ನು ವಿವೇಕದಿಂದ ಅರಿತುಕೊಳ್ಳುವದಕ್ಕೆ ಪ್ರಯತ್ನವನ್ನು ಮಾಡಬೇಕು.

ಗೀತೆಯ ಸಾರವನ್ನು ತಿಳಿದುಕೊಳ್ಳುವದಕ್ಕಾಗಿ ಗೀತೆಯ ಉಪದೇಶಕ್ರಮದ ವಿಚಾರವನ್ನು ಕುರಿತು ಸ್ವಲ್ಪ ಹೇಳುತ್ತೇನೆ. ಈಗ ಗುರುಗಳಿಂದ ಗೀತೆಯ ಉಪದೇಶವನ್ನು ತೆಗೆದುಕೊಳ್ಳುವವರ ಪದ್ಧತಿಯು ತಾಂತ್ರಿಕರನ್ನು ಅನುಸರಿಸುತ್ತಿದೆ. ಅವರ ಮತದಂತೆ ಮಂತ್ರಗಳಿಗೆಲ್ಲ ಬೀಜ, ಕೀಲಕ, ಶಕ್ತಿ-ಎಂದು ಮೂರು ಇರುತ್ತವೆ. ಬೀಜಶಕ್ತಿಕೀಲಕಗಳ ಜ್ಞಾನದಿಂದ ಮಾಡಿದ ಮಂತ್ರ ಪುರಶ್ಚರಣವು ಬೇಗನೆ ಸಿದ್ಧಿಯನ್ನು ಕೊಡುತ್ತದೆ ಎಂದು ಅವರ ನಂಬಿಕೆ.

ಗೀತೆಯೆಂಬ ಮಹಾಮಂತ್ರಕ್ಕೆ "ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ । ಗತಾಸೂನಗತಾಸೂಂಶ್ಚ ನಾನು ಶೋಚನ್ತಿ ಪಣ್ಡಿತಾಃ"॥ ಎಂಬ ಶ್ಲೋಕವು ಬೀಜವೆಂದು ಪರಿಗಣಿತವಾಗಿರುತ್ತದೆ. ಮನನಮಾಡಿದವರನ್ನು-ಅರ್ಥಾನುಸಂಧಾನವನ್ನು ಮಾಡಿದವರನ್ನು-ಕಾಪಾಡುವದಾದ್ದರಿಂದ ಮಂತ್ರವೆಂದು ಹೆಸರು; ಗೀತಾಮಂತ್ರವು ನಮ್ಮನ್ನು ಕಾಪಾಡಬೇಕಾದರೆ ಅದರ ಬೀಜವನ್ನು ಮೊದಲು ತಿಳಿದುಕೊಳ್ಳಬೇಕು. ಗೀತಾರ್ಥದ ಉಪದೇಶಕ್ಕೆಲ್ಲ ಇದು ಬೀಜವಾಗಿರುತ್ತದೆ. ನಾವು ಪ್ರಜ್ಞಾವಾದಗಳನ್ನು ಆಡುತ್ತೇವೆ, ತಿಳಿದವರಂತೆ ದೊಡ್ಡ ದೊಡ್ಡ ಮಾತುಗಳನ್ನು ಆಡುತ್ತೇವೆ, ಧರ್ಮಾಧರ್ಮಗಳ ವಿವೇಕವನ್ನು ಬಲ್ಲವರಂತೆ ನಟಿಸುತ್ತೇವೆ, ತತ್ತ್ವವನ್ನು ಬಲ್ಲವರಂತೆ ಕಾಣಿಸಿಕೊಳ್ಳುವದಕ್ಕೆ ಪ್ರಯತ್ನಿಸುತ್ತೇವೆ.

ಆದರೆ ಶೋಕವನ್ನು ಮಾತ್ರ ಬಿಟ್ಟಿಲ್ಲ. ಏನಾದರೂ ಹೋದರೆ, ಯಾರಾದರೂ ಸತ್ತರೆ, 'ಅಯ್ಯೋ! ಹೋಯಿತಲ್ಲ! ಅಯ್ಯೋ! ನಮ್ಮನ್ನು ಬಿಟ್ಟು ಹೋದರಲ್ಲ!'ಎಂದು ಶೋಕಿಸುವೆವು. 'ರಾಮ ರಾಮ!' ಎನ್ನುತ್ತಿದ್ದ ಗಿಳಿಯು ಬೆಕ್ಕನ್ನು ಕಂಡಕೂಡಲೆ ಕಿರ್ ಎಂದು ಕೂಗುವಂತೆ ನಾವು ತಿಳಿವಿನ ಮಾತುಗಳನ್ನು ಆಡುತ್ತಲೇ ಇದ್ದು ಆಗಾಗ್ಗೆ ನಮ್ಮದು ಏನಾದರೂ ಹೋದರೆ 'ಹೋಯಿತಲ್ಲ!' ಎಂದೂ ಹೋಗದಿದ್ದರೆ 'ಹೋಗುವದಲ್ಲ!' ಎಂದೂ ಗೋಳಾಡುವದನ್ನು ಬಿಡದೆ ಇರುವೆವು. ನಮ್ಮ ಅವಿಚಾರದಶೆಯಲ್ಲಿ ಅಳುವು ಸ್ವಭಾವವಾಗಿರುತ್ತದೆ; ಗೀತೆಯ ಕ್ರಮವನ್ನು ಅರಿತುಕೊಂಡರೆ ಆತ್ಮನ ನಿಜವನ್ನು ಅರಿತು ಶೋಕವನ್ನು ಗೆದ್ದುಕೊಳ್ಳಬಹುದು. ಅಳುವನ್ನು ತಪ್ಪಿಸಿಕೊಳ್ಳಬೇಕು-ಎಂಬ ಯೋಚನೆಯು ಗೀತೆಯ ಶ್ರವಣದಿಂದ ಹುಟ್ಟಿದರೆ ಗೀತಾಮಂತ್ರದ ಬೀಜವನ್ನು ನಮ್ಮ ಹೃದಯದಲ್ಲಿ ಬಿತ್ತಿದಂತೆ ಆಯಿತು.

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಇದು ಗೀತಾಮಂತ್ರದ ಶಕ್ತಿಯು. ಬೀಜವು ಮೊಳೆತು ಬೆಳೆಯುವದಕ್ಕೆಅದಕ್ಕೆ ಸಹಾಯಕವಾದ ಒಂದು ಶಕ್ತಿ ಬೇಕು. ಅದಕ್ಕೆ ಎಲ್ಲವನ್ನೂ ಬಿಟ್ಟು ಭಗವಂತನನ್ನು ಶರಣುಹೊಂದುವದೆಂಬುದೇ ಶಕ್ತಿಯು. ರೈಲು ಕೂಂಯ್?ಎಂದು ಕೂಗಿದರೆ ನಶ್ಯವನ್ನು ತೀಡುವದನ್ನು ಬಿಟ್ಟು ಚಟ್ಟನೆ ಎದ್ದೇ ಬಿಡುವಂತೆ ಪರಮಾತ್ಮನಿಗಾಗಿ ನಮ್ಮ ಎಲ್ಲಾ ಕೆಲಸಗಳನ್ನೂ ಒತ್ತಟ್ಟಿಗಿಡಬೇಕು, ಪರಮಾತ್ಮನೇ ಬೇಕು, ಅವನ ತತ್ತ್ವವನ್ನೇ ತಿಳಿದುಕೊಳ್ಳಬೇಕು; ಇದಕ್ಕಾಗಿ ಎಲ್ಲಾ ಲೌಕಿಕವೈದಿಕಕರ್ಮಗಳನ್ನೂ ಬಿಡುವದಕ್ಕೆ ಸಿದ್ಧನಾಗಿದೇನೆ ಎಂಬ ಸಂಕಲ್ಪವೇ ನಿಮಗೆ ಶಕ್ತಿಯಾಗಿರಲಿ! ಭಗವಂತನಾದ ಶ್ರೀಕೃಷ್ಣನು ಆನಂದಧಾಮನು. ಶ್ರೀಕೃಷ್ಣಾವತಾರದೊಳಗಾಗಿ ಕೃಷ್ಣನು ಅಳುಮುಖವನ್ನು ತೋರಿಸಿದ ಸಂದರ್ಭವುಂಟೆ? ನರರಾದ ನಮಗೆಲ್ಲ ಅವನೇ ಸಾರಥಿಯು. ಅವನ ಆನಂದಮುಖವನ್ನು ನೋಡುವದಕ್ಕಾಗಿ ಸಾವಿರ ಕೆಲಸಗಳಿದ್ದರೂ ಬಿಟ್ಟುಬಿಡುವೆನು ಎನ್ನುವದೇ ಶಕ್ತಿ. ಈ ಶಕ್ತಿಯು ಹಿಂದೆ ಹೇಳಿದ ಬೀಜವನ್ನು ಬೆಳೆಯಿಸುವದು.

ಜೀವನಕ್ರಮದಲ್ಲಿ ನಾವು ಅವಶ್ಯವಾಗಿ ಮಾರ್ಪಡಿಸಿಕೊಳ್ಳಬೇಕಾದ ಒಂದು ವಿಷಯವನ್ನು ಕುರಿತು ಹೇಳಿದ್ದಾಯಿತು. ಶೋಕಮೋಹಗಳಿಲ್ಲದೆ ಇರುವ ಜೀವನವೇ ನಮ್ಮ ಗುರಿಯಾಗಿರಬೇಕು; ಇದಕ್ಕಾಗಿ ಸರ್ವಕರ್ಮಪರಿತ್ಯಾಗಪೂರ್ವಕವಾಗಿ ಭಗವಂತನನ್ನು ಮುಟ್ಟುವದಕ್ಕೆ ಹವಣಿಸಬೇಕು. ಭಗವಂತನು ಎಲ್ಲೆಲ್ಲಿಯೂ ಇರುತ್ತಾನೆ; ಆದ್ದರಿಂದ ಅವನು ನಮಗೆ ತೀರ ಸಮೀಪದಲ್ಲಿಯೂ ಇರುತ್ತಾನೆ. ಈ ಭಾವನೆಯನ್ನು ಉತ್ಕಟವಾಗುವಂತೆ ಮಾಡಿಕೊಳ್ಳಿರಿ. ಆತನು ಆನಂದಸ್ವರೂಪನೆಂಬುದನ್ನು ಚೆನ್ನಾಗಿ ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳಿರಿ. ಆಮೇಲೆ ಶೋಕಕ್ಕೆ ಎಡೆಯೇ ಇರುವದಿಲ್ಲ.

ಈವರೆಗೆ ಗೀತಾಮಂತ್ರದ ಬೀಜ, ಶಕ್ತಿ - ಇವುಗಳನ್ನು ಕುರಿತು ಮಾತನಾಡಿದ್ದಾಯಿತು. ಇನ್ನು ಕೀಲಕವೆಂದರೇನು? ಕೀಲಕವೆಂದರೆ ಕೂಡಿಸುವದು. ಬೀಜಕ್ಕೂ ಶಕ್ತಿಗೂ

ಸಂಬಂಧವುಂಟಾಗುವಂತೆ ಮಾಡತಕ್ಕದ್ದೇ ಕೀಲಕವು. ಈ ಸಾಧನವು ಯಾವದು? ಸರ್ವಧರ್ಮಗಳನ್ನೂ ಪರಿತ್ಯಾಗವಮಾಡಿ ಭಗವಂತನನ್ನೇ ಶರಣುಹೊಕ್ಕು ಶೋಕನಿವಾರಣೆಮಾಡಿಕೊಳ್ಳುವದಕ್ಕೆ ನಾವು ದೊರಕಿಸಿಕೊಳ್ಳತಕ್ಕದ್ದು ಯಾವದು? ಇದನ್ನು `ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ' ಎಂಬ ಕೀಲಕವು ತಿಳಿಸಿಕೊಡುತ್ತದೆ. ನಮ್ಮ ಪಾಪವು ಈ ಶೋಕಕ್ಕೆ ಕಾರಣವಾಗಿರುತ್ತದೆ; ಅದನ್ನು ಭಗವಂತನ ಪ್ರಸಾದವು ಕಳೆದುಹಾಕುತ್ತದೆ. ಪಾಪವೆಂದರೇನು? ಪರಮೇಶ್ವರನಿಂದ ವಿಮುಖರಾಗಿರುವದೇ ಪಾಪವು; ಆ ಪಾಪವೇ ಶೋಕಾದಿಗಳಿಗೆ ಕಾರಣವಾಗಿರುವದು. ಭಗವಂತನನ್ನು ನಾವು ಸ್ಮರಿಸಿಕೊಂಡರೆ ``ಭಗವಂತ, ನಿನ್ನ ಕಡೆಗೆ ಬಂದಿರುತ್ತೇನೆ. ಇನ್ನು ಮೇಲೆ ನೀನೇ ನನಗೆ ಶರಣು; ನೀನೇ ನನ್ನನ್ನು ಕಾಪಾಡಬೇಕು!" ಎಂದು ಆರ್ತನಾಗಿ ಬೇಡಿಕೊಳ್ಳುವವನಿಗೆ ಅಡ್ಡಿಯಾದ ಪಾಪಗಳನ್ನು ಆ ಭಗವಂತನೇ ನಿವಾರಣೆಮಾಡುತ್ತಾನೆ. ಈಶ್ವರನ ಪ್ರಸಾದದಿಂದಲೇ ನಮ್ಮ ಪಾಪವು ಹೋಗಬೇಕು, ಬರಿಯ ಸ್ವಪ್ರಯತ್ನವು ಸಾಲದು, ಆತನು ಖಂಡಿತವಾಗಿಯೂ ನನ್ನ ಪಾಪವನ್ನು ಕಳೆಯುವನು, ತನ್ನ ಸಂನಿಧಿಗೆ ಒಯ್ಯುವನು - ಎಂಬ ಭರವಸೆಯು ಸಾಧನದಲ್ಲಿರಬೇಕು. ಹಾಗಾದರೆ ನಾವು ಮಾಡುವ ಪ್ರಯತ್ನವು ಸುಲಭವಾಗಿ ಫಲಕಾರಿಯಾಗುವದು. ಯಾವಾಗ ನಾವು ಭಗವಂತನ ಅನುಗ್ರಹಪ್ರವಾಹಕ್ಕೆ ಸಿಕ್ಕಿಬೀಳುವೆವೋ ಆಗ ಅದು ನಮ್ಮನ್ನು ಕೊನೆಯ ಮಜಲನ್ನು ಮುಟ್ಟುವವರೆಗೂ ಅವಶ್ಯವಾಗಿ ಒಯ್ಯುವದು. ಪರಮೇಶ್ವರನ ಪ್ರಸಾದದಿಂದಲೇ ನಾವು ಯಾವ ಪ್ರತಿಬಂಧವೂ ಇಲ್ಲದೆ ಸರ್ವಕರ್ಮಪರಿತ್ಯಾಗಪೂರ್ವಕವಾಗಿ ಆತನನ್ನು ಸೇರುವದಕ್ಕೆ ಶಕ್ತರಾಗುವೆವು. ಈ ಭರವಸೆಯನ್ನು ಹೆಚ್ಚಿಸುವದರಿಂದ ``ಅಹಂ ತ್ವಾ....." ಎಂಬ ಶ್ಲೋಕವು ಕೀಲಕವೆನಿರುವದು. ಗೀತೆಯಲ್ಲಿ ಹೇಳಿರುವ ಕೊನೆಯ ಧ್ಯೇಯವನ್ನು ಮುಟ್ಟುವದಕ್ಕೆ ನಾವು ಈಗ ಇರುವ ಸದ್ಯದ ಭೂಮಿಕೆಯಿಂದಲೇ ಪ್ರಾರಂಭಿಸಬೇಕು. ನಮ್ಮ ಶೋಕವು ಹೋಗಬೇಕು, ನಾವು ಪ್ರಜ್ಞಾವಂತರಾಗಬೇಕು-ಎಂಬುದು ಕೊನೆಯ ಗುರಿ. ಗೀತೆಯು ಅರ್ಜುನನಿಗಾಗಿ ಉಪದೇಶಮಾಡಿದ್ದು; ಅವನ ಅಧಿಕಾರದ ಭೂಮಿಕೆಯನ್ನು ನೋಡಿ ಭಗವಂತನು ಸಾಂಖ್ಯಬುದ್ಧಿ, ಕರ್ಮಯೋಗಬುದ್ಧಿ-ಎಂಬ ಎರಡು ಬುದ್ಧಿಗಳನ್ನೇ ಮೊದಲು ಪ್ರಾರಂಭಿಸಿ ಹೇಳಿರುತ್ತಾನೆ. ನಾವೆಲ್ಲರೂ ಅದೇ ಅಂತಸ್ತಿನಲ್ಲಿರುವದಿಲ್ಲವಾದರೂ ನಮ್ಮ ನಮ್ಮ ಅಂತಸ್ತಿನಿಂದಲೇ ಗೀತೋಪದೇಶವನ್ನು ಉಪಯೋಗಿಸಿಕೊಳ್ಳುವುದಕ್ಕೆ ಬರುವಂತಿದೆ. ಸದ್ಯದ ಸ್ಥಿತಿಯಲ್ಲಿ ನಾವು ಗೀತೆಯ ಹದಿನಾರನೆಯ ಅಧ್ಯಾಯದ ವಿಷಯವನ್ನು ಮೊದಲು ಮೆಲುಕು ಹಾಕಬೇಕು. ಆ ಅಧ್ಯಾಯದಲ್ಲಿ ದೈವಾಸುರಸಂಪತ್ತುಗಳನ್ನು ವಿವೇಚಿಸಿ ತಿಳಿಸಿರುತ್ತದೆ. ಲೋಕದಲ್ಲಿ ಆಸುರಸಂಪತ್ತಿನವರೇ ಹೆಚ್ಚು. ಅಸುರರೆಂದರೇನು? ಸ್ವಾರ್ಥಪರರು; ಅವರು ಸ್ವಾರ್ಥಕ್ಕಾಗಿ ಎಂಥ ಪಾಪವನ್ನಾದರೂ ಮಾಡುವದಕ್ಕೆ ಹೇಸದವರು. ಅವರು ತಾವು ದೈವಸಂಪತ್ತಿನವರಂತೆಯೇ ಕಾಣಿಸಿಕೊಳ್ಳುವದಕ್ಕೆ ಪ್ರಯತ್ನಿಸುತ್ತಾರೆ. ಅವರು ಧರ್ಮದ

ಮಾತುಗಳನ್ನು ಆಡುತ್ತಿರುವವರು, ದಾಂಭಿಕಕರ್ಮಗಳನ್ನು ಮಾಡುತ್ತಿರುವವರು. ಆದರೆ ಸ್ವಾರ್ಥಕ್ಕೆ ಧಕ್ಕೆ ಬರುವಾಗ ಇದನ್ನೆಲ್ಲ ಬದಿಗಿಟ್ಟು ಮನಬಂದಂತೆ ನಡೆಯುವವರು. ದೈವಸಂಪತ್ತೆಂಬುದು ಹೃದಯಕ್ಕೆ ಮುಖ್ಯವಾಗಿ ಸೇರಿರುತ್ತದೆ. ತನ್ನ ಮತ್ತು ಲೋಕದ ಕಲ್ಯಾಣಕ್ಕಾಗಿ ಯಾವಾಗಲೂ ಉತ್ತಮಭಾವನೆಗಳನ್ನು ಅನುಸರಿಸುತ್ತಾ ಪರೋಪಕಾರದ ಕರ್ಮಗಳಲ್ಲಿ ತೊಡಗುತ್ತಾ ಶಾಸ್ತ್ರವನ್ನು ಉಲ್ಲಂಘನೆಮಾಡದೆ ಅಮಾನಿತ್ವ, ಅದಂಭಿತ್ವ - ಮುಂತಾದ ಉತ್ತಮಸ್ವಭಾವದಿಂದ ಕೂಡಿರುವವರೇ ಈ ದೈವಸಂಪತ್ತಿನವರು. ನಾವು ಯಾವ ಸಂಪತ್ತಿನವರು ಎಂಬುದನ್ನು ಏಕಾಂತದಲ್ಲಿ ಆತ್ಮಪರೀಕ್ಷೆಯಿಂದ ತಿಳಿದುಕೊಳ್ಳುವ ಪ್ರಯತ್ನವನ್ನು ಮಾಡಬೇಕು; ದೈವಸಂಪತ್ತಿಗೆ ತಿರುಗುವದಕ್ಕೂ ಅದನ್ನು ಬಲಪಡಿಸಿಕೊಳ್ಳುವದಕ್ಕೂ ಬಲವಾದ ಪ್ರಯತ್ನವನ್ನು ಮಾಡಬೇಕು.

ಇನ್ನೊಂದು ಮಾತು. ವೇದದ ಸಾರವೆಲ್ಲ ವೇದಾಂತದಲ್ಲಿ ಅಥವಾ ಉಪನಿಷತ್ತಿನಲ್ಲಿದೆ; ಉಪನಿಷತ್ತಿನ ಸಾರವೆಲ್ಲ ಗೀತೆಯಲ್ಲಿದೆ. ಆದ್ದರಿಂದ ಗೀತಾರ್ಥವನ್ನು ನಾವು ಮನದಟ್ಟುಮಾಡಿಕೊಂಡರೆ ಸಕಲವೇದಾರ್ಥವನ್ನೂ ತಿಳಿದುಕೊಂಡಂತೆ ಆಯಿತು. ವೇದದ ಸಾರವೇನು? ಎಂಬುದನ್ನು ಗೀತೆಯಿಂದ ತಿಳಿದುಕೊಂಡವನು ಕೃತಕೃತ್ಯನು.

ಗೀತೆಯಲ್ಲಿ ಕೆಲವು ದರ್ಶನಗಳೂ ಇವೆ. ಮುಖ್ಯವಾಗಿ ಸಾಂಖ್ಯ, ಯೋಗ, ಮೀಮಾಂಸಾ - ಎಂಬ ಮೂರು ದರ್ಶನಗಳ ಪರಾಮರ್ಶವು ಕಾಣಬರುತ್ತದೆ. ಸಾಂಖ್ಯರು ತತ್ತ್ವವಿಚಾರಪರರು, ಯೋಗಿಗಳು ಸಾಧನಪರರು, ಮೀಮಾಂಸಕರು ಶಾಸ್ತ್ರಾರ್ಥವಿಚಾರಪರರು. ಗೀತೆಯ ತತ್ತ್ವ ವಿಚಾರಕ್ರಮದಲ್ಲಿ ಸಾಂಖ್ಯರ ಕ್ರಮವನ್ನೇ ಬಹಳಮಟ್ಟಿಗೆ ಅನುಸರಿಸಿರುತ್ತದೆ. ಆದರೆ ತರ್ಕಪ್ರಧಾನವಾದ ಅವರ ವಾದಸರಣಿಯನ್ನು ಇಲ್ಲಿ ಕೈಬಿಟ್ಟಿರುತ್ತದೆ. ಅವರ ಮತದಲ್ಲಿ ತಿದ್ದುಪಡಿಯನ್ನು ಮಾಡಿ ವೈದಿಕಸಾಂಖ್ಯವನ್ನೇ ಆದರಿಸಿರುತ್ತದೆ. ಇದನ್ನೇ ಆತ್ಮಜ್ಞಾನವೆನ್ನುವರು. ಗೀತೆಯಲ್ಲಿ ಯಾವ ತತ್ತ್ವವನ್ನು ಉಪದೇಶಿಸಿದೆ ಎಂಬುದನ್ನು ಬಹುಮತದಿಂದ ನಿರ್ಣಯಿಸುವದಕ್ಕೆ ಬರುವದಿಲ್ಲ. ಅಲ್ಲಿರುವ ಸಾಂಖ್ಯವಿಚಾರವು ಹೃದಯಕ್ಕೆ ಸಂಬಂಧಪಟ್ಟದ್ದು. ತರ್ಕಪ್ರಧಾನವಾದದ್ದಲ್ಲ. ಎಲ್ಲರ ಹೃದಯದಲ್ಲಿಯೂ ಒಬ್ಬನೇ ಪರಮಾತ್ಮನು ಇರುತ್ತಾನೆ. ಅವನ ನಿಜವನ್ನು ಅರಿತುಕೊಂಡು ಬ್ರಹ್ಮಭಾವವನ್ನೇ ಪಡೆದುಕೊಳ್ಳಬಹುದು. ಮಾಯಾಮಯವಾದ ಪ್ರಕೃತಿಯಿಂದ ಆತ್ಮನನ್ನು ಬಿಡಿಸಿಕೊಂಡು ಅವನ ಪರಮಾರ್ಥಸ್ವಭಾವವನ್ನು ಕಂಡುಕೊಳ್ಳಬೇಕು - ಎಂದು ಅದರಲ್ಲಿ ಉಪದೇಶಿಸಿರುತ್ತದೆ.

ಯೋಗಿಗಳು ಸಾಂಖ್ಯರ ಪ್ರಕ್ರಿಯೆಯನ್ನೇ ಅನುಸರಿಸಿ ಮುಖ್ಯವಾಗಿ ಚಿತ್ತ ಸಮಾಧಾನವನ್ನು ಹೊಂದುವ ಬಗೆಯನ್ನು ತಿಳಿಸಿರುತ್ತಾರೆ. ಗೀತೆಯು ಅವರ ಪ್ರಕ್ರಿಯೆಯ ಸಾರವನ್ನು ಗ್ರಹಿಸಿ ಪರಮಾತ್ಮನನ್ನು ಕಾಣುವದಕ್ಕೆ ಅನುಸರಿಸಬೇಕಾದ ಧ್ಯಾನಯೋಗವನ್ನು ತಿಳಿಸಿಕೊಟ್ಟಿರುತ್ತದೆ. ಇದೇ ವೇದೋಕ್ತವಾದ ನಿದಿಧ್ಯಾಸನವು. ಆದರೆ ಗೀತೆಯಲ್ಲಿ

ಹಠಯೋಗವೇ ಮುಂತಾದ ಯೋಗ ಪ್ರಭೇದಗಳ ವಿವರವು ಕಾಣಬರುವದಿಲ್ಲ. ಉಪನಿಷತ್ತಿನ ಸಾರವೇ ಗೀತೆಯಾಗಿರುವದರಿಂದ ಅದರಲ್ಲಿ ಪರಮಾತ್ಮನ ಉಪಾಸನೆಯನ್ನೂ ಹೇಳಿದೆ.

ಮೀಮಾಂಸಕರು ಕರ್ಮಪ್ರಧಾನರು, ಮತ್ತು ಶಾಸ್ತ್ರವಿಚಾರದಲ್ಲಿ ನಿರತರಾದವರು. ಇಲ್ಲಿ ಶಾಸ್ತ್ರಕ್ಕನುಸಾರವಾಗಿಯೇ ಕಾರ್ಯಾಕಾರ್ಯವನ್ನು ನಿರ್ಣಯಿಸಬೇಕು ಎಂದು ಹೇಳಿದೆ. ಮೋಕ್ಷಗ್ರಂಥವಾದ್ದರಿಂದ ಇದರಲ್ಲಿ ಕಾಮ್ಯಕರ್ಮಗಳಿಗೆ ಹೆಚ್ಚಿನ ಸ್ಥಾನವನ್ನು ಕೊಟ್ಟಿಲ್ಲ; ಅದರೂ ಅವಕ್ಕೆ ಫಲವಿಲ್ಲವೆಂದೇನೂ ಹೇಳಿರುವದಿಲ್ಲ. ಆಯಾ ಕರ್ಮಗಳಿಗೆ ದೇವತೆಗಳು ಫಲವನ್ನು ಕೊಡುತ್ತಾರೆಂದು ವೇದದಲ್ಲಿ ಕರ್ಮಕಾಂಡದಲ್ಲಿ ಹೇಳಿದ್ದರೂ ವೇದಾಂತಸಮ್ಮತವಾದ ರೀತಿಯಿಂದ ನೋಡಿದರೆ ಆ ದೇವತೆಗಳಿಗೂ ಆತ್ಮನಾಗಿರುವ ಭಗವಂತನೇ ಆ ಫಲಗಳನ್ನು ಕೊಡುವವನು; ಆದ್ದರಿಂದ ಭಗವಂತನಲ್ಲಿಯೇ ಭಕ್ತಿಯನ್ನು ಮಾಡಿ ಅನಂತಫಲವನ್ನು ಪಡೆಯಬೇಕು - ಎಂದು ಹೇಳಿದೆ. ನಿತ್ಯಕರ್ಮಗಳನ್ನು ಭಗವದರ್ಚನರೂಪವಾಗಿ ಮಾಡಿದರೆ ಅವು ಚಿತ್ತಕ್ಕೆ ಪಾವಿತ್ರ್ಯವನ್ನು ಕೊಟ್ಟು ಜ್ಞಾನಕ್ಕೆ ಯೋಗ್ಯತೆಯನ್ನುಂಟುಮಾಡುವವೆಂದು ಇಲ್ಲಿ ಹೇಳಿರುತ್ತದೆ.

ಗೀತೆಯಲ್ಲಿ ನ್ಯಾಯವೈಶೇಷಿಕದರ್ಶನಗಳನ್ನು ಪರಾಮರ್ಶಿಸಿರುವದು ಕಂಡು ಬರುವದಿಲ್ಲ. ಗೀತೆಯು ಹೃದಯಪ್ರಧಾನವಾಗಿರುವದರಿಂದ ತರ್ಕಪ್ರಧಾನವಾದ ಆ ದರ್ಶನಗಳನ್ನು ಕೈ ಬಿಟ್ಟಿರುವದು ಸ್ವಾಭಾವಿಕವಾಗಿಯೇ ಇದೆ.

ಹೀಗೆ ಭಗವದ್ಗೀತೆಯಲ್ಲಿ ಕೆಲವು ದರ್ಶನಗಳನ್ನು ಹೇಳಿದ್ದರೂ ಮುಖ್ಯವಾಗಿ ಅದರಲ್ಲಿ ಭಗವದ್ದರ್ಶನವೊಂದೇ ಇರುತ್ತದೆ. ಕರ್ಮವನ್ನು ಮಾಡಿದರೆ ಭಗವಂತನ ಆರಾಧನಾರೂಪವಾದ ಭಗವತ್ಕರ್ಮವಾಗಬೇಕು; ಧ್ಯಾನವು ಭಗವತ್ಸ್ವರೂಪದ ಧ್ಯಾನವಾಗಬೇಕು; ವಿಚಾರವು ಭಗವದ್ವಿಚಾರವಾಗಬೇಕು. ಎಲ್ಲವೂ ಭಗವಂತನೇ ನಮಗೆ ಶರಣು ಎಂಬ ಭಾವದಿಂದ ಕೂಡಿರಬೇಕು. ಭಕ್ತಿಯಿಲ್ಲದ ಜ್ಞಾನವು ಗೀತೆಯಲ್ಲಿಲ್ಲ; ಜ್ಞಾನಿಯು ಭಗವದ್ಭಕ್ತರಲ್ಲೆಲ್ಲ ಶ್ರೇಷ್ಠನು ಎಂದು ಇಲ್ಲಿ ಉದ್ಘೋಷಿಸಿದೆ.

ಗೀತೋಪದೇಶದ ಬೀಗದ ಕೈಯೇ ಇದು. ಭಗವಂತನನ್ನು ಅವಲಂಬನೆ ಮಾಡಿದರೆ ನಾವು ಗೀತೋಪದೇಶವನ್ನು ಅವಲಂಬಿಸಿದಂತೆ ಆಯಿತು. ನಮ್ಮ ಜೀವನವೆಲ್ಲವೂ ಭಗವಂತನ ಆರಾಧನೆಯಾಗಿರಬೇಕು. ನಮಗೆ ಸರ್ವಬಂಧಗಳೂ ಬಿಡುಗಡೆಯಾಗಬೇಕಾದರೆ, ನಾವು ದಾಸ್ಯವೃತ್ತಿಯಿಂದ ವಿಮುಕ್ತರಾಗಬೇಕಾದರೆ, ಭಗವಂತನ ಕರ್ಮವನ್ನು ಮಾಡುತ್ತಾ ಭಗವಂತನನ್ನು ಧ್ಯಾನಮಾಡುತ್ತಾ ಭಗವತ್ಸ್ವರೂಪವನ್ನು ವಿಚಾರಿಸುತ್ತಾ ಕಾಲಹರಣಮಾಡಬೇಕು. ಗೀತೆಯನ್ನು ಓದಿಮುಗಿಸಿದೆವು - ಎಂಬ ಹೆಮ್ಮೆಯನ್ನು ಬಿಡಿರಿ; ನೀವು ಮುಗಿಸಿದ್ದು ನಿಮ್ಮ ಕೈಲಾದಷ್ಟು. ಅದೊಂದು ಸಾಗರವು. ಸಾಗರದ ನಡುವೆ ಹೋಗಿ ನೀವು ಆಳವಾಗಿ ಮುಳುಗಿ ತಳವನ್ನು ಮುಟ್ಟುವದು ಆಗಲಾರದು; ಆದರೂ ಅದರ

ದಡದಲ್ಲಿಯೇ ಆ ಸಮುದ್ರದ ಸ್ನಾನವನ್ನು ಮಾಡಬಹುದು. ಸಾಗರದಲ್ಲಿ ಎಲ್ಲಾ ತೀರ್ಥಗಳೂ ಇರುವವೆಂದು ಸ್ಮೃತಿಗಳು ಹೇಳುತ್ತವೆ; ಗೀತಾಸಾಗರದಲ್ಲಿ ಸಕಲ ತೀರ್ಥಂಕರರ ಉಪದೇಶಗಳೂ ಇವೆ, ಸಕಲ ಶಾಸ್ತ್ರಗಳ ಸಾರವೂ ಇದೆ. ಅಹಂಕಾರವು ಮಟ್ಟಾಗಲಿ, ಭಗವಂತನಲ್ಲಿ ಭಕ್ತಿಭಾವವು ಏಳಲಿ! ಸೃಷ್ಟಿಯಲ್ಲಿ ನಾವು ತೃಣಪ್ರಾಯರು, ನಮಗೇನೂ ಬೆಲೆಯಿಲ್ಲ; ಆದರೆ ಭಗವದ್ಗೀತೋಪದೇಶವನ್ನು ಅನುಸರಿಸಿ ಭಗವಂತನನ್ನು ಶರಣುಹೊಕ್ಕರೆ ನಮಗೆ ಆತನ ಸ್ವರೂಪವೇ ದೊರಕುವದು. ಅದಕ್ಕಿಂತ ಹೆಚ್ಚಿನ ಪುರುಷಾರ್ಥವಿನ್ನೊಂದಿಲ್ಲ. ಇದೊ, ವಾಸುದೇವಭಗವಂತನಿಗೆ ಅನಂತವಂದನೆಗಳು. ಗೀತೋಪನ್ಯಾಸಗಳನ್ನು ಭಕ್ತಿಯಿಂದ ಶ್ರವಣಮಾಡಿದ ನಿಮ್ಮೆಲ್ಲರಿಗೂ ನನ್ನ ನಾರಾಯಣಸ್ಮರಣೆಗಳು.

||ಓಂ ತತ್ಸತ್||

ಅಧ್ಯಾತ್ಮಪ್ರಕಾಶ ಮುದ್ರಣಾಲಯ, ಹೊಳೆನರಸೀಪುರ.